# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ಭೀಷ್ಮಪರ್ವ
ದ್ರೋಣಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೧೫

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 15**

*ಮುದ್ರಕರು:*
**ಭಾರತ ದರ್ಶನ ಮುದ್ರಣಾಲಯ**
163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*

**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*

**ದಿ|| ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*

**ದಿ|| ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*

**ದಿ|| ವಿದ್ವಾನ್ ರಾಮೇಶ್ವರಾವಧಾನೀ**



ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್, M.A. B.Com., B.L.,
ಕೋಶಾಧ್ಯಕ್ಷರು

## ವಿನಮ್ರವಚನಗಳು

ಪರಮಾತ್ಮನ ದಯೆಯಿಂದಲೂ, ಗುರುಭಗವಂತನ ಕೃಪಾಕಟಾಕ್ಷ ದಿಂದಲೂ–ಶ್ರೀಮನ್ಮಹಾಭಾರತದ ಹದಿನೈದನೆಯ ಸಂಪುಟವು ಮುಗಿದಿರುತ್ತದೆ. ಹದಿನೈದನೆಯ ಪುಷ್ಪರೂಪವಾದ ಈ ಸಂಪುಟವನ್ನು ಸಚ್ಚಿದಾನಂದ ಸ್ವರೂಪನಾದ, ದಯಾಮಯನಾದ, ಕಮನೀಯವಿಗ್ರಹನಾದ, ಸಕಲ ಸದ್ಗುಣಗಳಿಗೂ ಆಕರನಾದ, ದಿವ್ಯಮಂಗಳಸ್ವರೂಪನಾದ ಭಗವಂತನ ಪಾದಾರವಿಂದಗಳಲ್ಲಿ ಭಕ್ತಿಪೂರ್ವಕವಾಗಿ ಸಮರ್ಪಿಸಿ ಅನಂತರ ಅವನ ಪ್ರಸಾದರೂಪವಾದ–ಅದರಿಂದಲೇ ಪರಮಪವಿತ್ರವಾದ–ಈ ಸಂಪುಟವನ್ನು ನಮ್ಮ ಪ್ರಿಯವಾಚಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ.

ಈ ಹದಿನೈದನೆಯ ಸಂಪುಟದಲ್ಲಿ ಭೀಷ್ಮಪರ್ವವು ಮುಗಿದಿದ್ದು ದ್ರೋಣಪರ್ವದ ಇಪ್ಪತ್ತೊಂದು ಅಧ್ಯಾಯಗಳು ಅಡಕವಾಗಿವೆ. ಹನ್ನೊಂದನೆಯ ದಿವಸದ ಯುದ್ಧವು ಮುಗಿದಿದ್ದು ಹನ್ನೆರಡನೆಯ ದಿವಸದ ಯುದ್ಧವು ಪ್ರಾರಂಭವಾಗಿದೆ. ಸಂಪುಟವು ರೋಮಾಂಚಕಾರಕವಾದ ಯುದ್ಧದ ವಿವರಣೆಯಿಂದ ಕೂಡಿರುವುದಲ್ಲದೇ ರಾಜಕೀಯತತ್ತ್ವಗಳೂ ಅನೇಕ ಕಡೆಗಳಲ್ಲಿ ಮನಮುಟ್ಟುವಂತೆ ನಿರೂಪಿತವಾಗಿವೆ. ಶ್ರೀಕೃಷ್ಣನೇ ಮೊದಲಾದ ಮಹಾತ್ಮರ ಸಂಕ್ಷಿಪ್ತಜೀವನಚರಿತ್ರೆಗಳೂ ಇವೆ. ಹಿಂದಿನ ಸಂಪುಟದಲ್ಲಿ ಮೂರು ದಿವಸಗಳ ಯುದ್ಧವನ್ನು ವಿಶ್ಲೇಷಿಸಿದಂತೆ ಈ ಸಂಪುಟದಲ್ಲಿಯೂ ಆಯಾ ದಿವಸದಲ್ಲಿ ನಡೆದ ವಿದ್ಯಮಾನಗಳನ್ನು ವಿಶ್ಲೇಷಿಸಲಾಗಿದೆ. ವಿದ್ವಾಂಸರ ಗಮನಸೆಳೆಯುವ ಕೆಲವು ಅಂಶಗಳೂ ಇವೆ.

ಕಳೆದ ಸಂಪುಟದಲ್ಲಿ ನಮ್ಮ ಕಾರ್ಯಕ್ರಮವನ್ನು ತಿಳಿಸುತ್ತಾ ಮೊದಲನೆಯ ಸಂಪುಟದ ಪುನರ್ಮುದ್ರಣವನ್ನು ಮುಗಿಸಿ ಹದಿನೈದನೆಯ ಸಂಪುಟವನ್ನು ಸೆಪ್ಟೆಂಬರ್‌ನಲ್ಲಿ ಕೊಡುವುದಾಗಿ ತಿಳಿಸಿದ್ದೆವು. ಪರಮಾತ್ಮನ ದಯೆಯಿಂದಾಗಿ ನಾವು ತಿಳಿಸಿದ್ದಂತೆ ಪ್ರಥಮಸಂಪುಟದ ಪುನರ್ಮುದ್ರಣವನ್ನು ಮುಗಿಸಿ ಸೆಪ್ಟೆಂಬರ್‌ನಲ್ಲಿ ಹದಿನೈದನೆಯ ಸಂಪುಟವನ್ನು ಹೊರತರಲು ಸಾಧ್ಯವಾಗಿದೆ. ಭಗವಂತನ ದಿವ್ಯಾನುಗ್ರಹದಿಂದಲೇ ಮುಂದಿನ ಸಂಪುಟಗಳೂ ಕಾಲ-ಕಾಲಕ್ಕೆ ಹೊರಬರಬೇಕಾಗಿದೆ. ಏಳನೆಯ ಸಂಪುಟದ ಪ್ರತಿಗಳು

ಪೂರ್ಣವಾಗಿ ಮುಗಿದಿವೆ. ಹದಿನಾರನೆಯ ಸಂಪುಟವನ್ನು ನಮ್ಮ ಈ ವರ್ಷದ ಕಾರ್ಯಕ್ರಮದಂತೆ ಡಿಸೆಂಬರ್ ವೇಳೆಗೆ ಮುಗಿಸಿ ಅನಂತರ ಏಳನೆಯ ಸಂಪುಟದ ಪುನರ್ಮುದ್ರಣಕಾರ್ಯವನ್ನು ಕೈಗೊಳ್ಳಬೇಕೆಂಬ ಆಶಯವಿದೆ. ಗ್ರಾಹಕರು ಸಹಕರಿಸಬೇಕಾಗಿ ಪ್ರಾರ್ಥನೆ.

ಸಂಪುಟಗಳು ಜಾಗ್ರತೆಯಾಗಿ ಹೊರಬರಬೇಕೆಂಬುದು ಎಲ್ಲರ ಆಶಯವೂ ಆಗಿದೆ. ಬೇಗ-ಬೇಗ ಹೊರಬರುತ್ತಿದ್ದರೆ ಎಲ್ಲರಿಗೂ ಹೆಚ್ಚು ಆನಂದವಾಗುತ್ತದೆಂಬುದೂ ನಿಜ. ಆದರೆ ಅದರ ಹಿನ್ನೆಲೆಯಲ್ಲಿ ನಿಃಸ್ಪೃಹತೆ ಯಿಂದ ಕೆಲಸಮಾಡುತ್ತಿರುವ ನಮ್ಮ ಸಂಪಾದಕಮಂಡಲಿಯವರ ಕಾರ್ಯವೂ ಅಷ್ಟೇ ಪ್ರಮಾಣದಲ್ಲಿ ಅಧಿಕವಾಗುತ್ತದೆ. ಆದರೆ ಪರಮಾತ್ಮನ ಇಚ್ಛೆಯಿಂದಾಗಿ ನಮ್ಮ ಸಂಪಾದಕಮಂಡಲಿಯಲ್ಲಿರುವ ಯಾವ ವಿದ್ವಾಂಸರೂ ಯಾವ ವಿಧವಾದ ಬೇಸರವನ್ನೂ ವ್ಯಕ್ತಪಡಿಸದೇ ಹೆಚ್ಚು ಹೆಚ್ಚು ಉತ್ಸಾಹದಿಂದಲೇ ಪ್ರೋತ್ಸಾಹಿಸುತ್ತಿರುವುದು ಅಭಿನಂದನೀಯ. ಇವರೆಲ್ಲರಿಗೂ ನಾವು ಚಿರಋಣಿಗಳಾಗಿರಬೇಕಾಗಿದೆ.

ಹನ್ನೆರಡನೆಯ ಸಂಪುಟದ ಮುನ್ನುಡಿಯಲ್ಲಿ ಪ್ರಸ್ತಾಪಿಸಿದ್ದಂತೆ ಗೀತೆಯ ಕಡೆಯ ಸಂಪುಟವಾದ ಹದಿನಾಲ್ಕನೆಯ ಸಂಪುಟದಲ್ಲಿ ಭಗವದ್ಗೀತೆಗೆ ಸಂಬಂಧಿಸಿದಂತೆ ವಿಸ್ತೃತವಾದ ಮುನ್ನುಡಿಯನ್ನು ಕೊಡಬೇಕಾಗಿದ್ದಿತು. ಆದರೆ ಕಾರಣಾಂತರದಿಂದ ಕೊಡಲು ಸಾಧ್ಯವಾಗಲಿಲ್ಲ. ನಮ್ಮ ಪ್ರಕಟಣೆಯ ಅಧ್ಯಕ್ಷರಾದ ವಿದ್ವಾನ್ ಹೆಚ್. ಎಸ್. ವರದದೇಶಿಕಾಚಾರ್ಯರಂಗಪ್ರಿಯರು ಸಿದ್ಧಪಡಿಸಿಕೊಟ್ಟಿರುವ ಮುನ್ನುಡಿಯನ್ನು ಈ ಸಂಪುಟದಲ್ಲಿ ಕೊಡಲಾಗಿದೆ. ಗೀತೆಗೆ ಸಂಬಂಧಿಸಿರುವಂತೆ ಅನೇಕ ವಿಷಯಗಳಿಂದ ಸಮಾವಿಷ್ಟವಾಗಿರುವ ಈ ಮುನ್ನುಡಿಯನ್ನು ಶ್ರಮವಹಿಸಿ ಸಿದ್ಧಮಾಡಿಕೊಟ್ಟುದಕ್ಕಾಗಿ ಶ್ರೀಯುತರಿಗೆ ಹೃತ್ಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತೇವೆ.

ಶ್ರೀಮನ್ಮಹಾಭಾರತದ ಪ್ರಚಾರಕಾರ್ಯವು ಸಾವಕಾಶವಾಗಿ ಸಾಗು ತ್ತಿದೆ. ಹೆಚ್ಚಿನ ಪ್ರಗತಿಯಿಲ್ಲದಿದ್ದರೂ ಪ್ರಗತಿಯೇ ಆಗಿಲ್ಲವೆಂದೂ ಹೇಳು ವಂತಿಲ್ಲ. ಆದರೆ ಒಂದನೆಯ ಸಂಪುಟದಿಂದ ಆರನೆಯ ಸಂಪುಟದವರೆಗೆ ಪುನರ್ಮುದ್ರಣ ಮಾಡಿಸಿ ಲಕ್ಷಾಂತರ ರೂ.ಗಳ ಬೆಲೆಬಾಳುವ ಪುಸ್ತಕಗಳ ದಾಸ್ತಾನನ್ನು ನೋಡಿದ ನಮ್ಮ ವಾಚಕರೇ ಒಮ್ಮೊಮ್ಮೆ ಭಯವನ್ನು ವ್ಯಕ್ತ

ಪಡಿಸುತ್ತಾರೆ. "ಇವೆಲ್ಲಾ ಖರ್ಚಾಗುವುದು ಯಾವಾಗ?"—ಎಂಬ ಉದ್ಗಾರ ಎಳೆಯುತ್ತಾರೆ. ಸಂಪುಟಗಳ ದಾಸ್ತಾನಿಗಾಗಿ ಎರಡನೆಯ ಮಾಳಿಗೆಯನ್ನೂ ಕಟ್ಟಿಸಿದ್ದಾಗಿದೆ. ಇದು ಪರಮಾತ್ಮನ ದಯೆಯಿಂದಲೇ ನಡೆಯುತ್ತಿರುವ ಕಾರ್ಯವಾದುದರಿಂದ ಹೆಚ್ಚು ದಾಸ್ತಾನು ಉಳಿದಿದೆ ಎಂಬುದರ ಬಗೆಗೆ ಭಯವಾಗಲೀ ಉದ್ವೇಗವಾಗಲೀ ಇಲ್ಲ. ಅವನು ಇಚ್ಛಿಸಿದರೆ ನಾಲ್ಕಾರು ತಿಂಗಳಲ್ಲಿಯೇ ದಾಸ್ತಾನು ಕರಗಿಹೋಗಬಹುದು. ಇದರ ಪ್ರಚಾರವು ಸಾವಧಾನವಾಗಿಯೇ ಆಗಬೇಕೆಂಬುದೇ ಅವನ ಇಚ್ಛೆಯಾಗಿರಬಹುದು. ಆದರೂ ಪ್ರಚಾರಕ್ಕಿರುವ, ಸೌಕರ್ಯಗಳನ್ನು ಪುನಃ ತಿಳಿಸಬಯಸುತ್ತೇವೆ. ಕೆನರಾ, ಸಿಂಡಿಕೇಟ್, ಕರ್ಣಾಟಕ, ಕಾರ್ಪೊರೇಷನ್ ಮತ್ತು ದಿ ನ್ಯಾಷನಲ್ ಕೋಆಪರೇಟಿವ್—ಈ ಎಲ್ಲ ಬ್ಯಾಂಕಿನವರೂ ದೇಶದಲ್ಲಿರುವ ತಮ್ಮ ಎಲ್ಲ ಶಾಖೆಗಳಲ್ಲಿಯೂ ಪೂರ್ಣಮಾಲೆಗೆ ಗ್ರಾಹಕರಾಗಲು ಸುಲಭಕಂತಿನ–ಸುಲಭ ಬಡ್ಡಿಯ ಸಾಲನೀಡುತ್ತಾರೆ. ಸಾಲವು ಮಂಜೂರಾದೊಡನೆಯೇ (ಮೊದಲನೆಯ ಕಂತನ್ನು ಕಟ್ಟುವ ಮೊದಲೇ) ಹದಿನೈದು ಸಂಪುಟಗಳನ್ನೂ ಪಡೆದುಕೊಳ್ಳಬಹುದು. ಇಂತಹ ಸದವಕಾಶವನ್ನು ನಮ್ಮ ಪ್ರಿಯಗ್ರಾಹಕರು ತಮ್ಮ ಬಂಧು-ಮಿತ್ರರಿಗೆ ಒದಗಿಸಿಕೊಟ್ಟು ಕಡೆಯಪಕ್ಷ ನಮ್ಮ ಒಬ್ಬ ಗ್ರಾಹಕರು ಒಬ್ಬ ನೂತನ ಗ್ರಾಹಕರನ್ನಾದರೂ ಮಾಡಿಕೊಟ್ಟರೆ ನಮ್ಮಲ್ಲಿರುವ ದಾಸ್ತಾನು ಈ ವರ್ಷದ ಕಡೆಯೊಳಗಾಗಿ ಮುಗಿದುಹೋಗುತ್ತದೆ. ನಮ್ಮ ಪ್ರಿಯ ವಾಚಕರು ಹೀಗೆ ಮಾಡಲು ಪ್ರತಿಜ್ಞೆಯನ್ನು ಕೈಗೊಳ್ಳಬೇಕಾಗಿ ಪ್ರಾರ್ಥಿಸುತ್ತೇವೆ. ಮಹಾಭಾರತವು ಜ್ಞಾನಭಂಡಾರ. ಇದರ ಪ್ರಚಾರಕ್ಕಿಂತಲೂ ಮಿಗಿಲಾದ ಪುಣ್ಯಕಾರ್ಯವು ಮತ್ತೊಂದಿರದು. ಆದುದರಿಂದ ನಮ್ಮ ಮಹಾಭಾರತದ ಬಂಧುಗಳು ಇದರ ಪ್ರಚಾರಕ್ಕೆ ಟೊಂಕಕಟ್ಟಬೇಕು.

ನಮ್ಮ ಅನೇಕ ಪ್ರತಿನಿಧಿಗಳು ನಿಃಸ್ಪೃಹತೆಯಿಂದ ಪ್ರಚಾರಕಾರ್ಯವನ್ನು ನಡೆಸುತ್ತಿದ್ದಾರೆ. ತೆರೆಯ ಮರೆಯಲ್ಲಿ ಶ್ರಮಿಸುತ್ತಿರುವ ಇವರೆಲ್ಲರಿಗೂ ದಯಾಮಯನು ಆಯುರಾರೋಗ್ಯಾದಿಗಳನ್ನು ಕರುಣಿಸಲಿ.

ಹದಿನಾಲ್ಕನೆಯ ಸಂಪುಟದ ಪ್ರಕಾಶನಸಮಾರಂಭವು 1978ನೇ ಮೇ 7 ಭಾನುವಾರದಂದು ಸಾಯಂಕಾಲ ವಿಶ್ವೇಶ್ವರಪುರದಲ್ಲಿರುವ ಕೋಟ ವಿಜಯಲಕ್ಷ್ಮೀಕಲ್ಯಾಣಮಂಟಪದಲ್ಲಿ ನಗರದ ಆಡಳಿತಾಧಿಕಾರಿಗಳಾದ ಶ್ರೀ ಎನ್. ಲಕ್ಷ್ಮಣರಾಯರ ಅಧ್ಯಕ್ಷತೆಯಲ್ಲಿ ನಡೆಯಿತು. ವೇದಘೋಷದೊಡನೆ

ಸಮಾರಂಭವು ಪ್ರಾರಂಭವಾಯಿತು. ಕುಮಾರೀ ಸತ್ಯವತಿಯವರು ಸ್ವಾಗತ ಪದ್ಯಮಾಲಿಕೆಯನ್ನು ಸುಶ್ರಾವ್ಯವಾಗಿ ಹಾಡಿದರು. ವಿದ್ವಾನ್ ಹೆಚ್. ಎನ್. ರಂಗಸ್ವಾಮಿಯವರು ಸ್ವಾಗತಭಾಷಣಮಾಡಿದರು. ಸಾಹಿತ್ಯ ಮತ್ತು ಸಂಸ್ಕೃತಿಯ ಇಲಾಖೆಯ ನಿರ್ದೇಶಕರಾಗಿದ್ದ ಶ್ರೀ ಜಯತೀರ್ಥರಾಜಪುರೋಹಿತರು ಹದಿನಾಲ್ಕನೆಯ ಸಂಪುಟವನ್ನು ಪ್ರಕಾಶನಗೊಳಿಸಿದರು. ಶ್ರೀಮತೀ ಶೈಲಜಾ ಅವರು ಸಂಪುಟದಿಂದ ಆಯ್ದ ಶ್ಲೋಕಗಳನ್ನು ಸುಶ್ರಾವ್ಯವಾಗಿ ಹಾಡಿದರು. ವಿದ್ವಾನ್ ವರದದೇಶಿಕಾಚಾರ್ಯರು ಸಂಪುಟದ ಪರಿಚಯಮಾಡಿಕೊಟ್ಟರು. ಶ್ರೀ ರಾಜಪುರೋಹಿತರು ಭಾಷಣಮಾಡುತ್ತಾ ಸರ್ಕಾರದ ವತಿಯಿಂದ ಆಗಬೇಕಾದುದನ್ನು ಮಾಡಿಕೊಡುವುದಾಗಿ ಭರವಸೆಯಿತ್ತರು. ಅಧ್ಯಕ್ಷತೆ ವಹಿಸಿದ್ದ ಶ್ರೀ ಎನ್. ಲಕ್ಷ್ಮಣರಾಯರು ಎಲ್ಲ ಪುಸ್ತಕಭಂಡಾರಗಳಿಗೂ ಮಹಾಭಾರತದ ಸಂಪುಟಗಳನ್ನು ತರಿಸಿಕೊಳ್ಳುವಂತೆ ಏರ್ಪಡಿಸಿ ಕೊಡುವುದಾಗಿ ಭರವಸೆ ನೀಡಿದರು. ಶ್ರೀ ಶ್ರೀ ಜಗದ್ಗುರು ಶಂಕರಾಚಾರ್ಯ ಶ್ರೀ ಶ್ರೀ ರಾಘವೇಂದ್ರ ಭಾರತೀಸ್ವಾಮಿಗಳವರು ಕಳುಹಿಸಿಕೊಟ್ಟಿದ್ದ ಸುವರ್ಣ ಮಂತ್ರಾಕ್ಷತೆಯನ್ನು ಅಧ್ಯಕ್ಷರು ಸಂಪಾದಕಮಂಡಲಿಯವರಿಗೆ ಫಲ-ಪುಷ್ಪ ಗಳೊಡನೆ ವಿತರಣೆಮಾಡಿದರು. ವಿದ್ವಾನ್ ರಾಮೇಶ್ವರಾವಧಾನಿಗಳ ವಂದನಾರ್ಪಣೆಗಳೊಡನೆ ಸಮಾರಂಭವು ಯಶಸ್ವಿಯಾಗಿ ಮುಕ್ತಾಯ ವಾಯಿತು.

ನಮ್ಮ ಶ್ರೀಮನ್ಮಹಾಭಾರತದ ಅನೇಕಗ್ರಾಹಕರು ರಾಮಾಯಣವೂ ಬೇಕೆನ್ನುತ್ತಿದ್ದಾರೆ. ರಾಮಾಯಣದ ಪ್ರಕಟಣೆಯನ್ನೂ ನಾವು ಸಂಪುಟರೂಪ ಗಳಲ್ಲಿ ಪ್ರಾರಂಭಿಸಿದ್ದೆವು. ಅದು ಈಗ ಭಾರತದರ್ಶನ ಮಾಸಪತ್ರಿಕೆಯಲ್ಲಿ ಮುಂದುವರಿಯುತ್ತಿದೆ. ಸಂಪುಟಗಳಲ್ಲಿಯೂ ಪ್ರಕಟಿಸಿ ನಮ್ಮ ಪ್ರಿಯವಾಚಕ ರಿಗೆ ಶ್ರೀಮನ್ಮಹಾಭಾರತದ ಸಂಪುಟಗಳನ್ನು ವಿತರಣೆಮಾಡುತ್ತಿರುವಂತೆಯೇ ಸುಲಭ ಬೆಲೆಗೆ ಒದಗಿಸುವ ಆಶಯವಿದೆ. ಆದರೆ ಮಹಾಭಾರತವನ್ನು ಮುಗಿಸುವ ಮೊದಲು ಅದು ಸಾಧ್ಯವಾಗಲಾರದು. ದಯಮಾಡಿ ನಮ್ಮ ಪ್ರಿಯವಾಚಕರು ಅಲ್ಲಿಯವರೆಗೂ ತಾಳ್ಮೆವಹಿಸಬೇಕೆಂದು ಪ್ರಾರ್ಥಿಸುತ್ತೇವೆ.

ನೂರಾರು ಉಳಿಯ ಪೆಟ್ಟುಗಳಿಂದ ಒಂದು ಸುಂದರವಿಗ್ರಹವಾಗು ವಂತೆ–ಅನೇಕರ ಶ್ರಮದ ಫಲವಾಗಿ ಈ ಸಂಪುಟಗಳು ಹೊರಬರುತ್ತಿವೆ. ಸಹಕಾರ ನೀಡುತ್ತಿರುವವರ ಸಂಖ್ಯೆ ಅಗಣಿತ. ಒಬ್ಬೊಬ್ಬರ ಉಪಕಾರಗಳನ್ನೇ

ವಿವರಿಸಲು ಸಾಧ್ಯವಾಗುವುದಿಲ್ಲ. ತಮಗೆ ಪ್ರಚಾರಸಿಗಬೇಕೆಂದು ಆ ಮಹನೀಯರು ಕಾರ್ಯಮಾಡುತ್ತಲೂ ಇಲ್ಲ. 'ನಮ್ಮ ಆರ್ಷೇಯಸಂಸ್ಕೃತಿಗೆ ನಮ್ಮದೊಂದು ಚಿಕ್ಕಸಹಾಯ'–ಎಂದೇ ಭಾವಿಸಿ ಎಲ್ಲರೂ ಸಹಕಾರ ನೀಡುತ್ತಿದ್ದಾರೆ. ಅವರೆಲ್ಲರಿಗೂ ದಯಾಮಯನಾದ ಪರಮಾತ್ಮನು ಆಯುರಾರೋಗ್ಯ–ಐಶ್ವರ್ಯಾದಿಗಳನ್ನೂ, ಪ್ರೇಯಸ್ಸು-ಶ್ರೇಯಸ್ಸುಗಳನ್ನೂ ದಯಪಾಲಿಸಲೆಂದು ಹೃತ್ಪೂರ್ವಕವಾಗಿ ಪ್ರಾರ್ಥಿಸುತ್ತೇವೆ.

ಈ ಸಂಪುಟದೊಡನೆ ಪ್ರಕಾಶನದ ಅರ್ಧಭಾಗವನ್ನು ಮುಗಿಸಿದಂತಾಗಿದೆ. ಹೆಳವನೊಬ್ಬನನ್ನು ದಯಾಸಾಗರನು ಹದಿನೈದು ಮೆಟ್ಟಲುಗಳನ್ನು ಹತ್ತಿಸಿಬಿಟ್ಟಿದ್ದಾನೆ. ಮುಂದಿನ ಹದಿನೈದು ಮೆಟ್ಟಲುಗಳನ್ನೂ ಹತ್ತಿಸದೇ ಇರುವನೇ? ಅವನೆಂದಿಗೂ ಹಾಗೆ ಮಾಡಲಾರನು. ಹತ್ತಿಸಿಯೇ ಹತ್ತಿಸುತ್ತಾನೆ. ಅವನ ದಿವ್ಯಚರಣಾರವಿಂದಗಳನ್ನು ಭದ್ರವಾಗಿ ಹಿಡಿದು ಕುಳಿತುಕೊಳ್ಳುವುದೊಂದೇ ನಮ್ಮ ಕರ್ತವ್ಯವಾಗಿರುತ್ತದೆ.

ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು : ಸಮಸ್ತಸನ್ಮಙ್ಗಲಾನಿ ಭವನ್ತು

– ಪ್ರಕಾಶಕರು.

## ದ್ವಿತೀಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ ಹದಿನೈದನೆಯ ಸಂಪುಟದ ಪುನರ್ಮುದ್ರಣವನ್ನು ಮುಗಿಸುತ್ತಿದ್ದೇನೆ. ಮೈಸೂರಿನ ವಿಜಯಲಕ್ಷ್ಮಿ ಪ್ರಿಂಟರ್ಸ್ ಇವರ ಸಹಕಾರದಿಂದಾಗಿ ಈ ಸಂಪುಟವು ನಿರೀಕ್ಷಿಸಿದ್ದುದಕ್ಕಿಂತಲೂ ಸ್ವಲ್ಪ ಬೇಗ ಮುಗಿದಿರುವುದೆಂದು ಹೇಳಬಹುದು. ಮುಂದೆಯೂ ಇವರ ಸಹಕಾರದಿಂದಲೇ ಹಿಂದಿನ ಸಂಪುಟಗಳನ್ನು ಸಾಧ್ಯವಾದಷ್ಟು ಬೇಗ ಮುದ್ರಿಸುವ ಆಶಯವನ್ನು ಇಟ್ಟುಕೊಂಡಿರುತ್ತೇವೆ.

ಪುನರ್ಮುದ್ರಣಗಳು ಶೀಘ್ರವಾಗಿ ಆಗುತ್ತಿದ್ದಂತೆ ಹಿಂದಿನ ಪ್ರತಿಗಳೂ ಅತಿ ಶೀಘ್ರವಾಗಿಯೇ ಮುಗಿದು ಹೋಗುತ್ತಿವೆ. ಈಗ ನಮ್ಮಲ್ಲಿ 30 ಸಂಪುಟಗಳ ಪೈಕಿ 18 ಸಂಪುಟಗಳು ಮಾತ್ರವೇ ಇವೆ. ಮೊದಲನೆಯ ಮೂರು ಸಂಪುಟಗಳೇ ಮುಗಿದು ಹೋಗಿವೆ. ಇದರಿಂದ ವಾಚಕರು ನಿರಾಶರಾಗಬೇಕಾಗಿಲ್ಲ. ಜುಲೈ ಮಾಸದಲ್ಲಿ 32ನೆಯ ಸಂಪುಟದ ಪ್ರಕಾಶನವಾಗಿ ಮಹಾಮಂಗಳ ಸಮಾರಂಭವು ಮುಗಿದನಂತರ ಸಾಧ್ಯವಾದಷ್ಟು ಬೇಗ ಹಿಂದಿನ ಸಂಪುಟಗಳನ್ನು ಪುನರ್ಮುದ್ರಣ ಮಾಡುವ ಯೋಜನೆಯನ್ನು ಇಟ್ಟುಕೊಂಡಿರು

ತ್ತೇವೆ. ಮಹಾಮಂಗಳದ ಕಾರ್ಯಗಳು ಯಥೋಚಿತವಾದ ರೀತಿಯಲ್ಲಿ ಮುಂದುವರಿಯುತ್ತಿದೆ. ಆದರೆ ನಮ್ಮ ಗ್ರಾಹಕರಿಂದ ನಿರೀಕ್ಷಿಸಿದ್ದಂತೆ ಸ್ಮರಣ ಸಂಚಿಕೆಗೆ ಜಾಹಿರಾತಾಗಲೀ ವಂತಿಗೆಯಾಗಲೀ ಬಂದಿರುವುದಿಲ್ಲ. ಇನ್ನೂ ಸ್ವಲ್ಪ ಕಾಲಾವಕಾಶವಿದೆ. ನಮ್ಮ 10 ಸಾವಿರ ಮಂದಿ ಗ್ರಾಹಕರೂ ಮಹಾ ಮಂಗಳ ಮಹೋತ್ಸವದಲ್ಲಿ ಭಾಗವಹಿಸಿಯೇ ತೀರುವರೆಂಬ ಭರವಸೆಯು ಇನ್ನೂ ಇದೆ. ತಮ್ಮದೇ ಆದ ಈ ಸಮಾರಂಭದಲ್ಲಿ ಎಲ್ಲರೂ ಭಾಗವಹಿಸು ವಂತಾಗಲಿ.

ಈ ಸಂಪುಟದ ತಪ್ಪು-ಒಪ್ಪುಗಳನ್ನು ನೋಡಿ ಕೊಟ್ಟ ಸಂಪಾದಕ ಮಂಡಲಿಯವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು. –ಪ್ರಕಾಶಕರು.

## ತೃತೀಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ ಈ ಸಂಪುಟದ ಮೂರನೆಯ ಮುದ್ರಣ ವನ್ನು ಮುಗಿಸುತ್ತಿದ್ದೇವೆ. ಹೊಸ ಗ್ರಾಹಕರಿಗಾಗಿ ಮಹಾಭಾರತದ ಮೊದಲ ಮೂರು ಸಂಪುಟಗಳನ್ನು ಮುದ್ರಣಮಾಡಬೇಕಾಗಿ ಬಂದುದರಿಂದ ಹಳೆಯ ಗ್ರಾಹಕರಿಗೆ 26ನೆಯ ಸಂಪುಟದನಂತರ ಸಂಪುಟಗಳನ್ನು ವಿತರಿಸಲು ಸಾಧ್ಯ ವಾಗಲೇ ಇಲ್ಲ. ಅದಕ್ಕಾಗಿಯೇ 15ನೆಯ ಸಂಪುಟವನ್ನು ಪುನರ್ಮುದ್ರಣಕ್ಕೆ ತೆಗೆದುಕೊಳ್ಳಲಾಯಿತು. ಈ ಸಂಪುಟವೂ ಸೇರಿದರೆ ಪೂರ್ಣಮಾಲೆಯಲ್ಲಿ 21 ಸಂಪುಟಗಳು ಸಿಗುವಂತಾಗುತ್ತದೆ. ಇನ್ನೂ 11 ಸಂಪುಟಗಳ ಪುನ ರ್ಮುದ್ರಣವಾಗಬೇಕಾಗಿದೆ. ಆ ವೇಳೆಗೆ ಈಗಿರುವ ಸಂಪುಟಗಳಲ್ಲಿ 3-4 ಸಂಪುಟಗಳು ಮುಗಿದುಹೋಗುವ ಸ್ಥಿತಿಯಲ್ಲಿದೆ. ಪರಮಾತ್ಮನ ದಯೆ ಜನ ಗಳ ಪ್ರೋತ್ಸಾಹವಿರುವಾಗ ಇನ್ನೂ ಹತ್ತಾರು ಬಾರಿಯಾದರೂ ಪುನ ರ್ಮುದ್ರಣಮಾಡಲು ಸಿದ್ಧರಿದ್ದೇವೆ. ಗ್ರಾಹಕರ ಸಂಖ್ಯೆ ಲಕ್ಷವನ್ನು ಮುಟ್ಟ ಬೇಕು. ಇದಕ್ಕೆ ಎಲ್ಲ ಗ್ರಾಹಕರ ನೆರವೂ ಅಗತ್ಯವಾಗಿ ಬೇಕು. ಮುಂದೆ ರಾಮಾಯಣದ 11ನೆಯ ಸಂಪುಟವನ್ನು ಮುದ್ರಣಕ್ಕೆ ತೆಗೆದುಕೊಳ್ಳ ಲಾಗುವುದು.

ಎಂದಿನಂತೆಯೇ ಈ ಸಂಪುಟದ ತಪ್ಪು-ಒಪ್ಪುಗಳನ್ನು ನೋಡಿಕೊಟ್ಟ ಸಂಪಾದಕಮಂಡಲಿಯ ವಿದ್ವಾಂಸರಿಗೆ ಹೃತ್ಪೂರ್ವಕ ವಂದನೆಗಳನ್ನು ಸಮರ್ಪಿಸುತ್ತೇವೆ. –ಪ್ರಕಾಶಕರು.

|| ಓಂ ||

ಶ್ರೀರಂಗಸದ್ಗುರವೇ ನಮಃ

# ಭೂಮಿಕಾ

**ಓಂ ಪ್ರಪನ್ನಪಾರಿಜಾತಾಯ ತೋತ್ರವೇತ್ರೈಕಪಾಣಯೇ ।**
**ಜ್ಞಾನಮುದ್ರಾಯ ಕೃಷ್ಣಾಯ ಗೀತಾಮೃತದುಹೇ ನಮಃ ॥**

ಭಾರತದರ್ಶನ ಗ್ರಂಥಮಾಲೆಯನ್ನಲಂಕರಿಸಿರುವ ಭಗವದ್ಗೀತಾಭಾವ ಪ್ರಕಾಶನವು ಮಂಗಲಪರಿಸಮಾಪ್ತಿಯನ್ನು ಹೊಂದಿರುವ ಈ ಸಂಪುಟದಲ್ಲಿ ಗೀತಾಚಾರ್ಯನಿಗೆ ಪ್ರಾಣಪ್ರಣಾಮಮಾಡಿ, ಆತನು ಕರುಣಿಸಿದ [1]ಜ್ಞಾನ-ವಿಜ್ಞಾನರೂಪವಾದ ಶ್ರೀಕೋಶದ ವಿಷಯವನ್ನು ಇಲ್ಲಿ ಸಂಕ್ಷಿಪ್ತವಾಗಿ ವಿವೇಚನೆಮಾಡುತ್ತಿದ್ದೇವೆ. ಗೀತಾಮೃತವನ್ನು ಯಥಾಶಕ್ತಿಪಾನಮಾಡಿ ಸುಖಾನುಭವಮಾಡಿದ ಸುಕೃತಿ–ಸುಧೀಮಣಿಗಳು ಅದರ ಮಹಿಮೆಯನ್ನು ತಮ್ಮ ಮತಿವೈಭವಕ್ಕೆ ಅನುಗುಣವಾಗಿ ಕೊಂಡಾಡಿರುವಂತೆಯೇ, ಪ್ರಕೃತಿಯ ದೋಷದಿಂದ ಆ ಅಮೃತವನ್ನು ಆಸ್ವಾದನೆಮಾಡಲಾರದೇ ಪೂರ್ವಗ್ರಹದಿಂದ ಅದರ ಬಗ್ಗೆ ಸಲ್ಲದ ಮಾತುಗಳನ್ನು ಆಡಿರುವ ಜನರೂ ಉಂಟು. ಪಿತ್ತದೋಷವು ನಾಲಿಗೆಯನ್ನು ಮುತ್ತಿರುವಾಗ ಮಾಧುರ್ಯ ಅನುಭವಕ್ಕೆ ಬರದಿರುವುದೂ ಸಹಜವೇ.[2] ಗ್ರಂಥವನ್ನು ಪ್ರಶಂಸೆಮಾಡಿರುವವರಲ್ಲಿಯೂ ಹಲವರು ವಿವೇಕಮಾಂದ್ಯದಿಂದ ತಮ್ಮ ಆ ಹೊಗಳಿಕೆಯು ಗ್ರಂಥಕ್ಕೆ ಅಗೌರವವೇ ಬರುವಂತೆ ಮಾಡಿರುವ ಪ್ರಕರಣಗಳೂ ಉಂಟು. ಗ್ರಂಥವನ್ನು ತೆಗಳಿರುವವರಲ್ಲೂ ಗಂಭೀರವಾದ ದೋಷಗಳನ್ನು ಆರೋಪಣೆಮಾಡಿರುವವರು, ಲಘುವಾದ ದೋಷಗಳನ್ನು ಆರೋಪಿಸಿರುವವರು, ಲಘುವಾಗಿ ಹೊಗಳುವುದರ ಮೂಲಕ ಗ್ರಂಥದ ನಿಂದನೆಯನ್ನೇ ಸಾಧಿಸಿರುವವರು (Condemnation by faint praise)–ಎಂದು ಮೊದಲಾಗಿ ನಾನಾವರ್ಗದವರುಂಟು. ಈ ಎಲ್ಲಾ ವರ್ಗಗಳ ಜನರೂ ಸಾಮಾನ್ಯವಾಗಿ ಎಲ್ಲಾ ಕಾಲಗಳಲ್ಲಿಯೂ ಇದ್ದೇ ಇರುತ್ತಾರೆ. ಈ ಕೋಲಾಹಲದ ಮಧ್ಯೇ ಶಾಂತವಾಗಿ ಶಾಸ್ತ್ರದ ಬಗ್ಗೆ ಸಿಂಹಾವಲೋಕನಮಾಡಬೇಕಾಗಿದೆ. ವಿರುದ್ಧ

---

1 'ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ' -ಗೀತಾ

2 'ಪಿತ್ತೇನಾಚ್ಛಾದಿತಾ ಜಿಹ್ವಾ ಮಾಧುರ್ಯಂ ನೈವ ವಿಂದತೇ' -ಸು.

ಪಕ್ಷಗಳಿಗೆ ಸೇರಿದ ಶತ್ರುಸೇನೆಗಳ ಮಧ್ಯೆ [1]ರಥವನ್ನು ಸ್ಥಾಪಿಸಿ ಕೋಲಾಹಲದ ಸನ್ನಿವೇಶದಲ್ಲೂ [2]ಶಾಂತಿಸಮೃದ್ಧಿಯನ್ನೂ ಜ್ಞಾನಾನಂದವನ್ನೂ ನರನಿಗೆ ಅನುಗ್ರಹಿಸಿದ ನಾರಾಯಣನ ಅನುಗ್ರಹವು ನಮ್ಮನ್ನು ಕಾಪಾಡಬೇಕು.

**೧. ಗೀತೆಯ ಪ್ರಶಂಸೆ : ಬಹುಮುಖಪ್ರಾಮುಖ್ಯ :**

ಇತಿಹಾಸ-ಪುರಾಣಗಳೂ, ಅನುಭಾವಿಗಳೂ, ಆಚಾರ್ಯರೂ, ಸಾಧು-ಸಂತರೂ, ಸಂಪ್ರದಾಯನಿಷ್ಠರಾದ ಪಂಡಿತರೂ, ಸ್ವತಂತ್ರವಿಚಾರದವರೂ ಬಹುಮಂದಿ ಗೀತಾದೇವಿಯ ಮೇಲೆ ಪ್ರಶಂಸೆಯ ಪುಷ್ಪವೃಷ್ಟಿಯನ್ನು ಕರೆದಿದ್ದಾರೆ.

"ಗೀತೆಯು ಭಗವಂತನಿಗೆ ಹೃದಯಭೂತವಾದುದು. ಅವನ ಉತ್ತಮವಾದ ಸಾರವದು ; ಅವನ ಉಗ್ರವಾದ ಮತ್ತು ಅವ್ಯಯವಾದ ಜ್ಞಾನ. ಅವನ ಬ್ರಹ್ಮರೂಪ ಪರಮವಿದ್ಯೆ. ಭಗವಂತನೇ ತನ್ನ ಗೀತೆಯನ್ನಾಶ್ರಯಿಸಿದ್ದಾನೆ. ಅದು ಅವನ ಉತ್ತಮವಾದ ಮನೆ. ಅದರ ಜ್ಞಾನವನ್ನಾಶ್ರಯಿಸಿಯೇ ಅವನು ಮೂಜಗಗಳನ್ನೂ ಪಾಲಿಸುತ್ತಿದ್ದಾನೆ."

**ಗೀತಾ ಮೇ ಹೃದಯಂ ಪಾರ್ಥ ಗೀತಾ ಮೇ ಸಾರಮುತ್ತಮಮ್ ।**
**ಗೀತಾ ಮೇ ಜ್ಞಾನಮತ್ಯುಗ್ರಂ ಗೀತಾ ಮೇ ಜ್ಞಾನಮವ್ಯಯಮ್ ॥**

**ಗೀತಾಜ್ಞಾನಂ ಸಮಾಶ್ರಿತ್ಯ ತ್ರಿಲೋಕೀಂ ಪಾಲಯಾಮ್ಯಹಮ್ ।**
**ಗೀತಾ ಮೇ ಪರಮಾ ವಿದ್ಯಾ ಬ್ರಹ್ಮರೂಪಾ ನ ಸಂಶಯಃ ॥**

**ಗೀತಾಶ್ರಯೇಽಹಂ ತಿಷ್ಠಾಮಿ ಗೀತಾ ಮೇ ಚೋತ್ತಮಂ ಗೃಹಮ್ ।**
**ಗೀತಾಜ್ಞಾನಮುಪಾಶ್ರಿತ್ಯ ತ್ರೀಂಲ್ಲೋಕಾನ್ಪಾಲಯಾಮ್ಯಹಮ್ ॥**[3]

"ಗೀತೆಯು ಸರ್ವಶಾಸ್ತ್ರಮಯೀ"

**'ಸರ್ವಶಾಸ್ತ್ರಮಯೀ ಗೀತಾ ಸರ್ವದೇವಮಯೋ ಹರಿಃ**

---

1 ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ -ಗೀತಾ
'ದೇವಾನಾಂ ದಾನವಾನಾಂ ಚ ಸಾಮಾನ್ಯಮಧಿದೈವತಮ್' -ಜಿತಂತಾಸ್ತುತಿ
2 'ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ' -ಗೀತಾ
3 'ವರಾಹಪುರಾಣ' -ಗೀತಾಮಾಹಾತ್ಮ್ಯ

ಭಾರತರತ್ನಾಕರದ ಪಂಚಮಹಾರತ್ನಗಳಲ್ಲಿ ಆದ್ಯಸ್ಥಾನವುಳ್ಳದ್ದು, ಸಾರದಲ್ಲೂ ಸಾರಿಷ್ಠವಾದುದು ಗೀತೆ :

**ಗೀತಾ ಸಹಸ್ರನಾಮೈವ ಸ್ತವರಾಜೋ ಹ್ಯನುಸ್ಮೃತಿಃ ।**
**ಗಜೇಂದ್ರಮೋಕ್ಷಣಂ ಚೈವ ಪಂಚರತ್ನಾನಿ ಭಾರತೇ ॥**

**ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ**
**ಶಾಸ್ತ್ರೇಷು ಭಾರತಂ ಸಾರಂ ತತ್ರ ನಾಮಸಹಸ್ರಕಮ್ ।**
**ವೈಷ್ಣವಂ ಕೃಷ್ಣಗೀತಾ ಚ ತಜ್ಜ್ಞಾನಾನ್ಮುಚ್ಯತೇಂಽಜಸಾ ॥**[1]

ಅದರ ಅಧ್ಯಯನವು ನಡೆಯುವ ಜಾಗದಲ್ಲಿ ಎಲ್ಲ ತೀರ್ಥಗಳೂ ಬಂದು ಸೇರುತ್ತವೆ. ಎಲ್ಲ ದೇವರ್ಷಿ-ಭಕ್ತ-ಭಾಗವತರಿಗೆ ಅದು ಸಂಗಮ ಸ್ಥಾನ :

**ತತ್ರ ಸರ್ವಾಣಿ ತೀರ್ಥಾನಿ ಪ್ರಯಾಗಾದೀನಿ ತತ್ರ ವೈ ।**
**ಸರ್ವೇ ದೇವಾಶ್ಚ ಋಷಯಃ ಯೋಗಿನಃ ಪನ್ನಗಾಶ್ಚ ಯೇ ॥**

ಅದರ ಅಧ್ಯಯನಮಾಡುವವನಿಗೆ ಯಾವ ಪಾಪವೂ ಸೋಂಕುವುದಿಲ್ಲ;

**ಗೀತಾಧ್ಯಯನಶೀಲಸ್ಯ ಪ್ರಾಣಾಯಾಮಪರಸ್ಯ ಚ ।**
**ನೈವ ಸನ್ತಿ ಹಿ ಪಾಪಾನಿ ಪೂರ್ವಜನ್ಮಕೃತಾನಿ ಚ ॥**

ಇಡೀ ಗೀತೆಯನ್ನು ಪಾರಾಯಣಮಾಡಲಾಗದವನು ಅದರ ಒಂದು ಶ್ಲೋಕವನ್ನಾಗಲೀ, ಅದರ ಅರ್ಧವನ್ನಾಗಲೀ, ಒಂದು ಪಾದವನ್ನಾಗಲೀ, ಪಾದದ ಅರ್ಧವನ್ನಾಗಲೀ ನಿತ್ಯವೂ ಭಕ್ತಿಯಿಂದ ಪಠಿಸಿದರೂ ಅದರಿಂದ ಮೋಕ್ಷಫಲ.

**ಶ್ಲೋಕಮೇಕಂ ತದರ್ಧಂ ವಾ ಪಾದಂ ಪಾದಾರ್ಧಮೇವ ವಾ ।**
**ನಿತ್ಯಂ ಪಠತಿ ಭಕ್ತ್ಯಾ ಯಃ ಸ ಮೋಕ್ಷಮಧಿಗಚ್ಛತಿ ॥**[2]

ಅದರ ಹದಿನೆಂಟು ಅಧ್ಯಾಯಗಳನ್ನೂ ನಿಶ್ಚಲಮನಸ್ಸಿನಿಂದ ಪಾರಾಯಣಮಾಡಿದರೆ ಜ್ಞಾನಸಿದ್ಧಿ ಮತ್ತು ಪರಮಪದಪ್ರಾಪ್ತಿ ; ಅರ್ಧಭಾಗವನ್ನು ಪಠಿಸಿದರೆ ಗೋದಾನದ ಪುಣ್ಯ ; ಮೂರನೇ ಒಂದು ಭಾಗವನ್ನು ಅಧ್ಯಯನ ಮಾಡಿದರೆ ಗಂಗಾಸ್ನಾನದ ಫಲ ; ಆರನೇ ಒಂದು ಭಾಗದ ಪಾಠಕ್ಕೆ ಸೋಮ

---

1 ಮಹಾಕೌರ್ಮ ಪುರಾಣ. ಮ.ಗೀ.ಭಾ.    2 ಗೀತಾಮಾಹಾತ್ಮ್ಯ–ಪೀಠಿಕಾ

ಯಾಗದ ಫಲ ; ಒಂದು ಅಧ್ಯಾಯವನ್ನು ಪಠಿಸುವವನಿಗೂ ರುದ್ರಲೋಕ ಪ್ರಾಪ್ತಿ ; ಗೀತಾರ್ಥಶ್ರವಣದಲ್ಲಿ ಆಸಕ್ತವಾದ ಮನಸ್ಸುಳ್ಳವನಿಗೆ ಪರಮ ವೈಕುಂಠ.

ಅದರ ಅರ್ಥವನ್ನು ನಿತ್ಯವೂ ಧ್ಯಾನಿಸುವವನು ಜೀವನ್ಮುಕ್ತ.

**ಯೋಽಷ್ಟಾದಶಜಪ್ಯೋ ನಿತ್ಯಂ ನರೋ ನಿಶ್ಚಲಮಾನಸಃ ।**
**ಜ್ಞಾನಸಿದ್ಧಿಂ ಸ ಲಭತೇ ತತೋ ಯಾತಿ ಪರಂ ಪದಮ್ ॥**
**ಪಾಠೇಽಸಮರ್ಥಃ ಸಂಪೂರ್ಣೇ ತತೋಽರ್ಧಂ ಪಾಠಮಾಚರೇತ್ ।**
**ತದಾ ಗೋದಾನಜಂ ಪುಣ್ಯಂ ಲಭತೇ ನಾತ್ರ ಸಂಶಯಃ ॥**
**ತ್ರಿಭಾಗಂ ಪಠಮಾನಸ್ತು ಗಂಗಾಸ್ನಾನಫಲಂ ಲಭೇತ್ ।**
**ಷಡಂಶಂ ಜಪಮಾನಸ್ತು ಸೋಮಯಾಗಫಲಂ ಲಭೇತ್ ॥**
**ಏಕಾಧ್ಯಾಯಂ ತು ಯೋ ನಿತ್ಯಂ ಪಠತೇ ಭಕ್ತಿಸಂಯುತಃ ।**
**ರುದ್ರಲೋಕಮವಾಪ್ನೋತಿ ಗಣೋ ಭೂತ್ವಾ ವಸೇಚ್ಚಿರಮ್ ॥**
**ಗೀತಾರ್ಥಶ್ರವಣಾಸಕ್ತೋ ಮಹಾಪಾಪಯುತೋಽಪಿ ವಾ ।**
**ವೈಕುಂಠಂ ಸಮವಾಪ್ನೋತಿ ವಿಷ್ಣುನಾ ಸಹ ಮೋದತೇ ॥**
**ಗೀತಾರ್ಥಂ ಧ್ಯಾಯತೇ ನಿತ್ಯಂ ಕೃತ್ವಾ ಕರ್ಮಾಣಿ ಭೂರಿಶಃ ।**
**ಜೀವನ್ಮುಕ್ತಂ ಸ ವಿಜ್ಞೇಯಃ ದೇಹಾನ್ತೇ ಪರಮಂ ಪದಮ್ ॥**

ಅದರ ಒಂದೊಂದು ಅಧ್ಯಾಯದ ಪಾರಾಯಣಕ್ಕೂ ಮಹಾಫಲ ವುಂಟೆಂದು ಪಾದ್ಮಪುರಾಣದ ಉತ್ತರಖಂಡವು ಕಥಾದೃಷ್ಟಾಂತಗಳೊಡನೆ ನಿರೂಪಿಸುತ್ತದೆ.

ದೇವಕೀಪುತ್ರನು ಉಪದೇಶಿಸಿದ ಶಾಸ್ತ್ರವೊಂದೇ ಶಾಸ್ತ್ರವು. "ಏಕಂ ಶಾಸ್ತ್ರಂ ದೇವಕೀಪುತ್ರಗೀತಂ' (ಹನುಮದ್ ಭಾಷ್ಯ ). ಗೀತೆಯನ್ನು ಚೆನ್ನಾಗಿ ಗಾನಮಾಡಿರಿ. ಉಳಿದ ಶಾಸ್ತ್ರಸಂಗ್ರಹಗಳಿಂದೇನು? ಸ್ವಯಂ ಪದ್ಮನಾಭನ ಮುಖಪದ್ಮದಿಂದಲೇ ಹೊರಬಂದುದು ಅದು.

**ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರಸಂಗ್ರಹೈಃ ।**
**ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದುದೀರಿತಾ ॥**

ಅದರ ಐದು ಅಧ್ಯಾಯಗಳು ಪರಮೇಶ್ವರನ ಐದು ಮುಖಗಳು ;

ಹತ್ತು ಅಧ್ಯಾಯಗಳು ಅವನ ದಶಬಾಹುಗಳು ; ಒಂದು ಅವನ ಉದರ ; ಎರಡು ಅವನ ಅಡಿದಾವರೆಗಳು ; ಹೀಗೆ ಹದಿನೆಂಟು ಅಧ್ಯಾಯಗಳು ಸೇರಿ ಅವನ ವಾಙ್ಮಯದೇಹವೇ ಆಗಿದೆ.

**ವಕ್ತ್ರಾಣಿ ಪಂಚ ಜಾನೀಹಿ ಪಂಚಾಧ್ಯಾಯಾನನುಕ್ರಮಾತ್ ।**
**ದಶಾಧ್ಯಾಯಾನ್ಭುಜಾಂಶ್ಚೈಕಮುದರಂ ದ್ವೇ ಪದಾಂಬುಜೇ ।**
**ಏವಮಷ್ಟಾದಶಾಧ್ಯಾಯೀ ವಾಙ್ಮಯೀ ಮೂರ್ತಿರೈಶ್ವರೀ ॥**

(ಪಾದ್ಮ ಅ.೧೭೧)

"ಶೇಷಶಾಯಿಯಾದ ನಾರಾಯಣನೂ ಅದರ ಅರ್ಥವನ್ನು ಅನು ಸಂಧಾನಮಾಡುತ್ತಾನೆ" ಎನ್ನುತ್ತದೆ ಪುರಾಣ.

**ನಾಹಂ ಸುಮುಖಿ ನಿದ್ರಾಲುರ್ನಿತ್ಯಂ ಮಾಹೇಶ್ವರಂ ಮಹಃ ।**
**ದೃಶಾ ತತ್ತ್ವಾನುವರ್ತಿನ್ಯಾ ಪಶ್ಯಾಮ್ಯನ್ತರ್ನಿಮಗ್ನಯಾ ।**
**ದ್ವೈಪಾಯನೋ ಯದಾಸಾದ್ಯ ಗೀತಾಶಾಸ್ತ್ರಂ ನಿಸೃಷ್ಟವಾನ್ ॥**

(ಪದ್ಮ-ಉ.ಖಂ.ಅ. ೧೭೧)

ಗೀತಾದೇವಿಯ ಪವಿತ್ರವಾದ ನಾಮಗಳನ್ನು ಪಠಿಸುತ್ತಿದ್ದರೂ ಪಾಪ ಪರಿಹಾರ ; ಪರಮಪದಪ್ರಾಪ್ತಿ :

**ಗೀತಾ ಗಂಗಾ ಚ ಗಾಯತ್ರೀ ಸೀತಾ ಸತ್ಯಾ ಪತಿವ್ರತಾ ।**
**ಬ್ರಹ್ಮಾವಲೀ ಬ್ರಹ್ಮವಿದ್ಯಾ ತ್ರಿಸಂಧ್ಯಾ ಮುಕ್ತಿಗೇಹಿನೀ ॥**
**ಅರ್ಧಮಾತ್ರಾ ಚಿದಾನಂದಾ ಭವಘ್ನೀ ಭ್ರಾನ್ತಿನಾಶಿನೀ ।**
**ವೇದತ್ರಯೀ ಪರಾನನ್ತಾ ತತ್ತ್ವಾರ್ಥಜ್ಞಾನಮಂಜರೀ ॥**
**ಇತ್ಯೇತಾನಿ ಜಪೇನ್ನಿತ್ಯಂ ನರೋ ನಿಶ್ಚಲಮಾನಸಃ ।**
**ಜ್ಞಾನಸಿದ್ಧಿಂ ಲಭೇಚ್ಛೀಘ್ರಂ ತಥಾನ್ತೇ ಪರಮಂ ಪದಮ್ ॥**

ಅದು ಸರ್ವಶಾಸ್ತ್ರಗಳ ಸಂಗ್ರಹ ; ಪರಮಪುರುಷಾರ್ಥನಿಧಿ ಎಂದು ಭಾಷ್ಯಕಾರರಾದ ಆಚಾರ್ಯರೂ ಉದ್ಘೋಷಿಸುತ್ತಾರೆ.

[1]**ತದಿದಂ ಗೀತಾಶಾಸ್ತ್ರಂ ಸಮಸ್ತವೇದಾರ್ಥಸಾರಸಂಗ್ರಹಭೂತಮ್ ।**
**ಯತಃ ತದರ್ಥವಿಜ್ಞಾನೇ ಸಮಸ್ತಪುರುಷಾರ್ಥಸಿದ್ಧಿಃ । ಅತಃ**
**ತದ್ವಿವರಣೇ ಯತ್ನಃ ಕ್ರಿಯತೇ ಮಯಾ ॥**

---

1 ಶ್ರೀ ಶಂಕರಭಗವತ್ಪಾದರ ಗೀತಾಭಾಷ್ಯ ಭೂಮಿಕೆ

**[1]ಗೇಯಂ ಗೀತಾ ನಾಮಸಹಸ್ರಂ ಧ್ಯೇಯಂ ಶ್ರೀಪತಿರೂಪಮಜಸ್ರಂ ।**

**ಭಗವದ್ಗೀತಾ ಕಿಂಚಿದಧೀತಾ**

**ಗಂಗಾಜಲಲವಕಣಿಕಾ ಪೀತಾ ।**

**ಸಕೃದಪಿ ಯೇನ ಮುರಾರಿಸಮರ್ಚಾ**

**ಕ್ರಿಯತೇ ತಸ್ಯ ಯಮೇನ ನ ಸಂಗಃ ॥**

"ಈ ಗೀತಾಶಾಸ್ತ್ರವು ಎಲ್ಲ ವೇದಾರ್ಥಗಳ ಸಾರಸಂಗ್ರಹ. ಅದರ ಅರ್ಥವನ್ನು ಅರಿತರೆ ಸರ್ವಪುರುಷಾರ್ಥಸಿದ್ಧಿ ಆಗುವುದರಿಂದ ಅದನ್ನು ವಿವರಿಸಲು ಯತ್ನಮಾಡುತ್ತೇವೆ.

ನಿರಂತರವಾದ ಗಾನಕ್ಕೆ ಯೋಗ್ಯವಾದುದು ಗೀತೆ ; ಧ್ಯಾನಕ್ಕೆ ಯೋಗ್ಯವಾದುದು ಶ್ರೀಪತಿಯ ರೂಪ.....

ಭಗವದ್ಗೀತೆಯನ್ನು ಸ್ವಲ್ಪ ಅಧ್ಯಯನಮಾಡಿದರೂ ಸಾಕು ; ಗಂಗಾಜಲದ ಕಣವನ್ನು ಕುಡಿದರೂ ಸಾಕು ; ಮುರಾರಿಯನ್ನು ಒಮ್ಮೆ ಅರ್ಚಿಸಿದರೂ ಸಾಕು–ಅವನಿಗೆ ಯಮನ ಸಂಗ ಇರುವುದಿಲ್ಲ"–ಎಂಬುದು ಆಚಾರ್ಯ ಆದಿಶಂಕರರ ಅಮೃತವಾಣಿ.

"ಲೋಕಕಲ್ಯಾಣಾರ್ಥವಾಗಿ ಅವತರಿಸಿದ ಪರಮಾತ್ಮನು ಅವತಾರ ಮಾಡಿಸಿದ ಜ್ಞಾನಕರ್ಮಾನುಗೃಹೀತವಾದ ಭಕ್ತಿಯೋಗಶಾಸ್ತ್ರ ; ಉಪನಿಷತ್ತಿನ ಅವತಾರ."

[2]**ವೇದಾನ್ತೋದಿತಂ ಸ್ವವಿಷಯಂ ಜ್ಞಾನಕರ್ಮಾನುಗೃಹೀತಂ ಭಕ್ತಿಯೋಗಮವತಾರಯಾಮಾಸ ।** ಎಂದು ಭಗವದ್ರಾಮಾನುಜರು ಇದರ ಅಗ್ಗಳಿಕೆಯನ್ನು ಎತ್ತಿಹೇಳುತ್ತಾರೆ.

"ಎಲ್ಲಾ ಭಾರತಾರ್ಥದ ಸಂಗ್ರಹ, ಭಾರತಪಾರಿಜಾತದ ಮಧು–ಈ ವಾಸುದೇವಾರ್ಜುನಸಂವಾದರೂಪವಾದ ಗೀತೆ."

**[3]ತತ್ರ ಚ ಸರ್ವಭಾರತಾರ್ಥಸಂಗ್ರಹಾಂ ವಾಸುದೇವಾರ್ಜುನ–ಸಂವಾದರೂಪಾಂ ಭಾರತಪಾರಿಜಾತಮಧುಭೂತಾಂ ಗೀತಾಮ್ ॥**

---

1 ಭಜಗೋವಿಂದ ಸ್ತೋತ್ರ

2 ಶ್ರೀ ರಾಮಾನುಜರ ಗೀತಾಭಾಷ್ಯ ಭೂಮಿಕೆ.

3 ಶ್ರೀಮನ್ಮಧ್ವಾಚಾರ್ಯರ ಗೀತಾಭಾಷ್ಯ ಭೂಮಿಕೆ.

ಎಂದು ಶ್ರೀಮದಾನಂದತೀರ್ಥಭಗವತ್ಪಾದರು ಸತ್ಯಸುಂದರವಾದ ರೂಪಕದಿಂದ ಇದರ ಹಿರಿಮೆಯನ್ನು ಹೇಳಿ ಪ್ರಮಾಣಗ್ರಂಥಗಳನ್ನು ಉದಾಹರಿಸುತ್ತಾರೆ.

ತತ್ತ್ವಹಿತಗಳನ್ನು ಯಥಾವತ್ತಾಗಿ ಅನುಶಾಸನಮಾಡುವುದರಿಂದ ಇದು ತಾನೇ ಶಾಸ್ತ್ರ! 'ಗೀತೈವ ತತ್ತ್ವಹಿತಯೋರ್ಯಥಾವಚ್ಛಾಸನಾತ್ ಶಾಸ್ತ್ರಂ' ಎಂದು ಉದ್ಘೋಷಿಸಿ.

**ಅತ್ರೋಪನಿಷದಂ ಪುಣ್ಯಾಂ ಕೃಷ್ಣದ್ವೈಪಾಯನೋಽಬ್ರವೀತ್ ।**
**ಭಾರತೇ ಭಗವದ್ಗೀತಾ ಸರ್ವಶಾಸ್ತ್ರೇಷು ಮಾನವಮ್ ॥**
[1]**ಯಸ್ಮಿನ್ಪ್ರಸಾದಸುಮುಖೇ ಕವಯೋಽಪಿ ಯೇ ತೇ**
**ಶಾಸ್ತ್ರಾಣ್ಯಶಾಸುರಿಹ ತನ್ಮಹಿಮಾಶ್ರಯಾಣಿ ।**
**ಕೃಷ್ಣೇನ ತೇನ ಯದಿಹ ಸ್ವಯಮೇವ ಗೀತಂ**
**ಶಾಸ್ತ್ರಸ್ಯ ತಸ್ಯ ಸದೃಶಂ ಕಿಮಿವಾಸ್ತಿ ಶಾಸ್ತ್ರಮ್ ॥**

"ಯಾವನ ಅನುಗ್ರಹದಿಂದ ಸುಮುಖರಾಗಲು ಪ್ರಸಿದ್ಧರಾದ ಕವಿಗಳೂ ಅವನ ಮಹಿಮೆಯನ್ನು ಕುರಿತ ಶಾಸ್ತ್ರಗಳನ್ನು ಹೇಳಲು ಸಮರ್ಥರಾದರೋ–ಅಂತಹ ಶ್ರೀಕೃಷ್ಣನು ತಾನೇ ಗಾನಮಾಡಿದ ಈ ಶಾಸ್ತ್ರಕ್ಕೆ ಸಾಟಿಯಾದ ಬೇರೊಂದು ಶಾಸ್ತ್ರವುಂಟೇ?" ಎಂದು ಶಾಸ್ತ್ರವಚನಾಭಿಯುಕ್ತವಚನಗಳನ್ನೂ ಮುಂದಿಡುತ್ತಾರೆ. –ಶ್ರೀವೇದಾಂತದೇಶಿಕರು.

"ಆನಂದೈಕರಸಾಯನವಾದ ಈ ಏಳುನೂರು ಶ್ಲೋಕಗಳಿಂದ ನನಗೆ ಉಂಟಾದ ಸಂತೋಷವು ಪ್ರಭುಸೇವೆಯಾದ ಲಂಕಾದಹನರೂಪಮಹಾಕಾರ್ಯದಿಂದಲೂ ನನಗೆ ಉಂಟಾಗಲಿಲ್ಲ" ಎಂದು ಹನುಮದ್‌ಭಾಷ್ಯವು ಪ್ರಾರಂಭದಲ್ಲಿಯೇ ಪ್ರತಿಜ್ಞೆಮಾಡುತ್ತದೆ.

[2]**ಸರ್ವಂ ರಸಂ ಗೂಢರವಿದ್ಧರಾಸಭೋ**
**ನಾಗಾಮರಾವೇಗರವಿಂ ಶಮನ್ತರಾ ।**
**ವೇಲಾಸರಸ್ತೀರಕರಾಜಹಂಸಃ**
**ಶ್ಲೋಕಾಮೃತಂ ಸಪ್ತಶತೇನ ಪೂರಿತಮ್ ॥**

---

1 ಗೀತಾರ್ಥಸಂಗ್ರಹರಕ್ಷಾ. ಶ್ಲೋಕ ೧ 2 ಪೈಶಾಚಭಾಷ್ಯ ಶ್ಲೋ. ೧

ವೇದಸಮುದ್ರದಿಂದ ವಾಸುದೇವನು ಕಡೆದು ತೆಗೆದ ಈ ಗೀತಾ ಮೃತರಸಾಯನವನ್ನು ಸಂತರು ಸದಾ ಪಾನಮಾಡುತ್ತಾರೆ.

**ವೇದೋದಧಿಪ್ರಮಥಿತಂ ವಾಸುದೇವಸಮುದ್ಧೃತಮ್ ।**
**ಸಂತಃ ಪಿಬಂತಿ ಸತತಂ ಗೀತಾಮೃತರಸಾಯನಮ್ ॥**

ಜಲದಲ್ಲಿ ಮನುಷ್ಯರು ದಿನದಿನವೂ ಸ್ನಾನಮಾಡಿ ಮಲವನ್ನು ಕಳೆದು ಕೊಳ್ಳುತ್ತಾರೆ. ಆದರೆ ಗೀತಾಜಲದಲ್ಲಿ ಒಮ್ಮೆ ಸ್ನಾನಮಾಡಿದರೂ ಸಂಸಾರದ ಮಲವು ಕಳೆದುಹೋಗುತ್ತದೆ.

**ಮಲನಿರ್ಮೋಚನಂ ಪುಂಸಾಂ ಜಲಸ್ನಾನಂ ದಿನೇ ದಿನೇ ।**
**ಸಕೃದ್ಗೀತಾಂಭಸಿ ಸ್ನಾನಂ ಸಂಸಾರಮಲಮೋಚನಮ್ ॥**

ಎಂದೂ ಅದರ ಮಹಿಮೆಯನ್ನು ಸಾರುತ್ತದೆ.

ಸಾಂಖ್ಯಯೋಗಭಕ್ತ್ಯಾಶ್ರಯವಾದ ಬ್ರಹ್ಮವಿದ್ಯೋಪದೇಶದಿಂದ ಭಗವಂತನು ಬೋಧಿಸುವ ಅವನ ಸ್ವಾತ್ಮಧರ್ಮ ಇದು–'**ಸಾಂಖ್ಯಯೋಗ ಭಕ್ತ್ಯಾಶ್ರಯಬ್ರಹ್ಮವಿದ್ಯೋಪದೇಶೇನ ಸ್ವಾತ್ಮಧರ್ಮೇ ನಿವೇಶಯನ್**' ಎಂದು ಶ್ರೀವಲ್ಲಭಾಚಾರ್ಯರು ನಿರೂಪಿಸುತ್ತಾರೆ.[1]

"ಸಕಲಜಗತ್ತಿನಲ್ಲಿ ಬಹುಮಧುರವೂ ಪರಮಾರ್ಥದ ಉತ್ಪತ್ತಿಯ ಸ್ಥಾನವೂ ಆಗಿದೆ. ಭಗವದ್ಗೀತಾರೂಪವಾದ ಸುರಸ ಕಥೆ–ಅದ್ವಿತೀಯ ಉತ್ತಮ, ಪಾವಕ, ನಿರುಪಮ, ಮೋಕ್ಷಕ್ಕೆ ತವರು. ಭಾರತವು ಕಮಲವು, ಅದರ ಸುಗಂಧವು ಗೀತಾವಿಷಯ. ವ್ಯಾಸರು ವೇದಸಮುದ್ರವನ್ನು ಬುದ್ಧಿಯ ಕಡೆಗೋಲಿನಿಂದ ಕಡೆದು ತೆಗೆದ ಬೆಣ್ಣೆ ಗೀತಾವಿಷಯ. ಅದಕ್ಕೆ ಜ್ಞಾನರೂಪದ ಬೆಂಕಿಯ ಕಾವು ಕೊಡಲು ವಿಚಾರರೂಪವಾಗಿ ಅದು ಉಕ್ಕೇರಿ ಪದ್ಯರೂಪವಾಗಿ ಬಂದ ಸುವಾಸನೆಯಿಂದ ಕೂಡಿದ ತುಪ್ಪವು ಗೀತಾಶ್ಲೋಕಗಳು. ಬ್ರಹ್ಮನೂ ಶಂಕರನೂ ಸ್ತುತಿಸುವ, ಸನಕಾದಿಗಳು ಸದಾ ಆದರದಿಂದ ಸೇವಿಸುವ ಅಮೃತವಿದು" ಎಂದು ಮಹಾಯೋಗಿ ಸಂತ ಜ್ಞಾನೇಶ್ವರರು ಕವಿಪುಂಗವರಾಗಿ ಇದನ್ನು ಹೃದ್ಯವಾಗಿ ಸ್ತುತಿಸಿದ್ದಾರೆ.

" 'ಗೀತಾ' ಎಂಬುದನ್ನು ಹತ್ತುಬಾರಿ ಉಚ್ಚಾರಮಾಡುತ್ತಿದ್ದರೆ ಬರುವ

---

1 ಶ್ರೀವಲ್ಲಭಾಚಾರ್ಯರ ತತ್ತ್ವದೀಪಿಕಾ

‘ತಾಗೀ’ ಎಂಬ ಪದವು ಗೀತಾರ್ಥವಾದ ಆಂತರಿಕ–ಬಾಹ್ಯತ್ಯಾಗವನ್ನು ಉದ್ಘೋಷಿಸುತ್ತದೆ” ಎಂದು ಪರಮಹಂಸ ಶ್ರೀ ರಾಮಕೃಷ್ಣರ ದಿವ್ಯೋಪ ದೇಶ. “ಗೀತೆಯ ‘ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ’ ಎಂಬ ಒಂದು ಶ್ಲೋಕವನ್ನು ಪಠಿಸಿದರೇ ಇಡೀ ಗೀತೆಯ ಪಾಠದ ಪುಣ್ಯ ದೊರೆಯುತ್ತದೆ. ಏಕೆಂದರೆ ಇದರಲ್ಲಿ ಗೀತೆಯ ಇಡೀ ಸಂದೇಶವೇ ಅಡಕವಾಗಿದೆ”–ಎನ್ನುತ್ತಾರೆ ಸ್ವಾಮೀ ವಿವೇಕಾನಂದರು.

ಗೀತೆಯ ಪರಮಾರ್ಥಾನುಭವದಲ್ಲಿ ಪರಿಪಕ್ವಮನೋಧರ್ಮವುಳ್ಳ ಶ್ರೀರಂಗಮಹಾಗುರುಗಳು ಗೀತಾಮಹಿಮೆಯ ವ್ಯಾಖ್ಯಾನದಲ್ಲಿ–“ಗೀತೆಯ ಒಂದು ಶ್ಲೋಕವನ್ನಾಗಲೀ, ಅದರ ಅರ್ಧವನ್ನಾಗಲೀ, ಪಾದವನ್ನಾಗಲೀ, ಪಾದಾರ್ಧವನ್ನಾಗಲೀ ಭಕ್ತಿಯಿಂದ ಪಠಿಸಿದರೂ ಮೋಕ್ಷವೆಂದು ಜ್ಞಾನಿಗಳು ಹೇಳುತ್ತಾರೆ. ಇದು ಅರ್ಥವಾದವಲ್ಲ ; ಪರಮಾರ್ಥದ ಪ್ರತಿಜ್ಞೆ. ಪಾದಾರ್ಧವೇ ಏಕೆ? ಅದರ ಕೆಲವು ವರ್ಣಗಳೂ ಕೂಡ ಅನುಸಂಧಾನದಿಂದ ಆತ್ಮದರ್ಶನವನ್ನು ಮಾಡಿಸಬಲ್ಲವು. ಆದರೆ ಅವುಗಳಲ್ಲಿ ಯಾವುದನ್ನು ಆರಿಸಿಕೊಳ್ಳಬೇಕು? ಹೇಗೆ ಅನುಸಂಧಾನಮಾಡಬೇಕು? ಎಂಬ ವಿಧಿ, ವಿಧಾನ, ಸಾಧನೆಗಳ ವಿವೇಕ ಇರಬೇಕು” ಎಂದು ಅಪ್ಪಣೆಕೊಡಿಸುತ್ತಾರೆ.[1]

“ ‘ಸರ್ಮನ್ ಆನ್ ದಿ ಮೌಂಟ್’ ಎಂಬ ಉಪದೇಶದಲ್ಲೂ ದೊರ ಕದ ಶಾಂತಿ-ಸಮಾಧಾನ ನನಗೆ ಭಗವದ್ಗೀತೆಯಲ್ಲಿ ದೊರೆಯುತ್ತದೆ.... ಹೊರಗಿನ ಜೀವನದಲ್ಲಿನ ಹೇರಳವಾದ ಯಾವ ದುರ್ಘಟನೆಯೂ ನನ್ನ ಮನಸ್ಸಿನ ಮೇಲೆ ಶಾಶ್ವತವಾದ ಗುರುತು ಮಾಡಿಲ್ಲ. ಇದಕ್ಕೆ ಕಾರಣ ಭಗವದ್ಗೀತೆಯ ಉಪದೇಶಗಳು”–ಎಂದು ಮಹಾತ್ಮಾಗಾಂಧಿಯವರು ತಮ್ಮ ಜೀವನದ ಅನುಭವವನ್ನು ಹೇಳಿಕೊಂಡಿದ್ದಾರೆ.[2]

“ನಮ್ಮ ಧರ್ಮಗ್ರಂಥಗಳಲ್ಲಿ ಅತ್ಯಂತತೇಜಸ್ವಿಯೂ ನಿರ್ಮಲವೂ ಆದ ರತ್ನ” ; “ಪಿಂಡ-ಬ್ರಹ್ಮಾಂಡಜ್ಞಾನಪೂರ್ವಕವಾದ ಆತ್ಮವಿದ್ಯೆಯ ಗೂಢವೂ ಪವಿತ್ರವೂ ಆಗಿರುವ ತತ್ತ್ವಗಳನ್ನು ಸ್ವಲ್ಪದರಲ್ಲಿ ಆದರೆ ಅಸಂದಿಗ್ಧ ರೀತಿಯಲ್ಲಿ...ಶಾಂತವೂ ವಿಶೇಷತಃ ನಿಷ್ಕಾಮವೂ ಆದ ಕರ್ತವ್ಯಾಚರಣೆಯಲ್ಲಿ

---

1 ಅ. ಯೋ. ವಿ. ಮಂ. ವ್ಯಾಖ್ಯಾನಮಾಲಾ.

2 *Young India (1925, P. P. 1078-1079)*

ಪ್ರವರ್ತಿಸುವಂತೆ ಮಾಡುವಂತಹ ಇಷ್ಟು ಸುಬೋಧವಾದ ಗ್ರಂಥವು ಸಂಸ್ಕೃತದಲ್ಲಷ್ಟೇ ಅಲ್ಲ, ಜಗತ್ತಿನೊಳಗಿನ ಮಿಕ್ಕ ಯಾವ ವಾಙ್ಮಯದಲ್ಲೂ ದೊರೆಯುವುದು ದುರ್ಲಭವೇ"–ಎಂದು ಬಾಲಗಂಗಾಧರತಿಲಕರು ಇದಕ್ಕೆ ನಮೋವಾಕ್ಯವನ್ನು ಹೇಳುತ್ತಾರೆ. "ನನ್ನ ಶರೀರವು ತಾಯಿಯ ಹಾಲಿನಿಂದ ಎಷ್ಟು ಬೆಳವಣಿಗೆ ಹೊಂದಿದೆಯೋ ಅದಕ್ಕಿಂತಲೂ ಹೆಚ್ಚಾಗಿ ನನ್ನ ಚೈತನ್ಯವು ಗೀತಾಮಾತೆಯ ಅಮೃತದಿಂದ ಬೆಳೆದಿದೆ"–ಎಂದು ವಿನೋಬಾ ಅವರು ಅಭಿಪ್ರಾಯಪಡುತ್ತಾರೆ.

ಗೀತಾಸಂಪ್ರದಾಯ ಬೆಳೆದ ಭಾರತಭೂಮಿಯಲ್ಲಿ ಮಾತ್ರವಲ್ಲದೇ ಇತರ ದೇಶಗಳಲ್ಲಿಯೂ ಅನೇಕ ವಿಚಾರಶೀಲವಿದ್ವಾಂಸರ ಹೃದಯವನ್ನು ಸೂರೆಗೊಂಡಿದೆ ಈ ಗ್ರಂಥರತ್ನ.

"ನಿತ್ಯಸತ್ಯವಾದ ದರ್ಶನದ ವಿಷಯದಲ್ಲಿ ರಚಿತವಾಗಿರುವ ಅತ್ಯಂತ ಸ್ಪಷ್ಟವೂ ವ್ಯಾಪಕವೂ ಆದ ಸಾರಾಂಶಗಳಲ್ಲಿ ಇದು ಒಂದು. ಆದುದರಿಂದ ಭಾರತೀಯರಿಗೆ ಮಾತ್ರವಲ್ಲದೇ ಇಡೀ ಮಾನವಜನಾಂಗಕ್ಕೇ ಇದು ಶಾಶ್ವತ ಮೂಲ್ಯವುಳ್ಳ ಪದಾರ್ಥ. ಶಾಶ್ವತದರ್ಶನದ ಬಗ್ಗೆ ಅತ್ಯಂತಕ್ರಮಬದ್ಧವಾಗಿರುವ ಆಧ್ಯಾತ್ಮಿಕಕಥನವೇ ಬಹುಶಃ ಈ ಗ್ರಂಥವೆನ್ನಬಹುದು. The Gita is one of the clearest and most comprehensive summaries of the perennial philosophy ever to have been made. Hence its enduring value, not only for Indians, but for all mankind. The Bhagavadgita is perhaps the only systematic spiritual statement of the perennial philosophy" ಎನ್ನುತ್ತಾರೆ ಆಲ್‌ಡಸ್ ಹಕ್ಸ್‌ಲೇ.[2]

ಜರ್ಮನ್ ಧರ್ಮದಲ್ಲಿ ಇದಕ್ಕೆ ಕೇಂದ್ರಸ್ಥಾನ–ಎಂದು ಜೆ.ಡಬ್ಲ್ಯೂ. ಹವರ್ ಅವರು ಅಭಿಪ್ರಾಯಪಡುತ್ತಾರೆ. ಅಮರವಾದ ಪ್ರಾಮುಖ್ಯವುಳ್ಳ

---

1 ಗೀತಾ ರಹಸ್ಯ–ವಿಷಯ ಪ್ರವೇಶ.

2 ಸ್ವಾಮೀಪ್ರಭವಾನಂದ ಮತ್ತು ಕ್ರಿಸ್ಟೋಫರ್ ಈಷರ್‌ವುಡ್‌ರವರ ಗೀತಾ ಭೂಮಿಕೆಯನ್ನು ನೋಡಿ.

ಗ್ರಂಥ–`A work of imperishable significance' ಎಂದು ಇದರ ಬಗ್ಗೆ ಅವರ ಪ್ರಶಸ್ತಿ. "ಪ್ರಪಂಚದ ಇಡೀ ಸಾಹಿತ್ಯದಲ್ಲೇ ಬಹುಶಃ ನಿಜವಾಗಿಯೂ ರಚಿತವಾಗಿರುವ ದಾರ್ಶನಿಕಕಾವ್ಯ" ``The Gita is perhaps the only true philosophical poem which all the literature known to us can show" ಎನ್ನುತ್ತಾರೆ ಹೆಬ್ ಬೋಲ್ಟ್ ಎಂಬ ಭಾಷಾಶಾಸ್ತ್ರಜ್ಞ. "ಈ ಮಹಾದರ್ಶನದಲ್ಲಿ ಅನುದಿನವೂ ನನ್ನ ಬುದ್ಧಿಗೆ ಸ್ನಾನಮಾಡಿಸುತ್ತೇನೆ." ``In the morning I bath my intellect in the stupendous cosmogonal philosophy of the Bhagavadgita" ಎಂದು ಅಮೆರಿಕದ ವಿದ್ವಾಂಸ ಎಮರ್‌ಸನ್ ಅವರು ಇದರ ಬಗ್ಗೆ ತಮ್ಮ ಮೆಚ್ಚುಗೆಯನ್ನು ಹೇಳಿಕೊಳ್ಳುತ್ತಾರೆ.

ಪರಬ್ರಹ್ಮಪುರಿಗೆ ಅಂತರ್ಮಾರ್ಗದಲ್ಲಿ ಪ್ರಯಾಣಬೆಳೆಸಲು ಬಯಸುವ ಎಲ್ಲ ಮತಗಳ ಯಾತ್ರಿಕರ ಆಕಾಂಕ್ಷೆಗಳ ಅಭಿವ್ಯಕ್ತಿ ಈ ಭಗವದ್ಗೀತೆ. ``It gives utterance to the aspirations of the pilgrims of all sects who seek to tread the inner way to the city of God" ಎನ್ನುತ್ತಾರೆ ಸರ್ವಪಲ್ಲಿ ರಾಧಾಕೃಷ್ಣರು....ಇವೇ ಮುಂತಾದ ಮಾತುಗಳ ಮೂಲಕ ತಮ್ಮ ತಮ್ಮ ಮಟ್ಟಕ್ಕೆ ಅನುಗುಣವಾಗಿ ಮನೀಷಿಗಳು ಗೀತಾಮಾತೆಗೆ ತಮ್ಮ ಭಕ್ತಿಯ ಕಾಣಿಕೆಗಳನ್ನು ಅರ್ಪಿಸಿದ್ದಾರೆ. ಆದರೆ ಎಲ್ಲಕ್ಕೂ ಕಲಶಪ್ರಾಯವಾಗಿರುವುದು ಭಗವಂತನೇ ತನ್ನ ಗೀತೆಯ ಬಗ್ಗೆ ಹೇಳಿರುವ ಪ್ರಶಸ್ತಿ ; ಗೀತೆಗೆ ತಾನೇ ಪ್ರತಿಪಾದ್ಯ ವಿಷಯವಾಗಿ,[1] ಅದರ ಉಪದೇಶಕನೂ ಆದ ಉತ್ತಮೋತ್ತಮನಾದ ಭಗವಂತನೇ ಅದನ್ನು ತನ್ನ ಹೃದಯ ; **"ಗೀತಾ ಮೇ ಹೃದಯಂ ಪಾರ್ಥ;" "ಪರಬ್ರಹ್ಮದ ಪದವನ್ನರಿಯಲು ಅಲ್ಲಿ ಹೇಳಿರುವ ಧರ್ಮವು ಪರ್ಯಾಪ್ತ ;" "ಸ ಹಿ ಧರ್ಮಃ ಸುಪರ್ಯಾಪ್ತಃ ಬ್ರಹ್ಮಣಃ ಪದವೇದನೇ"** ಎಂದು ಅವನು ಮಾಡಿರುವ ಕೊಂಡಾಟವು ಅತ್ಯಂತ ಅಮೂಲ್ಯವಾದುದು. **"ಪ್ರಾಯಃ ಪ್ರತ್ಯಯಮಾಧತ್ತೇ ಸ್ವಗುಣೇಷೂತ್ತಮಾದರಃ"**

---

1 ನಾರಾಯಣಃ ಪರಂ ಬ್ರಹ್ಮ ಗೀತಾಶಾಸ್ತ್ರೇ ಸಮೀರಿತಃ । –ಗೀತಾರ್ಥಸಂಗ್ರಹ

ಭಾರತೀಯ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಪ್ರಭಾವ ಬೀರಿರುವ ಗ್ರಂಥ ಭಗವದ್ಗೀತೆ. ದಾರ್ಶನಿಕರೂ, ಕವಿಗಳೂ, ಸಮಾಜಶಾಸ್ತ್ರಜ್ಞರೂ ಎಲ್ಲರೂ ಇದನ್ನು ತಮ್ಮ ದಾರಿದೀಪವೆಂದು ಹಾಡಿ ಹೊಗಳಿದ್ದಾರೆ. ಪ್ರಪಂಚದ ಎಲ್ಲಾ ಸುಸಂಸ್ಕೃತಜನಾಂಗದವರ ಭಾಷೆಗಳಲ್ಲೂ ಭಾಷಾಂತರಗೊಂಡಿರುವ ಜನಪ್ರಿಯವಾದ ಗ್ರಂಥ.

ಭಾರತೀಯರ ದರ್ಶನಮಣಿಮಾಲೆಯಲ್ಲಿ ನಾಯಕಮಣಿಯಾಗಿರುವ ವೇದಾಂತದರ್ಶನಕ್ಕೆ ಪರಮಪ್ರಮಾಣವಾಗಿರುವ ಮೂರು ಗ್ರಂಥಗಳನ್ನು 'ಪ್ರಸ್ಥಾನತ್ರಯ' ಎನ್ನುತ್ತಾರೆ. ಉಪನಿಷತ್ತು, ಬ್ರಹ್ಮಸೂತ್ರ ಮತ್ತು ಭಗವದ್ಗೀತೆ–ಇವೇ ಆ ಪ್ರಸ್ಥಾನತ್ರಯ. ಅವುಗಳಲ್ಲಿ ಮೂರರ ಸಿದ್ಧಾಂತವೂ ಒಂದೇ ಆಗಿದ್ದರೂ ಶೈಲಿ ಬೇರೆ ಬೇರೆ :- ಮೊದಲನೆಯದು ಅನುಭವ ಪ್ರಧಾನ ; ಎರಡನೆಯದು ವಿಚಾರಪ್ರಧಾನ. ಮೂರನೆಯದಾದ ಭಗವದ್ಗೀತೆ ಯಲ್ಲಾದರೋ ಅನುಭವ ಮತ್ತು ವಿಚಾರ ಎರಡೂ ಸಮರಸವಾಗಿ ಹಾಲುಸಕ್ಕರೆಗಳಂತೆ ಸೇರಿಕೊಂಡಿವೆ. ಎಲ್ಲ ಉಪನಿಷತ್ತುಗಳ ಸಾರ ಅದು. ಎಲ್ಲ ಉಪನಿಷತ್ತುಗಳೂ ಆಕಳುಗಳಾದರೆ ಅವುಗಳನ್ನು ಕರೆದವನು ಗೋಪಾಲಬಾಲ ಶ್ರೀಕೃಷ್ಣ ; ಕರುವು ಅರ್ಜುನ ; ಸುಕೃತಿಗಳಾದ ಸುಧಿಗಳು ಅಮೃತದ ರಸವನ್ನು ಆಸ್ವಾದನೆ ಮಾಡುವವರು.

**ಸರ್ವೋಪನಿಷದೋ ಗಾವಃ ದೋಗ್ಧಾ ಗೋಪಾಲನಂದನಃ ।**
**ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥**

ಉಪನಿಷತ್ತುಗಳಲ್ಲಿ ಬ್ರಹ್ಮವಿದ್ಯೆಯೇ ಪ್ರಧಾನವಾಗಿ ಪ್ರತಿಪಾದಿತವಾಗಿದ್ದರೂ ಅವುಗಳಲ್ಲಿ ಕೆಲವು ಕಡೆ ಕರ್ಮಕಾಂಡದ ಭಾಗಗಳೂ ಬೆರಕೆಯಾಗಿವೆ. ಆದರೆ ಗೀತೆಯಲ್ಲಿ ಬ್ರಹ್ಮವಿದ್ಯೆಯೇ ಅಸಂಕೀರ್ಣವಾಗಿ ನಿರೂಪಿತವಾಗಿದೆ. ಉಪನಿಷತ್ತುಗಳಲ್ಲಿ ಕೆಲವು ಸಾಂಖ್ಯವನ್ನೂ, ಕೆಲವು ಯೋಗವನ್ನೂ, ಕೆಲವು ಭಕ್ತಿಯನ್ನೂ ಹೀಗೆ ಬೇರೆ ಬೇರೆ ಮಾರ್ಗಗಳನ್ನು ಹೇಳುತ್ತವೆ. ಆದರೆ ಆ ಎಲ್ಲ ಮಾರ್ಗಗಳನ್ನೂ ಒಂದೇ ಕಡೆ ಇಲ್ಲಿ ನೋಡಿ ಆಸ್ವಾದನೆಮಾಡಬಹುದು. ಉಪನಿಷತ್ತು ಎಷ್ಟರ ಮಟ್ಟಿಗೆ ಪ್ರಮಾಣವೋ ಅಷ್ಟೇ ಮಟ್ಟದಲ್ಲಿ ಇದು

ಪ್ರಮಾಣವಾಗಿ ಅಂಗೀಕೃತವಾಗಿದೆ. ಕೆಲವು ಕಡೆ **'ಸ್ಮೃತಿ'** ಎಂದು ಕರೆಯಲ್ಪಟ್ಟಿದ್ದರೂ ಶ್ರುತಿಯಷ್ಟೇ ಪ್ರಮಾಣವಾಗಿ ಬ್ರಹ್ಮವಿದ್ಯಾಚಾರ್ಯರಿಂದ ಗೌರವಿಸಲ್ಪಟ್ಟಿರುವ ಅಗ್ಗಳಿಕೆ ಇದರದು. **"ಶ್ರೀಮದ್ಭಗವದ್ಗೀತಾಸು ಉಪನಿಷತ್ಸು"** ಎಂದು ಗೀತಾಪಾರಾಯಣಕ್ರಮದ ಸಮಾಪ್ತಿವಾಕ್ಯದಲ್ಲಿ ಸನಾತನಕಾಲದಿಂದಲೂ ಇದನ್ನು ನಾವು ಕಾಣುತ್ತೇವೆ.

'ಅದಕ್ಕೆ ಈ ಗೌರವ ಅನಂತರಕಾಲದಲ್ಲಿ ಬಂದಿತು ; ಮೊದಲು ಇರಲಿಲ್ಲ' ಎಂದು ಕೆಲವರು ಹೇಳುವ ವಾದವು ತಿರುಳಿಲ್ಲದ್ದು. ಏಕೆಂದರೆ : ಅದಕ್ಕೆ ಬಾಹ್ಯಪ್ರಮಾಣವಾಗಲೀ ಆಂತರಿಕಪ್ರಮಾಣವಾಗಲೀ ಯಾವುದೂ ಇಲ್ಲ. 'ಗೀತಾ' ಎಂದು ಶಬ್ದವು ಸ್ತ್ರೀಲಿಂಗದಲ್ಲಿ ಉಪಯೋಗಿಸಲ್ಪಡುತ್ತಿರುವುದೂ ಅದು ಉಪನಿಷತ್ತೆಂದು ಹಿಂದಿನಿಂದಲೂ ಪರಿಗಣಿಸಲ್ಪಡುತ್ತಿದೆಯೆಂಬುದನ್ನು ಸೂಚಿಸುತ್ತದೆ. **"ಉಪನಿಷತ್ಸಮಾಧಿನಾ ಸಿದ್ಧವ್ಯವಹಾರನಿರೂಢೇ ಸ್ತ್ರೀಲಿಂಗನಿರ್ದೇಶಃ"** ಎಂದು ಗೀತಾರ್ಥಸಂಗ್ರಹರಕ್ಷೆಯಲ್ಲಿ ಶ್ರೀ ವೇದಾಂತಾಚಾರ್ಯರು ಇದನ್ನು ಗಮನಿಸಿದ್ದಾರೆ. ಇದು ಉಪನಿಷತ್ತೆಂದು ಶ್ರೀಮನ್ಮಹಾಭಾರತ ಉದ್ಘೋಷಿಸುತ್ತದೆ. **"ಅತ್ರೋಪನಿಷದಂ ಪುಣ್ಯಾಂ ಕೃಷ್ಣದ್ವೈಪಾಯನೋಽಬ್ರವೀತ್"** (ಮ. ಭಾ. ಆ. 127) ಉಪನಿಷತ್ ಪ್ರತಿಪಾದ್ಯನಾದ ಭಗವಂತನೇ ಇದರ ಉಪದೇಶಕ ; ಇದು ಹೇಳುವುದು ಉಪನಿಷತ್ತಿನ ವಿಷಯವಾದ ಬ್ರಹ್ಮವಿದ್ಯೆಯನ್ನು ; ಅದನ್ನೂ ಅಸಂಕೀರ್ಣವಾಗಿ ಹೇಳುತ್ತದೆ ; ಅತಿಹೃದಯಂಗಮವಾಗಿಯೂ ಹೇಳುತ್ತದೆ. ಇತಿಹಾಸಗಳೂ ಇದನ್ನು ಉಪನಿಷತ್ತೆಂದು ಕರೆಯುತ್ತಾ ಬಂದಿವೆ. 'ಗೀತಾ' ಶಬ್ದರೂಪವೂ ಇದಕ್ಕೆ ಪೋಷಣೆನೀಡುತ್ತದೆ. ಇವೆರಡರ ಅನುಭವವೂ ಒಂದೇ ಆಗಿರುವುದನ್ನು ಅನುಭಾವಿಗಳೂ ಹೇಳುತ್ತಾರೆ. ಹೀಗೆ ಇದು ಉಪನಿಷತ್ ಎಂಬುದಕ್ಕೆ ಎಲ್ಲ ಪ್ರಮಾಣಗಳೂ ಇದ್ದು, 'ಇದು ಹಾಗಲ್ಲ' ಎನ್ನುವುದಕ್ಕೆ ಯಾವ ಪ್ರಮಾಣವೂ ಇಲ್ಲವಾದ್ದರಿಂದ, ಇದಕ್ಕೆ ಉಪನಿಷತ್ತೆಂಬ ಗೌರವವು ಮೊದಲು ಇರಲಿಲ್ಲವೆಂಬುದು ಕೇವಲ ಪೂರ್ವಗ್ರಹವುಳ್ಳವರ ವಾದವಾಗುತ್ತದೆ.

## ಗೀತೆಯು ಶಾಸ್ತ್ರವೋ-ಕಾವ್ಯವೋ?

ಹೀಗೆ ಶಾಸ್ತ್ರವೆಂದು ಶ್ರೇಷ್ಠಪ್ರಮಾಣವಾಗಿ ಸಂಭಾವಿಸಲ್ಪಡುತ್ತಿದ್ದರೂ

ಇದು ಉತ್ತಮಕಾವ್ಯವೂ ಆಗಿದೆಯೆಂದು ವಿದ್ವಾಂಸರು ಹೇಳುತ್ತಾರೆ. ಇದರಲ್ಲಿ ಶಾಸ್ತ್ರತ್ವವು ಇರುವುದಕ್ಕಿಂತಲೂ ಕಾವ್ಯತ್ವವೇ ಹೆಚ್ಚು ಎಂದು ಪ್ರತಿ ಪಾದಿಸುವವರೂ ಉಂಟು. ಇದು ಶಾಸ್ತ್ರವೇ ಅಥವಾ ಕಾವ್ಯವೇ ಎಂಬ ವಿಚಾರ ಇಲ್ಲಿ ಉದ್ಭವಿಸುತ್ತದೆ. ಹಾಗಾದರೆ ಶಾಸ್ತ್ರಕ್ಕೂ ಕಾವ್ಯಕ್ಕೂ ವ್ಯತ್ಯಾಸವೇನು? ಎಂದರೆ ಶಾಸ್ತ್ರವು ಪ್ರಭುಸಂಮಿತ ; 'ಹೀಗೆ ಮಾಡು, ಹೀಗೆ ಮಾಡಬೇಡ' ಎಂಬ ಸಾರ್ವಭೌಮನ ಆಜ್ಞೆಯನ್ನು ಅದು ಹೇಳುತ್ತದೆ. ಈ ಬಗ್ಗೆ ನೀತಿಯ ನ್ನಾಗಲೀ ಯುಕ್ತಿಯನ್ನಾಗಲೀ ಅದು ಅನುಸರಿಸಬೇಕಾಗಿಲ್ಲ. ಕಾವ್ಯವಾದರೋ ಕಾಂತಸಂಮಿತ ; ಅದು ನೇರವಾಗಿ ಉಪದೇಶಮಾಡದೇ ಪ್ರೇಯಸಿಯಂತೆ ಮಧುರಭಾವ-ವರ್ತನೆಗಳಿಂದ ಉಪದೇಶಮಾಡುತ್ತದೆ. ಈ ದೃಷ್ಟಿಯಿಂದ ಗೀತೆಯು ಶಾಸ್ತ್ರವೋ-ಕಾವ್ಯವೋ? ಎಂಬ ವಿಚಾರಮಾಡಬೇಕಾಗಿದೆ.

ಇದನ್ನು ಉಪನಿಷತ್ತು, ಶಾಸ್ತ್ರ ಎಂದೇ ಅತಿಪ್ರಾಚೀನಕಾಲದಿಂದಲೂ ಆಚಾರ್ಯರು ಗೌರವಿಸುತ್ತಿದ್ದಾರೆ.

**ವಿಶಿಷ್ಟಪ್ರಯೋಜನಸಂಬಂಧಾಭಿಧೇಯವತ್ ಗೀತಾಶಾಸ್ತ್ರಮ್ ॥**

ಎಂದು ಶ್ರೀಶಂಕರಭಗವತ್ಪಾದರು ಹೇಳುತ್ತಾರೆ. **"ಗೀತಾಶಾಸ್ತ್ರೇ ಸಮೀರಿತಂ"** ಎಂದು ಭಗವದ್ಯಾಮುನಮುನಿಗಳು ಇದನ್ನು ಶಾಸ್ತ್ರವೆಂದು ಕರೆಯುತ್ತಾರೆ. **"ಏಕಂ ಶಾಸ್ತ್ರಂ ದೇವಕೀಪುತ್ರಗೀತಂ"** ಎಂದು ಹನುಮದ್ಭಾಷ್ಯವೂ ಇದನ್ನು ಹೀಗೆಯೇ ಹೇಳುತ್ತದೆ. **"ಭಾರತಂ ಸರ್ವ ಶಾಸ್ತ್ರೇಷು ಭಾರತೇ ಗೀತಿಕಾ ವರಾ"** ಎಂಬ ಪುರಾಣವಚನವನ್ನು ಶ್ರೀಮನ್ಮಧ್ವಾಚಾರ್ಯರೂ ಉದಾಹರಿಸಿದ್ದಾರೆ. ಹೀಗೆ ಎಲ್ಲ ಆಚಾರ್ಯರೂ ಶಾಸ್ತ್ರವೆಂದೇ ಇದನ್ನು ವ್ಯವಹರಿಸಿ ತಮ್ಮ ಭಾಷ್ಯರೂಪವಾದ ಕಾಣಿಕೆಯನ್ನು ಇದಕ್ಕೆ ಅರ್ಪಿಸಿದ್ದಾರೆ. ಶಾಸ್ತ್ರಶಬ್ದದ ವ್ಯುತ್ಪತ್ತಿ–**"ಶಾಸನಾತ್ ತ್ರಾಣನಾಚ್ಚೈವ ಶಾಸ್ತ್ರಮಿತ್ಯಭಿಧೀಯತೇ"** (ಶಾಸನಮಾಡುವುದು ಮತ್ತು ರಕ್ಷಣೆ ಮಾಡುವುದು ಶಾಸ್ತ್ರ ) ಎಂಬುದು. ಸರ್ವೇಶ್ವರನಾದ ಭಗವಂತನ ಶಾಸನವನ್ನು ಅವನ ಉಪದೇಶದಿಂದಲೇ ಇಲ್ಲಿ ಕೇಳುತ್ತೇವೆ. ಇದರ ಅನುಸಂಧಾನದಿಂದ ಜೀವಿಗಳು ಭವಭಯದಿಂದ ರಕ್ಷಿಸಲ್ಪಡುತ್ತಾರೆ. ಆದುದರಿಂದ ಇದು ಶಾಸ್ತ್ರವಲ್ಲದೇ ಇದ್ದರೆ ಇನ್ನಾವುದು ಶಾಸ್ತ್ರ? ಎಂದೂ ಸವಾಲು ಹಾಕಬಹುದು.

**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್ ।**

"ನ ಶ್ರೋಷ್ಯಸಿ ವಿನಂಕ್ಷ್ಯಸಿ" 'ನೀನು ಹೀಗೆ ಮಾಡು. ಈ ಮಾತನ್ನು ಕೇಳದಿದ್ದರೆ ನಾಶವುಂಟಾಗುತ್ತದೆ'–ಎಂದು ನೇರವಾಗಿಯೇ ಆಜ್ಞೆಯನ್ನು ಇಲ್ಲಿ ಕೇಳುತ್ತೇವೆ.

ಇದಕ್ಕೆ ಪ್ರತಿಯಾಗಿ ಗೀತೆಯಲ್ಲಿ ಭಗವಂತನು–' ಓ ಅರ್ಜುನ, ನೀನು ನನಗೆ ಇಷ್ಟನು, ಗೆಳೆಯನು' **"ಇಷ್ಟೋಽಸಿ ಮೇ ಸಖಾ ಚೇತಿ"**–ಎಂದು ಮಿತ್ರನಿಗೆ ಹೇಳುವಂತೆ ಹಿತವನ್ನು ಉಪದೇಶಿಸುತ್ತಾನೆ. **"ವಿಮೃಶ್ಯೈತ ದಶೇಷೇಣ ಯಥೇಚ್ಛಸಿ ತಥಾ ಕುರು"** 'ಇದನ್ನು ಸಂಪೂರ್ಣವಾಗಿ ವಿಮರ್ಶೆಮಾಡಿ ನಿನಗೆ ಇಷ್ಟಬಂದಂತೆ ಮಾಡು'–ಎಂದು ಅರ್ಜುನನಿಗೆ ಸ್ವಾತಂತ್ರ್ಯವನ್ನು ನೀಡುತ್ತಾನೆ. ಶಾಸ್ತ್ರವಾಗಿದ್ದರೆ ಹೀಗೆ ಸ್ವಾತಂತ್ರ್ಯಕ್ಕೆ ಅವಕಾಶ ವಿರುತ್ತಿರಲಿಲ್ಲ. ಗೀತೆ ಎಂಬ ಶಬ್ದವೂ ಕೂಡ 'ಇದು ಹಾಡು–ಕಾವ್ಯ' ಎಂದೇ ಸೂಚಿಸುತ್ತದೆ. ಆರಂಭದ ಅಧ್ಯಾಯದಲ್ಲಿ ಬರುವ ವಿಷಾದ, ಮನಸ್ಸಿನ ಉದ್ವೇಗ, 'ಹೀಗೆ ಮಾಡಲೋ ಹಾಗೆ ಮಾಡಲೋ'–ಎಂಬ ಸಂಘರ್ಷ,' 'ಇಂತಹ ಮಹಾಪುರುಷನಿಗೆ ಹೀಗೆ ದೌರ್ಬಲ್ಯವುಂಟಾಯಿತಲ್ಲ'–ಎಂದು ಭಾವುಕರಿಗೆ ಅರ್ಜುನನಲ್ಲುಂಟಾಗುವ ಕರುಣೆ, ಗೀತೆಯ ಉಪದೇಶವು ಪ್ರಾರಂಭವಾದ ನಾಟಕೀಯ ಸನ್ನಿವೇಶ, ವಿಶ್ವರೂಪದರ್ಶನದ ಅಧ್ಯಾಯದಲ್ಲಿ ಉಕ್ಕಿ ಬರುವ ರಸ–ಇವುಗಳನ್ನು ಅನುಭವಿಸಿದಾಗ ಎಂತಹ ಶ್ರೇಷ್ಠವಾದ ಕಾವ್ಯ ಎಂದೇ ನಮಗೆ ಅನ್ನಿಸುತ್ತದೆ. **"ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಽಪರಾಣಿ" "ಕೂರ್ಮೋಂಗಾನೀವ ಸರ್ವಶಃ" "ಧೂಮೇನಾವ್ರಿಯತೇ ವಹ್ನಿಃ ಯಥಾದರ್ಶೋ ಮಲೇನ ಚ । ಯಥೋಲ್ಬೇನಾವೃತೋ ಗರ್ಭಃ ತಥಾ ತೇನೇದಮಾವೃತಮ್"**–ಇವು ಎಂತಹ ಸುಂದರತಮವಾದ ಉಪಮಾನಗಳು! ಗೀತೆಯ ಭಾಷೆಯಾದರೂ ಎಷ್ಟು ಮಧುರವಾಗಿದೆ, ಪ್ರಸನ್ನವಾಗಿದೆ!–ಹೀಗೆ ಧೋರಣೆ, ರಸಭಾವ, ಶೈಲಿ ಎಲ್ಲದರ ದೃಷ್ಟಿಯಿಂದಲೂ ಇದು ಕಾವ್ಯವೆಂದೇ ಸಹೃದಯರಿಗನ್ನಿಸುತ್ತದೆ–ಎಂದೂ ವಾದಗಳನ್ನು ಮುಂದೆ ಇಡಲಾಗುತ್ತದೆ.

ಆದರೆ ಈ ವಿವಾದಕ್ಕೆ 'ಭಗವದ್ಗೀತಾ'–ಎಂಬ ಅದರ ಪವಿತ್ರವೂ, ಸುಂದರವೂ ಆದ ನಾಮಧೇಯವೇ ಪರಿಹಾರವನ್ನು ಹೇಳುತ್ತದೆ. ಅದು

ಭಗವಂತನದು–ಸರ್ವೇಶ್ವರನದು–ಆಗಿರುವುದರಿಂದ ಶಾಸ್ತ್ರ . ಹಾಡಲ್ಪಡುವ ಸುಂದರವಾದ ಶೈಲಿಯಲ್ಲಿರುವುದರಿಂದ ಗೀತಕಾವ್ಯ. ಪ್ರಾಮಾಣ್ಯದ ವಿಷಯದಲ್ಲಿ ಶಾಸ್ತ್ರಶೈಲಿಯ ವಿಷಯದಲ್ಲಿ ಕಾವ್ಯ. ಶಾಸ್ತ್ರವು ಬುದ್ಧಿಪ್ರಧಾನವಾದುದು. ಕಾವ್ಯವು ಹೃದಯಪ್ರಧಾನವಾದುದು ಎನ್ನುವುದಾದರೆ ಇದರಲ್ಲಿ ಬುದ್ಧಿ-ಹೃದಯ ಎರಡಕ್ಕೂ ಪುಷ್ಕಳವಾಗಿ ಆಹಾರವಿದೆ. ಹಾಗಾದರೆ ಇದು ಶಾಸ್ತ್ರವೂ ಅಲ್ಲ, ಕಾವ್ಯವೂ ಅಲ್ಲ ಎಂದು ಇಬ್ಬರೂ ತಳ್ಳಿಹಾಕುವಂತಿಲ್ಲ. ಇಬ್ಬರೂ ಇದು ನನ್ನ ಸ್ವತ್ತು , ನನ್ನ ಪ್ರಿಯವಾದ ಸ್ವತ್ತು ಎಂದು ಹಿಡಿದುಕೊಳ್ಳಲು ಬರುವ ಅದ್ಭುತವಾದ ಸೌಂದರ್ಯದ ಸಂಪತ್ತು.

ಆದರೆ ಆಳವಾಗಿ ವಿಚಾರಮಾಡಿ ನೋಡಿದರೆ ಉನ್ನತಮಟ್ಟದಲ್ಲಿ ಮನಸ್ಸು, ಬುದ್ಧಿ ಇವು ಬೇರೆ-ಬೇರೆಯಾಗಿ ಉಳಿಯದೇ ಒಂದಾಗಿ ಸೇರಿಕೊಳ್ಳುತ್ತವೆ. "ಕಣ್ಣು ರೂಪಸೌಂದರ್ಯವನ್ನೂ, ಕಿವಿಯು ನಾದ ಮಾಧುರ್ಯವನ್ನೂ ಏಕಕಾಲದಲ್ಲಿ ಮನಸ್ಸಿಗೆ ಒದಗಿಸುತ್ತವೆ. ಬುದ್ಧಿಗೆ ಪ್ರಕಾಶ, ಮನಸ್ಸಿಗೆ ಪ್ರಸಾದ ಬೆರೆತು ನಾವು ಅಂತರಂಗದಲ್ಲಿ ಚಂದ್ರಕಾಂತಿಯನ್ನು ಅನುಭವಿಸಿದಂತಾಗುತ್ತದೆ. ಉನ್ನತಘಟ್ಟದಲ್ಲಿ ಮನಸ್ಸು ಮತ್ತು ಬುದ್ಧಿ ಎರಡೂ ಬೆರೆತು ಒಂದಾಗುತ್ತವೆ, ಆದರ್ಶದಂಪತಿಗಳಂತೆ"[1] ಎಂಬ ಅಭಿಯುಕ್ತರ ವಾಣಿಯನ್ನು ಗಮನಿಸಿದರೆ ಮೇಲೆ ಹೇಳಿದ ವಿವಾದಕ್ಕೆ ಆಸ್ಪದ ಪರಮಾರ್ಥದಲ್ಲಿ ಬರುವುದಿಲ್ಲ. ಆರಂಭದಲ್ಲಿ ಸ್ವಲ್ಪ ಕುಸ್ತಿ, ಕಸರತ್ತು ಆಗಬಹುದು ಅಷ್ಟೇ.

ಮಹರ್ಷಿಗಳ ಸಂಪ್ರದಾಯದಲ್ಲಿ ಕವಿಯು ಜ್ಞಾನಿಯೇ ಆಗಿರಬೇಕು. ಜ್ಞಾನಿ ಎಂಬುದಕ್ಕೆ ಪರ್ಯಾಯವಾಗಿಯೇ ಅದನ್ನು ವೇದಾದಿ ಶಾಸ್ತ್ರಗಳೂ ಬಳಸುತ್ತವೆ. [2]**'ಕೃಣ್ವನ್ ವಿಶ್ವಾನಿ ಕಾವ್ಯಾ'** [3]**'ಕವಿಂ ಪುರಾಣಮನುಶಾಸಿತಾರಂ'** **'ಕವಯೋಽಪ್ಯತ್ರಮೋಹಿತಾಃ'** [4]**'ತೇನೇ ಬ್ರಹ್ಮಹೃದಾಯ ಆದಿಕವಯೇ'** ಮುಂತಾದ ಪ್ರಯೋಗಗಳನ್ನು ಇಲ್ಲಿ ಗಮನಿಸಬಹುದು. ಋಷಿಯಲ್ಲದವನು ಕಾವ್ಯವನ್ನು ಬರೆಯಲಾರ. **"ನಾನೃಷಿಃ ಕುರುತೇ ಕಾವ್ಯಂ"**–ಎಂದು ಶಾಸ್ತ್ರ ಹೇಳುತ್ತದೆ.

ತ್ರಿಗುಣಾತೀತವಾದ ಸತ್ಯಸ್ಥಾನದಲ್ಲಿಯೇ ಶಾಸ್ತ್ರ ಮತ್ತು ಕಾವ್ಯ ಎರಡೂ

---

[1] ಜೀವನ ಧರ್ಮಯೋಗ, ಪುಟ 43, [2]ಋ. [3] ಗೀತಾ [4]ಭಾಗವತ

ಪ್ರಾರಂಭವಾಗುತ್ತವೆ. ಅವೆರಡರ ಧ್ಯೇಯವೂ ಆ ಸತ್ಯದ ಸಾಕ್ಷಾತ್ಕಾರವೇ ಆಗಿದೆ. ಅವುಗಳ ಧಾಟಿ ಮಧ್ಯದಲ್ಲಿ ಬೇರೆ-ಬೇರೆಯಾಗಿರಬಹುದು. ಅಲ್ಲಿಯೂ ಒಂದರ ಕೆಲವು ಅಂಶಗಳು ಮತ್ತೊಂದರಲ್ಲಿ ಕಂಡುಬರಬಹುದು. **'ಯಸ್ಮಿನ್ ಪ್ರಸಾದಸುಮುಖೇ ಕವಯೋಽಪಿ ಯೇ ತೇ ಶಾಸ್ತ್ರಾಣ್ಯಶಾಸುರಿಹ ತನ್ಮಹಿಮಾಶ್ರಯಾಣಿ''**[1] 'ಕವಿಗಳು ಭಗವಂತನ ಅನುಗ್ರಹದಿಂದ ಹೇಳಿದ ಶಾಸ್ತ್ರ'–ಎಂಬ ಆರ್ಯರ ನುಡಿಯು ಈ ಕಲಹ ವನ್ನು ಶಾಂತಗೊಳಿಸಿ ಭಗವದನುಗ್ರಹಕ್ಕೆ, ಸತ್ಯ-ಶಿವ-ಸೌಂದರ್ಯಗಳ ಅನು ಭವಕ್ಕೆ, ಎಡೆಮಾಡಿಕೊಡುತ್ತದೆ. ಪ್ರಾಮಾಣ್ಯದಲ್ಲಿ ಶಾಸ್ತ್ರ ; ಹೃದಯವನ್ನು ಸೂರೆಗೊಳ್ಳುವ ಶೈಲಿಯಿಂದ ಕಾವ್ಯ–ಉಭಯರೀತಿಯಿಂದಲೂ ಸಹೃದ ಯರು ಆಸ್ವಾದಿಸಬೇಕಾದ ರಸಾಯನವು ಈ ಭಗವದ್ಗೀತೆ.

ಹೀಗೆ ಉತ್ತಮೋತ್ತಮವಾದ ಆಧ್ಯಾತ್ಮಶಾಸ್ತ್ರವೆಂದೂ ಸುಂದರವಾದ ಕಾವ್ಯಗುಣಸಂಪೂರ್ಣಗ್ರಂಥವೆಂದೂ ಇದನ್ನು ಆದರಿಸುವಂತೆಯೇ ಇದು ಉತ್ತಮವಾದ ಸಮಾಜಶಾಸ್ತ್ರ, ನೀತಿಶಾಸ್ತ್ರ, ಜೀವನಧರ್ಮಶಾಸ್ತ್ರ–ಎಂಬು ದಾಗಿಯೂ ಇದನ್ನು ಕೆಲವರು ಸಂಭಾವಿಸಿದ್ದಾರೆ. ಎಲ್ಲ ದೇಶ-ಕಾಲಗಳ ಎಲ್ಲ ಜೀವಿಗಳಿಗೆ ಬೇಕಾದ ಸಾರ್ವಭೌಮಧರ್ಮವನ್ನು ಹೇಳುವ ವಿಶ್ವಕೃತಿಯೆಂದು ವಿದ್ವಾಂಸರು ಇದನ್ನು ಗೌರವಿಸಿದ್ದಾರೆ. ಇದೆಲ್ಲಾ ಸಹಜವಾಗಿಯೇ ಇದೆ. ಸರ್ವಾಂಗಸುಂದರವಾದ ಗ್ರಂಥದ ರೂಪ-ಲಾವಣ್ಯಗಳಲ್ಲಿ ಕೆಲವು–ಕೆಲವು ಅಂಶಗಳು ಕೆಲವರಿಗೆ ವಿಶೇಷವಾದ ಆಕರ್ಷಣೆಯನ್ನು ಸಂಸ್ಕಾರಭೇದ, ರುಚಿಭೇದಗಳಿಗೆ ಅನುಗುಣವಾಗಿ ಉಂಟುಮಾಡಿರುವುದೂ ನ್ಯಾಯವೇ. ಹೇಗೂ ಇದು ತಮ್ಮನೆಚ್ಚಿನ ವಸ್ತು–ಎಂದು ಎಲ್ಲ ವಿವೇಕಿಗಳೂ ಸ್ವೀಕರಿಸಿರುವ ಅಮೂಲ್ಯಪದಾರ್ಥ ಭಗವದ್ಗೀತೆ.

ನಮ್ಮ ದೇಶದಲ್ಲಿ ಇದರ ಬಗೆಗೆ ಆರಂಭಕಾಲದಿಂದಲೂ ಎಣೆಯಿಲ್ಲದ ಗೌರವ-ಪ್ರೀತಿ-ವಿಶ್ವಾಸಗಳು ಅರ್ಪಿತವಾಗಿವೆ. ಅವಧೂತಗೀತಾ, ಪಾಂಡವ ಗೀತಾ, ಸೂರ್ಯಗೀತಾ, ದೇವೀಗೀತಾ, ಕಪಿಲಗೀತಾ, ರಾಮಗೀತಾ, ಯಮ

---

[1] ಭಾಗವತ ಶ್ಲೋಕ, [1]ಅಭಿಯುಕ್ತವಚನ, [1]ಗೀತಾರ್ಥಸಂಗ್ರಹರಕ್ಷ ಶ್ಲೋಕ

ಗೀತಾ, ವ್ಯಾಸಗೀತಾ, ಶಿವಗೀತಾ, ಅಷ್ಟಾವಕ್ರಗೀತಾ, ಬ್ರಹ್ಮಗೀತಾ, ಭಿಕ್ಷು ಗೀತಾ ಮುಂತಾಗಿ ಗೀತಾಶಬ್ದಸಹಿತವಾದ ಅನೇಕ ಅಮೂಲ್ಯಗ್ರಂಥಗಳು ಇಲ್ಲಿ ರಚಿತವಾಗಿವೆ. ಆದರೆ ಯಾವ ಉಪಪದವೂ ಇಲ್ಲದೆ 'ಗೀತೆ' ಎಂದೊಡನೆಯೇ ಗ್ರಹಿಕೆಯಲ್ಲಿ ಬರುವ ಗ್ರಂಥ ಭಗವದ್ಗೀತೆಯೇ ಆಗಿದೆ. "**ಗೀತೇತಿ ಭಗವದ್ಗೀತೈವ ಅಭಿಧೀಯತೇ ಮುಖ್ಯಾಮುಖ್ಯಯೋರ್ಮುಖ್ಯೇ ಕಾರ್ಯಸಂಪ್ರತ್ಯಯಃ**" ಎನ್ನುತ್ತದೆ ಶ್ರೀಜಯತೀರ್ಥರ ಪ್ರಮೇಯದೀಪಿಕಾ ಭೂಮಿಕೆ. ಅಧ್ಯಾತ್ಮದರ್ಶನಕ್ಕೆ ಸಂಬಂಧಿಸಿದ ಎಲ್ಲಾ ಭಾಷ್ಯಕಾರರೂ ಇದಕ್ಕೆ ಸೇವೆಸಲ್ಲಿಸಿರುತ್ತಾರೆ. ಭಗವದ್ಗೀತೆಯ ಪ್ರಾಮಾಣ್ಯ ಮತ್ತು ಪ್ರಸಿದ್ಧಿಯನ್ನು ಆಶ್ರಯಿಸಿಯೇ ಮೇಲೆ ಹೇಳಿದ ಇತರ ಗೀತೆಗಳು ಅದರಲ್ಲಿನ ಬೇರೆ-ಬೇರೆ ಯೋಗಗಳಿಗೆ ಪ್ರಾಧಾನ್ಯವನ್ನು ನಿರೂಪಿಸುತ್ತಾ ಅದಕ್ಕೆ ಸಂಭಾವನೆಕೊಡುವಂತೆಯೇ ರಚಿತವಾಗಿವೆ. ಆ ಎಲ್ಲ ಧರ್ಮಗಳನ್ನೂ ಯೋಗಗಳನ್ನೂ ಒಳಗೊಂಡು ಎಲ್ಲಕ್ಕೂ ಆಸರೆಯಾಗಿರುವ ಆಕರಗ್ರಂಥ ಭಗವದ್ಗೀತೆಯೇ ಆಗಿದೆ.

## ವಿರುದ್ಧ ವಿಮರ್ಶೆಗಳು

ಗೀತೆಯ ಶೈಲಿ ಮುಂತಾದುವುಗಳ ಬಗ್ಗೆ ಸಾಂಪ್ರದಾಯಿಕರೂ ಸ್ವತಂತ್ರ ವಿಚಾರಧಾರೆಯ ಮಹನೀಯರೂ ಆಡಿರುವ ಕೆಲವು ಅಭಿನಂದನಾವಾಕ್ಯಗಳನ್ನು ನೋಡಿದೆವು. ಹಾಗೆಯೇ ಅವುಗಳನ್ನು ಅಭಿನಿಂದನೆ ಮಾಡಿರುವವರ ಅಭಿಪ್ರಾಯಗಳನ್ನೂ ಪರಿಶೀಲಿಸಬೇಕು.

'ಗೀತೆಯು ಮನುಷ್ಯಮಾರಣವನ್ನು ಸಮರ್ಥಿಸುವ ಶಾಸ್ತ್ರ. ಮನುಷ್ಯ ಜೀವನವು ಅತಿಪವಿತ್ರವಾದುದು, ಅದನ್ನು ಕಾಪಾಡಬೇಕು-ಎಂದು ಪ್ರತಿಪಾದಿಸುವುದು ಧರ್ಮ. ಆದರೆ ಮನುಷ್ಯರನ್ನು ಸಂಹಾರಮಾಡುವ ಯುದ್ಧವನ್ನು ಪ್ರೋತ್ಸಾಹಿಸುತ್ತದೆ ಗೀತೆ. ಯುದ್ಧವನ್ನು ತಡೆಗಟ್ಟಿ ಶಾಂತಿಯನ್ನು ಸ್ಥಾಪಿಸುವುದು ಧರ್ಮದ ಆಚಾರ್ಯರು ಮಾಡಬೇಕಾದ ಕೆಲಸ. ಆದರೆ ಅದಕ್ಕೆ ವಿರುದ್ಧವಾದ ಸಿದ್ಧಾಂತವನ್ನು ಪ್ರತಿಪಾದನೆ ಮಾಡುತ್ತದೆ ಗೀತೆ. ಯಾರನ್ನೂ ಹಿಂಸೆ ಮಾಡಬಾರದು. ಬಂಧು-ಬಾಂಧವರು, ಮಿತ್ರರು, ಗುರು-ಹಿರಿಯರು ಮತ್ತು ಪೂಜ್ಯರನ್ನು ಸಂಹರಿಸುವುದು ಮತ್ತೂ ಮಹಾಪಾಪ. ಅಂತಹವ

ರನ್ನೂ ಸಂಕೋಚವಿಲ್ಲದೆ ಸಂಹರಿಸೆಂದು ಅರ್ಜುನನಿಗೆ ಬೋಧಿಸುತ್ತದೆ ಗೀತೆ. ಸ್ವಾರ್ಥತ್ಯಾಗ, ಭೂತದಯೆ, ವೈರಾಗ್ಯ–ಇವು ಅಭಿನಂದನೀಯವಾದ ಕೃತಿ ಮತ್ತು ಗುಣಗಳು. ಅವುಗಳಲ್ಲಿ ಪ್ರವೃತ್ತನಾಗಿದ್ದ ಪಾರ್ಥನನ್ನು ಅದಕ್ಕೆ ವಿರುದ್ಧವಾದ ಮಾರ್ಗದಲ್ಲಿ ನಡೆಯುವಂತೆ ಅಪಾರ್ಥದ ಯುಕ್ತಿ-ಸಿದ್ಧಾಂತಗಳನ್ನು ಗೀತೆ ಬೋಧಿಸುತ್ತದೆ. ಅರ್ಜುನನು ಸ್ನೇಹ, ಕಾರುಣ್ಯ, ಅಹಿಂಸೆ, ವೈರಾಗ್ಯ–ಮುಂತಾದ ಆತ್ಮಗುಣಗಳ ತೌರುಮನೆ. 'ಮಹಾನುಭಾವರಾದ ಗುರುಗಳನ್ನು ಕೊಲ್ಲದೆ ಭಿಕ್ಷೆಯನ್ನು ಬೇಡಿ ಜೀವಿಸುವುದಾದರೂ ಸರಿ. ರಾಜ್ಯ-ಕೋಶ-ಭೋಗಜೀವನಗಳಿಂದಾದರೂ ಏನು ಪ್ರಯೋಜನ? ನಾನು ಶಸ್ತ್ರಸಂನ್ಯಾಸ ಮಾಡಿಬಿಡುತ್ತೇನೆ. ಯಾವ ಪ್ರತೀಕಾರವನ್ನೂ ಮಾಡುವುದಿಲ್ಲ. ಹೀಗಿರುವಾಗ ಕೌರವರೇ ಬಂದು ನನ್ನನ್ನು ಕೊಂದರೂ ಅದು ಕ್ಷೇಮವೇ'–ಎನ್ನುತ್ತಾನೆ. ಹೀಗೆ ಸಾವಿರಾರು ಜನರ ಪ್ರಾಣವನ್ನು ಉಳಿಸಲು ತನ್ನ ಸರ್ವಸ್ವವನ್ನೂ, ಜೀವನವನ್ನೂ ಬಲಿಕೊಡಲು ಸಿದ್ಧನಾಗಿರುವ ಅವನು ಎಂತಹ ಉದಾರಿ! ಯುದ್ಧದಿಂದ ಆಗುವ ಅನರ್ಥ, ಅಪಾಯಗಳನ್ನು ಕುರಿತು ಅವನು ಮೊದಲನೆಯ ಅಧ್ಯಾಯದಲ್ಲಿ ಆಡುವ ಮಾತುಗಳು ಅವನ ವಿವೇಕ, ಲೋಕಜ್ಞಾನ, ಶಾಸ್ತ್ರಜ್ಞಾನ ಎಲ್ಲಕ್ಕೂ ದರ್ಪಣದಂತಿವೆ. ಆದುದರಿಂದ ಆತ್ಮಗುಣಸಂಪನ್ನನೂ, ವಿವೇಕಿಯೂ ಆದ ಅವನೇ ತತ್ತ್ವಬೋಧನೆಗೆ ಅಧಿಕಾರಿ. ಯುಕ್ತಿವಾದಗಳಿಂದ ಅವನನ್ನೂ ವಂಚಿಸಿ ಯುದ್ಧಕ್ಕೆ ಅವನನ್ನು ಪ್ರೇರಿಸಿದ ಕೃಷ್ಣನು ಆಚಾರ್ಯನಾಗಲು ಅಧಿಕಾರಿಯೇ ಅಲ್ಲ'–ಎಂದೂ ಅವರು ಹೇಳುತ್ತಾರೆ.

'ಶಾಂತಿ, ಸುವ್ಯವಸ್ಥೆಗಳಿಂದ ಕೂಡಿದ ಸಮಾಜದಲ್ಲಿ ಕ್ರಾಂತಿಯನ್ನು ಕೆರಳಿಸುತ್ತದೆ ಈ ಸಿಡಿಮದ್ದಿನಂತಹ ಶಾಸ್ತ್ರ. ಯುವಜನಾಂಗವನ್ನು ಹಿರಿಯರಿಗೆ ವಿರುದ್ಧವಾಗಿ ದಂಗೆಯೇಳಿಸುತ್ತದೆ. ಕೆಲವರು–'ಎಲ್ಲ ಲೋಕವನ್ನೂ ಕೊಂದರೂ ಅದರಿಂದ ಯಾವ ಪಾಪವೂ ಇಲ್ಲ'–ಎಂದು ಹತ್ಯೆಯ ಸಿದ್ಧಾಂತವನ್ನು ಅದು ಉಪದೇಶಿಸುತ್ತದೆ. ಯಾವುದು ಸಾಧು- ಸಂತರಿಗೆ ಪೂರ್ವಪಕ್ಷವಾಗುತ್ತದೆಯೋ ಅದನ್ನೇ ಸಿದ್ಧಾಂತವೆಂದು ಗೀತೆಯು ಸಾರುತ್ತದೆ. ಇದು ಎಂತಹ ನೀತಿಶಾಸ್ತ್ರ?' ಎಂದು ಅವರ ಆಕ್ಷೇಪ.

'ಗೀತೆಯು ಯಾವ ನಿರ್ದಿಷ್ಟವಾದ ಧರ್ಮಸಿದ್ಧಾಂತವನ್ನೂ ಬೋಧಿಸು

ವುದಿಲ್ಲ. ಒಮ್ಮೆ ಕರ್ಮಯೋಗದ ಪ್ರಶಂಸೆ ; ಒಮ್ಮೆ ಜ್ಞಾನಯೋಗದ ಹಿರಿಮೆ; ಮತ್ತೊಮ್ಮೆ ಭಕ್ತಿಯೇ ಶ್ರೇಷ್ಠತಮವಾದ ಯೋಗವೆಂಬ ಕೊಂಡಾಟ. ಹೀಗೆ ಹೇಳುತ್ತಾ ಗೀತಾಚಾರ್ಯನಿಗೆ ಯಾವುದು ತುಂಬಾ ಅಭಿಮತ, ಯಾವುದನ್ನು ಜನರು ಅನುಸರಿಸಬೇಕು–ಎಂಬುದೇ ತಿಳಿಯುವುದಿಲ್ಲ. ಇದರ ಮೇಲೆ ಬೇರೆ-ಬೇರೆ ಭಾಷ್ಯಕಾರರು ಬರೆದಿರುವ ಭಾಷ್ಯ-ಟೀಕೆಗಳನ್ನು ನೋಡಿದರೂ ವಿಕಲ್ಪವು ಹೆಚ್ಚುತ್ತದೆಯೇ ಹೊರತು ಸಮಸ್ಯೆ ಪರಿಹಾರವಾಗುವುದೇ ಇಲ್ಲ. ಆದುದರಿಂದ ತನ್ನ ಕಾಲದಲ್ಲಿ ಬಳಕೆಯಲ್ಲಿದ್ದ ಬೇರೆ ಬೇರೆ ಸಿದ್ಧಾಂತಗಳನ್ನು ಒಂದುಕಡೆ ಸೇರಿಸಿ ಅವುಗಳಲ್ಲಿ ಅಸಹಜವಾದ ಐಕಮತ್ಯವನ್ನು ತೋರಿಸುವ ವಿಫಲಪ್ರಯತ್ನವನ್ನು ಮಾಡುತ್ತದೆ ಈ ಗ್ರಂಥ'–ಎಂದು ಕೆಲವರ ಆರೋಪಣೆ.

'ಗೀತೆಯಲ್ಲಿ ಆತ್ಮದ ಅಮರತ್ವ, ಸಾಧುವೃತ್ತ–ಸದಾಚಾರ ಮುಂತಾದ ಒಳ್ಳೆಯ ವಿಷಯಗಳ ಬೋಧನೆಯೂ ಇದೆ. ವರ್ಣಧರ್ಮ-ಜಾತಿಧರ್ಮ ಮುಂತಾದ ಸಮಾಜವಿಘಾತಕವಾದ ಧರ್ಮಗಳ ಬೋಧನೆಯೂ ಇದೆ. ಎರಡನ್ನೂ ಪ್ರತ್ಯೇಕವಾಗಿ ಗಮನಿಸಿಕೊಳ್ಳಬೇಕು. ಒಳ್ಳೆಯ ಉತ್ತರಗಳನ್ನೇ ಒಂದು ಉತ್ತರಪತ್ರಿಕೆಯಲ್ಲಿ ನೋಡುತ್ತಿರುವ ಮೌಲ್ಯಮಾಪಕನು ಆವೇಗದಲ್ಲಿ ಅದರಲ್ಲಿರುವ ತಪ್ಪುಗಳನ್ನು ಗಮನಿಸದಿರುವುದು, ಆ ತಪ್ಪುಗಳಿಗೂ ಸರಿಯಾದ ಅಂಕಗಳನ್ನು ಕೊಡುವುದು ಸಂಭವ. ಅಂತಹ ತಪ್ಪನ್ನು ನಾವು ಮಾಡಬಾರದು.

ಲೌಕಿಕವಾಗಿರುವ ವಿಚಾರಗಳನ್ನು ಉಪದೇಶಮಾಡುವುದಕ್ಕೂ ಶಾಂತ ವಾದ ವಾತಾವರಣ ಬೇಕು. ಹೀಗಿರುವಾಗ ಅತೀಂದ್ರಿಯವೂ, ಜೀವನದ ಪರಮಧ್ಯೇಯವೂ, ಪರಮಶಾಂತಿರೂಪವೂ ಆದ ಆಧ್ಯಾತ್ಮವಿದ್ಯೆಯನ್ನು ಉಪದೇಶಿಸಲು ಎಷ್ಟು ಶಾಂತವಾದ ಸನ್ನಿವೇಶ ಬೇಕು? ಅದನ್ನು ಬಿಟ್ಟು ಯುದ್ಧದ ಕೋಲಾಹಲದ ಮಧ್ಯೆ ಅಧ್ಯಾತ್ಮಶಾಸ್ತ್ರದ ಉಪದೇಶವಾಯಿ ತೆನ್ನುವುದು ಎಂತಹ ಅಸ್ವಾಭಾವಿಕವೂ ಅಸಾಧ್ಯವೂ ಆದ ಕಲ್ಪನೆ?'– ಎಂದೂ ಆಪಾದಿಸಲಾಗಿದೆ.

'ಗೀತೆಯ ವಿಷಯಪ್ರತಿಪಾದನೆಯಲ್ಲೂ ಶಾಸ್ತ್ರಕ್ಕೆ ಇರಬೇಕಾದ ವ್ಯವಸ್ಥೆಯಿಲ್ಲ. ಅಧ್ಯಾಯವಿಭಾಗದಲ್ಲಿ ವೈಜ್ಞಾನಿಕತೆ ಇಲ್ಲ. ಜ್ಞಾನಯೋಗದ

ಅಧ್ಯಾಯದಲ್ಲಿ ಕರ್ಮದ ಪ್ರಶಂಸೆ. ಭಕ್ತಿಯೋಗದ ಅಧ್ಯಾಯದಲ್ಲಿ ಜ್ಞಾನದ ಹೊಗಳಿಕೆ—ಹೀಗೆ ವಿಷಯನಿರೂಪಣೆಯಲ್ಲಿ ಕಲಸುಮೇಲೋಗರಮಾಡಿ ವಿಕಲ್ಪವನ್ನುಂಟುಮಾಡುವ ಶೈಲಿ ಇವರದು. ಇಲ್ಲಿ ಉಪದೇಶಿಸುವ ಉಪಾಧ್ಯಾಯನು ಬೋಧಿಸುವ ವಿಷಯವನ್ನು ಸರಿಯಾಗಿ ಅಳವಡಿಸಿಕೊಂಡಿಲ್ಲ.' ಎಂದೂ ಕೆಲವರು ದೋಷವನ್ನು ತೋರಿಸುತ್ತಾರೆ.

'ಗೀತೆಯಲ್ಲಿ ಹೇಳಿರುವ ಪುನರುಕ್ತಿಗಳಿಗಂತೂ ಕೊನೆ—ಮೊದಲೇ ಇಲ್ಲ. ಚರ್ವಿತಚರ್ವಣಮಾಡಿಸುವುದರಲ್ಲೇ ಕಾಲಕಳೆಯುವ ಈ ಪ್ರಬಂಧದಲ್ಲಿ ಹಸನಾದ ಹೊಸ ಅಭಿಪ್ರಾಯಗಳೇ ತುಂಬಾ ಕಡಿಮೆ.'

ಹೀಗೆ ಗೀತಾಶಾಸ್ತ್ರವನ್ನು ತಮ್ಮ ವಿಚಾರಭೂಮಿಯಲ್ಲಿ ಅಟ್ಟಕ್ಕೆ ಹತ್ತಿಸುವವರು, ಹಳ್ಳಕ್ಕೆ ತಳ್ಳುವವರು, ಮಧ್ಯದಲ್ಲಿ ಕೂರಿಸುವವರು ನಾನಾ ಬಗೆಯ ವಿಮರ್ಶಕರುಂಟು. ಇವರಿಗೆಲ್ಲಾ ಕೃತಜ್ಞತೆ ಹೇಳಿ ಗೀತೆಯ ಮೌಲಿಕವಾದ ಪರಿಚಯಕ್ಕೆ ಪ್ರಯತ್ನಿಸಬೇಕಾಗಿದೆ. ಆಕ್ಷೇಪ-ಸಮಾಧಾನಗಳನ್ನೂ ತೆಗೆದುಕೊಳ್ಳಬೇಕಾಗಿದೆ. ಈ ನಿಂದಾ-ಸ್ತುತಿಗಳಿಂದ ವಿಕೃತವಾಗದೆ ತನ್ನ ಸಹಜವಾದ ಬ್ರಾಹ್ಮೀಸ್ಥಿತಿಯಲ್ಲಿ ನೆಲೆಗೊಂಡು, ತನ್ನನ್ನು ಸೇವಿಸುವ ಭಕ್ತರಿಗೆ ಅವರ ಅಧಿಕಾರಕ್ಕನುಗುಣವಾಗಿ ಪರಮಪುರುಷಾರ್ಥಫಲವನ್ನು ಅನುಗ್ರಹಿಸುವ ಗೀತಾದೇವಿಗೆ ನಮಸ್ಕಾರ.

## ಅನುಬಂಧಚತುಷ್ಟಯ

ಶಾಸ್ತ್ರವಿಮರ್ಶೆಮಾಡುವಾಗ ವಿಷಯ, ಪ್ರಯೋಜನ, ಸಂಬಂಧ, ಅಧಿಕಾರಿ—ಇವುಗಳನ್ನು ಪ್ರಾರಂಭದಲ್ಲಿ ವಿವೇಚನೆಮಾಡುವುದು ನಮ್ಮ ಪದ್ಧತಿಗೆ ಅನುಗುಣವಾಗಿದೆ. ಇವುಗಳಿಗೆ ಅನುಬಂಧಚತುಷ್ಟಯ—ಎಂದು ಹೆಸರು.

ವಿಚಾರಕ್ಕೆ ವಿಷಯವಾಗಿರುವುದು ಗೀತಾಶಾಸ್ತ್ರವು ನಿರೂಪಿಸುವ ವಿಷಯ. ಇದು ಪ್ರಧಾನವಾಗಿ ಆಧ್ಯಾತ್ಮವಿಷಯ ; ಬ್ರಹ್ಮವಿದ್ಯೆ. ಉಪನಿಷತ್ತುಗಳು ಯಾವುದನ್ನು ಪರಾವಿದ್ಯಾ—ಎಂದು ಕರೆಯುತ್ತವೆಯೋ ಅದು. **ಚತುಷ್ಷಷ್ಟಿತಮೀ ಬ್ರಹ್ಮವಿದ್ಯಾತ್ವಮೃತದಾಯಿನೀ** (ಅರುವತ್ತನಾಲ್ಕನೆಯದಾದ ಬ್ರಹ್ಮವಿದ್ಯೆಯಾದರೋ ಅಮೃತತ್ವವನ್ನು ಕೊಡುವುದು) ಎಂದು ಹೇಳಲ್ಪಟ್ಟಿರುವ ಅಕ್ಷರ ಅಮೃತವನ್ನು ದಯಪಾಲಿಸುವ ವಿದ್ಯೆ. "**ಅಧ್ಯಾತ್ಮವಿದ್ಯಾ ವಿದ್ಯಾನಾಂ**" ಎಂದು ಇಲ್ಲಿಯೂ ಅದನ್ನು ಅನ್ವರ್ಥ

ವಾಗಿ ಹೊಗಳಲಾಗಿದೆ. ಅದಕ್ಕಾಗಿ ಸ್ಪಷ್ಟವಾಗಿ ಜ್ಞಾತೃ-ಜ್ಞಾನ-ಜ್ಞೇಯಗಳ ಸ್ವರೂಪವನ್ನು ತಿಳಿಸುತ್ತದೆ. ಪ್ರಕೃತಿಯ ಸ್ವರೂಪವನ್ನು ತಿಳಿಸುತ್ತದೆ. ಹದಿನೆಂಟು ಅಧ್ಯಾಯಗಳಲ್ಲಿಯೂ ಮೊದಲನೆಯ ಷಟ್ಕದಲ್ಲಿ ಜೀವಸ್ವರೂಪವನ್ನೂ, ಎರಡನೆಯ ಷಟ್ಕದಲ್ಲಿ ಬ್ರಹ್ಮಸ್ವರೂಪವನ್ನೂ, ಕೊನೆಯ ಷಟ್ಕದಲ್ಲಿ ಜೀವ-ಪರಮಾತ್ಮಸಂಬಂಧವನ್ನೂ ಹೇಳುತ್ತದೆ–ಎಂದು ಸಂಪ್ರದಾಯವು ಹೇಳುತ್ತದೆ. ಈ ವಿಭಾಗವು ಕಟ್ಟುನಿಟ್ಟಾಗಿ ನಿಖರವಾಗಿಲ್ಲವಾದರೂ ಸಾಮಾನ್ಯವಾಗಿ ಸರಿ–ಎನ್ನಬಹುದು. ಈ ಬ್ರಹ್ಮವಿದ್ಯೆಯನ್ನು ಪಡೆಯಲು ಬೇಕಾದ ಅನುಷ್ಠಾನವನ್ನೂ ಅದು ಹೇಳುತ್ತದೆ. ಆದುದರಿಂದ "ಬ್ರಹ್ಮವಿದ್ಯಾಯಾಂ" ಎನ್ನುವುದರ ಜೊತೆಗೆ "ಯೋಗಶಾಸ್ತ್ರೇ" ಎಂದೂ ಅದನ್ನು ಹೇಳುತ್ತದೆ, ಪಾರಾಯಣದ ಸಮಾಪ್ತಿವಾಕ್ಯ. ಆ ಜ್ಞಾನವನ್ನೂ ಮತ್ತು ಯೋಗದ ಅನುಷ್ಠಾನದ ಪರಿಚಯವನ್ನು ಪಡೆಯುವ ಸಾಧನವನ್ನೂ ಅದು ಸ್ಪಷ್ಟವಾಗಿ ತಿಳಿಸುತ್ತದೆ. **ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ । ಉಪದೇಕ್ಷ್ಯನ್ತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥** (ಪ್ರಣಾಮಮಾಡಿ, ಔಚಿತ್ಯದಿಂದ ಚೆನ್ನಾಗಿ ಪ್ರಶ್ನೆಮಾಡಿ, ಶುಶ್ರೂಷೆಮಾಡಿ, ಅದನ್ನು ತಿಳಿ. ತತ್ತ್ವವನ್ನು ಕಂಡ ಜ್ಞಾನಿಗಳು ನಿನಗೆ ಜ್ಞಾನವನ್ನು ಉಪದೇಶಿಸುತ್ತಾರೆ.) ಬಗೆ-ಬಗೆಯ ಯೋಗಗಳನ್ನೂ ಆತ್ಮಗುಣವೇ ಮುಂತಾದ ಸಾಧನಸಂಪತ್ತಿಯನ್ನೂ ಅದು ಹೇಳುತ್ತದೆ. ಅಧ್ಯಾತ್ಮವನ್ನು ಕೇಂದ್ರವನ್ನಾಗಿ ಉಳ್ಳ ಶುದ್ಧವಾದ ಜೀವನ ವಿಧಾನವನ್ನೂ ಅದು ತಿಳಿಸುತ್ತದೆ. ಸತ್ಯಸಾಕ್ಷಾತ್ಕಾರಕ್ಕೆ ಬೇಕಾದ ಧರ್ಮವನ್ನೂ ಬೋಧಿಸುತ್ತದೆ. ಆತ್ಮನೀತಿಗನುಗುಣವಾದ ಲೋಕನೀತಿಯನ್ನೂ ಹೇಳುತ್ತದೆ. ಸಮಾಜದೊಳಗಿರುವ ಬಾಳ್ವೆ, ಸಮಾಜವನ್ನು ಮೀರಿರುವ ಬಾಳ್ವೆ–ಎರಡನ್ನೂ ಬೋಧಿಸುತ್ತದೆ. ಧರ್ಮಕ್ಕೆ ವಿರೋಧವಿಲ್ಲದ ಕಾಮ, ಅದಕ್ಕೆ ಬೇಕಾದ ಅರ್ಥಸಂಪತ್ತು, ಯೋಗಕ್ಷೇಮ–ಇವುಗಳನ್ನೂ ತಿಳಿಸುತ್ತದೆ.[1] ಆತ್ಮಸಂಗ್ರಹ-ಲೋಕಸಂಗ್ರಹ ಎರಡನ್ನೂ ಅವಿರೋಧವಾಗಿ ನಿರೂಪಿಸುತ್ತದೆ. ರಾಷ್ಟ್ರಕ್ಷೇಮಕ್ಕೆ ಬೇಕಾದ ಬ್ರಹ್ಮ-ಕ್ಷತ್ರಗಳ ಸಮನ್ವಯ

1 'ಧರ್ಮಾವಿರುದ್ಧೋ ಭೂತೇಷು ಕಾಮೋऽಸ್ಮಿ ಭರತರ್ಷಭ'

' ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ'

' ನಿರ್ಯೋಗಕ್ಷೇಮ ಆತ್ಮವಾನ್'

ವನ್ನೂ ಉಪದೇಶಿಸುತ್ತದೆ. ಆದುದರಿಂದ ಈ ಅಧ್ಯಾತ್ಮಶಾಸ್ತ್ರವನ್ನು 'ಜೀವನಧರ್ಮಶಾಸ್ತ್ರ' 'ನೀತಿಶಾಸ್ತ್ರ', 'ಸಮಾಜಶಾಸ್ತ್ರ' ಎಂದು ಕರೆಯುವುದೂ ಅಂಶತಃ ಸರಿಯೇ ಆಗಿದೆ.

ಈ ಶಾಸ್ತ್ರದ ತಿಳಿವಳಿಕೆಯಿಂದ ಆಗುವ ಪ್ರಯೋಜನವೇನು? ಎಂದರೆ ಪರಮಪುರುಷಾರ್ಥಪ್ರಾಪ್ತಿ. ಅದು ತನ್ನ ಸತ್ಯ-ಸೌಂದರ್ಯ-ಸಾಮರ್ಥ್ಯ ಗಳಿಂದ ಪ್ರತಿಪಾದಿಸುವ ವಿಷಯವು ಜೀವನದ ಮಹಾಮೌಲ್ಯಗಳಾಗಿರುವುದ ರಿಂದ ಅವುಗಳ ಲಾಭಕ್ಕೆ ಗೀತೆಯು ಶ್ರೇಷ್ಠಸಾಧನವೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಶಾಂತಿಸಮೃದ್ಧಿ-ಅಮೃತ-ಆನಂದ-ಅಭಯ-ಚೈತನ್ಯ ಸ್ವರೂಪಪ್ರಾಪ್ತಿಯೆಂಬ ಮಹಾಪುರುಷಾರ್ಥವನ್ನು ಬಯಸುವವರಿಗೆ ಅದು ದಿವ್ಯಕೋಶ. ಆಧ್ಯಾತ್ಮಿಕ-ಆಧಿದೈವಿಕ-ಆಧಿಭೌತಿಕಗಳೆಂಬ ಮುಬ್ಬಗೆಯ ತಾಪಗಳನ್ನು ಕಳೆಯುವ ದಿವ್ಯೌಷಧಕೋಶ. ಅದಕ್ಕೆ ಅವಿರೋಧವಾಗಿ ಧರ್ಮಾರ್ಥಕಾಮಗಳನ್ನು ಬಯಸುವವರಿಗೂ ಅದು ದಾರಿದೀಪವಾಗಿದೆ. ನಿವೃತ್ತಿ ಮತ್ತು ಪ್ರವೃತ್ತಿ ಎರಡರ ತಿಳಿವಳಿಕೆಯನ್ನೂ ಪಡೆದು ಅಧಿಕಾರ, ದೇಶ, ಕಾಲಗಳಿಗೆ ಅನುಗುಣವಾಗಿ ಎರಡನ್ನೂ ಬಳಸಿಕೊಳ್ಳುವ ವಿಧಿಯನ್ನು ಬೆಳಗಿಸುವ ದೀಪವಾಗಿದೆ.

ಆತ್ಮ ಮತ್ತು ಲೋಕಜೀವನದ ಸಮಸ್ಯೆಗಳಿಗೂ ಪರಿಹಾರನೀಡುವ ಕಲ್ಪಕೋಶವಾಗಿದೆ. ಈ ಬಗೆಗೆ ಜ್ಞಾನಿಗಳೂ, ಸಾಧು-ಸಂತರೂ, ಲೌಕಿಕರೂ ತಾವು ಪಡೆದಿರುವ ಲಾಭವನ್ನು ಅನುಭವಪೂರ್ವಕವಾಗಿ ಹೇಳಿರುವುದಕ್ಕೆ ದಾಖಲೆಗಳಿವೆ.

ಗೀತೆಗೆ ಅಧಿಕಾರಿ ಯಾರು? ಬ್ರಹ್ಮಾಪರೋಕ್ಷಜ್ಞಾನವನ್ನು ಪಡೆದು, ಜ್ಞಾನ-ವಿಜ್ಞಾನತೃಪ್ತಾತ್ಮನಾಗಿ ಆತ್ಮಲೋಕಗಳ ಸ್ವಭಾವವನ್ನರಿತವನೂ, ಶಾಸ್ತ್ರಜ್ಞನೂ, ಶಿಷ್ಯನ ಪ್ರಕೃತಿಯನ್ನರಿತು ಬೋಧಿಸುವ ಕಲೆಯಲ್ಲಿ ನಿಷ್ಣಾತನಾಗಿರುವವನೂ ಆದ ಆಚಾರ್ಯನು ಗೀತೆಯನ್ನು ಬೋಧಿಸಲು ಅಧಿಕಾರಿ.

ಸಿದ್ಧಂ ಸತ್ಸಂಪ್ರದಾಯೇ ಸ್ಥಿರಧಿಯಮನಘಂ
ಶ್ರೋತ್ರಿಯಂ ಬ್ರಹ್ಮನಿಷ್ಠಂ

**ಸತ್ತ್ವಸ್ಥಂ ಸತ್ಯವಾಚಂ ಸಮಯನಿಯತಯಾ**
**ಸಾಧುವೃತ್ತ್ಯಾ ಸಮೇತಮ್ ।**
**ದಂಭಾಸೂಯಾದಿಮುಕ್ತಂ ಜಿತವಿಷಯಗಣಂ**
**ದೀರ್ಘಬಂಧುಂ ದಯಾಳುಂ**
**ಸ್ಖಾಲಿತ್ಯೇ ಶಾಸಿತಾರಂ ಸ್ವಪರಹಿತಪರಂ**
**ದೇಶಿಕಂ ಭೂಷ್ಣುರೀಪ್ಸೇತ್ ॥**[1]

**'ಶ್ರೋತ್ರಿಯೋಽವೃಜಿನೋಽಕಾಮಹತೋ ಯೋ ಬ್ರಹ್ಮವಿತ್ತಮಃ ।'**
**'ಬ್ರಹ್ಮಣ್ಯುಪರತಃ ಶಾನ್ತಃ ನಿರಿಂಧನ ಇವಾನಲಃ ।'**
**'ಬಂಧಮುಕ್ತಂ ಬ್ರಹ್ಮನಿಷ್ಠಂ ಕೃತಕೃತಂ ಭಜೇದ್ಗುರುಮ್ ।**[2]
**ಉಪದೇಕ್ಷ್ಯನ್ತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥**[3]

ತಾನೂ ಶೋಕ-ಮೋಹಗಳನ್ನು ದಾಟಿ, ವೀತಶಂಕನಾಗಿ, ಶಿಷ್ಯನ ಶಂಕಾಪನೋದನಮಾಡಿ ಶೋಕ-ಮೋಹಗಳಿಂದ ದಾಟಿಸುವ ಸಾಮರ್ಥ್ಯವುಳ್ಳವನಾಗಿರಬೇಕು–ಅವನು.

ಗೀತೆಯನ್ನು ಅಧ್ಯಯನಮಾಡುವ ಅಧಿಕಾರಿ ಯಾರು? ಎಂದರೆ ; ಯಾವನಿಗೆ ಅದರಲ್ಲಿ ಆಸಕ್ತಿ ಇದೆಯೋ ಅವನು ಅಧಿಕಾರಿ–ಎಂಬುದು ಸಾಧಾರಣರ ಮಾತು. ಆದರೆ ಅವನು ಶುದ್ಧನಾಗಿರಬೇಕು. ಸಂಸ್ಕೃತನಾಗಿರಬೇಕು. ಶ್ರದ್ಧಾಳುವಾಗಿರಬೇಕು. ನಿತ್ಯಾನಿತ್ಯವಿವೇಕ, ಐಹಿಕ-ಆಮುಷ್ಮಿಕಫಲಗಳಲ್ಲಿ ವೈರಾಗ್ಯ, [4]ಶಮ-ದಮಾದಿ ಸಾಧನಸಂಪತ್ತು–ಇವುಗಳಿಂದ ಕೂಡಿರಬೇಕು. ಮೇಧಾವಿಯಾಗಿ ಶಾಸ್ತ್ರಜ್ಞನಾಗಿ ಊಹಾಪೋಹವಿಚಕ್ಷಣನೂ ಆಗಿದ್ದರೆ ಒಳ್ಳೆಯದೇ. ಆದರೆ ಹಾಗಿಲ್ಲದಿದ್ದರೂ ಶ್ರದ್ಧೆ, ಭಕ್ತಿ, ಸಂಶುದ್ಧಿ ಅವನಲ್ಲಿದ್ದರೆ ಅವನು ಗೀತೆಗೆ ಅಧಿಕಾರಿಯಾಗಬಲ್ಲನೆಂದು ನಾವು ಭಾವಿಸುತ್ತೇವೆ. ಈ ಸಂದರ್ಭದಲ್ಲಿ ಮಹಾತ್ಮಾ ಕೃಷ್ಣಚೈತನ್ಯರ ಜೀವನದಲ್ಲಿ ಚಿತ್ರಿತವಾಗಿರುವ ಒಂದು ಘಟನೆಯನ್ನು ನೆನೆಯಬಹುದು. ಒಮ್ಮೆ ಅವರು ಪೂರಿಯ ದೇವಾಲಯಕ್ಕೆ ಹೋಗಿದ್ದಾಗ ಅಲ್ಲಿ ಸಂಸ್ಕೃತದ ಅಕ್ಷರಜ್ಞಾನವೂ ಇಲ್ಲದ ವೃದ್ಧ

---

1 ವೇದಾನ್ತಾಚಾರ್ಯರು    2 ಶಂಕರರು    3 ಗೀತೆ
4 ಶಮ, ದಮ, ಉಪರತಿ, ತಿತಿಕ್ಷೆ, ಶ್ರದ್ಧಾ, ಸಮಾಧಾನ, ಮುಮುಕ್ಷುತ್ವ

ನೊಬ್ಬ ಗೀತೆಯನ್ನು ಓದುತ್ತಿದ್ದುದನ್ನು ಅವರು ಕಂಡರು. ಹೆಜ್ಜೆ-ಹೆಜ್ಜೆಯಲ್ಲೂ ತಪ್ಪುಪಾಠವನ್ನು ಓದುತ್ತಿದ್ದ ಅವನನ್ನು ಅಲ್ಲಿಗೆ ಬಂದವರೆಲ್ಲಾ ಹಾಸ್ಯಮಾಡುತ್ತಿದ್ದರು. ಚೈತನ್ಯರು ಆತನ ಬಳಿಗೆ ಹೋಗಿ–"ತಾತಯ್ಯ! ಓದುತ್ತಿರುವ ಶ್ಲೋಕ ನಿಮಗೆ ಅರ್ಥವಾಗುತ್ತದೆಯೇ?"-ಎಂದು ಕೇಳಿದರು. ಅದಕ್ಕೆ ವೃದ್ಧನು–"ಮಹಾತ್ಮರೇ! ನನಗೆ ಅರ್ಥವಾಗುತ್ತಿದೆಯೋ ಇಲ್ಲವೋ ನಾನು ಹೇಳಲಾರೆ. ಆದರೆ ಅದನ್ನು ಓದುತ್ತಿರುವಾಗ ಜ್ಞಾನಮುದ್ರಾಂಕಿತನಾಗಿ ಅರ್ಜುನನಿಗೆ ಉಪದೇಶಮಾಡುತ್ತಿರುವ ಶ್ರೀಕೃಷ್ಣನ ಮೂರ್ತಿಯು ದರ್ಶನ ಕೊಡುತ್ತಾ ನನ್ನನ್ನು ಪರಮಾನಂದದಲ್ಲಿ ಮುಳುಗಿಸುತ್ತಿದೆ. ಆದರಿಂದ ಪಾರಾಯಣಮಾಡುತ್ತಿದ್ದೇನೆ" ಎಂದನಂತೆ. ಚೈತನ್ಯರು ಪ್ರೀತಿಯಿಂದ ಅವನನ್ನಾಲಿಂಗಿಸಿ–"ಗೀತೆಯ ಪಾಠಕ್ಕೆ ನೀನು ಉತ್ತಮಾಧಿಕಾರಿ"–ಎಂದು ಮೈದಡವಿದರಂತೆ. ಗೀತೆಯ ಅಧ್ಯಯನಮಾಡಲು ಇರಬೇಕಾದ ಮುಖ್ಯ ವಾದ ಲಕ್ಷಣವನ್ನು ಈ ಘಟನೆ ಪ್ರಭಾವಪೂರ್ಣವಾಗಿ ಚಿತ್ರಿಸುತ್ತದೆ.

ಗೀತೆಯು ಪರತತ್ತ್ವವನ್ನು ಈಶ್ವರ, ಪರಮಾತ್ಮಾ, ಪರಮಪುರುಷ, ಉಪದ್ರಷ್ಟಾ, ಅನುಮನ್ತಾ, ಭರ್ತಾ, ಭೋಕ್ತಾ, ಮಹೇಶ್ವರ, ಬ್ರಹ್ಮ, ಪುರುಷೋತ್ತಮ, ವಾಸುದೇವ ಮುಂತಾದ ಶಬ್ದಗಳಿಂದ ಕರೆಯುತ್ತದೆ. **"ಪರಮಾರ್ಥತತ್ತ್ವಂ ಚ ವಾಸುದೇವಾಖ್ಯಂ"**[1] **"ನಾರಾಯಣಃ ಪರಂ ಬ್ರಹ್ಮ ಗೀತಾಶಾಸ್ತ್ರೇ ಸಮೀರಿತಃ"**[2]

ಗೀತೆಗೆ ಮುಖ್ಯವಾದ ಮತ್ತು ಸಾಧಾರಣವಾದ ಪ್ರಯೋಜನಗಳನ್ನು ಹೇಳಿಯಾಗಿದೆ. ಅದಕ್ಕೆ ಸಾಧನವಾಗಿದೆ ಗೀತಾಶಾಸ್ತ್ರ. ಆದುದರಿಂದ ಇವೆರ ಡಕ್ಕೂ ಇರುವ ಸಂಬಂಧಕ್ಕೆ ಸಾಧ್ಯ–ಸಾಧನಭಾವ ಎನ್ನುತ್ತಾರೆ ಶಾಸ್ತ್ರಪರಿ ಭಾಷೆಯಲ್ಲಿ. **"ಇಮಂ ದ್ವಿಪ್ರಕಾರಕಂ ಧರ್ಮಂ ನಿಃಶ್ರೇಯಸಪ್ರಯೋಜನಂ, ಪರಮಾರ್ಥತತ್ತ್ವಂ ಚ ವಾಸುದೇವಾಖ್ಯಂ ಪರಬ್ರಹ್ಮಾಭಿಧೇಯಭೂತಂ ವಿಶೇಷತಃ ಅಭಿವ್ಯಂಜಯತ್ ವಿಶಿಷ್ಟಪ್ರಯೋಜನ ಸಂಬಂಧಾಭಿಧೇಯವತ್ ಗೀತಾಶಾಸ್ತ್ರಂ"**–ಎಂಬ ಆಚಾರ್ಯಶಂಕರರ ಭಾಷ್ಯವಚನವು ಈ ಅಧಿಕಾರಿ-ಸಂಬಂಧ-ವಿಷಯ-ಪ್ರಯೋಜನಗಳನ್ನು ನಿಖರವಾಗಿ ಸಂಗ್ರಹಿಸುತ್ತದೆ.

---

1 ಶಂ. ಭಾ. 2 ಗೀತಾರ್ಥಸಂಗ್ರಹ

## 4. ಗೀತಾಶಾಸ್ತ್ರದ ಅವತಾರ

ಕುರುಕ್ಷೇತ್ರದ ರಣಾಂಗಣದಲ್ಲಿ ಪಾಂಡವ-ಕೌರವಸೈನ್ಯಗಳು ನಿರ್ಣಾಯಕವಾದ ಯುದ್ಧಕ್ಕಾಗಿ ವ್ಯೂಹರಚಿಸಿಕೊಂಡು ಸಿದ್ಧವಾಗಿದ್ದ ಸನ್ನಿವೇಶ. ಪಾಂಡವಪಕ್ಷದ ಅತಿರಥಮಹಾನಾಯಕನಾದ ಪಾರ್ಥನ ಅಪ್ಪಣೆಯಂತೆ ಸಾರಥಿಯಾದ ಶ್ರೀಕೃಷ್ಣ ಅವನ ರಥವನ್ನು ಎರಡೂ ಸೇನೆಗಳ ಮಧ್ಯದಲ್ಲಿ ತಂದು ನಿಲ್ಲಿಸಿದಾಗ, ತನ್ನ ವಿರೋಧಪಕ್ಷದಲ್ಲಿ ತನ್ನ ಆಚಾರ್ಯರು, ಪಿತಾಮಹರು, ಗುರು-ಹಿರಿಯರು, ಸೋದರರು, ಬಂಧು-ಮಿತ್ರರು ನೆರೆದಿರುವುದನ್ನು ಕಂಡೊಡನೆಯೇ ಅರ್ಜುನ–'ಇವರನ್ನೆಲ್ಲಾ ಕೊಲ್ಲಬೇಕಾಗುತ್ತದೆಯಲ್ಲಾ' ಎಂದು ಸ್ನೇಹ-ಕಾರುಣ್ಯಗಳಿಂದ ಶೋಕಪರವಶನಾಗುತ್ತಾನೆ. ಅವನ ಮನಸ್ಸು ಕುಸಿದು, ಶಸ್ತ್ರಸಂನ್ಯಾಸವನ್ನೇ ಮಾಡಿಬಿಡುವುದಾಗಿ ಹೇಳುತ್ತಾನೆ. ಅದಕ್ಕೆ ಪೋಷಕವಾಗಿ ಪ್ರಜ್ಞಾವಾದದ ಭಾಷಣವನ್ನೂ ಮಾಡುತ್ತಾನೆ. ಕೊನೆಗೆ ಯಾವುದು ಒಳ್ಳೆಯದು-ಯಾವುದು ಕೆಟ್ಟದ್ದು ಎಂದು ತಿಳಿಯದೇ, ತಿಳಿವಳಿಕೆ ನೀಡಬೇಕೆಂದು ಶ್ರೀಕೃಷ್ಣನಲ್ಲಿ ಮೊರೆಯಿಡುತ್ತಾನೆ. ಆಗ ಪ್ರಾರಂಭವಾಗುತ್ತದೆ ಶ್ರೀಕೃಷ್ಣನ ದಿವ್ಯೋಪದೇಶ. ಯುದ್ಧದ ರಥವು ಧ್ಯಾನದ ದೇಗುಲವಾಗುತ್ತದೆ. ಪ್ರಭುವು ಪ್ರಭಾವಪೂರ್ಣವಾದ ಉಜ್ಜ್ವಲಭಾಷೆಯಲ್ಲಿ ಆತ್ಮನ ಅಮರತ್ವವನ್ನು ಬೋಧಿಸಿ ಆ ಕೇಂದ್ರದಲ್ಲಿ ದೃಢವಾಗಿದ್ದುಕೊಂಡು ಕರ್ತವ್ಯವನ್ನು ಮಾಡಬೇಕೆಂದು ಅರ್ಜುನನಲ್ಲಿ ವಿವೇಕಪೂರ್ಣವಾದ ಧೈರ್ಯೋತ್ಸಾಹ ಗಳನ್ನು ತುಂಬುತ್ತಾ ಸಮಸ್ತಲೋಕಗಳಿಗೂ ಉಪಕಾರಮಾಡುವ ಅಮರ ಸಂದೇಶವನ್ನು ಹಾಡುತ್ತಾನೆ. ಅದೇ ಭಗವದ್ಗೀತೆ...

**ಸಾರಥ್ಯಮರ್ಜುನಸ್ಯಾದೌ ಕುರ್ವನ್ಗೀತಾಮೃತಂ ದದೌ ।**
**ಲೋಕತ್ರಯೋಪಕಾರಾಯ ತಸ್ಮೈ ಕೃಷ್ಣಾತ್ಮನೇ ನಮಃ ॥**

(ಅರ್ಜುನನಿಗೆ ಸಾರಥ್ಯವನ್ನು ಮಾಡುತ್ತಾ ಪ್ರಾರಂಭದಲ್ಲಿ ಲೋಕತ್ರಯಕ್ಕೂ ಉಪಕಾರವನ್ನು ಮಾಡಲು ಗೀತಾಮೃತವನ್ನು ಯಾವನು ಕರುಣಿಸಿದನೋ ಆ ಶ್ರೀಕೃಷ್ಣಸ್ವರೂಪಿಗೆ ನಮಸ್ಕಾರವು.) ಹೀಗೆ ಭಗವಂತನು ಗೀತೆಯನ್ನು ಅವತಾರಮಾಡಿಸಿದ ಸನ್ನಿವೇಶವನ್ನು ಯಾಮುನಮುನಿಗಳು ಒಂದು ಚಿಕ್ಕ ಶ್ಲೋಕದಲ್ಲಿ ಚೆನ್ನಾಗಿ ಸಂಗ್ರಹಿಸುತ್ತಾರೆ.

**ಅಸ್ಥಾನಸ್ನೇಹಕಾರುಣ್ಯಧರ್ಮಾಧರ್ಮಧಿಯಾಕುಲಮ್ ।**
**ಪಾರ್ಥಂ ಪ್ರಪನ್ನಮುದ್ದಿಶ್ಯ ಶಾಸ್ತ್ರಾವತರಣಂ ಕೃತಮ್ ॥**

(ಅಸ್ಥಾನದಲ್ಲಿ ಸ್ನೇಹ-ಕರುಣೆಗಳಿಂದ ಕೂಡಿ ಧರ್ಮಾಧರ್ಮಗಳ ಬುದ್ಧಿಯಲ್ಲಿ ವ್ಯಾಕುಲಗೊಂಡು ತನ್ನನ್ನು ಶರಣುಹೊಂದಿದ ಪಾರ್ಥನನ್ನು ಉದ್ದೇಶಿಸಿ ಶಾಸ್ತ್ರದ ಅವತಾರವಾಯಿತು.)

## 5. ಗೀತಾಸಾಹಿತ್ಯದ ಆಕಾರ ಮತ್ತು ಪ್ರಮಾಣ

ಗೀತಾಸಾಹಿತ್ಯವು ಛಂದೋಬದ್ಧವಾಗಿ ಶ್ಲೋಕರೂಪದಲ್ಲಿ ಮಹರ್ಷಿ–ಕವಿಪುಂಗವರಿಂದ ಕರುಣಿಸಲ್ಪಟ್ಟಿದೆ. ಇದರ ಶ್ಲೋಕಗಳ ಸಂಖ್ಯೆ ಏಳುನೂರು ಎಂದು ಶ್ರೀಶಂಕರಾಚಾರ್ಯರು ಹೇಳುತ್ತಾರೆ. **"ಸಪ್ತಭಿಃ ಶ್ಲೋಕಶತೈಃ ಉಪನಿಬಬಂಧ"**. ಅನಂತರಕಾಲದಲ್ಲಿ ಬಂದ ಆಚಾರ್ಯರೂ ಇಷ್ಟೇ ಶ್ಲೋಕಸಂಖ್ಯೆಯೆಂದು ಗ್ರಹಿಸಿ ಭಾಷ್ಯಮಾಡಿರುತ್ತಾರೆ. ಆ ಶ್ಲೋಕಗಳಲ್ಲಿ ಶ್ರೀಕೃಷ್ಣನವು 575, ಅರ್ಜುನನು ಹೇಳಿದ್ದು 84, ಸಂಜಯನು ಹೇಳಿದ್ದು 40 ಮತ್ತು ಧೃತರಾಷ್ಟ್ರನದು ಒಂದು ಶ್ಲೋಕ. ಆದರೆ ಭೀಷ್ಮಪರ್ವದಲ್ಲಿ ಗೀತೆಯ ಪ್ರಮಾಣವನ್ನು 745 ಶ್ಲೋಕಗಳೆಂದು ಸ್ಪಷ್ಟವಾಗಿ ವ್ಯಾಸರು ಹೇಳುತ್ತಾರೆ. (ಶ್ರೀಕೃಷ್ಣನು ಉಪದೇಶಿಸಿದ್ದು 620 ಶ್ಲೋಕಗಳು. ಅರ್ಜುನನು ಹೇಳಿದ್ದು 57, ಸಂಜಯನವು 67 ಮತ್ತು ಧೃತರಾಷ್ಟ್ರನದು ಒಂದು.)

**ಷಟ್ ಶತಾನಿ ಸವಿಂಶಾನಿ ಶ್ಲೋಕಾನಾಂ ಪ್ರಾಹ ಕೇಶವಃ ।**
**ಅರ್ಜುನಃ ಸಪ್ತಪಂಚಾಶತ್ ಸಪ್ತಷಷ್ಟಿಂ ಚ ಸಂಜಯಃ ।**
**ಧೃತರಾಷ್ಟ್ರಃ ಶ್ಲೋಕಮೇಕಂ ಗೀತಾಯಾ ಮಾನಮುಚ್ಯತೇ ॥**

(ಮ.ಭಾ.ಭೀ. ಅ. 43)

ಸುಮಾರು ಸಾವಿರವರ್ಷಗಳ ಹಿಂದೆ ನಮ್ಮದೇಶಕ್ಕೆ ಬಂದಿದ್ದ ಆಲ್ಬೆರೂನಿ ಎಂಬ ವಿದ್ವಾಂಸನ ಕಾಲದಲ್ಲಿ ಪ್ರಚಲಿತವಾಗಿದ್ದ ಗೀತೆಯಲ್ಲಿ 745 ಶ್ಲೋಕಗಳಿದ್ದುವು. ಶ್ರೀಶಂಕರರಿಗೆ ಹಿಂದಿನ ಭಾಷ್ಯಕಾರರೂ 745 ಶ್ಲೋಕಗೀತೆಗೆ ಭಾಷ್ಯ ರಚಿಸಿದ್ದುದಾಗಿ ಕಂಡುಬರುತ್ತದೆ. ಅಭಿನವಗುಪ್ತರ ಗೀತಾರ್ಥಸಂಗ್ರಹವೂ 700 ಕ್ಕಿಂತ ಹೆಚ್ಚು ಶ್ಲೋಕಗಳನ್ನು ಗ್ರಹಿಸುತ್ತದೆ.

ಆದರೆ ಕಾಲಕ್ರಮದಲ್ಲಿ 700 ಶ್ಲೋಕಗಳ ಗೀತಾಪಾಠವೇ ಬಳಕೆಗೆ ಬಂದಿತು ಎಂದು ಕೆಲವು ವಿದ್ವಾಂಸರು ಹೇಳುತ್ತಾರೆ.

ಆದರೆ ಶ್ರೀಶಂಕರಾಚಾರ್ಯರು 700 ಶ್ಲೋಕಗಳನ್ನು ಮಾತ್ರ ಏಕೆ ಅಂಗೀಕರಿಸಿದರು? ಎಂದರೆ ; ಅವರಿಗೆ ದೊರೆತಿದ್ದ ಪಾಠದಲ್ಲಿ ಅಷ್ಟೇ ಶ್ಲೋಕ ಗಳಿದ್ದುವು. ಅಥವಾ ಕೆಲವು ಶ್ಲೋಕಗಳು ಬೌದ್ಧಮತವೇ ಮುಂತಾದ ನಾಸ್ತಿಕದರ್ಶನಕ್ಕೆ ಸಂಬಂಧಪಟ್ಟಿರುವುವೆಂದು ಅವುಗಳನ್ನು ಅವರು ಬಿಟ್ಟಿರ ಬಹುದು. ಮುಂದಿನ ಭಾಷ್ಯಕಾರರೂ ಅವರ ಪಾಠವನ್ನೇ ಅನುಸರಿಸಿದ್ದಾರೆ– ಎಂದು ಈ ವಿದ್ವಾಂಸರು ಹೇಳುತ್ತಾರೆ.

ಇತ್ತೀಚೆಗೆ ಮದ್ರಾಸಿನ ಮೈಲಾಪುರದಿಂದ ಶುದ್ಧಧರ್ಮಮಂಡಲ ಎಂಬ ಸಂಸ್ಥೆಯು 745 ಶ್ಲೋಕಗಳನ್ನೊಳಗೊಂಡ ಗೀತೆಯೊಂದನ್ನು ಪ್ರಕಾಶಪಡಿಸಿದೆ. ಅದು ಈಗ ಪ್ರಚಲಿತವಾಗಿರುವ ಶ್ಲೋಕಗಳಲ್ಲಿ 37 ಶ್ಲೋಕಗಳನ್ನು ತೆಗೆದುಹಾಕಿ, ಮಹಾಭಾರತದ ಉಳಿದ ಪರ್ವಗಳಿಂದ 82 ಶ್ಲೋಕಗಳನ್ನು ಸೇರಿಸಿಕೊಂಡು ಒಟ್ಟು ಶ್ಲೋಕಸಂಖ್ಯೆಯನ್ನು 745ಕ್ಕೆ ಅಳವಡಿಸಿದೆ. ಗೀತಾಧ್ಯಾಯಗಳ ಸಂಖ್ಯೆಯನ್ನೂ ಏರಿಸಿದೆ. ಆದರೆ ಈ ಕೆಲವು ಶ್ಲೋಕಗಳನ್ನು ಬಿಡಬೇಕು ಮತ್ತು ಈ ಕೆಲವನ್ನು ಸೇರಿಸಿಕೊಳ್ಳಬೇಕು–ಎಂದು ಈ ಸಂಸ್ಥೆಯವರು ಹೇಳಿರುವುದು ಪ್ರಮಾಣಬದ್ಧವಾಗಿಲ್ಲ. ಇದರ ವಿಧಾನವೂ ಅವೈಜ್ಞಾನಿಕವಾಗಿದೆಯೆಂದು ಬಹು ವಿದ್ವಾಂಸರು ಅದನ್ನು ಮಾನ್ಯಮಾಡಲಿಲ್ಲ. ಅನಂತರ ಕಾಠಿಯಾವಾಡದ ಗೋಂಡಲ್ ನಗರಿಯಲ್ಲಿನ ರಸಶಾಲೌ ಷಧಾಶ್ರಮದ ರಾಜವೈದ್ಯ ಜಿ.ಕೆ. ಶಾಸ್ತ್ರಿ ಎನ್ನುವವರು ತಮ್ಮ ಸಂಶೋಧನೆಯ ಫಲವಾಗಿ ಭೋಜಪತ್ರಿ ಪ್ರಕಾಶನದ ಆಧಾರದ ಮೇಲೆ 745 ಶ್ಲೋಕಗಳ ಗೀತಾಪಾಠವೊಂದನ್ನು ವಿಸ್ತೃತಭೂಮಿಕೆಯೊಡನೆ ಪ್ರಕಾಶನಪಡಿಸಿದ್ದಾರೆ. ಅದು ಪ್ರಾಮಾಣಿಕವೆನ್ನುವುದಕ್ಕೆ ಕೆಲವು ಕಾರಣಗಳನ್ನೂ ಕೊಟ್ಟಿದ್ದಾರೆ. ನಾವು ಪ್ರಚಲಿತವಾಗಿರುವ 700 ಶ್ಲೋಕಗಳಿಗೆ ವಿವರಣೆನೀಡಿದ್ದರೂ ಪೂರ್ವಾಪರ ವಿರೋಧವಿಲ್ಲದೆ ಗೀತಾತತ್ತ್ವಕ್ಕೆ ಹೊಂದಿಕೊಳ್ಳುವ ಬೇರೆ ಶ್ಲೋಕಗಳು ಇದ್ದರೆ ಅವುಗಳನ್ನೂ ಮಾನ್ಯಮಾಡಬಹುದೆಂದು ಅಭಿಪ್ರಾಯಪಡುತ್ತೇವೆ. ಹೊಸ ದಾಗಿ ಸೇರಲು ಬಯಸುವ ಒಂದೊಂದು ಶ್ಲೋಕದ ಭಾವ-ಭಾಷೆಗಳನ್ನೂ

ಪರೀಕ್ಷಿಸಿದ ನಂತರ ಅವುಗಳ ಪ್ರವೇಶವನ್ನು ಅಂಗೀಕಾರ ಅಥವಾ ಅನಾದರ ಮಾಡಬೇಕಾಗುತ್ತದೆ.

## 6. ಮಹಾಭಾರತದಲ್ಲಿ ಗೀತೆಯ ಸ್ಥಾನ, ಗೀತೆಯ ಕರ್ತೃ

ಗೀತೆಯು ಒಂದು ಸ್ವತಂತ್ರಗ್ರಂಥವಾಗಿ ರಚಿಸಲ್ಪಟ್ಟಿದ್ದು ಅನಂತರ ಕಾಲದಲ್ಲಿ ಮಹಾಭಾರತಕ್ಕೆ ಸೇರಿಸಲ್ಪಟ್ಟಿತೆಂದು ಕೆಲವರು ಹೇಳುತ್ತಾರೆ. ಈ ವಾದವನ್ನು ನಾವು ಒಪ್ಪುವುದಿಲ್ಲ. ಅದಕ್ಕೆ ಆಂತರಿಕಪ್ರಮಾಣವಾವುದೂ ಇಲ್ಲ. ಶಬ್ದ, ಶೈಲಿ, ವಸ್ತುವಿನ ಬೆಳವಣಿಗೆ ಈ ಎಲ್ಲ ದೃಷ್ಟಿಗಳಿಂದಲೂ ಅದು ಮಹಾಭಾರತದೊಡನೆ ಸಮರಸವಾಗಿದೆ. ಆರ್ಷಪದಗಳೂ ಎರಡರಲ್ಲೂ ಏಕರೀತಿಯಾಗಿವೆ. ಅರ್ಥಸಾದೃಶ್ಯವೂ ಇವೆರಡಕ್ಕೂ ನಾನಾವಿಷಯಗಳಲ್ಲಿ ಪುಷ್ಕಳವಾಗಿದೆ.[1] ಗೀತಾದರ್ಶನವೇ ಮಹಾಭಾರತಕ್ಕೆ ಕೇಂದ್ರಸ್ಥಾನ. ಆ ದರ್ಶನವನ್ನು ಕಥೆಯಾಗಿ ವಿಸ್ತರಿಸಿದರೆ ಮಹಾಭಾರತವಾಗುತ್ತದೆ. ಮಹಾಭಾರತವನ್ನು ದರ್ಶನರೂಪದಲ್ಲಿ ಸಂಗ್ರಹಿಸಿದರೆ ಅದು ಭಗವದ್ಗೀತೆಯಾಗುತ್ತದೆ!–"ಮಹಾಭಾರತದ ದಿವ್ಯಶರೀರದಲ್ಲಿ ಹೃದಯಸ್ಥಾನ ಭಗವದ್ಗೀತೆಗೆ" ಎಂಬ ವ್ಯಾಖ್ಯಾನವು ಸಾಧುವಾಗಿದೆ. ಒಂದು ಗ್ರಂಥ ಭಾಗವು ಮತ್ತೊಂದರಲ್ಲಿ ಪ್ರಕ್ಷಿಪ್ತವಾಗಿದ್ದರೆ ಆ ಪ್ರಕ್ಷಿಪ್ತಭಾಗವನ್ನು ಪ್ರಾಮಾಣಿಕವಾದ ಇತರ ಗ್ರಂಥಗಳು ಉಲ್ಲೇಖಿಸುವುದಿಲ್ಲ. ಆದರೆ ಗೀತೆಯನ್ನು ರಚಿಸಿದ ವ್ಯಾಸರೇ ಮಹಾಭಾರತದ ಭೀಷ್ಮಪರ್ವದಲ್ಲಿ ಗೀತೆಯ ಶ್ಲೋಕಸಂಖ್ಯೆಯನ್ನು ಹೇಳುತ್ತಾರೆ. ಗೀತೆಯನ್ನು ಪ್ರಶಂಸೆಮಾಡುತ್ತಾರೆ. ಶಾಂತಿಪರ್ವ–ಆಶ್ವಮೇಧಿಕಪರ್ವಗಳಲ್ಲಿಯೂ ಗೀತೆಯ ವಿಷಯವನ್ನು ಉಲ್ಲೇಖಿಸುತ್ತಾರೆ.[2] ಗೀತೆಯು ಪ್ರಕ್ಷಿಪ್ತವೆಂದು ವಾದಿಸುವವರು ಈ ಎಲ್ಲ ಭಾಗಗಳನ್ನೂ ಕೂಡ ಪ್ರಕ್ಷಿಪ್ತವೆಂದು ಹೊಸ ಪ್ರತಿಜ್ಞೆಮಾಡಬೇಕಾಗುತ್ತದೆ. ಇದು ಕ್ಲಿಷ್ಟಕಲ್ಪನೆ. ಪುರಾಣ-ಉಪಪುರಾಣಗಳೂ, ಶ್ರೀಶಂಕರಾಚಾರ್ಯರಿಗಿಂತ ಹಿಂದಿನ ಭಾಷ್ಯಕಾರರೂ, ಆಲ್‌ಬೆರೂನಿ ಮುಂತಾದ ಹೊರಗಿನ ವಿದ್ವಾಂಸರೂ ಅದನ್ನು ಮಹಾಭಾರತದ ಅಂಗವಾಗಿಯೇ ಪರಿಗಣಿಸುತ್ತಾರೆ. ಹೀಗಿರುವಾಗ ಅದನ್ನು ಪ್ರಕ್ಷಿಪ್ತವೆಂದು ಭಾವಿಸುವುದು

---

1 ಗೀತಾರಹಸ್ಯ, ಪರಿಶಿಷ್ಟಭಾಗ1

2 'ಕಶ್ಮಲಂ ಯತ್ರ ಪಾರ್ಥಸ್ಯ ವಾಸುದೇವೋ ಮಹಾಮತಿಃ । ಮೋಹಜಂ ನಾಶಯಾ

ವಿಕ್ಷಿಪ್ತಭಾವನೆಯೆಂದೇ ನಾವು ತಿಳಿಯುತ್ತೇವೆ. ಗೀತೆಯು ಭಾರತದ ಅವಿಭಾಜ್ಯವಾದ ಅಂಗವೆಂದು ಸನಾತನಕಾಲದಿಂದ ನಮ್ಮ ಸಂಪ್ರದಾಯವು ಮಾನ್ಯಮಾಡುತ್ತಿದೆ. ಅದಕ್ಕೆ ಪ್ರಬಲವಾದ ವಿರುದ್ಧಯುಕ್ತಿಯಿಲ್ಲವಾದ್ದರಿಂದ ನಾವು ಆ ಸಂಪ್ರದಾಯವನ್ನು ಸಹಜವಾಗಿ ಗೌರವಿಸುತ್ತೇವೆ. ಹೃದಯವನ್ನು ಶರೀರರಚನೆಯಾದ ಬಹಳ ಕಾಲಾನಂತರ ಶರೀರಕ್ಕೆ ಸೇರಿಸಿದರು–ಎನ್ನುವ ವಾದ ಸರಿಯಲ್ಲ. ಗೀತೆಯು ಮಹಾಭಾರತಪುರುಷನ ದಿವ್ಯದೇಹದಲ್ಲಿ ಹೃದಯಸ್ಥಾನದಲ್ಲಿದೆ. ಕೃತಕವಾದ ಹೃದಯದ ಸೇರ್ಪಡೆಯನ್ನು ತನ್ನಲ್ಲಿ ಮಾಡಿಕೊಳ್ಳಲು ಮಹಾಭಾರತಪುರುಷನೂ ಒಪ್ಪುವುದಿಲ್ಲ.

ಗೀತೆಯು ಭಾರತದ ಅಂಗವೆಂದು ನಿರೂಪಿಸಿರುವುದರಿಂದ ಅದರ ಕರ್ತೃವು ಭಾರತದ ಕರ್ತೃವಾದ ವ್ಯಾಸರೆಂದೇ ಸಿದ್ಧವಾಗುತ್ತದೆ. ಆದರೆ ಭಗವದ್ಗೀತೆಯನ್ನು ಸ್ವಯಂ ಪದ್ಮನಾಭನೇ ಉಪದೇಶಿಸಿದನು-ಎಂದ ಮೇಲೆ ಅದರ ಶ್ಲೋಕರೂಪವೂ ಭಗವಂತನ ಮುಖಪದ್ಮದಿಂದ ಸಹಜವಾಗಿಯೇ ಬಂದಿತೆಂದೇ ತಿಳಿಯಕೂಡದೆ? ಎಂದರೆ ; ಅದರಲ್ಲಿ ಅಸಂಭವವೇನೂ ಇಲ್ಲ. ಗೀತೆಯ ಕೆಲವು ಶ್ಲೋಕಗಳು ಛಂದೋಬದ್ಧವಾಗಿ ಭಗವಂತನ ಮುಖಾರವಿಂದದಿಂದಲೇ ಮಂತ್ರರೂಪದಲ್ಲಿ ಹೊರಬಂದಿರಬಹುದು. ಆದರೆ ಶ್ರೀಕೃಷ್ಣ, ಅರ್ಜುನ–ಇವರಿಬ್ಬರೂ ಅಷ್ಟುಕಾಲವೂ ಪೂರ್ಣವಾಗಿ ಶ್ಲೋಕರೂಪದಲ್ಲಿಯೇ ಸಂಭಾಷಣೆನಡೆಸುತ್ತಿದ್ದರು ಎಂದು ಆಗ್ರಹಮಾಡಬೇಕಾಗಿಲ್ಲ. ಗೀತೆಯಲ್ಲಿರುವ ಆಶಯವು ಶ್ರೀಕೃಷ್ಣನದಾಗಿದ್ದು ಅದಕ್ಕೆ ಛಂದೋರೂಪವನ್ನು ಆತನ ಮತ್ತೊಂದು ಅವತಾರವೆಂದು ಪರಿಗಣಿಸಲ್ಪಟ್ಟಿರುವ– (ವ್ಯಾಸಾಯ ವಿಷ್ಣುರೂಪಾಯ ವ್ಯಾಸರೂಪಾಯ ವಿಷ್ಣವೇ । ಕೃಷ್ಣದ್ವೈಪಾಯನಂ ವಿದ್ಧಿ ಸಾಕ್ಷಾನ್ನಾರಾಯಣಂ ನೃಪ)-ವೇದವ್ಯಾಸರು ಕೊಟ್ಟರೆಂದು ಹೇಳಿದರೂ ಗೀತೆಯು ಭಗವಂತನದೇ ಆಗಿದೆ. ಶ್ರೀಕೃಷ್ಣನ ಭಾವವನ್ನು

---

ಮಾಸ ಹೇತುಭಿರ್ವೋಕ್ಷದರ್ಶಿಭಿಃ' (ಭೀಷ್ಮಪರ್ವ) 'ಪೂರ್ವೋಕ್ತಂ ಭಗವದ್ಗೀತಾಪರ್ವ ಭೀಷ್ಮವಧಸ್ತತಃ (ಅನು 2-69) 'ಕಥಿತೋ ಹರಿಗೀತಾಸು ಸಮಸ್ತವಿಧಿಕಲ್ಪಿತಃ' (ಶಾಂ. ೨೪೬-೧೦) 'ಅರ್ಜುನೇ ವಿಮನಸ್ಕೇ ಚ ಗೀತಾ ಭಗವತಾ ಸ್ವಯಮ್' ಅನುಗೀತಾಪರ್ವವನ್ನೂ ನೋಡುವುದು.

ಅದೇ ಮಟ್ಟದಲ್ಲಿ ಗ್ರಹಿಸಿ ಆ ಭಾವಕ್ಕೆ ತಕ್ಕ ಭಾಷೆಯನ್ನು ಅದಕ್ಕನುಗುಣವಾದ ವೃತ್ತದಲ್ಲಿ ಕೊಡುವ ಸಾಮರ್ಥ್ಯ ವ್ಯಾಸರಿಗಲ್ಲದೆ ಬೇರೆ ಯಾರಿಗೆ ಇರಲು ಸಾಧ್ಯ? ''ತಂ ಧರ್ಮಂ ಭಗವತಾ ಯಥೋಪದಿಷ್ಟಂ ವೇದವ್ಯಾಸಃ ಸರ್ವಜ್ಞೋ ಭಗವಾನ್ ಗೀತಾಖ್ಯೈಃ ಸಪ್ತಭಿಃ ಶ್ಲೋಕಶತೈಃ ಉಪನಿಬಬಂಧ'' (ಶಾಂಕರಗೀತಾಭಾಷ್ಯದ ಉಪೋದ್ಘಾತ )

## ಗೀತೆಯ ಕಾಲ

ಗ್ರಂಥದ ಕಾಲವನ್ನು ವಿವೇಚನೆಮಾಡುವುದು ಈಗಿನ ಕಾಲದಲ್ಲಿ ಅದರ ವಿಮರ್ಶೆಯ ಮುಖ್ಯವಾದ ಒಂದು ಅಂಗ. ಆದರೆ ಆ ಸಮಸ್ಯೆಯಲ್ಲಿ ಮಿತಿಮೀರಿ ಮುಳುಗಿ ಗ್ರಂಥದ ಪರಮಾರ್ಥವನ್ನು ಸವಿಯದೆ ಬುದ್ಧಿಯ ವ್ಯಾಯಾಮದಲ್ಲಿ ಕಾಲಕಳೆಯುವ ಚಟವು ಹೆಚ್ಚಾಗಬಾರದು. ಅಂತಹ ಚಟವುಳ್ಳ ಮೂರ್ಖರನ್ನು ವಿವೇಕಿಗಳು–ಮಾವಿನ ತೋಟಕ್ಕೆ ಹೋಗಿ ಅಲ್ಲಿದ್ದ ಮರಗಳ ಎಲೆಗಳನ್ನು ಲೆಕ್ಕಿಸುವುದರಲ್ಲೇ ಕಾಲವನ್ನು ಕಳೆದು ಹಣ್ಣನ್ನು ಸವಿಯದೆ ಹಿಂದಿರುಗಿದ ಗಾಂಪರಿಗೂ, ಮೀನುಹಿಡಿಯಲು ಹೊರಟು ಮೂರ್ಖತನದಿಂದ ಬಲೆಯ ಮನೆಗಳನ್ನು ಲೆಕ್ಕಿಸುವುದರಲ್ಲೇ ಕಾಲಕಳೆದು ತಾವು ಹೊರಟ ಉದ್ದೇಶವನ್ನೇ ಮರೆತು ಬಂದ ಮೂರ್ಖರಾದ ಮೀಂಗುಲಿಗರಿಗೂ ಹೋಲಿಸುತ್ತಾರೆ. ಇದು ಸರಿಯೇ ಆಗಿದೆ. ಆದರೆ ಗ್ರಂಥದ ಅರ್ಥನಿರ್ಣಯಕ್ಕೂ ಕಾಲವು ಸ್ವಲ್ಪಮಟ್ಟಿಗೆ ಸಹಾಯಮಾಡುತ್ತದೆ. ಉಚಿತ ಪ್ರಮಾಣದಲ್ಲಿ ಅದನ್ನು ವಿಮರ್ಶಿಸುವುದು ದೋಷವೇನೂ ಅಲ್ಲ. ಗೀತೆಯ ಕರ್ತೃವೂ ಮಹಾಭಾರತದ ಕರ್ತೃವೂ ಒಬ್ಬನೇ ಎಂದು ನಿರೂಪಿಸಿರುವುದರಿಂದ ಮಹಾಭಾರತದ ಕಾಲವೇ ಗೀತೆಯ ಕಾಲವಾಗುತ್ತದೆ. ಆದರೆ ಮಹಾಭಾರತಕ್ಕೆ ಮೂಲವಾಗಿ ಭಾರತವೆಂಬ ಗ್ರಂಥವಿದ್ದು ಅದು ಉಪಾಖ್ಯಾನಗಳೊಡನೆ ಸೇರಿ ಮಹಾಭಾರತವಾಗಿ ಬೆಳೆಯಿತೆಂದು ಕೆಲವರು ಹೇಳುತ್ತಾರೆ.[1] ಹೇಗಿದ್ದರೂ ಗೀತೆಯೂ ಭಾರತದ ಮೌಲಿಕರೂಪದಲ್ಲೇ ಸೇರಿತ್ತು ಎಂದು

---

1 'ಸುಮನ್ತು ಜೈಮಿನಿ ವೈಶಂಪಾಯನ ಪೈಲ ಸೂತ್ರಭಾಷ್ಯ ಭಾರತ ಮಹಾಭಾರತ ಧರ್ಮಾಚಾರ್ಯಾಃ' ಎಂಬ ಆಶ್ವ. ಗೃಹ್ಯವು (3-4,4) ಭಾರತ-ಮಹಾಭಾರತಗಳ ಆಚಾರ್ಯರನ್ನು ಬೇರೆ ಬೇರೆಯಾಗಿ ಹೇಳುತ್ತದೆ.

ತಿಳಿಯುವುದರಲ್ಲಿ ಅಸಂಗತವಿಲ್ಲ. ಏಕೆಂದರೆ : ಯಾಜ್ಞವಲ್ಕ್ಯ-ಜನಕಸಂವಾದ, ವಿದುರನೀತಿ, ಸನತ್ಸುಜಾತೀಯ ಮುಂತಾದುವುಗಳನ್ನು ಹೇಗೋ ಹಾಗೆ ಗೀತೆಯನ್ನೂ ಮಹಾಭಾರತಕಾರರು ಹಿಂದಿನ ಗ್ರಂಥಗಳ ಆಧಾರದ ಮೇಲೆ ರಚಿಸಿರಬಹುದು. ಏಕೆಂದರೆ ನಾವು ಹಿಂದೆ ಗಮನಿಸಿರುವಂತೆ ಗೀತಾದರ್ಶ ನವೇ ಭಾರತಕಥೆಯ ಕೇಂದ್ರವಾಗಿದೆ.

ಮಹಾಭಾರತಯುದ್ಧವು ನಡೆದುದು ಕಲಿ-ದ್ವಾಪರಗಳ ಸಂಧಿಕಾಲ ದಲ್ಲಿ. ಸುಮಾರು 5,079 ವರ್ಷಗಳ ಹಿಂದೆ. ಆ ಸಮಯದಲ್ಲಿಯೇ ಮಹಾ ಭಾರತವೂ ಅದರ ಸಹಜ ಅಂಗವಾದ ಗೀತೆಯೊಡನೆ ರಚಿತವಾಗಿರಬೇಕು. ಆಧುನಿಕವಿದ್ವಾಂಸರು ಮಹಾಭಾರತದ ಬೇರೆ-ಬೇರೆ ಪ್ರಕರಣಗಳಿಗೆ ಬೇರೆ ಬೇರೆ ಕಾಲಗಳನ್ನು ಹೇಳುತ್ತಾರೆ. ಆದರೂ ಈಗಿನ ಮಹಾಭಾರತವೂ ಕೂಡ ಕ್ರಿ. ಪೂ. ಕ್ಕಿಂತ 500 ವರ್ಷ ಮೊದಲಿನಿಂದಲಾದರೂ ಇದ್ದಿರಬೇಕೆಂದು ಅವರೂ ಒಪ್ಪಬೇಕು. ಏಕೆಂದರೆ ಕೃಷ್ಣಚರಿತ್ರೆ ಮತ್ತು ಶ್ರೀಕೃಷ್ಣನ ಪೂಜೆಗಳನ್ನು ಕ್ರಿ. ಪೂ. 230ರ ಕಾಲದಲ್ಲಿ ನಮ್ಮ ದೇಶಕ್ಕೆ ಬಂದಿದ್ದ ಮೆಗಾಸ್ತನೀಸನು ಉಲ್ಲೇಖಿಸುತ್ತಾನೆ. ಕರ್ಣಪ್ರಾವರಣ, ಲಲಾಟಾಕ್ಷ, ಏಕಪಾದ–ಎಂದು ಮೊದಲಾಗಿ ವಿಲಕ್ಷಣರೂಪದ ಜನರನ್ನು ಆತನು ಉಲ್ಲೇಖಿಸುತ್ತಾನೆ. ಚಿನ್ನವನ್ನು ಮೇಲಕ್ಕೆ ತೆಗೆಯುವ ಇರುವೆಗಳ ವಿಷಯವನ್ನು ಹೇಳುತ್ತಾನೆ. ಮಹಾಭಾರತದಲ್ಲಿಯೂ ಈ ವಿಷಯಗಳೆಲ್ಲಾ ಬರುತ್ತವೆ.

ಭಾಸಕವಿಯ ಕರ್ಣಭಾರದಲ್ಲಿನ **"ಹತೋಽಪಿ ಲಭತೇ ಸ್ವರ್ಗಂ"** ಎಂಬ ಶ್ಲೋಕವು **"ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ"** ಎಂಬ ಗೀತಾಶ್ಲೋಕವನ್ನೇ ಸರಿಹೋಲುತ್ತದೆ. ಆತನ ಕೆಲವು ನಾಟಕಗಳೂ ಮಹಾಭಾರತ ಕಥೆಗಳನ್ನು ಆಶ್ರಯಿಸಿವೆ. ಭಾಸನು ಕ್ರಿ. ಶ. ಕ್ಕಿಂತ 200-300 ವರ್ಷಗಳಾದರೂ ಹಿಂದಿನವನೆಂದು ಬಹುಮಂದಿ ವಿದ್ವಾಂಸರ ಮತ. ಅದಕ್ಕಿಂತ ಹಿಂದೆಯೇ ಮಹಾಭಾರತವೂ ಅದರೊಳಗಿನ ಗೀತೆಯೂ ಪ್ರಸಿದ್ಧವಾಗಿದ್ದಿರಬೇಕು.

ಬೋಧಾಯನರ ಕಾಲ ಸುಮಾರು ಕ್ರಿ.ಪೂ. 400. ಅವರು ಹೇಳಿರುವ **"ಜಾತಸ್ಯ ವೈ ಮನುಷ್ಯಸ್ಯ ಧ್ರುವಂ ಮರಣಂ"** ಎಂಬ ಸೂತ್ರಭಾಗವೂ

"ಜಾತಸ್ಯ ಹಿ ಧ್ರುವೋ ಮೃತ್ಯುಃ" ಎಂಬ ಗೀತಾಶ್ಲೋಕವನ್ನೇ ಆಧರಿಸಿದೆ. ಇದಲ್ಲದೆ ಅವರು ಗೃಹ್ಯಶೇಷಸೂತ್ರದಲ್ಲಿ "ಪತ್ರಂ ಪುಷ್ಪಂ ಫಲಂ ತೋಯಂ" ಎಂಬ ಗೀತಾಶ್ಲೋಕವನ್ನು "ಯಥಾಹ ಭಗವಾನ್" ಎಂದು ಉಲ್ಲೇಖಿಸುತ್ತಾರೆ. ಅವರ ಕಾಲದಲ್ಲೇ ಅಷ್ಟು ಮನ್ನಣೆ ಪಡೆದಿದ್ದ ಗೀತೆಯು ಅವರಿಗಿಂತಲೂ ತುಂಬಾ ಪ್ರಾಚೀನವೆಂದು ಹೇಳಬೇಕಾಗುತ್ತದೆ.

ಗೀತೆಯು ಭಕ್ತಿಯ ವಿಷಯದಲ್ಲಿ ಕ್ರೈಸ್ತಮತದಿಂದ ಪ್ರಭಾವಿತವಾಗಿ ಆ ಮತವು ಹುಟ್ಟಿದ ನಂತರ ರಚಿತವಾಗಿದೆಯೆಂದು ಕೆಲವರು ವಾದಿಸುವುದು ತುಂಬಾ ಹಾಸ್ಯಾಸ್ಪದ. ಏಕೆಂದರೆ ಕ್ರಿಸ್ತಪೂರ್ವದ ಬೋಧಾಯನರೇ ಗೀತೆಯನ್ನು ಅತ್ಯಂತಗೌರವದಿಂದ ಉಲ್ಲೇಖಿಸಿರುವುದನ್ನು ನಾವು ಗಮನಿಸಿದ್ದೇವೆ. ಶ್ವೇತಾಶ್ವತರ "ಯಸ್ಯ ದೇವೇ ಪರಾಭಕ್ತಿಃ"–ಎಂದು ಉಪನಿಷತ್ತು ಭಕ್ತಿಯನ್ನು ಪ್ರಶಂಸೆಮಾಡುತ್ತದೆ. ಕ್ರಿಸ್ತಪೂರ್ವದಲ್ಲಿ ಭಾರತದೇಶಕ್ಕೆ ಬಂದಿದ್ದ ಮೆಗಾಸ್ತನೀಸನು ಕೃಷ್ಣಭಕ್ತರನ್ನು ಉಲ್ಲೇಖಿಸುತ್ತಾನೆ. 11ನೆಯ ಶತಮಾನ ದಲ್ಲಿದ್ದ ಅಲ್‌ಬೆರೂನಿಯು ಗೀತಾ ಮತ್ತು ಮಹಾಭಾರತಗಳಿಂದ ಉದ್ಧರಣ ಗಳನ್ನು ಕೊಡುತ್ತಾನೆ. ಮಹಾಭಾರತವು 4,000 ವರ್ಷಗಳು ಹಿಂದಿನದು, ಗೀತೆಯ ಶ್ಲೋಕಗಳ ಸಂಖ್ಯೆ 745 ಎಂದೂ ಹೇಳುತ್ತಾನೆ. ಅಷ್ಟು ವರ್ಷಗಳ ಹಿಂದೆಯೇ ಗೀತೆಯ ಪ್ರಾಚೀನತೆಯು ಸಮರ್ಥಿಸಲ್ಪಟ್ಟಿತ್ತು.

ಗೀತೆಯು ಬುದ್ಧನ ಕಾಲಕ್ಕಿಂತ ಈಚಿನದೆಂದು ಹೇಳುವುದೂ ನಿರಾಧಾರ. ಇದಲ್ಲದೆ ಮಹಾಯಾನಪಂಥದ ಗುರು ನಾಗಾರ್ಜುನನು ಬುದ್ಧ ಧರ್ಮವನ್ನು ಸ್ವೀಕರಿಸಿದ ರಾಹುಲಭದ್ರನೆಂಬ ಬ್ರಾಹ್ಮಣ. ಅವನಿಗೆ ಮಹಾ ಯಾನಪಂಥದ ಕಲ್ಪನೆಗಳು ತೋಚಲು ಜ್ಞಾನಿಗಳಾದ ಶ್ರೀಕೃಷ್ಣನೂ, ಗಣೇಶನೂ ಕಾರಣರಾದರೆಂದು ತಾರಾನಾಥರೆಂಬ ಬೌದ್ಧವಿದ್ವಾಂಸರ ಉಕ್ತಿ ಗಳೂ, ಕೆಲವು ತಿಬೇತ್ ಗ್ರಂಥಗಳೂ ತಿಳಿಸುತ್ತವೆ. ಆದುದರಿಂದ ಬುದ್ಧಭಕ್ತಿ ಯನ್ನು ನಿರೂಪಿಸುವ ಮಹಾಯಾನಬೌದ್ಧಶಾಖೆಯೇ ಭಗವದ್ಭಕ್ತಿಯನ್ನು ಬೋಧಿಸುವ ಗೀತೆಯಿಂದ ಪ್ರಭಾವಿತವಾಗಿರಬೇಕು. ನಿರಾತ್ಮವಾದಿಗಳನ್ನು ಗೀತೆಯು ಖಂಡಿಸುತ್ತದೆ. "ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವ ರಮ್" ಆದರೆ ಇವರು ಬೌದ್ಧರೇ ಆಗಿರಬೇಕೆಂಬ ನಿಯಮವೇನಿಲ್ಲ. ಇನ್ನೂ ಅನೇಕ ಬಗೆಯ ನಾಸ್ತಿಕರು ಬುದ್ಧನಿಗೆ ಹಿಂದೆಯೂ ಇದ್ದರು. ಬುದ್ಧನು

ಹೇಳುವ ಅಭಿಪ್ರಾಯಗಳನ್ನೂ ಬುದ್ಧನೇ ಸೃಷ್ಟಿಸಲಿಲ್ಲ. ಅವನಿಗಿಂತ ಬಹು ಹಿಂದಿನಿಂದಲೂ ಇದ್ದುದನ್ನೇ ಅವನು ಕಂಡು ಹೇಳಿದನು. ಈ ಎಲ್ಲಾ ಮತಗಳೂ ಅನಾದಿಕಾಲದಿಂದಲೂ ಇದ್ದುವೇ ಆಗಿದ್ದು, ಕೆಲವೊಮ್ಮೆ ಅವು ಕೆಲವು ಮಹಾನಾಯಕರಿಂದ ಪ್ರಕಾಶಕ್ಕೆ ಬರುತ್ತವೆ–ಎಂಬುದಷ್ಟನ್ನೇ ನಾವು ಹೇಳಬಹುದು. ಆದುದರಿಂದ ಗೀತೆಯಲ್ಲಿ ಹೇಳಿರುವ ನಾಸ್ತಿಕದರ್ಶನದ ಉಲ್ಲೇಖದಿಂದ ಅದು ಬುದ್ಧನಿಗಿಂತಲೂ ಈಚಿನದೆಂದೇನೂ ಸಿದ್ಧವಾಗುವುದಿಲ್ಲ.

'ಪ್ರಸ್ಥಾನತ್ರಯ' ಎಂದರೆ ಉಪನಿಷತ್ತು, ಬ್ರಹ್ಮಸೂತ್ರ ಮತ್ತು ಗೀತೆ. ಇವುಗಳಲ್ಲಿ ಕಾಲದೃಷ್ಟಿಯಿಂದ ಗೀತೆಗೆ ಯಾವ ಸ್ಥಾನ? ಎಂದರೆ ಗೀತೆಯು ಉಪನಿಷತ್ತುಗಳ ಸಾರವನ್ನು ಸಂಗ್ರಹಿಸಿ ತನ್ನನ್ನು ಉಪನಿಷತ್ ಎಂದು ಕರೆದುಕೊಳ್ಳುತ್ತದೆ. ಕೆಲವು ಉಪನಿಷತ್ತುಗಳು ಸಾಂಖ್ಯವನ್ನು ಹೇಳುತ್ತವೆ. ಕೆಲವು ಯೋಗವನ್ನು ಹೇಳುತ್ತವೆ. ಕೆಲವು ಭಕ್ತಿಯನ್ನು ಹೇಳುತ್ತವೆ. ಆದರೆ ಗೀತೆಯು ಇವುಗಳೆಲ್ಲವನ್ನೂ ಸಾರಾಂಶವಾಗಿ ಕ್ರೋಡೀಕರಿಸುತ್ತದೆ. ಆದುದರಿಂದ ಗೀತೆಯು "ಉಪನಿಷತ್ ಗೋವುಗಳನ್ನು ಗೋಪಾಲಬಾಲನು ಕರೆದು ಬರಿಸಿದ ಅಮೃತ" ಎಂದು ನಿರ್ವಿವಾದವಾಗಿ ಒಪ್ಪಬಹುದು.

ಆದರೆ ಬ್ರಹ್ಮಸೂತ್ರದ ವಿಷಯದಲ್ಲಿ ಹಾಗಲ್ಲ. ಗೀತೆಯಲ್ಲಿ "**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ**'' ಎಂಬ ವಾಕ್ಯದಲ್ಲಿ ಬ್ರಹ್ಮಸೂತ್ರದಲ್ಲಿ ಉಲ್ಲೇಖಿಸಿರುವುದರಿಂದ ಗೀತೆಯು ಆ ವೇದಾಂತಸೂತ್ರಗಳಿಗಿಂತ ಈಚಿನದೆಂದು ಕೆಲವರು ಹೇಳುತ್ತಾರೆ. ಆದರೆ ಅಲ್ಲಿ ಹೇಳಲ್ಪಟ್ಟಿರುವ ಬ್ರಹ್ಮಸೂತ್ರಪದಗಳು ಬಾದರಾಯಣರ ಸೂತ್ರಗಳಲ್ಲ, ಉಪನಿಷತ್ತುಗಳಲ್ಲಿ ನಾನಾಕಡೆಗಳಲ್ಲಿ ಬರುವ ಬ್ರಹ್ಮಬೋಧಕವಾಕ್ಯಗಳು ಎಂದು ಕೆಲವರು ವ್ಯಾಖ್ಯಾನಮಾಡುತ್ತಾರೆ. ಆದರೆ ಆ ವಾಕ್ಯಗಳನ್ನು ಹೇತುಪೂರ್ವಕವಾಗಿ ನಿಶ್ಚಯಿಸಿರುವುದು ಬಾದರಾಯಣರ ವೇದಾಂತಸೂತ್ರಗಳೇ ಆಗಿರುವುದರಿಂದ ಅವು ಗೀತೆಗಿಂತ ಹಿಂದಿನ ಕಾಲದವು ಎಂದೂ ವಾದಿಸಬಹುದು.

ಬ್ರಹ್ಮಸೂತ್ರವೇ "ಸ್ಮೃತೇಶ್ಚ"; "ಅಪಿ ಚ ಸ್ಮರ್ಯತೇ" ಮುಂತಾದ ಕಡೆಗಳಲ್ಲಿ ಭಗವದ್ಗೀತೆಯನ್ನು ಉಲ್ಲೇಖಿಸುತ್ತದೆ. ಆದುದರಿಂದ ಗೀತೆ ವೇದಾಂತಸೂತ್ರಕ್ಕಿಂತಲೂ ಹಿಂದಿನದು–ಎಂದು ಕೆಲವರು ಹೇಳುತ್ತಾರೆ.

ಬ್ರಹ್ಮಸೂತ್ರವನ್ನು ರಚಿಸಿದವರೇ ಮೂಲಭಾರತಕ್ಕೂ ಗೀತೆಗೂ ಈಗಿನ ಸ್ವರೂಪವನ್ನು ಕೊಟ್ಟರು. ಆದುದರಿಂದ ಗೀತೆಯ ವಿಷಯವೂ ಬರುವುದು ಸಮಂಜಸವಾಗಿದೆ ಎಂದು ಎರಡುಪಕ್ಷಗಳಿಗೂ ಹೊಂದಿಕೆಯಾಗುವ ಯುಕ್ತಿಯನ್ನು ಹೂಡುವವರೂ ಇದ್ದಾರೆ. ಇವುಗಳ ಪೌರ್ವಾಪರ್ಯಗಳ ವಿಶೇಷ ವಿವೇಚನೆಯಿಂದ ನಮಗೆ ಹೆಚ್ಚುಲಾಭವಿಲ್ಲ ಎಂದಷ್ಟನ್ನೇ ನಾವು ಹೇಳುತ್ತೇವೆ.

## ಗೀತೆಯ ಮೇಲಿನ ಭಾಷ್ಯಗಳು

ಭಗವದ್ಗೀತೆಯನ್ನು ಆಚಾರ್ಯರು ಕೆಲವು ಕಡೆ ಸ್ಮೃತಿಯೆಂದು ಕರೆದಿದ್ದರೂ ಪ್ರಾಮಾಣ್ಯದ ವಿಷಯದಲ್ಲಿ ಅದು ಶ್ರುತಿಯಷ್ಟೇ ಪ್ರಧಾನ ವೆಂದು ಪರಿಗಣಿಸಲ್ಪಟ್ಟಿದೆ. ಅದರ ಶಕ್ತಿ, ಸೌಂದರ್ಯ, ಜನಪ್ರಿಯತೆ ಇವುಗಳಿಂದ ಎಲ್ಲಾ ಆಚಾರ್ಯರೂ ಪ್ರಭಾವಿತರಾಗಿ ತಮ್ಮ-ತಮ್ಮ ಮತ ಸಿದ್ಧಾಂತಗಳು ಅದಕ್ಕೆ ಅನುಗುಣವಾಗಿವೆಯೆಂದು ತೋರಿಸಲು ಅದರ ಮೇಲೆ ಭಾಷ್ಯಗಳನ್ನು ರಚಿಸಿದ್ದಾರೆ. ಈ ಭಾಷ್ಯಗಳಲ್ಲಿ ಇಲ್ಲಿಯವರೆಗೆ ಪೂರ್ಣವಾಗಿ ದೊರೆತಿರುವ ಗ್ರಂಥಗಳಲ್ಲಿ ಅತ್ಯಂತಪ್ರಾಚೀನವಾದುದು ಶ್ರೀ ಶಂಕರಾಚಾರ್ಯರ ಭಾಷ್ಯವೇ. ಆದರೂ ಶ್ರೀ ಶಂಕರಾಚಾರ್ಯರು ತಮಗಿಂತ ಹಿಂದೆ ಇದ್ದ ಗೀತಾಭಾಷ್ಯಗಳನ್ನು ಉಲ್ಲೇಖಿಸುವುದರಿಂದ ಅವರಿಗಿಂತ ಬಹು ಹಿಂದೆಯೇ ಇದಕ್ಕೆ ಭಾಷ್ಯಗಳು ರಚಿತವಾಗಿದ್ದುವೆಂಬುದು ನಿರ್ವಿವಾದ.

ಶ್ರೀ ಶಂಕರಾಚಾರ್ಯರ ಕಾಲ ಕ್ರಿ.ಶ. 610 ಅಥವಾ 710ರಿಂದ ಮೂವತ್ತೆರಡುವರ್ಷಗಳ ಕಾಲ ಎಂದು ಆಧುನಿಕವಿದ್ವಾಂಸರ ಮತ. ಇವರು "ಕರ್ಮಯೋಗದಿಂದ ಚಿತ್ತವು ಶುದ್ಧವಾಗುತ್ತದೆ. ಆದರೆ ಸರ್ವಕರ್ಮ ಸಂನ್ಯಾಸಪೂರ್ವಕವಾದ ಆತ್ಮಜ್ಞಾನದಿಂದಲೇ ಮುಕ್ತಿ ; ನಿರ್ಗುಣವಾದ ಬ್ರಹ್ಮ ವೊಂದೇ ಸತ್ಯ, ಜಗತ್ತು ಮಿಥ್ಯಾ"–ಎಂಬ ಅಭಿಪ್ರಾಯವುಳ್ಳ ಅದ್ವೈತ ಸಿದ್ಧಾಂತಕ್ಕೆ ಹೊಂದಿಕೆಯಾಗುವಂತೆ ಬ್ರಹ್ಮಸೂತ್ರ-ಉಪನಿಷತ್ತುಗಳಿಗೆ ಹೇಗೋ ಹಾಗೆ ಭಗವದ್ಗೀತೆಗೂ ಭಾಷ್ಯವನ್ನು ಬರೆದರು. ಆ ತರುವಾಯ ಸುಮಾರು 250 ವರ್ಷಗಳ ಮೇಲೆ ಜನಿಸಿದ ಶ್ರೀ ರಾಮಾನುಜಾಚಾರ್ಯರು ವಿಶಿಷ್ಟಾದ್ವೈತಸಿದ್ಧಾಂತಕ್ಕೆ ಅನುಗುಣವಾಗುವಂತೆ ಗೀತೆಗೆ ಭಾಷ್ಯವನ್ನು ಬರೆದರು. "ಜ್ಞಾನಯೋಗ–ಕರ್ಮಯೋಗಗಳಿಂದ ಅನುಗೃಹೀತವಾದ

ಭಕ್ತಿಯೋಗದಿಂದ ಭಗವಂತನನ್ನು ಆರಾಧಿಸಬೇಕು. ಫಲ ಮುಂತಾದುವುಗಳ ಸಂಗವನ್ನು ತೊರೆದು ಈಶ್ವರಾರ್ಪಣಬುದ್ಧಿಯಿಂದ ವರ್ಣಾಶ್ರಮೋಕ್ತ ಧರ್ಮದಿಂದ ಅನಂತಕಲ್ಯಾಣಗುಣಪರಿಪೂರ್ಣನಾದ ಭಗವಂತನನ್ನಾರಾಧಿಸಿದರೆ ಮುಕ್ತಿಯು ದೊರೆಯುತ್ತದೆ. ಜೀವ-ಜಗತ್ತು ಎರಡೂ ಭಗವಂತನಿಗೆ ಶರೀರದಂತೆ ; ಅವುಗಳಿಂದ ವಿಶಿಷ್ಟನಾಗಿರುವ ಈಶ್ವರನೊಬ್ಬನೇ ಇದ್ದಾನೆ" ಎಂಬುದು ಅವರ ದರ್ಶನದ ಸಾರ. ಅನಂತರ ಕ್ರಿ.ಶ. 1120ರಲ್ಲಿ ಜನಿಸಿದ ಶ್ರೀಮಧ್ವಾಚಾರ್ಯರ ಭಾಷ್ಯವು ದ್ವೈತಮತಕ್ಕೆ ಅನುಗುಣವಾಗಿದೆ. "ಜೀವ-ಜಗತ್ತು-ಬ್ರಹ್ಮ ಇವುಗಳಲ್ಲಿ ಪಂಚಭೇದಗಳು. ಇವುಗಳಿಗೆ ಎಂದಿಗೂ ಐಕ್ಯವಿಲ್ಲ. ಉತ್ತಮಜೀವಿಗಳು ಭಕ್ತಿಯೋಗದಿಂದ ಕಲ್ಯಾಣಗುಣಪರಿಪೂರ್ಣನಾದ ಭಗವಂತನನ್ನಾರಾಧಿಸಿ ಮೋಕ್ಷಹೊಂದುತ್ತಾರೆ. ಗೀತೆಗೆ ಭಕ್ತಿಯೋಗದಲ್ಲಿಯೇ ಪರಮತಾತ್ಪರ್ಯ" ಎನ್ನುತ್ತದೆ ಈ ಮತ. ಕ್ರಿ.ಶ. 1401ರಲ್ಲಿ ಜನಿಸಿದ ಶ್ರೀ ವಲ್ಲಭಾಚಾರ್ಯರ ಗೀತಾಭಾಷ್ಯವು ಶುದ್ಧಾದ್ವೈತಮತಕ್ಕೆ ಅನುಗುಣವಾಗಿದೆ. "ಮಾಯಾರಹಿತವಾದ ಜೀವವೂ ಪರಬ್ರಹ್ಮವೂ ಒಂದೇ ಆದರೂ, ಜೀವವು ಬ್ರಹ್ಮದ ಅಂಶ. ಭಕ್ತಿಯಿಂದ ಉಂಟಾಗುವ ಪುಷ್ಟಿ ಅಥವಾ ಭಗವದನುಗ್ರಹದಿಂದಲೇ ಮುಕ್ತಿ" ಎಂಬುದು ಈ ಮತದ ಸಾರ. ತರು ವಾಯ ನಿಂಬಾರ್ಕರ ದ್ವೈತಾದ್ವೈತಸಂಪ್ರದಾಯಕ್ಕೆ ಸೇರಿದ ತತ್ತ್ವಪ್ರಕಾಶಿಕಾ ಎಂಬ ಗೀತಾಭಾಷ್ಯವನ್ನು ಕೇಶವಕಾಶ್ಮೀರೀಭಟ್ಟರು ರಚಿಸಿದರು. ಇವರೆಲ್ಲರೂ ವೈದಿಕಸಂಪ್ರದಾಯಕ್ಕೆ ಸೇರಿದವರೇ. ಇವರ ಶಿಷ್ಯ-ಪ್ರಶಿಷ್ಯರು ತಮ್ಮ-ತಮ್ಮ ಆಚಾರ್ಯರ ಭಾಷ್ಯಗಳಿಗೆ ಟೀಕಾ-ಟಿಪ್ಪಣಿಗಳನ್ನು ಬರೆದರು. ಅದ್ವೈತ ಸಂಪ್ರದಾಯದ ಪೈಶಾಚಭಾಷ್ಯ, ಆನಂದಗಿರಿಟೀಕಾ, ವಿಶಿಷ್ಟಾದ್ವೈತ ಸಂಪ್ರದಾಯದ ಗೀತಾತಾತ್ಪರ್ಯಚಂದ್ರಿಕಾ, ದ್ವೈತಸಂಪ್ರದಾಯದ ಪ್ರಮೇಯದೀಪಿಕಾ, ಯೋಗಪ್ರಧಾನವಾದ ಜ್ಞಾನೇಶ್ವರೀಟೀಕೆ ಮುಂತಾದುವುಗಳು ಇದಕ್ಕೆ ಉದಾಹರಣೆಗಳು. ಕಾಲಕ್ರಮದಲ್ಲಿ ಗೀತೆಯು ಪಾಶ್ಚಾತ್ಯ ವಿದ್ವಾಂಸರನ್ನೂ ಆಕರ್ಷಿಸಿತು. ಇವರಲ್ಲಿ ಕೆಲವರ ಅಭಿಪ್ರಾಯಗಳನ್ನು ಹಿಂದೆಯೇ ಹೇಳಿದೆ. ಭಾರತದ ಗವರ್ನರ್ ಜನರಲ್ ಆಗಿದ್ದ ವಾರನ್ ಹೇಸ್ಟಿಂಗ್ಸನು ಗೀತೆಯ ಮೊದಲನೇ ಇಂಗ್ಲಿಷ್ ಅನುವಾದಮಾಡಿಸಿ– ``These will survive when the British Dominion in India

shall have long ceased to exist and when the sources which it once yielded of wealth and power are lost to rememberance" ಎಂದು ಅದನ್ನು ಪ್ರಶಂಸಿಸಿದನು. ಜರ್ಮನ್‌ಪಂಡಿತ ಮ್ಯಾಕ್ಸ್‌ಮೂಲರನ ಸಮಿತಿಯವರೂ ಡಾ|| ಆನಿಬೆಸೆಂಟ್‌ರವರೂ ತಮ್ಮ ವ್ಯಾಖ್ಯಾನಸಹಿತ ಗೀತೆಯನ್ನು ಪ್ರಕಾಶಪಡಿಸಿದರು. ಭಾರತದ ಇತ್ತೀಚಿನ ರಾಷ್ಟ್ರನಾಯಕರಾಗಿದ್ದ ಶ್ರೀ ಅರವಿಂದರು, ಬಾಲಗಂಗಾಧರ ತಿಲಕ್, ಮಹಾತ್ಮಾಗ್ರಾಂಧಿ–ಇವರು ಭಗವದ್ಗೀತೆಗೆ ಕರ್ಮಯೋಗದಲ್ಲಿಯೇ ತಾತ್ಪರ್ಯ, ಅನಾಸಕ್ತಿಯೋಗದಲ್ಲಿ ತಾತ್ಪರ್ಯ ಎಂದು ಮೊದಲಾಗಿ ಆಶಯ ವನ್ನು ವ್ಯಕ್ತಪಡಿಸುತ್ತಾ ಗೀತಾಭಾಷ್ಯಗಳನ್ನು ಬರೆದರು. ಶ್ರೀ ರಾಧಾಕೃಷ್ಣನ್ ರವರ ಇಂಗ್ಲಿಷ್ ಗೀತಾನುವಾದ ವ್ಯಾಖ್ಯಾನಗಳೂ ಪ್ರಸಿದ್ಧವಾಗಿವೆ.

ಹೀಗೆ ಭಗವದ್ಗೀತೆಗೆ ಸಂಪ್ರದಾಯದೃಷ್ಟಿಗಳಿಂದ ಭಾಷ್ಯಬರೆದಿರು ವವರು, ಸ್ವತಂತ್ರವಾಗಿ ಭಾಷ್ಯಬರೆದವರು, ಸಂಪ್ರದಾಯ ಮತ್ತು ಸ್ವತಂತ್ರ ವಿಚಾರಗಳೆರಡನ್ನೂ ಸೇರಿಸಿ ಭಾಷ್ಯಬರೆದವರು–ವಿಭಿನ್ನಮಾರ್ಗಗಳ ವಿದ್ವಾಂಸರುಂಟು. ಗೀತೆಗೆ ಮನಸ್ಸಿಗೆ ಬಂದಂತೆ ಅರ್ಥಮಾಡುವ ಜನರೂ ಬರೆದುಬಂದರು.

**ಪರಿ ಅಜಿ ಭಗವಂತಜೀ । ಯಾ ಕಲಿಯುಗಾ ಮಾಜೀ ।ಜೋತೋ ಗೀತಾರ್ಥಯೋಜೀ ಮತಾನುರೂಪ್** ( ಓ ಭಗವಂತ! ಈ ಕಲಿಯುಗದಲ್ಲಿ ಪ್ರತಿಯೊಬ್ಬನೂ ತನ್ನ ಮನಸ್ಸಿಗೆ ಬಂದಂತೆ ಗೀತೆಯ ಅರ್ಥವನ್ನು ಮಾಡುವನಲ್ಲಾ! ) ಎಂದು ಇದನ್ನು ಕಂಡು ವಾಮನನೆಂಬ ಪಂಡಿತ ಶೋಕಿಸುತ್ತಾನೆ.

ಇಷ್ಟೆಲ್ಲಾ ಭಾಷ್ಯ-ವ್ಯಾಖ್ಯಾನಗಳಲ್ಲಿ ಯಾವುದು ಸರಿ? ಯಾವುದು ತಪ್ಪು–ಎಂದು ನಿರ್ಣಯಿಸುವುದು ಕಷ್ಟ. **"ಪುರಾಣಮಿತ್ಯೇವ ನ ಸಾಧು ಸರ್ವಂ"** (ಹಳೆಯದೆಂಬ ಕಾರಣದಿಂದಲೇ ಎಲ್ಲವೂ ಸರಿಯಲ್ಲ )–ಎಂದು ಕಾಳಿದಾಸ ಹೇಳುತ್ತಾನೆ. ಹಾಗೆಯೇ **"ನವೀನಮಿತ್ಯೇವ ನ ಚಾಪ್ಯ ವದ್ಯಂ"** (ಹೊಸದೆಂಬ ಕಾರಣದಿಂದಲೇ ಎಲ್ಲವೂ ಸರಿಯಲ್ಲ )–ಎಂಬ ಸತ್ಯವೂ ಅದರಲ್ಲಿ ಅಡಕವಾಗಿದೆ. ಪ್ರಾಚೀನತೆ–ನವೀನತೆಗಳು ಗ್ರಂಥದ ಸಾಧುತ್ವಕ್ಕೆ ಪ್ರಮಾಣಗಳಲ್ಲ. ಆದರೆ ಇಷ್ಟು ಹೇಳಬಹುದು. ಋಷಿ

ಸಂಪ್ರದಾಯದ ಸಂಸ್ಕಾರವೇ ಇಲ್ಲದವರು ಬರೆದ ಭಾಷ್ಯಗಳಿಗಿಂತಲೂ ಅದಕ್ಕೆ ಸೇರಿದವರ ಭಾಷ್ಯಗಳು ಹೆಚ್ಚುಪ್ರಾಮಾಣಿಕ. ಸಾಂಪ್ರದಾಯಿಕ ಆಚಾರ್ಯ ರೆಲ್ಲರೂ ಪದ-ವಾಕ್ಯ-ಪ್ರಮಾಣಬದ್ಧವಾಗಿ ಮಾತನಾಡುವವರು. ತಮ್ಮ ತಮ್ಮ ಸಿದ್ಧಾಂತಗಳಿಗೆ ಹೊಂದುವಂತೆ ಗೀತೆಯ ಅರ್ಥವನ್ನು ಹೊರಡಿಸುವ ಅಭಿಸಂಧಿ ಅವರೆಲ್ಲರಲ್ಲೂ ಇದೆಯೆಂದೂ ಕಂಡುಬರುತ್ತದೆ. ಆದರೆ ಅವರು ಗೀತಾಸಂಪ್ರದಾಯಪರಂಪರೆಯಲ್ಲಿ ಬೆಳೆದುಬಂದವರು. ಅವರಲ್ಲಿ ಅನುಭಾವಿಗಳೂ ಉಂಟು. ಜ್ಞಾನಿಗಳ ಅನುಭವ–ಯುಕ್ತಿಗಳಿಗೆ ವಿರೋಧ ವಿಲ್ಲದ ಗುಣಭಾಗಗಳು ಯಾರ ಭಾಷ್ಯ–ಟೀಕೆಗಳಲ್ಲಿದ್ದರೂ ಅವುಗಳನ್ನು ಮಾನ್ಯಮಾಡುವುದು ಒಳ್ಳೆಯದು. ಸತ್ಯಾರ್ಥವು ಯಾರೊಬ್ಬರಲ್ಲಿಯೇ ಸೀಮಿತವಾಗಿರುತ್ತದೆ ಎಂಬ ಆಗ್ರಹವೂ ಇರಕೂಡದು. ಆದರೆ ಒಂದು ಆಗ್ರಹ ಇಟ್ಟುಕೊಳ್ಳಬಹುದು. ಅದೇನೆಂದರೆ ಗೀತಾಚಾರ್ಯನಾದ ಶ್ರೀಕೃಷ್ಣನೂ ಆತನ ತಾದಾತ್ಮ್ಯವುಳ್ಳ ಜ್ಞಾನಿ-ವಿಜ್ಞಾನಿ ಶ್ರೀ ವ್ಯಾಸರೂ ಅದರ ಬಗ್ಗೆ ಸರ್ವಥಾ ಪ್ರಾಮಾಣಿಕರು. '**ಗೀತಾರ್ಥಂ ಸಕಲಂ ವೇತ್ತಿ ಸರ್ವಜ್ಞೋ ದೇವಕೀಸುತಃ। ವೇದವ್ಯಾಸೋಽಪಿ ಭಗವಾನನ್ಯೇ ತದ್ಗುಣಯೋಗತಃ**''

ಈಶ್ವರನ ಅಸ್ತಿತ್ವದಲ್ಲಿ ವಿಶ್ವಾಸವಿಡಬೇಕು. ಅವನ ಪ್ರೀತಿಗಾಗಿ ಸತ್ಕರ್ಮಗಳನ್ನಾಚರಿಸಬೇಕು. ಆತ್ಮಗುಣನಿಷ್ಠರಾಗಿ ಸದಾಚಾರಸಂಪನ್ನ ರಾಗಿರಬೇಕು. ಅವನನ್ನು ಸರ್ವಭಾವದಿಂದಲೂ ಶರಣುಹೊಂದಿ, ನಿಶ್ಚಲ ಭಕ್ತಿಯಿಂದ ಅವನನ್ನು ಸೇವಿಸಿ ಪರಮಪುರುಷಾರ್ಥವನ್ನು ಪಡೆಯಬೇಕು– ಎಂಬಷ್ಟು ವಿಷಯಗಳು ಎಲ್ಲಾ ಆಚಾರ್ಯರಿಗೂ ಸಾಧು-ಸಂತರಿಗೂ ಐಕ ಮತ್ಯದಿಂದ ಸಮ್ಮತವಾಗಿರುವುದರಿಂದ, ಅವುಗಳನ್ನು ಸಾಧಿಸಿ ಬ್ರಾಹ್ಮೀಸ್ಥಿತಿ ಯನ್ನು ಪಡೆದಾಗ, ಗೀತಾಚಾರ್ಯ ಶ್ರೀಕೃಷ್ಣನು ಸಾಕ್ಷಾತ್ತಾಗಿಯೇ ತನ್ನ ಹೃದಯಾರ್ಥವನ್ನು ಅನುಭವಕ್ಕೆ ಬರುವಂತೆ ಉಪದೇಶಿಸುವನು. ಆ ಸಂಸ್ಕಾರಕ್ಕೆ ಪೋಷಕವಾಗುವ ಮಾತುಗಳನ್ನು ಹೇಳಿರುವ ಎಲ್ಲಾ ಆಚಾರ್ಯ ಭಾಷ್ಯಗಳಿಗೂ "**ಯೈರಿಮೇ ಗುರುಭಿಃ ಪೂರ್ವಂ ಪದವಾಕ್ಯಪ್ರಮಾಣತಃ । ವ್ಯಾಖ್ಯಾತಾಸ್ಸರ್ವವೇದಾನ್ತಾಸ್ತಾನ್ನಿತ್ಯಂ ಪ್ರಣತೋಽಸ್ಮ್ಯಹಮ್**'' ಎಂದು ಕೃತಜ್ಞತೆಯಿಂದ ಮಣಿದು ಅವುಗಳ ಸದಾಶಯವನ್ನು ಗ್ರಹಿಸೋಣ. ಬ್ರಹ್ಮಾಪರೋಕ್ಷಜ್ಞಾನಿಗಳು ಯಾವುದೇ ಶಾಖಾ–ಸಂಪ್ರದಾಯಗಳ ಮಧ್ಯ ದಲ್ಲಿ ಬೆಳೆದಿದ್ದರೂ ಅವರು ಪೂಜ್ಯರು."

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯನ್ತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥**

ಎಂಬ ಗೀತಾವಾಕ್ಯದಿಂದ ಸೇವಿಸಲ್ಪಡಬೇಕಾದವರು. (ಆ ಸಂಸ್ಕಾರಕ್ಕೆ ಹೊಂದಿಕೆಯಾಗುವ ಭಾವ ಯಾವ ಆಚಾರ್ಯರಲ್ಲಿದ್ದರೂ ಅದನ್ನು ಗೌರವಿಸಿ ಗೀತಾರ್ಥವನ್ನು ತಿಳಿಯಾದ ರೀತಿಯಲ್ಲಿ ಯಥಾಮತಿ ಜನರ ಮುಂದಿಡುವ ಮಾರ್ಗವನ್ನು ಭಾರತ ದರ್ಶನ ಪ್ರಕಾಶನವು ಅನುಸರಿಸಿದೆ. ಪ್ರಸಿದ್ಧರಾದ ಆಚಾರ್ಯರ ಭಾಷ್ಯಗಳ ಭಾವವನ್ನೂ ಯಥೋಚಿತವಾದ ಅವಗಾಹನೆಗಾಗಿ ಗೀತಾರ್ಥವನ್ನೊಳಗೊಂಡ ಈ ಮೂರುಸಂಪುಟಗಳಲ್ಲಿ ಸಮರ್ಪಣೆ ಮಾಡಿದೆ.)

**ಗೀತೆಯ ವಿಷಯದಲ್ಲಿ ಕೆಲವು ಮುಖ್ಯ ಆಕ್ಷೇಪಗಳ ವಿಮರ್ಶೆ :**

ಭಗವದ್ಗೀತೆಯ ಬಗ್ಗೆ ಕೆಲವರು ಆಡಿರುವ ಹಗುರವಾದ ಮತ್ತು ಗಂಭೀರವಾದ ಕೆಲವು ಮುಖ್ಯ ಆಕ್ಷೇಪಗಳನ್ನು ಹಿಂದೆ ಉಲ್ಲೇಖಿಸಿದೆವು. ಅವುಗಳನ್ನು ಸಂಕ್ಷಿಪ್ತವಾಗಿ ಈಗ ವಿಮರ್ಶಿಸುತ್ತೇವೆ.

1. ಗೀತೆಯು ಜೀವಹಿಂಸೆಯ, ಮನುಷ್ಯಮಾರಣದ, ಯುದ್ಧ ಸಿದ್ಧಾಂತಕ್ಕೆ ಸಮರ್ಥಕವಾಗಿದೆ ಎಂಬುದು ಒಂದು ಆಕ್ಷೇಪ. **'ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ'** (ಯಾರನ್ನೂ ದ್ವೇಷಿಸುವು ದಿಲ್ಲ, ಎಲ್ಲ ಪ್ರಾಣಿಗಳಲ್ಲೂ ಸ್ನೇಹ-ಕರುಣೆಗಳುಳ್ಳವನಾಗಿರುತ್ತಾನೆ ಭಕ್ತ) ಎಂಬ ಒಳ್ಳೆಯ ಆದರ್ಶವನ್ನು ಎರಡು ಅರ್ಥಗಳಿಗೆ ಎಡೆಗೊಡದ ಸ್ಪಷ್ಟವಾದ ಭಾಷೆಯಲ್ಲಿ ಇಡುತ್ತಿರುವುದನ್ನು ಈ ಆಕ್ಷೇಪಕರು ಗಮನಿಸಬೇಕು. ತ್ರಿಕರಣ ಗಳಿಂದಲೂ ಯಾರಿಗೂ ಹಿಂಸೆಮಾಡಬಾರದೆಂಬ ಆದರ್ಶದ ವಿಷಯದಲ್ಲಿ ಯಾವ ಸಜ್ಜನರೂ ಭಿನ್ನಾಭಿಪ್ರಾಯ ಹೊಂದಿಲ್ಲ. ಆದರೆ ವ್ಯವಹಾರದಲ್ಲಿ ಕೆಲವರಿಗೆ ಕೆಲವೊಮ್ಮೆ ಅವರು ಸಾಧುಗಳೇ ಆಗಿದ್ದರೂ ಹಿಂಸೆ ಅನಿವಾರ್ಯ ವಾಗುತ್ತದೆ. ಗೃಹಸ್ಥರು–ಕುಟ್ಟುವುದು, ಅರೆಯುವುದು, ಅಗ್ನಿಯಲ್ಲಿ ಬೇಯಿ ಸುವುದು, ಗುಡಿಸುವುದು, ನೀರು ಮೊಗೆಯುವುದು ಎಂಬ ಐದು ಕ್ರಿಯೆಗಳಲ್ಲಿ ಹಿಂಸೆಯನ್ನು ಮಾಡಲೇಬೇಕಾಗುತ್ತದೆ–'ಪಂಚಸೂನಾ ಗೃಹಸ್ಥಸ್ಯ'. ಸಂನ್ಯಾಸಿಯೂ ಕೂಡ ತಿಳಿಯದೇ ಇರುವೆ ಮುಂತಾದ ಪ್ರಾಣಿಗಳನ್ನು ತುಳಿದು ಹಿಂಸೆಮಾಡಬಹುದು. ಇಂತಹ ಪಾಪಗಳಿಗೂ ಅವನು ಪರಿಹಾರ ಮಾಡಿಕೊಳ್ಳಬೇಕು ಎಂದು ಶಾಸ್ತ್ರವು ಹೇಳುತ್ತದೆ. ಯಾರು ಯಾವುದೇ

ಆಹಾರಸ್ವೀಕರಸಿದರೂ ಅದು ಅಂಶತಃ ಆದರೂ ಹಿಂಸೆಯೇ ಆಗುತ್ತದೆ. ನಾವು ಉಸಿರಾಡಿದರೂ ಅದರಿಂದ ಸಾಯುವ ಕ್ರಿಮಿ-ಕೀಟಗಳುಂಟು.

"ವ್ಯವಹಾರದಲ್ಲಿ ಪೂರ್ಣವಾದ ಅಹಿಂಸೆಯಲ್ಲಿರುವುದು ಯಾರಿಗೂ ಸಾಧ್ಯವಿಲ್ಲ. ಆಹಾರ ತೆಗೆದುಕೊಂಡರೆ ಹಿಂಸೆ, ತೆಗೆದುಕೊಳ್ಳದಿದ್ದರೂ ಹಿಂಸೆ; ಉಸಿರಾಡಿದರೂ ಹಿಂಸೆ, ಉಸಿರಾಡದಿದ್ದರೂ ಹಿಂಸೆ ; ಹಿಂಸೆಮಾಡಬೇಡ– ಎಂಬ ಮಾತು ಕೇಳಿದರೂ ಕೆಲವು ಕ್ರಾಂತಿಕಾರರಿಗೆ ಹಿಂಸೆಯಾಗುತ್ತದೆ. ಆದುದರಿಂದ ಏನು ಮಾಡೋಣ? ಎಲ್ಲರಿಗೂ ಬೇಕಾದುದು ಆನಂದ, ಶಾಂತಿ. ಪೂರ್ಣಾನಂದ, ಪರಾಶಾಂತಿಮಾರ್ಗಕ್ಕೆ ಅನುಗುಣವಾಗಿ ನಡೆಯು ವುದೇ, ಆತ್ಮಭಾವಕ್ಕೆ ಹಿಂಸೆಯಾಗದಂತೆ ನಡೆಯುವುದೇ ಅಹಿಂಸಾಮಾರ್ಗ. ವ್ಯವಹಾರದಲ್ಲಿಯೂ ಸಾಧ್ಯವಾದಷ್ಟು ಅಹಿಂಸೆಯಿಂದ ಇರಬೇಕು. **"ಅದ್ರೋಹೇಣೈವ ಭೂತಾನಾಂ ಅಲ್ಪದ್ರೋಹೇಣ ವಾ ಪುನಃ"** ಎಂದು ಶ್ರೀರಂಗಮಹಾಗುರುಗಳು ನುಡಿದ ಸತ್ಯವಾಣಿಯನ್ನು ಇಲ್ಲಿ ಸ್ಮರಿಸುತ್ತೇವೆ. ಆಹಾರ ಮುಂತಾದುವುಗಳಿಗಾಗಿ ಹಿಂಸೆ ಅನಿವಾರ್ಯ. ಆದರೆ ಮನುಷ್ಯ ಮನುಷ್ಯರೊಡನೆ ಯುದ್ಧಮಾಡುವುದು ಅನಿವಾರ್ಯವೇನೂ ಅಲ್ಲವಲ್ಲವೇ? ಎಂದರೆ ಯುದ್ಧವನ್ನು ತಡೆಗಟ್ಟಲೂ ಸಾಧ್ಯವಾದಷ್ಟು ಪ್ರಯತ್ನಿಸಬೇಕು. ಅದಕ್ಕಾಗಿಯೇ ದಂಡೋಪಾಯವನ್ನು ಕೊನೆಯ ಉಪಾಯವನ್ನಾಗಿ ಹೇಳಿರುವುದು. ಸರ್ವಪ್ರಯತ್ನಮಾಡಿದರೂ ಯುದ್ಧವನ್ನು ನಿಲ್ಲಿಸಲಾಗದಿದ್ದರೆ ಧರ್ಮರಕ್ಷಣೆಗಾಗಿ ಅಧಿಕೃತರಾದವರು ಕರ್ತವ್ಯದೃಷ್ಟಿಯಿಂದ ದುಷ್ಟರಿಗೆ ವಿರುದ್ಧವಾಗಿ ಯುದ್ಧಮಾಡಲೇಬೇಕಾಗುವುದು. ಮಹಾಭಾರತದಲ್ಲಿ ಅರ್ಜುನನು ತೊಡಗಿದ್ದ ಯುದ್ಧವೂ ಅದೇ ರೀತಿಯದೇ. ತಮಗೆ ನ್ಯಾಯ ವಾಗಿ ಅರ್ಧರಾಜ್ಯಸಲ್ಲಬೇಕಾಗಿದ್ದರೂ 'ಐದು ಗ್ರಾಮಗಳನ್ನಾದರೂ ಕೊಟ್ಟು ನೆಮ್ಮದಿಯಿಂದಿರು. ಯುದ್ಧವು ಬೇಡ' ಎಂದು ಪಾಂಡವರು ಕೇಳಿದ್ದರು. ಆದರೆ 'ಸೂಚಿಮೊನೆಯಷ್ಟು ಭೂಮಿಯನ್ನೂ ಕೊಡುವುದಿಲ್ಲ ಯುದ್ಧವಿಲ್ಲದೆ.' **'ಸೂಚ್ಯರ್ಧಂ ನೈವ ದಾಸ್ಯಾಮಿ ವಿನಾ ಯುದ್ಧೇನ ಕೇಶವ'** ಎಂಬ ದುರಹಂಕಾರದ ಪಟ್ಟುಹಿಡಿದಿದ್ದ ದುಷ್ಟ ದುರ್ಯೋಧನ. ಹೀಗಿರುವಾಗ ಯುದ್ಧಕ್ಕೆ ಅಧಿಕೃತನಾಗಿರುವ ವೀರಕ್ಷತ್ರಿಯನಾದ ಅರ್ಜುನನು ಆ ಯುದ್ಧ ಮಾಡುವುದು ತಪ್ಪೇನಲ್ಲ. ಅಷ್ಟೇ ಅಲ್ಲ, ಅವನು ಅದನ್ನು ಮಾಡದಿದ್ದರೆ

ಕರ್ತವ್ಯಚ್ಯುತಿಯೇ ಆಗುತ್ತದೆ. ಅವನ ಸಹಜಧರ್ಮಕ್ಕೆ ಹಾನಿ, ಸಾಧುಗಳಿಗೆ ಹಾನಿ, ಧರ್ಮರಾಜನಿಗೆ ನಿರಾಶೆಯನ್ನುಂಟುಮಾಡಿದ ಧರ್ಮಹಾನಿ– ಆಗುತ್ತಿತ್ತು.

ಆದುದರಿಂದ ಗೀತೆಯು ಅನಿವಾರ್ಯವಾದಾಗ ಯುದ್ಧಮಾಡ ಬೇಕೆಂಬ ಆಶಯವುಳ್ಳದ್ದೇ ಹೊರತು ಅದನ್ನು ಸರ್ವರಿಗೂ ನಿತ್ಯನೀತಿಯೆಂದು ಸಮರ್ಥಿಸುವುದಿಲ್ಲ. ಹಾಗೆ ಯುದ್ಧಮಾಡಬೇಕಾಗಿ ಬಂದರೂ ಆತ್ಮದ ಅಮರತ್ವವನ್ನು ಅರಿತು ಧರ್ಮರಕ್ಷಣೆಯೆಂಬ ಕರ್ತವ್ಯದೃಷ್ಟಿಯಿಂದ ಈಶ್ವರ ಸೇವಾರೂಪವಾಗಿ ಅವನ ಸ್ಮರಣೆಯೊಡನೆ **"ಮಾಮನುಸ್ಮರ ಯುಧ್ಯ ಚ"** ಎಂಬ ಭಾವದಿಂದ ಯುದ್ಧಮಾಡಿದರೆ ಪಾಪಸ್ಪರ್ಶವಿಲ್ಲ. ಧರ್ಮ ಸಿದ್ಧಿಯೇ ಆಗುತ್ತದೆಯೆಂಬ ವಿವೇಕದೃಷ್ಟಿಯನ್ನು ಕೊಡುವ ಗೀತೋಪದೇಶದ ಪ್ರಕಾಶಕ್ಕೆ ಕಣ್ಣುಮುಚ್ಚಿಕೊಳ್ಳಬಾರದು–ಎಂದಷ್ಟೇ ಸಮಾಧಾನವನ್ನು ಇಲ್ಲಿ ಸಂಕ್ಷೇಪವಾಗಿ ಹೇಳುತ್ತೇವೆ. ಧರ್ಮಯುದ್ಧದಲ್ಲಿ ವಿರೋಧಪಕ್ಷದಲ್ಲಿರು ವವರು ಗುರು-ಹಿರಿಯರಾದರೂ, ಬಂಧು-ಮಿತ್ರರಾದರೂ ಅವರಲ್ಲಿ ಗೌರವ ಕಳೆದುಕೊಳ್ಳದೆ "ದಂಡಿನಲ್ಲಿ ಸೋದರಮಾವನೇ?" ಎಂಬ ನ್ಯಾಯದಿಂದ ಕರ್ತವ್ಯದೃಷ್ಟಿ ಯಿಂದ ಯುದ್ಧಮಾಡಬೇಕಾಗುವುದು ಎಂಬುದನ್ನೂ ಮರೆಯಬಾರದು. ಇದಲ್ಲದೆ ಹೇಗಾದರೂ ಯುಕ್ತಿವಾದಗಳನ್ನು ಹೇಳಿ ಅರ್ಜುನನಿಂದ ಯುದ್ಧ ಮಾಡಿಸಬೇಕು ಎಂಬುದು ಶ್ರೀಕೃಷ್ಣನ ಆಶಯವಲ್ಲ. ಅವನಿಗೆ ವಿವೇಕ ವನ್ನು ಕೊಡಬೇಕು. ಅದರ ಬೆಳಕಿನಲ್ಲಿ ಯುದ್ಧಮಾಡಬೇಕೋ ಬೇಡವೋ ನೋಡಿಕೊಂಡು ಅದರಂತೆ ನಡೆಯಬೇಕು ಪಾರ್ಥ ಎನ್ನುವುದು ಗೀತಾಚಾರ್ಯನ ಆಶಯ.

ಸ್ನೇಹ-ಕಾರುಣ್ಯ-ವೈರಾಗ್ಯ-ಭೂತದಯೆಗಳಿಂದ ಸಂಪನ್ನನಾಗಿ ಯುದ್ಧ ವನ್ನು ನಿಲ್ಲಿಸುವೆನೆಂದು ಹೇಳಿದ ಪಾರ್ಥನೇ ತತ್ತ್ವಬೋಧನೆಗೆ ಅಧಿಕಾರಿ ಎಂಬ ಮಾತೂ ಪಾಮರರಮಣೀಯ. ಏಕೆಂದರೆ ಅರ್ಜುನನು ಆಗ ತೋರಿಸಿದ ದಯೆಯು **"ಅಸ್ಥಾನ ಸ್ನೇಹ–ಕಾರುಣ್ಯ"**. ಅಪರಾಧಿಯನ್ನು ಗಲ್ಲಿಗೇರಿಸಬೇಕೆಂದು ರಾಜನಿಂದ ಆಜ್ಞಪ್ತನಾದ ಅಧಿಕಾರಿಯು ಮಹಾಪರಾ ಧಿಯ ಮೇಲೆ ಸ್ನೇಹ-ಕರುಣೆ ತೋರುವೆನೆಂದು ಅವನನ್ನು ಬಿಟ್ಟುಬಿಡುವಂತೆ. ಸುಸ್ಥಾನದಲ್ಲಿ ಸ್ನೇಹ-ಕಾರುಣ್ಯ ತೋರಿಸುವ ಆದರ್ಶವನ್ನು **"ಸರ್ವಭೂತ ಸುಹೃತ್"** ಆಗಿರುವ ವಾಸುದೇವನೇ ಮುಂದೆ ಉಪದೇಶಿಸುವನು.

ತತ್ತ್ವಬೋಧನೆಮಾಡುವವನು ಧೀರನಾಗಿರಬೇಕು. ನಿಸ್ಸಂಶಯನಾಗಿರಬೇಕು. ಅಂಗೈನೆಲ್ಲಿಯಂತೆ ತತ್ತ್ವವನ್ನು ಕಂಡು ಇತರರಿಗೆ ಉಪದೇಶಿಸುವವನಾಗಿರಬೇಕು. ಅರ್ಜುನನಾದರೋ–"ನಾನು ಧರ್ಮಸಂಮೂಢಚೇತನನಾಗಿದ್ದೇನೆ. ನನಗೆ ಯಾವುದು ಶ್ರೇಯಸ್ಸೋ ಅರಿಯೆನು ; ಹೇಳು" ಎಂದು ಸಂಶಯಗ್ರಸ್ತನಾಗಿ ಅಳ್ಳೆದೆಯಿಂದ ಕೂಡಿರುವಾಗ ಅವನನ್ನು ತತ್ತ್ವಬೋಧನೆಗೆ ಅಧಿಕಾರಿ ಎನ್ನುವುದು ಅಧಿಕೃತವಾದ ಮಾತೇ ಆಗುವುದಿಲ್ಲ. ತತ್ತ್ವಜ್ಞನಾಗಿ ಅದರ ಬಗೆಗೆ ನಿಸ್ಸಂಶಯನಾಗಿರುವ ಧೀರ ಶ್ರೀಕೃಷ್ಣನು ತಾನೇ ಬೋಧಿಸಲು ಅಧಿಕಾರಿ! ಅರ್ಜುನನು ಅದನ್ನು ಕೇಳಲು ಅಧಿಕಾರಿಯಾಗಿದ್ದರಿಂದ ಅದನ್ನು ಅವನಿಗೆ ಶ್ರೀಕೃಷ್ಣನು ಕರುಣಿಸಿದುದೂ ವಿವೇಕಪೂರ್ಣವೂ ಸೌಹಾರ್ದಪೂರ್ಣವೂ ಆದ ಕಾರ್ಯವಲ್ಲವೇ?

2. ಗೀತೆಯು ಸಮಾಜದಲ್ಲಿ ಯುವಜನರನ್ನು ಹಿರಿಯರಿಗೆ ವಿರುದ್ಧವಾಗಿ ನಡೆಯಲು ಎತ್ತಿಕಟ್ಟುತ್ತದೆ, ಶಾಂತಿವ್ಯವಸ್ಥೆಗೆ ಭಂಗತರುತ್ತದೆ ಎಂಬ ವಿಚಾರವೂ ಹುರುಳಿಲ್ಲದ್ದು. ಏಕೆಂದರೆ ಯುದ್ಧಪೂರ್ವದಲ್ಲಿಯೂ, ಯುದ್ಧಸಮಯದಲ್ಲಿಯೂ, ಯುದ್ಧಾನಂತರದಲ್ಲೂ ಯಾವಾಗಲೂ ಗೀತಾಚಾರ್ಯನ ಶಿಷ್ಯನು ಹಿರಿಯರಲ್ಲಿ ಅಗೌರವವನ್ನು ಸೂಚಿಸಿಲ್ಲ. ಅವಿನಯ-ಅಶಿಸ್ತಿಗೆ ಪೋಷಕವಾದ ಗೀತಾವಚನವು ಯಾವುದೂ ಇಲ್ಲ. ಆದರೆ ಗುರುವು ದುರ್ಮಾರ್ಗವನ್ನು ಹಿಡಿದರೆ ಶಿಷ್ಯನು ವಿನಯದಿಂದಲೇ ಅವನ ಮೇಲೆ ಶಾಸನಮಾಡಬೇಕಾದ ಪ್ರಸಂಗಗಳೂ ಉಂಟು.

**ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ । ಉತ್ಪಥಂ ಪ್ರತಿಪನ್ನಸ್ಯ ಕಾರ್ಯಂ ಭವತಿ ಶಾಸನಮ್ ।** ಎಂಬ ಆರ್ಯೋಕ್ತಿಯು ಇದನ್ನು ತಿಳಿಸುತ್ತದೆ.

ಅವನು ಈ ಲೋಕಗಳನ್ನೆಲ್ಲಾ ಸಂಹರಿಸಿದರೂ ಅವನು ಸಂಹರಿಸುವುದೂ ಇಲ್ಲ. ಅವನಿಗೆ ಬಂಧನವೂ ಇಲ್ಲ. "**ಹತ್ವಾಪಿ ಸ ಇಮಾಂಲ್ಲೋಕಾನ್ ನ ಹನ್ತಿ ನ ನಿಬಧ್ಯತೇ**" ಎಂಬ ವಚನವು ಅಹಂಕಾರದ ಲೇಪವೇ ಇಲ್ಲದೆ ಪರಬ್ರಹ್ಮಾರ್ಪಿತಚಿತ್ತನಾದ ಪೂರ್ಣಯೋಗಿಗೆ ಅನ್ವಯಿಸುತ್ತದೆ. ಅಂತಹವನು ಪರಮಸತ್ಯದ ಪ್ರೇರಣೆಯಂತೆ ಕೆಲಸಮಾಡುವುದರಿಂದ ಸಂಹಾರಕಾರಿಯಾದ ರುದ್ರಭಗವಂತನಂತೆ ಅವನು ಯಾವ ಪಾಪಕ್ಕೂ ಒಳಗಾಗುವುದಿಲ್ಲ. ಆದರೆ ಎಲ್ಲಜನವೂ ಕಂಡ-ಕಂಡವರನ್ನು ಸಂಹರಿಸಲು

ಅನುಮತಿಶಾಸ್ತ್ರವಲ್ಲ ಅದು ; ಅಹಂಕಾರರಹಿತನಾದವನಿಂದ ಆ ಕಾರ್ಯ ನಡೆಯುವುದೇ ಇಲ್ಲ.

3. ಗೀತೆಯಲ್ಲಿ ಒಮ್ಮೆ ಕರ್ಮದ ಪ್ರಶಂಸೆ, ಒಮ್ಮೆ ಜ್ಞಾನದ ಹೊಗಳಿಕೆ, ಮತ್ತೊಮ್ಮೆ ಭಕ್ತಿಯ ಹಿರಿಮೆ–ಇಷ್ಟೆಲ್ಲಾ ಹೇಳಿ ಯಾವುದನ್ನು ಅನುಸರಿಸಬೇಕು ಎಂಬುದನ್ನೇ ನಿರ್ದಿಷ್ಟವಾಗಿ ಹೇಳದೆ ವಿಕಲ್ಪವುಂಟಾಗಿದೆಯೆಂಬ ಆಕ್ಷೇಪವೂ ಸರಿಯಲ್ಲ. ಲೋಕದಲ್ಲಿ ಎಲ್ಲರ ಯೋಗ್ಯತೆ, ಅಭಿರುಚಿ, ಅಧಿಕಾರಗಳೂ ಒಂದೇ ಆಗಿದ್ದರೆ ಎಲ್ಲರಿಗೂ ಒಂದೇ ದಾರಿ ಹೇಳಬಹುದಿತ್ತು. ವೈದ್ಯನು ಬಗೆಬಗೆಯ ಔಷಧಗಳನ್ನು ಏಕೆ ಇಟ್ಟಿರಬೇಕು. ಬಂದವರಿಗೆಲ್ಲಾ ನಿರ್ದಿಷ್ಟವಾಗಿ ಒಂದೇ ಔಷಧಿ ಕೊಡಬಾರದೇ? ಎಂದು ಕೇಳಿದಂತಿದೆ ಆ ಮೇಲಿನ ಆಕ್ಷೇಪಣೆ. ವೈದ್ಯಶಾಲೆಯಲ್ಲಿ ಎಲ್ಲಾ ಔಷಧಗಳೂ ಇರಬೇಕು. ಅವುಗಳಲ್ಲಿ ತಮಗೆ ತಕ್ಕ ಔಷಧ ಯಾವುದೆಂಬುದನ್ನು ರೋಗಿಯು ವೈದ್ಯನಿಂದ ತಿಳಿದು ಉಚಿತವಾದುದನ್ನು ತೆಗೆದುಕೊಳ್ಳುವಂತೆ, ತನ್ನ ಅಧಿಕಾರಕ್ಕೆ ತಕ್ಕ ಯೋಗಮಾರ್ಗ ಯಾವುದೆಂಬುದನ್ನು ಭವರೋಗವೈದ್ಯನಾದ ಗುರುವಿನಿಂದ ತಿಳಿದು ಜನರು ಸೇವಿಸಲೆಂದು ಮುಖ್ಯವಾದ ಆಯಾ ಮಾರ್ಗಗಳೆಲ್ಲವನ್ನೂ ಭಗವಂತನು ಇಲ್ಲಿ ಸಂಗ್ರಹಿಸಿದ್ದಾನೆ. ಯೋಗಮಾರ್ಗಗಳು ಗೀತೆಯಲ್ಲಿ ಹೇಳಿರುವಷ್ಟೇ ಅದಕ್ಕೆ ಹೆಚ್ಚು ಇಲ್ಲ–ಎಂದೂ ತಿಳಿಯಬಾರದು. **"ನಾನಾದೇಶಿಕವಕ್ತ್ರಸ್ಥೈಃ ಪ್ರಯೋಗೈರ್ಯುಕ್ತಿಕಲ್ಪಿತೈಃ" "ಸದಾಶಿವೋಕ್ತಾನಿ ಸಪಾದ ಲಕ್ಷಲಯಾವಧಾನಾನಿ ವಸನ್ತಿ ಲೋಕೇ"** ಎಂಬ ಮಹಾಯೋಗಿಗಳ ವಚನಾಮೃತವನ್ನು ನೆನೆಯಬೇಕು.

ಬೇರೆ-ಬೇರೆ ಭಾಷ್ಯಕಾರರ ಟೀಕೆಗಳನ್ನು ನೋಡಿ ಮನಸ್ಸಿಗೆ ವಿಕಲ್ಪವುಂಟಾಗುವವರು ಅವುಗಳೆಲ್ಲವನ್ನೂ ನೋಡುತ್ತಿರಬೇಕಾಗಿಲ್ಲ. ಆದರೆ ಆ ಭಾಷ್ಯಗಳನ್ನು ಔಚಿತ್ಯವನ್ನರಿತು ಉಪಯೋಗಿಸಿಕೊಳ್ಳುವುದು ವಿವೇಕ. ಕೆಲವೊಮ್ಮೆ ಆಚಾರ್ಯರು ಭಕ್ತಿಗೆ ಹಿರಿಮೆ ಕೊಡುತ್ತಾರೆ. ಕೆಲವರು ಕರ್ಮಕ್ಕೆ, ಕೆಲವರು ಜ್ಞಾನಕ್ಕೆ–ಆದರೆ ಇವೆಲ್ಲವೂ ಗೀತೆಯಲ್ಲಿ ಅಡಕವಾಗಿದೆ. ಕ್ಷೀರಾನ್ನವನ್ನು ವರ್ಣನೆಮಾಡುವಾಗ ಅದರಲ್ಲಿ ಕ್ಷೀರವಿದೆ ಎಂದು ಕೆಲವರು, ತುಪ್ಪವಿದೆ ಎಂದು ಕೆಲವರು, ಅನ್ನವಿದೆ ಎಂದು ಹಲವರು, ಕೇಸರಿ ಇದೆ ಎಂದು ಕೆಲವರು, ಸಕ್ಕರೆಯಿದೆ–ಎಂದು ಕೆಲವರು ಹೇಳಿದರೆ ಇದರಿಂದ

ಬುದ್ಧಿವಿಕಲ್ಪವಾಗಬೇಕಾಗಿಲ್ಲ. ಕ್ಷೀರಾನ್ನದಲ್ಲಿ ಅವೆಲ್ಲಾ ಸೇರಿವೆ. ಅವುಗಳಲ್ಲಿ ಯಾವುದಾದರೂ ವಸ್ತುವಿನ ಮೇಲೆ ವಿಶೇಷವಾಗಿ ದೃಷ್ಟಿಹರಿದಾಗ ಅದನ್ನು ಹೇಳುತ್ತೇವೆ. ಕ್ಷೀರಾನ್ನದ ಬಗೆಗೆ ಮೇಲೆ ಹೇಳಿದ ವರ್ಣನೆಗಳೆಲ್ಲವೂ ಸರಿಯೇ. ಆದರೆ ಯಾರಿಗೆ? ಯಾವಾಗ? ಹೇಗೆ? ಎಂಬ ವಿವೇಕವಿದ್ದರೆ ಸರಿ.

4) ಗೀತೆಯಲ್ಲಿ ಬೋಧಿಸುವ ವರ್ಣಧರ್ಮ-ಜಾತಿಧರ್ಮ ಮುಂತಾದುವು ಸಮಾಜವಿಘಾತಕಗಳೆಂದು ತಿಳಿಯುವುದು ಸತ್ಯಕ್ಕೆ ಅಪಚಾರ. ಆ ಧರ್ಮಗಳನ್ನು ಅವು ಈಗ ಇರುವ ವಿಕೃತರೂಪದಲ್ಲಿ ನೋಡದೆ, ಋಷಿಗಳು ಹೇಳಿದ ಆದರ್ಶದಿಂದ ನೋಡಿ ಬಳಸಿಕೊಂಡಾಗ ಅವು ಸಮಾಜಕ್ಕೆ ಕಲ್ಯಾಣಕಾರಿಗಳೇ ಆಗುತ್ತವೆ. ಈ ವಿಷಯವನ್ನು "ಚಾತುರ್ವರ್ಣ್ಯಂ ಮಯಾಸೃಷ್ಟಂ" ಎಂಬ ಗೀತಾಶ್ಲೋಕದ ವ್ಯಾಖ್ಯಾನದಲ್ಲಿ ಈ ಸಂಪುಟದಲ್ಲೇ ಉಪಪತ್ತಿಪೂರ್ವಕವಾಗಿ ಹೇಳಿದೆ.

5) ಶಾಂತಿಸಮೃದ್ಧಿಯ ಶಾಸ್ತ್ರವಾದ ಗೀತೆಯನ್ನು ರಣರಂಗದಲ್ಲಿ ಯುದ್ಧದ ಕೋಲಾಹಲದಲ್ಲಿ ಬೋಧಿಸಲು ಅದಕ್ಕೆ ಸಮಯವಿತ್ತೇ? ಸಾಧ್ಯವೇ? ಎಂಬ ಪ್ರಶ್ನೆಯು ಸಮಾಧಾನವನ್ನು ಬಯಸುತ್ತದೆ. ಶ್ರೀಕೃಷ್ಣ ಮತ್ತು ಅರ್ಜುನ ಇವರಿಗಿದ್ದ ವಿಶೇಷವಾದ ಸಾಮರ್ಥ್ಯಗಳನ್ನು ಇಲ್ಲಿ ಗಮನಿಸಬೇಕು. ಶ್ರೀಕೃಷ್ಣನು ಮಹಾಯೋಗೇಶ್ವರ, ಅರ್ಜುನನು ಅವನ ಭಕ್ತ, ಸಖ ಮತ್ತು ಯೋಗಾಧಿಕಾರಿಯಾದ ಉತ್ತಮಪುರುಷ. ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳೇ ಮುಂತಾದ ವಿಷಯಗಳ ಸೋಂಕೇ ಇಲ್ಲದ ಸರ್ವಾತೀತವಾದ ಸ್ಥಿತಿಯೊಂದುಂಟು. ಆ ಅತೀಂದ್ರಿಯವಾದ ಅವಸ್ಥೆಯನ್ನು ತನ್ನ ಯೋಗೈಶ್ವರ್ಯದಿಂದ ಅರ್ಜುನನಿಗೆ ಉಂಟುಮಾಡಿ ದಿವ್ಯವಾದ ಆ ಅಂತಃಪ್ರಪಂಚದಲ್ಲಿ ಭಗವಂತನು ಗೀತೋಪದೇಶವನ್ನು ನಡೆಸಿದ. ಲೌಕಿಕವಾದ ಯುದ್ಧದ ಕೋಲಾಹಲವು ಆ ಲೋಕವನ್ನು ಮುಟ್ಟುವ ಸಾಧ್ಯತೆಯೇ ಇಲ್ಲ. ಇಂತಹ ಸ್ಥಿತಿಯನ್ನು ಪಡೆಯಬಲ್ಲ ಸತ್ಪಾತ್ರನಾದ ಪಾರ್ಥನಿಗೆ, ಅದನ್ನು ಕೊಡಬಲ್ಲ ಮಹಾಯೋಗೇಶ್ವರ ಜಗದ್ಗುರು ಶ್ರೀಕೃಷ್ಣನು ದಯಪಾಲಿಸಿದನೆಂಬ ಸತ್ಯವನ್ನು ಕಂಡಾಗ ಈ ಪ್ರಶ್ನೆ ಏಳುವುದಿಲ್ಲ.

ಯುದ್ಧಕ್ಕೆ ಸಿದ್ಧರಾಗಿದ್ದಾಗ ಸಂವಾದಕ್ಕೆ ಸಮಯವಿತ್ತೇ? ಎಂದರೆ ಆಗಿನ ಕಾಲದ ಯುದ್ಧನಿಯಮಾವಳಿಯಂತೆ ಅವಶ್ಯವಾಗಿ ಇತ್ತು. ಯುದ್ಧಕ್ಕೆ

ಸ್ಥಾನ, ವೇಳೆ, ಅಧಿಕಾರಿ—ಈ ನಿಯಮಗಳನ್ನು ಎರಡು ಪಕ್ಷದವರೂ ಪಾಲಿಸುತ್ತಿದ್ದುದರಿಂದ ಗೀತೋಪದೇಶದಷ್ಟು ಕಾಲವ್ಯವಧಾನವು ಇದರಲ್ಲಿ ಇದ್ದಿರಲು ಯಾವ ಬಾಧಕವೂ ಇಲ್ಲ. ಕೃಷ್ಣಾರ್ಜುನರ ಸಂವಾದವಾದ ನಂತರವೂ ಕಾಲ ವ್ಯವಧಾನವು ಇದ್ದಿರಲು ಅವಕಾಶವಿದೆ. ಯುದ್ಧವು ಪ್ರಾರಂಭವಾಗುವುದಕ್ಕೆ ಮುಂಚೆ ಧರ್ಮರಾಜನು ಪಾದಚಾರಿಯಾಗಿ ಭೀಷ್ಮ-ದ್ರೋಣರೇ ಮುಂತಾದ ಗುರು-ಹಿರಿಯರ ಬಳಿಗೆ ಹೋಗಿ ಆಶೀರ್ವಾದ ಬೇಡಿದ. ಆಗ ಕೌರವರು ಅವನನ್ನು ಮುಟ್ಟಲಿಲ್ಲ. ಅನಂತರ ಅವನು ಯುದ್ಧದಲ್ಲಿ ತನ್ನ ಪಕ್ಷಕ್ಕೆ ಬರುವವರು ಯಾರಾದರೂ ಇದ್ದರೆ ಬರಬಹುದು—ಎಂದು ಘೋಷಣೆ ಮಾಡಿದ. ಆಗ ಯುಯುತ್ಸು ಎಂಬ ಧೃತರಾಷ್ಟ್ರಪುತ್ರನು ಪಾಂಡವರ ಪಕ್ಷಕ್ಕೆ ಬಂದು ಸೇರಿದ. ಇದೆಲ್ಲಾ ನಡೆದ ನಂತರವೇ ಯುದ್ಧವು ಪ್ರಾರಂಭವಾದ್ದ ರಿಂದ ಗೀತೋಪದೇಶಕ್ಕೆ ಆ ಸಂದರ್ಭದಲ್ಲಿ ಸಮಯವು ಇರಲಿಲ್ಲವೆಂದು ಭಾವಿಸುವುದೇಕೆ?

ಯುದ್ಧರಂಗದಲ್ಲಿ ಕೃಷ್ಣಾರ್ಜುನರ ಸಂವಾದವು 24-25 ಶ್ಲೋಕಗಳಷ್ಟರಲ್ಲಿ ಹತ್ತುನಿಮಿಷ ಕಾಲದಲ್ಲಿ ನಡೆದಿರಬೇಕು. ಅದನ್ನು ವ್ಯಾಸರು ವಿಸ್ತರಿಸಿ ಹೇಳಿದರು—ಎಂದೂ ಭಾವಿಸಬೇಕಾಗಿಲ್ಲ. ಸುಮಾರು 700 ಶ್ಲೋಕಗಳಲ್ಲಿರುವಷ್ಟು ವಿಷಯವನ್ನು ಸಂಭಾಷಣೆ ಮಾಡಲು ವಿದ್ವಾಂಸರಾದ ಶ್ರೀಕೃಷ್ಣಾರ್ಜುನರಿಗೆ ತುಂಬಾ ಕಾಲವೇನೂ ಬೇಕಾಗಿರಲಿಲ್ಲ.

ಈಗ ಸುಮಾರು ಒಂದು ಗಂಟೆ ಕಾಲದ ಸಂಭಾಷಣೆಯನ್ನು ಇಬ್ಬರು ವಿದ್ವಾಂಸರು ಮಾಡಿದರೂ ಅದನ್ನು ಸಂಗ್ರಹಿಸಲು ಸುಮಾರು 700-750 ಶ್ಲೋಕಗಳು ಆಗುವ ಸಂಭವವಿದೆ. ಹೀಗೆ ಇರುವಾಗ ಶ್ರೀಕೃಷ್ಣಾರ್ಜುನರ ಸಂವಾದವು ಕೇವಲ 20-25 ಶ್ಲೋಕಗಳಲ್ಲಿ ನಡೆಯಿತೆಂದು ಏಕೆ ಊಹಿಸಿಕೊಳ್ಳಬೇಕು?

6) ಗೀತೆಯ ಅಧ್ಯಾಯ ವಿಭಾಗದಲ್ಲಿ ವೈಜ್ಞಾನಿಕತೆಯಿಲ್ಲ. ಒಂದು ವಿಷಯದ ಅಧ್ಯಾಯದಲ್ಲಿ ಮತ್ತೊಂದು ಸೇರಿಕೊಳ್ಳುತ್ತದೆ. ಬೋಧಿಸುವ ಶೈಲಿಯನ್ನು ಉಪಾಧ್ಯಾಯನು ಸರಿಯಾಗಿ ಅಳವಡಿಸಿಕೊಂಡಿಲ್ಲ—ಎಂಬ ಆರೋಪಣೆ ವಿಚಾರಕ್ಕೆ ಯೋಗ್ಯವಾದುದು.

ಇಲ್ಲಿ ಗೀತೆಯು ಮಿತ್ರಸಂಭಾಷಣೆಯ ಶೈಲಿಯಲ್ಲಿದೆಯೆಂಬುದನ್ನು ಮರೆಯಬಾರದು. ಇಂತಹ ಸಂದರ್ಭದಲ್ಲಿ ವಿಷಯಗಳು ಹಿಂದು-ಮುಂದಾಗಿ ಬರುವ ಸನ್ನಿವೇಶವಿದೆ. ಮಧ್ಯೇ ಇನ್ನಾವುದೋ ವಿಷಯ ಬೆರಕೆ

ಯಾಗಿ ಮತ್ತೆ ಹಳೆಯ ವಿಷಯಕ್ಕೆ ಹೋಗುವ ಪ್ರಕರಣವಿರುವುದೂ ಉಂಟು. ಶ್ರೀಕೃಷ್ಣನಾಗಲೀ ಅರ್ಜುನನಾಗಲೀ ಶಾಸ್ತ್ರಗ್ರಂಥರಚನೆಗೆ ಹೊರಟವರಲ್ಲ. ಕೃಷ್ಣನು Notes ಸಿದ್ಧಪಡಿಸಿ ತಂದಿರಲಿಲ್ಲ. ಯುದ್ಧಕ್ಕೆ ಸಿದ್ಧವಾಗಿದ್ದಾಗ ಇದ್ದಕ್ಕಿದ್ದಂತೆ ಒದಗಿಬಂದ ಸಂಭಾಷಣೆ ಅದು. ಆಗ ಅಸ್ತವ್ಯಸ್ತತೆ ಉಂಟಾಗು ವುದು ತುಂಬ ಸ್ವಾಭಾವಿಕವೇ ಆಗಿದೆ. ಆದುದರಿಂದ ಗೀತೆಯ ಅಧ್ಯಾಯ ವ್ಯವಸ್ಥೆಯು ಕಟ್ಟುನಿಟ್ಟಾಗಿ ವಿಷಯಕ್ಕನುಗುಣವಾಗಿಲ್ಲದಿರುವುದು ಸಹಜವೇ ಆಗಿದೆ.

7) ಇನ್ನು ಪುನರುಕ್ತಿಯ ವಿಷಯ. ಇದು ಯಾವಾಗಲೂ ದೋಷ ವೇನಾಗುವುದಿಲ್ಲ. ಕಾವ್ಯದಲ್ಲೂ ಅರ್ಥಪುನರುಕ್ತಿಯು ದೋಷವೇ ಹೊರತು ಶಬ್ದಪುನರುಕ್ತಿಯಲ್ಲ. ಅರ್ಥಪುನರುಕ್ತಿಯೂ ಕೂಡ ಆಶ್ಚರ್ಯ, ಭಯ ಮುಂತಾದ ವೇಗಗಳಲ್ಲಿ ಸಹಜವಾಗಿ ಬಂದರೆ ದೋಷವಾಗುವುದಿಲ್ಲ. 'ರಾಮ ರಾಮ! ಇಂತಹ ಕೆಲಸ ಮಾಡಬಹುದೇ?' 'ಅಬ್ಬಬ್ಬಾ! ಎಂತಹ ದೃಶ್ಯ ಅದು!' ಇಲ್ಲಿ ಪುನರುಕ್ತಿಯು ದೋಷವೇನಲ್ಲ. ಉಪಾಧ್ಯಾಯರು ಶಿಷ್ಯರಿಗೆ ಪಾಠಹೇಳುವಾಗಲೂ ಈ ಪುನರುಕ್ತಿಯು ಅವಶ್ಯಕವೇ ಆಗುತ್ತದೆ. Repeat and revise and revise and repeat ಎಂಬುದು ಒಳ್ಳೆಯ ಉಪಾಧ್ಯಾಯರು ಅನುಸರಿಸುವ ಉಪದೇಶವೇ ಆಗಿದೆ. ಸಾಮಾನ್ಯವಿಷಯ ಗಳ ಬೋಧನೆಯೇ ಹೀಗಿರುವಾಗ ಇನ್ನು ಅತೀಂದ್ರಿಯವೂ ಅತಿಗಹನವೂ ಆದ ಆತ್ಮವಿದ್ಯೆಯನ್ನು ಬೋಧಿಸುವಾಗ ಅದರಲ್ಲಿ ಪುನರುಕ್ತಿಯಿದ್ದರೆ ಅದನ್ನು ದೂಷಣವೆಂದು ತಿಳಿಯಲೇಬಾರದು. **"ದುರ್ಬೋಧತ್ವಾದಾತ್ಮಜ್ಞಾನಸ್ಯ ಪುನಃ ಪುನಃ ಪ್ರಸಂಗಮಾಪಾದ್ಯ ಶಬ್ದಾನ್ತರೇಣ ತದೇವ ವಸ್ತು ನಿರೂಪಯತಿ ಭಗವಾನ್ ವಾಸುದೇವಃ ಕಥಂ ನು ನಾಮ ಅವ್ಯಕ್ತಂ ತತ್ತ್ವಂ ಸಂಸಾರಿಣಾಂ ಬುದ್ಧಿಗೋಚರತಾಮಾಪನ್ನಂ ಸತ್ ಸಂಸಾರ ನಿವೃತ್ತಯೇ ಸ್ಯಾದಿತಿ"** ಶಾಂ. ಭಾ. ಅ. ೨ ಶ್ಲೋಕ ೨೫

ಶ್ರೀಕೃಷ್ಣನ ಬೋಧನಾಕ್ರಮವು ಸಫಲವಾಯಿತೆನ್ನುವುದಕ್ಕೆ **"ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ"** ಎಂದು ಅನುಭವವನ್ನು ತೋಡಿಕೊಂಡ ಅರ್ಜುನನು ಸಾಕ್ಷಿ.

## ಗೀತೆಯ ಪ್ರಶಂಸೆ-ಸಂದೇಶ

ಭಗವದ್ಗೀತೆಯ ವಿಷಯದಲ್ಲಿ ನಾನಾಕಾಲ-ದೇಶಗಳ ವಿದ್ವಾಂಸರೂ ಸಾಧುಗಳೂ ಹೇಳಿರುವ ಕೆಲವು ಮೆಚ್ಚುಗೆಯ ಮಾತುಗಳನ್ನು ಪ್ರಾರಂಭದಲ್ಲಿ ಹೇಳಿದೆವು. ಅವುಗಳಲ್ಲಿ ಅತಿಶಯೋಕ್ತಿ ಏನಾದರೂ ಇದೆಯೇ? ಎಂದರೆ– ಅದರ ವಿಷಯವು ವಿಶ್ವೋತ್ತೀರ್ಣವಾದುದು. ಅದನ್ನು ಪ್ರತಿಪಾದಿಸಿದವನು ವಿಶ್ವೋತ್ತೀರ್ಣನಾದ ಪರಮಪುರುಷ–ಆ ಗ್ರಂಥಕ್ಕೂ ಪ್ರತಿಪಾದ್ಯವಿಷಯವು ಅವನೇ ಆಗಿದ್ದಾನೆ. ಅದನ್ನು ಶ್ಲೋಕರೂಪ ಗ್ರಂಥದಲ್ಲಿ ರಚಿಸಿದವನೂ ಭಗವದವತಾರನಾದ ವ್ಯಾಸಮುನೀಂದ್ರ. ಭಾವ, ಭಾಷೆ ಎಲ್ಲದರಲ್ಲಿಯೂ ಅದು ಸರ್ವೋತ್ಕೃಷ್ಟವಾಗಿದೆಯೆಂದು ಪೂರ್ವಗ್ರಹವಿಲ್ಲದ ಎಲ್ಲ ದೇಶ-ಕಾಲ ಗಳ ವಿದ್ವಾಂಸರೂ, ಭಾವುಕರೂ, ಭಕ್ತರೂ, ಕೇವಲ ಬುದ್ಧಿಜೀವಿಗಳೂ, ಕಾವ್ಯಮರ್ಮಜ್ಞರೂ ಮುಕ್ತಕಂಠದಿಂದ ಹೇಳಿದ್ದಾರೆ. ಲೋಕೋತ್ತರವಾದ ಶ್ರೇಷ್ಠವಿಷಯದ ಬಗೆಗೆ ಅತ್ಯುಕ್ತಿಯನ್ನು ಹೇಳಲು ಸಾಧ್ಯವೇ ಇಲ್ಲ. ಅದರ ಮಹಿಮೆಯನ್ನು ಎಷ್ಟೆಷ್ಟು ಗ್ರಹಿಸಿ ಕೊಂಡಾಡಿದರೆ, ಅದರ ಆದೇಶದಂತೆ ಎಷ್ಟೆಷ್ಟು ನಡೆದರೆ ಅಷ್ಟಷ್ಟು ಶ್ರೇಯಸ್ಸು–ಎಂದಿಷ್ಟು ಮಾತ್ರ ಹೇಳುತ್ತೇವೆ. "ಅಜರವೂ ಅಮರವೂ ಆದುದು ಆತ್ಮ. ಭಗವಂತನು ಕಲ್ಪನೆಯಲ್ಲ. ತತ್ತ್ವ ದರ್ಶಿಗಳ ಸಾಕ್ಷಾದನುಭವದಲ್ಲಿರುವ ಪರತತ್ತ್ವ; ಎಲ್ಲದರಲ್ಲಿಯೂ ಓತ-ಪ್ರೋತವಾಗಿದ್ದಾನೆ. ಅವನನ್ನು ಶರಣುಹೊಂದಬೇಕು. ಅವನಲ್ಲಿ ಭಕ್ತಿಯಿಡ ಬೇಕು. ಅವನ ಸೇವೆಗಾಗಿ ಸತ್ಕರ್ಮವನ್ನು ಆಚರಿಸಬೇಕು. ಸದಾಚಾರದಲ್ಲಿರ ಬೇಕು. ಆತ್ಮಸಂಗ್ರಹದಂತೆಯೇ ಲೋಕಸಂಗ್ರಹವೂ ಆಗುವಂತೆ ನಡೆದು ಕೊಳ್ಳುವುದು ಉತ್ತಮ. ತತ್ತ್ವವನ್ನು ನೇರವಾಗಿ ಕಂಡ ಜ್ಞಾನಿಗಳ ಸೇವೆಯಿಂದ ತತ್ತ್ವಸ್ವರೂಪವನ್ನು ಉಪದೇಶಪಡೆಯಬೇಕು. ಕರ್ಮಯೋಗ, ಭಕ್ತಿಯೋಗ, ಜ್ಞಾನಯೋಗ ಅಥವಾ ಜ್ಞಾನಿಗಳು ಇವನ ಪ್ರಕೃತಿಗನುಗುಣವೆಂದು ಬೋಧಿಸುವ ಯಾವುದಾದರೂ ಸಾಧನಾಮಾರ್ಗವನ್ನವಲಂಬಿಸಿ ಪರತತ್ತ್ವದ ಸಾಕ್ಷಾತ್ಕಾರ ಪಡೆಯಬೇಕು. ಅದಕ್ಕನುಗುಣವಾದ ಶುದ್ಧಜೀವನವನ್ನು ನಡೆಸ ಬೇಕು. ಜೀವನದ ಮಹಾಪುರುಷಾರ್ಥಗಳನ್ನು ಸಾಧಿಸಿ ಕೃತಕೃತ್ಯನಾಗಬೇಕು." ಎಂಬುದು ಸಂಕ್ಷೇಪವಾಗಿ ಗೀತಾಮಾತೆಯ ಸಂದೇಶ.

## ಅರ್ಜುನನಿಗೇ ಗೀತೆಯನ್ನು ಉಪದೇಶಿಸಲು ಕಾರಣ

ಶ್ರೀಕೃಷ್ಣನು ಗೀತೆಯನ್ನು ಅರ್ಜುನನಿಗೆ ಏಕೆ ಉಪದೇಶಿಸಿದ ಎಂಬ

ಪ್ರಶ್ನೆ ಕೆಲವರಿಗೆ ಏಳುತ್ತದೆ. ಧರ್ಮರಾಜನಿಗೆ ಏಕೆ ಉಪದೇಶಿಸಬಾರದಿತ್ತು? ಎಂದರೆ ಧರ್ಮರಾಜನಿಗೂ ಶ್ರೀಕೃಷ್ಣನು ಬೇರೆ ಪ್ರಕರಣದಲ್ಲಿ ಧರ್ಮವನ್ನು ಉಪದೇಶಿಸುತ್ತಾನೆ. ಅದಕ್ಕೆ "ಶೇಷಧರ್ಮ" ಎಂದು ಹೆಸರು. ಆದರೆ ಪ್ರಕೃತ ದಲ್ಲಿ ಯುದ್ಧಸಂದರ್ಭದಲ್ಲಿ ಅತಿರಥಮಹಾಧೀರನಾಗಿದ್ದ ಅರ್ಜುನನು ಹೃದಯದೌರ್ಬಲ್ಯಕ್ಕೆ ಒಳಗಾಗುವ ಪ್ರಕರಣ ಒದಗಿಬಂದದ್ದರಿಂದ ಆ ಸನ್ನಿವೇಶದಲ್ಲಿ ಅವನಿಗೆ ಉಪದೇಶಮಾಡಬೇಕಾಗಿ ಕೂಡಿಬಂದಿತು. ಇದು ತಾತ್ಕಾಲಿಕವೆಂದು ಊಹಿಸಬಹುದಾದ ಕಾರಣ. ಶ್ರೀಕೃಷ್ಣನಿಗೂ ಅರ್ಜುನ ನಿಗೂ ಇದ್ದ ಸಹಜವೂ ಅನುಪಮವೂ ಆದ ಸ್ನೇಹವನ್ನೂ ನೆನೆಯಬೇಕು. **"ಭಕ್ತೋಽಸಿ ಮೇ ಸಖಾ ಚೇತಿ"**. ಅರ್ಜುನ-ಶ್ರೀಕೃಷ್ಣರು ನರ-ನಾರಾಯಣ ಮಹರ್ಷಿಗಳ ಅವತಾರ. ನಾರಾಯಣನು ನರನಿಗೇ ಉಪದೇಶಮಾಡು ವುದೂ ಸಹಜ–ಎಂದೂ ಜನ್ಮಾಂತರಸಂಬಂಧದ ಧ್ವನಿಯನ್ನೂ ಇಲ್ಲಿ ನೆನೆಯಬಹುದು. ಇದಲ್ಲದೆ ಅರ್ಜುನನು ಗೀತಾಶ್ರವಣಕ್ಕೆ ಅಧಿಕಾರಿಗಳಾದ ಎಲ್ಲಾ ನರರಿಗೂ ಪ್ರತಿನಿಧಿಯಾಗಬಲ್ಲ ನರ. ಅವನನ್ನು ನೆಪವಾಗಿಟ್ಟುಕೊಂಡು ವಿಶ್ವದ ಎಲ್ಲ ಜನಾಂಗಕ್ಕೂ ಉಪಕಾರಕವಾದ ಸಾರ್ವದೈಶಿಕ-ಸಾರ್ವಕಾಲಿಕ ಸತ್ಯವನ್ನು ಭಗವಂತ ಉಪದೇಶಮಾಡಿದನೆಂಬುದನ್ನು ಗಮನಿಸಬೇಕು. **"ಪಾಂಡುತನಯಯುದ್ಧಪ್ರೋತ್ಸಾಹನವ್ಯಾಜೇನ"** (ಶ್ರೀರಾಮಾನುಜರ ಗೀತಾಭಾಷ್ಯ ).

ಅರ್ಜುನನು ಗುಣಾಧಿಕನಾಗಿದ್ದುದರಿಂದ ಭಗವಂತನು ಧರ್ಮವನ್ನು ಅವನಿಗೆ ಉಪದೇಶಮಾಡಿದನು–ಎಂದು ಶ್ರೀ ಶಂಕರಾಚಾರ್ಯರು ಗಮನಿ ಸಿರುತ್ತಾರೆ. **"ಗುಣಾಧಿಕೈರ್ಹಿ ಗೃಹೀತಃ ಅನುಷ್ಠೀಯಮಾನಶ್ಚ ಧರ್ಮಃ ಪ್ರಚಯಂ ಗಮಿಷ್ಯತೀತಿ"**

## ರೂಪಕ

ಮಹಾಭಾರತಕಥೆಯೂ ಅದರ ಮಧ್ಯೆ ಬರುವ ಗೀತಾಪ್ರಸಂಗವೂ ಒಂದು ಆಧ್ಯಾತ್ಮಿಕವಾದ ರೂಪಕ : ಪಾಂಡವರು ದೈವೀಶಕ್ತಿಗಳು ; ಕೌರವರು ಆಸುರೀಶಕ್ತಿಗಳು. ಅವರಿಬ್ಬರಿಗೂ ಯುದ್ಧನಡೆದ ಕುರುಕ್ಷೇತ್ರವು ಶರೀರ. ಅದರಲ್ಲಿರುವ ನರನು ಜೀವ ; ನಾರಾಯಣನು ಶ್ರೀಕೃಷ್ಣ ; ರಥದ ಕುದುರೆ ಗಳು ಇಂದ್ರಿಯಗಳು–ಎಂದು ಅಲಂಕಾರಿಕವಾಗಿ ಇದನ್ನು ವ್ಯಾಖ್ಯಾನಿಸುವು

ದುಂಟು. ಆಧ್ಯಾತ್ಮವಿತ್ತಮರಾದ ವೇದವ್ಯಾಸರಿಂದ ಆಧ್ಯಾತ್ಮಿಕಹಿನ್ನೆಲೆಯಲ್ಲಿ ಈ ಕಥೆ ರಚಿತವಾಯಿತೆಂಬ ಧ್ವನಿಯನ್ನು ಗಮನಿಸುವುದು ಉಚಿತವೇ. ಇದು ಅಸಂಭವವೇನಲ್ಲ. ಆದರೆ ಇದರಿಂದ ಮಹಾಭಾರತದ ಐತಿಹಾಸಿಕತ್ವಕ್ಕೆ ಲೋಪವೇನಿಲ್ಲ–ಎಂಬ ಎಚ್ಚರಿಕೆಯ ಮಾತನ್ನು ಮರೆಯಬಾರದು.

ಶ್ರೀಕೃಷ್ಣನು ಅರ್ಜುನನನ್ನು ಭೌತಿಕವಾದ ಯುದ್ಧಮಾಡಲು ಪ್ರೋತ್ಸಾಹಿಸುತ್ತಿಲ್ಲ. ಅದು ಕೇವಲ ಆಧ್ಯಾತ್ಮಿಕವಾದ ಯುದ್ಧ–ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ಹಿಂದೆ ನಾವು ಗಮನಿಸಿದಂತೆ ಇಲ್ಲಿ ಆಧ್ಯಾತ್ಮದ ಧ್ವನಿಯಿದೆಯೇ ಹೊರತು ಇತಿಹಾಸಕ್ಕೆ ಅದರಿಂದ ಅಪೋಹವೇನಿಲ್ಲ. ದುಷ್ಟಶತ್ರುಗಳ ಮೇಲೆ ಭೌತಿಕವಾಗಿ ಯುದ್ಧಮಾಡುವ ಪ್ರಸಂಗ ಬಂದಾಗ ಆ ವೀರಕ್ಷತ್ರಿಯನು ಆಧ್ಯಾತ್ಮಿಕವಾದ ಯುದ್ಧದಲ್ಲಿ ಮಗ್ನನಾಗಿ ಭೌತಿಕವಾದ ಯುದ್ಧವೆಂಬ ಕರ್ತವ್ಯದಲ್ಲಿ ಉದಾಸೀನನಾಗಬಾರದು. ಭೌತಿಕ ಯುದ್ಧವು ವ್ಯಾಸರಿಗೆ ಸಮ್ಮತವೇ ಅಲ್ಲ–ಎಂಬ ವಾದವು ಸರಿಯಲ್ಲ. ಕಾಮ-ಕ್ರೋಧಾದಿ ರೂಪವಾದ ಅಂತಃಶತ್ರುಗಳ ಪ್ರತಿನಿಧಿಗಳು ಹೊರಗಿನ ಕ್ಷೇತ್ರದಲ್ಲಿ ಯುದ್ಧಕ್ಕೆ ನಿಂತಾಗ ಹೊರಗಿನಿಂದಲೂ ಅವರ ಮೇಲೆ ಯುದ್ಧಮಾಡಬೇಕಾದುದು ಕ್ಷತ್ರಿಯನ ಕರ್ತವ್ಯವೇ ಆಗಿದೆ. ಅರ್ಜುನನು ಅಂತಹ ಕ್ಷತ್ರಿಯನೇ ಹೊರತು ಸರ್ವಭೂತಗಳಿಗೂ ಅಭಯಕೊಟ್ಟ ಪರಮಹಂಸ ಸಂನ್ಯಾಸಿಯಲ್ಲ. ಆದರೆ ಧರ್ಮಯುದ್ಧದಲ್ಲಿ ಹೋರಾಡಿದರೂ ಯೋಗಯುಕ್ತನಾದ ಸಂನ್ಯಾಸಿಯಂತೆ ಸೂರ್ಯಮಂಡಲವನ್ನು ಭೇದಿಸಿ ದಿವ್ಯಗತಿಯನ್ನು ಹೊಂದುತ್ತಾನೆ ಧೀರಕ್ಷತ್ರಿಯ.

**ದ್ವಾವಿಮೌ ಪುರುಷೌ ಲೋಕೇ ಸೂರ್ಯಮಣ್ಡಲಭೇದಿನೌ ।**
**ಪರಿವ್ರಾಡ್ಯೋಗಯುಕ್ತಶ್ಚ ರಣೇ ಚಾಭಿಮುಖೋ ಹತಃ ॥**

## ಸಮರ್ಪಣೆ

ಇಂದ್ರಿಯರೂಪವಾದ ಅಶ್ವಗಳನ್ನು ಸಂಯಮಮಾಡಿ ಒಂದು ಹಸ್ತ ದಲ್ಲಿ ಅವುಗಳನ್ನು ಹತೋಟಿಯಲ್ಲಿಡುವ ಚಾವಟಿಯ ಕೋಲು ಮತ್ತು ಲಗಾಮುಗಳನ್ನೂ, ಮತ್ತೊಂದರಲ್ಲಿ ಆ ಸಂಯಮದಿಂದ ಉಂಟಾದ ಜೀವ-ದೇವರ ಯೋಗವನ್ನು ಸೂಚಿಸುವ ಜ್ಞಾನಮುದ್ರೆಯನ್ನೂ ಪಿಡಿದು, ಬ್ರಾಹ್ಮೀಸ್ಥಿತಿಯ ಪರಮಾನಂದಮುಖಮುದ್ರೆಯಿಂದ ಅಮೃತಮಯಕಿರಣ ಗಳನ್ನು ಸೂಸುತ್ತಾ ಭಕ್ತಿನಮ್ರನಾದ ಪಾರ್ಥನನ್ನು ಪ್ರೇಮರಸತುಂಬಿದ

ಕಣ್ಣುಗಳಿಂದ ಅನುಗ್ರಹಿಸುತ್ತಿರುವ ಗೀತಾಚಾರ್ಯನ ದಿವ್ಯಮಂಗಳವಿಗ್ರಹವನ್ನು ಸ್ಮರಿಸುತ್ತಾ ಈ ಭಗವದ್ಗೀತಾಭೂಮಿಕೆಯನ್ನು ಆತನ ಪೊನ್ನಡಿಗಳಲ್ಲಿ ಸಮರ್ಪಿಸುತ್ತೇವೆ.

**॥ ಓಂ ನಮೋ ನಾರಾಯಣಾಯ ॥**

ಅಷ್ಟಾಂಗಯೋಗವಿಜ್ಞಾನಮಂದಿರಂ
ಚೈತ್ರ ಕೃಷ್ಣ ಏಕಾದಶೀ
3-5-1979 **–ವರದದೇಶಿಕಾಚಾರ್ಯರಂಗಪ್ರಿಯ**

---

## ಚತುರ್ಥ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಪರಮಾತ್ಮನ ಕರುಣೆಯಿಂದಲೂ, ಶ್ರೀರಂಗ ಮಹಾಗುರುವಿನ ಆಶೀರ್ವಾದದಿಂದಲೂ ಸತ್ಪುರುಷರ ಸಹಕಾರದಿಂದಲೂ ಶ್ರೀಮನ್ಮಹಾಭಾರತದ 15ನೇ ಸಂಪುಟವನ್ನು ಪುನರ್ಮುದ್ರಣಮಾಡಿ ಪ್ರಿಯ ಓದುಗರ ಅಂಜಲಿಗಳಲ್ಲಿ ಇಡುತ್ತಿದ್ದೇವೆ. ಈ ಮಧ್ಯೆ 20ನೇ ಸಂಪುಟದ ಪುನರ್ಮುದ್ರಣದಿಂದೀಚೆಗೆ ಭಾಗವತದ 2ನೇ ಸಂಪುಟವನ್ನು, ರಾಮಾಯಣದ 2ನೇ ಸಂಪುಟವನ್ನು ಪುನರ್ಮುದ್ರಣಮಾಡಿ, ಆ 2 ರಾಮಾಯಣ-ಭಾಗವತಗಳ ಪೂರ್ಣಮಾಲೆಯು ವಾಚಕರಿಗೆ ದೊರೆಯುವಂತೆ ಮಾಡಲಾಗಿದೆ. ಮುಂದೆ ಮಹಾಭಾರತದ ಸಂಪುಟಗಳನ್ನು ತಿಂಗಳಿಗೆ ಒಂದರಂತೆ ಪುನರ್ಮುದ್ರಣಮಾಡಿ ಸಾಧ್ಯವಾದಷ್ಟು ಬೇಗ ಮಹಾಭಾರತದ 32 ಸಂಪುಟಗಳನ್ನು ಪ್ರಿಯವಾಚಕರಿಗೆ ದೊರಕಿಸಿಕೊಡುವ ಆಶಯವಿದೆ. ಇದಕ್ಕೆ ಭಗವಂತನ ಅಭಯಹಸ್ತ , ವಾಚಕರ ಬೆಂಬಲ ಅತ್ಯವಶ್ಯಕವಾಗಿಬೇಕಾಗಿದೆ. ನಮ್ಮ ಪ್ರಯತ್ನ ಯಶಸ್ವಿಯಾಗಬೇಕಾದರೆ ಹೆಚ್ಚು-ಹೆಚ್ಚು ಪೂರ್ಣಮಾಲೆಗೆ ಗ್ರಾಹಕರಾಗಿ ಸಹಕರಿಸಬೇಕು. ಪ್ರಿಯವಾಚಕರೆಲ್ಲರಿಗೂ ಭಗವಂತನ ದಯೆಯಿಂದ ಶಾಂತಿ-ಪುಷ್ಟಿ-ತುಷ್ಟಿಯು ದೊರಕಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ. **–ಪ್ರಕಾಶಕರು.**

## ಶ್ರೀಮನ್ಮಹಾಭಾರತದ ಹದಿನೈದನೆಯ ಸಂಪುಟದಲ್ಲಿರುವ
## ವಿಷಯಾನುಕ್ರಮಣಿಕೆ
# ಭೀಷ್ಮಪರ್ವ

ಉಪ : ಭೀಷ್ಮವಧಪರ್ವ


| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| ೬೦ | ನಾಲ್ಕನೆಯ ದಿವಸದ ಯುದ್ಧಪ್ರಾರಂಭ : ಎರಡೂ ಸೈನ್ಯಗಳ ವ್ಯೂಹನಿರ್ಮಾಣ : ಭೀಷ್ಮಾರ್ಜುನರ ದ್ವಂದ್ವಯುದ್ಧ | 1797 |
| ೬೧ | ಅಭಿಮನ್ಯುವಿನ ಪರಾಕ್ರಮ : ಧೃಷ್ಟದ್ಯುಮ್ನನಿಂದ ಶಲಪುತ್ರನ ವಧೆ | 1803 |
| ೬೨ | ಧೃಷ್ಟದ್ಯುಮ್ನ ಮತ್ತು ಶಲ್ಯರ ಘೋರಯುದ್ಧ : ಉಭಯ ಪಕ್ಷಗಳ ವೀರರೂ ಘೋರವಾದ ಯುದ್ಧದಲ್ಲಿ ತೊಡಗಿದುದು : ಭೀಮಸೇನನು ಕೌರವಪಕ್ಷದ ಗಜಸೇನೆಯನ್ನು ಸಂಹರಿಸಿದುದು | 1808 |
| ೬೩ | ಭೀಮಸೇನ ಮತ್ತು ಭೀಷ್ಮರ ಯುದ್ಧ : ಸಾತ್ಯಕಿ ಮತ್ತು ಭೂರಿಶ್ರವಸರ ಪ್ರಚಂಡಕಾಳಗ | 1817 |
| ೬೪ | ಭೀಮಸೇನ-ಘಟೋತ್ಕಚರ ಪರಾಕ್ರಮ : ಕೌರವರ ಪರಾಜಯ : ನಾಲ್ಕನೆಯ ದಿವಸದ ಯುದ್ಧದ ಪರಿಸಮಾಪ್ತಿ | 1822 |
| ೬೫ | ಧೃತರಾಷ್ಟ್ರ-ಸಂಜಯರ ಸಂವಾದಪ್ರಸಂಗದಲ್ಲಿ ದುರ್ಯೋಧನನು ಪಾಂಡವರ ವಿಜಯಕ್ಕೆ ಕಾರಣವನ್ನು ಭೀಷ್ಮನಿಂದ ಕೇಳಿ ತಿಳಿದುಕೊಂಡುದು ಮತ್ತು ಬ್ರಹ್ಮನು ಮಾಡಿದ ಭಗವತ್ಪ್ರಾರ್ಥನೆಯನ್ನೂ ಭೀಷ್ಮನು ದುರ್ಯೋಧನನಿಗೆ ತಿಳಿಸಿದುದು | 1835 |
| ೬೬ | ನರ-ನಾರಾಯಣರ ಮಹಿಮಾಪ್ರತಿಪಾದನೆ | 1850 |
| ೬೭ | ಶ್ರೀಕೃಷ್ಣನ ಮಹಿಮೆ | 1858 |
| ೬೮ | ಬ್ರಹ್ಮಭೂತಸ್ತೋತ್ರ : ಶ್ರೀಕೃಷ್ಣಾರ್ಜುನರ ಮಹತ್ತ್ವ | 1863 |
| ೬೯ | ಐದನೆಯ ದಿವಸದ ಯುದ್ಧಪ್ರಾರಂಭ : ಕೌರವರು ಮಕರ ವ್ಯೂಹವನ್ನೂ-ಪಾಂಡವರು ಶ್ಯೇನವ್ಯೂಹವನ್ನು ರಚಿಸಿದುದು | 1867 |
| ೭೦ | ಭೀಷ್ಮ ಮತ್ತು ಭೀಮಸೇನರ ಭಯಂಕರಯುದ್ಧ | 1871 |
| ೭೧ | ಕೌರವರೊಡನೆ ಭೀಮಾರ್ಜುನರ ಭಯಂಕರವಾದ ಯುದ್ಧದ ವರ್ಣನೆ | 1874 |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| ೭೨ | ಕೌರವ-ಪಾಂಡವರ ಘೋರಯುದ್ಧದ ವರ್ಣನೆ | 1879 |
| ೭೩ | ವಿರಾಟ-ಭೀಷ್ಮ, ಅಶ್ವತ್ಥಾಮ-ಅರ್ಜುನ, ದುರ್ಯೋಧನ-ಭೀಮಸೇನ ಮತ್ತು ಅಭಿಮನ್ಯು-ಲಕ್ಷ್ಮಣ ಇವರ ದ್ವಂದ್ವಯುದ್ಧ ವರ್ಣನೆ | 1883 |
| ೭೪ | ಸಾತ್ಯಕಿ-ಭೂರಿಶ್ರವಸರ ಯುದ್ಧ : ಭೂರಿಶ್ರವಸನು ಸಾತ್ಯಕಿಯ ಹತ್ತು ಮಕ್ಕಳನ್ನು ಸಂಹರಿಸಿದುದು : ಅರ್ಜುನನ ಪರಾಕ್ರಮ : ಐದನೆಯ ದಿವಸದ ಯುದ್ಧದ ಉಪಸಂಹಾರ | 1889 |
| ೭೫ | ಆರನೆಯ ದಿವಸದ ಯುದ್ಧಾರಂಭ : ಪಾಂಡವರು ಮಕರವ್ಯೂಹವನ್ನೂ-ಕೌರವರು ಕ್ರೌಂಚವ್ಯೂಹವನ್ನೂ ರಚಿಸಿಕೊಂಡು ಯುದ್ಧಕ್ಕೆ ಪ್ರವೃತ್ತರಾದುದು | 1896 |
| ೭೬ | ಧೃತರಾಷ್ಟ್ರನ ಚಿಂತೆ | 1900 |
| ೭೭ | ಭೀಮಸೇನ, ಧೃಷ್ಟದ್ಯುಮ್ನ ಮತ್ತು ದ್ರೋಣರ ಪರಾಕ್ರಮವರ್ಣನೆ | 1905 |
| ೭೮ | ಉಭಯಪಕ್ಷಗಳ ಸೈನ್ಯಗಳ ಸಂಕುಲಯುದ್ಧ | 1914 |
| ೭೯ | ಭೀಮಸೇನನಿಂದ ದುರ್ಯೋಧನನ ಪರಾಜಯ : ಅಭಿಮನ್ಯುವಿಗೂ ಮತ್ತು ಧೃತರಾಷ್ಟ್ರನ ಮಕ್ಕಳಿಗೂ ನಡೆದ ಯುದ್ಧದ ವರ್ಣನೆ : ಆರನೆಯ ದಿವಸದ ಯುದ್ಧದ ಪರಿಸಮಾಪ್ತಿ | 1918 |
| ೮೦ | ದುರ್ಯೋಧನನಿಗೆ ಭೀಷ್ಮರ ಆಶ್ವಾಸನೆ : ಏಳನೆಯ ದಿವಸದ ಯುದ್ಧಕ್ಕೆ ಕೌರವಸೈನಿಕರ ಪ್ರಸ್ಥಾನ | 1917 |
| ೮೧ | ಏಳನೆಯ ದಿವಸದ ಯುದ್ಧಪ್ರಾರಂಭ : ಮಂಡಲ ಮತ್ತು ವಜ್ರವ್ಯೂಹಗಳ ರಚನೆ : ಭಯಂಕರಯುದ್ಧ | 1931 |
| ೮೨ | ಕೃಷ್ಣಾರ್ಜುನರಿಗೆ ಹೆದರಿ ಕೌರವರ ಪಲಾಯನ : ದ್ರೋಣ-ವಿರಾಟರ ಯುದ್ಧವರ್ಣನೆ : ವಿರಾಟನ ಮಗನಾದ ಶಂಖನ | |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| | ವಧೆ : ಶಿಖಂಡೀ-ಅಶ್ವತ್ಥಾಮರ ಯುದ್ಧವರ್ಣನೆ : ಸಾತ್ಯಕಿಯಿಂದ ಅಲಂಬುಷನ ಪರಾಜಯ : ಧೃಷ್ಟದ್ಯುಮ್ನನಿಂದ ದುರ್ಯೋಧನನ ಪರಾಜಯ : ಭೀಮಸೇನ-ಕೃತವರ್ಮರ ಯುದ್ಧವರ್ಣನೆ | 1936 |
| ೮೩ | ಇರಾವಂತನಿಂದ ವಿಂದಾನುವಿಂದರ ಪರಾಜಯ : ಭಗದತ್ತನಿಂದ ಘಟೋತ್ಕಚನ ಪರಾಜಯ : ನಕುಲ-ಸಹದೇವರಿಂದ ಶಲ್ಯನ ಪರಾಜಯ | 1943 |
| ೮೪ | ಯುಧಿಷ್ಠಿರನಿಂದ ಶ್ರುತಾಯುಷನು ಪರಾಜಿತನಾದುದು : ಚೇಕಿತಾನ ಮತ್ತು ಕೃಪಾಚಾರ್ಯರು ಮೂರ್ಛಿತರಾದುದು : ಭೂರಿಶ್ರವಸನಿಂದ ಧೃಷ್ಟಕೇತುವೂ, ಅಭಿಮನ್ಯುವಿನಿಂದ ಚಿತ್ರಸೇನನೇ ಮೊದಲಾದವರೂ ಪರಾಜಿತರಾದುದು : ಸುಶರ್ಮನೇ ಮೊದಲಾದವರೊಡನೆ ಅರ್ಜುನನ ಯುದ್ಧ | 1950 |
| ೮೫ | ಅರ್ಜುನನ ಪರಾಕ್ರಮ : ಪಾಂಡವರು ಭೀಷ್ಮನ ಮೇಲೆ ಆಕ್ರಮಣಮಾಡಿದುದು : ಯುಧಿಷ್ಠಿರನು ಶಿಖಂಡಿಯನ್ನು ನಿಂದಿಸಿದುದು : ಭೀಮನ ಪೌರುಷ | 1956 |
| ೮೬ | ಭೀಷ್ಮ-ಯುಧಿಷ್ಠಿರರ ಯುದ್ಧ : ಧೃಷ್ಟದ್ಯುಮ್ನ-ಸಾತ್ಯಕಿಗಳೊಡನೆ ವಿಂದಾನುವಿಂದರ ಸಂಗ್ರಾಮ : ದ್ರೋಣಾದಿಗಳ ಪರಾಕ್ರಮ : ಏಳನೆಯ ದಿವಸದ ಯುದ್ಧದ ಪರಿಸಮಾಪ್ತಿ | 1962 |
| ೮೭ | ಎಂಟನೆಯ ದಿವಸದ ವ್ಯೂಹರಚನೆ : ಉಭಯ ಪಕ್ಷಗಳಿಗೂ ಪರಸ್ಪರವಾಗಿ ನಡೆದ ಘೋರಯುದ್ಧದ ವರ್ಣನೆ | 1971 |
| ೮೮ | ಭೀಷ್ಮನ ಪರಾಕ್ರಮ : ಭೀಮಸೇನನು ಧೃತರಾಷ್ಟ್ರನ ಎಂಟು ಮಂದಿ ಮಕ್ಕಳನ್ನು ಸಂಹರಿಸಿದುದು : ದುರ್ಯೋಧನನಿಗೂ ಮತ್ತು ಭೀಷ್ಮನಿಗೂ ಯುದ್ಧದ ವಿಷಯವಾಗಿ ಮಾತುಕತೆ | 1975 |
| ೮೯ | ಕೌರವ-ಪಾಂಡವರ ಭಯಂಕರಯುದ್ಧದ ವರ್ಣನೆ ಅಪಾರಸೈನ್ಯನಾಶ | 1981 |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| ೯೦ | ಇರಾವಂತನು ಶಕುನಿಯ ಅನುಜರನ್ನು ಸಂಹರಿಸಿದುದು : ಅಲಂಬುಷನು ಇರಾವಂತನನ್ನು ಸಂಹರಿಸಿದುದು | 1985 |
| ೯೧ | ಘಟೋತ್ಕಚನಿಗೂ ಮತ್ತು ದುರ್ಯೋಧನನಿಗೂ ಭಯಂಕರವಾದ ಯುದ್ಧ | 1995 |
| ೯೨ | ದುರ್ಯೋಧನಾದಿ ಪ್ರಮುಖವೀರರೊಡನೆ ಘಟೋತ್ಕಚನ ಭಯಂಕರಯುದ್ಧದ ವರ್ಣನೆ | 1999 |
| ೯೩ | ಘಟೋತ್ಕಚನ ರಕ್ಷಣೆಗಾಗಿ ಬಂದ ಭೀಮನೇ ಮುಂತಾದವರೊಡನೆ ಕೌರವರ ಯುದ್ಧ ಮತ್ತು ಅವರ ಪಲಾಯನ | 2004 |
| ೯೪ | ದುರ್ಯೋಧನ-ಭೀಮಸೇನರ ಯುದ್ಧದ ವರ್ಣನೆ : ಅಶ್ವತ್ಥಾಮಾ-ನೀಲರ ಯುದ್ಧದ ವರ್ಣನೆ : ಘಟೋತ್ಕಚನ ಮಾಯೆಯಿಂದ ಮೋಹಿತವಾದ ಕೌರವಸೇನೆಯ ಪಲಾಯನ | 2010 |
| ೯೫ | ಭೀಷ್ಮನ ಆಜ್ಞೆಯಂತೆ ಭಗದತ್ತನು ಘಟೋತ್ಕಚ, ಭೀಮಸೇನ ಮತ್ತು ಪಾಂಡವರ ಸೈನ್ಯದೊಡನೆ ಯುದ್ಧ ಮಾಡಿದುದು | 2015 |
| ೯೬ | ಇರಾವಂತನ ವಧೆಯನ್ನು ಕೇಳಿ ಅರ್ಜುನನು ದುಃಖಪಟ್ಟುದು : ಭೀಮಸೇನನು ಧೃತರಾಷ್ಟ್ರನ ಒಂಬತ್ತು ಮಂದಿ ಮಕ್ಕಳನ್ನು ಸಂಹರಿಸಿದುದು : ಅಭಿಮನ್ಯು ಮತ್ತು ಅಂಬಷ್ಠರ ಯುದ್ಧ : ಎಂಟನೆಯ ದಿವಸದ ಯುದ್ಧದ ಪರಿಸಮಾಪ್ತಿ | 2024 |
| ೯೭ | ದುರ್ಯೋಧನನು ತನ್ನ ಮಂತ್ರಿಗಳೊಡನೆ ಸಮಾಲೋಚಿಸಿ ಪಾಂಡವರನ್ನು ಕೊಲ್ಲಬೇಕು ಅಥವಾ ಕರ್ಣನನ್ನು ಯುದ್ಧ ಮಾಡಲು ಬರುವಂತೆ ಆಜ್ಞಾಪಿಸಬೇಕು–ಎಂಬ ಸಲಹೆಯನ್ನು ಭೀಷ್ಮನ ಮುಂದಿಡುವುದು | 2038 |
| ೯೮ | ಭೀಷ್ಮನು ದುರ್ಯೋಧನನಿಗೆ ಅರ್ಜುನನ ಪರಾಕ್ರಮವನ್ನು ವಿವರಿಸಿದುದು : ಶಕ್ತಿಮೀರಿ ಯುದ್ಧಮಾಡಲು ಪ್ರತಿಜ್ಞೆ | |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| | ಮಾಡಿದುದು : ದುರ್ಯೋಧನನು ಭೀಷ್ಮನ ರಕ್ಷಣೆಗೆ ವ್ಯವಸ್ಥೆಮಾಡಿದುದು | 2045 |
| ೯೯ | ಒಂಬತ್ತನೆಯ ದಿವಸದ ಯುದ್ಧಕ್ಕೆ ಎರಡು ಪಕ್ಷಗಳ ಸೇನೆಗಳೂ ವ್ಯೂಹಗಳನ್ನು ರಚಿಸಿಕೊಂಡುದು : ಭಯಂಕರವಾದ ಯುದ್ಧದ ಪ್ರಾರಂಭ : ವಿನಾಶಸೂಚಕ ವಾದ ಉತ್ಪಾತಗಳ ವರ್ಣನೆ | 2053 |
| ೧೦೦ | ಅಭಿಮನ್ಯು, ದ್ರೌಪದಿಯ ಐವರು ಮಕ್ಕಳು ಇವರಿಗೂ ಮತ್ತು ಅಲಂಬುಷನಿಗೂ ಆದ ಘೋರಯುದ್ಧದ ವರ್ಣನೆ : ಅಭಿಮನ್ಯುವಿನ ಭಯದಿಂದ ಕೌರವಸೇನೆಯ ಪಲಾಯನ | 2056 |
| ೧೦೧ | ಅಭಿಮನ್ಯುವಿನಿಂದ ಅಲಂಬುಷನ ಪರಾಜಯ : ಅರ್ಜುನ ನೊಡನೆ ಭೀಷ್ಮ ಮತ್ತು ಕೃಪರ ಯುದ್ಧ : ಸಾತ್ಯಕಿ ಯೊಡನೆ ಅಶ್ವತ್ಥಾಮಾ ಮತ್ತು ದ್ರೋಣರ ಯುದ್ಧ | 2061 |
| ೧೦೨ | ದ್ರೋಣಾಚಾರ್ಯ ಮತ್ತು ಸುಶರ್ಮರೊಡನೆ ಅರ್ಜುನನ ಯುದ್ಧ: ಭೀಮಸೇನನಿಂದ ಕೌರವರ ಗಜಸೇನೆಯ ಸಂಹಾರ | 2067 |
| ೧೦೩ | ಎರಡೂ ಪಕ್ಷಗಳ ಸೈನ್ಯಗಳ ಭಯಂಕರಯುದ್ಧ : ರಕ್ತಮಯ ವಾದ ನದಿಯ ವರ್ಣನೆ | 2071 |
| ೧೦೪ | ಅರ್ಜುನನು ತ್ರಿಗರ್ತರಾಜರನ್ನು ಪರಾಜಯಗೊಳಿಸಿದುದು : ಕೌರವಸೈನಿಕರಿಗೂ-ಪಾಂಡವಸೈನಿಕರಿಗೂ ಘೋರವಾದ ಯುದ್ಧ : ಅಭಿಮನ್ಯುವಿನಿಂದ ಚಿತ್ರಸೇನನ ಪರಾಜಯ : ದ್ರೋಣರಿಂದ ದ್ರುಪದನ ಪರಾಜಯ : ಭೀಮಸೇನನಿಂದ ಬಾಹ್ಲೀಕನ ಪರಾಜಯ : ಸಾತ್ಯಕಿ ಮತ್ತು ಭೀಷ್ಮರ ಘೋರಯುದ್ಧ | 2077 |
| ೧೦೫ | ಭೀಷ್ಮನ ರಕ್ಷಣೆಗೆ ಹೋಗುವಂತೆ ದುರ್ಯೋಧನನು ದುಃಶಾಸನನಿಗೆ ಆದೇಶನೀಡಿದುದು : ಯುಧಿಷ್ಠಿರ-ನಕುಲ-ಸಹದೇವರಿಂದ ಶಕುನಿಯ ಅಶ್ವಸೈನ್ಯದ ಪರಾಜಯ : ಶಲ್ಯನೊಡನೆ ಯುಧಿಷ್ಠಿರಾದಿಗಳ ಕದನ | 2081 |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| ೧೦೬ | ಭೀಷ್ಮನಿಂದ ಪರಾಜಿತವಾದ ಪಾಂಡವಸೇನೆಯ ಪಲಾಯನ : ಭೀಷ್ಮನನ್ನು ಸಂಹರಿಸಲು ಹೊರಟ ಶ್ರೀಕೃಷ್ಣನನ್ನು ಅರ್ಜುನನು ತಡೆದುದು | 2085 |
| ೧೦೭ | ಒಂಬತ್ತನೆಯ ದಿವಸದ ಯುದ್ಧದ ಪರಿಸಮಾಪ್ತಿ : ರಾತ್ರಿಯಲ್ಲಿ ಪಾಂಡವರ ಗುಪ್ತಸಮಾಲೋಚನೆ : ಶ್ರೀಕೃಷ್ಣಸಹಿತರಾಗಿ ಪಾಂಡವರು ಭೀಷ್ಮನನ್ನು ಸಂಧಿಸಿದುದು : ಭೀಷ್ಮನ ವಧೋಪಾಯವನ್ನು ತಿಳಿದುಕೊಂಡುದು | 2095 |
| ೧೦೮ | ಹತ್ತನೆಯ ದಿವಸದ ಯುದ್ಧಕ್ಕೆ ಎರಡೂ ಪಕ್ಷಗಳ ಸೈನ್ಯಗಳು ರಣರಂಗಕ್ಕೆ ಹೊರಟುದು : ಶಿಖಂಡೀ-ಭೀಷ್ಮರ ಸಮಾಗಮ : ಭೀಷ್ಮನನ್ನು ಕೊಲ್ಲುವಂತೆ ಅರ್ಜುನನು ಶಿಖಂಡಿಗೆ ಪ್ರೋತ್ಸಾಹನೀಡಿದುದು | 2114 |
| ೧೦೯ | ಭೀಷ್ಮ-ದುರ್ಯೋಧನರ ಸಂವಾದ : ಭೀಷ್ಮನು ಲಕ್ಷೋಪ ಲಕ್ಷ ಸೈನಿಕರನ್ನು ಸಂಹರಿಸಿದುದು | 2121 |
| ೧೧೦ | ಅರ್ಜುನನ ಪ್ರೋತ್ಸಾಹದಿಂದ ಶಿಖಂಡಿಯು ಭೀಷ್ಮನನ್ನು ಆಕ್ರಮಿಸಿದುದು : ಉಭಯಪಕ್ಷಗಳ ಪ್ರಮುಖವೀರರ ಪರಸ್ಪರ ಯುದ್ಧ : ದುಃಶಾಸನನೊಡನೆ ಅರ್ಜುನನ ಘೋರಯುದ್ಧ | 2125 |
| ೧೧೧ | ಕೌರವ-ಪಾಂಡವರ ಪಕ್ಷಗಳಲ್ಲಿದ್ದ ಪ್ರಮುಖಮಹಾರಥರ ದ್ವಂದ್ವಯುದ್ಧಗಳ ವರ್ಣನೆ | 2130 |
| ೧೧೨ | ದ್ರೋಣರು ಅಶ್ವತ್ಥಾಮನಿಗೆ ಅಶುಭಸೂಚಕಗಳಾದ ನಿಮಿತ್ತಗಳನ್ನು ವಿವರಿಸುತ್ತಾ ಭೀಷ್ಮನ ರಕ್ಷಣೆಗಾಗಿ ಧೃಷ್ಟದ್ಯುಮ್ನನೊಡನೆ ಯುದ್ಧಮಾಡುವಂತೆ ಆದೇಶವನ್ನು ನೀಡಿದುದು | 2136 |
| ೧೧೩ | ಏಕಾಕಿಯಾದ ಭೀಮಸೇನನು ಹತ್ತುಮಂದಿ ಕೌರವ ಯೋಧರೊಡನೆ ಯುದ್ಧಮಾಡಿದುದು | 2142 |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| ೧೧೪ | ಕೌರವಮಹಾರಥರೊಡನೆ ಭೀಮಾರ್ಜುನರ ಮಹಾಯುದ್ಧ | 2147 |
| ೧೧೫ | ಭೀಷ್ಮನ ಆದೇಶದಂತೆ ಯುಧಿಷ್ಠಿರನು ಭೀಷ್ಮನೊಡನೆ ಯುದ್ಧಮಾಡಿದುದು : ಕೌರವ-ಪಾಂಡವರ ಸೇನೆಗಳ ನಡುವೆ ನಡೆದ ಭಯಂಕರ ಯುದ್ಧದ ವರ್ಣನೆ | 2151 |
| ೧೧೬ | ಕೌರವ-ಪಾಂಡವಮಹಾರಥರ ದ್ವಂದ್ವಯುದ್ಧದ ವರ್ಣನೆ : ಭೀಷ್ಮನ ಪರಾಕ್ರಮ | 2155 |
| ೧೧೭ | ಎರಡೂ ಪಕ್ಷಗಳ ಸೇನೆಗಳ ಯುದ್ಧ : ದುಃಶಾಸನನ ಪರಾಕ್ರಮ : ಅರ್ಜುನನಿಂದ ಭೀಷ್ಮನು ಭ್ರಾಂತನಾದುದು | 2163 |
| ೧೧೮ | ಭೀಷ್ಮನು ತನ್ನ ಅದ್ಭುತಪರಾಕ್ರಮವನ್ನು ತೋರಿಸುತ್ತಾ ಪಾಂಡವರ ಸೈನ್ಯವನ್ನು ಸಂಹರಿಸಿದುದು | 2169 |
| ೧೧೯ | ಕೌರವಪಕ್ಷದ ಮಹಾರಥರು ರಕ್ಷಿಸುತ್ತಿದ್ದರೂ ಅರ್ಜುನನು ಭೀಷ್ಮನನ್ನು ಕೆಳಗುರುಳಿಸಿದುದು : ಶರಶಯ್ಯೆಯ ಮೇಲೆ ಮಲಗಿದ್ದ ಭೀಷ್ಮನ ಸಮೀಪಕ್ಕೆ ಹಂಸಗಳ ರೂಪವನ್ನು ಧರಿಸಿ ಋಷಿಗಳು ಬಂದುದು : ಭೀಷ್ಮನು ಉತ್ತರಾಯಣದ ವರೆಗೂ ಪ್ರಾಣವನ್ನು ಧರಿಸಲು ನಿಶ್ಚಯಿಸಿದುದು | 2174 |
| ೧೨೦ | ಭೀಷ್ಮನ ಮಹತ್ತ್ವ : ಅರ್ಜುನನು ಭೀಷ್ಮನಿಗೆ ಬಾಣಗಳಿಂದಲೇ ತಲೆದಿಂಬನ್ನು ಮಾಡಿಕೊಟ್ಟುದು : ಎರಡು ಪಕ್ಷಗಳ ಸೈನ್ಯಗಳೂ ತಮ್ಮ-ತಮ್ಮ ಶಿಬಿರಗಳಿಗೆ ಹಿಂದಿರುಗಿದುದು : ಶ್ರೀಕೃಷ್ಣ-ಯುಧಿಷ್ಠಿರರ ಸಂವಾದ | 2188 |
| ೧೨೧ | ಅರ್ಜುನನು ದಿವ್ಯಜಲವನ್ನು ಪ್ರಕಟೀಕರಿಸಿ ಭೀಷ್ಮನ ಬಾಯಾರಿಕೆಯನ್ನು ಹೋಗಲಾಡಿಸಿದುದು : ಭೀಷ್ಮನಿಂದ ಅರ್ಜುನನ ಪ್ರಶಂಸೆ : ಪಾಂಡವರೊಡನೆ ಸಂಧಿಮಾಡಿಕೊಳ್ಳಲು ದುರ್ಯೋಧನನಿಗೆ ಸಲಹೆನೀಡಿದುದು | 2196 |
| ೧೨೨ | ಕರ್ಣ-ಭೀಷ್ಮರ ರಹಸ್ಯಸಂವಾದ | 2204 |


---

# ದ್ರೋಣಪರ್ವ

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| ದ್ರೋಣಾಭಿಷೇಕಪರ್ವ | | |
| ೧ | ಭೀಷ್ಮನ ಪತನದಿಂದಾಗಿ ಕೌರವರ ಶೋಕ: ಕರ್ಣನ ಸ್ಮರಣೆ | 2223 |
| ೨ | ಕರ್ಣನ ರಣಯಾತ್ರೆ | 2230 |
| ೩ | ಭೀಷ್ಮನ ವಿಷಯವಾಗಿ ಕರ್ಣನ ಪ್ರಶಂಸಾವಚನಗಳು | 2240 |
| ೪ | ಭೀಷ್ಮನು ಕರ್ಣನನ್ನು ಪ್ರೋತ್ಸಾಹಿಸಿ ಯುದ್ಧಕ್ಕೆ ಕಳುಹಿಸಿದುದು : ಕರ್ಣನು ಯುದ್ಧದಲ್ಲಿ ಭಾಗವಹಿಸಲು ಹೋದುದರಿಂದ ಕೌರವರ ಹರ್ಷೋತ್ಸಾಹ | 2243 |
| ೫ | ದ್ರೋಣರನ್ನು ಸೇನಾಪತಿಯನ್ನಾಗಿ ಮಾಡುವಂತೆ ಕರ್ಣನು ದುರ್ಯೋಧನನಿಗೆ ಸಲಹೆನೀಡಿದುದು | 2246 |
| ೬ | ದುರ್ಯೋಧನನು ದ್ರೋಣರನ್ನು ಸೇನಾಪತಿಗಳಾಗುವಂತೆ ಪ್ರಾರ್ಥಿಸಿದುದು | 2250 |
| ೭ | ದ್ರೋಣಾಚಾರ್ಯರಿಗೆ ಸೇನಾಪತಿಯ ಪಟ್ಟಗಟ್ಟಿದುದು : ಕೌರವ-ಪಾಂಡವರ ಯುದ್ಧ ಮತ್ತು ದ್ರೋಣರ ಪರಾಕ್ರಮ ಪ್ರದರ್ಶನ | 2252 |
| ೮ | ದ್ರೋಣಾಚಾರ್ಯರ ಪರಾಕ್ರಮ ಮತ್ತು ಅವರ ವಧೆಯ ಸಂಕ್ಷಿಪ್ತವಾರ್ತೆ | 2259 |
| ೯ | ದ್ರೋಣರು ನಿಧನಹೊಂದಿದ ವಾರ್ತೆಯನ್ನು ಕೇಳಿ ಧೃತರಾಷ್ಟ್ರನು ಶೋಕಿಸಿದುದು | 2263 |
| ೧೦ | ಧೃತರಾಷ್ಟ್ರನು ದುಃಖದಿಂದ ವ್ಯಾಕುಲಿತನಾದುದು : ಮುಂದೆ ನಡೆದ ಯುದ್ಧದ ವಿಷಯವಾಗಿ ಸಂಜಯನನ್ನು ಪ್ರಶ್ನಿಸಿದುದು | 2269 |
| ೧೧ | ಧೃತರಾಷ್ಟ್ರನು ಶ್ರೀಕೃಷ್ಣನ ಲೀಲೆಗಳನ್ನು ಸ್ತೋತ್ರ ಮಾಡಿದುದು : ಶ್ರೀಕೃಷ್ಣಾರ್ಜುನರ ಮಹಿಮೆಯ ಕಥನ | 2279 |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| ೧೨ | ದುರ್ಯೋಧನನು ದ್ರೋಣರನ್ನು ವರಕೇಳಿದುದು : ಅರ್ಜುನನು ಇಲ್ಲದ ಸಮಯದಲ್ಲಿ ಯುಧಿಷ್ಠಿರನನ್ನು ಬಂಧಿಸಿ ತರಲು ದ್ರೋಣರು ಪ್ರತಿಜ್ಞೆಮಾಡಿದುದು | 2286 |
| ೧೩ | ಅರ್ಜುನನು ಯುಧಿಷ್ಠಿರನಿಗೆ ಆಶ್ವಾಸನೆಯನ್ನಿತ್ತುದು : ದ್ರೋಣರ ಪರಾಕ್ರಮದ ವರ್ಣನೆ | 2292 |
| ೧೪ | ದ್ರೋಣರ ಪರಾಕ್ರಮ : ಕೌರವ-ಪಾಂಡವವೀರರ ದ್ವಂದ್ವ ಯುದ್ಧ : ರಣನದಿಯ ವರ್ಣನೆ : ಅಭಿಮನ್ಯುವಿನ ಪರಾಕ್ರಮ | 2296 |
| ೧೫ | ಶಲ್ಯನೊಡನೆ ಭೀಮಸೇನನ ಯುದ್ಧ : ಶಲ್ಯನು ಪರಾಜಿತನಾದುದು | 2306 |
| ೧೬ | ವೃಷಸೇನನ ಪರಾಕ್ರಮ : ಕೌರವ-ಪಾಂಡವರ ಭಯಂಕರ ಯುದ್ಧ : ದ್ರೋಣರು ಪಾಂಡವಪಕ್ಷದ ಅನೇಕವೀರರನ್ನು ಸಂಹರಿಸಿದುದು : ಅರ್ಜುನನ ವಿಜಯ | 2310 |
| ೧೭ | ಸುಶರ್ಮನೇ ಮೊದಲಾದ ಸಂಶಪ್ತಕವೀರರ ಪ್ರತಿಜ್ಞೆ : ಅರ್ಜುನನು ಅವರೊಡನೆ ಯುದ್ಧಮಾಡಲು ಹೋದುದು | 2326 |
| ೧೮ | ಸಂಶಪ್ತಕಸೇನೆಯೊಡನೆ ಅರ್ಜುನನ ಯುದ್ಧ : ಸುಧನ್ವನ ವಧೆ | 2334 |
| ೧೯ | ಸಂಶಪ್ತಕರೊಡನೆ ಅರ್ಜುನನ ಘೋರಯುದ್ಧ | 2337 |
| ೨೦ | ದ್ರೋಣರು ಗರುಡವ್ಯೂಹವನ್ನು ನಿರ್ಮಿಸಿದುದು : ಧೃಷ್ಟದ್ಯುಮ್ನನಿಂದ ಆಶ್ವಾಸನೆ : ಧೃಷ್ಟದ್ಯುಮ್ನ-ದುರ್ಮುಖರ ಯುದ್ಧ : ಯುದ್ಧದಲ್ಲಿ ಗಜಸೈನ್ಯದ ಸಂಹಾರ | 2342 |
| ೨೧ | ದ್ರೋಣರು ಸತ್ಯಜಿತ, ಶತಾನೀಕ, ಧೃಡಸೇನ, ಕ್ಷೇಮ, ವಸುದಾನ–ಮೊದಲಾದವರನ್ನು ಸಂಹರಿಸಿದುದು : ಪಾಂಡವ ಸೇನೆಯ ಪರಾಜಯ | 2350 |




ಪರಮಹಂಸಪರಿವ್ರಾಜಕಾಚಾರ್ಯ ಶ್ರೀಮಜ್ಜಗದ್ಗುರು ಶಂಕರಾಚಾರ್ಯ
ಶ್ರೀರಾಮಚಂದ್ರಾಪುರಮಠಸ್ಥ

## ಶ್ರೀಮದ್ರಾಘವೇಂದ್ರಭಾರತೀ ಶ್ರೀಸ್ವಾಮಿಭಿಃ

ಶ್ರೀಯುತ ಕೇಶವ ಸುಬ್ರಹ್ಮಣ್ಯ ಕೌಶಿಕರು, ಭಾರತ ದರ್ಶನ ಪ್ರಕಾಶನ,
ತ್ಯಾಗರಾಜನಗರ ಬೆಂಗಳೂರು, ಇವರಿಗೆ–

**॥ ಶ್ರೀಮನ್ನಾರಾಯಣಸ್ಮರಣಪುರಸ್ಸರಂ ಸಂದಿಷ್ಟೋಽಯಂ ಸಂದೇಶಃ ॥**

ಅದಾಗಿ ಶ್ರೀಮನ್ಮಹಾಭಾರತದ 15ನೇ ಸಂಪುಟದ ಮುದ್ರಣಕಾರ್ಯವನ್ನು ಮುಗಿಸಿ, ಪ್ರಕಾಶನಕ್ಕೆ ಸಿದ್ಧಪಡಿಸಿರುವುದು ಅತೀವ ಸಂತೋಷಕರ ವಿಷಯ. ಶ್ರೀ ಚಂದ್ರಮೌಳೀಶ್ವರ, ಶ್ರೀ ಸೀತಾರಾಮಚಂದ್ರರ ಪರಮಪ್ರಸಾದದಿಂದ ಶ್ರೀಮನ್ಮಹಾಭಾರತದ ಅರ್ಧಭಾಗವು ಮುಗಿದಂತಾಗಿದೆ. ಉಳಿದ ಅರ್ಧಭಾಗವೂ ಸಹ ನಿರ್ವಿಘ್ನವಾಗಿ ಮುಗಿಯುವುದರಲ್ಲಿ ಸಂಶಯವಿಲ್ಲ.

15ನೇ ಸಂಪುಟದಲ್ಲಿ ಪೂರ್ತಿಯಾಗಿ ಯುದ್ಧದ ವಾರ್ತೆಯೇ ಬರುತ್ತದೆ. ಯುದ್ಧವಾರ್ತೆಯು ಚರ್ವಿತಚರ್ವಣವೆಂಬ ಅನಿಸಿಕೆಯುಂಟು. ಆದರೆ ಈ ಸಂಪುಟವನ್ನು ಓದಿದವರಿಗೆ ಆ ಭಾವನೆಯು ದೂರವಾಗುತ್ತದೆ. ಯಥಾವತ್ತಾದ ಅನುವಾದವಿದೆ. ಕಥೆಯ ಓಟವಿದೆ.

ಆಯಾಯ ದಿವಸದ ಯುದ್ಧಸಂಗತಿಯನ್ನು ವಿಶ್ಲೇಷಿಸಿರುವುದು ವಿಶೇಷ ಸಂಗತಿ. ಅಲ್ಲಲ್ಲಿ ಬರುವ ಕೆಲವು ವಿಷಯಗಳನ್ನು ವಿಮರ್ಶಾದೃಷ್ಟಿಯಿಂದ ಉದ್ಧರಿಸಿ ಸಮಾಧಾನಹೇಳಿರುವುದೂ ಗಮನೀಯವಾಗಿದೆ.

ಈ ಸಂಪುಟದಲ್ಲಿ ಭೀಷ್ಮಪರ್ವವು ಮುಗಿದು, ದ್ರೋಣಪರ್ವದ 21 ಅಧ್ಯಾಯಗಳು ಅಡಕವಾಗಿವೆ. ಭಾಷೆಯು ಹಿಂದಿನ ಸಂಪುಟಗಳಂತೆಯೇ ಸರಳವಾಗಿದ್ದು, ತಪ್ಪುಗಳಿಲ್ಲದೇ ಒಪ್ಪಾಗಿದೆ. ಸಂಪಾದಕಮಂಡಲಿಯವರು ಹೆಚ್ಚು ಶ್ರಮವಹಿಸಿ ಕೆಲಸಮಾಡುತ್ತಿರುವರೆಂದು ಇದರಿಂದಲೇ ಸ್ಪಷ್ಟವಾಗುತ್ತದೆ. ಈ ಮಹಾಗ್ರಂಥವನ್ನು ಶ್ರದ್ಧೆಯಿಂದ ಸಂಪಾದಿಸುತ್ತಿರುವ ಈ ವಿದ್ವಾಂಸರಿಗೆ ಶ್ರೀ ಚಂದ್ರಮೌಳೀಶ್ವರ, ಶ್ರೀ ಸೀತಾರಾಮಚಂದ್ರ ದೇವತಾನುಗ್ರಹಗಳಿಂದ ಪ್ರೇಯಸ್ಸು, ಶ್ರೇಯಸ್ಸು ಪ್ರಾಪ್ತವಾಗಲಿ. ಈ ಮಹಾಗ್ರಂಥದ ಪಾಠಕರಿಗೂ ಸುಖ-ಸಂಪತ್ತುಗಳು ಲಭಿಸಲಿ–ಎಂದು ಹಾರೈಸುತ್ತೇವೆ.

ಇತಿ ಶ್ರೀಮನ್ನಾರಾಯಣಸ್ಮೃತಯಃ

ಮಿತಿ : ಶ್ರೀಕಾಲಯುಕ್ತ ಸಂ। ದ ಭಾದ್ರಪದ ಶುಕ್ಲ ೩ಯು ಚಂದ್ರವಾಸರೇ
(ತಾ. 4-9-1978)

ವಸತಿ : ನಂ. 166, ಸಚ್ಚಿದಾನಂದಪ್ರಾಸಾದ, ವಾಣಿವಿಲಾಸ ರಸ್ತೆ, ಲಾಲ್‌ಬಾಗ್ ವೆಸ್ಟ್‌ಗೇಟ್ ಎದುರು, ಬಸವನಗುಡಿ, ಬೆಂಗಳೂರು-560 044

ಶ್ರೀಮಹಾಗಣಪತಯೇ ನಮಃ ಶ್ರೀಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ಮಹಾಭಾರತ-ಭೀಷ್ಮಪರ್ವ-ಹದಿನೈದನೆಯ ಸಂಪುಟ

೬೦ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ನಾಲ್ಕನೆಯ ದಿವಸದ ಯುದ್ಧಪ್ರಾರಂಭ : ಎರಡೂ ಸೈನ್ಯಗಳ ವ್ಯೂಹನಿರ್ಮಾಣ : ಭೀಷ್ಮಾರ್ಜುನರ ದ್ವಂದ್ವಯುದ್ಧ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಯುದ್ಧವು ಪ್ರಾರಂಭವಾದ ಮೂರನೆಯ ದಿವಸದ ರಾತ್ರಿಯು ಕಳೆದು ಬೆಳಗಾಯಿತು. ನಾಲ್ಕನೆಯ ದಿವಸದ ಯುದ್ಧವು ಆರಂಭವಾಗಬೇಕು. ಭೀಷ್ಮನಂದು ಬಹಳ ಕುಪಿತನಾಗಿದ್ದನು. ಸಮಗ್ರವಾದ ಚತುರಂಗಬಲದಿಂದ ಪರಿವೃತನಾದ, ಮಹಾತ್ಮನಾದ ಭೀಷ್ಮನು ಭಾರತರ (ಕೌರವರ) ಸೈನ್ಯದ ಮುಖ್ಯಸ್ಥಾನದಲ್ಲಿ (ಅಗ್ರಸ್ಥಾನದಲ್ಲಿ) ನಿಂತು ತನ್ನ ಶತ್ರುಗಳೊಡನೆ ಯುದ್ಧಮಾಡಲು ರಣಾಂಗಣಕ್ಕೆ ಹೊರಟನು. ಅವನನ್ನು ಸುತ್ತುವರಿದಿದ್ದ ದ್ರೋಣರು, ದುರ್ಯೋಧನ, ಬಾಹ್ಲಿಕ, ದುರ್ಮರ್ಷಣ, ಚಿತ್ರಸೇನ, ಅತ್ಯಂತ ಬಲಿಷ್ಠನಾದ ಜಯದ್ರಥ–ಇವರುಗಳೂ ಸಹ ಅಪಾರಸೈನ್ಯ ಸಮೂಹದೊಡನೆ ಭೀಷ್ಮನನ್ನನುಸರಿಸಿ ಹೊರಟರು. ಆ ಸಮಯದಲ್ಲಿ ನಿನ್ನ ಮಗನಾದ ದುರ್ಯೋಧನನು ಮಹಾತ್ಮರಾದ, ಮಹಾರಥರಾದ, ತೇಜಸ್ವಿಗಳಾದ, ವೀರ್ಯವಂತರಾದ ಅನೇಕರಾಜರಿಂದ ಆವೃತನಾಗಿದ್ದು ದೇವತೆಗಳಿಂದ ಪರಿವೃತನಾದ ವಜ್ರಪಾಣಿಯಂತೆಯೇ ಪ್ರಕಾಶಿಸಿದನು.

ಆ ನಿನ್ನ ಸೈನ್ಯದ ಮುಂದುಗಡೆ ಗಜಸೈನ್ಯವು ಹೋಗುತ್ತಿದ್ದಿತು. ದೊಡ್ಡ-ದೊಡ್ಡ ಆನೆಗಳ ಕುತ್ತಿಗೆಗಳ ಮೇಲೆ ದೊಡ್ಡ ದೊಡ್ಡ ಪತಾಕೆಗಳು

ಹಾರಾಡುತ್ತಿದ್ದುವು. ಆ ಪತಾಕೆಗಳಲ್ಲಿ ಕೆಲವು ಕೆಂಪುಬಣ್ಣದುವುಗಳಾಗಿಯೂ, ಮತ್ತೆ ಕೆಲವು ಹೊಂಬಣ್ಣದುವುಗಳಾಗಿಯೂ, ಕೆಲವು ಕಪ್ಪುಬಣ್ಣದುವುಗಳಾಗಿಯೂ, ಮತ್ತೆ ಕೆಲವು ಬಿಳಿಯ ಬಣ್ಣದುವುಗಳಾಗಿಯೂ ಇದ್ದು ಶೋಭಾಯಮಾನವಾಗಿ ಕಾಣುತ್ತಿದ್ದುವು. ಶಾಂತನವನಿಂದ ರಕ್ಷಿಸಲ್ಪಡುತ್ತಿದ್ದ, ಮಹಾರಥಗಳಿಂದಲೂ-ಮಹಾಗಜಗಳಿಂದಲೂ-ಅಶ್ವಗಳಿಂದಲೂ ಕೂಡಿದ್ದ, ಮಿಂಚಿನಿಂದ ಕೂಡಿದ ಮೇಘದಂತಿದ್ದ ಆ ಮಹಾಸೈನ್ಯವು ವರ್ಷಾಕಾಲದಲ್ಲಿ ನಿಬಿಡವಾದ ಮೇಘಗಳಿಂದ ವ್ಯಾಪ್ತವಾದ ಆಕಾಶದಂತೆ ಕಾಣುತ್ತಿದ್ದಿತು. (ವರ್ಷಾಕಾಲದಲ್ಲಿ ಹುಟ್ಟಿದ ಮೇಘಗಳಿಂದ ಕೂಡಿದ ಆಕಾಶದಂತೆ ಇದ್ದಿತು–ಎಂಬ ಉಪಮಾನವು ಸೈನ್ಯದ ಅಗಾಧತೆಯನ್ನೂ, ಭೀಕರತ್ವವನ್ನೂ ಸೂಚಿಸುತ್ತಿದೆ. ಸೈನ್ಯವು ಮಿಂಚಿನಿಂದ ಕೂಡಿದ ಮೇಘದಂತೆ ಇದ್ದಿತೆಂಬುದು ಈ ಹಿಂದೆ ಹೇಳಿದ ಪ್ರಕಾಶಮಾನವಾದ ಪತಾಕೆಗಳುಳ್ಳದ್ದೆಂಬುದನ್ನು ಸೂಚಿಸುತ್ತದೆ.) ಪೂರ್ಣಪ್ರವಾಹದಿಂದ ಕೂಡಿದ ಭಯಂಕರವಾದ ನದಿಯಂತೆ ಅತ್ಯಂತಭಯಂಕರವಾಗಿದ್ದ ಕೌರವರಸೇನೆಯು ಶಾಂತನುವಿನ ಮಗನಾದ ಭೀಷ್ಮನಿಂದ ರಕ್ಷಿಸಲ್ಪಡುತ್ತಾ ಅರ್ಜುನನ ಕಡೆಗೆ ವೇಗವಾಗಿ ಧಾವಿಸಿತು. ಆ ಕೌರವಸೇನೆಯು ವ್ಯಾಲ ಎಂಬ ಹೆಸರಿನ ವ್ಯೂಹವಾಗಿ ರಚಿಸಲ್ಪಟ್ಟಿದ್ದಿತು. ಅದು ಅನೇಕರೂಪವಾಗಿ ಕಾಣುತ್ತಿದ್ದಿತು ಮತ್ತು ಅದರ ಶಕ್ತಿಯು ಹೊರಕ್ಕೆ ಕಾಣುತ್ತಿರಲಿಲ್ಲ. (ಎಷ್ಟು ರಥಿಗಳಿದ್ದಾರೆ? ಗಜಸೈನ್ಯವು ಎಷ್ಟಿದೆ?–ಎಂಬುದು ಯಾವುದೂ ಬಹಿರಂಗದಲ್ಲಿ ತಿಳಿಯುತ್ತಿರಲಿಲ್ಲ.) ಅಷ್ಟು ರಹಸ್ಯವಾಗಿದ್ದಿತು. ಆ ವ್ಯೂಹವು ಗಜಾಶ್ವ-ಪದಾತಿಗಳಿಂದಲೂ, ರಥಗಳ ಸಮೂಹಗಳಿಂದಲೂ ಸಮೃದ್ಧವಾಗಿದ್ದಿತು. ಮಹಾಮೇಘಕ್ಕೆ ಸಮಾನವಾಗಿದ್ದಿತು. ಇಂತಹ ಅಮೋಘವಾದ ವ್ಯಾಲವ್ಯೂಹವನ್ನು ಮಹಾತ್ಮನಾದ ಕಪಿರಾಜಕೇತುವಾದ ಅರ್ಜುನನು ದೂರದಿಂದಲೇ ನೋಡಿದನು. ಅನಂತರ ನರಶ್ರೇಷ್ಠನಾದ, ವೀರನಾದ, ಮಹಾತ್ಮನಾದ ಅರ್ಜುನನು ಶತ್ರುಪಕ್ಷದ ಯುವಕರೆಲ್ಲರನ್ನೂ ವಧೆಮಾಡಲು ನಿಶ್ಚಯಿಸಿದವನಾಗಿ, ಬಿಳಿಯದಾದ ಕುದುರೆಗಳಿಂದಲೂ ಮತ್ತು ಧ್ವಜದಿಂದಲೂ ಸಜ್ಜಾಗಿದ್ದ ರಥದಲ್ಲಿ ಕುಳಿತು, ತನ್ನ ಕಡೆಯ ಸೈನ್ಯದೊಡನೆ ಶತ್ರುಗಳಿಗೆ ಅಭಿಮುಖವಾಗಿ ತೆರಳಿದನು. ಅರ್ಜುನನು ಕುಳಿತಿದ್ದ ರಥದಲ್ಲಿ ಯುದ್ಧಕ್ಕೆ ಬೇಕಾದ ಸಾಮಗ್ರಿಗಳೆಲ್ಲವೂ ಸಮೃದ್ಧವಾಗಿದ್ದುವು. ಅವನ ರಥದ

ಚಕ್ರಗಳು ಸುಂದರವಾಗಿಯೂ ದೃಢವಾಗಿಯೂ ಇದ್ದುವು ಮತ್ತು ಆ ರಥವು ದೃಢಬಂಧನದಿಂದ ಬಹುರಮ್ಯವಾಗಿ ಕಾಣುತ್ತಿದ್ದ ಈಷಾದಂಡವುಳ್ಳದ್ದಾಗಿದ್ದಿತು. ಯಾದವರ ನಾಯಕನಾದ ಶ್ರೀಕೃಷ್ಣನಿಂದಲೇ ಆ ರಥವು ನಡೆಸಲ್ಪಡುತ್ತಿದ್ದಿತು. ಕಪಿರಾಜನೇ ಆ ಮಹಾರಥದ ಧ್ವಜದಲ್ಲಿ ಗರ್ಜಿಸುತ್ತಾ ಕುಳಿತಿದ್ದನು. ಅಂತಹ ರಥವನ್ನು ಕಂಡು, ನಿನ್ನ ಮಕ್ಕಳ ಸಹಿತರಾದ ಎಲ್ಲ ಕೌರವರೂ ವಿಷಾದಿಸಿದರು. ಆಯುಧವನ್ನು ಮೇಲೆತ್ತಿ ಶತ್ರುಗಳನ್ನು ಪ್ರಹರಿಸಲು ಸಿದ್ಧನಾಗಿದ್ದ ಲೋಕವಿಖ್ಯಾತಮಹಾರಥನಾದ, ಅರ್ಜುನನಿಂದ ಸಂರಕ್ಷಿಸಲ್ಪಡುತ್ತಿದ್ದ ಮತ್ತು ನಿಯಂತ್ರಿಸಲ್ಪಡುತ್ತಿದ್ದ, ನಾಲ್ಕು-ನಾಲ್ಕು ಸಾವಿರ ಆನೆಗಳೇ ಕರ್ಣಗಳಾಗಿ ಉಳ್ಳ (ಎರಡು ಪಕ್ಕಗಳಲ್ಲಿಯೂ ನಾಲ್ಕು-ನಾಲ್ಕು ಸಾವಿರ ಗಜ ಸೈನ್ಯವನ್ನು ಹೊಂದಿದ್ದ) ವ್ಯೂಹಗಳಿಗೆಲ್ಲಾ ಶ್ರೇಷ್ಠವಾದ (ಗಜಸೈನ್ಯಮುಖ್ಯವಾದ) ವ್ಯೂಹವನ್ನು ನಿನ್ನ ಸೈನಿಕರು ನೋಡಿದರು. ಈ ಹಿಂದೆ ಎರಡನೆಯ ದಿವಸದ ಯುದ್ಧದಲ್ಲಿ ಕೌರವಸತ್ತಮನಾದ ಯುಧಿಷ್ಠಿರನು ಧೃಷ್ಟದ್ಯುಮ್ನನ ಮೂಲಕವಾಗಿ ಅಮೋಘವಾದ ಕ್ರೌಂಚಾರುಣವ್ಯೂಹವನ್ನು ಹೇಗೆ ರಚಿಸಿದ್ದನೋ ಅಂತಹುದೇ ವ್ಯೂಹವನ್ನು ನಾಲ್ಕನೆಯ ದಿವಸದಲ್ಲಿ ಅರ್ಜುನನು ರಚಿಸಿದನು. ಅವನು ರಚಿಸಿದ್ದ ವ್ಯೂಹಕ್ಕೆ ಸಮಾನವಾದ ವ್ಯೂಹವು ಮನುಷ್ಯಲೋಕದಲ್ಲಿ ಹಿಂದೆಯೂ ಇರಲಿಲ್ಲ ; ಮುಂದೆಯೂ ಇರಲು ಸಾಧ್ಯವಿಲ್ಲ ; ಅದು ಯಾರಿಂದಲೂ ನೋಡಿದ್ದೂ ಆಗಿರಲಿಲ್ಲ ; ಕೇಳಿದ್ದೂ ಆಗಿರಲಿಲ್ಲ. ಅಂತಹ ಅಭೂತಪೂರ್ವವಾದ ಅಮೋಘವಾದ ವ್ಯೂಹವನ್ನು ಅರ್ಜುನನು ರಚಿಸಿದನು.

ಅನಂತರ ಸೇನಾಪತಿಯ ಆಜ್ಞಾನುಸಾರವಾಗಿ ಪಾಂಚಾಲಪ್ರಮುಖರು ಚೇದಿಪ್ರಮುಖರಿಂದೊಡಗೂಡಿ ಯೋಜಿತಸ್ಥಾನಗಳಲ್ಲಿ ಯುದ್ಧಸನ್ನದ್ಧರಾಗಿ ನಿಂತುಕೊಂಡರು. ನಾಲ್ಕನೆಯ ದಿವಸದ ಯುದ್ಧವು ಪ್ರಾರಂಭವಾಗುವುದರಲ್ಲಿದ್ದಾಗ ದಂಡನಾಯಕನ ಆದೇಶದಂತೆ ಸಾವಿರಾರು ಭೇರಿಗಳನ್ನು ಏಕಕಾಲದಲ್ಲಿ ಯೋಧರು ತಾಡನಮಾಡಿದರು. ಭೇರೀನಾದವನ್ನನುಸರಿಸಿ ಶಂಖನಿನಾದಗಳಾದುವು. ಬಗೆಬಗೆಯ ಅನೇಕ ವಾದ್ಯಗಳು ಮೊಳಗಿದುವು. ರಥಗಳು ಗಡ-ಗಡಾ ಶಬ್ದದೊಡನೆ ಚಲಿಸತೊಡಗಿದುವು. ಎರಡೂ ಪಕ್ಷಗಳ ಸೈನ್ಯಗಳಲ್ಲಿದ್ದ ವೀರರು ಸಿಂಹನಾದಗಳನ್ನು ಮಾಡಿದರು. ಅನಂತರ ಎಲ್ಲ ಕಡೆಗಳಿಂದಲೂ ಧನುಸ್ಸುಗಳ

ಟೇಂಕಾರಶಬ್ದಗಳೂ ಕೇಳಿಬಂದುವು. ಬಳಿಕ ವೀರರು ಬಾಣಗಳನ್ನು ಧನುಸ್ಸಿಗೆ ಯೋಜಿಸಿ ಆಕರ್ಣಾಂತವಾಗಿ ಸೆಳೆಯುತ್ತಿದ್ದ ಶಬ್ದಗಳೂ ಕೇಳಿಬಂದುವು. ಮಹಾರಾಜ! ನಾನು ಈ ಹಿಂದೆ ಹೇಳಿದಂತೆ ವೀರರ ಶಂಖಧ್ವನಿಯಾಗು ತ್ತಲೇ ಭೇರೀ, ಪಣವ–ಮುಂತಾದ ವಾದ್ಯಗಳಿಂದ ಉಂಟಾದ ಶಬ್ದಗಳು ಶಂಖಧ್ವನಿಯಲ್ಲಿ ಉಡುಗಿಹೋದುವು. ಸರ್ವತ್ರ ಶಂಖಧ್ವನಿಯು ಮಾತ್ರವೇ ಕೇಳಿಸುತ್ತಿದ್ದಿತೇ ಹೊರತು ಭೇರೀ-ಪಣವಾದಿಗಳ ಶಬ್ದವೇ ಕೇಳಿಸುತ್ತಿರಲಿಲ್ಲ. ಶಂಖಧ್ವನಿಯಾಗುತ್ತಲೇ ಘೋರವಾದ ಯುದ್ಧವು ಆರಂಭವಾಗಿಯೇ ಬಿಟ್ಟಿತು. ಸರಸರನೆ ಇತ್ತಲತ್ತ-ಅತ್ತಲಿತ್ತ ಶತ್ರುಗಳನ್ನಟ್ಟಿಸಿಕೊಂಡು ಚಲಿಸು ತ್ತಿದ್ದ ಸೈನಿಕರ ಪದಾಘಾತಗಳಿಂದ ಹುಟ್ಟಿದ ಧೂಳಿಯು ಶಂಖಧ್ವನಿಯಿಂದ ಶಬ್ದಾಯಮಾನವಾಗಿದ್ದ ಅಂತರಿಕ್ಷದಲ್ಲಿ ಬಲೆಯ ರೂಪದಲ್ಲಿ ಹರಡಿ ಕೊಂಡಿತು. ಮಹಾನುಭಾವರಾದ ವೀರರು, ಧೂಳಿನ ಬಲೆಯ ಮೂಲಕ ವಾಗಿ ಬರುತ್ತಿದ್ದ ಅಲ್ಪ-ಸ್ವಲ್ಪ ಸೂರ್ಯನ ಪ್ರಕಾಶವನ್ನು ಕಂಡು ತಮ್ಮ ಶತ್ರು ಗಳು ಯಾರೆಂಬುದನ್ನು ಗುರುತಿಸಿ ಅವರ ಮೇಲೆ ಒಡನೆಯೇ ಬಿದ್ದರು. ರಥಿಕನು ರಥಿಕನೊಡನೆ ಯುದ್ಧಮಾಡುತ್ತಿದ್ದನು. ಕ್ಷಣಮಾತ್ರದಲ್ಲಿ ವೀರ ರಥಿಕನ ಪ್ರಹಾರಕ್ಕೊಳಗಾದ ಎದುರು ಪಕ್ಷದ ರಥಿಕನು ಸೂತಾಶ್ವ-ರಥ-ಕೇತುಗಳ ಸಹಿತವಾಗಿ ಕೆಳಕ್ಕೆ ಬೀಳುತ್ತಿದ್ದನು. ಕಣ್ಣುಮುಚ್ಚಿ ತೆಗೆಯುವುದ ರೊಳಗಾಗಿ ಎರಡು ಪಕ್ಷಗಳಲ್ಲಿಯೂ ನೂರಾರು ರಥಗಳು ನಾಶಹೊಂದಿ ಕೆಳಕ್ಕೆ ಬೀಳುತ್ತಿದ್ದುದನ್ನು ಅಲ್ಲಿ ಕಾಣಬಹುದಾಗಿದ್ದಿತು. ಮಹಾರಾಜ! ಹಿಂದಿನ ದಿವಸಗಳಲ್ಲಿ ನಡೆದಂತೆಯೇ ನಾಲ್ಕನೆಯ ದಿವಸವೂ ಸಹ ಮೊದ ಮೊದಲು ದ್ವಂದ್ವಯುದ್ಧವು ಧರ್ಮದಿಂದಲೇ ನಡೆಯಿತು. ಗಜಸೈನಿಕನು ಗಜಸೈನಿಕನ ಮೇಲೆಯೇ ಯುದ್ಧಕ್ಕೆ ಹೋಗಿ ಗಜಸೈನಿಕನನ್ನು ಧ್ವಂಸಮಾಡುತ್ತಿದ್ದನು. ಕಾಲಾಳು ಕಾಲಾಳಿನ ಮೇಲೆಯೇ ಯುದ್ಧಕ್ಕೆ ಹೋಗಿ ಅವನನ್ನು ಧ್ವಂಸಮಾಡುತ್ತಿದ್ದನು. ಪ್ರಾಸಗಳಿಂದಲೂ, ಖಡ್ಗಗಳಿಂದಲೂ ಸಜ್ಜಾಗಿದ್ದ ಅಶ್ವಸೈನ್ಯಸಮೂಹವು ಎದುರುಪಕ್ಷದ ಅಶ್ವಸೈನ್ಯಸಮೂಹಗಳ ಮೇಲೆ ಆಕ್ರಮಣವನ್ನು ನಡೆಸಿದುವು. ಆವರ್ತನ-ಪ್ರತ್ಯಾವರ್ತನಗಳಿಂದ ನಡೆಯುತ್ತಿದ್ದ ಆ ಅಶ್ವಸೈನ್ಯಗಳ ಯುದ್ಧವು ಅದ್ಭುತವಾಗಿ ಕಾಣುತ್ತಿದ್ದಿತು. ಅಶ್ವಸೈನಿಕರು ಪರಸ್ಪರಸಂಹೃತರಾಗಿ ಕೆಳಗೆ ಬೀಳುತ್ತಿದ್ದುದು ಬಹುಘೋರವಾಗಿಯೂ ಕಾಣುತ್ತಿದ್ದಿತು.

ಕುದುರೆಸವಾರರು ಸಾಮಾನ್ಯವಾಗಿ ಕತ್ತಿ ಮತ್ತು ಗುರಾಣಿಗಳನ್ನೇ ಹಿಡಿದು ಯುದ್ಧಮಾಡುತ್ತಿದ್ದರು. ಅವರು ಹಿಡಿದಿದ್ದ ಗುರಾಣಿಗಳು ಸುವರ್ಣ ಮಯವಾದ ನಕ್ಷತ್ರಗಳ ಚಿಹ್ನೆಗಳಿಂದ ಅಲಂಕೃತವಾಗಿದ್ದುವು. ಸೂರ್ಯನ ಪ್ರಭೆಯಂತೆ ಪ್ರಭೆಗಳುಳ್ಳದ್ದಾಗಿದ್ದುವು. ಆ ಗುರಾಣಿಗಳು ಎದುರು ಪಕ್ಷದ ಸೈನಿಕರು ಧರಿಸುತ್ತಿದ್ದ ಗಂಡುಗೊಡಲಿ, ಪ್ರಾಸ ಮತ್ತು ಖಡ್ಗಗಳಿಂದ ಕತ್ತರಿ ಸಲ್ಪಟ್ಟುವುಗಳಾಗಿ ಭೂಮಿಯ ಮೇಲೆ ಬೀಳುತ್ತಿದ್ದುವು.

ಮಹಾರಾಜ! ಸ್ವಲ್ಪಹೊತ್ತು ಹೀಗೆ ಯುದ್ಧವು ನಡೆದನಂತರ ಹಿಂದಿ ನಂತೆಯೇ ತಾರತಮ್ಯವೇ ಇಲ್ಲದ ಯುದ್ಧವು ಪ್ರಾರಂಭವಾಯಿತು. ರಥಿ ಕನು-ಪದಾತಿಯನ್ನೂ, ಪದಾತಿಯು-ಅಶ್ವಸೈನಿಕನನ್ನೂ, ಅಶ್ವಸೈನಿಕನು-ಗಜ ಸೈನಿಕನನ್ನೂ ಸ್ವೇಚ್ಛೆಯಿಂದ ಪ್ರಹರಿಸತೊಡಗಿದರು. ಮದಿಸಿದ ಆನೆಗಳ ಕೋರೆದಾಡೆಗಳ ಪ್ರಹಾರಕ್ಕೂ ಮತ್ತು ಸೊಂಡಿಲುಗಳ ಪ್ರಹಾರಕ್ಕೂ ಸಿಕ್ಕಿ ಸೂತರ ಸಹಿತರಾಗಿ ರಥಿಗಳು ಕೆಳಕ್ಕೆ ಬಿದ್ದು ಪ್ರಾಣಗಳನ್ನು ತೊರೆಯುತ್ತಿದ್ದರು. ರಥರ್ಷಭರು (ಶ್ರೇಷ್ಠರಾದ ರಥಿಕರು) ಪ್ರಯೋಗಿಸಿದ ಬಾಣಗಳಿಗೆ ಅನೇಕ ಗಜಸೈನ್ಯಗಳು ತುತ್ತಾಗಿ ಅಸುವನ್ನು ತೊರೆದು ಭೂಮಿಯ ಮೇಲೆ ಬೀಳುತ್ತಿದ್ದುವು. ಆನೆಗಳ ಸಮೂಹಗಳು ವೇಗವಾಗಿ ಬಂದು ಕುದುರೆಸವಾರರನ್ನೂ ಮತ್ತು ಪದಾತಿಗಳನ್ನೂ ಸೊಂಡಿಲಿನಿಂದ ಎತ್ತಿಹಾಕುತ್ತಿದ್ದುವು. ಅನಂತರ ಕುದುರೆಸವಾರರ ಮತ್ತು ಪದಾತಿಗಳ ಶರೀರದ ಕೆಳಭಾಗವನ್ನು ದಂತಗಳಿಂದ ಚುಚ್ಚುತ್ತಿದ್ದುವು. ಆನೆಗಳ ಪ್ರಹಾರವನ್ನು ತಡೆದುಕೊಳ್ಳಲಾರದೇ ಪದಾತಿಯುವಕರು ಆರ್ತಧ್ವನಿಯಿಂದ ಕಿರುಚಿಕೊಳ್ಳುತ್ತಿದ್ದರು. ಈ ಆರ್ತಸ್ವರವನ್ನು ಕೇಳಿದ ಪ್ರೇಕ್ಷಕರಾದ ಮನುಷ್ಯರು ಒಡನೆಯೇ ವಿಷಾದಪಟ್ಟರು. ಆ ಮುಹೂರ್ತದಲ್ಲಿ ಕುದುರೆಸವಾರರ ಪದಾತಿಯುವಕರ ಮಹಾಕ್ಷಯವಾಗುತ್ತಿರಲಾಗಿ (ಸರ್ವತ್ರ ಅವರ ಸಂಹಾರವಾಗುತ್ತಿರಲಾಗಿ), ಅದನ್ನು ಕಂಡ ಗಜಾಶ್ವ-ರಥಸೈನಿಕರು ಭ್ರಾಂತರಾಗಿ ನಿಂತಿರಲಾಗಿ, ಮಹಾರಥರಿಂದ ಪರಿವೃತನಾಗಿದ್ದ ಭೀಷ್ಮನು ಕಪಿರಾಜಕೇತುವಾದ ಅರ್ಜುನನನ್ನು ಕಂಡನು. ಆ ಭೀಷ್ಮನು ಐದು ತಾಳೇಮರಗಳಷ್ಟು ಎತ್ತರವಾಗಿಯೂ, ತಾಲವೃಕ್ಷವನ್ನೇ ಚಿಹ್ನೆಯನ್ನಾಗಿಯೂ ಹೊಂದಿದ್ದ ಧ್ವಜದಿಂದ ಕೂಡಿದ್ದನು. ಬಲಿಷ್ಠವಾದ ಮತ್ತು ಅದ್ಭುತವಾದ ಒಳ್ಳೆಯ ಕುದುರೆಗಳಿಂದ ಯುಕ್ತವಾಗಿದ್ದ, ಶೀಘ್ರಗಾಮಿಯಾದ ಮತ್ತು ಬಹು

ಬಲಿಷ್ಠವಾಗಿದ್ದ ರಥವನ್ನು ಭೀಷ್ಮನು ಹೊಂದಿದ್ದನು. ಅದ್ಭುತವಾದ ತಾಲ ಧ್ವಜದಿಂದ ಕೂಡಿದ ರಥದಲ್ಲಿ ಕುಳಿತಿದ್ದ ಭೀಷ್ಮನು ಮಹಾಸ್ತ್ರಗಳಿಂದಲೂ ವಜ್ರಾಯುಧಕ್ಕೆ ಸಮಾನವಾದ ಬಾಣಗಳಿಂದಲೂ ಕೂಡಿದ್ದು ಅತ್ಯಂತದೀಪ್ತಿ ಮಂತನಾಗಿದ್ದ ಅರ್ಜುನನನ್ನು ಆಕ್ರಮಿಸಿದನು. ಶಕ್ರಪ್ರತಿಮಪ್ರಭಾವನಾದ, ಇಂದ್ರನ ಮಗನೇ ಆದ ಅರ್ಜುನನನ್ನು ಭೀಷ್ಮನು ಆಕ್ರಮಿಸಿದಂತೆಯೇ ದ್ರೋಣಪ್ರಮುಖರಾದ ಕೃಪ, ಶಲ್ಯ, ವಿವಿಂಶತಿ, ದುರ್ಯೋಧನ ಮತ್ತು ಭೂರಿಶ್ರವ–ಇವರೂ ಸಹ ಆಕ್ರಮಿಸಿದರು. ಅನಂತರ ಸರ್ವಾಸ್ತ್ರವಿದನಾದ, ಸುವರ್ಣಮಯವಾಗಿಯೂ ಮತ್ತು ಚಿತ್ರ-ವಿಚಿತ್ರವಾಗಿಯೂ ಇದ್ದ ಕವಚ ವನ್ನು ತೊಟ್ಟಿದ್ದ, ಅರ್ಜುನನ ಮಗನಾದ, ಮಹಾಶೂರನಾದ ಅಭಿಮನ್ಯುವು ಒಂದು ಶ್ರೇಷ್ಠವಾದ ರಥದಲ್ಲಿ ಕುಳಿತು ಬಹಳ ವೇಗವಾಗಿ ಬಂದು ಆ ಎಲ್ಲ ಕೌರವಪ್ರಮುಖರನ್ನೂ ಎದುರಿಸಿದನು.

ಕ್ಷಣಮಾತ್ರದಲ್ಲಿ ಅಭಿಮನ್ಯುವು ಶತ್ರುಗಳಿಗೆ ಸಹಿಸಲಶಕ್ಯವಾದ ಕರ್ಮ ವನ್ನು ಮಾಡಿತೋರಿಸಿದನು. ಆ ಮಹಾರಥರ ಮಹಾಸ್ತ್ರಗಳೆಲ್ಲವನ್ನೂ ಕ್ಷಣ ಮಾತ್ರದಲ್ಲಿ ನಿರಸನಗೊಳಿಸಿ–ಯಜ್ಞಮಂಟಪದಲ್ಲಿ ಮಂತ್ರಪೂರ್ವಕವಾದ ಆಹುತಿಯನ್ನು ಪಡೆದುಕೊಂಡ ಅರ್ಚಿರ್ಮಾಲಿಯಾದ ಭಗವಾನ್ ಅಗ್ನಿ ದೇವನು ಪ್ರಕಾಶಿಸುವಂತೆಯೇ–ಅಭಿಮನ್ಯುವು ಆ ರಣಾಂಗಣದಲ್ಲಿ ಪ್ರಕಾಶಿ ಸಿದನು. ಅಭಿಮನ್ಯುವಿನ ಸಹಿಸಲಸಾಧ್ಯವಾದ ಪರಾಕ್ರಮದಿಂದ ಕುಪಿತನಾದ, ಮಹಾಶಕ್ತಿಶಾಲಿಯಾದ ಭೀಷ್ಮನು ಶತ್ರುಪಕ್ಷದ ಸೈನ್ಯವನ್ನು ಸಾವಿರಾರು ಸಂಖ್ಯೆ ಯಲ್ಲಿ ಕೊಚ್ಚಿಹಾಕುತ್ತಾ ರಕ್ತವೇ ನೀರಾಗಿಯೂ–ನೊರೆಯಾಗಿಯೂ ಉಳ್ಳ ನದಿಯೊಂದನ್ನು ಬಹುಬೇಗ ಸೃಷ್ಟಿಸಿ, ಅರ್ಜುನನ ಮಗನಾದ ಅಭಿಮನ್ಯು ವನ್ನು ಅತಿಕ್ರಮಿಸಿ ಮಹಾರಥನಾದ ಅರ್ಜುನನನ್ನೇ ಸಂಧಿಸಿ ಅವನೊಡನೆ ಯುದ್ಧವನ್ನು ಪ್ರಾರಂಭಿಸಿದನು. ಭೀಷ್ಮನು ತನ್ನೆದುರಾಗಿ ನಿಂತು ತನ್ನ ಮೇಲೆ ಬಾಣಗಳ ಮಳೆಯನ್ನೇ ಸುರಿಸುತ್ತಿರುವುದನ್ನು ಕಂಡು ಅರ್ಜುನನು ನಸು ನಕ್ಕನು. ಉಜ್ಜುಕಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ಅದ್ಭುತವಾದ ಶಕ್ತಿ ಯಿಂದ ಕೂಡಿದ್ದ, ಗಾಂಡೀವದಿಂದ ವಿಮುಕ್ತವಾದ 'ವಿಪಾಠ' ಎಂಬ ಬಾಣಗಳ ಸಮೂಹದಿಂದ ತನ್ನ ಮೇಲೆ ಸತತವಾಗಿ ಬೀಳುತ್ತಿದ್ದ ಮಹಾಸ್ತ್ರಗಳ ಸಮೂಹವನ್ನು ಕ್ಷಣಮಾತ್ರದಲ್ಲಿ ಕಿರೀಟಮಾಲಿಯು ವಿನಾಶಮಾಡಿದನು.

ಅನಂತರ ಮಹಾತ್ಮನಾದ, ಕಪಿರಾಜಕೇತುವಾದ, ಅಪ್ರತಿಹತಪರಾಕ್ರಮನಾದ ಅರ್ಜುನನು ಸರ್ವಧನುರ್ಧಾರಿಗಳಲ್ಲಿಯೂ ಶ್ರೇಷ್ಠನಾದ ಭೀಷ್ಮನನ್ನು ನಿರ್ಮಲವಾದ ಭಲ್ಲಾಯುಧಗಳಿಂದಲೂ (ಭಲ್ಲಗಳೆಂಬ ಬಾಣಗಳಿಂದಲೂ) ಮತ್ತು ಬಾಣಗಳ ಜಾಲಗಳಿಂದಲೂ ಮುಚ್ಚಿಬಿಟ್ಟನು. (ಬಾಣಗಳ ಮತ್ತು ಭಲ್ಲಗಳ ಮಳೆಗರೆದನು.) ಭೀಷ್ಮನಿಂದ ಬಿಡಲ್ಪಟ್ಟಿದ್ದ ಮಹಾಸ್ತ್ರಗಳ ಸಮೂಹವು ಅಂತರಿಕ್ಷದಲ್ಲಿಯೂ ತುಂಬಿಕೊಂಡಿದ್ದಿತು. ಕಪಿರಾಜಕೇತುವಿನ ಅಸ್ತ್ರಗಳ ಸಮೂಹವೂ ಅಂತರಿಕ್ಷದಲ್ಲಿ ತುಂಬಿಕೊಂಡಿದ್ದಿತು. ಆ ಸಮಯದಲ್ಲಿ ಒಂದು ವಿಚಿತ್ರದೃಶ್ಯವನ್ನು ನಿನ್ನ ಕಡೆಯ ಸೈನಿಕರೆಲ್ಲರೂ ಕಂಡರು. ಸೂರ್ಯನು ತನ್ನ ಕಿರಣಗಳಿಂದ ಕತ್ತಲೆಯನ್ನು ಧ್ವಂಸಗೊಳಿಸುವಂತೆ ಭೀಷ್ಮನು ಅರ್ಜುನನ ಬಾಣಗಳನ್ನು ಆಕಾಶದಲ್ಲಿಯೇ ಕತ್ತರಿಸಿ ಕೆಳಕ್ಕೆ ಬೀಳಿಸುತ್ತಿರುವುದನ್ನು ನಿನ್ನವರು ಕಂಡರು. ಈ ರೀತಿಯಲ್ಲಿ ಸತ್ಪುರುಷರಲ್ಲಿ ಶ್ರೇಷ್ಠರಾದ ಭೀಷ್ಮಾರ್ಜುನರ ಧನುಸ್ಸುಗಳ ಭಯಂಕರನಿನಾದವನ್ನೂ ಮತ್ತು ದೈನ್ಯರಹಿತವಾದ ಮತ್ತು ಮಹಾಪರಾಕ್ರಮಯುಕ್ತವಾದ ದ್ವೈರಥಯುದ್ಧವನ್ನೂ (ಎರಡು ರಥಗಳಿಂದ ಮಾತ್ರ ನಡೆಯುವ ಯುದ್ಧ) ಕುರು-ಸೃಂಜಯರೂ ಮತ್ತು ಯುದ್ಧವನ್ನು ನೋಡಲು ಬಂದಿದ್ದ ಪ್ರೇಕ್ಷಕರೂ ಕೇಳಿದರು ಮತ್ತು ಕಂಡರು.

೬೦ನೆಯ ಅಧ್ಯಾಯವು ಮುಗಿಯಿತು.

೬೧ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಅಭಿಮನ್ಯುವಿನ ಪರಾಕ್ರಮ : ಧೃಷ್ಟದ್ಯುಮ್ನನಿಂದ ಶಲಪುತ್ರನ ವಧೆ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

ಮಹಾರಾಜ! ಭೀಷ್ಮಾರ್ಜುನರ ದ್ವೈರಥಯುದ್ಧವು ಅತ್ಯದ್ಭುತರೀತಿಯಲ್ಲಿ ನಡೆಯುತ್ತಿತ್ತೆಂದು ಹೇಳಿದೆನಲ್ಲವೇ? ಇತ್ತಲಾಗಿ ಅರ್ಜುನನ ಮಗನಾದ ಅಭಿಮನ್ಯುವನ್ನು ದ್ರೋಣಪುತ್ರನಾದ ಅಶ್ವತ್ಥಾಮ, ಭೂರಿಶ್ರವಸ, ಶಲ್ಯ, ಚಿತ್ರಸೇನ ಮತ್ತು ಶಲಪುತ್ರ ಇವರು ನಾಲ್ಕು ದಿಕ್ಕುಗಳಿಂದಲೂ ಮುತ್ತಿಗೆ ಹಾಕಿದರು. ಮದಿಸಿದ ಐದು ಆನೆಗಳಿಂದ ಸುತ್ತುವರಿಯಲ್ಪಟ್ಟ ಸಿಂಹದ

ಮರಿಯಂತೆ–ಅಮಿತತೇಜಸ್ವಿಗಳಾದ ಐವರು ಪುರುಷವ್ಯಾಘ್ರರಿಂದ ಒಬ್ಬನೇ ಒಬ್ಬ ಅಭಿಮನ್ಯುವು ಸುತ್ತುಗಟ್ಟಲ್ಪಟ್ಟಿರುವುದನ್ನು ಅಲ್ಲಿ ನೆರೆದಿದ್ದ ಪ್ರೇಕ್ಷಕ ಜನರು ನೋಡಿದರು. (ಸಿಂಹದ ಮರಿಯೊಂದು ಮದಗಜಗಳನ್ನು ಎದುರಿಸುವಂತೆ ವೀರಅಭಿಮನ್ಯುವು ಐವರು ಕೌರವವೀರರನ್ನೂ ಎದುರಿಸಿ ಯುದ್ಧಮಾಡುತ್ತಿದ್ದನು.) ಲಕ್ಷ್ಯವನ್ನು ಭೇದಿಸುವುದರಲ್ಲಿ, ಶೌರ್ಯವನ್ನು ತೋರಿಸುವುದರಲ್ಲಿ, ಪರಾಕ್ರಮಪ್ರದರ್ಶನದಲ್ಲಿ, ಅಸ್ತ್ರಗಳನ್ನು ಹೊಂದಿರುವಿಕೆ ಯಲ್ಲಿ ಮತ್ತು ಬಾಣಗಳ ಆದಾನ-ಯೋಜನ-ಪ್ರಹರಣಗಳ ಕೈಚಳಕದಲ್ಲಿ ಅಭಿಮನ್ಯುವಿಗೆ ಸಮಾನವಾದವರು ಆ ಐವರು ವೀರರಲ್ಲಿ ಯಾರೂ ಇರಲಿಲ್ಲ. ಮಗನ ಪರಾಕ್ರಮವನ್ನು ನೋಡಿ ಹಿಗ್ಗದ ತಂದೆ ಯಾರಿದ್ದಾರೆ? ಶತ್ರುಗಳನ್ನು ದಮನಮಾಡುತ್ತಿದ್ದ, ಯುದ್ಧದಲ್ಲಿ ತನ್ನ ಅತುಲ ಪರಾಕ್ರಮವನ್ನು ಪ್ರದರ್ಶಿಸುತ್ತಿದ್ದ ಮತ್ತು ಶತ್ರುಗಳನ್ನು ವಿಧ್ವಂಸನ ಗೊಳಿಸಬೇಕೆಂಬ ದೃಢನಿರ್ಧಾರದಿಂದ ಪ್ರಯತ್ನಪೂರ್ವಕವಾಗಿ ಯುದ್ಧ ಮಾಡುತ್ತಿದ್ದ ಮಗನಾದ ಅಭಿಮನ್ಯುವನ್ನು ಕಂಡು ಸಂತೋಷಾಧಿಕ್ಯದಿಂದ ಅರ್ಜುನನು ಸಿಂಹನಾದಮಾಡಿದನು. ಪ್ರಜಾನಾಥ! ನಿನ್ನ ಮೊಮ್ಮಗನಾದ ಅಭಿಮನ್ಯುವು ನಿನ್ನ ಸೈನಿಕರಿಗೆ ಕೊಡುತ್ತಿದ್ದ ಉಪಟಳವು ಅಷ್ಟಿಷ್ಟಲ್ಲ. ಅವನು ಅನೇಕಪ್ರಕಾರವಾಗಿ ನಿನ್ನ ಸೈನ್ಯಕ್ಕೆ ಪೀಡೆಯನ್ನುಂಟುಮಾಡುತ್ತಿದ್ದುದನ್ನು ಕಂಡು ನಿನ್ನ ಇನ್ನೂ ಅನೇಕ ಸೈನಿಕರು ಅಭಿಮನ್ಯುವನ್ನು ಸುತ್ತುವರಿದು ಯುದ್ಧಕ್ಕೆ ನಿಂತರು. ಸಾವಿರಾರು ಸಂಖ್ಯೆಯಲ್ಲಿ ಕೌರವಸೈನಿಕರು ನಾಲ್ಕೂ ದಿಕ್ಕುಗಳಿಂದ ನುಗ್ಗಿಬರುತ್ತಿದ್ದರೂ ವೀರನಾದ ಅಭಿಮನ್ಯುವು ಧೃತಿಗೆಡಲಿಲ್ಲ. ಶತ್ರುಗಳಲ್ಲಿ ದೈನ್ಯತೆಯನ್ನುಂಟುಮಾಡುವ ಸಾಮರ್ಥ್ಯವುಳ್ಳ, ಅದೀನಸತ್ತ್ವ ನಾದ ಅಭಿಮನ್ಯುವು ತೇಜಸ್ಸಿನಿಂದಲೂ ಮತ್ತು ಅಪರಿಮಿತವಾದ ಬಲದಿಂದಲೂ ಕೌರವರ ಸೇನೆಯ ಮೇಲೆ ಆಕ್ರಮಣನಡೆಸಿದನು. ಶತ್ರುಗಳೊಡನೆ ಯುದ್ಧಮಾಡುತ್ತಿದ್ದಾಗ ಅಭಿಮನ್ಯುವಿನಿಂದ ಬಹಳ ಸುಲಭರೀತಿಯಲ್ಲಿ ಪ್ರತಿಕ್ಷಣದಲ್ಲಿಯೂ ಸೆಳೆಯಲ್ಪಡುತ್ತಿದ್ದ ಧನುಸ್ಸು ಸೂರ್ಯನಿಗೆ ಸಮಾನವಾದ ಪ್ರಭೆಯಿಂದ ಕೂಡಿರುವುದೋ ಎಂಬಂತೆ ಕಾಣುತ್ತಿದ್ದಿತು. (ಧನುಸ್ಸು ಯಾವಾಗಲೂ ಸೂರ್ಯನಂತೆ ಮಂಡಲಾಕಾರವಾಗಿಯೇ ಇರುತ್ತಿದ್ದು ರಶ್ಮಿರೂಪವಾದ ಬಾಣಗಳು ಒಂದಕ್ಕೊಂದಕ್ಕೆ ಅಂಟಿಕೊಂಡಂತೆಯೇ ಧನುಸ್ಸಿನಿಂದ ಹೊರಬರುತ್ತಿದ್ದುವು.)

ಈ ರೀತಿಯಲ್ಲಿ ಅತ್ಯಮೋಘವಾದ ಹಸ್ತಲಾಘವವನ್ನು ಹೊಂದಿದ್ದ ಅಭಿಮನ್ಯುವು ಅಶ್ವತ್ಥಾಮನನ್ನು ಒಂದು ಬಾಣದಿಂದಲೂ, ಶಲ್ಯನನ್ನು ಐದು ಬಾಣಗಳಿಂದಲೂ ಪ್ರಹರಿಸಿ, ಶಲನ ಧ್ವಜವನ್ನು ಎಂಟು ಬಾಣಗಳಿಂದ ಕತ್ತರಿಸಿದನು. ಆ ಸಮಯದಲ್ಲಿ ಭೂರಿಶ್ರವಸನು ಅಭಿಮನ್ಯುವಿನ ಮೇಲೆ ಸುವರ್ಣಮಯವಾದ ದಂಡದಿಂದ ಕೂಡಿದ್ದ ಮಹಾಶಕ್ತಿಯೊಂದನ್ನು ಪ್ರಯೋಗಿಸಿದನು. ಹಾವಿನಂತೆಯೇ ತನ್ನ ಕಡೆಗೆ ಸರ-ಸರನೆ ಬರುತ್ತಿದ್ದ ಆ ಮಹಾಶಕ್ತಿಯನ್ನೂ ಅಭಿಮನ್ಯುವು ನಿಶಿತವಾದ ಬಾಣದಿಂದ ಕತ್ತರಿಸಿದನು. ಶಲ್ಯನ ಧನುಸ್ಸು ವೇಗಯುಕ್ತವಾದ ಬಾಣಗಳನ್ನು ಪುಂಖಾನುಪುಂಖವಾಗಿ ಅಭಿಮನ್ಯುವಿಗೆ ಅಭಿಮುಖವಾಗಿ ಹೊರಹಾಕುತ್ತಿದ್ದಿತು. ಅಂತಹ ಶಲ್ಯನ ಧನುಸ್ಸನ್ನು ತೀವ್ರವೇಗದಿಂದ ಕೂಡಿದ ಭಲ್ಲವೆಂಬ ಬಾಣದಿಂದ ಅಭಿಮನ್ಯುವು ಕತ್ತರಿಸಿಬಿಟ್ಟನು. ಇಷ್ಟು ಮಾತ್ರವಲ್ಲ ; ಶಲ್ಯನ ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನೂ ಸಹ ಅರ್ಜುನನ ದಾಯಾದನು ಏಕಕಾಲದಲ್ಲಿ ಸಂಹರಿಸಿದನು. ಮಹಾರಾಜ! ಭೂರಿಶ್ರವಸ, ಶಲ್ಯ, ಅಶ್ವತ್ಥಾಮ, ಸೋಮ ದತ್ತನ ಮಗನಾದ ಸಾಂಯಮನಿ (ಶಲ)–ಇವರೆಲ್ಲರೂ ಅತ್ಯಂತಕ್ರುದ್ಧ ರಾಗಿಯೇ ಅಭಿಮನ್ಯುವಿನೊಡನೆ ಯುದ್ಧಮಾಡುತ್ತಿದ್ದರು. ಆದರೂ ಸಹ ಅಭಿಮನ್ಯುವಿನ ಬಾಹುಬಲದ ವೃದ್ಧಿಯನ್ನು ಮಾತ್ರ ಅವರಿಂದ ತಡೆಯಲು ಸಾಧ್ಯವಾಗಲೇ ಇಲ್ಲ. ಯುದ್ಧವು ಮುಂದುವರಿದಂತೆ ಅಭಿಮನ್ಯುವಿನ ಬಾಹುಬಲವು ವರ್ಧಿಸುತ್ತಿದ್ದಿತೇ ಹೊರತು ಶಿಥಿಲಗೊಳ್ಳುತ್ತಿರಲಿಲ್ಲ. ಅಭಿಮನ್ಯುವಿನ ಮತ್ತು ಅವನ ತಂದೆಯಾದ ಅರ್ಜುನನ ಅತುಲ ಪರಾಕ್ರಮವನ್ನೂ ಮತ್ತು ಅವರು ಮಾಡುತ್ತಿದ್ದ ಸಂಹಾರಕ್ರಿಯೆಯನ್ನೂ ಕಂಡು ದಿಗ್ಭ್ರಾಂತನಾದ ನಿನ್ನ ಮಗನು ತ್ರಿಗರ್ತರನ್ನೂ, ಮದ್ರರನ್ನೂ, ಕೇಕಯರನ್ನೂ ಒಳಗೊಂಡ ಇಪ್ಪತ್ತೈದು ಸಾವಿರ ಯೋಧರನ್ನು ಅರ್ಜುನನ ಮೇಲೂ ಮತ್ತು ಅವನ ಮಗನ ಮೇಲೂ ದಾಳಿನಡೆಸು ವಂತೆ ಪ್ರಚೋದಿಸಿದನು. ಅವರೆಲ್ಲರೂ ಧನುರ್ವೇದವಿದರಾಗಿದ್ದರು. ಯುದ್ಧದಲ್ಲಿ ಶತ್ರುಗಳಿಂದ ಅಜೇಯರಾಗಿದ್ದರು. ತನ್ನ ಮಗನೊಡನೆ ಸೇರಿಕೊಂಡು ನಿನ್ನ ಸೈನ್ಯವನ್ನು ಮರ್ದನಮಾಡುತ್ತಿದ್ದ ಅರ್ಜುನನನ್ನು ನಿನ್ನ ಮಗನ ಪ್ರಚೋದನೆಯಂತೆ ಆ ಇಪ್ಪತ್ತೈದು ಸಾವಿರ ಯೋಧರೂ ಮುತ್ತಿದರು. ಮಹಾರಥರಾದ ಆ ಇಬ್ಬರು ತಂದೆ-ಮಕ್ಕಳು ಅಪಾರವಾದ

ಶತ್ರುಸೈನ್ಯದಿಂದ ಪರಿವೃತರಾಗಿರುವುದನ್ನು ಸೇನಾಪತಿಯಾದ ಅರಿಂದಮ ನಾದ ಧೃಷ್ಟದ್ಯುಮ್ನನು ನೋಡಿದನು. ಒಡನೆಯೇ ಅವನು ಅನೇಕ ಸಾವಿರ ಆನೆಗಳ ಸಮೂಹಗಳಿಂದಲೂ, ಸಾವಿರಾರು ಅಶ್ವ-ಪದಾತಿಸೈನ್ಯಗಳಿಂದಲೂ ಪರಿವೃತನಾಗಿ ಧನುಷ್ಟೇಂಕಾರಮಾಡುತ್ತಾ ಸೈನಿಕರನ್ನು ನಡೆಸಿಕೊಂಡು ಮದ್ರ-ಕೇಕಯಸೈನಿಕರ ಸಮೀಪಕ್ಕೆ ಧಾವಿಸಿದನು. ದೃಢಧನ್ವನಾದ ಕೀರ್ತಿ ಮಂತನಾದ ಧೃಷ್ಟದ್ಯುಮ್ನನಿಂದ ಸಂರಕ್ಷಿತವಾಗಿದ್ದ, ರೋಷಾವೇಶದಿಂದ ಕೂಡಿದ್ದ, ರಥ-ಗಜಾಶ್ವಗಳಿಂದ ಕೂಡಿದ್ದ ಆ ಮಹಾಸೇನೆಯು ಯುದ್ಧ ಮಾಡುತ್ತಿದ್ದ ಸನ್ನಿವೇಶವು ಬಹಳ ಶೋಭಾಯಮಾನವಾಗಿ ಕಾಣುತ್ತಿದ್ದಿತು. ಪಾಂಚಾಲಕುಲವರ್ಧನನಾದ ಧೃಷ್ಟದ್ಯುಮ್ನನು ಅರ್ಜುನನ ಸಮೀಪಕ್ಕೆ ಹೋಗುತ್ತಲೇ ಅವನ ಮುಂದೆ ಧನುಷ್ಪಾಣಿಯಾಗಿ ನಿಂತಿದ್ದ ಕೃಪಾಚಾರ್ಯರ ಜತ್ರುಪ್ರದೇಶಕ್ಕೆ (ಕೊರಳಿನ ಎಲುಬು ಪ್ರದೇಶಕ್ಕೆ) ಗುರಿಯಿಟ್ಟು ಮೂರು ಬಾಣಗಳಿಂದ ಪ್ರಹರಿಸಿದನು. ಅನಂತರ ಹತ್ತುಮಂದಿ ಮದ್ರಕಯೋಧರನ್ನು ಹತ್ತು ಬಾಣಗಳಿಂದ ಪ್ರಹರಿಸಿ ಸಂಹರಿಸಿ ಅನಂತರ ಕೃತವರ್ಮನ ಹಿಂಭಾಗ ದಲ್ಲಿದ್ದ ರಕ್ಷಕನನ್ನು ಭಲ್ಲವೆಂಬ ಒಂದೇ ಬಾಣದಿಂದ ಸಂಹರಿಸಿಬಿಟ್ಟನು.

ಅನಂತರ ಶತ್ರುಗಳಿಗೆ ತಾಪವನ್ನುಂಟುಮಾಡುವ ಧೃಷ್ಟದ್ಯುಮ್ನನು ಮಹಾತ್ಮನಾದ ಪೌರವನ ಮಗನಾದ ದಮನನೆಂಬುವನನ್ನು ವಿಮಲವಾದ ಅಗ್ರಭಾಗವಿದ್ದ ಬಾಣದಿಂದ ಸಂಹರಿಸಿದನು. ಧೃಷ್ಟದ್ಯುಮ್ನನ ಆ ಸಂಹಾರ ಕ್ರಿಯೆಯನ್ನು ಕಂಡು ಪರಮಕ್ರುದ್ಧನಾದ ಶಲನ ಮಗನು ಯುದ್ಧದುರ್ಮದ ನಾದ ಪಾಂಚಾಲ್ಯನನ್ನು ಮೂವತ್ತು ಬಾಣಗಳಿಂದಲೂ, ಅವನ ಸಾರಥಿ ಯನ್ನು ಹತ್ತುಬಾಣಗಳಿಂದಲೂ ಪ್ರಹರಿಸಿದನು. ಮೂವತ್ತು ಬಾಣಗಳ ಪ್ರಹಾರದಿಂದ ಬಹಳವಾಗಿ ಘಾಸಿಪಟ್ಟ ಮಹಾಧನುಷ್ಮಂತನಾದ ಧೃಷ್ಟದ್ಯು ಮ್ನನು ತನ್ನ ಎರಡು ಕಟವಾಯಿಗಳನ್ನು ನೆಕ್ಕುತ್ತಾ ವೇಗವುಳ್ಳದ್ದಾಗಿಯೂ ಬಹುತೀಕ್ಷ್ಣವಾಗಿಯೂ ಇದ್ದ ಭಲ್ಲವೆಂಬ ಬಾಣದಿಂದ ಶಲಪುತ್ರನ ಧನು ಸ್ಸನ್ನು ಕತ್ತರಿಸಿದನು. ಮರುಕ್ಷಣದಲ್ಲಿಯೇ ಇಪ್ಪತ್ತೈದು ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿ ಶಲಪುತ್ರನ ಕುದುರೆಗಳನ್ನೂ ಮತ್ತು ಅವನ ಪಕ್ಷ ರಕ್ಷಕರಾಗಿದ್ದ ರಥಿಕರ ಇಬ್ಬರು ಸಾರಥಿಗಳನ್ನೂ ಸಹ ಸಂಹರಿಸಿದನು. ಶಲನ ಮಗನು ಕುದುರೆಗಳಿಂದ ವಿಹೀನವಾಗಿದ್ದ ಆ ರಥದಲ್ಲಿಯೇ ನಿಂತುಕೊಂಡು

ಮಹಾತ್ಮನಾದ ದ್ರುಪದನ ಮಗನಾದ ಧೃಷ್ಟದ್ಯುಮ್ನನನ್ನು ದಿಟ್ಟಿಸಿ ನೋಡಿದನು. ಮರುಕ್ಷಣದಲ್ಲಿಯೇ ಪರಮಕ್ರುದ್ಧನಾಗಿದ್ದ ಶಲಪುತ್ರನು ಲೋಹಮಯವಾಗಿದ್ದ ಮತ್ತು ಮಹಾಘೋರವಾಗಿದ್ದ ಕತ್ತಿಯೊಂದನ್ನು ಕೈಯಲ್ಲಿ ಹಿಡಿದುಕೊಂಡು ರಥದಿಂದ ಕೆಳಗೆ ಧುಮುಕಿ ಕಾಲ್ನಡಿಗೆಯಲ್ಲಿಯೇ ರಥಸ್ಥನಾಗಿದ್ದ ಧೃಷ್ಟದ್ಯುಮ್ನನ ಕಡೆಗೆ ಧಾವಿಸುತ್ತಿದ್ದಾಗ ಅವನ ವೇಗವು ದೊಡ್ಡದಾದ ಜಲಪ್ರವಾಹದ ವೇಗದಂತೆಯೇ ಇದ್ದಿತು. ಆಕಾಶದಿಂದ ಬೀಳುತ್ತಿರುವ ಸರ್ಪದಂತೆಯೇ ಆ ಸಮಯದಲ್ಲಿ ಶಲಪುತ್ರನು ಕಾಣಿಸುತ್ತಿದ್ದನು. ನಾನಾಕಡೆಗಳಿಗೆ ತಿರುಗಿಸಲ್ಪಡುತ್ತಿದ್ದ ಗುರಾಣಿಯನ್ನೂ ಕತ್ತಿಯನ್ನೂ ಅವನು ಹೊಂದಿದ್ದನು. ಆ ಸಮಯದಲ್ಲವನು ಕಾಲನಿಂದ ಚೋದಿತನಾದ ಅಂತಕನಂತೆಯೇ ಕಾಣುತ್ತಿದ್ದನು. ದೇದೀಪ್ಯಮಾನನಾದ ಸೂರ್ಯನಂತೆಯೇ ಕಾಣುತ್ತಿದ್ದನು. ಮದಿಸಿದ ಆನೆಯ ಪರಾಕ್ರಮವನ್ನು ಶಲಪುತ್ರನು ಹೊಂದಿದ್ದನು. ಅಂತಹ ಶಲಪುತ್ರನನ್ನು ಧೃಷ್ಟದ್ಯುಮ್ನನೂ ಮತ್ತು ಪಾಂಡವರೂ ನೋಡಿದರು. ಪ್ರವಾಹಕ್ಕೆ ಎದುರಾಗಿ ಈಜುವವನಂತೆಯೇ ಅಜೇಯನಾದ ಶತ್ರುವಿಗೆ ಅಭಿಮುಖನಾಗಿ ಹೋಗುತ್ತಿದ್ದ, ಬಹಳ ಹರಿತವಾಗಿದ್ದ ಕತ್ತಿಯನ್ನು ಹೊಂದಿದ್ದ, ಬಾಣದ ಪೆಟ್ಟು ತಗುಲದಂತೆ ಗುರಾಣಿಯನ್ನು ಹಿಡಿದಿದ್ದ, ಬಾಣದ ವೇಗವನ್ನೂ ಸಹ ಮೀರಿಸಿದ ವೇಗದಿಂದ ತನ್ನ ಕಡೆಗೇ ಬರುತ್ತಿದ್ದ ಮತ್ತು ಎವೆಯಿಕ್ಕುವುದರೊಳಗಾಗಿ ತನ್ನೆದುರಾಗಿಯೇ ಬಂದು ಕತ್ತಿಯಿಂದ ತನ್ನನ್ನು ಪ್ರಹರಿಸಲಿದ್ದ ಶಲನ ಮಗನ ತಲೆಯನ್ನು ಕ್ಷಣಮಾತ್ರದಲ್ಲಿ ಸೇನಾಪತಿಯಾದ ಧೃಷ್ಟದ್ಯುಮ್ನನು ಗದೆಯಿಂದ ಪ್ರಹರಿಸಿ ಒಡೆದುಹಾಕಿದನು. ಶಲಪುತ್ರನ ತಲೆಯು ಒಡೆದು ಹೋದೊಡನೆಯೇ ಅಸುವನ್ನು ನೀಗಿದ ಶಲಪುತ್ರನ ಕೈಯಿಂದ ಕತ್ತಿಯೂ ಮತ್ತು ಪ್ರಭೆಯಿಂದ ಕೂಡಿದ್ದ ಗುರಾಣಿಯೂ ಕೆಳಕ್ಕೆ ಬಿದ್ದುಹೋದುವು. ಅನಂತರ ಅವನ ಶರೀರವೂ ಭೂಮಿಯಲ್ಲಿ ಬಿದ್ದಿತು.

ಗದೆಯ ಅಗ್ರಭಾಗದಿಂದ ಶಲಪುತ್ರನನ್ನು ಸಂಹರಿಸಿ ಭೀಮವಿಕ್ರಮನಾದ, ದ್ರುಪದನ ಮಗನಾದ, ಮಹಾತ್ಮನಾದ ಧೃಷ್ಟದ್ಯುಮ್ನನು ಆನಂದ ತುಂದಿಲನಾದನು. ಮಹಾರಥನಾದ, ಮಹಾಧನುಷ್ಮಂತನಾದ, ರಾಜಪುತ್ರನಾದ ಶಲಸುತನು ಹತನಾಗಲಾಗಿ ನಿನ್ನ ಸೈನ್ಯದಲ್ಲಿ ದೊಡ್ಡ ಹಾಹಾಕಾರ

ವೆದ್ದಿತು. ತನ್ನ ಮಗನು ಹತನಾದುದನ್ನು ಕಂಡು ಶಲನಿಗೆ ಕೋಪವನ್ನು ತಡೆದುಕೊಳ್ಳಲು ಸಾಧ್ಯವಾಗಲೇ ಇಲ್ಲ. ಪರಮಕ್ರುದ್ಧನಾದ ಶಲನು ಯುದ್ಧ ದುರ್ಮದನಾದ ಧೃಷ್ಟದ್ಯುಮ್ನನನ್ನು ಅಟ್ಟಿಸಿಕೊಂಡು ಶೀಘ್ರವಾಗಿ ಓಡಿದನು. ಯುದ್ಧದುರ್ಮದರಾದ ಇಬ್ಬರೂ ವೀರರೂ ವೀರಾವೇಶದಿಂದ ಯುದ್ಧದಲ್ಲಿ ತೊಡಗಿದರು. ಮಹಾಪರಾಕ್ರಮಿಗಳಾದ ಧೃಷ್ಟದ್ಯುಮ್ನ ಮತ್ತು ಶಲರ ಘೋರಯುದ್ಧವನ್ನು ಪಾಂಡವ-ಕೌರವರೂ, ಉಭಯಪಕ್ಷಗಳ ರಾಜರೂ ಕುತೂಹಲದಿಂದ ವೀಕ್ಷಿಸತೊಡಗಿದರು. ಪುತ್ರನ ಮರಣದಿಂದ ಪರಮ ಕ್ರುದ್ಧನಾಗಿದ್ದ ಮತ್ತು ಶತ್ರುವೀರಸಂಹಾರಕನಾದ ಶಲನು ಮಾವಟಿಗನು ಮೂರು ಅಗ್ರಗಳುಳ್ಳ ಅಂಕುಶದಿಂದ ಮದಿಸಿದ ಆನೆಯನ್ನು ತಿವಿಯುವಂತೆ ಮೂರು ಬಾಣಗಳಿಂದ ಧೃಷ್ಟದ್ಯುಮ್ನನನ್ನು ಪ್ರಹರಿಸಿದನು. ರಣರಂಗಕ್ಕೇ ಅಲಂಕಾರಪ್ರಾಯನಾಗಿದ್ದ ಶಲ್ಯನೂ ಸಹ ಆ ಸಮಯದಲ್ಲಿ ಕೋಪಗೊಂಡವ ನಾಗಿ ಶೂರನಾದ ಪಾರ್ಷತನ ಎದೆಗೆ ಗುರಿಯಿಟ್ಟು ತೀಕ್ಷ್ಣಾಗ್ರವುಳ್ಳ ಬಾಣ ದಿಂದ ಪ್ರಹರಿಸಿದನು. ಈ ಪರಿಯಲ್ಲಿ ಯುದ್ಧವು ಮುಂದುವರಿಯಿತು.”

೬೧ನೆಯ ಅಧ್ಯಾಯವು ಮುಗಿಯಿತು.

೬೨ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಧೃಷ್ಟದ್ಯುಮ್ನ ಮತ್ತು ಶಲ್ಯರ ಘೋರಯುದ್ಧ: ಉಭಯ ಪಕ್ಷಗಳ ವೀರರೂ ಘೋರವಾದ ಯುದ್ಧದಲ್ಲಿ ತೊಡಗಿದುದು : ಭೀಮಸೇನನು ಕೌರವಪಕ್ಷದ ಗಜಸೇನೆಯನ್ನು ಸಂಹರಿಸಿದುದು

ಯುದ್ಧವಾರ್ತೆಯನ್ನು ಸಮಗ್ರವಾಗಿ ಕೇಳುತ್ತಿದ್ದ ಧೃತರಾಷ್ಟ್ರನು ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಸಂಜಯನೊಡನೆ ಹೇಳಿದನು :

**ದೈವಮೇವ ಪರಂ ಮನ್ಯೇ ಪೌರುಷಾದಪಿ ಸಂಜಯ ।**
**ಯತ್ಸೈನ್ಯಂ ಮಮ ಪುತ್ರಸ್ಯ ಪಾಣ್ಡುಸೈನ್ಯೇನ ಬಾಧ್ಯತೇ ॥೧॥**

“ಸಂಜಯ! ಸಮಗ್ರವಾದ ಯುದ್ಧವಾರ್ತೆಯನ್ನು ನಿನ್ನಿಂದ ಕೇಳುತ್ತಿ ರುವ ನಾನು ಈ ನಿಶ್ಚಯಕ್ಕೆ ಬಂದಿರುತ್ತೇನೆ. ಪುರುಷಪ್ರಯತ್ನಕ್ಕಿಂತಲೂ ದೈವಬಲವೇ ಹೆಚ್ಚಿನದು. ನೀನು ತಿಳಿದಿರುವಂತೆ ನನ್ನ ಸೈನ್ಯವು ಅಪಾರ

ವಾಗಿದೆ. ಮಹಾಮಹಾವೀರರೆಲ್ಲರೂ ನನ್ನ ಸೈನ್ಯದಲ್ಲೇ ಹೆಚ್ಚು ಸಂಖ್ಯೆಯಲ್ಲಿದ್ದಾರೆ. ಹೀಗಿದ್ದರೂ ಕೂಡ ಪಾಂಡವರ ಅಲ್ಪಬಲವು ನನ್ನ ಮಗನ ಅಪಾರ ಬಲವನ್ನೇ ಪೀಡಿಸುತ್ತಿದೆ. ಸಂಖ್ಯಾಬಲವು ಯಾವ ಪ್ರಯೋಜನಕ್ಕೂ ಬರುತ್ತಿಲ್ಲ. ದೈವವೊಂದು ಅವರ ಕಡೆಗಿರುವುದರಿಂದ ಅಲ್ಪಸಂಖ್ಯಾತರಾಗಿದ್ದರೂ ಅವರ ಕಡೆಗೇ ಜಯವು ಒಲವನ್ನು ತೋರುತ್ತಿದೆ. ಇದುವರೆಗೆ ನೀನು ಹೇಳಿರುವ ಯುದ್ಧವಾರ್ತೆಯಲ್ಲಿ ಅನುದಿನವೂ ನನ್ನ ಪಕ್ಷದವರೇ ಅಪಾರ ಸಂಖ್ಯೆಯಲ್ಲಿ ಮಡಿದರೆಂದು ಹೇಳುತ್ತಿರುವೆ. ಅದಕ್ಕೆ ಪ್ರತಿಯಾಗಿ ಪಾಂಡವರು ಅನುದಿನವೂ ಸ್ಥಿರಚಿತ್ತರಾಗಿಯೂ, ಪ್ರಹೃಷ್ಟರಾಗಿಯೂ ಇರುತ್ತಾರೆಂದು ಹೇಳುತ್ತಿರುವೆ. ನನ್ನ ಕಡೆಯವರನ್ನು ಪುರುಷಪ್ರಯತ್ನದಿಂದಲೇ ಹೀನರಾಗಿರುವರೆಂದೂ ವರ್ಣಿಸುತ್ತಿರುವೆ. ಯಾವಾಗಲೂ ನಮ್ಮವರು ಭಯ ಪಡುತ್ತಲೇ ಇರುತ್ತಾರೆಂದೂ ಹೇಳುತ್ತಿರುವೆ. 'ಶತ್ರುಗಳಿಂದ ಕೌರವರು ಪ್ರಹೃತರಾಗಿ ಕೆಳಕ್ಕೆ ಬಿದ್ದುಬಿಟ್ಟರು. ಕೆಳಕ್ಕೆ ಬೀಳಿಸಲ್ಪಡುತ್ತಿದ್ದಾರೆ. ಕೆಳಕ್ಕೆ ಬಿದ್ದು ಸತ್ತೇ ಹೋದರು'–ಇದೇ ನಿನ್ನ ಸಮಗ್ರವಾದ ಯುದ್ಧವಾರ್ತೆಯಾಗಿದೆ. ನಮ್ಮ ಕಡೆಯವರ ಸಾವನ್ನೇ ಪ್ರತಿಕ್ಷಣದಲ್ಲಿಯೂ ವಿವರಿಸಿ–ವಿವರಿಸಿ ಹೇಳುತ್ತಿರುವೆ. ನನ್ನ ಮಕ್ಕಳೂ ಕೂಡ ಜಯಿಸಬೇಕೆಂಬ ಆಶಯದಿಂದಲೇ ಯಥಾಶಕ್ತಿಯುದ್ಧಮಾಡುತ್ತಿದ್ದಾರೆ. ಆದರೂ ನೀನು ಹೇಳುತ್ತಿರುವುದನ್ನು ನೋಡಿದರೆ ಪಾಂಡವರೇ ವಿಜಯಿಗಳಾಗುತ್ತಾರೆ. ನನ್ನ ಮಕ್ಕಳು ಪರಾಜಯ ಹೊಂದುತ್ತಾರೆ. ಸಂಜಯ! ಈ ದುರ್ಯೋಧನನ ಕಾರಣದಿಂದಾಗಿ ನಾನು ಇನ್ನೂ ತೀವ್ರವಾದ, ದುಃಸಹವಾದ, ಬಹುದುಃಖಕರವಾದ ಅನೇಕವಾರ್ತೆಗಳನ್ನು ಸದಾ ಕೇಳುತ್ತಲೇ ಇರಬೇಕಾಗಬಹುದು. ಏಕೆಂದರೆ ಪಾಂಡವರು ಪರಾಜಿತರಾಗಲು ಮತ್ತು ನನ್ನ ಮಕ್ಕಳು ವಿಜಯಿಗಳಾಗಲು ನಾನು ಯಾವ ಉಪಾಯವನ್ನೂ ಕಾಣದವನಾಗಿದ್ದೇನೆ."

"ಮಹಾರಾಜ! ಹೀಗಾಗಲು (ನಿನ್ನ ಮಕ್ಕಳು ವಿಜಯಿಗಳಾಗಲು) ಯಾವ ಉಪಾಯವೂ ಇಲ್ಲವೇ ಇಲ್ಲ. ಇದಕ್ಕೆ ನಿನ್ನ ಮಹತ್ತರವಾದ ಕೆಟ್ಟ ನೀತಿಯೇ ಕಾರಣ. ಮನಸ್ಸನ್ನು ಗಟ್ಟಿಮಾಡಿಕೊ. ಆನೆ, ಕುದುರೆ, ರಥಾದಿಗಳ ವಿನಾಶ ಮತ್ತು ಮನುಷ್ಯರ ವಿನಾಶ ಈ ಎಲ್ಲವನ್ನೂ ವಿಸ್ತಾರವಾಗಿಯೇ ಹೇಳುತ್ತೇನೆ ; ಕೇಳುವವನಾಗು. ಈ ಹಿಂದೆ ಶಲ್ಯ-ಧೃಷ್ಟದ್ಯುಮ್ನರ

ಯುದ್ಧದ ವಿಷಯವನ್ನು ಹೇಳುತ್ತಿದ್ದೆನಲ್ಲವೇ? ಅದನ್ನೇ ಮುಂದುವರಿಸಿ ಹೇಳುತ್ತೇನೆ. ಶಲ್ಯನು ಒಂಬತ್ತು ಬಾಣಗಳನ್ನು ಧೃಷ್ಟದ್ಯುಮ್ನನ ಮೇಲೆ ಪ್ರಯೋಗಿಸಿ ಅವನಿಗೆ ಬಹುವಾದ ಪೀಡೆಯನ್ನುಂಟುಮಾಡಿದನು. ಅದರಿಂದ ಹೆಚ್ಚು ಕೋಪಗೊಂಡ ಧೃಷ್ಟದ್ಯುಮ್ನನೂ ಲೋಹಮಯವಾದ ಬಾಣಗಳಿಂದ ಮದ್ರಾಧಿಪತಿಯನ್ನು ಗಾಯಗೊಳಿಸಿದನು. ನಿಶ್ಚಯವಾಗಿಯೂ ಆ ಸಮಯದಲ್ಲಿ ನಮಗೆ ಪಾರ್ಷತನ ಪರಾಕ್ರಮವು ಪರಮಾದ್ಭುತವಾಗಿ ಕಂಡಿತು. ಏಕೆಂದರೆ ಅವನು ಯುದ್ಧಭೂಮಿಗೇ ಶೋಭಾಯಮಾನನಾಗಿ ಕಾಣುತ್ತಿದ್ದ ಮಹಾಪರಾಕ್ರಮಿಯಾದ ಶಲ್ಯನ ವೇಗವನ್ನು ಬಹಳ ಬೇಗ ತಡೆದು ನಿಲ್ಲಿಸಿಬಿಟ್ಟನು. ಆ ಇಬ್ಬರು ರಥಿಕರಲ್ಲಿ–'ಒಬ್ಬರು ಹೆಚ್ಚು, ಮತ್ತೊಬ್ಬರು ಕಡಿಮೆ'–ಎಂದು ಹೇಳುವಂತೆಯೇ ಇರಲಿಲ್ಲ. ಇಬ್ಬರ ಪರಾಕ್ರಮದಲ್ಲಿಯೂ ಯಾವ ವಿಧವಾದ ತಾರತಮ್ಯವೂ ಕಾಣುತ್ತಲೇ ಇರಲಿಲ್ಲ. ಮುಹೂರ್ತಕಾಲ ಇಬ್ಬರೂ ಒಂದೇ ಸಮನಾಗಿ ಯುದ್ಧಮಾಡಿದರು. ಅನಂತರ ಶಲ್ಯನು ಸಮಯವನ್ನು ನೋಡಿ ಹಳದೀಬಣ್ಣದ್ದಾಗಿಯೂ, ನಿಶಿತವಾಗಿಯೂ ಇದ್ದ ಭಲ್ಲವೆಂಬ ಬಾಣದಿಂದ ಧೃಷ್ಟದ್ಯುಮ್ನನ ಧನುಸ್ಸನ್ನು ಕತ್ತರಿಸಿಬಿಟ್ಟನು. ಮರುಕ್ಷಣದಲ್ಲಿಯೇ ಧನುಸ್ಸಿನಿಂದ ವಿಹೀನನಾಗಿದ್ದ ಧೃಷ್ಟದ್ಯುಮ್ನನನ್ನು ಶಲ್ಯನು ಮೋಡಗಗಳು ವರ್ಷಾಕಾಲದಲ್ಲಿ ಅವಿಚ್ಛಿನ್ನವಾಗಿ ಮಳೆಗರೆಯುವಿಕೆಯಿಂದ ಪರ್ವತವನ್ನು ಮುಚ್ಚಿಬಿಡುವಂತೆ–ಬಾಣಗಳ ಮಳೆಗರೆಯುವಿಕೆಯಿಂದ ಮುಚ್ಚಿಬಿಟ್ಟನು. ಧೃಷ್ಟದ್ಯುಮ್ನನು ಶಲ್ಯನಿಂದ ಈ ರೀತಿಯಲ್ಲಿ ಪೀಡಿಸಲ್ಪಡುತ್ತಿರುವುದನ್ನು ಕಂಡು ಅಭಿಮನ್ಯುವು ಅವಸರದಿಂದ ಮದ್ರರಾಜನ ರಥದ ಸಮೀಪಕ್ಕೆ ಧಾವಿಸಿದನು. ಶಲ್ಯನ ರಥದ ಸಮೀಪಕ್ಕೆ ಬರುತ್ತಲೇ ಆತ್ಮಬಲ ಸಂಪನ್ನನಾಗಿದ್ದ ಅರ್ಜುನನ ಮಗನಾದ ಅಭಿಮನ್ಯುವು ಪರಮಕ್ರುದ್ಧನಾಗಿ ಆರ್ತಾಯನಿಯನ್ನು (ಋತಾಯನನ ಮಗನಾದ ಶಲ್ಯನನ್ನು) ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಅನಂತರ ನಿನ್ನ ಕಡೆಯವರೆಲ್ಲರೂ ಅಭಿಮನ್ಯುವನ್ನು ಎದುರಿಸಲು ಇಚ್ಛಿಸಿದವರಾಗಿ ಮದ್ರರಾಜನಾದ ಶಲ್ಯನ ರಥವನ್ನು ಸುತ್ತುವರಿದು ನಿಂತರು. ಮಹಾರಾಜ! ನಿನಗೆ ಮಂಗಳವಾಗಲಿ. ಆ ಸಮಯದಲ್ಲಿ ಶಲ್ಯನನ್ನು ರಕ್ಷಿಸುವ ಸಲುವಾಗಿ ಅವನನ್ನು ಸುತ್ತುವರಿದು ದುರ್ಯೋಧನ, ವಿಕರ್ಣ, ದುಃಶಾಸನ, ವಿವಿಂಶತಿ, ದುರ್ಮರ್ಷಣ, ದುಃಸಹ,

ಚಿತ್ರಸೇನ, ದುರ್ಮುಖ, ಸತ್ಯವ್ರತ ಮತ್ತು ಪುರುಮಿತ್ರ–ಇವರು ನಿಂತಿದ್ದರು. ನಿನ್ನ ಕಡೆಯ ಈ ಹತ್ತು ಮಂದಿ ವೀರರನ್ನು ಪಾಂಡವರ ಕಡೆಯ ಕ್ರುದ್ಧನಾದ ಭೀಮಸೇನ, ದ್ರುಪದನ ಮಗ ಧೃಷ್ಟದ್ಯುಮ್ನ, ದ್ರೌಪದಿಯ ಐವರು ಮಕ್ಕಳು, ಅಭಿಮನ್ಯು, ಮಾದ್ರಿಯ ಮಕ್ಕಳಾದ ನಕುಲ ಮತ್ತು ಸಹದೇವರು–ಈ ಹತ್ತು ಮಂದಿ ವೀರರು ನಾನಾವಿಧವಾದ ಶಸ್ತ್ರಗಳನ್ನು ಎದುರಾಳಿಗಳ ಮೇಲೆ ಪ್ರಯೋಗಿಸುತ್ತಾ ಎದುರಿಸಿದರು.

ತಮ್ಮ ಎದುರಾಳಿಗಳನ್ನು ಸಂಹರಿಸಬೇಕೆಂಬುದೇ ಅವರೆಲ್ಲರ ಪರಮ ಧ್ಯೇಯವಾಗಿದ್ದಿತು. ಆದುದರಿಂದಲೇ ಅವರು ಪರಮಹೃಷ್ಟರಾಗಿ ಒಬ್ಬರು ಮತ್ತೊಬ್ಬರ ಮೇಲೆ ಆಕ್ರಮಣವನ್ನು ನಡೆಸುತ್ತಿದ್ದರು. ಯುದ್ಧದಲ್ಲಿ ಭಾಗಿಗಳಾಗಿರುವವರೆಲ್ಲರೂ ಅಣ್ಣ-ತಮ್ಮಂದಿರು, ತಂದೆ-ಮಕ್ಕಳು, ಸೋದರಳಿಯ-ಸೋದರಮಾವಂದಿರು ಇವರೇ ಅಲ್ಲವೇ? ಆದರೂ ಸಹ ನಿನ್ನ ದುರ್ಮಂತ್ರದ ಫಲವಾಗಿ ಇವರೆಲ್ಲರೂ ಪರಸ್ಪರ ಕಾದಾಡಲು ಅಲ್ಲಿ ಸೇರಿರುತ್ತಾರೆ. ನಾನು ಮೇಲೆ ಹೇಳಿದ ನಿನ್ನ ಕಡೆಯ ದುರ್ಯೋಧನಾದಿ ಹತ್ತುಮಂದಿ ರಥಿಕರೂ, ಪಾಂಡವರ ಕಡೆಯ ಭೀಮನೇ ಮೊದಲಾದ ಹತ್ತು ಮಂದಿ ರಥಿಕರೂ ಮಹಾಭಯಂಕರವಾದ ಯುದ್ಧದಲ್ಲಿ ತೊಡಗಿರಲಾಗಿ, ನಿನ್ನ ಕಡೆಯ ಮತ್ತು ಪಾಂಡವರ ಕಡೆಯ ಉಳಿದ ರಥಿಕರು ಕೇವಲ ಪ್ರೇಕ್ಷಕರಾಗಿ ನಿಂತು ಆ ಮಹಾಯುದ್ಧವನ್ನು ನೋಡುತ್ತಿದ್ದರು. ನಿನ್ನ ಕಡೆಯ ಮತ್ತು ಪಾಂಡವರ ಕಡೆಯ ಆ ಮಹಾರಥರು ಪರಸ್ಪರವಾಗಿ ಬಗೆ-ಬಗೆಯಾದ ಶಸ್ತ್ರಗಳನ್ನು ಪ್ರಯೋಗಿಸುತ್ತಾ ನಡು-ನಡುವೆ ರಣಗರ್ಜನೆಗಳನ್ನು ಮಾಡುತ್ತಾ ಯುದ್ಧಮಾಡುತ್ತಿದ್ದರು. ಯುದ್ಧದ ಬಿಸಿಯೇರಿದಂತೆ ರಥಿಕರೆಲ್ಲರೂ ಪರಮಕ್ರುದ್ಧರಾಗಿ ಯುದ್ಧಮಾಡಲು ತೊಡಗಿದರು. ಒಬ್ಬರು ಮತ್ತೊಬ್ಬರನ್ನು ಸಂಹರಿಸುವುದೇ ಅವರ ಪರಮಧ್ಯೇಯವಾಗಿತ್ತು. ಆದುದರಿಂದ ಎರಡು ಪಕ್ಷಗಳವರೂ ಸ್ಪರ್ಧೆಯಿಂದ ಯುದ್ಧಮಾಡುತ್ತಾ ಅನ್ಯೋನ್ಯವಾಗಿ ಪೀಡೆಯನ್ನೂ ಉಂಟುಮಾಡುತ್ತಿದ್ದರು. 'ನಾನಿವನನ್ನು ಮೊದಲು ಸಂಹರಿಸಿಬಿಡಬೇಕು'–ಎಂಬ ಸ್ಪರ್ಧೆಯು ಎರಡು ಪಕ್ಷದವರಲ್ಲಿಯೂ ಇದ್ದಿತು. ಅವರೆಲ್ಲರೂ ಜ್ಞಾತಿ-ಬಾಂಧವರೇ ಆಗಿದ್ದರು. ಆದರೂ ಸಹ ದ್ವಂದ್ವಯುದ್ಧದಲ್ಲಿ ತೊಡಗಿದ್ದರು. ಆ ಸಮಯದಲ್ಲಿ ಅವರಿಗೆ ಸಹನೆ

ಎಂಬುದೇ ಇರಲಿಲ್ಲ. ಮಹಾಸ್ತ್ರಗಳನ್ನು ಪ್ರಯೋಗಿಸುತ್ತಾ ಪರಸ್ಪರವಾಗಿ ಆಕ್ರಮಣ-ಪ್ರತ್ಯಾಕ್ರಮಣಗಳನ್ನು ನಡೆಸುತ್ತಿದ್ದರು.

ಬಹಳ ಹೊತ್ತಿನವರೆಗೂ ಜಯಾಪಜಯಗಳ ಫಲಿತಾಂಶವೇ ಸಿಕ್ಕದಿರಲು ಪರಮಕ್ರುದ್ಧನಾದ ದುರ್ಯೋಧನನು ಆ ಮಹಾಸಂಗ್ರಾಮಭೂಮಿಯಲ್ಲಿ ಬಹಳ ಚೂಪಾಗಿದ್ದ ನಾಲ್ಕು ಬಾಣಗಳಿಂದ ಧೃಷ್ಟದ್ಯುಮ್ನನನ್ನು ಪ್ರಹರಿಸಿದನು. ಅವನನ್ನನುಸರಿಸಿ ದುರ್ಮರ್ಷಣನು ಇಪ್ಪತ್ತು ಬಾಣಗಳಿಂದಲೂ, ಚಿತ್ರಸೇನನು ಐದು ಬಾಣಗಳಿಂದಲೂ, ದುರ್ಮುಖನು ಒಂಬತ್ತು ಬಾಣಗಳಿಂದಲೂ, ದುಃಸಹನು ಏಳು ಬಾಣಗಳಿಂದಲೂ, ವಿವಿಂಶತಿಯು ಐದು ಬಾಣಗಳಿಂದಲೂ, ದುಃಶಾಸನನು ಮೂರು ಬಾಣಗಳಿಂದಲೂ ಧೃಷ್ಟದ್ಯುಮ್ನನನ್ನು ಏಕಕಾಲದಲ್ಲಿ ಪ್ರಹರಿಸಿದರು. ಆದರೆ ಶತ್ರುತಾಪಕನಾದ ಪಾರ್ಷತನು ಆ ಎಲ್ಲ ಬಾಣಗಳನ್ನೂ ತಡೆದುದು ಮಾತ್ರವಲ್ಲದೇ, ಪ್ರೇಕ್ಷಕರಿಗೆ ತನ್ನ ಕೈಚಳಕವನ್ನು ತೋರ್ಪಡಿಸುತ್ತಾ ನಿನ್ನ ಪಕ್ಷದ ಹತ್ತು ಮಂದಿ ರಥಿಕರಲ್ಲಿ ಪ್ರತಿಯೊಬ್ಬನನ್ನೂ ಇಪ್ಪತ್ತೈದು-ಇಪ್ಪತ್ತೈದು ಬಾಣಗಳಿಂದ ಗಾಯಗೊಳಿಸಿದನು. ಅಭಿಮನ್ಯುವು ಸತ್ಯವ್ರತನನ್ನೂ ಮತ್ತು ಪುರುಮಿತ್ರನನ್ನೂ ಹತ್ತು-ಹತ್ತು ಬಾಣಗಳಿಂದ ಪೀಡಿಸಿದನು. ಮಾತೃನಂದನರಾದ ಮಾದ್ರೀಪುತ್ರರು ತಾಯಿಯ ಅಣ್ಣನನ್ನೇ (ಸೋದರಮಾವನಾದ ಶಲ್ಯನನ್ನೇ) ತೀಕ್ಷ್ಣವಾದ ಬಾಣಗಳಿಂದ ಪ್ರಹರಿಸಿದರು. ಪ್ರೇಕ್ಷಕರಿಗೆ ಅವರ ಈ ಬಾಣಪ್ರಹಾರಕೌಶಲವು ಪರಮಾದ್ಭುತವಾಗಿ ಕಂಡಿತು. ಪ್ರತಿಗೆ-ಪ್ರತಿಯನ್ನು ಮಾಡಲು ಉತ್ಸುಕ ರಾಗಿದ್ದ ತನ್ನ ತಂಗಿಯ ಮಕ್ಕಳನ್ನು ಶಲ್ಯನೂ ಸಹ ಅನೇಕ ಬಾಣಗಳಿಂದ ಪೀಡಿಸಿದನು. ತಮ್ಮನ್ನು ಬಾಣಗಳಿಂದ ಶಲ್ಯನು ಮುಚ್ಚಿಬಿಟ್ಟರೂ ಸಹ ನಕುಲ-ಸಹದೇವರು ವಿಚಲಿತರಾಗಲಿಲ್ಲ. ಸೋದರಮಾವನಿಗೂ, ಸೋದರಳಿಯಂದಿರಿಗೂ ಈ ವಿಧವಾಗಿ ಯುದ್ಧವು ಮುಂದುವರಿಯಿತು.

ಅನಂತರ ಮಹಾಬಲನಾದ ಭೀಮಸೇನನು ದುರ್ಯೋಧನನನ್ನು ನೋಡಿ ಯುದ್ಧಪರಿಸಮಾಪ್ತಿಯನ್ನೇ ನಿಶ್ಚಯಿಸಿ ಗದೆಯನ್ನು ಕೈಗೆ ತೆಗೆದುಕೊಂಡನು. (ದುರ್ಯೋಧನನೊಬ್ಬನನ್ನು ಸಂಹರಿಸಿದರೆ ಯುದ್ಧವು ನಿಂತು ಹೋಗುವುದೆಂಬ ವಿಷಯವು ಭೀಮನಿಗೆ ಚೆನ್ನಾಗಿ ತಿಳಿದಿದ್ದಿತು.) ದುರ್ಯೋಧನನನ್ನು ಸಂಹರಿಸಿ ಈ ಕದನವನ್ನು ಅಂತ್ಯಗೊಳಿಸಿಬಿಡಬೇಕೆಂಬ ಇಚ್ಛೆಯಿಂದ ಭೀಮಸೇನನು ಗದೆಯನ್ನು ಎತ್ತಿಹಿಡಿದನು. ಗದೆಯನ್ನು ಮೇಲೆತ್ತಿ

ನಿಂತಿದ್ದ ಭೀಮಸೇನನು ಶಿಖರದಿಂದ ಕೂಡಿದ ಕೈಲಾಸಪರ್ವತದಂತೆಯೇ ಕಾಣುತ್ತಿದ್ದನು. ಗದಾಪಾಣಿಯಾದ ಮಹಾಬಾಹುವಾದ ಭೀಮಸೇನನನ್ನು ಕಂಡೊಡನೆಯೇ ನಿನ್ನ ಮಕ್ಕಳೆಲ್ಲರೂ ಪಲಾಯನಮಾಡಿದರು. ದುರ್ಯೋಧನನೂ ಸಹ ಆ ಸಮಯದಲ್ಲಿ ಒಡನೆಯೇ ಭೀಮಸೇನನನ್ನು ಎದುರಿಸಿ ನಿಲ್ಲಲಿಲ್ಲ. ಕ್ರುದ್ಧನಾದ ಅವನು ಮಗಧದೇಶದ ವೇಗಯುಕ್ತವಾದ ಹತ್ತು ಸಾವಿರ ಆನೆಗಳಿಂದ ಕೂಡಿದ್ದ ಸೈನ್ಯವನ್ನು ಭೀಮಸೇನನೊಡನೆ ಯುದ್ಧಮಾಡಲು ಪ್ರಚೋದಿಸಿದನು. ಅಪಾರವಾದ ಮತ್ತು ಬಲಿಷ್ಠವಾದ ಆ ಗಜಸೇನೆಯಿಂದ ಯುಕ್ತನಾದ ಮಗಧರಾಜನನ್ನು ಮುಂದೆಮಾಡಿಕೊಂಡು ಭೀಮಸೇನನನ್ನು ಆಕ್ರಮಿಸಿದನು. ಅಪಾರವಾದ ಗಜಸೈನ್ಯವು ತನ್ನ ಮೇಲೆ ಬೀಳುತ್ತಿರುವುದನ್ನು ಕಂಡು ಗದಾಪಾಣಿಯಾದ ವೃಕೋದರನು ಸಿಂಹಕ್ಕೆ ಸಮಾನವಾಗಿ ಗರ್ಜನೆಮಾಡುತ್ತಾ ರಥದಿಂದ ಕೆಳಗಿಳಿದನು.

ಅದ್ರಿಸಾರಮಯವಾದ ( ಲೋಹಮಯವಾದ ), ಬಹಳ ಭಾರವಾಗಿದ್ದ ಮತ್ತು ಬಹಳ ದೊಡ್ಡದಾಗಿಯೂ ಇದ್ದ ಗದೆಯನ್ನೆತ್ತಿಕೊಂಡು ಪ್ರಪಂಚವನ್ನೇ ಕಬಳಿಸಿಬಿಡಲು ಬಾಯ್ತೆರೆದು ಹೊರಬರುವ ಕಾಲನೋಪಾದಿಯಲ್ಲಿ–ಭೀಮಸೇನನು ಮಗಧರಾಜನ ಗಜಸೈನ್ಯದ ಕಡೆಗೆ ನುಗ್ಗಿದನು. ವಜ್ರಾಯುಧವನ್ನು ಹಿಡಿದು ಹೊರಟಿರುವ ಇಂದ್ರನೋಪಾದಿಯಲ್ಲಿ ಗದಾಪಾಣಿಯಾದ ಭೀಮಸೇನನು ತನ್ನ ಗದೆಯಿಂದ ಗಜಸೈನ್ಯವನ್ನು ವಿಧ್ವಂಸನಗೊಳಿಸುತ್ತಾ ಸಮರಾಂಗಣದಲ್ಲಿ ಸಂಚರಿಸಿದನು. ಅವನು ಅನೇಕಕಡೆಗಳಲ್ಲಿ ಆನೆಗಳ ಸಂಹಾರಕ್ಕೆ ಗದೆಯಿಂದ ಪ್ರಹರಿಸಬೇಕಾದ ಶ್ರಮವೂ ಇರುತ್ತಿರಲಿಲ್ಲ. ಮನಸ್ಸನ್ನೂ ಮತ್ತು ಹೃದಯವನ್ನೂ ಕಂಪಿಸತಕ್ಕ, ಸಿಂಹನಾದಕ್ಕೆ ಸದೃಶವಾದ ಭೀಮಸೇನನ ಗರ್ಜನೆಯನ್ನು ಕೇಳುತ್ತಲೇ ನೂರಾರು ಆನೆಗಳು ಭಯಗೊಂಡು ಒಂದೆಡೆಯಲ್ಲಿ ಸೇರಿ ನಿಶ್ಚೇಷ್ಟಿತವಾಗುತ್ತಿದ್ದುವು (ಪ್ರಾಣತೊರೆಯುತ್ತಿದ್ದುವು). ಆದರೆ ಭೀಮನೊಬ್ಬನನ್ನೇ ಮುಂದೆಬಿಟ್ಟು ಪಾಂಡವರು ಕೇವಲ ಪ್ರೇಕ್ಷಕರಾಗಿ ನಿಂತುಕೊಳ್ಳಲಿಲ್ಲ. ದ್ರೌಪದಿಯ ಐವರು ಮಕ್ಕಳು, ಮಹಾರಥನಾದ ಅಭಿಮನ್ಯು, ನಕುಲ-ಸಹದೇವರು, ಧೃಷ್ಟದ್ಯುಮ್ನ–ಮುಂತಾದವರು ಭೀಮಸೇನನನ್ನು ಸಂರಕ್ಷಿಸುತ್ತಾ ಅವನ ಹಿಂದೆಯೇ ಹೋಗುತ್ತಿದ್ದರು. ಪರ್ವತಗಳ

ಮೇಲೆ ಮೇಘಗಳು ಮಳೆಗರೆಯುವಂತೆ–ಗಜಸೈನಿಕರ ಮೇಲೆ ಅವರೂ ಸಹ ಬಾಣಗಳ ಮಳೆಯನ್ನೇ ಸುರಿಸುತ್ತಿದ್ದರು. ಸಾಧಾರಣವಾದ ಬಾಣಗಳನ್ನು ಬಿಡುತ್ತಿದ್ದುದು ಮಾತ್ರವಲ್ಲ, ಕ್ಷುರ, ಕ್ಷುರಪ್ರ, ಭಲ್ಲ, ಹೊಂಬಣ್ಣದಿಂದ ಕೂಡಿದ್ದ ಮತ್ತು ಬಹಳ ನಿಶಿತವಾಗಿದ್ದ ಆಂಜಲಿಕ–ಇವೇ ಮುಂತಾದ ತೀಕ್ಷ್ಣಾಗ್ರಗಳಾದ ಬಾಣಗಳಿಂದ ಪಾಂಡವರು ಗಜಸೈನಿಕರ ತಲೆಗಳನ್ನು ನೂರಾರು ಸಂಖ್ಯೆಯಲ್ಲಿ ಕತ್ತರಿಸಿಹಾಕಿದರು. ಗಜಸೈನಿಕರ ತಲೆಗಳು ಕೆಳಕ್ಕೆ ತೊಪ-ತೊಪನೆ ಬೀಳುತ್ತಿದ್ದುವು. ಕನಕಾಂಗದಗಳಿಂದ ವಿಭೂಷಿತವಾಗಿದ್ದ ಅವರ ತೋಳುಗಳು ಕೆಳಕ್ಕೆ ಬೀಳುತ್ತಿದ್ದುವು. ಅಂತೆಯೇ ಅಂಕುಶಗಳನ್ನು ಹಿಡಿದಿದ್ದ ಅವರ ಕೈಗಳೂ ಪಾಂಡವಯೋಧರಿಂದ ಕತ್ತರಿಸಲ್ಪಟ್ಟುವುಗಳಾಗಿ ಕೆಳಕ್ಕೆ ಬೀಳುತ್ತಿದ್ದುವು. ಅದನ್ನು ನೋಡಿದರೆ ಆಕಾಶದಿಂದೇನಾದರೂ ಕಲ್ಲಿನ ಮಳೆಯು ಸುರಿಯುತ್ತಿದೆಯೋ ಎಂಬಂತೆ ಭಾಸವಾಗುತ್ತಿದ್ದಿತು. ತಲೆಗಳು ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದುಹೋಗಿದ್ದರೂ ಸಹ ಹಲವಾರು ಯೋಧರ ಮುಂಡಗಳು ಕೆಳಕ್ಕೆ ಬೀಳದೆ ಆನೆಗಳ ಮೇಲೆಯೇ ಇರುತ್ತಿದ್ದುವು. ಅಂತಹ ಸ್ಥಿತಿಯಲ್ಲಿ ಅವುಗಳು ಪರ್ವತಗಳ ಮೇಲಿರುವ ರೆಂಬೆಗಳಿಂದ ವಿಹೀನವಾದ ಬೋಳುಮರಗಳಂತೆ ಕಾಣುತ್ತಿದ್ದುವು. ಪಾಂಡವಯೋಧರಲ್ಲಿ ಕೆಲವರು ಗಜಾರೋಹಿಗಳನ್ನು ಸಂಹರಿಸಿದರೆ ಮತ್ತೆ ಕೆಲವರು ಆನೆಗಳನ್ನೇ ತಂಡ-ತಂಡವಾಗಿ ಸಂಹರಿಸುತ್ತಿದ್ದರು.

ಧೃಷ್ಟದ್ಯುಮ್ನನು ಅನೇಕ ದೊಡ್ಡ-ದೊಡ್ಡ ಆನೆಗಳನ್ನು ಕತ್ತರಿಸಿಹಾಕಿದ್ದನ್ನೂ ಮತ್ತು ಕತ್ತರಿಸುತ್ತಿದ್ದುದನ್ನೂ ನಾವೇ ಕಂಡೆವು. ತನ್ನ ಗಜಸೈನ್ಯವು ನಾಲ್ಕೂ ಕಡೆಗಳಲ್ಲೂ ವಿಧ್ವಂಸಿತವಾಗುತ್ತಿರುವುದನ್ನು ಕಂಡು ಕುಪಿತನಾದ ಮಾಗಧನು ಐರಾವತಕ್ಕೆ ಸಮಾನವಾದ ದೊಡ್ಡದೊಂದು ಆನೆಯನ್ನು ಅಭಿಮನ್ಯುವಿನ ರಥದ ಮೇಲೆ ನುಗ್ಗಿಸಿದನು. ಮಾಗಧನ ಮಹಾಗಜವು ತನ್ನ ಕಡೆಗೆ ನುಗ್ಗಿ ಬರುತ್ತಿದ್ದುದನ್ನು ಕಂಡು ಶತ್ರುವೀರಸಂಹಾರಕನಾದ ಅಭಿಮನ್ಯುವು ಒಂದೇ ಒಂದು ಬಾಣದಿಂದ ಅದನ್ನು ಸಂಹರಿಸಿಬಿಟ್ಟನು. ಮತ್ತೊಂದು ಕ್ಷಣದಲ್ಲಿಯೇ ಆ ಆನೆಯ ಮೇಲೆ ಕುಳಿತಿದ್ದ ಮಾಗಧನ ಶಿರಸ್ಸನ್ನೂ ಸಹ ಪರಪುರಂಜಯನಾದ ಅಭಿಮನ್ಯುವು ರಜತಮಯವಾದ ರೆಕ್ಕೆಗಳನ್ನು ಹೊಂದಿದ್ದ ಭಲ್ಲವೆಂಬ ಬಾಣದಿಂದ ಅಪಹರಿಸಿಬಿಟ್ಟನು.

ಮಹಾರಾಜ! ಹಿಂದೊಮ್ಮೆ ಇಂದ್ರನು ವಜ್ರಾಯುಧವನ್ನು ಹಿಡಿದು

ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದಂತೆ–ಭೀಮಸೇನನು ಗಜಸೈನ್ಯದೊಳಕ್ಕೆ ನುಗ್ಗಿಹೋಗಿ ಕೈಗೆ ಸಿಕ್ಕಿದ ಆನೆಗಳನ್ನು ತಂಡ-ತಂಡವಾಗಿ ಸಂಹಾರಮಾಡುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದನು. ಇಂದ್ರನ ವಜ್ರಾಯುಧದಿಂದ ಪರ್ವತಗಳು ಭಗ್ನವಾಗಿ ಹೋದಂತೆ–ಭೀಮಸೇನನ ಒಂದೊಂದು ಗದಾಪ್ರಹಾರಕ್ಕೆ ಒಂದೊಂದು ಆನೆಯು ಸತ್ತುಬೀಳುತ್ತಿದ್ದುದನ್ನು ನಾವು ಪ್ರತ್ಯಕ್ಷವಾಗಿ ಕಂಡೆವು. ಭೀಮನ ಗದಾಪ್ರಹಾರಕ್ಕೆ ಸಿಕ್ಕಿ ಅನೇಕ ಆನೆಗಳಿಗೆ ದಂತಗಳು ಮುರಿದುಹೋಗಿದ್ದುವು ; ಮತ್ತೆ ಕೆಲವಕ್ಕೆ ಸೊಂಡಿಲುಗಳೇ ಭಗ್ನವಾಗಿದ್ದುವು ; ಮತ್ತೆ ಕೆಲವು ಆನೆಗಳ ತೊಡೆಗಳು ಒಡೆದು ಹೋಗಿದ್ದುವು; ಮತ್ತೆ ಕೆಲವಕ್ಕೆ ಪೃಷ್ಠಭಾಗಗಳು ಭಗ್ನವಾಗಿ ಹೋಗಿದ್ದುವು. ಮತ್ತೆ ಕೆಲವಕ್ಕೆ ಕಟಿಪ್ರದೇಶದಲ್ಲಿ ಏಟು ಬಿದ್ದಿದ್ದಿತು ; ಮತ್ತೆ ಕೆಲವು ಮರಣಹೊಂದಿ ಪರ್ವತೋಪಮವಾಗಿ ಕೆಳಗೆ ಬಿದ್ದಿದ್ದುವು ; ಕೆಲವು ಕಿರುಚಿಕೊಳ್ಳುತ್ತಿದ್ದುವು ; ಮತ್ತೆ ಕೆಲವು ಸಂಕಟಪಡುತ್ತಿದ್ದುವು ; ಮತ್ತೆ ಕೆಲವು ಹಿಂದಿರುಗಿ ಓಡುತ್ತಿದ್ದುವು ; ಮತ್ತೆ ಕೆಲವು ಭಯಗೊಂಡು ಓಡಿಹೋಗುತ್ತಿದ್ದಾಗ ಮಲ-ಮೂತ್ರಗಳನ್ನು ವಿಸರ್ಜನೆಮಾಡುತ್ತಿದ್ದುವು. ಇಂತಹ ಆನೆಗಳ ಸಮೂಹವನ್ನು ನಾವಂದು ಯುದ್ಧದಲ್ಲಿ ಕಂಡೆವು. ಮಹಾರಾಜ! ಭೀಮಸೇನನ ಮಾರ್ಗದಲ್ಲಿ ಅವನ ಗದಾಪ್ರಹಾರಕ್ಕೆ ಸಿಕ್ಕಿ ಸತ್ತುಹೋಗಿ ಪರ್ವತಗಳಂತೆ ಬಿದ್ದಿದ್ದ ಆನೆಗಳನ್ನು ನಾನು ನೋಡಿದೆನು. ಮತ್ತೆ ಕೆಲವು ಆನೆಗಳು ಮೂರ್ಛೆಗೊಂಡು ಬಾಯಲ್ಲಿ ನೊರೆಯನ್ನು ಸುರಿಸುತ್ತಿದ್ದುವು. ಕೆಲವು ಆನೆಗಳಿಗೆ ಗಂಡಸ್ಥಳವು ಒಡೆದು ಹೋಗಿ ಅವು ಬಾಯಲ್ಲಿ ರಕ್ತವನ್ನು ಕಾರುತ್ತಿದ್ದುವು. ಮತ್ತೆ ಕೆಲವು ಗದಾಪ್ರಹಾರವು ಬೀಳದಿದ್ದರೂ ಭೀಮಸೇನನ ಗರ್ಜನೆಯನ್ನು ಕೇಳಿಯೇ ವ್ಯಾಕುಲಗೊಂಡುವುಗಳಾಗಿ ನೆಲದ ಮೇಲೆ ಪರ್ವತದಂತೆಯೇ ಬಿದ್ದಿದ್ದುವು.

ಭೀಮನು ಗದೆಯಿಂದ ಆನೆಗಳನ್ನು ಅಪ್ಪಳಿಸುತ್ತಿದ್ದಾಗ ಅವುಗಳ ಗಂಡಸ್ಥಳಗಳು ಒಡೆದು ಹೊರಚಿಮ್ಮಿದ ರಕ್ತದಿಂದಲೂ ಮೇದಸ್ಸಿನಿಂದಲೂ ಭೀಮಸೇನನ ಶರೀರವು ತೋಯ್ದುಹೋಗಿದ್ದಿತು. ಆ ಸಮಯದಲ್ಲಿ ಅವನು ಪ್ರಾಣಿಗಳ ಕೊಬ್ಬಿನಿಂದಲೇ ಸ್ನಾನಮಾಡಿರುವನೋ ಎಂಬಂತೆ ಕಾಣುತ್ತಿದ್ದನು. ಆ ಅವಸ್ಥೆಯಲ್ಲಿ ಭೀಮನು ಗದೆಯನ್ನು ಎತ್ತಿಕೊಂಡು ರಣಾಂಗಣದಲ್ಲಿ ಸಂಚರಿಸುತ್ತಿರುವುದನ್ನು ನೋಡಿದರೆ ದಂಡಪಾಣಿಯಾದ ಯಮರಾಜನೇ ಭೀಮನ ರೂಪದಲ್ಲಿ ಸಂಚರಿಸುತ್ತಿರು

ವಂತೆ ಕಾಣುತ್ತಿದ್ದನು. ಆನೆಗಳ ರಕ್ತದಿಂದ ಕೆಂಪಾಗಿ ಮಾಡಲ್ಪಟ್ಟಿದ್ದ ಗದೆಯನ್ನು ಎತ್ತಿಕೊಂಡು ತಿರುಗುತ್ತಿದ್ದ ಭೀಮಸೇನನು, ಪಿನಾಕವನ್ನು ಧರಿಸಿ ತಿರುಗುತ್ತಿರುವ ಪಿನಾಕಪ್ರಾಣಿಯಾದ ರುದ್ರನಂತೆಯೇ ಬಹುಘೋರನಾಗಿಯೂ ಮತ್ತು ಅತ್ಯಂತ ರೌದ್ರನಾಗಿಯೂ ಕಾಣುತ್ತಿದ್ದನು. ಮಹಾರಾಜ! ಕ್ರುದ್ಧನಾದ ಭೀಮಸೇನನಿಂದ ಮರ್ದಿತವಾದ ಆನೆಗಳು ಅತ್ಯಂತ ಕ್ಲೇಶಗೊಂಡುವುಗಳಾಗಿ ನೋವನ್ನು ಸಹಿಸಲಾರದೇ ಭೀಮನ ಎರಡನೆಯ ಪ್ರಹಾರವನ್ನು ತಪ್ಪಿಸಿಕೊಳ್ಳುವ ಕಾತರದಿಂದ ನಿನ್ನ ಸೈನ್ಯದ ಮೇಲೆಯೇ ನುಗ್ಗಿ ಎದುರಿಗೆ ಸಿಕ್ಕುತ್ತಿದ್ದ ನಿನ್ನ ಸೈನಿಕರನ್ನು ಕಾಲಿನಲ್ಲಿ ತುಳಿದು ಧ್ವಂಸಮಾಡುತ್ತಾ ಓಡುತ್ತಿದ್ದುವು. ದೈತ್ಯರೊಡನೆ ಯುದ್ಧಮಾಡುವಾಗ ವಜ್ರಪಾಣಿಯಾದ ಇಂದ್ರನನ್ನು ದೇವತೆಗಳು ಸುತ್ತಲೂ ನಿಂತು ಸಂರಕ್ಷಿಸುವಂತೆ–ಮಹಾಧನುಷ್ಮಂತನಾದ ದುರ್ಯೋಧನನ ಗಜಸೈನ್ಯದೊಡನೆ ಯುದ್ಧಮಾಡುತ್ತಿದ್ದ ಭೀಮಸೇನನನ್ನು ಅಭಿಮನ್ಯುಪ್ರಮುಖರಾದ ರಥಿಕರು ಸಂರಕ್ಷಿಸುತ್ತಿದ್ದರು. ಕೌರವೇಶ್ವರ! ರಕ್ತದಿಂದ ಬಳಿಯಲ್ಪಟ್ಟಿದ್ದ ಮತ್ತು ಆನೆಗಳ ರಕ್ತದಿಂದಲೇ ನೆನೆಸಲ್ಪಟ್ಟಿದ್ದ ಗದೆಯನ್ನು ಧರಿಸಿದ್ದ ಭೀಮಸೇನನು ನಿಶ್ಚಯವಾಗಿಯೂ ರೌದ್ರರೂಪಿಯಾದ ಯಮರಾಜನಂತೆಯೇ ಕಾಣುತ್ತಿದ್ದನು. ಗದೆಯನ್ನು ನಾನಾಪ್ರಕಾರವಾದ ವರಸೆಗಳಿಂದ ತಿರುಗಿಸುತ್ತಾ ರಣಾಂಗಣದಲ್ಲಿ ವ್ಯಾಯಾಮಮಾಡುತ್ತಿರುವಂತೆ ಕಾಣುತ್ತಿದ್ದ ಭೀಮಸೇನನು ತಾಂಡವನೃತ್ಯವನ್ನು ಮಾಡುತ್ತಿರುವ ಶಂಕರನಂತೆಯೇ ಇದ್ದುದನ್ನು ನಾವು ಕಂಡೆವು.

ಮಹಾರಾಜ! ಭೀಮಸೇನನ ಗದೆಯು ಯಮದಂಡಕ್ಕೆ ಸಮಾನವಾಗಿದ್ದಿತು. ಬಹಳ ಭಾರವಾಗಿದ್ದಿತು. ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಧ್ವನಿಯಿಂದ ಕೂಡಿದ್ದಿತು. ಬಹುಭಯಂಕರವಾಗಿದ್ದಿತು. ಎದುರಾಳಿಗಳೆಲ್ಲರನ್ನೂ ಸಂಹಾರಮಾಡುವ ಸಾಮರ್ಥ್ಯವನ್ನು ಹೊಂದಿದ್ದಿತು. ಅಂತಹ ಅನುಪಮವಾದ ಗದೆಯನ್ನು ನಾವು ನೋಡಿದೆವು. ಶತ್ರುಗಳ ಕೂದಲುಗಳಿಂದಲೂ ಮತ್ತು ಮಜ್ಜೆಯಿಂದಲೂ ಧೂಸರಿತವಾಗಿ ರಕ್ತದಿಂದಲೂ ಆ ಗದೆಯು ಲೇಪಿತವಾಗಿದ್ದಿತು. ಪ್ರಲಯಕಾಲದಲ್ಲಿ ಕ್ರುದ್ಧನಾಗಿ ಸಮಸ್ತಪ್ರಾಣಿಗಳನ್ನೂ ಸಂಹರಿಸುವ ರುದ್ರನ ಪಿನಾಕದೋಪಾದಿಯಲ್ಲಿದ್ದ ಭೀಮನ ಆ ಗದೆಯನ್ನು ನಾವು ನೋಡಿದೆವು. ಯಾವ ರೀತಿಯಲ್ಲಿ ಪಶುಗಳ ಸಮೂಹವನ್ನು ಗೋಪಾಲನು ಕೋಲಿನಿಂದ

ಅಟ್ಟಿಸಿಕೊಂಡು ಹೋಗುತ್ತಾನೆಯೋ ಅದೇ ರೀತಿಯಲ್ಲಿ ಭೀಮಸೇನನು ತನ್ನ ಗದೆಯಿಂದ ಗಜಸೈನ್ಯಸಮೂಹವನ್ನು ಅಟ್ಟಿಸಿಕೊಂಡು ಹೋಗುತ್ತಿದ್ದನು. (ಅಟ್ಟಿಸಿಕೊಂಡು ಹೋಗಿ ಸಂಹರಿಸುತ್ತಿದ್ದನು.)

ನಾಲ್ಕು ಕಡೆಗಳಿಂದಲೂ ಬರುತ್ತಿದ್ದ ಬಾಣಗಳಿಂದಲೂ ಮತ್ತು ಭೀಮಸೇನನ ಭಯಂಕರವಾದ ಗದೆಯಿಂದಲೂ ಹಿಂಸಿತವಾಗುತ್ತಿದ್ದ ನಿನ್ನ ಆನೆಗಳು ಭಯದಿಂದ ನಿನ್ನ ಸೈನಿಕರನ್ನೇ ತುಳಿದು ಧ್ವಂಸಮಾಡುತ್ತಾ ಪಲಾಯನಮಾಡುತ್ತಿದ್ದುವು. ಬಿರುಗಾಳಿಯು ಮಹಾಮೇಘಗಳನ್ನು ಛಿನ್ನ-ಭಿನ್ನವಾಗಿ ಮಾಡಿಬಿಡುವಂತೆ–ಭೀಮಸೇನನು ಯುದ್ಧದಲ್ಲಿ ನಿನ್ನ ಗಜಸೈನ್ಯವನ್ನು ಸಂಪೂರ್ಣವಾಗಿ ತುಂಡು-ತುಂಡು ಮಾಡಿ ಶ್ಮಶಾನಭೂಮಿಯಲ್ಲಿ ಶೂಲವನ್ನು ಹಿಡಿದು ನಿಂತಿರುವ ರುದ್ರನಂತೆಯೇ ಭಯಂಕರರೂಪವನ್ನು ತಾಳಿ ನಿಂತಿದ್ದನು."

ಅರುವತ್ತೆರಡು ಎಂಬುದಕ್ಕೆ ಬದಲು: ೬೨ನೆಯ ಅಧ್ಯಾಯವು ಮುಗಿಯಿತು.

೬೩ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಮಸೇನ ಮತ್ತು ಭೀಷ್ಮರ ಯುದ್ಧ: ಸಾತ್ಯಕಿ ಮತ್ತು ಭೂರಿಶ್ರವಸರ ಪ್ರಚಂಡ ಕಾಳಗ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಗಜಸೈನ್ಯವು ಭೀಮನಿಂದ ಸಂಪೂರ್ಣವಾಗಿ ವಿನಾಶಮಾಡಲ್ಪಟ್ಟನಂತರ ದುರ್ಯೋಧನನು ಕುಪಿತನಾಗಿ ತನ್ನ ಸೈನ್ಯದ ಕಡೆಗೆ ತಿರುಗಿ–'ಭೀಮಸೇನನನ್ನು ಈ ಕ್ಷಣದಲ್ಲಿಯೇ ಸಂಹರಿಸಿರಿ'–ಎಂದು ಗಟ್ಟಿಯಾಗಿ ಕೂಗಿ ಹೇಳಿದನು. ನಿನ್ನ ಮಗನ ಆ ಶಾಸನವನ್ನು ಕೇಳುತ್ತಲೇ ನಿನ್ನ ಕಡೆಯ ಸೈನಿಕರೆಲ್ಲರೂ ಭಯಂಕರವಾಗಿ ಗರ್ಜನೆಮಾಡುತ್ತಿದ್ದ ಭೀಮಸೇನನ ಕಡೆಗೆ ಧಾವಿಸಿದರು. ನಿನ್ನ ಸೈನ್ಯವು ರಥಗಳಿಂದಲೂ, ಆನೆಗಳಿಂದಲೂ, ಕುದುರೆಗಳಿಂದಲೂ ಸಮೃದ್ಧವಾಗಿದ್ದಿತು. ಶಂಖ, ದುಂದುಭಿ–ಮುಂತಾದ ರಣವಾದ್ಯಗಳಿಂದ ಘೋಷಿತವಾಗಿದ್ದಿತು. ನಿನ್ನ ಸೈನ್ಯದಲ್ಲಿ ರಥಗಳು ಮತ್ತು ಕಾಲಾಳುಗಳು ಅನಂತವಾಗಿದ್ದುವು. ಅವುಗಳ ವೇಗವಾದ ಚಲನದಿಂದಾಗಿ ರಣಾಂಗಣವು ಧೂಳಿನಿಂದ ವ್ಯಾಪ್ತವಾಯಿತು. ನಿಶ್ಚಯವಾಗಿ ಹೇಳುವುದಾದರೆ ಮಹಾರಾಜ! ದುರ್ಯೋಧನನ ಸೈನ್ಯವು ಮಹಾಸಾಗರಕ್ಕೆ ಸಮಾನವಾಗಿಯೇ

ಇದ್ದಿತು. ಕದಲಿಸಲು ಅಶಕ್ಯವಾದ ಆ ಸೇನಾಸಮುದ್ರವನ್ನು, ಸಾಗರವನ್ನು ತೀರವು ತಡೆದಿರುವಂತೆ–ಭೀಮಸೇನನು ತನ್ನ ಅಮಿತವಾದ ಬಲದಿಂದ ತಡೆದು ನಿಲ್ಲಿಸಿಬಿಟ್ಟನು. ಯುದ್ಧದಲ್ಲಿ ಮಹಾತ್ಮನಾದ ಪಾಂಡವನ ಅತಿಮಾನುಷವಾದ (ಮನುಷ್ಯಮಾತ್ರದವನಿಂದ ಮಾಡಲು ಸಾಧ್ಯವಾಗದ) ಆ ಸಾಹಸಕರ್ಮವನ್ನು ನೋಡಿ ನಾವು ಆಶ್ಚರ್ಯಪಟ್ಟೆವು.

ತನ್ನನ್ನು ಆಕ್ರಮಿಸಲು ಬರುತ್ತಿದ್ದ ಗರ್ವಿಷ್ಠರಾಗಿದ್ದ ಅಶ್ವ-ಗಜ-ರಥ ಸೈನ್ಯಗಳಿಂದೊಡಗೂಡಿದ ಎಲ್ಲ ರಾಜರನ್ನೂ ಭೀಮಸೇನನು–ಅವರೆಲ್ಲರೂ ಏಕಕಾಲದಲ್ಲಿ ತನ್ನ ಮೇಲೆ ಬೀಳಲು ಬರುತ್ತಿರುವರೆಂಬ ಅಂಜಿಕೆ ಸ್ವಲ್ಪ ವಾದರೂ ಇಲ್ಲದೇ (ಗಾಬರಿಗೊಳ್ಳದೆ) ಗದೆಯಿಂದಲೇ ಅವರೆಲ್ಲರನ್ನೂ ತಡೆದು ನಿಲ್ಲಿಸಿದನು. ರಥಿಗಳಲ್ಲಿ ಶ್ರೇಷ್ಠನಾದ ಭೀಮಸೇನನು ದುರ್ಯೋಧನನ ಸೈನ್ಯಸಮೂಹಗಳನ್ನು ಗದೆಯಿಂದಲೇ ದೂರಸರಿದು ನಿಲ್ಲುವಂತೆಮಾಡಿ ಮೇರುಪರ್ವತದಂತೆ ಸುಸ್ಥಿರವಾಗಿ ನಿಂತಿದ್ದನು. ಭಯಂಕರವಾದ, ಘೋರವಾದ ಮತ್ತು ಬಹುದಾರುಣವಾದ ಆ ಸಮಯದಲ್ಲಿ ಭೀಮಸೇನನ ಸಹೋದರರು, ಅವನ ಮಕ್ಕಳು, ಅಪರಾಜಿತನಾದ ಶಿಖಂಡಿ–ಇವರುಗಳಲ್ಲಿ ಯಾರೂ ಭೀಮಸೇನನನ್ನು ಬಿಟ್ಟು ಕದಲಲಿಲ್ಲ. ಯುದ್ಧದಲ್ಲಿ ಆ ಎಲ್ಲ ವೀರರೂ ಭೀಮಸೇನನಿಗೆ ರಕ್ಷಕರಾಗಿ ನಿಂತು ಯುದ್ಧಮಾಡುತ್ತಿದ್ದರು. ಅನಂತರ ಭೀಮಸೇನನು ಉತ್ತಮಜಾತಿಯ ಉಕ್ಕಿನಿಂದ ಮಾಡಲ್ಪಟ್ಟಿದ್ದ, ಭಾರವಾಗಿದ್ದ ಮತ್ತು ದೊಡ್ಡದಾಗಿದ್ದ ಗದೆಯನ್ನು ಎತ್ತಿಕೊಂಡು ದಂಡಪಾಣಿಯಾದ ಯಮರಾಜ ನಂತೆಯೇ ನಿನ್ನ ಸೈನ್ಯದ ಮೇಲೆ ಬಿದ್ದನು. ಶತ್ರುಗಳನ್ನು ಸೋಲಿಸುವ ಸಾಮರ್ಥ್ಯವನ್ನು ಹೊಂದಿದ್ದ ಭೀಮಸೇನನು ರಥಗಳ ಸಮೂಹವನ್ನೂ, ಅಶ್ವಗಳ ಸಮೂಹವನ್ನೂ ವಿಧ್ವಂಸಗೊಳಿಸುತ್ತಿದ್ದನು. ಹಲವಾರು ರಥ ಸಮೂಹಗಳನ್ನು ಬಾಹುಗಳ ವೇಗದಿಂದಲೇ ಹಿಡಿದೆಳೆದು ಕೆಳಕ್ಕೆ ಬೀಳಿಸು ತ್ತಿದ್ದನು. ಈ ರೀತಿಯಲ್ಲಿ ಭೀಮಸೇನನು ಆ ಯುದ್ಧದಲ್ಲಿ ಪ್ರಲಯಕಾಲದಲ್ಲಿ ಯಮರಾಜನಂತೆಯೇ ನಿನ್ನ ಸೈನಿಕರೆಲ್ಲರನ್ನೂ ಸಂಹಾರಮಾಡುತ್ತಾ ರಣರಂಗದ ಸುತ್ತಲೂ ಸಂಚರಿಸುತ್ತಿದ್ದನು. ಪಾಂಡುನಂದನನಾದ ಭೀಮಸೇನನು ತನ್ನ ತೊಡೆಗಳ ವೇಗದಿಂದಲೇ ರಥಗಳ ಸಮೂಹಗಳನ್ನು ಶೀಘ್ರಾತಿಶೀಘ್ರವಾಗಿ ಮರ್ದನಮಾಡುತ್ತಿದ್ದನು. ಸಲಗವು ಜೊಂಡುಹುಲ್ಲಿನ

ಪ್ರದೇಶವನ್ನು ಲೀಲಾಜಾಲವಾಗಿ ವಿಧ್ವಂಸಗೊಳಿಸುವಂತೆ ಭೀಮಸೇನನು ನಿನ್ನ ಕಡೆಯ ಸೈನ್ಯಗಳನ್ನು ಲೀಲಾಜಾಲವಾಗಿ ವಿಧ್ವಂಸಮಾಡುತ್ತಿದ್ದನು. ಅವನು ಮಾಡುತ್ತಿದ್ದ ಮತ್ತೊಂದು ರೀತಿಯ ಯುದ್ಧವು ಮತ್ತೂ ವಿಚಿತ್ರವಾಗಿದ್ದಿತು. ರಥಗಳಿಂದ ರಥಿಕರನ್ನೂ, ಆನೆಗಳಿಂದ ಗಜಯೋಧರನ್ನೂ, ಕುದುರೆಗಳಿಂದ ಸವಾರರನ್ನೂ ಕೆಳಕ್ಕೆ ಸೆಳೆದು ಧ್ವಂಸಮಾಡುತ್ತಿದ್ದನು. ಭೂಮಿಯಲ್ಲಿ ಪದಾತಿಗಳನ್ನೂ ಹೊಡೆದುರುಳಿಸಿದನು. ಒಂದು ರಥವನ್ನು ಮತ್ತೊಂದು ರಥದ ಮೇಲೆ ತಳ್ಳಿ ಎರಡು ರಥಗಳನ್ನೂ ಧ್ವಂಸಮಾಡುತ್ತಿದ್ದನು. ಹೀಗೆಯೇ ಆನೆ



ಗಳನ್ನು–ಆನೆಗಳ ಮೇಲೂ, ಕುದುರೆಸವಾರರನ್ನು–ಕುದುರೆಸವಾರರ ಮೇಲೂ, ಪದಾತಿಗಳನ್ನು–ಪದಾತಿಗಳ ಮೇಲೂ ರಭಸದಿಂದ ತಳ್ಳುತ್ತಿದ್ದನು. ಬಿರುಗಾಳಿಯು ವೃಕ್ಷಗಳನ್ನು ಮೂಲೋತ್ಪಾಟನಮಾಡುವಂತೆ–ಕೆಳಕ್ಕೆ ಬಿದ್ದ ನಿನ್ನ ಸೈನಿಕರನ್ನು ಗದೆಯಿಂದ ಭೀಮಸೇನನು ಪ್ರಹರಿಸಿ ಸಂಹರಿಸುತ್ತಿದ್ದನು.

ಆನೆಗಳನ್ನೂ, ಕುದುರೆಗಳನ್ನೂ ಅಸಂಖ್ಯಾತವಾಗಿ ಧ್ವಂಸಮಾಡಿದ ಭೀಮಸೇನನ ಆ ಮಹಾಗದೆಯು ಮಜ್ಜೆ, ವಸೆ, ಮಾಂಸ ಮತ್ತು ರಕ್ತ ಇವುಗಳಿಂದ ಲೇಪಿತವಾಗಿ ಬಹಳ ಭೀಕರವಾಗಿ ಕಾಣುತ್ತಿದ್ದಿತು. ಅಲ್ಲಲ್ಲಿಯೇ ಸತ್ತು ಬಿದ್ದಿದ್ದ ಮನುಷ್ಯರಿಂದಲೂ, ಆನೆಗಳಿಂದಲೂ ಮತ್ತು ಕುದುರೆಗಳಿಂದಲೂ ವ್ಯಾಪ್ತವಾಗಿದ್ದ ಆ ರಣಾಂಗಣವು ಮೃತ್ಯುವಿನ ನಿವಾಸಸ್ಥಾನವೋ ಎಂಬಂತೆ ಕಾಣುತ್ತಿದ್ದಿತು. ಪ್ರಳಯಕಾಲದಲ್ಲಿ ಕೋಪಗೊಂಡು ಪ್ರಾಣಿಗಳನ್ನು ಸಂಹಾರ

ಮಾಡುವ ರುದ್ರನ ಪಿನಾಕದಂತೆಯೂ, ಯಮನ ದಂಡದಂತೆಯೂ (ಭಯಂಕರವಾಗಿಯೂ, ಶತ್ರುಸಂಹಾರಿಣಿಯಾಗಿಯೂ) ಭೀಮನ ಗದೆ ಯಿದ್ದುದನ್ನು ಯುದ್ಧದ ಪ್ರೇಕ್ಷಕರೆಲ್ಲರೂ ನೋಡಿದರು. ಭೀಮನ ಗದೆ ಯಿಂದ ಉಂಟಾಗುತ್ತಿದ್ದ ಶಬ್ದವು ಇಂದ್ರನ ವಜ್ರಾಯುಧದ ಶಬ್ದಕ್ಕೆ ಸಮಾನವಾಗಿದ್ದಿತು. ಗದೆಯನ್ನು ಗರ-ಗರನೆ ತಿರುಗಿಸುತ್ತಿದ್ದ ಮಹಾತ್ಮನಾದ ಕೌಂತೇಯನ ರೂಪವು ಯುಗಕ್ಷಯಕಾಲದಲ್ಲಿ ಸರ್ವವನ್ನೂ ವಿಧ್ವಂಸಗೊಳಿ ಸುವ ಕಾಲಪುರುಷನ (ಯಮನ) ರೂಪದಂತೆಯೇ ಮಹಾಘೋರವಾಗಿ ಕಾಣುತ್ತಿದ್ದಿತು. ನಿನ್ನ ಸೈನ್ಯವು ಅವನ ಘೋರರೂಪವನ್ನು ಕಂಡು ಅವನ ಎದುರಿನಲ್ಲಿ ನಿಲ್ಲಲಾರದೇ ಓಡಿಹೋಗುತ್ತಿದ್ದಿತು. ದುರ್ಯೋಧನನ ಪ್ರೋತ್ಸಾಹದಿಂದ ಧೈರ್ಯಗೊಂಡು ಪುನಃ ಹಿಂದಿರುಗುತ್ತಿದ್ದಿತು. ಭೀಮಸೇನನು ಗದೆಯನ್ನು ತಿರುಗಿಸುತ್ತಾ ಬಂದೊಡನೆಯೇ ಪ್ರಾಣಭಯದಿಂದ ಪುನಃ ಓಡಿಹೋಗುತ್ತಿದ್ದಿತು. ಈ ರೀತಿಯಾಗಿ ನಿನ್ನ ಸೈನ್ಯವನ್ನು ಬಾರಿ- ಬಾರಿಗೂ ಹೆದರಿಸಿ ಓಡಿಹೋಗುವಂತೆ ಮಾಡುತ್ತಿದ್ದ, ದುರ್ಯೋಧನನ ಪ್ರೋತ್ಸಾಹದಿಂದ ಪುನಃ ಧೈರ್ಯವನ್ನು ತಂದುಕೊಂಡು ಯುದ್ಧಕ್ಕೆ ಹಿಂದಿರು ಗುತ್ತಿದ್ದ ಸೈನ್ಯಗಳಿಗೆದುರಾಗಿ ಮೃತ್ಯುದೇವತೆಯಂತೆಯೇ ಪುನಃ ಬಂದು ಎದುರಿಗೆ ನಿಲ್ಲುತ್ತಿದ್ದ ಭೀಮಸೇನನನ್ನು ನೋಡಿ, ನಿನ್ನ ಎಲ್ಲ ಸೈನಿಕರೂ ಯುದ್ಧದ ವಿಷಯದಲ್ಲಿ ಔದಾಸೀನ್ಯವನ್ನು ಹೊಂದಿದರು. ಮಹಾರಾಜ! ಭೀಮಸೇನನು ಗದೆಯನ್ನೆತ್ತಿ ಯಾವ ಯಾವ ಕಡೆಗಳಿಗೆ ನೋಡುತ್ತಿದ್ದನೋ ಆಯಾ ಕಡೆಗಳಿಂದ ನಿನ್ನ ಎಲ್ಲ ಸೈನಿಕರೂ ಹಿಮ್ಮೆಟ್ಟುತ್ತಿದ್ದರು.*

ನಿನ್ನ ಕಡೆಯ ಸೈನಿಕರನ್ನು ತನ್ನ ಬಲದಿಂದ ಛಿನ್ನ-ಭಿನ್ನವಾಗಿ ಮಾಡು ತ್ತಿದ್ದ, ಪ್ರಳಯಕಾಲದಲ್ಲಿ ಕಾಲಪುರುಷನು ಬಾಯ್ದೆರೆದು ನಾಲಿಗೆಯನ್ನು ಚಾಚಿಕೊಂಡು ಜೀವಕೋಟಿಯನ್ನು ನುಂಗಿಹಾಕುವಂತೆ ನಿನ್ನ ಸೈನಿಕರನ್ನು

---

* ದೀರ್ಯನ್ತೇಸ್ಮ= ಎಂದರೆ ಸೀಳಿಹೋಗುತ್ತಿದ್ದರು ; ಸಂದುಬಿಡುತ್ತಿದ್ದರು ; ಬಿರುಕು ಬಿಡುತ್ತಿದ್ದರು ಎಂದಾಗುತ್ತದೆ. ಸೈನ್ಯದಲ್ಲಿ ಸಂದುಬಿಡುವುದೆಂದರೆ ಅಲ್ಲಿ ನಿಲ್ಲದೇ ಸ್ಥಳವನ್ನು ಖಾಲಿಮಾಡುವುದು ಎಂದರ್ಥ. ಭೀಮಸೇನನು ಗದೆಯನ್ನೆತ್ತಿ ಒಮ್ಮೆ ನೋಡಿದೊಡನೆಯೇ ದುರ್ಯೋಧನನ ಕಡೆಯ ಸೈನಿಕರು ಮೆಲ್ಲನೆ ಹಿಮ್ಮೆಟ್ಟುತ್ತಿದ್ದರು. ಅವನ ಗದಾಪ್ರಹಾರವನ್ನು ತಪ್ಪಿಸಿಕೊಳ್ಳಲು ಹಿಂದಕ್ಕೆ ಸರಿಯುತ್ತಿದ್ದರು ಎಂದರ್ಥ.

ನುಂಗಿಹಾಕುತ್ತಿರುವನೋ ಎಂಬಂತೆಯೇ ಕಾಣುತ್ತಿದ್ದ, ಅಮಿತವಿಕ್ರಮನಾದ, ಭಯಂಕರಕರ್ಮನಾದ, ಮಹಾಗದೆಯನ್ನು ಹಿಡಿದಿದ್ದ ವೃಕೋದರನನ್ನು ಕಂಡು ಭೀಷ್ಮನು ಶೀಘ್ರಾತಿಶೀಘ್ರವಾಗಿ ಅವನ ಮುಂದೆ ಹೋಗಿ ನಿಂತನು. ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದಲೂ, ಚಕ್ರಗಳ ಘೋಷ ದಿಂದಲೂ ಕೂಡಿದ್ದ ವಿಶಾಲವಾದ ರಥದಲ್ಲಿ ಕುಳಿತು ಮಳೆಗರೆಯುವ ಪರ್ಜನ್ಯನೋ ಪಾದಿಯಲ್ಲಿ ಬಾಣಗಳ ಮಳೆಗರೆಯುತ್ತಾ ಭೀಷ್ಮನು ಭೀಮನನ್ನು ಆಕ್ರಮಿ ಸಿದನು. ಬಾಯ್ದೆರೆದು ನಾಲಿಗೆಯನ್ನು ಚಾಚಿಕೊಂಡು ಎದುರಾಗಿ ಸಿಕ್ಕುವ ಪ್ರಾಣಿಗಳನ್ನು ನುಂಗಿಹಾಕಲು ಬರುವ ಅಂತಕನೋಪಾದಿಯಲ್ಲಿ ಬರುತ್ತಿ ರುವ ಭೀಷ್ಮನನ್ನು ಮಹಾಬಾಹುವಾದ ಭೀಮನು ನೋಡಿ ಪರಮಕ್ರುದ್ಧನಾಗಿ ಭೀಷ್ಮನನ್ನು ಎದುರಿಸಲು ಅವನ ಮುಂದೆ ಹೋಗಿ ನಿಂತನು.

ಆ ಕ್ಷಣದಲ್ಲಿಯೇ ಸತ್ಯಸಂಧನಾದ, ಶಿನಿಪ್ರವೀರನಾದ, ಸಾತ್ಯಕಿಯು ತನ್ನ ದೃಢವಾದ ಧನುಸ್ಸಿನಿಂದ ಶತ್ರುಗಳನ್ನು ಧ್ವಂಸಮಾಡುತ್ತಾ, ನಿನ್ನ ಮಗನ ಸೈನ್ಯವನ್ನು ನಡುಗಿಸುತ್ತಾ ಪಿತಾಮಹನನ್ನು (ಭೀಷ್ಮನನ್ನು) ಆಕ್ರಮಿಸಿದನು. ಬೆಳ್ಳಿಯಂತೆ ಪ್ರಕಾಶಮಾನವಾಗಿದ್ದ ಕುದುರೆಗಳಿಂದ ಯೋಜಿತವಾಗಿದ್ದ ರಥ ದಲ್ಲಿ ಕುಳಿತು ಬರುತ್ತಿದ್ದ, ನಿಶಿತವಾದ ಮತ್ತು ಒಳ್ಳೆಯ ರೆಕ್ಕೆಗಳನ್ನು ಹೊಂದಿದ್ದ ಬಾಣಗಳನ್ನು ಪುಂಖಾನುಪುಂಖವಾಗಿ ಶತ್ರುಗಳ ಮೇಲೆ ಸುರಿಸುತ್ತಿದ್ದ ಸಾತ್ಯಕಿ ಯನ್ನು ಎದುರಿಸಿ ನಿಲ್ಲಲು ಅಥವಾ ಅವನ ಬಾಣಗಳ ಪ್ರಹಾರವನ್ನು ಸಹಿಸಿ ಕೊಳ್ಳಲು ನಿನ್ನ ಕಡೆಯ ಸೈನಿಕರಿಗೆ ಆ ಸಮಯದಲ್ಲಿ ಸಾಧ್ಯವಾಗಲೇ ಇಲ್ಲ. ಆದರೆ ಅಲಂಬುಷನೆಂಬ ರಾಕ್ಷಸನೊಬ್ಬನು ಮಾತ್ರವೇ ಆ ಸಮಯದಲ್ಲಿ ಸಾತ್ಯಕಿಯನ್ನು ಹತ್ತು ಬಾಣಗಳಿಂದ ಗಾಯಗೊಳಿಸಿದನು. ಮರುಕ್ಷಣ ದಲ್ಲಿಯೇ ವೀರನಾದ ಸಾತ್ಯಕಿಯು ನಾಲ್ಕು ಬಾಣಗಳಿಂದ ಅಲಂಬುಷನನ್ನು ಗಾಯಗೊಳಿಸಿ ಅನಂತರ ಭೀಷ್ಮನನ್ನು ಆಕ್ರಮಿಸಿದನು. ಸಾತ್ಯಕಿಯು ಶತ್ರು ಗಳ ಮಧ್ಯದಲ್ಲಿ ಬಾಣಗಳನ್ನು ಸುರಿಸುತ್ತಲೇ ರಣರಂಗದ ಎಲ್ಲ ಕಡೆಗಳ ಲ್ಲಿಯೂ ತಿರುಗುತ್ತಿದ್ದನು. ಒಟ್ಟುಗೂಡಿಕೊಂಡು ತನ್ನ ಮೇಲೆ ಬೀಳಲು ಬರುತ್ತಿದ್ದ ಕುರುಪ್ರವೀರರನ್ನು ಬಾರಿ-ಬಾರಿಗೂ ಹೊಡೆದಟ್ಟುತ್ತಿದ್ದನು. ಕೌರವರು ಓಡುತ್ತಿದ್ದಂತೆ ಸಿಂಹಗರ್ಜನೆಯನ್ನು ಮಾಡುತ್ತಿದ್ದನು. ಆ ಗರ್ಜನೆ ಯನ್ನು ಕೇಳಿ ವೃಷ್ಣಿವೀರನಾದ ಸಾತ್ಯಕಿಯೇ ಮತ್ತೆ ಬಂದಿರುವನೆಂಬುದನ್ನು

ತಿಳಿದು ನಿನ್ನ ಕಡೆಯ ಸೈನಿಕರು ಮೇಘಗಳು ಪರ್ವತಗಳ ಮೇಲೆ ಯಾವ ರೀತಿಯಲ್ಲಿ ಮಳೆಗರೆಯುವುವೋ ಅದೇ ರೀತಿಯಲ್ಲಿ ಸಾತ್ಯಕಿಯ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದರು. ಮಧ್ಯಾಹ್ನದಲ್ಲಿ ಜ್ವಲಿಸುವ ಸೂರ್ಯನ ತಾಪವನ್ನು ಸಹಿಸಲು ಸಾಧ್ಯವಾಗದಂತೆ ಸಾತ್ಯಕಿಯ ಪರಾಕ್ರಮವನ್ನು ತಡೆದು ಕೊಳ್ಳಲು ನಿನ್ನ ಕಡೆಯ ಸೈನಿಕರು ಸಮರ್ಥರಾಗಲಿಲ್ಲ. ಆ ಸಮಯದಲ್ಲಿ ಸೋಮದತ್ತನ ಮಗನಾದ ಭೂರಿಶ್ರವಸನೊಬ್ಬನನ್ನು ಬಿಟ್ಟು ಉಳಿದವರೆಲ್ಲರೂ ಸಾತ್ಯಕಿಯ ಪರಾಕ್ರಮವನ್ನು ಕಂಡು ವಿಷಾದಗ್ರಸ್ತರಾದರು. ತನ್ನ ರಥ ಸೈನ್ಯಗಳು ಸಾತ್ಯಕಿಯ ಬಾಣಗಳ ಪ್ರಹಾರವನ್ನು ತಾಳಿಕೊಳ್ಳಲಾರದೆ ಓಡಿ ಹೋಗುತ್ತಿರುವುದನ್ನು ಕಂಡು ಸೋಮದತ್ತನ ಮಗನಾದ ಮಹಾತ್ಮನಾದ ಭೂರಿಶ್ರವಸನು ಧನುಸ್ಸನ್ನು ಹಿಡಿದುಕೊಂಡು ಸಾತ್ಯಕಿಯೊಡನೆ ಯುದ್ಧ ಮಾಡಲು ಅವನಿಗೆದುರಾಗಿ ಬಂದುನಿಂತನು.

೬೩ನೆಯ ಅಧ್ಯಾಯವು ಮುಗಿಯಿತು.

೬೪ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಮಸೇನ-ಘಟೋತ್ಕಚರ ಪರಾಕ್ರಮ : ಕೌರವರ ಪರಾಜಯ : ನಾಲ್ಕನೆಯ ದಿವಸದ ಯುದ್ಧದ ಪರಿಸಮಾಪ್ತಿ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

ಸಾತ್ಯಕಿಯೊಡನೆ ಯುದ್ಧಮಾಡಲು ಬಂದ ಭೂರಿಶ್ರವಸನು ಬಹಳ ಕೋಪಗೊಂಡವನಾಗಿ ಸಲಗವೊಂದನ್ನು ಅಂಕುಶದಿಂದ ಬಾಧೆಪಡಿಸುವಂತೆ ಒಂಬತ್ತು ಬಾಣಗಳಿಂದ ಸಾತ್ಯಕಿಯನ್ನು ಪ್ರಹರಿಸಿದನು. ಅಮೇಯಾತ್ಮನಾದ ಸಾತ್ಯಕಿಯೂ ಸಹ ಬಗ್ಗಿದ ಗಿಣ್ಣುಗಳುಳ್ಳ ಬಾಣಗಳಿಂದ (ಬಾಣಗಳ ಪ್ರಯೋಗದಿಂದ) ಕುರುವಂಶಸಂಭೂತನಾದ ಭೂರಿಶ್ರವಸನನ್ನು ಎಲ್ಲರೂ ನೋಡುತ್ತಿದ್ದಂತೆಯೇ ತಡೆದು ನಿಲ್ಲಿಸಿದನು. ಅದನ್ನು ಕಂಡು ದುರ್ಯೋಧನ ರಾಜನು ತನ್ನ ತಮ್ಮಂದಿರಿಂದ ಪರಿವೃತನಾಗಿ ಪ್ರಯತ್ನಪೂರ್ವಕವಾಗಿ ಭೂರಿಶ್ರವಸನ ಬಳಿಗೆ ಹೋಗಿ ರಕ್ಷಿಸುವ ಸಲುವಾಗಿ ಅವನನ್ನು ಸುತ್ತುವರಿದು ನಿಂತನು. ಅದನ್ನು ಕಂಡ ಪಾಂಡವರೂ ಸುಮ್ಮನಿರಲಿಲ್ಲ. ಮಹಾ ತೇಜಸ್ವಿಗಳಾದ ಪಾಂಡವರೂ ಸಹ ಸಾತ್ಯಕಿಯನ್ನು ರಕ್ಷಿಸುವ ಸಲುವಾಗಿ

ಬಹುಶೀಘ್ರವಾಗಿ ಸಾತ್ಯಕಿಯ ಬಳಿಗೆ ಬಂದು ಅವನನ್ನು ಸುತ್ತುವರಿದು ನಿಂತರು. ಕ್ರುದ್ಧನಾದ ಪಾಂಡವದ್ವಿತೀಯನಾದ ಭೀಮಸೇನನು ಗದೆಯನ್ನು ಮೇಲಕ್ಕೆತ್ತಿಕೊಂಡು ಸಾತ್ಯಕಿಯ ಕಡೆಗೆ ನುಗ್ಗಿಬರುತ್ತಿದ್ದ ದುರ್ಯೋಧನ ಪ್ರಮುಖರಾದ ನಿನ್ನ ಮಕ್ಕಳೆಲ್ಲರನ್ನೂ ತಡೆದು ನಿಲ್ಲಿಸಿದನು. ಆ ಸಮಯದಲ್ಲಿ ಕೋಪದಿಂದಲೂ ಮತ್ತು ಅಸಹನೆಯಿಂದಲೂ ಕೂಡಿದ್ದ ನಿನ್ನ ಮಕ್ಕಳ ಲ್ಲೊಬ್ಬನಾದ ನಂದಕನೆಂಬುವನು ಅನೇಕಸಾವಿರ ರಥಗಳಿಂದ ಕೂಡಿಕೊಂಡು ರಣಹದ್ದಿನ ರೆಕ್ಕೆಗಳಿಂದ ಕೂಡಿದ್ದ, ಉಜ್ಜುಕಲ್ಲಿನಿಂದ ಹೆಚ್ಚು ಹರಿತವಾಗಿ ಮಾಡಲ್ಪಟ್ಟಿದ್ದ ಆರು ಬಾಣಗಳಿಂದ ಮಹಾಬಲನಾದ ಭೀಮಸೇನನನ್ನು ಬಾಧೆಪಡಿಸಿದನು. ಭೀಮಸೇನನ ಅವ್ಯಾಹತವಾದ ಸಂಹಾರಕ್ರಿಯೆಯನ್ನು ಕಂಡು ಪರಮಕ್ರುದ್ಧನಾಗಿದ್ದ ದುರ್ಯೋಧನನೂ ಕೂಡ ನಿಶಿತವಾದ ಒಂಬತ್ತು ಬಾಣಗಳಿಂದ ಮಹಾರಥನಾದ ಭೀಮಸೇನನ ಎದೆಯನ್ನು ಗಾಯ ಗೊಳಿಸಿದನು.

ಅದುವರೆಗೂ ಪದಾತಿಯಾಗಿಯೇ ಗದೆಯನ್ನು ತಿರುಗಿಸಿಕೊಂಡು ಶತ್ರುಗಳನ್ನು ಸಂಹರಿಸುತ್ತಿದ್ದ ಮಹಾಬಲನಾದ, ಮಹಾಬಾಹುವಾದ ಭೀಮಸೇನನು ದುರ್ಯೋಧನನಿಂದ ಪ್ರಹೃತನಾಗುತ್ತಲೇ ರಥಗಳಲ್ಲೆಲ್ಲಾ ಶ್ರೇಷ್ಠವಾದುದೆಂದು ಕೀರ್ತಿಯನ್ನು ಗಳಿಸಿದ್ದ ತನ್ನ ರಥವನ್ನು ಹತ್ತಿ ಸಾರಥಿ ಯಾದ ವಿಶೋಕನನ್ನು ಕುರಿತು ಹೇಳಿದನು : “ವಿಶೋಕ! ಯುದ್ಧಮಾಡಲು ಇಲ್ಲಿಗೆ ಆಗಮಿಸಿರುವ ಧೃತರಾಷ್ಟ್ರನ ಮಕ್ಕಳೆಲ್ಲರೂ ಮಹಾರಥರು, ಶೂರರು. ಬಹಳವಾಗಿ ಕೋಪಗೊಂಡಿರುವ ಇವರು ನನ್ನನ್ನೇ ಸಂಹಾರಮಾಡಲು ಉದ್ಯುಕ್ತರಾಗಿದ್ದಾರೆ. ಆದರೆ, ವಿಶೋಕ! ನಮ್ಮ ಮನಸ್ಸಿನಲ್ಲಿ ಅನೇಕವರ್ಷ ಗಳಿಂದಲೂ ಯಾವ ಒಂದು ಚಿಂತೆಯಿದ್ದಿತೋ ಮತ್ತು ಯಾವ ಮನೋರಥ ವೆಂಬ ವೃಕ್ಷವನ್ನು ನಾವು ಬೆಳೆಸುತ್ತಿದ್ದೆವೋ–ಅದೀಗ ಫಲಿತವಾಗಿದೆ. ನಮ್ಮ ಮನೋರಥವು ಈಗ ತಾನೇ ಈಡೇರಿದೆ. ನಮಗೆ ಅನೇಕ ವರ್ಷಗಳಿಂದಲೂ ಈ ದುರ್ಯೋಧನನನ್ನೂ ಮತ್ತು ಇವನ ಸೋದರರನ್ನೂ ಏಕತ್ರ ನೋಡ ಬೇಕೆಂಬ ಆಶಯವಿದ್ದಿತು. ನಾನೀಗ ಆ ನೂರುಮಂದಿ ಧಾರ್ತರಾಷ್ಟ್ರರನ್ನೂ ಏಕತ್ರ ಕಾಣುತ್ತಿದ್ದೇನೆ. ಇದರಿಂದಾಗಿ ನಮ್ಮ ಮನೋರಥವು ಕೈಗೂಡಿದಂತಾಗಿದೆ. ಅಲ್ಲಿ ನೋಡು, ವಿಶೋಕ! ಎಲ್ಲ ರಥಚಕ್ರಗಳಿಂದ ಹುಟ್ಟಿದ ಧೂಳಿಯು ಬಾಣಗಳ ಸಮೂಹಗಳಿಂದ ಕೂಡಿಕೊಂಡು ಅಂತರಿಕ್ಷ

ವನ್ನು ಹೊಕ್ಕು ದಿಗಂತದವರೆಗೂ ವ್ಯಾಪ್ತವಾಗುತ್ತಿದೆಯೋ–ಆ ಸ್ಥಳದಲ್ಲಿಯೇ ಯುದ್ಧಸನ್ನದ್ಧನಾಗಿ ಸ್ವಯಂ ಸುಯೋಧನರಾಜನೇ ನಿಂತಿದ್ದಾನೆ. ಮದೋನ್ಮತ್ತರಾದ ಮತ್ತು ಕುಲೀನರಾದ ಇವನ ಸಹೋದರರೂ ಸಹ ಇವನೊಡನೆಯೇ ಯುದ್ಧಸನ್ನದ್ಧರಾಗಿ ನಿಂತಿದ್ದಾರೆ. ನೀನು ನೋಡುತ್ತಿರುವಂತೆಯೇ ನಾನು ಇವರನ್ನು ಸಂಹಾರಮಾಡುತ್ತೇನೆ. ಈ ವಿಷಯದಲ್ಲಿ ಸಂಶಯವೇ ಇಲ್ಲ. ಆದುದರಿಂದ, ಸೂತ! ಯುದ್ಧಸಮಯದಲ್ಲಿ ನನ್ನ ರಥದ ಕುದುರೆಗಳನ್ನು ಪ್ರಯತ್ನಪೂರ್ವಕವಾಗಿ ವ್ಯವಸ್ಥೆಯಿಂದ ನಿಯಂತ್ರಿಸುವವನಾಗು.”

ಮಹಾರಾಜ! ಹೀಗೆಂದು ಸಾರಥಿಯಾದ ವಿಶೋಕನಿಗೆ ಹೇಳಿದನಂತರ ಪಾರ್ಥನು ನಿನ್ನ ಮಗನಾದ ದುರ್ಯೋಧನನನ್ನು ಕನಕಭೂಷಿತವಾಗಿದ್ದ ಮತ್ತು ತೀಕ್ಷ್ಣವಾಗಿದ್ದ ಹತ್ತು ಬಾಣಗಳಿಂದ ಪ್ರಹರಿಸಿದನು. ನಂದಕನೆಂಬ ನಿನ್ನ ಮತ್ತೊಬ್ಬ ಮಗನ ಎದೆಗೆ ಸರಿಯಾಗಿ ಗುರಿಯಿಟ್ಟು ಮೂರು ಬಾಣಗಳಿಂದ ಪ್ರಹರಿಸಿದನು. ಭೀಮನ ಆ ಪ್ರಹಾರದಿಂದ ದುರ್ಯೋಧನನು ಅಧೀರನಾಗಲಿಲ್ಲ. ಮಹಾಬಲನಾದ ಭೀಮನನ್ನು ಅರುವತ್ತು ಬಾಣಗಳಿಂದ ಪ್ರಹರಿಸಿದನಲ್ಲದೇ ಅವನ ಸಾರಥಿಯಾದ ವಿಶೋಕನನ್ನೂ ಮೂರು ಬಾಣಗಳಿಂದ ಗಾಯಗೊಳಿಸಿದನು. ನಿನ್ನ ಪ್ರೀತಿಯ ಮಗನಾದ ದುರ್ಯೋಧನನು ಇಷ್ಟುಮಾತ್ರದಿಂದಲೇ ತೃಪ್ತನಾಗಿಬಿಡಲಿಲ್ಲ. ನಗು-ನಗುತ್ತಲೇ ಪುನಃ ಭಲ್ಲಗಳೆಂಬ ಮೂರು ಬಾಣಗಳಿಂದ ಅತ್ಯಂತ ಪ್ರಕಾಶಮಾನವಾಗಿದ್ದ ಭೀಮನ ಧನುಸ್ಸನ್ನು ಮುಷ್ಟಿದೇಶದಲ್ಲಿ (ಮುಷ್ಟಿಯ ಮೂಲಕವಾಗಿ ಧನುಸ್ಸನ್ನು ಹಿಡಿದಿದ್ದ ಸ್ಥಳದಲ್ಲಿ) ಕತ್ತರಿಸಿಬಿಟ್ಟನು. ಕಣ್ಮುಚ್ಚಿಬಿಡುವುದರೊಳಗಾಗಿ ಸಾಹಸಿಯಾದ ನಿನ್ನ ಮಗನು ಇಷ್ಟು ಕಾರ್ಯವನ್ನೂ ಮಾಡಿ ಮುಗಿಸಿದನು. ಧನುಷ್ಮಂತನಾದ ದುರ್ಯೋಧನನಿಂದ ತೀಕ್ಷ್ಣವಾದ ಬಾಣಗಳ ಮೂಲಕವಾಗಿ ತನ್ನ ರಥದ ಸಾರಥಿಯಾದ ವಿಶೋಕನು ಪೀಡಿತನಾದುದನ್ನು ಕಂಡು ಅಸಹನಶೀಲನಾದ ಭೀಮಸೇನನು ಪರಮಕ್ರುದ್ಧನಾಗಿ ದುರ್ಯೋಧನನನ್ನು ವಧಿಸುವ ಇಚ್ಛೆಯಿಂದ ಮತ್ತೊಂದು ದಿವ್ಯವಾದ ಧನುಸ್ಸನ್ನು ಕೈಗೆತ್ತಿಕೊಂಡು ರೆಕ್ಕೆಗಳನ್ನು ಹೊಂದಿದ್ದ ಕ್ಷುರಪ್ರವೆಂಬ ಬಾಣವನ್ನು ಧನುಸ್ಸಿಗೆ ಯೋಜಿಸಿ ಅದರಿಂದ ದುರ್ಯೋಧನರಾಜನ ಉತ್ತಮೋತ್ತಮವಾದ ಧನು

ಸ್ಸನ್ನು ಕ್ಷಣಮಾತ್ರದಲ್ಲಿ ಕತ್ತರಿಸಿಬಿಟ್ಟನು. ತನ್ನ ಧನುಸ್ಸು ಭೀಮಸೇನನಿಂದ ಕತ್ತರಿಸಲ್ಪಟ್ಟುದನ್ನು ಕಂಡು ಕ್ರೋಧಮೂರ್ಛಿತನಾದ ನಿನ್ನ ಮಗನು ಭಿನ್ನ ವಾದ ಧನುಸ್ಸನ್ನು ಬಿಸುಟು ಅತ್ಯಂತವೇಗಯುಕ್ತವಾದ (ಬಲಿಷ್ಠವಾದ) ಮತ್ತೊಂದು ಧನುಸ್ಸನ್ನು ಕ್ಷಣಮಾತ್ರದಲ್ಲಿ ಕೈಗೆತ್ತಿಕೊಂಡನು. ಕಾಲಮೃತ್ಯು ವಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಘೋರವಾದ ಬಾಣವನ್ನು ಧನುಸ್ಸಿನಲ್ಲಿ ಜೋಡಿಸಿ ಆಕರ್ಣಾಂತವಾಗಿ ಸೆಳೆದು ಭೀಮಸೇನನ ಎದೆಗೆ ಗುರಿಯಿಟ್ಟು ಪ್ರಹರಿಸಿದನು. ಅತ್ಯಂತಗಾಢವಾಗಿ ಪ್ರಹೃತನಾದ ಭೀಮ ಸೇನನು ನೋವಿನಿಂದ ವ್ಯಥಿತನಾದನು. ತಾನು ಕುಳಿತಿದ್ದ ಸ್ಥಳದಿಂದ ಪಕ್ಕಕ್ಕೆ ಸರಿದು ಕುಳಿತನು. ನೋವನ್ನು ತಾಳಲಾರದೇ ಅತ್ಯಂತವಿಷಣ್ಣನಾಗಿ ಕ್ಷಣಕಾಲ ಕುಳಿತಿದ್ದ ಭೀಮಸೇನನು ವಿಸ್ಮೃತಿಯನ್ನೂ ಹೊಂದಿದನು. ಸ್ವಲ್ಪ ಹೊತ್ತಿ ನಲ್ಲೇ ಸ್ಮೃತಿಯು ಬಂದಿತಾದರೂ ವೇದನೆಯು ಹಾಗೆಯೇ ಇದ್ದುದರಿಂದ ಭೀಮಸೇನನು ವಿಷಣ್ಣನಾಗಿಯೇ ಕುಳಿತಿದ್ದನು. ಅದನ್ನು ಕಂಡ ಮಹಾಧನು ಷ್ಮಂತರಾದ, ಅಭಿಮನ್ಯುವೇ ಮೊದಲಾದ ಪಾಂಡವರ ಕಡೆಯ ಮಹಾರಥರು ಸಹಿಸಲಿಲ್ಲ. ಸ್ಥಿರಚಿತ್ತರಾದ ಆ ಪಾಂಡವಮಹಾರಥರು ತೀಕ್ಷ್ಣವಾದ ತೇಜಸ್ಸಿ ನಿಂದ ಕೂಡಿದ್ದ ಅತಿಭಯಂಕರವಾದ ಶಸ್ತ್ರಗಳ ಮಳೆಯನ್ನೇ ನಿನ್ನ ಮಗನ ತಲೆಯ ಮೇಲೆ ಸುರಿಸಿಬಿಟ್ಟರು. ಸ್ಮೃತಿಯನ್ನು ಪಡೆದು ಸ್ವಲ್ಪ ಚೇತರಿಸಿ ಕೊಂಡನಂತರ ಮಹಾಬಲನಾದ ಭೀಮಸೇನನೂ ಸಹ ದುರ್ಯೋಧನನನ್ನು ಮೂರು ಬಾಣಗಳಿಂದ ಪ್ರಹರಿಸಿ ಪುನಃ ಐದು ಬಾಣಗಳಿಂದ ಅವನನ್ನು ಹೆಚ್ಚು ಗಾಯಗೊಳಿಸಿದನು. ಮಹಾಧನುಷ್ಮಂತನಾದ, ಪಾಂಡುವಿನ ಮಗನಾದ ಭೀಮಸೇನನು ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿದ್ದ ಇಪ್ಪತ್ತೈದು ಬಾಣಗಳಿಂದ ಶಲ್ಯನನ್ನು ಪ್ರಹರಿಸಿದನು. ಭೀಮನು ಬಿಟ್ಟ ಬಾಣಗಳಿಂದಾದ ಗಾಯಗಳ ನೋವನ್ನು ಸಹಿಸಿಕೊಳ್ಳಲಾರದೇ ಶಲ್ಯನು ರಣಾಂಗಣದಿಂದಲೇ ಪಲಾಯನಮಾಡಿದನು. ಮಹಾರಾಜ! ಅನಂತರ ಸೇನಾಪತಿ, ಸುಷೇಣ, ಜಲಸಂಧ, ಸುಲೋಚನ, ಉಗ್ರ, ಭೀಮರಥ, ಭೀಮ, ವೀರಬಾಹು, ಅಲೋಲುಪ, ದುರ್ಮುಖ, ದುಷ್ಪ್ರಧರ್ಷ, ವಿವಿತ್ಸು, ವಿಕಟ ಮತ್ತು ಸಮ–ಈ ಹದಿನಾಲ್ಕು ಮಂದಿ ನಿನ್ನ ಮಕ್ಕಳು ಭೀಮನ ಮೇಲೆ ಆಕ್ರಮಣನಡೆಸಿದರು. ಅವರೆಲ್ಲರೂ ಕೋಪಗೊಂಡಿದ್ದರು. ಆದುದರಿಂದಲೇ

ಅವರ ಕಣ್ಣುಗಳೂ ಸಹ ಕೆಂಪಾಗಿದ್ದುವು. ಅವರೆಲ್ಲರೂ ಒಟ್ಟಾಗಿ ಸೇರಿಕೊಂಡು ಅನೇಕಾನೇಕ ಬಾಣಗಳನ್ನು ಭೀಮಸೇನನ ಮೇಲೆ ಸುರಿಸುತ್ತಾ ಅವನನ್ನು ಬಹಳವಾಗಿ ಬಾಧೆಪಡಿಸಿದರು. ನಿನ್ನ ಹದಿನಾಲ್ಕುಮಂದಿ ಮಕ್ಕಳೂ ಒಟ್ಟಾಗಿ ತನ್ನ ಮೇಲೆ ಆಕ್ರಮಣನಡೆಸುತ್ತಿರುವುದನ್ನು ಕಂಡು ಮಹಾಬಲನಾದ ಭೀಮಸೇನನು ಕ್ರುದ್ಧನಾಗಿ–ಪಶುಗಳ (ಕುರಿಗಳ) ಮಧ್ಯದಲ್ಲಿರುವ ತೋಳದೋಪಾದಿಯಲ್ಲಿ ಕಟವಾಯಿಗಳನ್ನು ಕ್ಷಣ-ಕ್ಷಣಕ್ಕೂ ನೆಕ್ಕುತ್ತಾ ಗರುಡನಂತೆಯೇ ಅತ್ಯಂತವೇಗದಿಂದ ಸೇನಾಪತಿಯನ್ನು ಎದುರಿಸಿ ಕ್ಷುರಪ್ರವೆಂಬ ಹೆಸರಿನ ಬಾಣದಿಂದ ಸೇನಾಪತಿಯ ತಲೆಯನ್ನು ಕತ್ತರಿಸಿಬಿಟ್ಟನು. ಸೇನಾಪತಿಯನ್ನು ಸಂಹಾರಮಾಡಿದ್ದರಿಂದ ಭೀಮಸೇನನಿಗೆ ಪರಮಾನಂದವಾಯಿತು. ಗಹಗಹಿಸಿ ನಕ್ಕನು. ಮಹಾಬಾಹುವಾದ ಭೀಮಸೇನನು ಪುನಃ ತೀಕ್ಷ್ಣವಾದ ಮೂರು ಬಾಣಗಳನ್ನು ಧನುಸ್ಸಿಗೆ ಜೋಡಿಸಿ ಕಿವಿಯವರೆಗೂ ಸೆಳೆದು ಜಲಸಂಧನನ್ನು ಪ್ರಹರಿಸಿ ಯಮಲೋಕಕ್ಕೆ ಕಳುಹಿಸಿದನು. ಮರುಕ್ಷಣದಲ್ಲಿಯೇ ಸುಷೇಣನ ಮೇಲೆ ಬಾಣಪ್ರಯೋಗಮಾಡಿ ಅವನನ್ನು ಮೃತ್ಯುವಶನನ್ನಾಗಿ ಮಾಡಿದನು. ಅನಂತರ ಧೃತರಾಷ್ಟ್ರನ ಮಕ್ಕಳಿಗೆ ಮೃತ್ಯುರೂಪನಾಗಿದ್ದ ಭೀಮಸೇನನ ದೃಷ್ಟಿಯು ಉಗ್ರನ ಕಡೆಗೆ ತಿರುಗಿತು. ಶಿರಸ್ತ್ರಾಣ (ಕಿರೀಟ) ಸಹಿತವಾಗಿದ್ದ, ಚಂದ್ರನಂತೆ ಗುಂಡಾಗಿಯೂ ಸುಮನೋಹರವಾಗಿಯೂ ಇದ್ದ ಮತ್ತು ಕರ್ಣಕುಂಡಲಗಳಿಂದ ವಿಭೂಷಿತವಾಗಿದ್ದ ಉಗ್ರನ ತಲೆಯನ್ನು ಭಲ್ಲವೆಂಬ ಬಾಣದಿಂದ ಭೀಮಸೇನನು ಎವೆಯಿಕ್ಕುವುದರೊಳಗಾಗಿ ಕತ್ತರಿಸಿ ಭೂಮಿಯ ಮೇಲೆ ಕೆಡವಿದನು. ವೀರನಾದ ಪಾಂಡವನು ಎಪ್ಪತ್ತು ಬಾಣಗಳಿಂದ ವೀರಬಾಹುವಿನ ರಥದ ಕುದುರೆಗಳನ್ನೂ ಅವನ ಸಾರಥಿಯನ್ನೂ ಸಂಹರಿಸಿ ರಥದ ಪತಾಕೆಯನ್ನೂ ಕತ್ತರಿಸಿ ಕಡೆಯದಾಗಿ ವೀರಬಾಹುವನ್ನೂ ಸಂಹರಿಸಿ ಅವನನ್ನು ಪರಲೋಕಕ್ಕೆ ಕಳುಹಿಸಿದನು. ತಮ್ಮ ಸೋದರನಾದ ವೀರಬಾಹುವು ಹತನಾದುದನ್ನು ಕಂಡು ಭೀಮ ಮತ್ತು ಭೀಮರಥರಿಬ್ಬರೂ ಭೀಮನ ಮೇಲೆ ದಾಳಿನಡೆಸಿದರು. ಭೀಮಸೇನನು ನಗುನಗುತ್ತಲೇ ಯುದ್ಧದುರ್ಮದರಾದ ಆ ಇಬ್ಬರು ರಾಜಕುಮಾರರನ್ನೂ ಯಮಲೋಕಕ್ಕೆ ಕಳುಹಿಸಿಕೊಟ್ಟನು. ಅನಂತರ ಭೀಮಸೇನನ ದೃಷ್ಟಿಯು ಸುಲೋಚನನ ಕಡೆಗೆ ತಿರುಗಿತು. ಆ ಮಹಾ

ಯುದ್ಧದಲ್ಲಿ ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಭೀಮಸೇನನು ಕ್ಷುರಪ್ರವೆಂಬ ಬಾಣದಿಂದ ಸುಲೋಚನನನ್ನು ಸಂಹರಿಸಿ ಯಮಾಲಯಕ್ಕೆ ಕಳುಹಿಸಿ ಕೊಟ್ಟನು.

ಭೀಮನನ್ನು ಆಕ್ರಮಿಸಲು ಬಂದ ಹದಿನಾಲ್ಕು ಮಕ್ಕಳಲ್ಲಿ ನಿನ್ನ ಎಂಟು ಮಂದಿ ಮಕ್ಕಳು ಭೀಮನಿಂದ ಹತರಾಗಲಾಗಿ ಉಳಿದ ನಿನ್ನ ಮಕ್ಕಳು ಭೀಮಸೇನನ ಪರಾಕ್ರಮವನ್ನು ಕಂಡು ಭಯಗೊಂಡವರಾಗಿ ಮಹಾತ್ಮನಾದ ಭೀಮನ ಬಾಣಗಳಿಂದ ಪ್ರಹೃತರಾಗಿ ಕ್ಷಣಮಾತ್ರವಾದರೂ ಭೀಮನೆದುರಿನಲ್ಲಿ ನಿಲ್ಲದೇ ದಿಕ್ಕಾಪಾಲಾಗಿ ಓಡಿಹೋದರು.

ಅನಂತರ ಶಾಂತನುವಿನ ಮಗನಾದ ಭೀಷ್ಮನು ಎಲ್ಲ ಮಹಾರಥರನ್ನೂ ಕುರಿತು ಹೇಳಿದನು : "ಅತಿರಥ-ಮಹಾರಥರೇ! ಭಯಂಕರವಾದ ಧನು ಸ್ಸನ್ನು ಧರಿಸಿರುವ ಈ ಭೀಮಸೇನನು ಯುದ್ಧಸಮಯದಲ್ಲಿ ಪರಮಕ್ರುದ್ಧ ನಾಗಿ ತನ್ನ ಎದುರಾಗಿ ಸಿಕ್ಕುವ ಶ್ರೇಷ್ಠರಾದ, ಜ್ಯೇಷ್ಠರಾದ, ಶೂರರಾದ, ಮಹಾರಥರಾದ ಧೃತರಾಷ್ಟ್ರನ ಮಕ್ಕಳನ್ನು ಸಂಹಾರಮಾಡಿಬಿಡುತ್ತಾನೆ. ಆದುದರಿಂದ ನೀವೆಲ್ಲರೂ ಒಟ್ಟಾಗಿ ಸೇರಿ ಅವನನ್ನು ಈ ಕ್ಷಣದಲ್ಲಿಯೇ ಬಂಧಿಸಿರಿ. ಸಾವಕಾಶಮಾಡಬೇಡಿರಿ."

ಭೀಷ್ಮನು ಹೀಗೆಂದು ಪ್ರೋತ್ಸಾಹಿಸುತ್ತಲೇ ದುರ್ಯೋಧನನ ಎಲ್ಲ ಸೈನಿಕರೂ ಸಂಕ್ರುದ್ಧರಾಗಿ ಮಹಾಬಲನಾದ ಭೀಮಸೇನನಿದ್ದೆಡೆಗೆ ಧಾವಿಸಿದರು. ಮದೋದಕವನ್ನು ಸುರಿಸುತ್ತಿದ್ದ ಆನೆಯ ಮೇಲೆ ಕುಳಿತು ಭಗದತ್ತನೂ ಸಹ ಭೀಮನಿದ್ದೆಡೆಗೆ ಒಡನೆಯೇ ಧಾವಿಸಿದನು. ಮಹಾಮೇಘವು ಸೂರ್ಯನನ್ನು ಮುಚ್ಚಿಬಿಡುವಂತೆ–ಭಗದತ್ತನು ಭೀಮನನ್ನು ಆಕ್ರಮಿಸುತ್ತಿದ್ದಾಗಲೇ ತನ್ನ ಬಾಣಗಳಿಂದ ಭೀಮನು ಕಾಣದಂತೆ ಮಾಡಿಬಿಟ್ಟನು.

ಆದರೆ ಸ್ವಬಾಹುಬಲವನ್ನು ಆಶ್ರಯಿಸಿದ್ದ, ಅಭಿಮನ್ಯುಪ್ರಮುಖರಾದ ಮಹಾರಥರು ಭೀಮನನ್ನು ಭಗದತ್ತನು ಬಾಣಗಳಿಂದ ಮುಚ್ಚಿದುದನ್ನು ನೋಡಿ ಸಹನೆಯನ್ನು ಕಳೆದುಕೊಂಡರು. ಪಾಂಡವರ ಕಡೆಯ ಮಹಾರಥರೆಲ್ಲರೂ ಸೇರಿ ಬಾಣಗಳ ಮಳೆಗರೆಯುತ್ತಾ ಭಗದತ್ತನನ್ನು ನಾಲ್ಕು ದಿಕ್ಕುಗಳಿಂದಲೂ ಆಕ್ರಮಣಮಾಡಿದರು. ಅವನು ಕುಳಿತಿದ್ದ ಆನೆಯನ್ನೂ ಬಾಣ

ಗಳ ವೃಷ್ಟಿಯಿಂದ ಶರೀರಾದ್ಯಂತವಾಗಿ ಗಾಯಗೊಳಿಸಿದರು. ನಾನಾವಿಧವಾದ ಚಿಹ್ನೆಗಳನ್ನು ಹೊಂದಿದ್ದ ಅತ್ಯಂತ ತೇಜಸ್ವಿಗಳಾಗಿದ್ದ ಸಮಸ್ತರಾದ ಆ ಪಾಂಡವಮಹಾರಥದಿಂದ ಸುರಿಸಲ್ಪಡುತ್ತಿದ್ದ ಶಸ್ತ್ರಾಸ್ತ್ರಗಳ ಮಳೆಯಿಂದ ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತನ ಆನೆಯು ಶರೀರಾದ್ಯಂತವಾಗಿ ರಕ್ತವನ್ನು ಸುರಿಸುತ್ತಿದ್ದು ಆ ರಣಾಂಗಣದಲ್ಲಿ ಒಂದು ಪ್ರೇಕ್ಷಣೀಯವಸ್ತುವೇ ಆಯಿತು. ದೊಡ್ಡದೊಂದು ಕಾರ್ಮುಗಿಲು ಬಾಲಸೂರ್ಯನ ನಸುಗೆಂಪಾದ ಕಿರಣಗಳಿಂದ ವ್ಯಾಪ್ತವಾಗಿ ಪ್ರಕಾಶಿಸುವಂತೆ–ಶಸ್ತ್ರಾಘಾತದಿಂದ ಹೊರಬಂದ ರಕ್ತದಿಂದ ಕೂಡಿದ್ದ ಭಗದತ್ತನ ಆನೆಯು ಶೋಭಿಸುತ್ತಿದ್ದಿತು. ಮದೋದಕ ವನ್ನು ಸುರಿಸುತ್ತಿದ್ದ, ಬಾಣಗಳ ಪ್ರಹಾರದಿಂದ ಬಹಳ ರುಷ್ಟವಾಗಿದ್ದ ಭಗದತ್ತನ ಆನೆಯು ಭಗದತ್ತನು ಪ್ರಚೋದಿಸುತ್ತಲೇ ಕಾಲನಿಂದ ಕಳುಹಿಸಲ್ಪಟ್ಟ ಯಮರಾಜನಂತೆಯೇ ತನ್ನ ಪದಾಭಿಘಾತದಿಂದ ಭೂಮಿಯನ್ನೇ ಕಂಪಿಸುತ್ತಾ ಎರಡು ಪಟ್ಟಿನ ವೇಗದಿಂದ ತನ್ನ ಮೇಲೆ ಬಾಣಗಳ ಮಳೆಗರೆಯುತ್ತಿದ್ದ ಪಾಂಡವಮಹಾರಥರ ಕಡೆಗೆ ದೌಡಾಯಿಸಿತು. ಪಾಂಡವರ ಕಡೆಯ ಮಹಾರಥರೆಲ್ಲರೂ ಆನೆಯ ಆ ಭಯಂಕರರೂಪವನ್ನು ನೋಡಿ ಅದರ ದಾಳಿಯನ್ನು ಸಹಿಸಿಕೊಳ್ಳಲು ಅಥವಾ ತಡೆಯಲು ಸಾಧ್ಯವಾಗದೆಂದು ಭಾವಿಸಿ ಹತೋತ್ಸಾಹರಾದರು.

ಅನಂತರ ಕ್ರುದ್ಧನಾದ ಭಗದತ್ತನು ಬಗ್ಗಿದ ಗಿಣ್ಣೆದ್ದ ಬಾಣವೊಂದನ್ನು ಭೀಮಸೇನನ ವಕ್ಷಸ್ಥಳಕ್ಕೆ ಗುರಿಯಿಟ್ಟು ಹೊಡೆದನು. ಮಹಾರಥನಾದ, ಮಹಾಧನುಷ್ಮಂತನಾದ ಭೀಮಸೇನನು ಭಗದತ್ತನು ಬಿಟ್ಟ ಬಾಣದಿಂದ ಬಹುವಾಗಿ ಗಾಯಗೊಂಡು ಮೂರ್ಛಿತನಾಗಿ ಕೆಳಕ್ಕೆ ಬೀಳುವುದರಲ್ಲಿದ್ದಾಗ ಧ್ವಜದ ದಂಡವನ್ನೇ ಹಿಡಿದು ಕುಳಿತನು. ತನ್ನ ಆನೆಯ ಆಕ್ರಮಣದಿಂದ ಪಾಂಡವಮಹಾರಥರೆಲ್ಲರೂ ಭಯಪಟ್ಟುದನ್ನೂ ಮತ್ತು ತನ್ನ ಬಾಣದ ಪ್ರಹಾರದಿಂದ ಭೀಮಸೇನನು ಮೂರ್ಛಿತನಾದುದನ್ನೂ ಕಂಡು ಪ್ರತಾಪ ಶಾಲಿಯಾದ ಭಗದತ್ತನು ಗಟ್ಟಿಯಾಗಿ ಸಿಂಹನಾದಮಾಡಿದನು.

ಅನಂತರ ಭೀಮನ ಮಗನಾದ ಘಟೋತ್ಕಚನು ತನ್ನ ತಂದೆಯು ಮೂರ್ಛಿತನಾದುದನ್ನು ಕಂಡು ಅತ್ಯಂತ ಕೋಪಗೊಂಡವನಾಗಿ ಭಗದತ್ತನನ್ನು ಶಿಕ್ಷಿಸುವ ಆಶಯದಿಂದ ಅಲ್ಲಿಯೇ ಅದೃಶ್ಯನಾದನು.

ಅದೃಶ್ಯನಾದ ಘಟೋತ್ಕಚನು ಭೀರುಗಳಾದವರ ಭಯವನ್ನು ಮತ್ತಷ್ಟು ಹೆಚ್ಚಿಸುವ ದಾರುಣವಾದ ಮಾಯೆಯನ್ನು ಸೃಷ್ಟಿಸಿದನು. ನಿಮಿಷಾರ್ಧದಲ್ಲಿ ಘೋರವಾದ ರೂಪವನ್ನು ತಾಳಿ ಎಲ್ಲರಿಗೂ ಕಾಣಿಸಿಕೊಂಡನು. ಮಾಯೆಯಿಂದ ತಾನೇ ನಿರ್ಮಿಸಿದ, ಕೈಲಾಸಪರ್ವತಕ್ಕೆ ಸಮಾನವಾದ ಐರಾವತದ ಮೇಲೆ ಕುಳಿತುಕೊಂಡು ಮಾಯೆಯಿಂದ ವಜ್ರಪಾಣಿಯಾದ ಇಂದ್ರನಂತೆಯೇ ವೇಷವನ್ನು ಧರಿಸಿಕೊಂಡು ರಣಾಂಗಣಕ್ಕೆ ಪ್ರವೇಶಿಸಿದನು. ಮಾಯೆಯಿಂದ ನಿರ್ಮಿತವಾದ ಐರಾವತವು ಬಂದಂತೆಯೇ ಆ ಮಾಯಾಮಯವಾದ ಐರಾವತವನ್ನು ಅನುಸರಿಸಿ ಅಂಜನ, ವಾಮನ ಮತ್ತು ಒಳ್ಳೆಯ ಕಾಂತಿಯಿಂದ ಕೂಡಿದ್ದ ಮಹಾಪದ್ಮ–ಎಂಬ ಇತರ ದಿಗ್ಗಜಗಳೂ ರಣಾಂಗಣಕ್ಕೆ ಬಂದುವು. ಆ ಮೂರು ಆನೆಗಳ ಮೇಲೂ ಮೂವರು ರಾಕ್ಷಸರು ಕುಳಿತಿದ್ದರು. ಆ ನಾಲ್ಕು ದಿಗ್ಗಜಗಳೂ ದೊಡ್ಡ-ದೊಡ್ಡ ಶರೀರ ವುಳ್ಳವುಗಳಾಗಿದ್ದುವು. ಮೂರು ಕಡೆಗಳಿಂದ ಮದೋದಕವನ್ನು ಸುರಿಸು ತ್ತಿದ್ದುವು. ತೇಜಸ್ಸಿನಿಂದಲೂ, ವೀರ್ಯದಿಂದಲೂ, ಬಲದಿಂದಲೂ ಕೂಡಿ ದ್ದುವು. ಬಹಳ ಬಲಿಷ್ಠವಾಗಿಯೂ, ಮಹಾಪರಾಕ್ರಮಿಗಳಾಗಿಯೂ ಇದ್ದುವು. ಗಜಾರೋಹಿಯಾಗಿದ್ದ ಭಗದತ್ತನನ್ನು ಆನೆಯೊಡನೆಯೇ ಸಂಹರಿಸಬೇಕೆಂಬ ಆಶಯದಿಂದ ಪರಂತಪನಾದ ಘಟೋತ್ಕಚನು ತನ್ನ ಆನೆಯನ್ನು ಭಗದತ್ತನ ಮೇಲೆ ನುಗ್ಗುವಂತೆ ಪ್ರಚೋದಿಸಿದನು. ಮಹಾಬಲರಾದ ಇತರ ಮೂವರು ರಾಕ್ಷಸರಿಂದಲೂ ಪ್ರಚೋದಿಸಲ್ಪಟ್ಟ ನಾಲ್ಕು-ನಾಲ್ಕು ಕೋರೆದಾಡೆಗಳನ್ನು ಹೊಂದಿದ್ದ ದಿಗ್ಗಜಗಳು ಕೋಪಗೊಂಡುವುಗಳಾಗಿ ನಾಲ್ಕುದಿಕ್ಕುಗಳಿಂದಲೂ ಭಗದತ್ತನ ಆನೆಯನ್ನು ಆಕ್ರಮಿಸಿದುವು. ನಾಲ್ಕು ಆನೆಗಳೂ ನಾಲ್ಕು ಕಡೆಗಳಲ್ಲಿ ನಿಂತು ಭಗದತ್ತನ ಆನೆಯನ್ನು ಕೋರೆದಾಡೆಗಳಿಂದ ಬಹುವಾಗಿ ಪೀಡಿಸತೊಡಗಿದುವು. ಆನೆಗಳೇ ಅಲ್ಲದೇ ಅವುಗಳ ಮೇಲೆ ಕುಳಿತಿದ್ದ ರಾಕ್ಷಸರೂ ಸಹ ಬಾಣಗಳಿಂದ ಭಗದತ್ತನ ಗಜವನ್ನು ಬಹುವಾಗಿ ಪೀಡಿಸುತ್ತಿದ್ದರು. ದಿಗ್ಗಜಗಳ ಪೀಡನೆಯಿಂದಲೂ ಬಾಣಗಳ ಪ್ರಹಾರದಿಂದಲೂ ಬಹುವಾಗಿ ವೇದನೆಗೊಂಡ ಭಗದತ್ತನ ಆನೆಯು ಇಂದ್ರನ ವಜ್ರಾಯುಧದ ಶಬ್ದಕ್ಕೆ ಸಮಾನವಾಗಿ ಗಟ್ಟಿಯಾಗಿ ಚೀತ್ಕಾರಮಾಡಿತು.

ಭಗದತ್ತನ ಆನೆಯ ಭಯಂಕರವಾದ ಚೀತ್ಕಾರಶಬ್ದವನ್ನು ಕೇಳಿ ಭೀಷ್ಮನು ದ್ರೋಣರನ್ನೂ ಮತ್ತು ದುರ್ಯೋಧನರಾಜನನ್ನೂ ಕುರಿತು ಹೇಳಿದನು :

"ಮಹಾಧನುಷ್ಮಂತನಾದ ಈ ನಮ್ಮ ಭಗದತ್ತನು ದುರಾತ್ಮನಾದ, ಹಿಡಿಂಬೆಯ ಮಗನಾದ ಘಟೋತ್ಕಚನೊಡನೆ ಯುದ್ಧಮಾಡುತ್ತಿದ್ದಾನೆ. ಅವನೀಗ ಬಹಳ ಸಂಕಟದಲ್ಲೂ ಇದ್ದಾನೆ. (ಘಟೋತ್ಕಚನಿಂದ ತಪ್ಪಿಸಿ ಕೊಳ್ಳಲು ಸಾಧ್ಯವಾಗದವನಾಗಿದ್ದಾನೆ.) ರಾಕ್ಷಸನಾದರೋ ಮಹಾಕಾಯನಾಗಿ ದ್ದಾನೆ. ಭಗದತ್ತರಾಜನೂ ಮಹಾಕೋಪಿಷ್ಠನಾಗಿದ್ದಾನೆ. ಕಾಲಮೃತ್ಯುವಿಗೆ ಸಮಾನರಾಗಿರುವ ಈ ಇಬ್ಬರೂ ಈಗ ಪರಸ್ಪರಯುದ್ಧದಲ್ಲಿ ತೊಡಗಿದ್ದಾರೆ. ಇವರಿಬ್ಬರ ಯುದ್ಧದ ಫಲಿತಾಂಶಸೂಚಕವಾಗಿ ನಮಗೆ ಎರಡು ವಿಧವಾದ ಶಬ್ದಗಳು ಕೇಳಿಬರುತ್ತಿವೆ. ಹೃಷ್ಟರಾದ ಪಾಂಡವರ ಜಯಕಾರಶಬ್ದವು ಕೇಳಿ ಬರುತ್ತಿದೆ. ಈ ರಾಕ್ಷಸರ ಆಕ್ರಮಣದಿಂದ ಭಯಗೊಂಡಿರುವ ಭಗದತ್ತನ ಆನೆಯು ಅಳುತ್ತಿರುವ ಶಬ್ದವೂ ಗಟ್ಟಿಯಾಗಿಯೇ ಕೇಳಿಸುತ್ತಿದೆ. ನಿಮಗೆಲ್ಲರಿಗೂ ಮಂಗಳವಾಗಲಿ. ಭಗದತ್ತನನ್ನು ರಕ್ಷಿಸುವ ಸಲುವಾಗಿ ಈಗ ನಾವೆಲ್ಲರೂ ಅಲ್ಲಿಗೆ ಹೋಗೋಣ. ಅವನನ್ನು ನಾವೇನಾದರೂ ಈ ಸಮಯದಲ್ಲಿ ರಕ್ಷಿಸದಿದ್ದರೆ ಅವನು ಬಹಳ ಬೇಗ ಪ್ರಾಣಗಳನ್ನು ತೊರೆಯುತ್ತಾನೆ. ಮಹಾವೀರ್ಯರೇ! ತ್ವರೆಮಾಡಿರಿ. ಸಾವಕಾಶಮಾಡುವುದರಿಂದ ಲಾಭ ವೇನೂ ಇಲ್ಲ. ಆದುದರಿಂದ ನಾವೆಲ್ಲರೂ ಶೀಘ್ರಾತಿಶೀಘ್ರವಾಗಿ ಅಲ್ಲಿಗೆ ಹೋಗೋಣ. ಏಕೆಂದರೆ ; ಈಗ ಅಲ್ಲಿ ಅತ್ಯಂತ ದೊಡ್ಡದಾದ, ಭಯಂಕರ ವಾದ ಮತ್ತು ರೋಮಾಂಚಕರವಾದ ಕಾಳಗವು ನಡೆಯುತ್ತಿದೆ. ಹಿಡಿದ ಹಠದಿಂದ ಚ್ಯುತನಾಗದವನೇ! ಅಚ್ಯುತ! ದುರ್ಯೋಧನ! ಭಗದತ್ತ ರಾಜನು ನಮ್ಮ ಭಕ್ತನು, ಕುಲೀನನು, ಮಹಾಶೂರನು ಮತ್ತು ಸೇನಾಪತಿಯೂ ಆಗಿದ್ದಾನೆ. ಆದುದರಿಂದ ಈ ಸಮಯದಲ್ಲಿ ಅವನ ರಕ್ಷಣೆಯನ್ನು ನಾವು ಅವಶ್ಯವಾಗಿ ಮಾಡಲೇಬೇಕಾಗಿದೆ."

ದಂಡನಾಯಕನಾದ ಭೀಷ್ಮನು ಹೇಳಿದ ಮಾತನ್ನು ಕೇಳಿ ದುರ್ಯೋಧನನ ಪಕ್ಷದ ಎಲ್ಲ ಮಹಾರಥರೂ ಭಗದತ್ತನನ್ನು ರಕ್ಷಿಸುವ ಆಶಯದಿಂದ ಭೀಷ್ಮ-ದ್ರೋಣರನ್ನು ಮುಂದೆಮಾಡಿಕೊಂಡು ಶೀಘ್ರಾತಿಶೀಘ್ರ

ವಾಗಿ ಭಗದತ್ತನಿದ್ದೆಡೆಗೆ ತೆರಳಿದರು. ಭಗದತ್ತನ ಸಹಾಯಾರ್ಥವಾಗಿ ಭೀಷ್ಮ-ದ್ರೋಣಪ್ರಮುಖರಾದ ಕೌರವಮಹಾರಥರು ಹೋಗುತ್ತಿರುವುದನ್ನು ಕಂಡು ಯುಧಿಷ್ಠಿರಪ್ರಮುಖರಾದ ಪಾಂಡವರು ಪಾಂಚಾಲರೊಡನೆ ಶತ್ರುಸೈನ್ಯವನ್ನು ಅನುಸರಿಸಿ ಅದರ ಹಿಂದೆಯೇ ಹೋದರು.

ಕೌರವರ ಅಪಾರಸೇನೆಯು ತನ್ನ ಕಡೆಗೇ ಬರುತ್ತಿರುವುದನ್ನು ಕಂಡು ರಾಕ್ಷಸೇಂದ್ರನಾದ ಘಟೋತ್ಕಚನು ಗಟ್ಟಿಯಾಗಿ ಗರ್ಜನೆಯನ್ನು ಮಾಡಿದನು. ಆ ಗರ್ಜನೆಯು ಸಿಡಿಲಿನ ಸ್ಫೋಟದಿಂದ ಉಂಟಾಗುವ ಶಬ್ದಕ್ಕೆ ಸಮಾನ ವಾಗಿದ್ದಿತು. ಮಹಾಬಲನಾದ ಘಟೋತ್ಕಚನ ಆ ಗರ್ಜನೆಯನ್ನು ಕೇಳಿ, ಭಗದತ್ತನ ಸುತ್ತಲೂ ನಿಂತು ಅವನ ಆನೆಯ ಮೇಲೆ ದಾಳಿನಡೆಸುತ್ತಿರುವ ದಿಗ್ಗಜಗಳನ್ನೂ ನೋಡಿ ಶಾಂತನುವಿನ ಮಗನಾದ ಭೀಷ್ಮನು ಪುನಃ ದ್ರೋಣ ರೊಡನೆ ಹೇಳಿದನು :

"ಆಚಾರ್ಯರೇ! ಈ ಸಮಯದಲ್ಲಿ ದುರಾತ್ಮನಾದ ಘಟೋತ್ಕಚ ನೊಡನೆ ಯುದ್ಧಮಾಡುವುದು ನನಗೆ ಅಷ್ಟಾಗಿ ರುಚಿಸುತ್ತಿಲ್ಲ. ಈಗ ಅವನು ಬಲ-ವೀರ್ಯಗಳಿಂದ ಸಂಪನ್ನನಾಗಿದ್ದಾನೆ ಮತ್ತು ಸಹಾಯಕರನ್ನೂ ಹೊಂದಿದ್ದಾನೆ. ನನಗೆ ತಿಳಿದಿರುವಂತೆ ಯುದ್ಧದಲ್ಲಿ ಘಟೋತ್ಕಚನನ್ನು ಜಯಿ ಸಲು ಸಾಕ್ಷಾತ್ ಶಚೀಪತಿಯಿಂದಲೂ ಕೂಡ ಸಾಧ್ಯವಾಗುವುದಿಲ್ಲ. ಇವನು ಪ್ರಹಾರಕುಶಲನೂ, ಲಕ್ಷ್ಯಭೇದನದಲ್ಲಿ ಸಿದ್ಧಹಸ್ತನೂ ಆಗಿರುತ್ತಾನೆ. ಈಗಿನ ನಮ್ಮ ಸ್ಥಿತಿಯೂ ಬಹಳ ಶೋಚನೀಯವಾಗಿದೆ. ನಮ್ಮ ವಾಹನಗಳೆಲ್ಲವೂ (ಆನೆ-ಕುದುರೆಗಳು) ಬಹುವಾಗಿ ಬಳಲಿವೆ. ಪಾಂಡವರಿಂದಲೂ ಪಾಂಚಾಲ ರಿಂದಲೂ ನಾವು ದಿನವಿಡೀ ಕ್ಷತ-ವಿಕ್ಷತರಾಗಿದ್ದೇವೆ. (ಅನೇಕ ಪ್ರಕಾರವಾಗಿ ಗಾಯಗೊಂಡಿದ್ದೇವೆ.) ಆದುದರಿಂದ ವಿಜಯೋತ್ಸಾಹದಿಂದ ಪ್ರಕಾಶಿಸು ತ್ತಿರುವ ಪಾಂಡವರೊಡನೆ ಈ ಸಮಯದಲ್ಲಿ ಯುದ್ಧಮಾಡುವುದು ನನಗೆ ಸಾಧುವಾಗಿ ಕಾಣುತ್ತಿಲ್ಲ. ಈ ಕಾರಣದಿಂದ ಈಗ ನಾವು ಈ ದಿವಸದ ಯುದ್ಧಕ್ಕೆ ವಿರಾಮವನ್ನು ಘೋಷಿಸಿಬಿಡೋಣ. ನಾಳೆ ನಾವೆಲ್ಲರೂ ಶತ್ರುಗಳೊಡನೆ ಅಮಿತೋತ್ಸಾಹದಿಂದ ಯುದ್ಧಮಾಡೋಣ."

ಕೌರವರಿಗೂ ಸಹ ಅಂತಹ ಸಲಹೆಯೇ ಬೇಕಾಗಿದ್ದಿತು. ಏಕೆಂದರೆ ;

ಅವರು ಆ ಸಮಯದಲ್ಲಿ ಘಟೋತ್ಕಚನ ಭಯದಿಂದ ಅತಿಯಾಗಿ ಪೀಡಿತರಾಗಿದ್ದರು. ಉಪಾಯದಿಂದ ಅವರು ಘಟೋತ್ಕಚನೊಡನೆ ಯುದ್ಧಮಾಡುವುದನ್ನು ತಪ್ಪಿಸಿಕೊಳ್ಳಬೇಕಾಗಿದ್ದಿತು. ಆದುದರಿಂದವರು ಭೀಷ್ಮನ ಮಾತನ್ನು ಕೇಳಿದೊಡನೆಯೇ ಅಂದಿನ ಯುದ್ಧಕ್ಕೆ ವಿರಾಮವನ್ನು ಘೋಷಿಸಿಬಿಟ್ಟರು.

ಕೌರವರು ಯುದ್ಧವಿರಾಮವನ್ನು ಘೋಷಿಸಿ ಹಿಂದಿರುಗಲಾಗಿ ವಿಜಯದಿಂದ ಉಬ್ಬಿದ ಪಾಂಡವರು ಅನೇಕಬಾರಿ ಸಿಂಹನಾದಗಳನ್ನು ಮಾಡಿದರು. ಶಂಖಗಳನ್ನೂದಿದರು. ಘಟೋತ್ಕಚನು ಪ್ರಮುಖಪಾತ್ರವನ್ನು ವಹಿಸಿದ್ದ ಕೌರವ-ಪಾಂಡವರ ನಾಲ್ಕನೆಯ ದಿವಸದ ಯುದ್ಧವು ಈ ರೀತಿಯಲ್ಲಿ ಮುಗಿಯಿತು. ಮಹಾರಾಜ! ರಾತ್ರಿಯು ಪ್ರಾರಂಭವಾಗಲಿದ್ದ ಆ ಸಮಯದಲ್ಲಿ ಪಾಂಡವರಿಂದ ಪರಾಜಿತರಾದ ಕೌರವರು ನಾಚಿಕೆಗೊಂಡವರಾಗಿ ತಮ್ಮ ಶಿಬಿರಗಳಿಗೆ ತೆರಳಿದರು.

ಮಹಾರಥರಾದ ಪಾಂಡುಪುತ್ರರ ಶರೀರಗಳೂ ಬಾಣಗಳ ಸತತ ಪ್ರಹಾರದಿಂದಾಗಿ ಕ್ಷತ-ವಿಕ್ಷತವಾಗಿದ್ದುವು. ಆದರೂ ಸಹ ಅಂದಿನ ಯುದ್ಧದಲ್ಲಿ ವಿಜಯಿಗಳಾದ ಕಾರಣ ಶರೀರದ ನೋವನ್ನು ಮರೆತು ಪ್ರಸನ್ನಚಿತ್ತರಾಗಿ ತಮ್ಮ ಶಿಬಿರಗಳನ್ನು ಸೇರಿಕೊಂಡರು.

ಮಹಾರಾಜ! ಪಾಂಡವಯೋಧರು ಭೀಮ-ಘಟೋತ್ಕಚರನ್ನು ಮುಂದೆಮಾಡಿಕೊಂಡು ಪರಸ್ಪರಪ್ರಶಂಸೆಮಾಡುತ್ತಾ ಅತ್ಯಂತಸಂತೋಷದಿಂದ ಕೂಡಿದವರಾಗಿ ನಾನಾಪ್ರಕಾರವಾಗಿ ಜಯಕಾರಗಳನ್ನು ಹೇಳುತ್ತಾ ಸಿಂಹನಾದ ಮಾಡಿದರು. ಆ ಸಿಂಹನಾದಗಳ ಜೊತೆಗೆ ಮಂಗಳವಾದ್ಯಗಳ ಧ್ವನಿಯೂ ಮತ್ತು ಶಂಖಗಳ ಧ್ವನಿಯೂ ಸೇರಿಕೊಂಡಿದ್ದಿತು.

ಪರಂತಪನೇ! ಮಹಾತ್ಮರಾದ ಪಾಂಡವರು ಸಿಂಹನಾದಮಾಡುತ್ತಾ ಮತ್ತು ಆ ನಿನಾದದಿಂದಲೇ ಭೂಮಿಯನ್ನು ನಡುಗಿಸುತ್ತಾ, ಆ ಕ್ರಿಯೆಯಿಂದ ನಿನ್ನ ಮಗನಾದ ದುರ್ಯೋಧನನ ಮರ್ಮಸ್ಥಳಗಳಲ್ಲಿ ಇರಿತವುಂಟಾಗುವಂತೆ ಮಾಡುತ್ತಾ, ರಾತ್ರಿಯಾಗುತ್ತಿದ್ದ ಆ ಸಮಯದಲ್ಲಿ ತಮ್ಮ ಶಿಬಿರಗಳಿಗೆ ತೆರಳಿದರು. ದುರ್ಯೋಧನನಾದರೋ ಅಂದು ತನ್ನ ಅನುಜರ ವಧೆಯಿಂದಾಗಿ ಬಹಳ ಖಿನ್ನನಾಗಿದ್ದನು. ಶೋಕದಿಂದ ಉದ್ಭೂತವಾದ ಕಣ್ಣೀರಿನಿಂದ ಕೂಡಿದ್ದ ದುರ್ಯೋಧನನು ಮುಹೂರ್ತಕಾಲ ಚಿಂತಾಮಗ್ನನಾಗಿಯೇ

ಕುಳಿತಿದ್ದನು. ಹಾಗೆ ಅವನಿಗೆ ಹೆಚ್ಚುಹೊತ್ತು ಕುಳಿತಿರಲೂ ಆಗಲಿಲ್ಲ. ಶಿಬಿರದ ವ್ಯವಸ್ಥೆಯನ್ನು ಮಾಡಬೇಕಾಗಿದ್ದಿತು. ಒಡನೆಯೇ ಮೇಲೆದ್ದು ಶಿಬಿರಕ್ಕೆ ಬೇಕಾಗುವ ಸಾಮಾನು-ಸರಂಜಾಮುಗಳ ಬಗೆಗೆ ಯಥಾಸೂಕ್ತವಾಗಿ ವ್ಯವಸ್ಥೆ



ಮಾಡಿದನು. ಅವನಿಗೆ ತನ್ನ ತಮ್ಮಂದಿರ ಮರಣದ ದುಃಖವನ್ನು ಮರೆಯಲು ಸಾಧ್ಯವಾಗಲೇ ಇಲ್ಲ. ಭ್ರಾತೃವ್ಯಸನದಿಂದ ಬಹುದುಃಖಿತನಾಗಿದ್ದ ಮತ್ತು ಶೋಕಸಂತಪ್ತನಾಗಿದ್ದ ರಾಜನು ಆ ಚಿಂತೆಯಲ್ಲಿಯೇ ಮುಳುಗಿಹೋದನು."

ಅರವತ್ನಾಲ್ಕನೆಯ ಅಧ್ಯಾಯವು ಮುಗಿಯಿತು.

# ನಾಲ್ಕನೆಯ ದಿವಸದ ಯುದ್ಧದ ವಿಶ್ಲೇಷಣೆ

ನಾಲ್ಕನೆಯ ದಿವಸದ ಯುದ್ಧದಲ್ಲಿ ಕೌರವರು ವ್ಯಾಲವೆಂಬ ಹೆಸರಿನ ವ್ಯೂಹವನ್ನು ರಚಿಸಿದ್ದರು. ಅದಕ್ಕೆ ಪ್ರತಿಯಾಗಿ ಅರ್ಜುನನು ಹಿಂದಿನ ದಿವಸ ಯುಧಿಷ್ಠಿರನು ರಚಿಸಿದ್ದಂತೆ ಮಹಾವ್ಯೂಹವನ್ನು ರಚಿಸಿದನೆಂದು ಇರುವುದೇ ಹೊರತು ಆ ಪ್ರತಿವ್ಯೂಹದ ಹೆಸರು ಉಕ್ತವಾಗಿಲ್ಲ. ಪ್ರಾರಂಭದಲ್ಲಿ ಭೀಷ್ಮ ನಿಗೂ–ಅರ್ಜುನನಿಗೂ ದ್ವಂದ್ವಯುದ್ಧವು ನಡೆಯುತ್ತದೆ. ಇತರ ಯೋಧರು ತಮಗೆ ಸಮಾನರಾದವರನ್ನು ಆರಿಸಿಕೊಂಡು ಯುದ್ಧಮಾಡುತ್ತಾರೆ. ಒಂದು ಸಮಯದಲ್ಲಿ ಅಭಿಮನ್ಯುವನ್ನು ಕೌರವಪಕ್ಷದ ನಾಲ್ಕಾರು ಮಹಾರಥರು ಮುತ್ತುತ್ತಾರೆ. ಅವನು ಎಲ್ಲರನ್ನೂ ಧೈರ್ಯದಿಂದ ಎದುರಿಸುತ್ತಾನೆ. ಅವ ನೊಬ್ಬನೇ ನಿಂತು ಯಾವ ರೀತಿಯಲ್ಲಿ ಎಲ್ಲರನ್ನೂ ಎದುರಿಸಿದನೆಂಬುದರ ವರ್ಣನೆಯು ೬೧ನೆಯ ಅಧ್ಯಾಯದಲ್ಲಿ ಬರುತ್ತದೆ. ಧೃಷ್ಟದ್ಯುಮ್ನನು ಪೌರ ವನ ಮಗನಾದ ದಮನನೆಂಬುವನನ್ನೂ, ಶಲನ ಮಗನನ್ನೂ ಸಂಹರಿಸುತ್ತಾನೆ. ಆದರೆ ಶಲನ ಮಗನ ಹೆಸರನ್ನು ಮಾತ್ರ ಎಲ್ಲಿಯೂ ಹೇಳಿರುವುದಿಲ್ಲ. ಪುತ್ರನನ್ನು ಕಳೆದುಕೊಂಡ ಶಲನು ಧೃಷ್ಟದ್ಯುಮ್ನನೊಡನೆ ಘೋರಯುದ್ಧದಲ್ಲಿ ತೊಡಗುತ್ತಾನೆ. ಅನಂತರ ಶಲ್ಯನೂ ಸಹ ಸಹಾಯಕ್ಕೆ ಹೋಗುತ್ತಾನೆ. ಶಲ್ಯನಿಗೂ ಧೃಷ್ಟದ್ಯುಮ್ನನಿಗೂ ಯುದ್ಧವು ಪ್ರಾರಂಭವಾಗುತ್ತದೆ. ಅನಂತರ ದುರ್ಯೋಧನಾದಿಗಳು ಶಲ್ಯನ ಸಹಾಯಕ್ಕೆ ಹೋಗುತ್ತಾರೆ. ಅಭಿಮನ್ಯುವು ಧೃಷ್ಟದ್ಯುಮ್ನನ ಸಹಾಯಕ್ಕೆ ಹೋಗುತ್ತಾನೆ. ನಕುಲ-ಸಹದೇವರು ತಮ್ಮ ಸೋದರಮಾವನಾದ ಶಲ್ಯನನ್ನು ಎದುರಿಸಿ ಯುದ್ಧಮಾಡುತ್ತಾರೆ. ಅನಂತರ ಮಗಧದೇಶದ ಗಜಸೈನ್ಯಕ್ಕೂ–ಭೀಮನಿಗೂ ಘೋರವಾದ ಯುದ್ಧವು ಪ್ರಾರಂಭವಾಗುತ್ತದೆ. ಗಜಸೈನ್ಯವು ಸಂಪೂರ್ಣವಾಗಿ ನಾಶವಾದನಂತರ ಭೀಷ್ಮನಿಗೂ–ಭೀಮನಿಗೂ ಮತ್ತು ಸಾತ್ಯಕಿಗೂ–ಭೂರಿಶ್ರವಸನಿಗೂ ಯುದ್ಧವು ಪ್ರಾರಂಭವಾಗುತ್ತದೆ. ೬೩ನೆಯ ಅಧ್ಯಾಯದಲ್ಲಿ ಭೀಮನ ಅತಿ ಮಾನುಷಕೃತ್ಯಗಳು ವರ್ಣಿತವಾಗಿವೆ. ಭೀಷ್ಮನೊಡನೆ ಭೀಮನು ಯುದ್ಧದಲ್ಲಿ ತೊಡಗಿದ್ದಾನೆ. ಅವನ ಸಹಾಯಕ್ಕಾಗಿ ಸಾತ್ಯಕಿಯು ಹೋಗುತ್ತಾನೆ. ಸಾತ್ಯಕಿ ಯನ್ನು ಭೂರಿಶ್ರವಸನು ತಡೆಯುತ್ತಾನೆ. ಅವರಿಬ್ಬರಿಗೂ ಘೋರಯುದ್ಧವು

ಪ್ರಾರಂಭವಾಗುತ್ತದೆ. ಭೂರಿಶ್ರವಸನ ರಕ್ಷಣೆಗಾಗಿ ದುರ್ಯೋಧನಾದಿಗಳೂ ಸಾತ್ಯಕಿಯ ರಕ್ಷಣೆಗಾಗಿ ಪಾಂಡವಯೋಧರೂ ಪರಸ್ಪರವಾಗಿ ಯುದ್ಧದಲ್ಲಿ ತೊಡಗುತ್ತಾರೆ. ಅನಂತರ ಭೀಮನು ದುರ್ಯೋಧನಾದಿ ನೂರು ಮಂದಿಯನ್ನೂ ಸಂಹರಿಸಲು ನಿಶ್ಚಯಿಸಿ ರಥದಲ್ಲಿ ಕುಳಿತು ಯುದ್ಧವನ್ನು ಪ್ರಾರಂಭಿಸುತ್ತಾನೆ. ಹದಿನಾಲ್ಕು ಮಂದಿ ಧೃತರಾಷ್ಟ್ರನ ಮಕ್ಕಳು ಭೀಮನನ್ನು ಎದುರಿಸುತ್ತಾರೆ. ಭೀಮನಿಂದ ಹತರಾದ ಧೃತರಾಷ್ಟ್ರನ ಮಕ್ಕಳಲ್ಲಿ ಮೊದಲನೆಯವನು ಸೇನಾಪತಿ. ನಾಲ್ಕನೆಯ ದಿವಸದ ಯುದ್ಧದಲ್ಲಿ ಎಂಟು ಮಂದಿ ಧೃತರಾಷ್ಟ್ರನ ಮಕ್ಕಳು ಸಾಯುತ್ತಾರೆ. ಸೇನಾಪತಿ, ಜಲಸಂಧ, ಸುಷೇಣ, ಉಗ್ರ, ವೀರಬಾಹು, ಭೀಮ, ಭೀಮರಥ ಮತ್ತು ಸುಲೋಚನ–ಇವರೇ ಆ ಎಂಟು ಮಂದಿಗಳು. ಭೀಮನ ದರ್ಪವನ್ನಡಗಿಸಲು ಭಗದತ್ತನು ತನ್ನ ಆನೆಯ ಸಮೇತನಾಗಿ ಬರುತ್ತಾನೆ. ಆ ಸಮಯದಲ್ಲಿ ತಂದೆಯ ಸಹಾಯಕ್ಕೆ ಘಟೋತ್ಕಚನು ಬಂದು ಭಗದತ್ತನ ಮೇಲೆ ಮಾಯಾಯುದ್ಧವನ್ನು ಪ್ರಾರಂಭಿಸುತ್ತಾನೆ. ಅದನ್ನು ನೋಡಿದ ಭೀಷ್ಮನು ಯುದ್ಧವಿರಾಮಕ್ಕೆ ಆದೇಶವನ್ನು ನೀಡುತ್ತಾನೆ. ಅಂದು ಪಾಂಡವರೇ ವಿಜಯಿಗಳು. ಕೌರವರ ವಿನಾಶವು ಅಂದಿನಿಂದಲೇ ಪ್ರಾರಂಭವಾಗುತ್ತದೆ.

* * *

೬೫ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರ-ಸಂಜಯರ ಸಂವಾದಪ್ರಸಂಗದಲ್ಲಿ ದುರ್ಯೋಧನನು ಪಾಂಡವರ ವಿಜಯಕ್ಕೆ ಕಾರಣವನ್ನು ಭೀಷ್ಮನಿಂದ ಕೇಳಿ ತಿಳಿದುಕೊಂಡುದು ಮತ್ತು ಬ್ರಹ್ಮನು ಮಾಡಿದ ಭಗವತ್ಪ್ರಾರ್ಥನೆಯನ್ನೂ ಭೀಷ್ಮನು ದುರ್ಯೋಧನನಿಗೆ ತಿಳಿಸಿದುದು

ನಾಲ್ಕನೆಯ ದಿವಸದ ಯುದ್ಧದಲ್ಲಿ ತನ್ನ ಮಕ್ಕಳಲ್ಲಿ ಎಂಟು ಮಂದಿ ಹತರಾದುದನ್ನು ಕೇಳಿ ವ್ಯಾಕುಲಗೊಂಡ ಧೃತರಾಷ್ಟ್ರನು ಸಂಜಯನನ್ನು ಕುರಿತು ಹೇಳುತ್ತಾನೆ : "ಸಂಜಯ! ದೇವತೆಗಳಿಂದಲೂ ಮಾಡಲಾಗದ ಕರ್ಮವನ್ನು ಪಾಂಡುವಿನ ಮಕ್ಕಳು ಮಾಡಿದರೆಂಬುದನ್ನು ನಿನ್ನಿಂದ ಕೇಳಿದ ನನಗೆ ಮನಸ್ಸಿನಲ್ಲಿ ಭಯವೂ ಉಂಟಾಗಿದೆ ; ವಿಸ್ಮಯವೂ ಉಂಟಾಗಿದೆ. ಎಲ್ಲ

ರಂಗಗಳಲ್ಲಿಯೂ ನನ್ನ ಮಕ್ಕಳಿಗೆ ಪರಾಭವವುಂಟಾಯಿತೆಂಬುದನ್ನು ಕೇಳಿ ಇದು ಹೇಗೆ ಸಾಧ್ಯವಾಯಿತೆಂಬುದರ ಬಗೆಗೆ ಮಹತ್ತರವಾದ ಚಿಂತೆಯುಂಟಾ ಗಿದೆ. ಈ ರೀತಿಯಲ್ಲಿ ನನ್ನ ಮಕ್ಕಳಿಗೆ ಪರಾಭವವುಂಟಾಗುವುದೆಂಬುದನ್ನು ನಾನು ಕನಸಿನಲ್ಲಿಯೂ ನೆನೆದಿರಲಿಲ್ಲ. ವಿದುರನು ಹೇಳಿದ್ದ ಮಾತುಗಳು ಈಗ ನನ್ನ ಸ್ಮರಣೆಗೆ ಬರುತ್ತಿವೆ ಮತ್ತು ನಿಶ್ಚಯವಾಗಿಯೂ ಆ ಮಾತುಗಳೇ ಇಂದು ನನ್ನ ಹೃದಯವನ್ನು ದಹಿಸುತ್ತಿವೆ. ದೈವಯೋಗದಿಂದಲೇ ಎಲ್ಲವೂ ಆಗುತ್ತಿರುವಂತೆ ಕಾಣುತ್ತಿದೆ.

ಅಸ್ತ್ರ-ಶಸ್ತ್ರಜ್ಞರಾದ ಭೀಷ್ಮಪ್ರಮುಖರಾದ ಯೋಧಶ್ರೇಷ್ಠರನ್ನೂ ಪಾಂಡವರ ಸೈನ್ಯದಲ್ಲಿರುವ ಪ್ರಹಾರಿಗಳು (ಯೋಧರು) ಎದುರಿಸಿ ಯುದ್ಧ ಮಾಡುತ್ತಾರೆ. ಇದು ದೈವಯೋಗವಲ್ಲದೇ ಮತ್ತೇನು? ಮಹಾತ್ಮರಾದ ಮಹಾಬಲರಾದ ಪಾಂಡುಪುತ್ರರು ಅವಧ್ಯರು ಹೇಗಾದರು? ಅಮರರಾಗಿರಲು ಅವರಿಗೆ ವರಪ್ರದಾನವನ್ನು ಮಾಡಿದವರು ಯಾರು? ಅಥವಾ ಯುದ್ಧದಲ್ಲಿ ಅವಧ್ಯರಾಗಿರಲು ಅವರು ಬೇರೆ ಯಾವುದಾದರೂ ವಿಶೇಷ ಜ್ಞಾನವನ್ನು ಪಡೆದುಕೊಂಡಿರುವರೆ? ಹೇಳು, ಸಂಜಯ!

ಆಕಾಶದಲ್ಲಿರುವ ತಾರಾಗಣಗಳು ಕ್ಷಯವಾಗದ ರೀತಿಯಲ್ಲಿ ಯಾವ ಕಾರಣದಿಂದಾಗಿ ಪಾಂಡವರು ಕ್ಷಯವೇ ಇಲ್ಲದವರಾಗಿದ್ದಾರೆ? ಪಾಂಡವರು ನಮ್ಮ ಸೈನ್ಯವನ್ನು ವಿನಾಶಗೊಳಿಸುತ್ತಿರುವರೆಂಬ ವಾರ್ತೆಯನ್ನು ಪುನಃ ಪುನಃ ಕೇಳುತ್ತಿರುವ ನನಗೆ ಅದನ್ನು ಸಹಿಸಿಕೊಳ್ಳಲಾಗುತ್ತಿಲ್ಲ. ನಿಶ್ಚಯವಾಗಿಯೂ ಸಂಜಯ! ದೈವಯೋಗದಿಂದಾಗಿ ನನ್ನ ತಲೆಯ ಮೇಲೆ ಪರಮದಾರುಣವಾದ ದಂಡವು ಬೀಳಲಿದೆ. ಪಾಂಡವರು ಅವಧ್ಯರಾಗಿರುವುದು ಮತ್ತು ನನ್ನ ಮಕ್ಕಳು ವಧ್ಯರಾಗಿರುವುದು—ಇದೇ ನನ್ನ ತಲೆಯ ಮೇಲೆ ದಂಡವು ಬೀಳುವುದೆಂಬುದಕ್ಕೆ ಸೂಚಕವಾಗಿದೆ. ಸಂಜಯ! ಪಾಂಡವರು ಯುದ್ಧದಲ್ಲಿ ಅವಧ್ಯರಾದುದು ಹೇಗೆ? ನನ್ನ ಮಕ್ಕಳು ವಧ್ಯರಾದುದು ಹೇಗೆ?—ಎಂಬುದನ್ನು ಯಥಾರ್ಥವಾಗಿ ಹೇಳು. ಸತ್ಯವಾಗಿ ಹೇಳು. ಇದನ್ನು ನನ್ನಿಂದ ಬಚ್ಚಿಡುವ ಕಾರಣವಿಲ್ಲ. ಸಮುದ್ರದ ಪಾರವನ್ನು ಕೇವಲ ಭುಜಗಳಿಂದಲೇ ದಾಟುವೆನೆಂದು ಸಮುದ್ರದಲ್ಲಿ ಬಿದ್ದಿರುವವನಿಗೆ ಸಮುದ್ರದ ಪಾರವೇ ಸಿಕ್ಕದ

ರೀತಿಯಲ್ಲಿ–ನನ್ನ ದುಃಖಸಾಗರದ ಪಾರವನ್ನು ನಾನು ಯಾವುದೇ ರೀತಿ ಯಿಂದಲೂ ಕಾಣದವನಾಗಿದ್ದೇನೆ. ನನ್ನ ಮಕ್ಕಳಿಗೆ ಸುದಾರುಣವಾದ ವ್ಯಸನವು ಪ್ರಾಪ್ತವಾಗಿದೆಯೆಂಬುದು ನಿಶ್ಚಯ. ಇದನ್ನು ನಾನು ತಿಳಿದುಕೊಂಡಿದ್ದೇನೆ. ನನ್ನ ಎಲ್ಲ ಮಕ್ಕಳನ್ನೂ ಭೀಮನೊಬ್ಬನೇ ಸಂಹಾರಮಾಡುತ್ತಾನೆ. ಇದರಲ್ಲಿ ಸಂಶಯಲೇಶವೂ ಇಲ್ಲ. ಈ ಯುದ್ಧದಲ್ಲಿ ನನ್ನ ಮಕ್ಕಳನ್ನು ರಕ್ಷಿಸತಕ್ಕ ಒಬ್ಬ ವೀರನನ್ನಾದರೂ ನಾನು ಕಾಣುತ್ತಿಲ್ಲ. ನನ್ನ ಮಕ್ಕಳ ವಿನಾಶಕಾಲವು ಪ್ರಾಪ್ತವಾಗಿಬಿಟ್ಟಿದೆಯೆಂಬುದು ನಿಜ, ಸಂಜಯ! ನನ್ನ ಈಗಿನ ಪ್ರಶ್ನೆಗೆ ಇದೇ ವಿಶೇಷಕಾರಣವಾಗಿದೆ. ಪಾಂಡವರು ಅವಧ್ಯರಾಗಲು ಅವರಿಗಿರುವ ವಿಶೇಷವಾದ ಶಕ್ತಿಯೇನು? ನನ್ನ ಮಕ್ಕಳು ಭೀಷ್ಮ-ದ್ರೋಣರೇ ಮೊದಲಾದ ಯೋಧಸತ್ತಮರನ್ನು ತಮ್ಮ ಪಕ್ಷದಲ್ಲಿ ಹೊಂದಿದ್ದರೂ ಪದೇ-ಪದೇ ಪರಾಜಯಹೊಂದಲು ಕಾರಣವೇನು? ಈ ನನ್ನ ಪ್ರಶ್ನೆಗೆ ಯಥಾವತ್ತಾಗಿ ಎಲ್ಲ ವಿಷಯಗಳನ್ನೂ ಹೇಳಲು ನೀನು ಅರ್ಹನಾಗಿರುವೆ. ಸಂಜಯ! ತನ್ನ ಸೈನಿಕರೆಲ್ಲರೂ ಭಯಗೊಂಡು ರಣರಂಗದಿಂದ ವಿಮುಖರಾಗುತ್ತಿರುವುದನ್ನು ಕಂಡು ದುರ್ಯೋಧನನು ಏನು ಮಾಡಿದನು? ಭೀಷ್ಮ, ದ್ರೋಣ, ಕೃಪ, ಸೌಬಲ, ಜಯದ್ರಥ, ಮಹಾಧನುಷ್ಮಂತನಾದ ಅಶ್ವತ್ಥಾಮ, ಮಹಾಬಲನಾದ ವಿಕರ್ಣ–ಇವರುಗಳೇನು ಮಾಡಿದರು? ಮಹಾಪ್ರಾಜ್ಞನೇ! ನನ್ನ ಮಕ್ಕಳು ರಣಾಂಗಣದಿಂದ ವಿಮುಖರಾಗಲಾಗಿ ಭೀಷ್ಮ-ದ್ರೋಣಾದಿ ಮಹಾತ್ಮರ ಪ್ರತಿಕ್ರಿಯೆಯು ಹೇಗಿದ್ದಿತು? ಅವರೆಲ್ಲರೂ ಯಾವ ನಿಶ್ಚಯಕ್ಕೆ ಬಂದರು?–ಈ ಎಲ್ಲವನ್ನೂ ವಿಶದವಾಗಿ ಹೇಳು, ಸಂಜಯ!"

"ಮಹಾರಾಜ! ಸಾವಧಾನಚಿತ್ತನಾಗಿ ಕೇಳು. ಕೇಳಿದನಂತರ ಪಾಂಡವ ರಿಗೆ ಅಜಯ್ಯವಾದ ಶಕ್ತಿಯಿರುವ ಕಾರಣವನ್ನೂ, ನಿನ್ನ ಮಕ್ಕಳು ಪದೇ ಪದೇ ಪರಾಜಿತರಾಗುತ್ತಿರುವುದಕ್ಕೆ ಕಾರಣವನ್ನೂ ನೀನೇ ನಿಶ್ಚಯಿಸಬಹುದಾಗಿದೆ. ನನಗೆ ತಿಳಿದಿರುವಂತೆ ಪಾಂಡವರು ಯುದ್ಧದಲ್ಲಿ ಅವಧ್ಯರಾಗಿರುವುದಕ್ಕೆ ಮಂತ್ರವಾಗಲೀ, ಮಾಯೆಯಾಗಲೀ ಕಾರಣವಾಗಿರುವುದಿಲ್ಲ. ಮೇಲಾಗಿ ಪಾಂಡವರು ಯುದ್ಧಸಮಯದಲ್ಲಿ ನಿನ್ನ ಮಕ್ಕಳನ್ನೂ ಮತ್ತು ನಿನ್ನ ಸೈನಿಕ ರನ್ನೂ ಭಯಪಡಿಸುವ ಸಲುವಾಗಿ ಯಾವ ವಿಧವಾದ ಭಯಂಕರದೃಶ್ಯವನ್ನೂ

ಪ್ರದರ್ಶಿಸುತ್ತಿಲ್ಲ. ಅವರು ಯುದ್ಧದ ರೀತಿ-ನೀತಿಗಳಿಗೆ ಅನುಸಾರವಾಗಿಯೇ ಯುದ್ಧಮಾಡುತ್ತಾರೆ. ಆದರೆ ಅವರು ಯುದ್ಧಮಾಡುವುದರಲ್ಲಿ ಅತ್ಯಂತ ಶಕ್ತಿಮಂತರೆಂಬುದರಲ್ಲಿ ಸಂಶಯವೇ ಇಲ್ಲ. ಮಹಾರಾಜ! ಕುಂತಿಯ ಮಕ್ಕಳು ಜೀವನನಿರ್ವಹಣೆಯ ಕಾರ್ಯವನ್ನು ಮೊದಲುಗೊಂಡು ಎಲ್ಲ ಕೆಲಸಗಳನ್ನೂ ಧರ್ಮದ ಹಿನ್ನೆಲೆಯಲ್ಲಿಯೇ ಆರಂಭಿಸುತ್ತಾರೆ. ಧರ್ಮಿಷ್ಠರಾಗಿದ್ದು ಜಗತ್ತಿನಲ್ಲಿ ಅಕ್ಷಯವಾದ ಯಶಸ್ಸನ್ನು ಗಳಿಸಬೇಕೆಂಬುದೇ ಅವರ ಆಶಯವಾಗಿದೆ. ಧರ್ಮೋಪೇತರಾದ, ಮಹಾಬಲರಾದ ಪಾಂಡವರು ಯಾವುದೇ ಕಾರಣದಿಂದಲೂ ಯುದ್ಧದಿಂದ ಪ್ರತಿನಿವೃತ್ತರಾಗುವುದಿಲ್ಲ. ಈ ಕಾರಣದಿಂದಲೇ ಅವರು ಶ್ರೇಷ್ಠವಾದ ವಿಜಯಶ್ರೀಯಿಂದ ಯುಕ್ತರಾಗಿದ್ದಾರೆ. **ಯತೋ ಧರ್ಮಸ್ತತೋ ಜಯಃ**–ಎಲ್ಲಿ ಧರ್ಮವಿರುವುದೋ ಅಲ್ಲಿ ವಿಜಯವೂ ಇರುವುದೆಂಬ ವಿಷಯವು ನಿನಗೆ ತಿಳಿದೇ ಇರುವುದಲ್ಲವೇ?

ಮಹಾರಾಜ! ಪಾಂಡವರು ಧರ್ಮಾತ್ಮರಾಗಿರುವುದರಿಂದಲೇ ಅವಧ್ಯರಾಗಿರುತ್ತಾರೆ. ಜಯಶಾಲಿಗಳೂ ಆಗಿದ್ದಾರೆ. ಧರ್ಮಾತ್ಮರಾದ ಅವರನ್ನು ವಿಜಯವೆಂದಿಗೂ ಕೈಬಿಡದು. ನಿನ್ನ ಮಕ್ಕಳ ವಿಷಯವೂ ನಿನಗೆ ತಿಳಿಯದೇ ಇಲ್ಲ. ನಿನ್ನ ಮಕ್ಕಳೆಲ್ಲರೂ ದುರಾತ್ಮರು. ಪಾಪಕರ್ಮಗಳಲ್ಲಿಯೇ ಯಾವಾಗಲೂ ನಿರತರಾಗಿರತಕ್ಕವರು. ನಿಷ್ಠುರವಾದ ಮಾತುಗಳನ್ನಾಡುವವರು. ಹೀನವಾದ ಕರ್ಮಗಳಲ್ಲಿಯೇ ಆಸಕ್ತಿಯುಳ್ಳವರು. ಈ ಕಾರಣಗಳಿಂದಲೇ ಅವರು ಯುದ್ಧದಲ್ಲಿ ವಿನಾಶಹೊಂದುತ್ತಾರೆ. ಜನೇಶ್ವರ! ನೀಚರಾದ ಮನುಷ್ಯರಂತೆ ನಿನ್ನ ಮಕ್ಕಳು ಪಾಂಡವರ ವಿಷಯದಲ್ಲಿ ಬಹಳ ಕ್ರೂರವಾಗಿ ವರ್ತಿಸಿದರು. ನಾನಾರೀತಿಯಲ್ಲಿ ಮೋಸಮಾಡಿದರು. ಪಾಂಡವರು ನಿನ್ನ ಮಕ್ಕಳು ಮಾಡಿದ ಮೋಸಕ್ರಿಯೆಗಳನ್ನು ಮನಸ್ಸಿಗೆ ತೆಗೆದುಕೊಳ್ಳದೆ ಮೋಸದಿಂದ ತಪ್ಪಿಸಿಕೊಳ್ಳುವುದರಲ್ಲಿ ಮಾತ್ರವೇ ಯಾವಾಗಲೂ ಆಸಕ್ತರಾಗಿರುತ್ತಿದ್ದರು. (ನಿನ್ನ ಮಕ್ಕಳು ಮಾಡಿದ ಮೋಸಕ್ಕೆ ಪ್ರತಿಯಾಗಿ ಮೋಸಮಾಡಬೇಕೆಂಬುದನ್ನು ಅವರೆಂದೂ ಯೋಚಿಸಿದವರೇ ಅಲ್ಲ.) ಅವರು ಇಷ್ಟು ಧಾರ್ಮಿಕರಾಗಿ, ನಿಷ್ಕಲ್ಮಷರಾಗಿ ಇದ್ದರೂ ನಿನ್ನ ಮಕ್ಕಳು ಅವರ ವಿಷಯದಲ್ಲಿ ಆದರವನ್ನು ತೋರಿಸಲಿಲ್ಲ. ಅವರನ್ನು ಮಾನ್ಯಮಾಡಲಿಲ್ಲ. ಕಡೆಯವರೆಗೂ ಅವರ ವಿಷಯದಲ್ಲಿ ಅನಾದರಣೆಯನ್ನೇ ಮಾಡಿಬಿಟ್ಟರು. ಪಾಪಕರ್ಮಗಳನ್ನು ಸದಾ ಮಾಡುತ್ತಿದ್ದರೆ

ಅದರ ಫಲವು ಪ್ರಾಪ್ತವಾಗಲೇಬೇಕಲ್ಲವೇ? ಪಾಂಡವರ ವಿಷಯದಲ್ಲಿ ನಿರಂತರವೂ ಮಾಡುತ್ತಿದ್ದ ಪಾಪಕರ್ಮಕ್ಕೆ ಈಗ ಮಹಾಘೋರವಾದ ಫಲವು ಪ್ರಾಪ್ತವಾಗಿದೆ, ಮಹಾರಾಜ! ನಿನ್ನ ಮಕ್ಕಳು ಪಾಂಡವರ ವಿಷಯದಲ್ಲಿ ಪಾಪಕರ್ಮಗಳನ್ನೆಸಗುತ್ತಿದ್ದಾಗ ಅದನ್ನು ತಡೆಯುವಂತೆ ನಿನಗೆ ಅನೇಕ ಸುಹೃಜ್ಜನರು ಸಲಹೆನೀಡಿದರು. ಆದರೆ ಆ ಸಮಯದಲ್ಲಿ ನೀನು ಸತ್ಪುರುಷರ ಸಲಹೆಗಳನ್ನು ಮಾನ್ಯಮಾಡಲಿಲ್ಲ. ಸತ್ಪುರುಷರ ಸಲಹೆಗಳನ್ನು ತಿರಸ್ಕರಿಸುವುದರಿಂದ ಮುಂದೆ ಅಪಾಯವುಂಟಾಗಬಹುದೆಂದು ಆಗ ನೀನು ಭಾವಿಸಲೂ ಇಲ್ಲ. ಅದರ ಫಲವನ್ನು ನೀನೀಗ ಪುತ್ರಸಮೇತನಾಗಿ ಸುಹೃದರ ಸಮೇತನಾಗಿ ಅನುಭವಿಸು. (ಅನುಭವಿಸಿಯೇ ತೀರಬೇಕು. ಅನ್ಯಮಾರ್ಗವೇ ಇಲ್ಲ.) ವಿದುರ, ಭೀಷ್ಮ, ಮಹಾತ್ಮರಾದ ದ್ರೋಣರು ಮತ್ತು ನಾನು–ನಿನಗೆ ಈ ವಿಷಯವನ್ನು ಅನೇಕ ಬಾರಿ ಹೇಳಿದ್ದೇವೆ. ದುರ್ಯೋಧನನ ಮಾರ್ಗವನ್ನು ಹಿಡಿದು ಹೋಗಬೇಡವೆಂದು ಎಷ್ಟೋಸಲ ನಿನ್ನನ್ನು ತಡೆದಿದ್ದೇವೆ. ಒಮ್ಮೆಯಾದರೂ ನೀನು ನಮ್ಮ ಮಾತಿನ ಅಭಿಪ್ರಾಯವನ್ನು ತಿಳಿದುಕೊಳ್ಳಲಿಲ್ಲ. ನಮ್ಮ ಮಾತು ನಿನಗೆ ಪಥ್ಯವಾಗಲಿಲ್ಲ. ನಮ್ಮ ಹಿತವಚನವು ನಿನಗೆ ರುಚಿಸಲಿಲ್ಲ. ಮೃತ್ಯುಮುಖನಾಗಿರುವ ಮನುಷ್ಯನು ಯಾವ ರೀತಿಯಲ್ಲಿ ಹಿತಕರವಾಗಿರುವ ಔಷಧವನ್ನು ಚೆಲ್ಲುತ್ತಾನೆಯೋ–ಅದೇ ರೀತಿಯಲ್ಲಿ ಹಿತವೂ ಮತ್ತು ಪಥ್ಯವೂ ಆಗಿದ್ದ ನಮ್ಮ ಮಾತುಗಳನ್ನು ನೀನು ತಿರಸ್ಕರಿಸಿದೆ. ನಿನ್ನ ಮಕ್ಕಳ ಮಾತನ್ನೇ ಕೇಳಿ ನೀನು–'ಪಾಂಡವರನ್ನು ನನ್ನ ಮಕ್ಕಳು ಜಯಿಸಿಯೇ ಬಿಟ್ಟರು'-ಎಂದು ಭ್ರಮಿಸಿದೆ.

ಮಹಾರಾಜ! ನಿನ್ನ ಮಕ್ಕಳ ಪರಾಭವದ ಕಾರಣವನ್ನೂ ಮತ್ತು ಪಾಂಡವರ ವಿಜಯದ ಕಾರಣವನ್ನೂ ಮತ್ತು ಎಲ್ಲ ವಿಷಯಗಳನ್ನೂ ಯಥಾವತ್ತಾಗಿ ಮತ್ತು ಆಮೂಲಾಗ್ರವಾಗಿ ಹೇಳಬೇಕೆಂದು ನೀನು ನನಗೆ ಹೇಳಿದೆಯಲ್ಲವೇ? ನಾನು ಈ ವಿಷಯವನ್ನು ಹೇಗೆ ಕೇಳಿದೆನೋ ಹಾಗೆಯೇ ನಿನಗೆ ಹೇಳುತ್ತೇನೆ. ಅದನ್ನೂ ಕೇಳುವವನಾಗು.

ನೀನೀಗ ನನ್ನನ್ನು ಕೇಳಿದ ಪ್ರಶ್ನೆಯನ್ನೇ ದುರ್ಯೋಧನನು ಭೀಷ್ಮನನ್ನು ಕೇಳಿದನು. ಮಹಾರಥರಾದ ದುರ್ಯೋಧನನ ಅನುಜರೆಲ್ಲರೂ ಪಾಂಡವರಿಂದ ಪರಾಜಿತರಾಗಿದ್ದರು. ಕೆಲವರು ಪ್ರಾಣಗಳನ್ನೂ ತೊರೆದಿದ್ದರು. ಅದನ್ನು

ನೋಡಿ ಶೋಕಸಮ್ಮೂಢಹೃದಯನಾದ ದುರ್ಯೋಧನನು ಆ ರಾತ್ರಿ ಮಹಾಪ್ರಾಜ್ಞನಾದ ಪಿತಾಮಹನ ಸಮೀಪಕ್ಕೆ ಹೋಗಿ ವಿನೀತನಾಗಿ ಅವನನ್ನು ಪ್ರಶ್ನಿಸಿದುದನ್ನು ನಿನಗೂ ಹೇಳುವೆನು ; ಕೇಳು ಮಹಾರಾಜ!

ದುರ್ಯೋಧನನು ಬದ್ಧಾಂಜಲಿಯಾಗಿ ನಿಂತು ಭೀಷ್ಮನನ್ನು ಪ್ರಶ್ನಿಸಿದನು :

"ಪಿತಾಮಹ! ದ್ರೋಣರು, ನೀನು, ಶಲ್ಯ, ಕೃಪರು, ಅಶ್ವತ್ಥಾಮಾ, ಕೃತವರ್ಮಾ, ಕಾಂಬೋಜರಾಜನಾದ ಸುದಕ್ಷಿಣ, ಭೂರಿಶ್ರವಸ, ವಿಕರ್ಣ, ವೀರ್ಯವಂತನಾದ ಭಗದತ್ತ–ಇವರೆಲ್ಲರೂ ಮಹಾರಥರೆಂದು ಖ್ಯಾತ ರಾಗಿರುತ್ತಾರೆ. ಇವರೆಲ್ಲರೂ ಕುಲೀನರು. ಯುದ್ಧದಲ್ಲಿ ನನಗಾಗಿ ದೇಹ ತ್ಯಾಗಮಾಡಲು ಕೂಡ ಸಿದ್ಧರಾಗಿರುತ್ತಾರೆ. ಮೂರು ಲೋಕಗಳನ್ನೂ ಜಯಿಸಲು ನೀವಿಷ್ಟು ಮಂದಿ ಮಹಾರಥರೇ ಸಾಕೆಂದು ನನ್ನ ಅಭಿಮತ ವಾಗಿದೆ. ಆದರೆ ನೀವಿಷ್ಟು ಮಂದಿಯೂ ಪಾಂಡವರ ಪರಾಕ್ರಮವನ್ನು ಎದುರಿಸಿ ನಿಲ್ಲಲು ಅಸಮರ್ಥರಾಗಿರುತ್ತೀರಿ. ಇದಕ್ಕೆ ಕಾರಣವೇನು? ಅಥವಾ ಇದರ ರಹಸ್ಯವೇನು? ಈ ವಿಷಯದಲ್ಲಿ ನನಗೆ ಒಂದು ದೊಡ್ಡ ಸಂಶಯವುಂಟಾಗಿದೆ. ಪ್ರಶ್ನೆಮಾಡುತ್ತಿರುವ ನನಗೆ ನೀನು ಇದರ ರಹಸ್ಯ ವೇನೆಂಬುದನ್ನು ಹೇಳು.

**ಯಂ ಸಮಾಶ್ರಿತ್ಯ ಕೌನ್ತೇಯಾ ಜಯನ್ತ್ಯಸ್ಮಾನ್ ಕ್ಷಣೇ ಕ್ಷಣೇ ॥೩೪॥**

ಯಾವನನ್ನು ಆಶ್ರಯಿಸಿ ಈ ಕುಂತಿಯ ಮಕ್ಕಳು ನಮ್ಮನ್ನು ಪ್ರತಿಕ್ಷಣ ದಲ್ಲಿಯೂ ಜಯಿಸುತ್ತಿದ್ದಾರೆ? ಯಾರ ಸಹಕಾರದಿಂದ ಇವರಿಗೆ ಈ ಅಮೋಘವಾದ ಶಕ್ತಿಯು ಪ್ರಾಪ್ತವಾಗಿದೆ?"

"ಕುರುನಂದನ! ನರೇಶ್ವರ! ನನ್ನ ಮಾತನ್ನು ಕೇಳು. ಈ ವಿಷಯವನ್ನು ನಾನು ನಿನಗೆ ಯಥಾವತ್ತಾಗಿ ಹೇಳುತ್ತೇನೆ. ನಾನು ಹಿಂದೆಯೂ ಸಹ ನಿನಗೆ ಅನೇಕಬಾರಿ ಈ ವಿಷಯವನ್ನೇ ಹೇಳಿದ್ದೆನು. ಆದರೆ ಆಗ ನೀನು ನಾನು ಹೇಳಿದಂತೆ ಮಾಡಲಿಲ್ಲ. ನನ್ನ ಮಾತನ್ನು ನೀನು ಗೌರವಿಸಲಿಲ್ಲ. ನಾನಾಗ ಏನು ಹೇಳಿದ್ದೆನೆಂಬುದನ್ನು ಪುನಃ ನಿನಗೆ ಜ್ಞಾಪಿಸುತ್ತೇನೆ.

**ಕ್ರಿಯತಾಂ ಪಾಣ್ಡವೈಃ ಸಾರ್ಧಂ ಶಮೋ ಭರತಸತ್ತಮ ।**
**ಏತತ್ಕ್ಷೇಮಮಹಂ ಮನ್ಯೇ ಪೃಥಿವ್ಯಾಸ್ತವ ವಾ ವಿಭೋ ॥೩೬॥**

**ಭುಂಕ್ಷ್ವೇಮಾಂ ಪೃಥಿವೀಂ ರಾಜನ್ಭ್ರಾತೃಭಿಃ ಸಹಿತಃ ಸುಖೀ ।**
**ದುರ್ಹೃದಸ್ತಾಪಯನ್ಸರ್ವಾನ್ನಂದಯಂಶ್ಚಾಪಿ ಬಾಂಧವಾನ್ ॥೩೭॥**

"ಭರತಸತ್ತಮನೇ! ಪಾಂಡವರೊಡನೆ ಶಾಂತಿಸಂಧಾನವನ್ನು ಏರ್ಪಡಿಸು. ಇದರಿಂದ ನಿನಗೂ ಕ್ಷೇಮವಾಗುತ್ತದೆ ಮತ್ತು ನೀನಾಳುತ್ತಿರುವ ಪೃಥ್ವಿಗೂ ಕ್ಷೇಮವಾಗುತ್ತದೆಂದು ನಾನು ಭಾವಿಸುತ್ತೇನೆ. ದುರ್ಹೃದರಾದವರಿಗೆ ತಾಪವನ್ನುಂಟುಮಾಡುತ್ತಲೂ, ಸುಹೃದರಾದವರಿಗೆ ಮತ್ತು ಬಂಧುಗಳಿಗೆ ಆನಂದವನ್ನುಂಟುಮಾಡುತ್ತಲೂ, ಭ್ರಾತೃಗಳೊಡನೆ ಕೂಡಿಕೊಂಡು ಈ ಪೃಥ್ವಿಯನ್ನು ಉಪಭುಂಜಿಸು. ಸುಖವಾಗಿರು"– ಎಂಬುದಾಗಿ ನಾನು ನಿನಗೆ ಅನೇಕಬಾರಿ ಹೇಳಿದೆ, ದುರ್ಯೋಧನ! ಆದರೆ ಆಗ ನೀನು ನನ್ನ ಮಾತಿಗೆ ಕಿವಿಗೊಡಲಿಲ್ಲ. ಕುಲವು ನಾಶವಾಗಿ ಹೋಗುವುದೆಂಬ ಸಂಕಟದಿಂದ ನಾನು ನಿನ್ನ ಮುಂದೆ ಪದೇ-ಪದೇ ಅತ್ತುಕೊಂಡು ಹೇಳಿದರೂ ಸಹ ನೀನು ನನ್ನ ಮಾತನ್ನು ಕೇಳಲಿಲ್ಲ. ನನ್ನ ಮಾತನ್ನು ಅಲಕ್ಷಿಸಿ ನೀನು ಪಾಂಡವರನ್ನು ಅವಮಾನಿಸಿದೆ. ಅದರ ಫಲವು ಇದೀಗ ಲಭಿಸಲಿದೆ.

ಎಂತಹ ಮಹಾಕಾರ್ಯವನ್ನೂ ಬಹಳ ಸುಲಭವಾಗಿ ಮಾಡಿ ಮುಗಿಸುವ ಪಾಂಡವರ ಅವಧ್ಯತ್ವದ ಕಾರಣವನ್ನೂ ಹೇಳುತ್ತೇನೆ. ಮಹಾಬಾಹುವೇ! ಆ ವಿಷಯವನ್ನೂ ಕೇಳು.

**ನಾಸ್ತಿ ಲೋಕೇಷು ತದ್ಭೂತಂ ಭವಿತಾ ನೋ ಭವಿಷ್ಯತಿ ।**
**ಯೋ ಜಯೇತ್ಪಾಂಡವಾನ್ಸರ್ವಾನ್ಪಾಲಿತಾಞ್ಶಾರ್ಙ್ಗಧನ್ವನಾ ॥೪೦॥**

ಶಾರ್ಙ್ಗಧನ್ವನಾದ ಮಹಾವಿಷ್ಣುವಿನಿಂದ ಅರ್ಥಾತ್ ಶ್ರೀಕೃಷ್ಣನಿಂದ ಪರಿಪಾಲಿತರಾದ ಪಾಂಡವರನ್ನು ಜಯಿಸುವ ಪ್ರಾಣಿಯು ಯಾವ ಲೋಕದಲ್ಲಿಯೂ ಇರುವುದಿಲ್ಲ. ಹಿಂದೆಯೂ ಇರಲಿಲ್ಲ. ಮುಂದೆಯೂ ಹುಟ್ಟುವುದಿಲ್ಲ. ಇದು ಕೇವಲ ನನ್ನ ಅಭಿಪ್ರಾಯವೆಂದು ಭಾವಿಸಬೇಡ. ದುರ್ಯೋಧನ! ಪವಿತ್ರವಾದ ಅಂತಃಕರಣವನ್ನು ಹೊಂದಿರುವ ಮುನಿಗಳು ನನ್ನೊಡನೆ ಯಾವ ಪುರಾಣಗೀತವನ್ನು ಹೇಳಿದ್ದಾರೆಯೋ ಅದನ್ನೇ ನಿನಗೆ ನಾನು ಯಥಾವತ್ತಾಗಿ ಹೇಳುತ್ತೇನೆ, ಕೇಳು.

ಹಿಂದೊಮ್ಮೆ ಎಲ್ಲ ದೇವತೆಗಳೂ ಮತ್ತು ಋಷಿಗಳೂ ಗಂಧಮಾದನ ಪರ್ವತಕ್ಕೆ ಆಗಮಿಸಿ ಅಲ್ಲಿದ್ದ ಚತುರ್ಮುಖಬ್ರಹ್ಮನನ್ನು ಸುತ್ತುವರಿದು ಕುಳಿತರು. ದೇವರ್ಷಿಗಳ ಮಧ್ಯದಲ್ಲಿ ಕುಳಿತಿದ್ದ ಬ್ರಹ್ಮನು ಆಕಾಶದಲ್ಲಿದ್ದ ಶ್ರೇಷ್ಠವಾದ ಮತ್ತು ತನ್ನ ಕಾಂತಿಯಿಂದ ಪ್ರಜ್ವಲಿಸುತ್ತಿದ್ದ ವಿಮಾನವೊಂದನ್ನು ನೋಡಿದನು. ಆ ವಿಮಾನವು ಯಾವುದು ಮತ್ತು ಯಾರದು? ಅದರಲ್ಲಿ ಕುಳಿತಿರುವವರು ಯಾರು?-ಎಂಬುದನ್ನು ಧ್ಯಾನದಲ್ಲಿ ಏಕಾಗ್ರನಾಗಿ ಕುಳಿತು ತಿಳಿದುಕೊಂಡು, ಕೈಜೋಡಿಸಿ ನಿಂತು ಪ್ರಸನ್ನಚಿತ್ತನಾಗಿ ವಿಮಾನಾರೂಢನಾಗಿದ್ದ ಪರಮಪುರುಷನಾದ ಪರಮೇಶ್ವರನಿಗೆ ನಮಸ್ಕರಿಸಿದನು.

ಬ್ರಹ್ಮನು ಮೇಲೆದ್ದು ನಿಂತುದನ್ನೂ ಮತ್ತು ಕೈಜೋಡಿಸಿ ನಮಸ್ಕರಿಸುತ್ತಿರುವುದನ್ನೂ ಕಂಡು ಅವನ ಸುತ್ತಲೂ ಕುಳಿತಿದ್ದ ದೇವರ್ಷಿಗಳೂ ಮೇಲೆದ್ದು ಬದ್ಧಾಂಜಲಿಗಳಾಗಿ ಪರಮಾದ್ಭುತವಾದ ಆ ತೇಜಸ್ಸನ್ನು ನೋಡುತ್ತಾ ನಿಂತುಕೊಂಡರು.

ಬ್ರಹ್ಮವಿದರಲ್ಲಿ ಶ್ರೇಷ್ಠನಾದ, ಪರಮಧರ್ಮಜ್ಞನಾದ, ಜಗತ್ತಿನ ಸೃಷ್ಟಿಕರ್ತೃವಾದ ಬ್ರಹ್ಮನು ಪರಮಪುರುಷನಾದ ಪರಮೇಶ್ವರನನ್ನು ಯಥಾವಿಧಿ ಸಂಪೂಜಿಸಿ ಸ್ತೋತ್ರಮಾಡಿದನು.

ವಿಶ್ವಾವಸುರ್ವಿಶ್ವಮೂರ್ತಿರ್ವಿಶ್ವೇಶೋ
ವಿಷ್ವಕ್ಸೇನೋ ವಿಶ್ವಕರ್ಮಾ ವಶೀ ಚ ।
ವಿಶ್ವೇಶ್ವರೋ ವಾಸುದೇವೋಽಸಿ ತಸ್ಮಾ-
ದ್ಯೋಗಾತ್ಮಾನಂ ದೈವತಂ ತ್ವಾಮುಪೈಮಿ ॥೪೭॥

"ಪ್ರಭುವೇ! ನೀನು ವಿಶ್ವಾವಸು (ಪ್ರಪಂಚಕ್ಕೆ ಅಕ್ಷಯವಾದ ಐಶ್ವರ್ಯವಾಗಿರತಕ್ಕವನು.), ವಿಶ್ವಮೂರ್ತಿ (ಪ್ರಪಂಚವೇ ಮೂರ್ತಿಯಾಗಿ ಉಳ್ಳವನು–ನಿನ್ನ ರೂಪವೇ ಪ್ರಪಂಚ. ಈ ಪ್ರಪಂಚವೇ ನಿನ್ನ ರೂಪವಾಗಿದೆ.) ವಿಶ್ವೇಶ (ವಿಶ್ವಕ್ಕೇ ಸ್ವಾಮಿಯಾಗಿರತಕ್ಕವನು), ವಿಷ್ವಕ್ಸೇನ (ಎಲ್ಲೆಡೆಗಳಲ್ಲಿಯೂ ಏಕೈಕಮಹಾಸೇನಾನಿಯಾಗಿರತಕ್ಕವನು ; ಸರ್ವವ್ಯಾಪಿಯಾದ ಸೈನ್ಯವನ್ನು ಹೊಂದಿರತಕ್ಕವನು.), ವಿಶ್ವಕರ್ಮಾ (ಈ ವಿಶ್ವವೇ ನಿನ್ನ ಕರ್ಮವಾಗಿದೆ. ನಿನ್ನ ಕ್ರಿಯೆಯ ಫಲವಾಗಿ ಈ ವಿಶ್ವದ ಸೃಷ್ಟಿಯಾಗಿದೆ.), ವಶೀ (ಅಖಂಡಬ್ರಹ್ಮಾಂಡ

ವನ್ನೂ ವಶದಲ್ಲಿ ಇಟ್ಟುಕೊಂಡಿರುವವನು.), ವಿಶ್ವೇಶ್ವರ (ವಿಶ್ವಕ್ಕೇ ಈಶ್ವರನಾಗಿರತಕ್ಕವನು.), ವಾಸುದೇವ (ವಸುದೇವನ ಮಗನಾಗಿರತಕ್ಕವನು.) ನೀನು ಯೋಗಸ್ವರೂಪನಾದ ದೇವತೆಯಾಗಿರುವೆ. ಇಂತಹ ನಿನಗೆ ನಾನು ಶರಣಾಗಿ ಬಂದಿರುತ್ತೇನೆ.

**ಜಯ ವಿಶ್ವ ಮಹಾದೇವ ಜಯ ಲೋಕಹಿತೇರತ ।**
**ಜಯ ಯೋಗೀಶ್ವರ ವಿಭೋ ಜಯ ಯೋಗಪರಾವರ ॥೪೮॥**

ವಿಶ್ವರೂಪ! ಮಹಾದೇವ! ನಿನಗೆ ಜಯವಾಗಲಿ, ಯಾವಾಗಲೂ ವಿಶ್ವದ ಹಿತದಲ್ಲಿಯೇ ನಿರತನಾಗಿರುವ ನಿನಗೆ ಜಯವಾಗಲಿ. ಸರ್ವತ್ರ ವ್ಯಾಪ್ತನಾಗಿರುವ ಯೋಗೇಶ್ವರನೇ! ನಿನಗೆ ಜಯವಾಗಲಿ. ಯೋಗಕ್ಕೆ ಆದಿಯೂ ಮತ್ತು ಅಂತ್ಯನೂ ಆಗಿರುವವನೇ! ನಿನಗೆ ಜಯವಾಗಲಿ.

**ಪದ್ಮಗರ್ಭ ವಿಶಾಲಾಕ್ಷ ಜಯ ಲೋಕೇಶ್ವರೇಶ್ವರ ।**
**ಭೂತಭವ್ಯಭವನ್ನಾಥ ಜಯ ಸೌಮ್ಯಾತ್ಮಜಾತ್ಮಜ ॥೪೯॥**

**ಅಸಂಖ್ಯೇಯಗುಣಾಧಾರ ಜಯ ಸರ್ವಪರಾಯಣ ।**
**ನಾರಾಯಣ ಸುದುಷ್ಪಾರ ಜಯ ಶಾರ್ಙ್ಗಧನುರ್ಧರ ॥೫೦॥**

ಪದ್ಮವನ್ನೇ ನಾಭಿಯಲ್ಲಿ ಹೊಂದಿರುವವನೇ! ವಿಶಾಲವಾದ ಕಣ್ಣುಗಳುಳ್ಳವನೇ! ನಿನಗೆ ಜಯವಾಗಲಿ. ಲೋಕಪಾಲರುಗಳಿಗೂ ಸ್ವಾಮಿಯಾಗಿರತಕ್ಕವನೇ! ಭೂತ, ಭವಿಷ್ಯ ಮತ್ತು ವರ್ತಮಾನಗಳಿಗೂ ಸ್ವಾಮಿಯಾಗಿರತಕ್ಕವನೇ! ನಿನಗೆ ಜಯವಾಗಲಿ. ಸೌಮ್ಯಸ್ವರೂಪನೇ! (ಸ್ತೋತ್ರ ಮಾಡುತ್ತಿರುವ ಬ್ರಹ್ಮನ ಪರ್ಯಾಯದಲ್ಲಿ-ನಿನ್ನ ಆತ್ಮಜನು ನಾನು. ಈಗ ನೀನು ನನ್ನ ಸೃಷ್ಟಿಗೆ ಒಳಪಟ್ಟಿರುವನಾದುದರಿಂದ ನನ್ನ ಆತ್ಮಜನು ನೀನು. ಇದರಿಂದ ನೀನು ಆತ್ಮಜಾತ್ಮಜ ಅಥವಾ ನನ್ನ ಆತ್ಮಜ ಕಶ್ಯಪ. ಅವನ ಮಗ ಉಪೇಂದ್ರನು ನೀನು. ಅರ್ಥಾತ್ ನನ್ನ ಮೊಮ್ಮಗ.) ಅಸಂಖ್ಯೇಯವಾದ ಗುಣಗಳಿಗೂ ಆಧಾರವಾಗಿರತಕ್ಕವನೇ! ನಿನಗೆ ಜಯವಾಗಲಿ. ಸರ್ವರಿಗೂ ಶರಣ್ಯನೇ! (ಮಹಿಮೆಯ) ಪಾರವನ್ನು ತಿಳಿಯಲು ದುಃಸಾಧ್ಯನಾದವನೇ! ಶಾರ್ಙ್ಗವೆಂಬ ಧನುಸ್ಸನ್ನು ಹೊಂದಿರುವವನೇ! ನಾರಾಯಣ! ನಿನಗೆ ಜಯವಾಗಲಿ.

**ಜಯ ಸರ್ವಗುಣೋಪೇತ ವಿಶ್ವಮೂರ್ತೇ ನಿರಾಮಯ ।**
**ವಿಶ್ವೇಶ್ವರ ಮಹಾಬಾಹೋ ಜಯ ಲೋಕಾರ್ಥತತ್ಪರ ॥೫೧॥**

ಸಮಸ್ತಕಲ್ಯಾಣಗುಣಸಂಪನ್ನನೇ! ವಿಶ್ವಮೂರ್ತಿಯೇ! ನಿರಾಮಯನೇ! ನಿನಗೆ ಜಯವಾಗಲಿ. ವಿಶ್ವೇಶ್ವರನೇ! ಮಹಾಬಾಹುವೇ! ಜಗತ್ತಿನ (ಪ್ರಾಣಿಗಳ) ಅಭೀಷ್ಟವನ್ನು ನೆರವೇರಿಸಿಕೊಡುವುದರಲ್ಲಿ ತತ್ಪರನಾಗಿರತಕ್ಕವನೇ! ನಿನಗೆ ಜಯವಾಗಲಿ.

**ಮಹೋರಗ ವರಾಹಾದ್ಯ ಹರಿಕೇಶ ವಿಭೋ ಜಯ ।**
**ಹರಿವಾಸ ದಿಶಾಮೀಶ ವಿಶ್ವವಾಸಾಮಿತಾವ್ಯಯ ॥೫೨॥**

ಮಹೋರಗನೇ! (ಶೇಷನಾಗರೂಪನೇ! ) ಆದಿವರಾಹಮೂರ್ತಿಯೇ! ಹೊಂಬಣ್ಣದ ಕೇಶರಾಶಿಯುಳ್ಳವನೇ! ವಿಭೋ! ನಿನಗೆ ಜಯವಾಗಲಿ. ಪಿತಾಂಬರಧರನೇ! ದಶದಿಕ್ಕುಗಳಿಗೂ ಸ್ವಾಮಿಯಾಗಿರತಕ್ಕವನೇ! ವಿಶ್ವಕ್ಕೇ ಆಧಾರಭೂತನಾಗಿರತಕ್ಕವನೇ! ಅಪ್ರಮೇಯನೇ! ಅವಿನಾಶಿಯೇ! ನಿನಗೆ ಮಂಗಳವಾಗಲಿ.

**ವ್ಯಕ್ತಾವ್ಯಕ್ತಾಮಿತಸ್ಥಾನ ನಿಯತೇನ್ದ್ರಿಯ ಸತ್ಕ್ರಿಯ ।**
**ಅಸಂಖ್ಯೇಯಾತ್ಮಭಾವಜ್ಞ ಜಯ ಗಮ್ಭೀರ ಕಾಮದ ॥೫೩॥**

ವ್ಯಕ್ತನೂ ಮತ್ತು ಅವ್ಯಕ್ತನೂ ಆಗಿರತಕ್ಕವನೇ! (ವಾಸಮಾಡಲು) ಅಮಿತವಾದ ಅನಂತವಾದ ಸ್ಥಾನವಿರತಕ್ಕವನೇ! (ಎಲ್ಲೆಲ್ಲಿಯೂ ಇರತಕ್ಕವನೇ!) ಇಂದ್ರಿಯಗಳನ್ನು ನಿಯಂತ್ರಿಸಿರತಕ್ಕವನೇ! ಯಾವಾಗಲೂ ಸತ್ಕರ್ಮಗಳನ್ನೇ ಮಾಡತಕ್ಕವನೇ! ಅಸಂಖ್ಯೇಯವಾದ ರೂಪಗಳುಳ್ಳವನೇ! ಆತ್ಮಭಾವವನ್ನು ತಿಳಿದಿರತಕ್ಕವನೇ! ಸಮುದ್ರದಂತೆ ಗಾಂಭೀರ್ಯದಿಂದಿರತಕ್ಕವನೇ! ಭಕ್ತರ ಕಾಮನೆಗಳೆಲ್ಲವನ್ನೂ ಪೂರ್ಣಗೊಳಿಸುವವನೇ! ನಿನಗೆ ಜಯವಾಗಲಿ.

**ಅನನ್ತವಿದಿತ ಬ್ರಹ್ಮನ್ನಿತ್ಯ ಭೂತವಿಭಾವನ ।**
**ಕೃತಕಾರ್ಯ ಕೃತಪ್ರಜ್ಞ ಧರ್ಮಜ್ಞ ವಿಜಯಾವಹ ॥೫೪॥**

ಅನಂತಬೋಧಸ್ವರೂಪನಾಗಿರತಕ್ಕವನೇ! (ಸರ್ವಜ್ಞನೇ! ) ಪರಬ್ರಹ್ಮಸ್ವರೂಪನೇ! ಶಾಶ್ವತನೇ! ಸಕಲಪ್ರಾಣಿಗಳನ್ನೂ ಸೃಷ್ಟಿಸುವವನೇ! ಮಾಡ

ಬೇಕಾದ ಕಾರ್ಯಗಳೆಲ್ಲವನ್ನೂ ಮಾಡಿ ಮುಗಿಸಿರತಕ್ಕವನೇ! ಪರ್ಯಾಪ್ತ ವಾದ ಜ್ಞಾನವುಳ್ಳವನೇ! ಧರ್ಮಜ್ಞನೇ! ವಿಜಯವನ್ನು ದಯಪಾಲಿಸ ತಕ್ಕವನೇ! ನಿನಗೆ ಮಂಗಳವಾಗಲಿ.

**ಗುಹ್ಯಾತ್ಮನ್ಸರ್ವಯೋಗಾತ್ಮನ್ಸ್ಫುಟಸಮ್ಭೂತಸಮ್ಭವ ।**
**ಭೂತಾದ್ಯ ಲೋಕತತ್ತ್ವೇಶ ಜಯ ಭೂತವಿಭಾವನ ॥೫೫॥**

ನಿಗೂಢವಾದ ಆತ್ಮವುಳ್ಳವನೇ! ಎಲ್ಲ ಯೋಗಗಳಿಗೂ ಆತ್ಮರೂಪ ನಾಗಿರತಕ್ಕವನೇ! ಇದುವರೆಗೆ ಯಾವುವು ಹುಟ್ಟಿರುವುವೋ ಮುಂದೆ ಯಾವುವು ಹುಟ್ಟುವುವೋ ಅವೆಲ್ಲಕ್ಕೂ ಕಾರಣನಾಗಿರತಕ್ಕವನೇ! ಸಕಲ ಭೂತಗಳಿಗೂ ಆದಿಯಾಗಿರುವವನೇ! ಲೋಕತತ್ತ್ವಕ್ಕೆ ಈಶನಾಗಿರತಕ್ಕವನೇ! ಸಕಲ ಪ್ರಾಣಿಗಳ ಉತ್ಪತ್ತಿಗೆ ಕಾರಣನಾದವನೇ! ನಿನಗೆ ಜಯವಾಗಲಿ.

**ಆತ್ಮಯೋನೇ ಮಹಾಭಾಗ ಕಲ್ಪಸಂಕ್ಷೇಪ ತತ್ಪರ ।**
**ಉದ್ಭಾವನಮನೋಭಾವ ಜಯ ಬ್ರಹ್ಮ ಜನಪ್ರಿಯ ॥೫೬॥**

ನಿನ್ನ ಉತ್ಪತ್ತಿಗೆ ಬೇರೆ ಯಾರೂ ಕಾರಣರಲ್ಲವಾದುದರಿಂದ ಸ್ವಯಂಜಾತನೇ! ಮಹಾಭಾಗ್ಯವಂತನೇ! ಕಲ್ಪವನ್ನು ಪ್ರಲಯದ ಮೂಲಕ ವಾಗಿ ಸಂಕ್ಷೇಪಿಸತಕ್ಕವನೇ! ಯಾವಾಗಲೂ ಭಕ್ತರ ಯೋಗ-ಕ್ಷೇಮಗಳಲ್ಲಿಯೇ ತತ್ಪರನಾಗಿರತಕ್ಕವನೇ! ಏಕಾಗ್ರಚಿತ್ತರಾಗಿ ನಿನ್ನನ್ನೇ ಧ್ಯಾನಮಾಡತಕ್ಕವರ ಮನಸ್ಸಿನಲ್ಲಿ ಆವಿರ್ಭಾವವನ್ನು ಹೊಂದತಕ್ಕವನೇ! ಪರಬ್ರಹ್ಮಸ್ವರೂಪನೇ! ಮನುಷ್ಯರ ವಿಷಯದಲ್ಲಿ ಅತ್ಯಂತಪ್ರಿಯನಾಗಿರತಕ್ಕವನೇ! (ಪ್ರಾಣಿಸಾಮಾನ್ಯಕ್ಕೂ ಪ್ರಿಯನಾಗಿರತಕ್ಕವನೇ! ) ನಿನಗೆ ಜಯವಾಗಲಿ.

**ನಿಸರ್ಗಸರ್ಗನಿರತ ಕಾಮೇಶ ಪರಮೇಶ್ವರ ।**
**ಅಮೃತೋದ್ಭವ ಸದ್ಭಾವ ಮುಕ್ತಾತ್ಮನ್ವಿಜಯಪ್ರದ ॥೫೭॥**

ಪ್ರಪಂಚದ ಸೃಷ್ಟಿಯಲ್ಲಿ ನಿರತನಾಗಿರತಕ್ಕವನೇ! ಕಾಮನೆಗಳ ಸ್ವಾಮಿಯೇ! ಪರಮೇಶ್ವರನೇ! ಅಮೃತದಿಂದ ಹುಟ್ಟಿದವನೇ! (ಅಮೃತದ ಉತ್ಪತ್ತಿಗೆ ಸ್ಥಾನವಾಗಿರತಕ್ಕವನೇ! ) ಸದ್ಭಾವನೆಯುಳ್ಳವನೇ! ಸತ್ಯ

ಸ್ವರೂಪನೇ! ಮುಕ್ತಾತ್ಮನೇ! ವಿಜಯವನ್ನು ದಯಪಾಲಿಸತಕ್ಕವನೇ! ನಿನಗೆ ಮಂಗಳವಾಗಲಿ.

**ಪ್ರಜಾಪತಿಪತೇ ದೇವ ಪದ್ಮನಾಭ ಮಹಾಬಲ ।**
**ಆತ್ಮಭೂತ ಮಹಾಭೂತ ಸತ್ತ್ವಾತ್ಮನ್ಜಯ ಸರ್ವದಾ ॥೫೮॥**

ಪ್ರಜಾಪತಿಗಳಿಗೂ ಸ್ವಾಮಿಯಾಗಿರತಕ್ಕವನೇ! ದೇವದೇವನೇ! ಪದ್ಮವೇ ನಾಭಿಯಲ್ಲಿ ಉಳ್ಳವನೇ! ಮಹಾಬಲನೇ! ಆತ್ಮಭೂತನೇ! ಮಹಾಭೂತನೇ! ಸತ್ತ್ವಸ್ವರೂಪನಾದ ಪರಮೇಶ್ವರನೇ! ಸರ್ವದಾ ನಿನಗೆ ಜಯವಾಗಲಿ.

**ಪಾದೌ ತವ ಧರಾ ದೇವೀ ದಿಶೋ ಬಾಹೂ ದಿವಂ ಶಿರಃ ।**
**ಮೂರ್ತಿಸ್ತೇಽಹಂ ಸುರಾಃ ಕಾಯಶ್ಚನ್ದ್ರಾದಿತ್ಯೌ ಚ ಚಕ್ಷುಷೀ ॥೫೯॥**

ಭೂದೇವಿಯೇ ನಿನ್ನ ಪಾದದ್ವಯಸ್ವರೂಪಳಾಗಿದ್ದಾಳೆ. ನಾಲ್ಕು ದಿಕ್ಕುಗಳೇ ನಿನ್ನ ಬಾಹುಗಳ ರೂಪದಲ್ಲಿವೆ. ದ್ಯುಲೋಕವೇ ನಿನ್ನ ಶಿರಸ್ಸಾಗಿದೆ. ಬ್ರಹ್ಮನಾದ ನಾನು ನಿನ್ನ ಶರೀರರೂಪವಾಗಿದ್ದೇನೆ. ದೇವತೆಗಳು ನಿನ್ನ ಅಂಗ-ಪ್ರತ್ಯಂಗರೂಪರಾಗಿದ್ದಾರೆ. ಚಂದ್ರ-ಸೂರ್ಯರು ನಿನ್ನ ಎರಡು ಕಣ್ಣುಗಳ ಸ್ವರೂಪರಾಗಿರುತ್ತಾರೆ.

**ಬಲಂ ತಪಶ್ಚ ಸತ್ಯಂ ಚ ಕರ್ಮ ಧರ್ಮಾತ್ಮಕಂ ತವ ।**
**ತೇಜೋಽಗ್ನಿಃ ಪವನಃ ಶ್ವಾಸ ಆಪಸ್ತೇ ಸ್ವೇದಸಮ್ಭವಾಃ ॥೬೦॥**

ತಪಸ್ಸು ಮತ್ತು ಸತ್ಯವು ನಿನ್ನ ಬಲವಾಗಿದೆ. ನಿನ್ನ ಕರ್ಮವು ಧರ್ಮಸ್ವರೂಪವಾಗಿದೆ. ಅಗ್ನಿಯೇ ನಿನ್ನ ತೇಜಸ್ಸಾಗಿದೆ. ವಾಯುವೇ ನಿನ್ನ ಶ್ವಾಸರೂಪದಲ್ಲಿದ್ದಾನೆ. ನೀರು ನಿನ್ನ ಬೆವರಿನಿಂದಾಗಿದೆ.

**ಅಶ್ವಿನೌ ಶ್ರವಣೌ ನಿತ್ಯಂ ದೇವೀ ಜಿಹ್ವಾ ಸರಸ್ವತೀ ।**
**ವೇದಾಃ ಸಂಸ್ಕಾರನಿಷ್ಠಾ ಹಿ ತ್ವಯೀದಂ ಜಗದಾಶ್ರಿತಮ್ ॥೬೧॥**

ಅಶ್ವಿನೀಕುಮಾರರೇ ನಿನ್ನ ಕಿವಿಗಳ ರೂಪದಲ್ಲಿದ್ದಾರೆ. ಸರಸ್ವತೀ ದೇವಿಯೇ ನಿನ್ನ ನಾಲಿಗೆಯಾಗಿದ್ದಾಳೆ. ನೀನು ಬೋಧಿಸಿರುವ ವೇದಗಳು ಲೋಕಸಂಸ್ಕಾರದಲ್ಲಿ ನಿಷ್ಠೆಯನ್ನು ಹೊಂದಿವೆ. ಇಡೀ ಜಗತ್ತೇ ನಿನ್ನಲ್ಲಿ ಆಶ್ರಯವನ್ನು ಪಡೆದಿದೆ.

**ನ ಸಂಖ್ಯಾನಂ ಪರೀಮಾಣಂ ನ ತೇಜೋ ನ ಪರಾಕ್ರಮಮ್ ।**
**ನ ಬಲಂ ಯೋಗಯೋಗೀಶ ಜಾನೀಮಸ್ತೇನ ಸಮ್ಭವಮ್ ॥೬೨॥**

ಯೋಗಸ್ವರೂಪನೇ! ಯೋಗಿಗಳಿಗೆಲ್ಲರಿಗೂ ಈಶನಾದವನೇ! ನೀನು ಎಷ್ಟು ರೂಪದಲ್ಲಿರುವೆಯೆಂಬುದನ್ನು ನಾವು ತಿಳಿದವರಾಗಿಲ್ಲ. ಅಪಾರಸಂಖ್ಯೆಯಲ್ಲಿ ನಿನ್ನ ಅಪಾರವಾದ ರೂಪಗಳಿವೆ. ನಿನ್ನ ಪರಿಮಾಣ ವೆಷ್ಟೆಂಬುದನ್ನು ತಿಳಿದವರಾಗಿಲ್ಲ. ನೀನು ಅಪರಿಮೇಯನು. ನಿನ್ನ ತೇಜಸ್ಸು ಎಷ್ಟೆಂಬುದು ನಮಗೆ ತಿಳಿಯದು. ನಿನ್ನ ಪರಾಕ್ರಮವೆಷ್ಟೆಂಬುದನ್ನು ನಾವು ಅರಿತಿಲ್ಲ. ನಿನ್ನ ಬಲದ ವಿಷಯದಲ್ಲಿಯೂ ನಾವು ಅಜ್ಞರಾಗಿಯೇ ಇದ್ದೇವೆ. ನಿನ್ನ ಆವಿರ್ಭಾವವು (ಹುಟ್ಟು) ಯಾವಾಗ ಆಯಿತು? ಎಲ್ಲಿಂದ ಆಯಿತು?–ಎಂಬುದೂ ನಮಗೆ ತಿಳಿದಿರುವುದಿಲ್ಲ.

**ತ್ವದ್ಭಕ್ತಿನಿರತಾ ದೇವ ನಿಯಮೈಸ್ತ್ವಾಂ ಸಮಾಶ್ರಿತಾಃ ।**
**ಅರ್ಚಯಾಮಃ ಸದಾ ವಿಷ್ಣೋ ಪರಮೇಶಂ ಮಹೇಶ್ವರಮ್ ॥೬೩॥**

**ಋಷಯೋ ದೇವಗನ್ಧರ್ವಾ ಯಕ್ಷರಾಕ್ಷಸಪನ್ನಗಾಃ ।**
**ಪಿಶಾಚಾ ಮಾನುಷಾಶ್ಚೈವ ಮೃಗಪಕ್ಷಿಸರೀಸೃಪಾಃ ॥೬೪॥**

**ಏವಮಾದಿ ಮಯಾಸೃಷ್ಟಂ ಪೃಥಿವ್ಯಾಂ ತ್ವತ್ಪ್ರಸಾದಜಮ್ ।**

ದೇವ! ನಿನ್ನನ್ನು ಭಕ್ತಿಪೂರ್ವಕವಾಗಿ ಅರ್ಚಿಸುವುದರಲ್ಲಿಯೇ ನಾವು ಸರ್ವದಾ ನಿರತರಾಗಿರುತ್ತೇವೆ. ನಿಯಮಗಳಿಂದ ನಿನ್ನ ಧ್ಯಾನ-ನಿದಿಧ್ಯಾಸನಾದಿ ಗಳನ್ನು ಮಾಡುತ್ತಾ ನಿನ್ನನ್ನೇ ನಾವು ಸದಾ ಆಶ್ರಯಿಸಿದ್ದೇವೆ. ವಿಷ್ಣುವೇ! ಪರಮೇಶನಾದ, ಮಹೇಶ್ವರನಾದ ನಿನ್ನನ್ನು ನಾವು ಸದಾ ಅರ್ಚನೆಮಾಡು ತ್ತೇವೆ. ನಿನ್ನ ಅನುಗ್ರಹದಿಂದ ಪ್ರಾಪ್ತವಾದ ಸಾಮರ್ಥ್ಯದಿಂದಲೇ ನಾನು ಋಷಿ ಗಳನ್ನೂ, ದೇವ-ಗಂಧರ್ವರನ್ನೂ, ಯಕ್ಷ-ರಾಕ್ಷಸ-ಪನ್ನಗರನ್ನೂ, ಪಿಶಾಚ ರನ್ನೂ, ಮನುಷ್ಯರನ್ನೂ, ಮೃಗ-ಪಕ್ಷಿ-ಸರೀಸೃಪಗಳನ್ನೂ ಮತ್ತು ಇನ್ನೂ ಅನೇಕಪ್ರಾಣಿಗಳನ್ನೂ ಸೃಷ್ಟಿಸಿದ್ದೇನೆ.

**ಪದ್ಮನಾಭ ವಿಶಾಲಾಕ್ಷ ಕೃಷ್ಣ ದುಃಖಪ್ರಣಾಶನ ॥೬೫॥**

**ತ್ವಂ ಗತಿಃ ಸರ್ವಭೂತಾನಾಂ ತ್ವಂ ನೇತಾ ತ್ವಂ ಜಗದ್ಗುರುಃ ।**
**ತ್ವತ್ಪ್ರಸಾದೇನ ದೇವೇಶ ಸುಖಿನೋ ವಿಬುಧಾಃ ಸದಾ ॥೬೬॥**

ಪದ್ಮನಾಭನೇ! ವಿಶಾಲಾಕ್ಷನೇ! ಕೃಷ್ಣ! ಭಕ್ತರ ದುಃಖವನ್ನು ಹೋಗಲಾಡಿಸತಕ್ಕವನೇ! ಎಲ್ಲ ಪ್ರಾಣಿಗಳಿಗೂ ನೀನೇ ಶರಣ್ಯನು. ನೀನೇ ನೇತಾರನು (ನಾಯಕನು). ನೀನೇ ಜಗತ್ತಿಗೆಲ್ಲಾ ಜ್ಞಾನಬೋಧಕನಾದ ಗುರುವೂ ಆಗಿರುವೆ. ದೇವೇಶ! ನಿನ್ನ ಪ್ರಸಾದದಿಂದ ದೇವತೆಗಳು ಸರ್ವದಾ ಸುಖಿಗಳಾಗಿರುತ್ತಾರೆ.

**ಪೃಥಿವೀ ನಿರ್ಭಯಾ ದೇವ ತ್ವತ್ಪ್ರಸಾದಾತ್ಸದಾಭವತ್ ।**
**ತಸ್ಮಾದ್ಭವ ವಿಶಾಲಾಕ್ಷ ಯದುವಂಶವಿವರ್ಧನಃ ॥೬೭॥**

ದೇವ! ನಿನ್ನ ಪ್ರಸಾದದಿಂದಾಗಿ ಭೂದೇವಿಯು ಯಾವಾಗಲೂ ನಿರ್ಭಯಳಾಗಿಯೇ ಇದ್ದಳು. (ನಿನ್ನ ಪ್ರಸಾದದಿಂದ ಭೂಲೋಕದಲ್ಲಿ ಯಾವ ವಿಧವಾದ ಉಪದ್ರವಗಳೂ ಇಲ್ಲದೇ ಜನರು ನಿರ್ಭಯರಾಗಿ ತಮ್ಮ-ತಮ್ಮ ವರ್ಣಾಶ್ರಮಧರ್ಮಗಳನ್ನು ಆಚರಿಸುತ್ತಿದ್ದರು. ಆದರೆ ಈಗ ಪುನಃ ಭೂಮಿಯಲ್ಲಿ ಅಧರ್ಮವು ತಲೆದೋರುತ್ತಿದೆ.) ಆದುದರಿಂದ ವಿಶಾಲಾಕ್ಷನೇ! ಭೂಮಿಯಲ್ಲಿ ಯದುವಂಶದಲ್ಲಿ ನೀನು ಜನ್ಮತಾಳಿ ಆ ಯದುವಂಶದ ಕೀರ್ತಿಯನ್ನು ಹೆಚ್ಚಿಸುವವನಾಗು.

**ಧರ್ಮಸಂಸ್ಥಾಪನಾರ್ಥಾಯ ದೈತ್ಯಾನಾಂ ಚ ವಧಾಯ ಚ ।**
**ಜಗತೋ ಧಾರಣಾರ್ಥಾಯ ವಿಜ್ಞಾಪ್ಯಂ ಕುರು ಮೇ ವಿಭೋ ॥೬೮॥**

ಪ್ರಭುವೇ! ದೈತ್ಯರನ್ನು ವಧಿಸುವ ಸಲುವಾಗಿಯೂ, ಪುನಃ ಧರ್ಮದ ಸಂಸ್ಥಾಪನೆಗಾಗಿಯೂ, ಜಗತ್ತಿನ ಉದ್ಧಾರಾರ್ಥವಾಗಿಯೂ ನನ್ನ ವಿಜ್ಞಾಪನೆಯನ್ನು ನಡೆಸಿಕೊಡು ಮಹಾನುಭಾವ!

**ಯತ್ತತ್ಪರಮಕಂ ಗುಹ್ಯಂ ತ್ವತ್ಪ್ರಸಾದಾದಿದಂ ವಿಭೋ ।**
**ವಾಸುದೇವ ತದೇತತ್ತೇ ಮಯೋದ್ಗೀತಂ ಯಥಾತಥಮ್ ॥೬೯॥**

ವಾಸುದೇವನೇ! ನಿನ್ನ ಅವತಾರದ ವಿಷಯವು ಪರಮಗುಹ್ಯವಾದುದೆಂಬುದು ನಿಜ. ಕೇವಲ ನಿನ್ನ ಪ್ರಸನ್ನತೆಯಿಂದಾಗಿ (ಅನುಗ್ರಹದಿಂದಾಗಿ) ನನಗೆ ನಿನ್ನ ಅವತಾರದ ವಿಷಯವು ತಿಳಿದುಬಂದು, ಅದು ಹೇಗೆ ತಿಳಿಯಿತೋ ಹಾಗೆಯೇ ಅದನ್ನು ನಿನ್ನ ಮುಂದೆ ಹಾಡಿದೆನು.

**ಸೃಷ್ಟ್ವಾ ಸಂಕರ್ಷಣಂ ದೇವಂ ಸ್ವಯಮಾತ್ಮಾನಮಾತ್ಮನಾ ।**
**ಕೃಷ್ಣ ತ್ವಮಾತ್ಮನಾಸ್ರಾಕ್ಷೀಃ ಪ್ರದ್ಯುಮ್ನಂ ಚಾತ್ಮಸಮ್ಭವಮ್ ॥೭೦॥**

ಕೃಷ್ಣ! ನಿನ್ನ ಆತ್ಮದಿಂದಲೇ ನಿನ್ನಂತಹ ಮತ್ತೊಂದು ಪ್ರತಿಕೃತಿಯನ್ನು ಸೃಷ್ಟಿಸಿ ಅದಕ್ಕೆ ಸಂಕರ್ಷಣನೆಂದು ಹೆಸರಿಟ್ಟೆ. ಪುನಃ ನೀನು ನಿನ್ನಿಂದಲೇ ಪ್ರದ್ಯುಮ್ನನೆಂಬ ಮಗನನ್ನು ಸೃಷ್ಟಿಸಿಕೊಂಡೆ.

**ಪ್ರದ್ಯುಮ್ನಾದನಿರುದ್ಧಂ ತ್ವಂ ಯಂ ವಿದುರ್ವಿಷ್ಣುಮವ್ಯಯಮ್ ।**
**ಅನಿರುದ್ಧೋಽಸೃಜನ್ಮಾಂ ವೈ ಬ್ರಹ್ಮಾಣಂ ಲೋಕಧಾರಿಣಮ್ ॥೭೧॥**

ಪ್ರದ್ಯುಮ್ನನಿಂದ ಅನಿರುದ್ಧನನ್ನು ಸೃಷ್ಟಿಸಿದೆ. ಅನಿರುದ್ಧನನ್ನು ಅವ್ಯಯನಾದ ಮಹಾವಿಷ್ಣುವೆಂದು ಮಹಾತ್ಮರು ತಿಳಿದುಕೊಂಡಿರುತ್ತಾರೆ. ಅನಂತರ ಅನಿರುದ್ಧನು ಲೋಕವನ್ನು ಧರಿಸಿರತಕ್ಕ ಬ್ರಹ್ಮನಾಮಕನಾದ ನನ್ನನ್ನು ಸೃಷ್ಟಿಸಿದನು.

**ವಾಸುದೇವಮಯಃ ಸೋಽಹಂ ತ್ವಯೈವಾಸ್ಮಿ ವಿನಿರ್ಮಿತಃ ।**
**ವಿಭಜ್ಯ ಭಾಗಶೋಽತ್ಮಾನಂ ವ್ರಜ ಮಾನುಷತಾಂ ವಿಭೋ ॥೭೨॥**

ದೇವೇಶ! ಈ ರೀತಿಯಲ್ಲಿ ನನ್ನ ಸೃಷ್ಟಿಗೂ ನೀನೇ ಕಾರಣನಾಗಿರುವೆ. ನಿನ್ನಿಂದಲೇ ನಾನು ಸೃಷ್ಟಿಸಲ್ಪಟ್ಟಿದ್ದೇನೆ. ಆದುದರಿಂದ ನಾನು ವಾಸುದೇವಮಯನಾಗಿದ್ದೇನೆ. ಈಗ ನೀನು ನಿನ್ನ ಶರೀರವನ್ನು ಇಲ್ಲಿ ವಿಭಾಗಿಸಿಕೊಂಡಂತೆಯೇ ಭೂಲೋಕದಲ್ಲಿಯೂ ವಾಸುದೇವ-ಸಂಕರ್ಷಣ- ಪ್ರದ್ಯುಮ್ನ ಮತ್ತು ಅನಿರುದ್ಧ–ಎಂದು ನಾಲ್ಕು ಪ್ರಕಾರವಾಗಿ ಪುನಃ ವಿಭಾಗಿಸಿಕೊಂಡು ಪೃಥ್ವಿಯಲ್ಲಿ ಮನುಷ್ಯನಾಗಿ ಅವತರಿಸು.

**ತತ್ರಾಸುರವಧಂ ಕೃತ್ವಾ ಸರ್ವಲೋಕಸುಖಾಯ ವೈ ।**
**ಧರ್ಮಂ ಪ್ರಾಪ್ಯ ಯಶಃ ಪ್ರಾಪ್ಯ ಯೋಗಂ ಪ್ರಾಪ್ಸ್ಯಸಿ ತತ್ತ್ವತಃ ॥೭೩॥**

ಸರ್ವಲೋಕಗಳ ಸುಖಕ್ಕೋಸ್ಕರ ಭೂಲೋಕದಲ್ಲಿ ಅಸುರರ ವಧೆಯನ್ನು ಮಾಡಿ, ಧರ್ಮವನ್ನು ಸಂಸ್ಥಾಪಿಸಿ, ಯಶಸ್ಸನ್ನು ಪಡೆದು ಪುನಃ ನಿನ್ನ ಪಾರಮಾರ್ಥಿಕಸ್ವರೂಪದಲ್ಲಿ ಸೇರಿಹೋಗುವೆ.

**ತ್ವಾಂ ಹಿ ಬ್ರಹ್ಮರ್ಷಯೋ ಲೋಕೇ ದೇವಾಶ್ಚಾಮಿತವಿಕ್ರಮ ।**
**ತೈಸ್ತೈರ್ಹಿ ನಾಮಭಿರ್ಯುಕ್ತಾ ಗಾಯನ್ತಿ ಪರಮಾತ್ಮಕಮ್ ॥೭೪॥**

ಅಮಿತಪರಾಕ್ರಮಿಯಾದ ಪರಮೇಶ್ವರನೇ! ಲೋಕದಲ್ಲಿ ಮಹರ್ಷಿ

ಗಳೂ ಮತ್ತು ದೇವತೆಗಳೂ ಏಕಾಗ್ರಚಿತ್ತರಾಗಿ ಲೀಲಾನುಸಾರಿಯಾದ ಹೆಸರುಗಳ ಮೂಲಕವಾಗಿ ಪರಮಾತ್ಮನಾದ ನಿನ್ನನ್ನು ಗಾಯನಮಾಡುತ್ತಾರೆ.

**ಸ್ಥಿತಾಶ್ಚ ಸರ್ವೇ ತ್ವಯಿ ಭೂತಸಂಘಾಃ**
**ಕೃತ್ವಾಶ್ರಯಂ ತ್ವಾಂ ವರದಂ ಸುಬಾಹೋ ।**
**ಅನಾದಿಮಧ್ಯಾನ್ತಮಪಾರಯೋಗಂ**
**ಲೋಕಸ್ಯ ಸೇತುಂ ಪ್ರವದನ್ತಿ ವಿಪ್ರಾಃ ॥೭೫॥**

ಸುಬಾಹುವೇ! ವರದಾಯಕನಾದ ಪ್ರಭುವಾದ ನಿನ್ನನ್ನು ಆಶ್ರಯಿಸಿ ಎಲ್ಲ ಪ್ರಾಣಿಸಮೂಹಗಳೂ ನಿನ್ನಲ್ಲಿಯೇ ನೆಲೆಸಿಬಿಟ್ಟಿವೆ. ಆದಿ, ಮಧ್ಯ ಮತ್ತು ಅಂತಗಳು ಇಲ್ಲದವನೆಂದೂ, ಅಮಿತವಾದ ಯೋಗಶಕ್ತಿಯಿರುವವನೆಂದೂ, ಸಂಸಾರವನ್ನು ದಾಟಲು ಇಚ್ಛಿಸುವ ಜನರಿಗೆ ಸೇತುರೂಪನಾಗಿರುವನೆಂದೂ– ಬ್ರಾಹ್ಮಣರು ನಿನ್ನ ಗುಣಗಳನ್ನು ಗಾನಮಾಡುತ್ತಾರೆ."

ಠ೫ನೆಯ ಅಧ್ಯಾಯವು ಮುಗಿಯಿತು.

ಠ೬ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ನರ-ನಾರಾಯಣರ ಮಹಿಮಾಪ್ರತಿಪಾದನೆ

ಭೀಷ್ಮನು ದುರ್ಯೋಧನನಿಗೆ ಹೇಳುತ್ತಾನೆ :

"ದುರ್ಯೋಧನ! ಅನಂತರ ಭಗವಂತನಾದ, ಲೋಕೇಶ್ವರರಿಗೂ ಈಶ್ವರನಾಗಿರುವ ದೇವನು ಸ್ನೇಹಪೂರ್ಣವಾಗಿಯೂ ಮತ್ತು ಗಂಭೀರ ವಾಗಿಯೂ ಇದ್ದ ಮಾತಿನಿಂದ ಬ್ರಹ್ಮನಿಗೆ ಪ್ರತ್ಯುತ್ತರಿಸಿದನು :

**ವಿದಿತಂ ತಾತ ಯೋಗಾನ್ಮೇ ಸರ್ವಮೇತತ್ತವೇಪ್ಸಿತಮ್ ।**
**ತಥಾ ತದ್ಭವಿತೇತ್ಯುಕ್ತ್ವಾ ತತ್ರೈವಾನ್ತರಧೀಯತ ॥೨॥**

"ತಾತ! ಈ ಎಲ್ಲ ನಿನ್ನ ಆಶಯಗಳೂ ನನಗೆ ಯೋಗದ ಮೂಲಕವೇ ತಿಳಿದಿರುತ್ತದೆ. ನಿನ್ನ ಪ್ರಾರ್ಥನೆಯಂತೆಯೇ ಎಲ್ಲವೂ ನಡೆಯುವುದು"– ಹೀಗೆಂಬುದಾಗಿ ಹೇಳಿ ಭಗವಂತನು ಅಂತರ್ಧಾನಹೊಂದಿದನು. ವಿಮಾನ ದಲ್ಲಿ ಮಹಾತೇಜಸ್ಸೊಂದು ಕಂಗೊಳಿಸುತ್ತಿದ್ದು ಅದನ್ನೇ ಬ್ರಹ್ಮನು ನಾನಾ ಪ್ರಕಾರವಾಗಿ ಪ್ರಾರ್ಥಿಸಿದುದನ್ನೂ, ಅನಂತರ ತೇಜೋಮಯನಾದ

ಭಗವಂತನು ಬ್ರಹ್ಮನ ಪ್ರಾರ್ಥನೆಯಂತೆ ಭೂಮಿಯಲ್ಲಿ ಅವತರಿಸಲು ಆಶ್ವಾಸನೆಯನ್ನಿತ್ತು ಮಾಯವಾದುದನ್ನೂ ಕಂಡು ಬ್ರಹ್ಮನ ಸುತ್ತಲೂ ಬದ್ಧಾಂಜಲಿಗಳಾಗಿ ನಿಂತಿದ್ದ ದೇವರ್ಷಿ-ಗಂಧರ್ವರು ಅಚ್ಚರಿಗೊಂಡರು. ಕುತೂಹಲಾವಿಷ್ಟರಾದ ಅವರೆಲ್ಲರೂ ಪಿತಾಮಹನನ್ನೇ ಕೇಳಿದರು :

"ಪ್ರಭುವೇ! ಭಗವಂತನಾದ ನೀನು ವಿನಯಪೂರ್ವಕವಾಗಿ ಯಾರಿಗೆ ನಮಸ್ಕರಿಸಿದೆ? ನಿನ್ನಿಂದ ನಮಸ್ಕರಿಸಲ್ಪಟ್ಟ ಆ ಮಹಾನುಭಾವನು ಯಾರು? ನಮಸ್ಕರಿಸಿದುದು ಮಾತ್ರವಲ್ಲ; ವಿಮಾನಾರೂಢನಾಗಿ ತೇಜೋಮಯ



ನಾಗಿದ್ದ ಅವನನ್ನು ನೀನು ಶ್ರೇಷ್ಠವಾದ ಮತ್ತು ಅತ್ಯಂತ ಭಕ್ತಿ-ಗೌರವಯುಕ್ತ ವಾದ ಮಾತುಗಳಿಂದ ಸ್ತುತಿಸಿದೆ. ನಿನಗಿಂತಲೂ ಅಧಿಕನಾದ, ನಿನ್ನ ನಮ

ಸ್ಕಾರಕ್ಕೂ ಮತ್ತು ಸ್ತೋತ್ರಕ್ಕೂ ಪಾತ್ರನಾದ ಆ ಮಹಾನುಭಾವನು ಯಾರು ಎಂಬುದನ್ನು ನಾವು ನಿನ್ನಿಂದಲೇ ಕೇಳಿ ತಿಳಿಯಬೇಕೆಂದಿರುತ್ತೇವೆ.”

ಹೀಗೆಂದು ಪ್ರಾರ್ಥಿಸಲಾಗಿ ಭಗವಂತನಾದ ಪಿತಾಮಹನು ಎಲ್ಲ ದೇವ-ಬ್ರಹ್ಮರ್ಷಿ-ಗಂಧರ್ವರನ್ನೂ ಕುರಿತು ಮಧುರವಾದ ಈ ಮಾತುಗಳನ್ನು ಹೇಳಿದನು :

“ದೇವರ್ಷಿಗಳೇ! ಯಾವುದು ತತ್ತ್ವದ ವಾಚಿಯೋ, ಭೂತ-ಭವಿಷ್ಯ-ದ್ವರ್ತಮಾನಕಾಲಗಳಿಗೂ ಅತೀತವಾದುದೋ, ಸಕಲಪ್ರಾಣಿಗಳೂ ಆತ್ಮವಾಗಿ ಉಳ್ಳದ್ದೋ, ನಿರಾಕಾರದಲ್ಲಿ ಪರಬ್ರಹ್ಮವೆನಿಸಿಕೊಂಡು ಸಾಕಾರದಲ್ಲಿ ಪ್ರಭು ವೆನಿಸಿಕೊಳ್ಳುವುದೋ–ಅಂತಹ ಬ್ರಹ್ಮವಸ್ತುವಿನೊಡನೆ ಅಥವಾ ಪ್ರಸನ್ನನಾದ ಪ್ರಭುವಿನೊಡನೆ ನಾನು ಸಂಭಾಷಣೆಯನ್ನು ಮಾಡಿದೆನು. ಜಗತ್ತಿನ ಅನು ಗ್ರಹಾರ್ಥವಾಗಿ, ಜಗತ್ತಿನ ಕಲ್ಯಾಣಕ್ಕಾಗಿ ನಾನು ಜಗತ್ಪತಿಯನ್ನು ಈ ರೀತಿ ಕೇಳಿಕೊಂಡೆನು :

**ಮಾನುಷಂ ಲೋಕಮಾತಿಷ್ಠ ವಾಸುದೇವ ಇತಿ ಶ್ರುತಃ ।**
**ಅಸುರಾಣಾಂ ವಧಾರ್ಥಾಯ ಸಮ್ಭವಸ್ವ ಮಹೀತಲೇ ॥೮॥**

“ವಾಸುದೇವ–ಎಂದು ವಿಖ್ಯಾತನಾಗಿ ಸ್ವಲ್ಪಕಾಲ ಮನುಷ್ಯಲೋಕದಲ್ಲಿ ಇರುವವನಾಗು. ಅಸುರರ ವಧೆಗೋಸ್ಕರ ಭೂಮಿಯಲ್ಲಿ ಅವತರಿಸು.”

ದೇವರ್ಷಿಗಳೇ! ಮನುಷ್ಯಲೋಕದಲ್ಲಿ ಅಸುರರಿದ್ದಾರೆಯೇ?–ಎಂದು ನೀವು ವಿಸ್ಮಯಪಡಬೇಕಾಗಿಲ್ಲ. ದೇವತೆಗಳೊಡನೆ ಮಾಡಿದ ಯುದ್ಧದಲ್ಲಿ ಸಂಹೃತರಾದ ದೈತ್ಯ-ದಾನವ-ರಾಕ್ಷಸರು ಘೋರರೂಪಿಗಳಾಗಿ ಮಹಾಬಲ ರಾಗಿ ಮನುಷ್ಯರ ಮಧ್ಯದಲ್ಲಿ ಜನ್ಮತಾಳಿದ್ದಾರೆ. (ಯದ್ಯಪಿ ಅವರು ಮನುಷ್ಯ ರಂತೆ ಕಂಡರೂ ಅವರ ಗುಣ-ಕರ್ಮಗಳೆಲ್ಲವೂ ರಾಕ್ಷಸರದೇ ಆಗಿವೆ.) ಅಂತಹ ಮನುಷ್ಯರೂಪಿಗಳಾದ ಅಸುರರ ವಧಾರ್ಥವಾಗಿ ವಿಶ್ವವನ್ನೇ ವಶದಲ್ಲಿಟ್ಟು ಕೊಂಡಿರುವ ಭಗವಂತನು ನರನಿಂದ ಕೂಡಿದವನಾಗಿ ಮನುಷ್ಯಯೋನಿ ಯಲ್ಲಿ ಜನಿಸಿ ಭೂಮಿಯಲ್ಲಿ ಸಂಚರಿಸುತ್ತಾನೆ. ಭೂಮಿಯಲ್ಲಿ ಜೊತೆಯಾಗಿ ಅವತರಿಸಿದ ಪುರಾತನಮುನಿಶ್ರೇಷ್ಠರಾದ, ಒಟ್ಟುಗೂಡಿದ ದೇವತೆಗಳಿಗೂ ಅಜೇಯರಾದ, ಮಿತಿಯಿಲ್ಲದ ಕಾಂತಿಯುಳ್ಳ ನರ-ನಾರಾಯಣರೇ ಈಗ ಭೂಮಿಯಲ್ಲಿ ಅವತರಿಸುವರು. ಮೂಢರಾದವರು ಮಾತ್ರವೇ ನರ-

ನಾರಾಯಣರ್ಷಿಗಳನ್ನು ತಿಳಿದುಕೊಂಡಿರುವುದಿಲ್ಲ. ಸಕಲಜಗತ್ತಿಗೂ ಪ್ರಭು ವಾದ ನಾನು ವಾಸುದೇವನ ಜ್ಯೇಷ್ಠಪುತ್ರನಾಗಿರುತ್ತೇನೆ. ಸರ್ವಲೋಕ ಮಹೇಶ್ವರನಾದ ಆ ವಾಸುದೇವನು ನಿಮಗೂ ಸಹ ಆರಾಧಿಸಲು ಯೋಗ್ಯನೇ ಆಗಿರುತ್ತಾನೆ. ಸುರಸತ್ತಮರೇ! ಶಂಖ-ಚಕ್ರ-ಗದಾಧರನಾದ ಮಹಾವೀರ್ಯನಾದ ವಾಸುದೇವನು 'ಮನುಷ್ಯಮಾತ್ರದವನು' ಎಂದು ಯಾವಾಗಲೂ ಯಾವ ಕಾರಣದಿಂದಲೂ ಅನಾದರಣೆಮಾಡಬಾರದು.

**ಏತತ್ಪರಮಕಂ ಗುಹ್ಯಮೇತತ್ಪರಮಕಂ ಪದಮ್ ।**
**ಏತತ್ಪರಮಕಂ ಬ್ರಹ್ಮ ಏತತ್ಪರಮಕಂ ಯಶಃ ।**
**ಏತದಕ್ಷರಮವ್ಯಕ್ತಮೇತದ್ವೈ ಶಾಶ್ವತಂ ಮಹಃ ॥೧೫॥**

ಈ ಬ್ರಹ್ಮವಸ್ತುವು ಪರಮಗುಹ್ಯವಾದುದು. ಇದೇ ಅತ್ಯಂತ ಶ್ರೇಷ್ಠವಾದ ಸ್ಥಾನವು. ಇದೇ ಶ್ರೇಷ್ಠವಾದ ಬ್ರಹ್ಮವೂ ಆಗಿದೆ. ಇದೇ ಶ್ರೇಷ್ಠವಾದ ಯಶಸ್ಸು. ಇದು ವಿನಾಶವೇ ಇಲ್ಲದ ಅಕ್ಷರವಸ್ತು. ಇದು ಅವ್ಯಕ್ತವಾದುದು. ಇದೇ ಶಾಶ್ವತವಾದ ಸನಾತನವಾದ ತೇಜಸ್ಸೂ ಆಗಿದೆ.

**ಯತ್ತತ್ಪುರುಷಸಂಜ್ಞಂ ವೈ ಗೀಯತೇ ಜ್ಞಾಯತೇ ನ ಚ ॥೧೬॥**
**ಏತತ್ಪರಮಕಂ ತೇಜ ಏತತ್ಪರಮಕಂ ಸುಖಮ್ ।**
**ಏತತ್ಪರಮಕಂ ಸತ್ಯಂ ಕೀರ್ತಿತಂ ವಿಶ್ವಕರ್ಮಣಾ ॥೧೭॥**

ಯಾವ ಪರಬ್ರಹ್ಮವಸ್ತುವು 'ಪುರುಷ' ಎಂಬ ಸಂಜ್ಞೆಯನ್ನು ಹೊಂದಿರುವುದೋ ಅದನ್ನು ಸ್ತೋತ್ರಮಾಡಲು ಸಾಧ್ಯವಾಗುತ್ತದೆಯೇ ಹೊರತು ಆ ಪುರುಷನ ಸ್ವರೂಪವನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ವಿಶ್ವಕರ್ಮನು ಈ ಬ್ರಹ್ಮವಸ್ತುವನ್ನು 'ಶ್ರೇಷ್ಠವಾದ ತೇಜಸ್ಸು ; ಪರಮ ಸುಖಸ್ವರೂಪ ; ಶ್ರೇಷ್ಠವಾದ ಸತ್ಯಸ್ವರೂಪ'–ಎಂದೇ ಕೀರ್ತನೆಮಾಡಿದ್ದಾನೆ. ಆದುದರಿಂದ ಇಂದ್ರಸಹಿತರಾದ ದೇವತೆಗಳೂ ಮತ್ತು ಲೋಕಗಳ ಪ್ರಜೆಗಳೂ ಅಮಿತವಿಕ್ರಮನಾದ ಪ್ರಭುವಾದ ವಾಸುದೇವನನ್ನು–'ಇವನು ಕೇವಲ ಮನುಷ್ಯ'–ಎಂದು ಅನಾದರಿಸಬಾರದು.

**ಯಶ್ಚ ಮಾನುಷಮಾತ್ರೋಽಯಮಿತಿ ಬ್ರೂಯಾತ್ಸ ಮನ್ದಧೀಃ ।**
**ಹೃಷೀಕೇಶಮವಜ್ಞಾನಾತ್ತಮಾಹುಃ ಪುರುಷಾಧಮಮ್ ॥೧೮॥**

ಸಕಲೇಂದ್ರಿಯಗಳಿಗೂ ಸ್ವಾಮಿಯಾದ ಆ ವಾಸುದೇವನನ್ನು ಅವಜ್ಞಾನದಿಂದ (ತಿರಸ್ಕಾರಬುದ್ಧಿಯಿಂದ) ಯಾವನು 'ಮಾನುಷಮಾತ್ರನಿವನು' ಎಂದು ಹೇಳುತ್ತಾನೆಯೋ–ಅವನು ಮಂದಬುದ್ಧಿಯವನೇ ಸರಿ. ಅವನನ್ನು ಪುರುಷಾಧಮನೆಂದು ವಿದ್ವಾಂಸರು ಹೇಳುತ್ತಾರೆ.

**ಯೋಗಿನಂ ತಂ ಮಹಾತ್ಮಾನಃ ಪ್ರವಿಷ್ಟಂ ಮಾನುಷೀಂ ತನುಮ್ ।**
**ಅವಮನ್ಯೇದ್ವಾಸುದೇವಂ ತಮಾಹುಸ್ತಾಮಸಂ ಜನಾಃ ॥೨೦॥**

ಯೋಗಿಯಾದ, ಮಹಾತ್ಮನಾದ, ಲೋಕೋದ್ಧಾರಕ್ಕಾಗಿ ಮನುಷ್ಯ ಶರೀರವನ್ನು ಪ್ರವೇಶಿಸಿರುವ ವಾಸುದೇವನನ್ನು ಯಾವನು 'ಇವನು ಕೇವಲ ಮನುಷ್ಯ' ಎಂದು ಅನಾದರಣೆಮಾಡುವನೋ ಅವನನ್ನು 'ತಾಮಸ' ಎಂದು ಸಜ್ಜನರು ಹೇಳುತ್ತಾರೆ.

**ದೇವಂ ಚರಾಚರಾತ್ಮಾನಂ ಶ್ರೀವತ್ಸಾಙ್ಕಂ ಸುವರ್ಚಸಮ್ ।**
**ಪದ್ಮನಾಭಂ ನ ಜಾನಾತಿ ತಮಾಹುಸ್ತಾಮಸಂ ಬುಧಾಃ ॥೨೧॥**

ದೇವದೇವನಾದ, ಎಲ್ಲ ಚರಾಚರವಸ್ತುಗಳಲ್ಲಿಯೂ ಆತ್ಮಸ್ವರೂಪನಾಗಿರುವ, ಶ್ರೀವತ್ಸಚಿಹ್ನೆಯಿಂದ ಭೂಷಿತನಾದ, ಸುವರ್ಚಸನಾದ ಪದ್ಮನಾಭನನ್ನು ಯಾವನು ತಿಳಿದುಕೊಳ್ಳುವುದಿಲ್ಲವೋ–ಅವನನ್ನು ಪಂಡಿತರು 'ತಾಮಸ' ಎಂದು ಹೇಳುತ್ತಾರೆ.

**ಕಿರೀಟಕೌಸ್ತುಭಧರಂ ಮಿತ್ರಾಣಾಮಭಯಂಕರಮ್ ।**
**ಅವಜಾನನ್ಮಹಾತ್ಮಾನಂ ಘೋರೇ ತಮಸಿ ಮಜ್ಜತಿ ॥೨೨॥**

ಕಿರೀಟವನ್ನು ಶಿರಸ್ಸಿನಲ್ಲಿಯೂ–ಕೌಸ್ತುಭಮಣಿಯನ್ನು ವಕ್ಷಸ್ಥಲದಲ್ಲಿಯೂ ಧರಿಸಿರುವ, ಮಿತ್ರರಿಗೆ (ಭಕ್ತರಿಗೆ) ಅಭಯಪ್ರದನಾದ, ಮಹಾತ್ಮನಾದ ವಾಸುದೇವನನ್ನು ಯಾವನು ಅವಹೇಳನಮಾಡುತ್ತಾನೆಯೋ–ಅವನು ಘೋರವಾದ ತಮೋರೂಪವಾದ ನರಕದಲ್ಲಿ ಮುಳುಗಿಹೋಗುತ್ತಾನೆ.

ಸುರೋತ್ತಮರೇ! ಈ ರೀತಿಯಾಗಿ ಭಗವತ್ತತ್ತ್ವವನ್ನು ತಿಳಿದುಕೊಂಡು ಲೋಕದ ಈಶ್ವರರಿಗೆಲ್ಲರಿಗೂ ಈಶ್ವರನಾದ ವಾಸುದೇವನನ್ನು ಎಲ್ಲ ಲೋಕದವರೂ ಗೌರವಿಸಿ ನಮಸ್ಕರಿಸಬೇಕು."

ದುರ್ಯೋಧನ! ಭಗವಂತನಾದ ಸರ್ವಭೂತಾತ್ಮನಾದ ಚತುರ್ಮುಖನು ಋಷಿಗಣಗಳಿಂದ ಕೂಡಿದ ದೇವತೆಗಳಿಗೆ ಹೀಗೆಂದು ಹೇಳಿದ ಬಳಿಕ ಅವರೆಲ್ಲರನ್ನೂ ಅವರವರ ನಿವಾಸಗಳಿಗೆ ಕಳುಹಿಸಿಕೊಟ್ಟು ತನ್ನ ಲೋಕಕ್ಕೆ



ಹೊರಟುಹೋದನು. ಅನಂತರ ಬ್ರಹ್ಮನು ಹೇಳಿದ ಆ ಗೀತವನ್ನು ಕೇಳಿ ದೇವರ್ಷಿ-ಗಂಧರ್ವಾಪ್ಸರೆಯರು ಪರಮಪ್ರೀತರಾಗಿ ತಮ್ಮ-ತಮ್ಮ ಲೋಕಗಳಿಗೆ ತೆರಳಿದರು. ಹಿಂದೊಮ್ಮೆ ಶುದ್ಧಾಂತಃಕರಣರಾದ ಋಷಿಗಳ ಗುಂಪಿನಲ್ಲಿ ಪುರಾತನನಾದ ವಾಸುದೇವನ ಮಾಹಾತ್ಮ್ಯವನ್ನು ಹೇಳುತ್ತಿದ್ದಾಗ ಅದೇ ಸಮಯದಲ್ಲಿ ಅಲ್ಲಿದ್ದ ನಾನು ಅವರಿಂದ ಈ ವಿಷಯವನ್ನು ಕೇಳಿ ತಿಳಿದುಕೊಂಡೆನು. ಇದೂ ಅಲ್ಲದೇ ಮುಂದೆ ನಾನು ಇದೇ ಕಥೆಯನ್ನು ಜಮದಗ್ನಿಯ

ಮಗನಾದ ಪರಶುರಾಮ, ಧೀಮಂತನಾದ ಮಾರ್ಕಂಡೇಯ, ವ್ಯಾಸ, ನಾರದ–ಇವರ ಮುಖಾರವಿಂದಗಳಿಂದಲೂ ಕೇಳಿದೆನು. ಈ ದೇವರಹಸ್ಯ ವನ್ನು ಕೇಳಿ ಮತ್ತು ಧ್ಯಾನ ಮತ್ತು ನಿಧಿಧ್ಯಾಸನಗಳಿಂದ ತತ್ತ್ವಾರ್ಥವನ್ನೂ ತಿಳಿದುಕೊಂಡು ಶ್ರೀಕೃಷ್ಣನನ್ನು ಪುರಾತನನಾದ ವಾಸುದೇವನೆಂದೂ, ಮಹಾತ್ಮನಾದ ನಾರಾಯಣನೆಂದೂ, ಪ್ರಭುವೆಂದೂ, ಲೋಕದ ಈಶ್ವರ ರಿಗೂ ಈಶ್ವರನೆಂದೂ ತಿಳಿದುಕೊಂಡಿರುತ್ತೇನೆ.

**ಯಸ್ಯ ಚೈವಾತ್ಮಜೋ ಬ್ರಹ್ಮಾ ಸರ್ವಸ್ಯ ಜಗತಃ ಪಿತಾ ।**
**ಕಥಂ ನ ವಾಸುದೇವೋಽಯಮರ್ಚ್ಯಶ್ಚೇಜ್ಯಶ್ಚ ಮಾನವೈಃ ॥೨೯॥**

ಸಕಲಜಗತ್ತುಗಳಿಗೂ ತಂದೆಯಾದ ಬ್ರಹ್ಮನೇ ವಾಸುದೇವನ ಮಗ ನಾಗಿ ರುವಾಗ ಅಂತಹ ಭಗವಂತನಾದ ವಾಸುದೇವನು ಮಾನವರಿಗೇಕೆ ಆದರ ಣೀಯನೂ ಪೂಜ್ಯನೂ ಆಗುವುದಿಲ್ಲ? ಸರ್ವಲೋಕೇಶ್ವರೇಶ್ವರನಾದ ಅವನು ಮನುಷ್ಯರೆಲ್ಲರಿಗೂ ಪೂಜ್ಯನೂ ಅರ್ಚನೀಯನೂ ಆಗಿದ್ದಾನೆ.

ವಾಸುದೇವನೊಡನೆ ಯುದ್ಧಕ್ಕೆ ತೊಡಗಬೇಡವೆಂದು ವೇದಪಾರಂಗತ ರಾದ ಮುನಿಗಳೂ ನಿನಗೆ ಹೇಳಿದ್ದಾರೆ. ನಾನೂ ಸಹ ಅನೇಕಬಾರಿ ಶಾರ್ಙ್ಗ ಧನುರ್ಧರನಾದ ವಾಸುದೇವನೊಡನೆ ವಿರೋಧವನ್ನು ಕಟ್ಟಿಕೊಳ್ಳಬಾರ ದೆಂದು ಹೇಳಿದ್ದೇನೆ. ವಾಸುದೇವನ ಪ್ರೀತಿಗೆ ಪಾತ್ರರಾಗಿರುವ ಪಾಂಡವರೊಡ ನೆಯೂ ದ್ವೇಷವನ್ನು ಕಟ್ಟಿಕೊಳ್ಳುವುದು ಉಚಿತವಲ್ಲವೆಂದೂ ನಿನಗೆ ನಾನು ಅನೇಕಬಾರಿ ಹೇಳಿರುವೆನು. ಕೇವಲ ಮೋಹಪರವಶನಾಗಿದ್ದುದರಿಂದ ನನ್ನ ಮಾತನ್ನು ನೀನು ಕೇಳಲಿಲ್ಲ. ನಿನ್ನನ್ನು ಮನುಷ್ಯರೂಪದಲ್ಲಿ ಅವತರಿಸಿರುವ ಕ್ರೂರಿಯಾದ ರಾಕ್ಷಸನೆಂದೇ ನಾನು ಭಾವಿಸಿದ್ದೇನೆ. ಏಕೆಂದರೆ : ನಿನ್ನ ಬುದ್ಧಿಯು ರಾಕ್ಷಸರ ಬುದ್ಧಿಯಂತೆಯೇ ತಮೋಗುಣದಿಂದ ಪೂರ್ಣವಾಗಿದೆ. ಎರಡನೆಯದಾಗಿ : ನೀನು ಗೋವಿಂದನನ್ನೂ ಪಾಂಡವಮಧ್ಯಮನಾದ ಧನಂಜಯನನ್ನೂ ದ್ವೇಷಿಸುತ್ತಿರುವೆ. ಅವರಿಬ್ಬರೂ ನರ-ನಾರಾಯಣರೆಂಬ ದೇವತೆಗಳೇ ಆಗಿರುತ್ತಾರೆ. ನಿನ್ನನ್ನು ಬಿಟ್ಟರೆ ಬೇರೆ ಯಾವ ಮನುಷ್ಯನು ತಾನೇ ದೇವತೆಗಳಾದ ಅವರನ್ನು ದ್ವೇಷಿಸಿಯಾನು? (ನೀನು ದೇವತೆಗಳನ್ನು ದ್ವೇಷಿಸುತ್ತಿರುವುದರಿಂದ ನೀನೊಬ್ಬ ಕ್ರೂರಿಯಾದ ರಾಕ್ಷಸನೇ ಇರಬಹು ದೆಂಬುದು ನನ್ನ ಅಭಿಮತವೂ ಆಗಿದೆ.)

ದುರ್ಯೋಧನ! ಆದುದರಿಂದ ನಿನಗೆ ಈ ಮಾತನ್ನು ಸ್ಪಷ್ಟವಾಗಿ ಹೇಳಲು ಇಚ್ಛಿಸುತ್ತೇನೆ. ಶ್ರೀಕೃಷ್ಣನನ್ನು ಸಾಮಾನ್ಯಮನುಷ್ಯನೆಂದು ಭಾವಿಸ ಬೇಡ. ಅವನು ಶಾಶ್ವತನು, ಸನಾತನನು, ಅವ್ಯಯನು, ಸರ್ವಲೋಕಸ್ವರೂ ಪನು, ನಿತ್ಯನು, ಸಕಲಜಗತ್ತನ್ನೂ ಶಾಸನಮಾಡತಕ್ಕವನು. ಬ್ರಹ್ಮಾಂಡವನ್ನೇ ಧರಿಸಿರತಕ್ಕವನು ಮತ್ತು ಅಚಲನು. ಮೂರು ಲೋಕಗಳನ್ನೂ ಧರಿಸಿರ ತಕ್ಕವನು. ಚರಾಚರಗಳೆಲ್ಲಕ್ಕೂ ಗುರುವು ಮತ್ತು ಪ್ರಭುವು. ಯೋಧನೂ, ಜಯವೂ ಮತ್ತು ಜಯಗಳಿಸುವವನೂ ಅವನೇ ಆಗಿದ್ದಾನೆ. ಸರ್ವಪ್ರಕೃತಿ ಸ್ವರೂಪನೂ ಮತ್ತು ಸರ್ವಪ್ರಕೃತಿಗಳಿಗೂ ಈಶ್ವರನೂ ಸಹ ಅವನೇ ಆಗಿದ್ದಾನೆ. ದುರ್ಯೋಧನ! ಒಂದೇ ಮಾತಿನಲ್ಲಿ ಹೇಳುವುದಾದರೆ ಎಲ್ಲವೂ ಅವನೇ ಆಗಿದ್ದಾನೆ. ಅಣು-ರೇಣು-ತೃಣ-ಕಾಷ್ಠಾದಿ ಸರ್ವತ್ರ ಅವನೇ ವ್ಯಾಪ್ತನಾಗಿದ್ದಾನೆ ಅಥವಾ ಎಲ್ಲವೂ ಅವನದೇ ಆಗಿದೆ. ತಮಸ್ಸಿನಿಂದಲೂ ಮತ್ತು ರಜಸ್ಸಿನಿಂದಲೂ ವಿವರ್ಜಿತನಾಗಿದ್ದಾನೆ. (ಶುದ್ಧಸತ್ತ್ವಸ್ವರೂಪನಾಗಿದ್ದಾನೆ.) ಆದುದರಿಂದಲೇ ಹಿರಿಯರು ಹೀಗೆ ಹೇಳುತ್ತಾರೆ :

**ಯತಃ ಕೃಷ್ಣಸ್ತತೋ ಧರ್ಮೋ ಯತೋ ಧರ್ಮಸ್ತತೋ ಜಯಃ ॥**

ಎಲ್ಲಿ ಕೃಷ್ಣನಿರುವನೋ–ಅಲ್ಲಿ ಧರ್ಮದ ಅಧಿಷ್ಠಾನವಿರುತ್ತದೆ. ಎಲ್ಲಿ ಧರ್ಮವಿರುತ್ತದೆಯೋ–ಅಲ್ಲಿ ಜಯವೂ ಇರುತ್ತದೆ. ಪಾಂಡವರ ಕಡೆಗೆ ಈಗ ಮಹಾನುಭಾವನಾದ ಶ್ರೀಕೃಷ್ಣನ ಮಾಹಾತ್ಮ್ಯಯೋಗವೂ ಸೇರಿದೆ. ಆತ್ಮ ಯೋಗವೂ ಸೇರಿದೆ. ಪ್ರತ್ಯಕ್ಷತಃ ಅವನು ಪಾಂಡವರ ಕಡೆಯಲ್ಲಿಯೇ ನಿಂತು ಯುದ್ಧಮಾಡಿಸುತ್ತಿದ್ದಾನೆ. ಆದುದರಿಂದ ಪಾಂಡವರಿಗೇ ವಿಜಯವು ನಿಶ್ಚಯವಾಗಿಯೂ ಲಭಿಸುತ್ತದೆ. ದುರ್ಯೋಧನ! ಪಾಂಡವರಿಗೆ ಶ್ರೀಕೃಷ್ಣನು ಯಾವಾಗಲೂ ಶ್ರೇಯೋಯುಕ್ತವಾದ ಬುದ್ಧಿಯನ್ನೇ ಹೇಳು ತ್ತಿರುತ್ತಾನೆ. ತನ್ನ ಮಾಹಾತ್ಮ್ಯದಿಂದ ಪ್ರತಿನಿತ್ಯವೂ ಅವರಿಗೆ ಯುದ್ಧ ಸಮಯದಲ್ಲಿ ಬಲವನ್ನೂ ಅನುಗ್ರಹಿಸುತ್ತಿರುತ್ತಾನೆ. ಮಹಾಭಯಗಳಿಂದಲೂ ರಕ್ಷಿಸುತ್ತಿರುತ್ತಾನೆ.

ದುರ್ಯೋಧನ! ನೀನು ನನ್ನನ್ನು ಪ್ರಶ್ನಿಸಿದುದರಿಂದ ಇದನ್ನು ನಾನು ನಿನಗೆ ಹೇಳುತ್ತಿದ್ದೇನೆ. 'ವಾಸುದೇವನು ಸನಾತನನಾದ, ಶಾಶ್ವತನಾದ

ದೇವತೆ. ಗುಹ್ಯತಮನಾದವನು. ನಿಗೂಢನಾದವನು. (ಪ್ರತ್ಯಕ್ಷದಲ್ಲಿ ಕಾಣುತ್ತಿದ್ದರೂ ಸುಲಭವಾಗಿ ಸಿಕ್ಕತಕ್ಕವನಲ್ಲ.) ಮಂಗಳಸ್ವರೂಪನು'–ಎಂದು ತಿಳಿಯಬೇಕು. ಸ್ವಕರ್ಮನಿಷ್ಠರಾದ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶುಭಲಕ್ಷಣಸಂಪನ್ನರಾದ ಶೂದ್ರರು ತಮ್ಮ-ತಮ್ಮ ವರ್ಣಾಶ್ರಮೋಕ್ತ ವಿಧಾನಗಳಿಂದ ವಾಸುದೇವನಲ್ಲಿಯೇ ತತ್ಪರರಾಗಿದ್ದುಕೊಂಡು ಅವನ ಸೇವೆಯನ್ನು ಮಾಡುತ್ತಾರೆ ಮತ್ತು ಭಕ್ತಿಯಿಂದ ಕೂಡಿದವರಾಗಿ ಪೂಜಾದಿಗಳನ್ನೂ ಮಾಡುತ್ತಾರೆ. ದ್ವಾಪರಯುಗದ ಅಂತ್ಯದಲ್ಲಿ ಮತ್ತು ಕಲಿಯುಗದ ಆದಿಯಲ್ಲಿ ಸಂಕರ್ಷಣನು ಶ್ರೀಕೃಷ್ಣೋಪಾಸನೆಯ ವಿಧಿಯನ್ನು ಆಶ್ರಯಿಸಿ ಶ್ರೀಕೃಷ್ಣನ ಮಹಿಮೆಯನ್ನು ಸುಮಧುರವಾಗಿ ಗಾನಮಾಡಿದ್ದಾನೆ.

**ಸ ಏಷ ಸರ್ವಂ ಸುರಮರ್ತ್ಯಲೋಕಂ**
**ಸಮುದ್ರಕಕ್ಷ್ಯಾನ್ತರಿತಾಂ ಪುರೀಂ ಚ ।**
**ಯುಗೇ ಯುಗೇ ಮಾನುಷಂ ಚೈವ ವಾಸಂ**
**ಪುನಃ ಪುನಃ ಸೃಜತೇ ವಾಸುದೇವಃ ॥೪೧॥**

ಭಗವಂತನಾದ ಈ ವಾಸುದೇವನು ಪ್ರತಿಯೊಂದು ಯುಗದಲ್ಲಿಯೂ ದೇವಲೋಕ-ಮರ್ತ್ಯಲೋಕಗಳನ್ನೂ, ಸಮುದ್ರದ ಅಂಚಿನಲ್ಲಿ ಹುದುಗಿ ಹೋಗಿರುವ ದ್ವಾರಕಾಪಟ್ಟಣವನ್ನೂ ಪುನಃ ಸೃಷ್ಟಿಸುತ್ತಾನೆ ಮತ್ತು ಪುನಃ ಪುನಃ ಮನುಷ್ಯಲೋಕದಲ್ಲಿ ಅವತರಿಸುತ್ತಾನೆ."

ಌಌನೆಯ ಅಧ್ಯಾಯವು ಮುಗಿಯಿತು.

ಌ೦ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನ ಮಹಿಮೆ

ಮಹಾರಾಜ! ಭೀಷ್ಮನು ಹೇಳಿದ ಮಾತುಗಳನ್ನು ಕೇಳಿ ದುರ್ಯೋಧನನು ಪುನಃ ಭೀಷ್ಮನನ್ನು ಪ್ರಶ್ನಿಸಿದನು :

**ವಾಸುದೇವೋ ಮಹದ್ಭೂತಂ ಸರ್ವಲೋಕೇಷು ಕಥ್ಯತೇ ।**
**ತಸ್ಯಾಗಮಂ ಪ್ರತಿಷ್ಠಾಂ ಚ ಜ್ಞಾತುಮಿಚ್ಛೇ ಪಿತಾಮಹ ॥೧॥**

"ಪಿತಾಮಹ! ಎಲ್ಲ ಲೋಕಗಳವರೂ ವಾಸುದೇವನನ್ನು ಮೂಲಭೂತ

ವಾದ ಮಹಾತತ್ತ್ವವೆಂದು ಹೇಳುತ್ತಾರೆ. ಅಂತಹ ವಾಸುದೇವನ ಉತ್ಪತ್ತಿ ಮತ್ತು ಸ್ಥಿತಿಗಳನ್ನು ನಾನು ನಿನ್ನಿಂದ ಕೇಳಿ ತಿಳಿದುಕೊಳ್ಳಲಿಚ್ಛಿಸಿದ್ದೇನೆ.”

**ವಾಸುದೇವೋ ಮಹದ್ಭೂತಂ ಸರ್ವದೈವತದೈವತಮ್ ।**
**ನ ಪರಂ ಪುಣ್ಡರೀಕಾಕ್ಷಾದ್ದೃಶ್ಯತೇ ಭರತರ್ಷಭ ॥೨॥**

“ನಿಜ, ದುರ್ಯೋಧನ! ವಾಸುದೇವನನ್ನು ಮೂಲಭೂತವಾದ ಮಹಾತತ್ತ್ವವೆಂದೂ ಹೇಳುತ್ತಾರೆ. ಸರ್ವದೇವತೆಗಳಿಗೂ ದೇವತೆಯೆಂದೂ ಹೇಳುತ್ತಾರೆ. ನನ್ನ ಅಭಿಪ್ರಾಯದಲ್ಲಿಯೂ ಸಹ ಪುಂಡರೀಕಾಕ್ಷನಾದ ಶ್ರೀಕೃಷ್ಣನಿಗಿಂತಲೂ ಶ್ರೇಷ್ಠರಾದವರು ಮತ್ತಾರೂ ಇರುವುದಿಲ್ಲ. ಮಾರ್ಕಂಡೇಯಮಹರ್ಷಿಗಳೂ ಸಹ ಗೋವಿಂದನ ವಿಷಯದಲ್ಲಿ ಪರಮಾದ್ಭುತವಾದ ಮಾತುಗಳನ್ನು ಹೇಳಿದ್ದಾರೆ.

“ಭೂತಾತ್ಮನಾದ ಪುರುಷೋತ್ತಮನು ಸರ್ವಪ್ರಾಣಿಗಳನ್ನೂ ಸೃಷ್ಟಿಸಿದನು. ಅದಕ್ಕೆ ಮೊದಲು ನೀರು, ವಾಯು, ತೇಜಸ್ಸು–ಈ ಮೂರನ್ನು ಸೃಷ್ಟಿಸಿದನು. ಅನಂತರ ಸರ್ವಲೋಕೇಶ್ವರನಾದ ಪ್ರಭುವಾದ ಗೋವಿಂದನು ಪೃಥ್ವೀದೇವಿಯನ್ನು ಸೃಷ್ಟಿಸಿದನು. ಬಳಿಕ ಮಹಾತ್ಮನಾದ ಪುರುಷೋತ್ತಮನು ನೀರಿನ ಮೇಲೆ ಮಲಗಿದನು. ಸರ್ವತೇಜೋಮಯನಾದ ದೇವನು ತನ್ನ ಯೋಗಶಕ್ತಿಯಿಂದ ನೀರಿನ ಮೇಲೆಯೇ ನಿದ್ರಿಸಿಯೂಬಿಟ್ಟನು.

**ಮುಖತಃ ಸೋಽಗ್ನಿಮಸೃಜತ್ಪ್ರಾಣಾದ್ವಾಯುಮಥಾಪಿ ಚ ।**
**ಸರಸ್ವತೀಂ ಚ ವೇದಾಂಶ್ಚ ಮನಸಃ ಸಸೃಜೇಽಚ್ಯುತಃ ॥೬॥**

ಪರಂಧಾಮನಾದ ಅಚ್ಯುತನು ಮುಖದಿಂದ ಅಗ್ನಿಯನ್ನೂ, ಪ್ರಾಣದಿಂದ ವಾಯುವನ್ನೂ, ಮನಸ್ಸಿನಿಂದ ಸರಸ್ವತಿಯನ್ನೂ ಮತ್ತು ವೇದಗಳನ್ನೂ ಸೃಷ್ಟಿಸಿದನು.

**ಏಷ ಲೋಕಾನ್ಸಸರ್ಜಾದೌ ದೇವಾಂಶ್ಚ ಋಷಿಭಿಃ ಸಹ ।**
**ನಿಧನಂ ಚೈವ ಮೃತ್ಯುಂ ಚ ಪ್ರಜಾನಾಂ ಪ್ರಭವಾಪ್ಯಯೌ ॥೭॥**

ಈ ವಾಸುದೇವನು ಸ್ವರ್ಗವೇ ಮೊದಲಾದ ಎಲ್ಲ ಲೋಕಗಳನ್ನೂ ಋಷಿಗಳಿಂದೊಡಗೂಡಿದ ದೇವತೆಗಳನ್ನೂ ಸೃಷ್ಟಿಸಿದನು. ಈ ವಾಸುದೇವನೇ

ಪ್ರಲಯಕ್ಕೆ ಕಾರಣನೂ ಮತ್ತು ಮೃತ್ಯುಸ್ವರೂಪನೂ ಆಗಿದ್ದಾನೆ. ಪ್ರಜೆಗಳ ಉತ್ಪತ್ತಿ ಮತ್ತು ವಿನಾಶ ಎರಡೂ ಸಹ ಇವನಿಂದಲೇ ಆಗುತ್ತವೆ.

**ಏಷ ಧರ್ಮಶ್ಚ ಧರ್ಮಜ್ಞೋ ವರದಃ ಸರ್ವಕಾಮದಃ ।**
**ಏಷ ಕರ್ತಾ ಚ ಕಾರ್ಯಂ ಚ ಪೂರ್ವದೇವಃ ಸ್ವಯಮ್ಭುಃ ॥೮॥**

ಧರ್ಮವೂ ಇವನೇ ; ಧರ್ಮವನ್ನು ತಿಳಿದವನೂ ಇವನೇ ಆಗಿದ್ದಾನೆ. ಭಕ್ತರು ಕೇಳಿದ ವರಗಳನ್ನು ಕೊಡತಕ್ಕವನು. ಭಕ್ತರ ಸರ್ವಕಾಮನೆಗಳನ್ನೂ ದಯಪಾಲಿಸುವವನು. ಕರ್ತಾ-ಕಾರ್ಯ ಎರಡೂ ಸಹ ಇವನೇ ಆಗಿರುತ್ತಾನೆ. ಈಗ ಮನುಷ್ಯನಂತೆ ಕಂಡರೂ ಇವನೇ ಆದಿದೇವ. ಸ್ವಯಂ ಸಮರ್ಥ. ಯಾರೊಬ್ಬರ ಅವಲಂಬನೆಯನ್ನೂ ಅಪೇಕ್ಷಿಸದೇ ಇರತಕ್ಕವನು.

**ಭೂತಂ ಭವ್ಯಂ ಭವಿಷ್ಯಚ್ಚ ಪೂರ್ವಮೇತದಕಲ್ಪಯತ್ ।**
**ಉಭೇ ಸಂಧ್ಯೇ ದಿಶಃ ಖಂ ಚ ನಿಯಮಾಂಶ್ಚ ಜನಾರ್ದನಃ ॥೯॥**

ಕಾಲಾತೀತನಾದ ಜನಾರ್ದನನು ಜಗತ್ಸೃಷ್ಟಿಗಿಂತಲೂ ಮೊದಲು ಭೂತ-ಭವ್ಯ ಮತ್ತು ಭವಿಷ್ಯತ್ತು–ಎಂದು ಮೂರು ವಿಧವಾಗಿ ಕಾಲವನ್ನು ನಿರ್ಣಯಿಸಿದನು. ಎರಡು ಸಂಧ್ಯೆಗಳನ್ನೂ, ದಿಕ್ಕುಗಳನ್ನೂ, ಆಕಾಶವನ್ನೂ ಮತ್ತು ಅವುಗಳಿಗೆ ಸಂಬಂಧಿಸಿದಂತೆ ನಿಯಮಗಳನ್ನೂ ಸಹ ಮಾಡಿದನು.

**ಋಷೀಂಶ್ಚೈವ ಹಿ ಗೋವಿನ್ದಸ್ತಪಶ್ಚೈವಾಭ್ಯಕಲ್ಪಯತ್ ।**
**ಸ್ರಷ್ಟಾರಂ ಜಗತಶ್ಚಾಪಿ ಮಹಾತ್ಮಾ ಪ್ರಭುರವ್ಯಯಃ ॥೧೦॥**

ಮಹಾತ್ಮನಾದ, ಪ್ರಭುವಾದ, ಅವಿನಾಶಿಯಾದ ಗೋವಿಂದನು ಋಷಿಗಳನ್ನೂ ಸೃಷ್ಟಿಸಿದನು ; ಋಷಿಗಳ ಕರ್ಮವಾದ ತಪಸ್ಸನ್ನೂ ಸೃಷ್ಟಿಸಿದನು. ಜಗತ್ತನ್ನು ಸೃಷ್ಟಿಸಿದ ಬ್ರಹ್ಮನನ್ನೂ ಸಹ ಅವನೇ ಸೃಷ್ಟಿಸಿದನು.

**ಅಗ್ರಜಂ ಸರ್ವಭೂತಾನಾಂ ಸಂಕರ್ಷಣಮಕಲ್ಪಯತ್ ।**
**ತಸ್ಮಾನ್ನಾರಾಯಣೋ ಜಜ್ಞೇ ದೇವದೇವಃ ಸನಾತನಃ ॥೧೧॥**

ಆದಿದೇವನಾದ ವಾಸುದೇವನು ಮೊದಲು ಎಲ್ಲ ಭೂತಗಳಿಗೂ ಅಗ್ರಜನಾದ ಸಂಕರ್ಷಣನನ್ನು ಸೃಷ್ಟಿಸಿದನು. ಸಂಕರ್ಷಣನಿಂದ ದೇವದೇವನಾದ ಸನಾತನನಾದ ನಾರಾಯಣನು ಪ್ರಾದುರ್ಭೂತನಾದನು.

**ನಾಭೌ ಪದ್ಮಂ ಬಭೂವಾಸ್ಯ ಸರ್ವಲೋಕಸ್ಯ ಸಮ್ಭವಾತ್ ।**
**ತಸ್ಮಾತ್ಪಿತಾಮಹೋ ಜಾತಸ್ತಸ್ಮಾಜ್ಜಾತಾಸ್ತ್ವಿಮಾಃ ಪ್ರಜಾಃ ॥೧೨॥**

ನಾರಾಯಣನ ನಾಭಿಯಿಂದ ಕಮಲವು ಪ್ರಕಟವಾಯಿತು. ಸಂಪೂರ್ಣ ಜಗತ್ತಿನ ಉತ್ಪತ್ತಿಗೆ ಸ್ಥಾನಭೂತವಾದ ಆ ಕಮಲದಿಂದ ಪಿತಾಮಹನಾದ ಬ್ರಹ್ಮನು ಪ್ರಾದುರ್ಭೂತನಾದನು. ಅವನಿಂದ ಈ ಎಲ್ಲ ಪ್ರಜೆಗಳೂ ಉತ್ಪನ್ನರಾದರು.

ಯಾವನು ಈ ಎಲ್ಲ ಪ್ರಾಣಿಗಳನ್ನೂ ಮತ್ತು ಪರ್ವತಗಳಿಂದ ಕೂಡಿರುವ ಈ ಭೂಮಿಯನ್ನೂ ಧರಿಸಿದ್ದಾನೆಯೋ–ಅಂತಹ ವಿಶ್ವರೂಪಿಯಾದ, ದೇವನಾದ, ಅನಂತನಾದ ಶೇಷನನ್ನು ಆದಿದೇವನಾದ ವಾಸುದೇವನು ಸೃಷ್ಟಿಸಿದನು.

ಸಂಶಿತವ್ರತರಾದ ವಿಪ್ರರು ಪರಮತೇಜಸ್ವಿಯಾದ ಆ ಪರಮಾತ್ಮನನ್ನು ಧ್ಯಾನಯೋಗದಿಂದ ತಿಳಿಯುತ್ತಾರೆ. ನಾರಾಯಣನು ಜಲಶಾಯಿಯಾಗಿದ್ದಾಗ ಅವನ ಕಿವಿಯ ಮಲದಿಂದ ಮಧುವೆಂಬ ಮಹಾಸುರನು ಹುಟ್ಟಿದನು. ಅವನು ಉಗ್ರವಾದ ಕರ್ಮಗಳನ್ನು ಮಾಡುತ್ತಿದ್ದನಲ್ಲದೇ–ಕ್ರೂರವಾದ ಬುದ್ಧಿಯನ್ನೂ ಸಹ ಹೊಂದಿದವನಾಗಿದ್ದನು. (ಆ ಮಧುರಾಕ್ಷಸನು ತನ್ನ ತಮ್ಮನಾದ ಕೈಟಭನೆಂಬುವನೊಡನೆ ಸೇರಿಕೊಂಡು ನಾಭಿಕಮಲದಲ್ಲಿದ್ದ ಚತುರ್ಮುಖನನ್ನು ಪೀಡಿಸತೊಡಗಿದನು.) ಆ ಸಮಯದಲ್ಲಿ ಪುರುಷೋತ್ತಮನು ಚತುರ್ಮುಖನನ್ನು ಸಂತೈಸುತ್ತಾ ಮಧುರಾಕ್ಷಸನನ್ನು ಸಂಹರಿಸಿದನು.

**ತಸ್ಯ ತಾತ ವಧಾದೇವ ದೇವದಾನವಮಾನವಾಃ ।**
**ಮಧುಸೂದನಮಿತ್ಯಾಹುರೃಷಯಶ್ಚ ಜನಾರ್ದನಮ್ ॥೧೬॥**

ಮಧುವೆಂಬ ರಾಕ್ಷಸನನ್ನು ಸಂಹರಿಸಿದ್ದರಿಂದಲೇ ದೇವ-ದಾನವ-ಮಾನವರೂ ಮತ್ತು ಋಷಿಗಳೂ ಜನಾರ್ದನನನ್ನು ಮಧುಸೂದನ ಎಂದು ಕರೆದರು.

**ವರಾಹಶ್ಚೈವ ಸಿಂಹಶ್ಚ ತ್ರಿವಿಕ್ರಮಗತಿಃ ಪ್ರಭುಃ ।**
**ಏಷ ಮಾತಾ ಪಿತಾ ಚೈವ ಸರ್ವೇಷಾಂ ಪ್ರಾಣಿನಾಂ ಹರಿಃ ॥೧೭॥**

ಆಯಾ ಕಾಲಗಳಲ್ಲಿ ದುಷ್ಟಶಿಕ್ಷಣ-ಶಿಷ್ಟಸಂರಕ್ಷಣಾರ್ಥವಾಗಿ ಹರಿಯು

ವರಾಹ-ನಾರಸಿಂಹ-ವಾಮನರೂಪಗಳಲ್ಲಿಯೂ ಪ್ರಕಟವಾದನು. ಆ ಶ್ರೀಹರಿಯೇ ಎಲ್ಲ ಪ್ರಾಣಿಗಳಿಗೂ ತಾಯಿ ಮತ್ತು ತಂದೆಯೂ ಆಗಿದ್ದಾನೆ.

**ಪರಂ ಹಿ ಪುಣ್ಡರೀಕಾಕ್ಷಾನ್ನ ಭೂತಂ ನ ಭವಿಷ್ಯತಿ ।**

ನಾನು ಹಿಂದೆಯೇ ಒಮ್ಮೆ ಹೇಳಿದಂತೆ, ದುರ್ಯೋಧನ! ಕಮಲ ನಯನನಾದ ಭಗವಂತನಿಗಿಂತಲೂ ಶ್ರೇಷ್ಠವಾದ ಮತ್ತೊಂದು ವಸ್ತುವು ಹಿಂದೆಯೂ ಇರಲಿಲ್ಲ! ಮುಂದೆಯೂ ಹುಟ್ಟುವುದಿಲ್ಲ.

**ಮುಖತಃ ಸೋಽಸೃಜದ್ವಿಪ್ರಾನ್ಬಾಹುಭ್ಯಾಂ ಕ್ಷತ್ರಿಯಾಂಸ್ತಥಾ ॥೧೮॥**
**ವೈಶ್ಯಾಂಶ್ಚಾಪ್ಯೂರುತೋ ರಾಜಞ್ಶೂದ್ರಾನ್ವೈ ಪಾದತಸ್ತಥಾ ।**

ದುರ್ಯೋಧನ! ವಾಸುದೇವನು ತನ್ನ ಮುಖದಿಂದ ಬ್ರಾಹ್ಮಣರನ್ನೂ, ತೋಳುಗಳಿಂದ ಕ್ಷತ್ರಿಯರನ್ನೂ, ತೊಡೆಗಳಿಂದ ವೈಶ್ಯರನ್ನೂ, ಕಾಲುಗಳಿಂದ ಶೂದ್ರರನ್ನೂ ಸೃಷ್ಟಿಸಿದನು.

**ತಪಸಾ ನಿಯತೋ ದೇವಂ ವಿಧಾನಂ ಸರ್ವದೇಹಿನಾಮ್ ॥೧೯॥**
**ಬ್ರಹ್ಮಭೂತಮಮಾವಾಸ್ಯಾಂ ಪೌರ್ಣಮಾಸ್ಯಾಂ ತಥೈವ ಚ ।**
**ಯೋಗಭೂತಂ ಪರಿಚರನ್ಕೇಶವಂ ಮಹದಾಪ್ನುಯಾತ್ ॥೨೦॥**

ಯಾವ ಮನುಷ್ಯನು ತಪಸ್ಸಿನಲ್ಲಿ ತತ್ಪರನಾಗಿ, ಸಂಯಮದಿಂದಲೂ, ನಿಯಮದಿಂದಲೂ, ಅಮಾವಾಸ್ಯೆ ಮತ್ತು ಪೌರ್ಣಮಾಸ್ಯೆಗಳಲ್ಲಿ ಸಮಸ್ತ ದೇಹಧಾರಿಗಳಿಗೂ ಆಶ್ರಯಭೂತನಾದ (ವಿಧಾಯಕನಾದ) ಬ್ರಹ್ಮಭೂತನಾದ, ಯೋಗಸ್ವರೂಪನಾದ ಕೇಶವನನ್ನು ಆರಾಧನೆಮಾಡುತ್ತಾನೆಯೋ– ಅವನು ಎಲ್ಲ ಫಲಗಳಿಗಿಂತಲೂ ಹಿರಿಯದಾದ ಪರಮಪದವನ್ನೇ ಹೊಂದುತ್ತಾನೆ.

**ಕೇಶವಃ ಪರಮಂ ತೇಜಃ ಸರ್ವಲೋಕಪಿತಾಮಹಃ ।**
**ಏನಮಾಹುರ್ಹೃಷೀಕೇಶಂ ಮುನಯೋ ವೈ ನರಾಧಿಪ ॥೨೧॥**

ರಾಜನೇ! ಎಲ್ಲ ಲೋಕಗಳಿಗೂ ಪಿತಾಮಹನಾದ ಕೇಶವನು ಶ್ರೇಷ್ಠವಾದ ತೇಜಸ್ಸೇ ಆಗಿದ್ದಾನೆ. ಋಷಿಗಳು ಇವನನ್ನು ಹೃಷೀಕೇಶನೆಂದೂ ಕರೆಯುತ್ತಾರೆ.

**ಏವಮೇನಂ ವಿಜಾನೀಹಿ ಆಚಾರ್ಯಂ ಪಿತರಂ ಗುರುಮ್ ।**
**ಕೃಷ್ಣೋ ಯಸ್ಯ ಪ್ರಸೀದೇತ ಲೋಕಾಸ್ತೇನಾಕ್ಷಯಾ ಜಿತಾಃ ॥೨೨॥**

ದುರ್ಯೋಧನ! ಈ ಶ್ರೀಕೃಷ್ಣನನ್ನು ಆಚಾರ್ಯ, ತಂದೆ, ಗುರು–ಎಂಬುದಾಗಿ ಭಾವಿಸು. ಶ್ರೀಕೃಷ್ಣನು ಯಾವನಿಗೆ ಪ್ರಸನ್ನನಾಗುತ್ತಾನೆಯೋ ಅವನು ಅಕ್ಷಯವಾದ ಲೋಕಗಳನ್ನು ಜಯಿಸಬಲ್ಲವನಾಗುತ್ತಾನೆ. (ಅನೇಕ ಪುಣ್ಯಲೋಕಗಳು ಅವನ ವಶವಾಗುತ್ತವೆ.)

**ಯಶ್ಚೈವೈನಂ ಭಯಸ್ಥಾನೇ ಕೇಶವಂ ಶರಣಂ ವ್ರಜೇತ್ ।**
**ಸದಾ ನರಃ ಪಠಂಶ್ಚೇದಂ ಸ್ವಸ್ತಿಮಾನ್ಸಸುಖೀ ಭವೇತ್ ॥೨೩॥**

ಭಯದ ಸಮಯದಲ್ಲಿ ಶ್ರೀಕೇಶವನನ್ನು ಮರೆಹೊಗುವವನು ಮತ್ತು ಈ ಸ್ತೋತ್ರವನ್ನು ಸರ್ವದಾ ಹೇಳುತ್ತಿರುವವನು ಸ್ವಸ್ತಿಮಂತನೂ, ಸುಖಿಯೂ ಆಗುತ್ತಾನೆ.

**ಯೇ ಚ ಕೃಷ್ಣಂ ಪ್ರಪದ್ಯನ್ತೇ ತೇ ನ ಮುಹ್ಯನ್ತಿ ಮಾನವಾಃ ।**
**ಭಯೇ ಮಹತಿ ಮಗ್ನಾಂಶ್ಚ ಪಾತಿ ನಿತ್ಯಂ ಜನಾರ್ದನಃ ॥೨೪॥**

ಯಾವ ಮಾನವರು ಭಗವಂತನಾದ ಶ್ರೀಕೃಷ್ಣನನ್ನು ಶರಣುಹೊಂದುತ್ತಾರೆಯೋ ಅವರೆಂದಿಗೂ ಮೋಹಗೊಳ್ಳುವುದಿಲ್ಲ. ದಯಾಮಯನಾದ ಜನಾರ್ದನನು ಮಹಾಭಯದಲ್ಲಿ ಮುಳುಗಿರುವವರನ್ನೂ ಉದ್ಧಾರ ಮಾಡುತ್ತಾನೆ.

ಭಾರತ! ಈ ವಿಷಯವನ್ನೇ ಯಥಾವತ್ತಾಗಿ ತಿಳಿದುಕೊಂಡಿರುವ ಯುಧಿಷ್ಠಿರನು ಯೋಗಿಗಳಿಗೊಡೆಯನಾದ, ಪ್ರಭುವಾದ, ಮಹಾತ್ಮನಾದ, ಜಗದೀಶ್ವರನಾದ ಕೇಶವನನ್ನೇ ಸರ್ವಪ್ರಕಾರದಿಂದಲೂ ಪ್ರಪನ್ನನಾಗಿ ಆಶ್ರಯಿಸಿದ್ದಾನೆ.”

ಒ೭ನೆಯ ಅಧ್ಯಾಯವು ಮುಗಿಯಿತು.

ಒ೮ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಬ್ರಹ್ಮಭೂತಸ್ತೋತ್ರ: ಶ್ರೀಕೃಷ್ಣಾರ್ಜುನರ ಮಹತ್ತ್ವ

ಭೀಷ್ಮನು ದುರ್ಯೋಧನನನ್ನು ಕುರಿತು ಹೇಳುತ್ತಾನೆ :

“ಮಹಾರಾಜ! ಹಿಂದೆ ಬ್ರಹ್ಮರ್ಷಿಗಳಿಂದಲೂ ದೇವತೆಗಳಿಂದಲೂ

ಯಾವ ಬ್ರಹ್ಮಭೂತಸ್ತೋತ್ರವು ಹೇಳಲ್ಪಟ್ಟಿತೋ–ಅದೇ ಸ್ತೋತ್ರವನ್ನು ಹೇಳುವೆನು ಕೇಳು :

**ಸಾಧ್ಯಾನಾಮಪಿ ದೇವಾನಾಂ ದೇವದೇವೇಶ್ವರಃ ಪ್ರಭುಃ ।**
**ಲೋಕಭಾವನಭಾವಜ್ಞ ಇತಿ ತ್ವಾಂ ನಾರದೋಽಬ್ರವೀತ್ ॥೨॥**

"ಭಗವನ್! ಸಾಧ್ಯರಿಗೂ ಮತ್ತು ದೇವತೆಗಳಿಗೂ ನೀನು ಪ್ರಭುವಾಗಿರುವೆ. ಆದುದರಿಂದಲೇ ನಿನ್ನನ್ನು ದೇವದೇವೇಶ್ವರನೆಂದು ಕರೆಯುತ್ತಾರೆ. ಜನರ ಮನಸ್ಸಿನ ಭಾವನೆಯನ್ನು ತಿಳಿದಿರತಕ್ಕವನು–ಎಂಬುದಾಗಿ ನಾರದರು ನಿನ್ನ ವಿಷಯವಾಗಿ ಹೇಳಿರುವರು.

**ಭೂತಂ ಭವ್ಯಂ ಭವಿಷ್ಯಂ ಚ ಮಾರ್ಕಣ್ಡೇಯೋಽಭ್ಯುವಾಚ ಹ ।**
**ಯಜ್ಞಂ ತ್ವಾಂ ಚೈವ ಯಜ್ಞಾನಾಂ ತಪಶ್ಚ ತಪಸಾಮಪಿ ॥೩॥**

ಭೂತ, ವರ್ತಮಾನ ಮತ್ತು ಭವಿಷ್ಯತ್ತುಗಳ ಸ್ವರೂಪನು ನೀನೇ ಆಗಿರುವೆಯೆಂದು ಮಾರ್ಕಂಡೇಯರು ಹೊಗಳಿದ್ದಾರೆ. ಯಜ್ಞಗಳಿಗೆಲ್ಲಾ ಮುಖ್ಯಯಜ್ಞಸ್ವರೂಪನು ನೀನೆಂದೂ, ತಪಸ್ಸುಗಳಿಗೆಲ್ಲಾ ಸಾರಭೂತನು ನೀನೆಂದೂ ಅವರು ಹೇಳಿರುವರು.

**ದೇವಾನಾಮಪಿ ದೇವಂ ಚ ತ್ವಾಮಾಹ ಭಗವಾನ್ಭೃಗುಃ ।**
**ಪುರಾಣಂ ಚೈವ ಪರಮಂ ವಿಷ್ಣೋ ರೂಪಂ ತವೇತಿ ಚ ॥೪॥**

ನಿನ್ನನ್ನು ದೇವತೆಗಳಿಗೆಲ್ಲಾ ದೇವನೆಂದು ಭಗವಾನ್ ಭೃಗುಗಳು ಹೇಳಿದ್ದಾರೆ. ಮಹಾವಿಷ್ಣುವೇ! ನಿನ್ನ ರೂಪವು ಅತ್ಯಂತಪುರಾತನವೂ ಉತ್ಕೃಷ್ಟವೂ ಆಗಿದೆಯೆಂದು ಅವರೇ ಹೇಳಿರುವರು.

**ವಾಸುದೇವೋ ವಸೂನಾಂ ತ್ವಂ ಶಕ್ರಂ ಸ್ಥಾಪಯಿತಾ ತಥಾ ।**
**ದೇವ ದೇವೋಽಸಿ ದೇವಾನಾಮಿತಿ ದ್ವೈಪಾಯನೋಽಬ್ರವೀತ್ ॥೫॥**

ಹೇ ದೇವ! ವಸುಗಳಲ್ಲಿ ನೀನು ವಾಸುದೇವನೆಂದೂ, ಇಂದ್ರನನ್ನು ಸ್ವರ್ಗದ ಸಿಂಹಾಸನದಲ್ಲಿ ಸ್ಥಾಪಿಸಿದವನು ನೀನೇ ಎಂದೂ, ದೇವತೆಗಳಿಗೂ ನೀನು ದೇವನೆಂದೂ ದ್ವೈಪಾಯನರು ಹೇಳಿರುವರು.

**ಪೂರ್ವೇ ಪ್ರಜಾಭಿಸರ್ಗೇ ಚ ದಕ್ಷಮಾಹುಃ ಪ್ರಜಾಪತಿಮ್ ।**
**ಸ್ರಷ್ಟಾರಂ ಸರ್ವಲೋಕಾನಾಮಙ್ಗಿರಾಸ್ತ್ವಾಂ ತಥಾಬ್ರವೀತ್ ॥೬॥**

ಪ್ರಥಮಪ್ರಜಾಸೃಷ್ಟಿಯ ಕಾಲದಲ್ಲಿ ನೀನೇ ದಕ್ಷಪ್ರಜಾಪತಿಯಾಗಿ ಪ್ರಜೆಗಳನ್ನು ಸೃಷ್ಟಿಮಾಡಿದೆಯೆಂದೂ ಸರ್ವಲೋಕಗಳ ಸೃಷ್ಟಿಕರ್ತನೂ ನೀನೇ ಎಂದೂ ಅಂಗಿರಸರು ಹೇಳಿದ್ದಾರೆ.

**ಅವ್ಯಕ್ತಂ ತೇ ಶರೀರೋತ್ಥಂ ವ್ಯಕ್ತಂ ತೇ ಮನಸಿ ಸ್ಥಿತಮ್ ।**
**ದೇವಾಸ್ತ್ವತ್ಸಮ್ಭವಾಶ್ಚೈವ ದೇವಲಸ್ತ್ವಸಿತೋಽಬ್ರವೀತ್ ॥೭॥**

ಅವ್ಯಕ್ತ ಎಂದರೆ ಮೂಲಪ್ರಕೃತಿಯು ನಿನ್ನ ಶರೀರದಿಂದ ಹುಟ್ಟಿದ್ದೆಂದೂ, ವ್ಯಕ್ತ ಎಂದರೆ ಮಹತ್ತತ್ತ್ವವು ನಿನ್ನ ಮನಸ್ಸಿನಲ್ಲಿ ಇರತಕ್ಕದ್ದೆಂದೂ, ದೇವತೆಗಳೂ ನಿನ್ನಿಂದಲೇ ಹುಟ್ಟಿದರೆಂದೂ ಅಸಿತ-ದೇವಲರು ಹೇಳಿರುವರು.

**ಶಿರಸಾ ತೇ ದಿವಂ ವ್ಯಾಪ್ತಂ ಬಾಹುಭ್ಯಾಂ ಪೃಥಿವೀ ತಥಾ ।**
**ಜಠರಂ ತೇ ತ್ರಯೋಲೋಕಾಃ ಪುರುಷೋಽಸಿ ಸನಾತನಃ ॥೮॥**

**ಏವಂ ತ್ವಾಮಭಿಜಾನನ್ತಿ ತಪಸಾ ಭಾವಿತಾ ನರಾಃ ।**
**ಆತ್ಮದರ್ಶನತೃಪ್ತಾನಾಮೃಷೀಣಾಂ ಚಾಸಿ ಸತ್ತಮಃ ॥೯॥**

ನಿನ್ನ ಶಿರಸ್ಸು ದ್ಯುಲೋಕವನ್ನು ವ್ಯಾಪಿಸಿದೆ. ನಿನ್ನ ತೋಳುಗಳು ಭೂಲೋಕವನ್ನು ವ್ಯಾಪಿಸಿವೆ. ಮೂರು ಲೋಕಗಳೂ ನಿನ್ನ ಉದರದಲ್ಲಿಯೇ ಇವೆ. ಇಂತಹ ಸನಾತನನಾದ ಪರಮಪುರುಷನು ನೀನಾಗಿರುವೆ. ತಪಸ್ಸಿನಿಂದ ಶುದ್ಧಾಂತಃಕರಣರಾಗಿರುವ ಪುರುಷರು ನಿನ್ನನ್ನು ಈ ರೀತಿಯಾಗಿ ತಿಳಿಯುತ್ತಾರೆ. ಆತ್ಮದರ್ಶನದಿಂದ ತೃಪ್ತರಾಗಿರುವ ಮಹರ್ಷಿಗಳಿಗೆ ನೀನು ಸರ್ವೋತ್ತಮನಾಗಿರುವೆ. (ಶ್ರೇಷ್ಠವಾದ ಪರಬ್ರಹ್ಮವಸ್ತುವಾಗಿರುವೆ.)

**ರಾಜರ್ಷೀಣಾಮುದಾರಾಣಾಮಾಹವೇಷ್ವನಿವರ್ತಿನಾಮ್ ।**
**ಸರ್ವಧರ್ಮಪ್ರಧಾನಾನಾಂ ತ್ವಂ ಗತಿರ್ಮಧುಸೂದನ ॥೧೦॥**

ಮಧುಸೂದನ! ಸಂಪೂರ್ಣಧರ್ಮವೇ ಪ್ರಧಾನವಾಗಿ ಉಳ್ಳ, (ಧರ್ಮದ ಹಿನ್ನೆಲೆಯಲ್ಲಿಯೇ ರಾಜ್ಯಭಾರ ನಡೆಸುವ) ಯುದ್ಧಗಳಲ್ಲಿ ಶತ್ರು

ಗಳಿಗೆ ಬೆನ್ನು ತೋರಿಸಿಕೊಂಡು ಹಿಂದಿರುಗದೇ ಇರುವ ಉದಾರಿಗಳಾದ ರಾಜರ್ಷಿಗಳಿಗೆ ನೀನೇ ಪರಮಗತಿಯಾಗಿರುವೆ.”

ದುರ್ಯೋಧನ! ಪುರುಷೋತ್ತಮನಾದ ಭಗವಾನ್ ಶ್ರೀಹರಿಯು ಈ ರೀತಿಯಾಗಿ ಯೋಗವಿದರಾದ ಸನತ್ಕುಮಾರಪ್ರಮುಖರಾದ ಮಹರ್ಷಿಗಳಿಂದ ಅನುದಿನವೂ ಸ್ತೋತ್ರಮಾಡಲ್ಪಡುತ್ತಾನೆ ಮತ್ತು ಪೂಜಿಸಲ್ಪಡುತ್ತಾನೆ. ನಾನೀಗ ನಿನಗೆ ಕೇಶವನ ಮಹಿಮೆಯಲ್ಲಿ ಕೆಲವನ್ನು ವಿಸ್ತರವಾಗಿಯೂ ಕೆಲವನ್ನು ಸಂಕ್ಷೇಪವಾಗಿಯೂ ಹೇಳಿದ್ದೇನೆ. ನಾನು ಹೇಗೆ ಕೇಳಿದೆನೋ ಹಾಗೆಯೇ ನಿನಗೆ ಹೇಳಿದ್ದೇನೆ. ಈಗಲಾದರೂ ನೀನು ಕೇಶವನ ವಿಷಯದಲ್ಲಿ ಸೌಮನಸ್ಯವನ್ನು ಹೊಂದಿ ಅವನನ್ನು ಸೇವಿಸು.”

ಸಂಜಯನು ಧೃತರಾಷ್ಟ್ರನಿಗೆ ಮುಂದುವರಿದು ಹೇಳುತ್ತಾನೆ :

“ಮಹಾರಾಜ! ನಿನ್ನ ಮಗನು ಪವಿತ್ರವಾದ ಮತ್ತು ಪುಣ್ಯಪ್ರಾಪಕವಾದ ಈ ಆಖ್ಯಾನವನ್ನು ಭೀಷ್ಮನಿಂದ ಕೇಳಿ ಕೇಶವನನ್ನೂ ಮತ್ತು ಮಹಾರಥರಾದ ಪಾಂಡವರನ್ನೂ ಮಹಾಸತ್ತ್ವಶಾಲಿಗಳೆಂದೂ, ಮಹತ್ತ್ವವುಳ್ಳವರೆಂದೂ ತಿಳಿದುಕೊಂಡನು. ಅನಂತರ ಶಾಂತನವನು ಪುನಃ ದುರ್ಯೋಧನನಿಗೆ ಹೇಳಿದನು : “ಮಹಾರಾಜ! ನೀನು ನನ್ನನ್ನು ಮಹಾತ್ಮನಾದ ಕೇಶವನ ಮತ್ತು ನರನ ಮಾಹಾತ್ಮ್ಯವನ್ನು ಪ್ರಶ್ನಿಸಿದುದಕ್ಕೆ ನಾನು ಮಹಾತ್ಮನಾದ ಕೇಶವನ ಮತ್ತು ನರನ ಮಾಹಾತ್ಮ್ಯವನ್ನು ಯಥಾವತ್ತಾಗಿ ಹೇಳಿದ್ದೇನೆ. ಋಷಿಗಳಾದ ನರ-ನಾರಾಯಣರು ಯಾವ ಕಾರಣಕ್ಕಾಗಿ ಮನುಷ್ಯಲೋಕದಲ್ಲಿ ಮಾನವರಾಗಿ ಅವತರಿಸಿದರು? ಯಾವ ರೀತಿಯಲ್ಲಿ ಅವರು ಯುದ್ಧದಲ್ಲಿ ಅವಧ್ಯರೂ ಅಪರಾಜಿತರೂ ಆಗಿರುತ್ತಾರೆ? ಮತ್ತು ಯಾವ ರೀತಿಯಲ್ಲಿ ಪಾಂಡವರು ಯಾರಿಂದಲೂ ಅವಧ್ಯರು?—ಈ ಎಲ್ಲ ವಿಷಯಗಳನ್ನೂ ನಿನಗೆ ಸ್ಪಷ್ಟವಾಗಿ ಹೇಳಿರುತ್ತೇನೆ.

**ಪ್ರೀತಿಮಾನ್ಹಿ ದೃಢಂ ಕೃಷ್ಣಃ ಪಾಣ್ಡವೇಷು ಯಶಸ್ವಿಷು ।**
**ತಸ್ಮಾದ್ಬ್ರವೀಮಿ ರಾಜೇನ್ದ್ರ ಶಮೋ ಭವತು ಪಾಣ್ಡವೈಃ ॥೧೭॥**

ಶ್ರೀಕೃಷ್ಣನು ಯಶೋವಂತರಾದ ಪಾಂಡವರಲ್ಲಿ ದೃಢವಾದ ಪ್ರೀತಿಯನ್ನಿಟ್ಟುಕೊಂಡಿರುತ್ತಾನೆ. ಈ ಕಾರಣದಿಂದಲೇ ನಾನು ನಿನಗೆ ಪದೇ-ಪದೇ ಪಾಂಡವರೊಡನೆ ಶಾಂತಿಸಂಧಾನವನ್ನು ಮಾಡಿಕೊಳ್ಳುವಂತೆ ಹೇಳುತ್ತಿದ್ದೇನೆ.

ನೀನು ನಿನ್ನ ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡು ಲೋಭ-ಮೋಹಗಳಿಗೆ ವಶನಾಗದೇ, ಬಲಿಷ್ಠರಾದ ನಿನ್ನ ಭ್ರಾತೃಗಳೊಡನೆ ಸೇರಿ ಈ ಅಖಂಡಭೂಮಂಡಲವನ್ನೂ ಉಪಭೋಗಿಸು. ದೇವತೆಗಳಾದ ನರ-ನಾರಾಯಣರನ್ನು ಅನಾದರಿಸಿದೆಯಾದರೆ ನಾಶಹೊಂದುವೆ."

ಮಹಾರಾಜ! ನಿನ್ನ ಮಗನೊಡನೆ ಹೀಗೆಂದು ಹೇಳಿ ನಿನ್ನ ತಂದೆಯಾದ ಭೀಷ್ಮನು ಸ್ವಲ್ಪಹೊತ್ತು ಸುಮ್ಮನಿದ್ದನು. ದುರ್ಯೋಧನನೂ ಸಹ ಯಾವುದೊಂದು ಮಾತನ್ನೂ ಆಡದೇ ಸುಮ್ಮನಿರಲು, ಅವನನ್ನು ಬಿಡಾರಕ್ಕೆ ಕಳುಹಿಸಿಕೊಟ್ಟು ತಾನು ಮಲಗಲು ಶಯನಾಗಾರವನ್ನು ಪ್ರವೇಶಿಸಿದನು.

ದುರ್ಯೋಧನನೂ ಮಹಾತ್ಮನಾದ ಭೀಷ್ಮನಿಗೆ ನಮಸ್ಕರಿಸಿ, ತನ್ನ ಶಿಬಿರಕ್ಕೆ ಹೋದನು. ಶುಭ್ರವಾದ ಹಾಸಿಗೆಯಲ್ಲಿ ದುರ್ಯೋಧನನು ಆ ರಾತ್ರಿಯಲ್ಲಿ ಮಲಗಿ ಸುಖವಾಗಿ ನಿದ್ರಿಸಿದನು."

೬೮ನೆಯ ಅಧ್ಯಾಯವು ಮುಗಿಯಿತು.

೬೯ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಐದನೆಯ ದಿವಸದ ಯುದ್ಧಪ್ರಾರಂಭ: ಕೌರವರು ಮಕರ ವ್ಯೂಹವನ್ನೂ-ಪಾಂಡವರು ಶ್ಯೇನವ್ಯೂಹವನ್ನೂ ರಚಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ರಾತ್ರಿಯು ಕಳೆದು ಸೂರ್ಯನು ಉದಯಿಸಲಾಗಿ ಎರಡು ಪಕ್ಷಗಳ ಸೈನ್ಯಗಳೂ ಯುದ್ಧಕ್ಕಾಗಿ ಹೊರಟುವು. ಅವರೆಲ್ಲರೂ ಒಟ್ಟಾಗಿ ಸೇರಿಕೊಂಡು ಒಬ್ಬರು ಮತ್ತೊಬ್ಬರನ್ನು ಜಯಿಸಬೇಕೆಂಬ ಇಚ್ಛೆಯುಳ್ಳವರಾಗಿ ಕ್ರುದ್ಧರಾಗಿಯೇ ಹೊರಟರು. ನಿನ್ನ ದುರ್ಮಂತ್ರದ (ಕೆಟ್ಟ ಯೋಚನೆಯ) ಕಾರಣದಿಂದಾಗಿ ಪಾಂಡುಪುತ್ರರೂ ಮತ್ತು ನಿನ್ನ ಮಕ್ಕಳೂ ಪರಸ್ಪರ ಅವಲೋಕನದಿಂದಲೇ ಸಂಕ್ರುದ್ಧರಾಗಿ, ವ್ಯೂಹಗಳನ್ನು ಸಿದ್ಧಪಡಿಸಿಕೊಂಡು ಹರ್ಷೋತ್ಸಾಹಗಳಿಂದ ಕೂಡಿದವರಾಗಿ ಪರಸ್ಪರವಾಗಿ ಪ್ರಹರಿಸಲು ಉದ್ಯುಕ್ತರಾದರು.

ಭೀಷ್ಮನು ಮಕರವ್ಯೂಹವನ್ನು ರಚಿಸಿ ಸುತ್ತಲೂ ಅದರ ರಕ್ಷಣೆಯ

ವ್ಯವಸ್ಥೆಯನ್ನು ಮಾಡಿದನು. ಅದೇ ರೀತಿಯಲ್ಲಿ ಪಾಂಡವರೂ ಸಹ ತಮ್ಮ ಕಡೆ ಪ್ರತಿವ್ಯೂಹವನ್ನು ರಚಿಸಿ ಅದರ ರಕ್ಷಣೆಯ ವ್ಯವಸ್ಥೆಮಾಡಿದರು. ವ್ಯೂಹವನ್ನು ರಚಿಸಿದನಂತರ ನಿನ್ನ ತಂದೆಯಾದ, ರಥಿಗಳಲ್ಲಿ ಶ್ರೇಷ್ಠನಾದ ಭೀಷ್ಮನು ದೊಡ್ಡದಾದ ರಥಸೈನ್ಯದೊಡನೆ ಹೊರಟನು. ಪ್ರತ್ಯೇಕ-ಪ್ರತ್ಯೇಕ ವಿಭಾಗಗಳಲ್ಲಿ ಉಪಸ್ಥಿತರಾಗಿದ್ದ ರಥಿಕರು, ಪದಾತಿಗಳು, ಗಜಸೈನ್ಯಗಳು ಮತ್ತು ಕುದುರೆಸವಾರರು ಒಂದು ವಿಭಾಗದ ಹಿಂದೆ ಮತ್ತೊಂದು ವಿಭಾಗದಂತೆ ಭೀಷ್ಮನ ರಥಸೈನ್ಯವನ್ನೇ ಅನುಸರಿಸಿಹೊರಟುವು. ಶತ್ರುಪಕ್ಷದವರು ಯುದ್ಧಕ್ಕೆ ಉದ್ಯುಕ್ತರಾಗಿರುವುದನ್ನು ಕಂಡು ಯಶೋವಂತರಾದ ಪಾಂಡವರು ವ್ಯೂಹಗಳಿಗೆಲ್ಲಾ ರಾಜನಂತಿದ್ದ, ಜಯಿಸಲು ಅಸಾಧ್ಯವಾಗಿದ್ದ ಶ್ಯೇನವ್ಯೂಹವನ್ನು ರಚಿಸಿದರು. ಆ ಶ್ಯೇನವ್ಯೂಹದ ಅಗ್ರಭಾಗದಲ್ಲಿ (ಕೊಕ್ಕಿನ ಭಾಗದಲ್ಲಿ) ಮಹಾಬಲನಾದ ಭೀಮಸೇನನಿದ್ದನು. ವ್ಯೂಹದ ಎರಡು ಕಣ್ಣುಗಳ ಭಾಗದಲ್ಲಿ ದುರ್ಧರ್ಷನಾದ ಶಿಖಂಡಿಯೂ ಮತ್ತು ದ್ರುಪದನ ಮಗನಾದ ಧೃಷ್ಟದ್ಯುಮ್ನನೂ ಇದ್ದರು. ಆ ಶ್ಯೇನಪಕ್ಷಿಯ (ವ್ಯೂಹದ) ಶಿರಃಪ್ರದೇಶದಲ್ಲಿ ಸತ್ಯವಿಕ್ರಮನಾದ ವೀರನಾದ ಸಾತ್ಯಕಿಯಿದ್ದನು. ಗಾಂಡೀವಧನುಸ್ಸನ್ನು ಟೇಂಕಾರಮಾಡುತ್ತಾ ಅರ್ಜುನನು ಆ ಶ್ಯೇನವ್ಯೂಹದ ಕತ್ತಿನ ಭಾಗದಲ್ಲಿದ್ದನು. ಶ್ಯೇನವ್ಯೂಹದ ಎಡಭಾಗದ ರೆಕ್ಕೆಯ ಜಾಗದಲ್ಲಿ ಒಂದು ಅಕ್ಷೌಹಿಣೀ ಸೈನ್ಯದೊಡನೆ ಪುತ್ರಸಹಿತನಾದ ದ್ರುಪದನಿದ್ದನು. ಬಲಭಾಗದ ರೆಕ್ಕೆಯ ಸ್ಥಳದಲ್ಲಿ ಅಕ್ಷೌಹಿಣೀಸೇನೆಗೆ ಅಧಿಪತಿಯಾಗಿದ್ದ ಕೇಕಯರಾಜನಿದ್ದನು. ಶ್ಯೇನ ವ್ಯೂಹದ ಹಿಂಭಾಗದಲ್ಲಿ ದ್ರೌಪದಿಯ ಐವರು ಮಕ್ಕಳೂ ವೀರ್ಯವಂತನಾದ ಅಭಿಮನ್ಯುವೂ ಇದ್ದರು. ಅವರ ಹಿಂಭಾಗದಲ್ಲಿ ಸೋದರರಾದ ನಕುಲ-ಸಹದೇವರುಗಳೊಡನೆ ಶ್ರೀಮಂತನಾದ ಚಾರುವಿಕ್ರಮನಾದ ಯುಧಿಷ್ಠಿರ ಮಹಾರಾಜನಿದ್ದನು. ಉಭಯಪಕ್ಷಗಳ ಸೈನ್ಯಗಳೂ ಈ ರೀತಿಯಲ್ಲಿ ಯುದ್ಧಕ್ಕೆ ಸಜ್ಜಾಗಿರಲಾಗಿ ಶ್ಯೇನವ್ಯೂಹದ ಅಗ್ರಭಾಗದಲ್ಲಿದ್ದ ಭೀಮಸೇನನು ಯುದ್ಧದಲ್ಲಿ ತೊಡಗಿ ಕೌರವಪಕ್ಷದ ಮಕರವ್ಯೂಹದ ಅಗ್ರಭಾಗದಲ್ಲಿದ್ದ ಭೀಷ್ಮನನ್ನು ತನ್ನ ಬಾಣಗಳಿಂದ ಮುಚ್ಚಿಬಿಟ್ಟನು.

ಅನಂತರ ಭೀಷ್ಮನು ಆ ಮಹಾಯುದ್ಧದಲ್ಲಿ ಪಾಂಡುಪುತ್ರರನ್ನೂ ಮತ್ತು ಶ್ಯೇನವ್ಯೂಹದಲ್ಲಿದ್ದ ಸೈನಿಕರನ್ನೂ ವಿಮೋಹಗೊಳಿಸುತ್ತಾ ಮಹಾಸ್ತ್ರ

ಗಳನ್ನೇ ಅವರ ಮೇಲೆ ಸುರಿಸಿದನು. ತನ್ನ ಕಡೆಯ ಸೈನ್ಯವು ಭೀಷ್ಮನ ಮಹಾಸ್ತ್ರಗಳ ಪ್ರಹಾರದಿಂದ ಸಂಭ್ರಾಂತವಾಗುತ್ತಿರಲಾಗಿ ಶ್ಯೇನವ್ಯೂಹದ ಕುತ್ತಿಗೆಯ ಸ್ಥಳದಲ್ಲಿದ್ದ ಅರ್ಜುನನು ಅತ್ಯವಸರದಿಂದ ಭೀಷ್ಮನನ್ನು ಒಂದು ಸಾವಿರ ಬಾಣಗಳಿಂದ ಪ್ರಹರಿಸಿದನು. ಭೀಷ್ಮನು ಬಿಟ್ಟಿದ್ದ ಮಹಾಸ್ತ್ರ ಗಳೆಲ್ಲವನ್ನೂ ಕ್ಷಣಮಾತ್ರದಲ್ಲಿ ಅರ್ಜುನನು ನಿರಸನಗೊಳಿಸಿದನು. ಅದನ್ನು ಕಂಡ ಪಾಂಡವರ ಕಡೆಯ ಸೈನಿಕರು ಪರಮಹೃಷ್ಟರಾದರು. ಉತ್ತೇಜಿತ ರಾದ, ಹೃಷ್ಟರಾದ ಸೈನಿಕರೊಡನೆ ಸನ್ನದ್ಧನಾಗಿ ಅರ್ಜುನನು ಯುದ್ಧ ಮಾಡುತ್ತಿದ್ದನು.

ಬಲಿಷ್ಠರಲ್ಲಿ ಶ್ರೇಷ್ಠನಾದ ದುರ್ಯೋಧನನು–ಹಿಂದಿನ ದಿವಸಗಳಲ್ಲಿ ತನ್ನ ಸೈನ್ಯದಲ್ಲಾದ ಘೋರಸಂಹಾರಕ್ರಿಯೆಯನ್ನೂ ಮತ್ತು ತನ್ನ ಅನುಜರ ವಧೆಯನ್ನೂ ಸ್ಮರಿಸಿದವನಾಗಿ, ಆಚಾರ್ಯರಾದ ದ್ರೋಣರ ಸಮೀಪಕ್ಕೆ ಹೋಗಿ ಅವರೊಡನೆ ಈ ಮಾತುಗಳನ್ನು ಹೇಳಿದನು :

"ಆಚಾರ್ಯರೇ! ನೀವು ಯಾವಾಗಲೂ ನನ್ನ ಹಿತದ ವಿಷಯದಲ್ಲಿಯೇ ಹೆಚ್ಚಿನ ಆಸಕ್ತಿಯುಳ್ಳವರಾಗಿರುತ್ತೀರಿ. ನಾವು ನಿಮ್ಮನ್ನೂ ಮತ್ತು ಪಿತಾಮಹನಾದ ಭೀಷ್ಮನನ್ನೂ ಆಶ್ರಯಿಸಿ, ದೇವತೆಗಳನ್ನೂ ಕೂಡ ಯುದ್ಧ ದಲ್ಲಿ ಜಯಿಸುವ ಅಭಿಲಾಷೆಯುಳ್ಳವರಾಗಿರುತ್ತೇವೆ. (ನಿಮ್ಮ ಸಹಕಾರದಿಂದ ಯುದ್ಧದಲ್ಲಿ ದೇವತೆಗಳನ್ನಾದರೂ ಜಯಿಸಿಯೇವು–ಎಂಬುದರಲ್ಲಿ ನನಗೆ ಸಂಶಯವೇ ಇಲ್ಲ.) ಹೀಗಿರುವಾಗ ನಿಮ್ಮ ಆಶ್ರಯವನ್ನು ಪಡೆದಿರುವ ನಾವು ಹೀನವೀರ್ಯರೂ, ಹೀನಪರಾಕ್ರಮಿಗಳೂ ಆಗಿರುವ ಪಾಂಡವರನ್ನು ಜಯಿ ಸದೇ ಇರುತ್ತೇವೆಯೇ? ಜಯಿಸಿಯೇ ಜಯಿಸುತ್ತೇವೆ. ಇದರಲ್ಲಿ ನನಗೆ ಸಂಶಯವಿಲ್ಲ. ಆದರೆ ನೀವು ಮಾತ್ರ ಈ ವಿಷಯದಲ್ಲಿ ಮನಸ್ಸು ಮಾಡ ಬೇಕು. ಯಾವ ರೀತಿಯಲ್ಲಿ ಪಾಂಡವರು ವಧಿಸಲ್ಪಡುವರೋ ಆ ರೀತಿಯಲ್ಲಿ ತಾವು ಯುದ್ಧಮಾಡಬೇಕು. ನಿಮಗೆ ಮಂಗಳವಾಗಲಿ."

ಮಹಾರಾಜ! ಅನಂತರ ಶ್ಯೇನವ್ಯೂಹದ ಶಿರಸ್ಸಿನ ಸ್ಥಾನದಲ್ಲಿದ್ದ ಸಾತ್ಯಕಿಯು ನೋಡುತ್ತಿದ್ದಂತೆಯೇ ಪಾಂಡವರ ಸೈನ್ಯವನ್ನು ದ್ರೋಣರು ಧ್ವಂಸಮಾಡಲು ಉಪಕ್ರಮಿಸಿದರು. ಒಡನೆಯೇ ಸತ್ಯವಿಕ್ರಮನಾದ

ಸಾತ್ಯಕಿಯು ಮಹಾಧನುಷ್ಮಂತರಾದ ದ್ರೋಣರ ರಭಸವನ್ನು ತಡೆದು ನಿಲ್ಲಿಸಿದನು. ಅನಂತರ ಅವರಿಬ್ಬರಿಗೂ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಪ್ರತಾಪವಂತರಾದ ದ್ರೋಣರು ಪರಮಕ್ರುದ್ಧರಾಗಿ ಶೈನೇಯನನ್ನು (ಸಾತ್ಯಕಿಯನ್ನು) ನಿಶಿತವಾದ ಬಾಣಗಳಿಂದ ಪ್ರಹರಿಸುತ್ತಾ ಅವನ ಜತ್ರುಪ್ರದೇಶವನ್ನು (ಕೊರಳಿನ ಎಲುಬುಪ್ರದೇಶ) ನಗು-ನಗುತ್ತಲೇ ಗಾಯಗೊಳಿಸಿದರು. ಸಾತ್ಯಕಿಯನ್ನು ದ್ರೋಣರು ಪೀಡಿಸುತ್ತಿರುವುದನ್ನು ಕಂಡು ಕ್ರುದ್ಧನಾದ ಭೀಮಸೇನನು ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರಿಂದ ಸಾತ್ಯಕಿಯನ್ನು ಸಂರಕ್ಷಿಸುವ ಸಲುವಾಗಿ ದ್ರೋಣರನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಭೀಮಸೇನನು ಸಾತ್ಯಕಿಯ ರಕ್ಷಣೆಗೆ ಬಂದುದನ್ನು ಕಂಡು ಕ್ರುದ್ಧರಾದ ದ್ರೋಣರೂ, ಭೀಷ್ಮ-ಶಲ್ಯರೂ ಭೀಮಸೇನನನ್ನು ಬಾಣಗಳಿಂದ ಮುಚ್ಚಿಬಿಟ್ಟರು.

ಶ್ಯೇನವ್ಯೂಹದ ಪೃಷ್ಠಭಾಗದಲ್ಲಿದ್ದ ಅಭಿಮನ್ಯುವೂ ಮತ್ತು ದ್ರೌಪದಿಯ ಮಕ್ಕಳೂ ದ್ರೋಣ-ಭೀಷ್ಮ-ಶಲ್ಯರು ಭೀಮನ ಮೇಲೆ ದಾಳಿಮಾಡುತ್ತಿದ್ದುದನ್ನು ಕಂಡು ಪರಮಕ್ರುದ್ಧರಾಗಿ ನಿಶಿತವಾದ ಬಾಣಗಳಿಂದಲೂ ಆಯುಧಗಳಿಂದಲೂ ಯುದ್ಧಮಾಡುತ್ತಿದ್ದ ನಿನ್ನ ಕಡೆಯ ಮಹಾರಥರೆಲ್ಲರನ್ನೂ ಪ್ರಹರಿಸಿದರು. ಮಹಾಬಲರಾದ ಭೀಷ್ಮ-ದ್ರೋಣರಿಬ್ಬರೂ ಪರಮಕ್ರುದ್ಧರಾಗಿ ತಮ್ಮ ಯೋಧರ ಮೇಲೆ ಬೀಳುತ್ತಿರುವುದನ್ನು ಕಂಡು ಮಹಾಧನುಷ್ಮಂತನಾದ ಶಿಖಂಡಿಯು ಅವರನ್ನೆದುರಿಸಲು ಮುನ್ನುಗ್ಗಿ ಹೋದನು. ಭರತಕುಲ ಪಿತಾಮಹನಾದ ಭೀಷ್ಮನು ಶಿಖಂಡಿಯನ್ನು ಸಂಧಿಸಿದೊಡನೆಯೇ ಅವನು ಹಿಂದೆ ಹೆಂಗಸಾಗಿದ್ದುದನ್ನು ನೆನೆದು ಅವನ ಮೇಲೆ ಶಸ್ತ್ರಪ್ರಯೋಗ ಮಾಡಲು ಹೋಗದೇ ಯುದ್ಧವನ್ನು ನಿಲ್ಲಿಸಿಬಿಟ್ಟನು. ಆ ಸಮಯದಲ್ಲಿ ಆಯುಧವನ್ನು ಕೆಳಗಿಟ್ಟು ಕುಳಿತ ಭೀಷ್ಮನನ್ನು ರಕ್ಷಿಸುವಂತೆ ರಾಜನಾದ ದುರ್ಯೋಧನನು ದ್ರೋಣಾಚಾರ್ಯರನ್ನು ಪ್ರಾರ್ಥಿಸಲಾಗಿ, ಅವರು ಒಡನೆಯೇ ಶಿಖಂಡಿಯ ಕಡೆಗೆ ಧಾವಿಸಿದರು. ಶಿಖಂಡಿಯು ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರನ್ನು ಎದುರಿಸಿ ಸ್ವಲ್ಪಹೊತ್ತಿನವರೆಗೆ ಯುದ್ಧಮಾಡಿ ತ್ರಾಸಗೊಂಡವನಾಗಿ–ಪ್ರಚಂಡವಾದ ಪ್ರಲಯಾಗ್ನಿಯಿಂದ ದೂರವಾಗುವಂತೆ-ದ್ರೋಣರಿಂದ ತಪ್ಪಿಸಿಕೊಂಡು ಹೊರಟುಹೋದನು.

ಅನಂತರ ನಿನ್ನ ಮಗನಾದ ದುರ್ಯೋಧನನು ಯುದ್ಧದಲ್ಲಿ ಮಹಾಯಶಸ್ಸನ್ನು ಗಳಿಸಬೇಕೆಂಬ ಆಶಯದಿಂದ ದೊಡ್ಡದಾದ ಸೇನೆಯೊಡನೆ ಭೀಷ್ಮನ ಸಮೀಪಕ್ಕೆ ಬಂದು ಅವನನ್ನು ರಕ್ಷಿಸಿದನು. ಅದೇ ರೀತಿಯಲ್ಲಿ ಪಾಂಡವರೂ ಸಹ ಯುದ್ಧದಲ್ಲಿ ಜಯಗಳಿಸಿಯೇ ತೀರಬೇಕೆಂದು ದೃಢವಾದ ಮನಸ್ಸುಳ್ಳವರಾಗಿ ಧನಂಜಯನನ್ನು ಮುಂದೆಮಾಡಿಕೊಂಡು ಭೀಷ್ಮನನ್ನೇ ಆಕ್ರಮಿಸಿದರು. ಜಯವನ್ನೂ ಮತ್ತು ಯಶಸ್ಸನ್ನೂ ಅಭಿಲಾಷಿಸಿದ್ದ ಕೌರವ-ಪಾಂಡವರಿಗೆ ದೇವತೆಗಳಿಗೂ ಮತ್ತು ದಾನವರಿಗೂ ನಡೆದ ಯುದ್ಧದಂತೆಯೇ ಘೋರವೂ ಮತ್ತು ಪರಮಾದ್ಭುತವೂ ಆದ ಯುದ್ಧವು ನಡೆಯಿತು.

೬೯ನೆಯ ಅಧ್ಯಾಯವು ಮುಗಿಯಿತು.

೭೦ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಷ್ಮ ಮತ್ತು ಭೀಮಸೇನರ ಭಯಂಕರಯುದ್ಧ

ಮಹಾರಾಜ! ಭೀಮಸೇನನ ಭಯದಿಂದ ನಿನ್ನ ಮಕ್ಕಳನ್ನು ರಕ್ಷಣೆ ಮಾಡುವ ಇಚ್ಛೆಯಿಂದ ಶಾಂತನುವಿನ ಮಗನಾದ ಭೀಷ್ಮನು ಭೀಮಸೇನನೊಡನೆ ಅತಿಭಯಂಕರವಾದ ಯುದ್ಧಮಾಡಿದನು.

ಪೂರ್ವಾಹ್ಣದಲ್ಲಿ ಮುಖ್ಯ-ಮುಖ್ಯರಾದ ಶೂರರನ್ನು ವಿನಾಶಗೊಳಿಸಿದ ಮಹಾಭಯಂಕರವಾದ ಯುದ್ಧವು ಪಾಂಡವರ ಪಕ್ಷದ ಮತ್ತು ಕೌರವರ ಪಕ್ಷದ ರಾಜರ ನಡುವೆ ನಡೆಯಿತು. ಮಹಾಭಯಂಕರವಾದ ರೋಮಾಂಚಕರವಾದ ಯುದ್ಧವು ನಡೆಯುತ್ತಿರಲಾಗಿ ಆಕಾಶವನ್ನು ವ್ಯಾಪಿಸಿದ ಕೋಲಾಹಲಶಬ್ದವುಂಟಾಯಿತು. ಆನೆಗಳ ಘೀಂಕಾರಗಳಿಂದಲೂ, ಕುದುರೆಗಳ ಹೇಷಾರವಗಳಿಂದಲೂ, ಭೇರೀ-ಶಂಖನಿನಾದಗಳಿಂದಲೂ ಆಕಾಶವ್ಯಾಪಿಯಾದ ಕೋಲಾಹಲಶಬ್ದವುಂಟಾಯಿತು. ಗೋಶಾಲೆಗಳಲ್ಲಿರುವ ಹೋರಿಗಳು ಗರ್ಜಿಸುವಂತೆ–ಮಹಾಬಲರಾದ ಮಹಾಪರಾಕ್ರಮಿಗಳಾದ ಉಭಯಪಕ್ಷಗಳ ಯೋಧರೂ ವಿಜಯಕ್ಕೋಸ್ಕರ ಯುದ್ಧಮಾಡಲು ಇಚ್ಛೆಯುಳ್ಳವರಾಗಿ ಅನ್ಯೋನ್ಯವಾಗಿ ಗರ್ಜನೆ ಮಾಡುತ್ತಿದ್ದರು. ನಿಶಿತವಾದ ಬಾಣಗಳಿಂದ ಯೋಧರು ತಮ್ಮ ಎದುರಾಳಿಗಳ ಶಿರಸ್ಸುಗಳನ್ನು ಕೆಳಕ್ಕೆ ಕೆಡುವುತ್ತಿದ್ದರು. ಅದನ್ನು ನೋಡಿದರೆ ಆಕಾಶದಿಂದ ಕಲ್ಲಿನ ಮಳೆಯೇನಾದರೂ ಬೀಳುತ್ತಿರುವುದೋ ಎಂಬಂತೆ

ಕಾಣುತ್ತಿದ್ದಿತು. ಕರ್ಣಕುಂಡಲಗಳನ್ನೂ ಶಿರಸ್ತ್ರಾಣಗಳನ್ನೂ ಧರಿಸಿದ್ದ, ಚಿನ್ನದಂತೆ ಉಜ್ವಲವಾದ ಪ್ರಕಾಶದಿಂದ ಕೂಡಿದ್ದ ಅನೇಕಶಿರಸ್ಸುಗಳು ಆ ಯುದ್ಧಭೂಮಿಯಲ್ಲಿ ಬೀಳುತ್ತಿದ್ದುವು. ಮಹಾರಾಜ! ಆ ರಣಾಂಗಣವು ಬಾಣಗಳಿಂದ ಛಿನ್ನ-ಭಿನ್ನವಾದ ಶರೀರಗಳಿಂದಲೂ ಧನುಸ್ಸನ್ನು ಹಿಡಿದಿದ್ದ ಮತ್ತು ಹಸ್ತಾಭರಣಗಳಿಂದ ಅಲಂಕೃತವಾಗಿದ್ದ ತೋಳುಗಳಿಂದಲೂ ವ್ಯಾಪ್ತ ವಾಗಿದ್ದಿತು. ಕವಚಗಳಿಂದ ಅಲಂಕೃತವಾಗಿದ್ದ ಶರೀರಗಳಿಂದಲೂ, ವಜ್ರದ ಉಂಗುರಗಳಿಂದ ಸಮಲಂಕೃತವಾದ ಹಸ್ತಗಳಿಂದಲೂ, ಪೂರ್ಣಚಂದ್ರಸದೃಶ ವಾದ ಮತ್ತು ಕೆಂಪಾದ ಕಡೆಗಣ್ಣುಗಳುಳ್ಳ ಮುಖಗಳಿಂದಲೂ ಕೇವಲ ಮುಹೂರ್ತಕಾಲದಲ್ಲಿ ಆ ರಣಾಂಗಣವು ತುಂಬಿಹೋಗಿದ್ದಿತು. ಆನೆ, ಕುದುರೆ ಮತ್ತು ಮನುಷ್ಯರ ಕತ್ತರಿಸಲ್ಪಟ್ಟ ಸರ್ವಾವಯವಗಳಿಂದಲೂ ಭೂಮಿಯು ಮುಚ್ಚಿಹೋಗಿದ್ದಿತು. ಗಜಾಶ್ವ-ಪದಾತಿಸೈನ್ಯಗಳ ಪಾದಸಂಘಟ್ಟನೆಗಳಿಂದಲೂ, ರಥಗಳ ರಭಸವಾದ ಸಂಚಾರದಿಂದಲೂ ರಣಾಂಗಣದ ಧೂಳು ಮೇಲೆದ್ದು ಭಯಂಕರವಾದ ಮೇಘದಂತೆ ಸುತ್ತಲೂ ಹರಡಿಕೊಂಡಿತು. ಶಸ್ತ್ರಾಸ್ತ್ರಗಳ ಪ್ರಹಾರದಿಂದ ಹೊರಚಿಮ್ಮುತ್ತಿದ್ದ ಪ್ರಕಾಶವೇ ರಜೋಮೇಘದ ವಿದ್ಯುತ್ತಿನಂತೆ ಕಾಣುತ್ತಿದ್ದಿತು. ಧನುಸ್ಸೇ ಮೊದಲಾದ ಆಯುಧಗಳ ಶಬ್ದಗಳು ರಜೋಮೇಘದಿಂದ ಹೊರಬರುವ ಗುಡುಗು- ಸಿಡಿಲುಗಳಂತಿದ್ದುವು. (ರಣರಂಗದ ಮೇಲೆದ್ದ ಧೂಳಿಯೇ ಮೇಘಪ್ರಾಯವಾಗಿಯೂ, ಶಸ್ತ್ರಪ್ರಹಾರಕಾಲದಲ್ಲಿ ಹೊರಚಿಮ್ಮುತ್ತಿದ್ದ ಪ್ರಕಾಶವೇ ಮಿಂಚಿನಂತೆ ಕಾಣುತ್ತಿದ್ದು, ಶಸ್ತ್ರಗಳ ಸಂಘರ್ಷಣೆಯಿಂದ ಉಂಟಾಗುತ್ತಿದ್ದ ಶಬ್ದವೇ ಮೇಘದಲ್ಲಿನ ಗುಡುಗಿನ ಶಬ್ದದಂತೆ ಕೇಳುತ್ತಿದ್ದಿತು.) ನಿಶ್ಚಯವಾಗಿಯೂ ಆ ಯುದ್ಧವು ಬಹುಭಯಂಕರವಾಗಿಯೂ, ಮಾತ್ಸರ್ಯದಿಂದ ಕೂಡಿದು ದಾಗಿಯೂ, ರಕ್ತವು ನೀರಿನ ರೂಪದಲ್ಲಿ ಹರಿಯುವುದಾಗಿಯೂ ಇದ್ದಿತು. ಈ ರೀತಿಯಲ್ಲಿ ಕೌರವರ ಮತ್ತು ಪಾಂಡವರ ನಡುವೆ ಯುದ್ಧವು ಮುಂದು ವರಿಯಿತು. ಮಹಾಭಯಂಕರವಾದ, ಸಂಕುಲಮಯವಾದ, ರೋಮಾಂಚ ಕರವಾದ ಆ ಯುದ್ಧದಲ್ಲಿ ಯುದ್ಧದುರ್ಮದರಾದ ಕ್ಷತ್ರಿಯರು ಬಾಣಗಳ ಮಳೆಯನ್ನೇ ಸುರಿಸುತ್ತಿದ್ದರು.

ಬಾಣಗಳ ಸತತಪ್ರಹಾರದಿಂದ ಪೀಡಿತವಾದ ನಿನ್ನ ಕಡೆಯ ಮತ್ತು

ಪಾಂಡವರ ಕಡೆಯ ಆನೆಗಳು ಸಂಕಟದಿಂದ ಚೀತ್ಕಾರಮಾಡುತ್ತಿದ್ದುವು. ಧೀರರಾದ, ವೀರರಾದ, ಮಹಾತೇಜಸ್ವಿಗಳಾದ, ಕ್ರೋಧವಶರಾದ ಯೋಧರ ಅನವರತವಾದ ಧನುಷ್ಟೇಂಕಾರಶಬ್ದಗಳಿಂದ ಶಬ್ದಾಯಮಾನವಾಗಿದ್ದ ಆ ರಣ ರಂಗದಲ್ಲಿ ಬೇರಾವ ಶಬ್ದವೂ ಕೇಳುತ್ತಲೇ ಇರಲಿಲ್ಲ. ಶಿರಸ್ಸಿಲ್ಲದ ಮುಂಡಗಳು ರಣರಂಗದ ಸುತ್ತಲೂ ಎದ್ದುನಿಂತಿದ್ದುವು. ರಕ್ತವು ನೀರಿನಂತೆಯೇ ಪ್ರವಹಿಸುತ್ತಿತ್ತು. ಅಂತಹ ಭಯಂಕರವಾದ ಸನ್ನಿವೇಶದಲ್ಲಿಯೂ ಶತ್ರುಗಳ ವಧೆಗೆ ಉದ್ಯುಕ್ತರಾಗಿದ್ದ ರಾಜರು ಆಯುಧಗಳನ್ನೆತ್ತಿಕೊಂಡು ರಣಾಂಗಣದ ಸುತ್ತಲೂ ಓಡಾಡುತ್ತಿದ್ದರು. ಪರಿಘಾಯುಧಕ್ಕೆ ಸಮಾನವಾದ ತೋಳುಗಳನ್ನು ಹೊಂದಿದ್ದ ಅಮಿತತೇಜಸ್ವಿಗಳಾದ, ಶೂರರಾದ ಯೋಧರು ಶರ- ಶಕ್ತಿ ಮತ್ತು ಗದೆಗಳಿಂದ ರಣಕ್ಷೇತ್ರದಲ್ಲಿ ಒಬ್ಬರು ಮತ್ತೊಬ್ಬರನ್ನು ಸಂಹರಿಸುತ್ತಿದ್ದರು. ಮಾವಟಿಗರು ಸತ್ತುಹೋಗಿ ಅಂಕುಶಗಳ ನಿಯಂತ್ರಣವಿಲ್ಲದೇ ಇದ್ದ ಆನೆಗಳು ಶಸ್ತ್ರಪ್ರಹಾರಗಳಿಂದ ಪೀಡಿಸಲ್ಪಟ್ಟುವುಗಳಾಗಿ ರಣಾಂಗಣದ ಸುತ್ತಲೂ ಗೊತ್ತುಗುರಿಯಿಲ್ಲದೇ ಓಡಾಡುತ್ತಿದ್ದುವು. ಅದೇ ರೀತಿಯಲ್ಲಿ ಸವಾರರಿಲ್ಲದ ಕುದುರೆಗಳೂ ಸಹ ಬಾಣಗಳ ಪೆಟ್ಟುತಿಂದು ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದುವು. ಭರತಸತ್ತಮ! ಶರಪ್ರಹಾರದಿಂದ ಪೀಡಿತರಾದ ಉಭಯಪಕ್ಷಗಳ ವೀರಯೋಧರೂ ನೋವನ್ನು ಸಹಿಸಿಕೊಳ್ಳಲಾಗದೇ ಚೀತ್ಕಾರಮಾಡುತ್ತಾ ಅಲ್ಲಿಂದಿಲ್ಲಿಗೆ ನೆಗೆದಾಡುತ್ತಾ ಕೆಳಕ್ಕೆ ಬೀಳುತ್ತಿದ್ದರು. ಭೀಮ-ಭೀಷ್ಮರಿಗೆ ಘೋರಯುದ್ಧವು ನಡೆಯುತ್ತಿದ್ದಾಗ ಆನೆ, ಕುದುರೆ ಮುಂತಾದ ವಾಹನಗಳ ತಲೆಗಳು, ಧನುಸ್ಸು, ಗದೆಗಳು, ಪರಿಘಾಯುಧ ಗಳು, ಕೈಗಳು, ತೊಡೆಗಳು, ಕಾಲುಗಳು, ಅಂಗದ-ಕೇಯೂರಗಳೇ ಮೊದ ಲಾದ ಆಭರಣಗಳು ರಾಶಿ-ರಾಶಿಯಾಗಿ ಬಿದ್ದಿರುವುದು ರಣಾಂಗಣದ ಸುತ್ತಲೂ ಕಾಣುತ್ತಿದ್ದಿತು. ಅನವರತವಾದ ಬಾಣಗಳ ಪ್ರಹಾರದಿಂದಲೂ ಯುದ್ಧದಿಂದ ಹಿಮ್ಮೆಟ್ಟದೇ ಇದ್ದ ಅಶ್ವ-ಗಜ-ರಥ-ಸೈನ್ಯಗಳ ಸಮೂಹಗಳೂ ಅಲ್ಲಲ್ಲಿ ಕಾಣುತ್ತಿದ್ದುವು. ಎಲ್ಲರಿಗೂ ಮರಣಕಾಲವು ಸನ್ನಿಹಿತವಾಗಿದ್ದ ಆ ಸಮಯದಲ್ಲಿ ಗದೆಗಳಿಂದಲೂ, ಕತ್ತಿಗಳಿಂದಲೂ, ಪ್ರಾಸಗಳಿಂದಲೂ, ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದಲೂ ಕ್ಷತ್ರಿಯರು ಪರಸ್ಪರವಾಗಿ ಕಾದಾಡಿದರು. ಮತ್ತೆ ಕೆಲವು ಮಲ್ಲಯುದ್ಧಕುಶಲರಾದ ಯೋಧರು ಲೋಹಮಯವಾದ ಪರಿಘಾಯುಧಗಳಂತೆಯೇ ಇದ್ದ ಬಾಹುಗಳಿಂದ ಅನೇಕಪ್ರಕಾರವಾದ ವರಸೆ

ಗಳಿಂದ ಮಲ್ಲಯುದ್ಧಮಾಡುತ್ತಿದ್ದರು. ಆ ಸಮಯದಲ್ಲಿ ನಿನ್ನ ಕಡೆಯ ಮತ್ತು ಪಾಂಡವರ ಕಡೆಯ ವೀರಯೋಧರು ಮುಷ್ಟಿಗಳಿಂದಲೂ, ಮೊಣ ಕಾಲುಗಳಿಂದಲೂ, ಕೈಗಳಿಂದಲೂ ಪರಸ್ಪರವಾಗಿ ಹಿಂಸಿಸುತ್ತಿದ್ದರು.

ಜನೇಶ್ವರ! ಹೀಗೆ ಘೋರಯುದ್ಧವು ನಡೆಯುತ್ತಿದ್ದಾಗ ಕೆಲವರು ಸತ್ತು ಕೆಳಗೆ ಬೀಳುತ್ತಿದ್ದರು ; ಮತ್ತೆ ಕೆಲವರು ಪೆಟ್ಟು ಬಿದ್ದು ತತ್ತರಿಸುತ್ತಾ ಕೆಳಕ್ಕೆ ಬೀಳುವುದರಲ್ಲಿರುತ್ತಿದ್ದರು ; ಮತ್ತೆ ಕೆಲವರು ಭೂಮಿಯ ಮೇಲೆ ಬಿದ್ದು ಪ್ರಾಣೋತ್ಕ್ರಮಣಸಂಕಟವನ್ನು ಸಹಿಸಿಕೊಳ್ಳಲಾರದೇ ಚಡಪಡಿಸುತ್ತಿದ್ದರು. ಈ ರೀತಿಯಲ್ಲಿ ಮಹಾಭಯಂಕರವಾದ ಯುದ್ಧವು ರಣಾಂಗಣದ ಸುತ್ತಲೂ ನಡೆಯುತ್ತಿದ್ದಿತು. ಕೆಲವು ರಥಿಗಳು ತಮ್ಮ ರಥಗಳನ್ನು ಕಳೆದುಕೊಂಡು ಕೈ ಯಲ್ಲಿ ಶ್ರೇಷ್ಠವಾದ ಕತ್ತಿಯನ್ನು ಹಿಡಿದುಕೊಂಡು ತಮ್ಮ-ತಮ್ಮ ಶತ್ರುಗಳನ್ನು ಸಂಹಾರಮಾಡುವ ಆಶಯದಿಂದ ತಮ್ಮ ಶತ್ರುಗಳಿದ್ದ ಕಡೆಗೆ ಓಡಿಹೋಗು ತ್ತಿದ್ದರು. ಈ ರೀತಿಯಲ್ಲಿ ಪ್ರಚಂಡವಾದ ಯುದ್ಧವು ನಡೆಯುತ್ತಿರಲಾಗಿ ದುರ್ಯೋಧನರಾಜನು ಸಾವಿರಾರು ಕಲಿಂಗಸೈನಿಕರಿಂದ ಪರಿವೃತನಾಗಿ ಭೀಷ್ಮನನ್ನು ಮುಂದೆಮಾಡಿಕೊಂಡು ಪಾಂಡವರನ್ನು ಪುನಃ ಆಕ್ರಮಿಸಿದನು. ಅದೇ ರೀತಿಯಲ್ಲಿಯೇ ಪಾಂಡವರೂ ಪರಮಕ್ರುದ್ಧರಾಗಿ ವೃಕೋದರನನ್ನು ಮುಂದೆಮಾಡಿಕೊಂಡು ಭೀಷ್ಮನ ಮೇಲೆ ದಾಳಿಮಾಡಿದರು. ಘೋರ ಯುದ್ಧವು ಪುನಃ ಪ್ರಾರಂಭವಾಯಿತು."

೨೦ನೆಯ ಅಧ್ಯಾಯವು ಮುಗಿಯಿತು.

೨೧ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಕೌರವರೊಡನೆ ಭೀಮಾರ್ಜುನರ ಭಯಂಕರವಾದ ಯುದ್ಧದ ವರ್ಣನೆ

ಸಂಜಯನು ಧೃತರಾಷ್ಟ್ರನಿಗೆ ಯುದ್ಧದ ವರದಿಯನ್ನು ಒಪ್ಪಿಸುತ್ತಾ ಹೇಳುತ್ತಾನೆ : "ಪಾರ್ಥನು ತನ್ನ ಸಹೋದರರೆಲ್ಲರೂ ಭೀಷ್ಮನೊಡನೆ ಯುದ್ಧ ದಲ್ಲಿ ತೊಡಗಿರುವುದನ್ನು ನೋಡಿದನು. ಒಡನೆಯೇ ತಾನೂ ಸಹ ಬಾಣ ವನ್ನು ಧನುಸ್ಸಿಗೆ ಯೋಜಿಸಿಕೊಂಡೇ ಭೀಷ್ಮನ ಕಡೆಗೆ ಧಾವಿಸಿದನು. ಪಾಂಚ ಜನ್ಯಶಂಖದ ನಿನಾದ, ಸುಪ್ರಸಿದ್ಧವಾದ ಗಾಂಡಿವಧನುಸ್ಸಿನ ಟೇಂಕಾರ—ಇವು ಗಳನ್ನು ಕೇಳಿ ಅರ್ಜುನನ ರಥದ ಮೇಲಿದ್ದ ಕಪಿಧ್ವಜವನ್ನು ನೋಡಿದ ನಾವು ಬಹುಭೀತರಾದೆವು. ಆಕಾಶದಲ್ಲಿ ಹಾರಾಡುತ್ತಿದ್ದ ಅರ್ಜುನನ ಪತಾಕೆಯಲ್ಲಿದ್ದ

ಕಪಿಗೆ ಸಿಂಹದ ಪುಚ್ಛವಿದ್ದಿತು. ಉರಿಯುತ್ತಿರುವ ಪರ್ವತದಂತೆಯೇ ಆ ಧ್ವಜವು ಕಾಣುತ್ತಿದ್ದಿತು. ರಥವು ಬರುವ ಹಾದಿಯಲ್ಲಿ ಅನೇಕವೃಕ್ಷಗಳಿದ್ದರೂ ಅರ್ಜುನನ ಪತಾಕೆಗೆ ಅದು ತಡೆಯಾಗುತ್ತಿರಲಿಲ್ಲ. ಆ ಪತಾಕೆಯು ಆಕಾಶ ದಲ್ಲಿ ಹುಟ್ಟಿದ ಧೂಮಕೇತುವಿನಂತೆಯೇ ಕಾಣುತ್ತಿದ್ದಿತು. ಬಹುವರ್ಣ ವುಳ್ಳದುದಾಗಿಯೂ ಚಿತ್ರ-ವಿಚಿತ್ರವಾಗಿಯೂ ಇದ್ದಿತು. ದಿವ್ಯವಾದ ವಾನರ ಚಿಹ್ನೆಯನ್ನು ಹೊಂದಿದ್ದಿತು. ಗಾಂಡೀವಧನ್ವನಾದ ಅರ್ಜುನನ ಇಂತಹ ಧ್ವಜ ವನ್ನು ನಾವು ದೂರದಿಂದಲೇ ನೋಡಿದೆವು, ಮಹಾರಾಜ!

ಆಕಾಶದಲ್ಲಿ ಕಾರ್ಮುಗಿಲಿನ ಮಧ್ಯದಲ್ಲಿ ಕ್ಷಣ-ಕ್ಷಣಕ್ಕೂ ಪ್ರಕಾಶಿಸುವ ಮಿಂಚಿನಂತೆ–ಸುವರ್ಣಮಯವಾದ ಬೆನ್ನಿನಿಂದ ಯುಕ್ತವಾಗಿದ್ದ ಗಾಂಡೀವ ಧನುಸ್ಸನ್ನು ಆ ಮಹಾಯುದ್ಧಸಮಯದಲ್ಲಿ ನಮ್ಮ ಕಡೆಯ ಯೋಧರೆಲ್ಲರೂ ನೋಡಿದರು. ಅರ್ಜುನನು ನಿನ್ನ ಸೇನೆಯನ್ನು ಅವ್ಯಾಹತವಾಗಿ ಸಂಹರಿಸು ತ್ತಿದ್ದಾಗ ಇಂದ್ರನಂತೆಯೇ ಗರ್ಜನೆಮಾಡುತ್ತಿದ್ದನು. ಆ ಸಮಯದಲ್ಲಿ ಅವನು ಶಿಂಜಿನಿಯನ್ನು ಅವ್ಯಾಹತವಾಗಿ ಸೆಳೆದೆಳೆಯುವಾಗ ಮಾಡುತ್ತಿದ್ದ ಕೈಗಳ ಘೋರಶಬ್ದವನ್ನು ಪದೇ-ಪದೇ ಕೇಳುತ್ತಿದ್ದೆವು. ಭಯಂಕರವಾದ ಅಸ್ತ್ರಗಳನ್ನು ಹೊಂದಿದ್ದ ಅರ್ಜುನನು–ಬಿರುಗಾಳಿಯಿಂದಲೂ, ಮಿಂಚಿನಿಂದಲೂ ಮತ್ತು ಗುಡುಗಿನಿಂದಲೂ ಕೂಡಿದ ಮೇಘದಂತೆ–ಎಲ್ಲ ದಿಕ್ಕುಗಳನ್ನೂ ಬಾಣಗಳ ಮಳೆಗರೆಯುವಿಕೆಯಿಂದ ತುಂಬಿಸುತ್ತಾ ಭೀಷ್ಮನನ್ನು ಆಕ್ರಮಿಸಿದನು. ಅರ್ಜುನನು ಬಿಡುತ್ತಿದ್ದ ಅಸ್ತ್ರಗಳಿಂದ ಭ್ರಾಂತರಾದ ನಾವು ಪೂರ್ವದಿಕ್ಕು ಯಾವುದು? ಪಶ್ಚಿಮದಿಕ್ಕು ಯಾವುದು?–ಎಂಬುದನ್ನೇ ತಿಳಿಯದೇ ಹೋದೆವು. ನಮ್ಮೆಲ್ಲರನ್ನೂ ಅರ್ಜುನನ ಬಾಣಗಳು ಮುಚ್ಚಿಬಿಟ್ಟಿದ್ದುವು. ಭ್ರಾಂತರಾದ ನಾವು ಬಾಣಗಳ ಮಳೆಯಿಂದ ತಪ್ಪಿಸಿಕೊಳ್ಳಲು ಯಾವ ದಿಕ್ಕಿಗೆ ಹೋಗಬೇಕೆಂಬುದನ್ನೂ ತಿಳಿಯದೇ ಹೋದೆವು. ದಿಕ್ಕನ್ನೇ ಅರಿಯದಿದ್ದ ಮೇಲೆ ಹೋಗುವುದಾದರೂ ಎಲ್ಲಿಗೆ? ನಮ್ಮ ಕಡೆಯ ಯೋಧರಲ್ಲಿ ಅರ್ಜುನನನ್ನು ನೋಡುತ್ತಲೇ ಕೆಲವರ ವಾಹನಗಳು (ಗಜಾಶ್ವಗಳು) ಸೊರಗಿ ಕೆಳಗೆ ಬಿದ್ದುವು. ಕೆಲವರ ಕುದುರೆಗಳು ಸತ್ತೇಹೋದುವು. ಕೆಲವರು ಪ್ರಜ್ಞಾ ಹೀನರಾದರು. ಮತ್ತೆ ಕೆಲವರು ಭಯದಿಂದ ಒಬ್ಬರಿಗೊಬ್ಬರು ತಬ್ಬಿಕೊಂಡು ನಿನ್ನ ಮಕ್ಕಳೊಡನೆ ಭೀಷ್ಮನನ್ನೇ ಶರಣುಹೊಂದಿದರು. ಅಂದಿನ ಯುದ್ಧದಲ್ಲಿ

ಭೀಷ್ಮನೊಬ್ಬನೇ ಆರ್ತರಾದ ಸೈನಿಕರಿಗೆ ಶರಣ್ಯನಾದನು. ಅರ್ಜುನನನ್ನು ನೋಡಿ ಭಯಗೊಂಡ ಸೈನಿಕರ ಪಾಡನ್ನು ಹೇಳುವಂತೆಯೇ ಇರಲಿಲ್ಲ ; ಧೃತರಾಷ್ಟ್ರ! ಭಯಗೊಂಡ ರಥಿಕರು ತಮ್ಮ ತಮ್ಮ ರಥಗಳಿಂದಲೇ ತತ್ತರಿಸಿ ಕೆಳಕ್ಕೆ ಬೀಳುತ್ತಿದ್ದರು. ಕುದುರೆಸವಾರರು ಕುದುರೆಗಳ ಮೇಲಿನಿಂದಲೇ ಭ್ರಾಂತರಾಗಿ ಕೆಳಕ್ಕೆ ಬೀಳುತ್ತಿದ್ದರು. ಪದಾತಿಗಳಾದರೋ ನಿಂತಿದ್ದಂತೆಯೇ ಕುಸಿದುಬೀಳುತ್ತಿದ್ದರು. ಸಿಡಿಲಿನ ಶಬ್ದದಂತೆಯೇ ಇದ್ದ ಗಾಂಡೀವಧನುಸ್ಸಿನ ಟೇಂಕಾರಶಬ್ದವನ್ನು ಕೇಳಿ ಭಯಗೊಂಡ ನಮ್ಮ ಕಡೆಯ ಎಲ್ಲ ಸೈನ್ಯಗಳೂ ಇದ್ದಲ್ಲಿಯೇ ಉಡುಗಿಕೊಂಡುವು. ಆ ಸಮಯಕ್ಕೆ ಸರಿಯಾಗಿ ಕಾಂಬೋಜ ರಾಜನಾದ ಸುದಕ್ಷಿಣನು ಕಾಂಬೋಜದೇಶದಲ್ಲಿ ಹುಟ್ಟಿದ ಬೃಹತ್ತಾಗಿಯೂ ಮತ್ತು ಶೀಘ್ರಗಾಮಿಯಾಗಿಯೂ ಇದ್ದ ಅಶ್ವಸೈನ್ಯದೊಡನೆ ಅರ್ಜುನನನ್ನು ಎದುರಿಸಲು ಹೋದನು. ಅವನ ಜೊತೆಯಲ್ಲಿ ಗೋಪಾಯನರೆಂಬ ಹೆಸರಿನ ಅನೇಕಸಹಸ್ರ ಗೋಪಸೈನಿಕರೂ ಇದ್ದರು. ಕಲಿಂಗದೇಶದ ಸಮಸ್ತಯೋಧ ಮುಖ್ಯರಿಂದಲೂ ಪರಿವೃತನಾದ ಕಲಿಂಗಾಧಿಪತಿಯೂ ಅರ್ಜುನನೊಡನೆ ಯುದ್ಧಕ್ಕೆ ಹೊರಟನು. ಅವನೊಡನೆ ಮದ್ರ-ಸೌವೀರ-ಗಾಂಧಾರ ಮತ್ತು ತ್ರಿಗರ್ತಸೈನಿಕರೂ ಇದ್ದರು. ಜಯದ್ರಥನೂ ಸಹ ಎಲ್ಲ ರಾಜರೊಡನೆಯೂ ಸೇರಿಕೊಂಡು ದುಃಶಾಸನಪುರಃಸರನಾಗಿ ಅರ್ಜುನನೊಡನೆ ಯುದ್ಧಕ್ಕೆ ಹೊರ ಟನು. ಅನೇಕ ದೇಶಗಳ ಸೈನಿಕರೂ ಅವನನ್ನು ಹಿಂಬಾಲಿಸಿಹೋದರು. ಇಷ್ಟು ಮಾತ್ರವಲ್ಲದೇ ನಿನ್ನ ಮಗನ ಆಜ್ಞಾನುಸಾರವಾಗಿ ಹದಿನಾಲ್ಕು ಸಾವಿರ ಶ್ರೇಷ್ಠ ಕುದುರೆಸವಾರರು ಶಕುನಿಯನ್ನು ಸುತ್ತುವರಿದು ಯುದ್ಧಸನ್ನದ್ಧರಾಗಿ ನಿಂತರು.

ಅನಂತರ ಪ್ರತ್ಯೇಕ-ಪ್ರತ್ಯೇಕವಾಗಿದ್ದ ನಿನ್ನ ರಥ-ಗಜಾಶ್ವ-ಪದಾತಿ ಸೈನಿಕರು ಒಟ್ಟುಗೂಡಿಕೊಂಡು ಆ ಮಹಾಯುದ್ಧದಲ್ಲಿ ಅರ್ಜುನನನ್ನು ನಾಲ್ಕು ದಿಕ್ಕುಗಳಿಂದಲೂ ಪ್ರಹರಿಸಿದರು. ರಥ-ಗಜಾಶ್ವ-ಪದಾತಿಸೈನ್ಯಗಳ ಸಾಲುಗಳ ಸಂಘಟ್ಟನೆಯಿಂದ ಹೊರಟು ಮೇಲಕ್ಕೆ ಹೋದ ಮಹಾ ಮೇಘಸದೃಶವಾದ ಧೂಳಿಯು ಯುದ್ಧವನ್ನು ಮತ್ತಷ್ಟು ಭಯಂಕರವಾಗಿ ಕಾಣುವಂತೆ ಮಾಡಿತು. ತೋಮರ-ಪ್ರಾಸ-ನಾರಾಚಗಳನ್ನು ಹೊಂದಿದ್ದ ಗಜಾಶ್ವ-ರಥಯೋಧರ ಮಹಾಬಲದಿಂದ ಭೀಷ್ಮನು ಕಿರೀಟವನ್ನು ಧರಿಸಿದ್ದ ಅರ್ಜುನನನ್ನು ಆಕ್ರಮಿಸಿದನು. ಎರಡೂ ಪಕ್ಷಗಳ ಇತರ ಮಹಾರಥರು ತಮ-ತಮಗೆ ಅನುರೂಪರಾದವರೊಡನೆ ಯುದ್ಧ

ಮಾಡಲು ಉಪಕ್ರಮಿಸಿದರು. ಅವಂತೀದೇಶದ ರಾಜನು–ಕಾಶಿರಾಜನೊಡನೆಯೂ, ಸೈಂಧವನು–ಭೀಮಸೇನನೊಡನೆಯೂ, ಯುಧಿಷ್ಠಿರನು-ಅಮಾತ್ಯರೊಡನೆಯೂ, ಮಕ್ಕಳೊಡನೆಯೂ ಕೂಡಿಕೊಂಡು ಮದ್ರಾಧಿಪತಿಯಾದ, ಯಶೋವಂತನಾದ ಶಲ್ಯನೊಡನೆ ಯುದ್ಧಮಾಡುತ್ತಿದ್ದರು. ವಿಕರ್ಣನು–ಸಹದೇವನೊಡನೆಯೂ, ಚಿತ್ರಸೇನನು–ಶಿಖಂಡಿಯೊಡನೆಯೂ, ಮತ್ಸ್ಯದೇಶೀಯರಾದ ಯೋಧರು ದುರ್ಯೋಧನನೊಡನೆಯೂ ಮತ್ತು ಶಕುನಿಯೊಡನೆಯೂ ಯುದ್ಧಕ್ಕೆ ಹೋದರು. ದ್ರುಪದ, ಚೇಕಿತಾನ ಮತ್ತು ಮಹಾರಥನಾದ ಸಾತ್ಯಕಿ ಇವರು ಅಶ್ವತ್ಥಾಮನೊಡನಿದ್ದ ದ್ರೋಣರೊಡನೆ ಯುದ್ಧಮಾಡುತ್ತಿದ್ದರು. ಕೃಪ ಮತ್ತು ಕೃತವರ್ಮರು ಧೃಷ್ಟದ್ಯುಮ್ನನನ್ನು ಎದುರಿಸಿದರು. ಈ ರೀತಿಯಾಗಿ ಅಗ್ರಭಾಗಕ್ಕೆ ಒಯ್ಯಲ್ಪಟ್ಟ ಅಶ್ವಸೈನ್ಯಗಳೂ, ಸುತ್ತುತ್ತಿರುವ ರಥ-ಗಜಸೈನ್ಯಗಳೂ ಸರ್ವತ್ರ ಪರಸ್ಪರ ಯುದ್ಧದಲ್ಲಿ ತೊಡಗಿದುವು. ಮಹಾರಾಜ! ಆ ಸಮಯದಲ್ಲಿ ಮೋಡವೇ ಇಲ್ಲದಿದ್ದರೂ ಕಣ್ಣುಗಳನ್ನು ಕೋರೈಸುವ ಅತಿತೀವ್ರವಾದ ಮಿಂಚು ಕಾಣಿಸುತ್ತಿದ್ದಿತು. ಎಲ್ಲ ದಿಕ್ಕುಗಳೂ ಧೂಳಿನಿಂದ ಮುಚ್ಚಿಹೋದುವು. ಭಯಂಕರವಾದ ಸಿಡಿಲಿಗೆ ಸಮಾನವಾದ ಶಬ್ದದೊಡನೆ ಉಲ್ಕೆಗಳೂ ಕಾಣಿಸಿಕೊಂಡುವು. ಚಂಡಮಾರುತವು ಹುಟ್ಟಿಕೊಂಡು ಧೂಳಿನ ಮಳೆಯನ್ನೇ ಸುರಿಸತೊಡಗಿತು. ಸೈನ್ಯಗಳ ಪದಸಂಘಟ್ಟನೆಗಳಿಂದ ಹುಟ್ಟಿದ ಧೂಳಿನಿಂದ ಆಚ್ಛಾದಿತನಾದ ಸೂರ್ಯನು ಆಕಾಶದಲ್ಲಿ ಅಂತರ್ಹಿತನಾದನು. ಆ ಸಮಯದಲ್ಲಿ ಧೂಳಿನಿಂದ ಆವೃತರಾಗಿದ್ದ, ಅಸ್ತ್ರಗಳ ಸಮೂಹದಿಂದ ಪೀಡಿತರಾಗಿದ್ದ ಎಲ್ಲ ಸೈನಿಕರಿಗೂ ಅತಿಯಾದ ಭ್ರಾಂತಿಯುಂಟಾಯಿತು. ವೀರರ ಬಾಹುಗಳಿಂದ ಬಿಡಲ್ಪಟ್ಟ, ಎಲ್ಲ ವಿಧವಾದ ಆವರಣಗಳನ್ನೂ ಭೇದಿಸುವ ಸಾಮರ್ಥ್ಯವನ್ನು ಹೊಂದಿದ್ದ ಬಾಣಸಮೂಹಗಳ ಘರ್ಷಣೆಯು ದೊಡ್ಡದಾದ ಮತ್ತು ಭಯಂಕರವಾದ ಗದ್ದಲವನ್ನುಂಟುಮಾಡಿತು. ಉತ್ತಮವಾದ (ಬಲಿಷ್ಠವಾದ) ಭುಜಗಳನ್ನು ಹೊಂದಿದ್ದ ಯೋಧರಿಂದ ಬಿಡಲ್ಪಡುತ್ತಿದ್ದ , ನಕ್ಷತ್ರಗಳಂತೆ ಶುಭ್ರವಾಗಿಯೂ ಥಳ-ಥಳಿಸುತ್ತಲೂ ಇದ್ದ ಶಸ್ತ್ರಗಳು ಆಕಾಶದಲ್ಲಿ ಪ್ರಕಾಶವನ್ನುಂಟುಮಾಡುತ್ತಿದ್ದುವು. ಸುವರ್ಣಮಯವಾದ ಬಲೆಗಳಿಂದ ಪರಿವೃತವಾಗಿದ್ದ, ಎತ್ತಿನ ಚರ್ಮದಿಂದ ಮಾಡ

ಲ್ಪಟ್ಟಿದ್ದ ಚಿತ್ರ-ವಿಚಿತ್ರವಾಗಿದ್ದ ಗುರಾಣಿಗಳು ರಣಾಂಗಣದ ಎಲ್ಲ ದಿಕ್ಕು ಗಳಲ್ಲಿಯೂ ಬಿದ್ದಿದ್ದುವು. ಸೂರ್ಯನ ವರ್ಣದಿಂದ ಕೂಡಿದ್ದ (ಪ್ರಕಾಶ ಮಾನವಾಗಿದ್ದ ) ಕತ್ತಿಗಳಿಂದ ಕೆಳಕ್ಕೆ ಬೀಳಿಸಲ್ಪಟ್ಟ ಶರೀರಗಳು ಮತ್ತು ಶಿರಸ್ಸು ಗಳು ರಣಾಂಗಣದ ಎಲ್ಲ ದಿಕ್ಕುಗಳಲ್ಲಿಯೂ ಕಂಡುಬಂದುವು. ಅನೇಕ ರಥಗಳ ಚಕ್ರಗಳು ಮುರಿದಿದ್ದುವು. ಧುರಿಗಳು ಮುರಿದಿದ್ದುವು. ಮೂಕಿಗಳು ಮುರಿದಿದ್ದುವು. ರಥದೊಳಗಿದ್ದ ಆಸನಗಳು ಮುರಿದಿದ್ದುವು. ರಥಗಳ ಮೇಲಿದ್ದ ದೊಡ್ಡ ದೊಡ್ಡ ಪತಾಕೆಗಳು ಮುರಿದು ಕೆಳಕ್ಕೆ ಬಿದ್ದಿದ್ದುವು. ರಥಕ್ಕೆ ಕಟ್ಟಿದ್ದ ಕುದುರೆಗಳು ಸತ್ತುಬಿದ್ದಿದ್ದುವು. ಈ ರೀತಿಯಲ್ಲಿ ಅನೇಕರಥಗಳು ಅಲ್ಲಲ್ಲಿ ಮುರಿದು ಬಿದ್ದಿರುವುದು ಕಾಣುತ್ತಿದ್ದಿತು. ಅಲ್ಲಿ ಅನೇಕ ಕುದುರೆಗಳು ಸತ್ತು ಬಿದ್ದಿದ್ದುವು. ಕೆಲವು ರಥಗಳಲ್ಲಿ ರಥಿಕರು ಸತ್ತುಹೋಗಿದ್ದರು. ಶಸ್ತ್ರಗಳಿಂದ ಗಾಯಗೊಂಡಿದ್ದ ಕುದುರೆಗಳು ರಥಿಗಳಿಂದ ವಿಹೀನವಾಗಿದ್ದ ರಥಗಳನ್ನು ಅತ್ತಲಿತ್ತ ಎಳೆದುಕೊಂಡು ತಿರುಗುತ್ತಿದ್ದುವು. ಕೆಲವು ಉತ್ತಮ ವಾಜಿಗಳ ಶರೀರಗಳು ಶಸ್ತ್ರಪ್ರಹಾರದಿಂದ ಕ್ಷತ-ವಿಕ್ಷತವಾಗಿದ್ದರೂ ರಥಗಳ ನೊಗಗಳಿಗೆ ಕಟ್ಟಲ್ಪಟ್ಟಿದ್ದುದರಿಂದ ಆ ನೊಗಗಳನ್ನೇ (ಭಗ್ನರಥಗಳನ್ನೇ) ಎಳೆದಾಡುತ್ತಿದ್ದುವು. ಕೆಲವು ರಥಿಕರು ಮಹಾಬಲಿಷ್ಠವಾದ ಆನೆಯ ತುಳಿತಕ್ಕೆ ಸಿಕ್ಕಿ ಸೂತಾಶ್ವಸಮೇತರಾಗಿ ಹತರಾಗುತ್ತಿದ್ದುದು ಅಲ್ಲಲ್ಲಿ ಕಂಡುಬರುತ್ತಿದ್ದಿತು. ಅನೇಕ ಸೈನ್ಯಸಮೂಹಗಳ ಸಂಹಾರವಾಗುತ್ತಿದ್ದ ಆ ಯುದ್ಧದಲ್ಲಿ ಗಂಧಹಸ್ತಿಯು ಸುರಿಸುತ್ತಿದ್ದ ಮದೋದಕವನ್ನು ಆಘ್ರಾಣಿಸಿ ಇತರ ಆನೆಗಳು ಯುದ್ಧದಲ್ಲಿ ಆಸಕ್ತಿಯನ್ನು ಕಳೆದುಕೊಂಡುವು. ನಾರಾಚಗಳಿಂದ ಸಂಹರಿಸಲ್ಪಟ್ಟು ಪ್ರಾಣ ತೊರೆದು ತೋಮರಸಹಿತರಾಗಿ ಕೆಳಕ್ಕೆ ಬೀಳುತ್ತಿದ್ದ ಮಾವಟಿಗರಿಂದಲೂ, ಆನೆಗಳ ಸಮೂಹಗಳಿಂದಲೂ ಆ ರಣರಂಗವು ಮುಚ್ಚಿಹೋಗಿದ್ದಿತು. ಸೈನ್ಯಸಮೂಹಗಳ ಘರ್ಷಣೆಯಾಗುತ್ತಿದ್ದ ಆ ಸಮಯದಲ್ಲಿ ದೊಡ್ಡ ದೊಡ್ಡ ಆನೆಗಳು ಅನೇಕಾನೇಕ ಯೋಧರಿಂದಲೂ, ಧ್ವಜಗಳಿಂದಲೂ ಕೂಡಿದ್ದ ಆನೆಗಳನ್ನು ಮರ್ದನಮಾಡಿ ಕೆಳಕ್ಕೆ ಬೀಳಿಸುತ್ತಿದ್ದುವು.

ಆ ಯುದ್ಧದಲ್ಲಿ ಪಾಲ್ಗೊಂಡಿದ್ದ ಹಲವಾರು ಮದಗಜಗಳು ಸರ್ಪರಾಜ ನಂತೆ ಉದ್ದವಾಗಿಯೂ, ದಪ್ಪವಾಗಿಯೂ ಇದ್ದ ತಮ್ಮ ಸೊಂಡಿಲುಗಳಿಂದ

ರಥಗಳನ್ನು ಸೆಳೆದು ರಥದ ಮೂಕಿಗಳನ್ನೂ ಸಹ ಛಿನ್ನ-ವಿಚ್ಛಿನ್ನವಾಗಿ ಮಾಡಿ ಹಾಕಿದ್ದ ದೃಶ್ಯಗಳು ಅಲ್ಲಲ್ಲಿ ಕಾಣುತ್ತಿದ್ದುವು. ಈ ರೀತಿಯಲ್ಲಿ ಅಲ್ಲಿ ಮುರಿದು ಬಿದ್ದಿದ್ದ ರಥಸಮೂಹಗಳು ಅನೇಕವಿದ್ದುವು. ಆನೆಗಳು ಉದ್ದವಾದ ಸೊಂಡಿಲುಗಳಿಂದ ರಥಗಳಲ್ಲಿರುವ ರಥಿಕರನ್ನು ಅವರ ತಲೆಗೂದಲಿನಲ್ಲಿ ಹಿಡಿದು ಎಳೆದುಕೊಂಡು ವೃಕ್ಷಗಳ ಶಾಖೆಗಳನ್ನು ನೆಲಕ್ಕೆ ಅಪ್ಪಳಿಸುವಂತೆಯೇ ನೆಲಕ್ಕೆ ಅಪ್ಪಳಿಸಿ ನಿಷ್ಪಿಷ್ಟವಾಗಿ ಮಾಡುತ್ತಿದ್ದುವು (ಅಜ್ಜಿ-ಬಜ್ಜಿಮಾಡಿಬಿಡು ತ್ತಿದ್ದುವು.) ಇಷ್ಟು ಮಾತ್ರವಲ್ಲ; ಉಭಯಪಕ್ಷಗಳ ರಥಗಳು ಯುದ್ಧದಲ್ಲಿ ತೊಡಗಿರುವಾಗ ಸಕಲವಿಧವಾದ ಶಬ್ದಗಳನ್ನೂ ಗ್ರಹಿಸುತ್ತಿದ್ದ ಶ್ರೇಷ್ಠವಾದ ಆ ಸಲಗಗಳು ಮಧ್ಯದಲ್ಲಿ ನುಗ್ಗಿ ಯುದ್ಧದಲ್ಲಿ ತೊಡಗಿರುತ್ತಿದ್ದ ರಥಗಳಲ್ಲಿ ಒಂದನ್ನು ಸೊಂಡಿಲಿನ ಮೂಲಕವಾಗಿ ಸೆಳೆದುಕೊಂಡು ರಣರಂಗದ ಸುತ್ತಲೂ ತಿರುಗುತ್ತಿದ್ದು ಕಡೆಗೆ ಆ ರಥವನ್ನೇ ತಿರುಗು-ಮುರುಗು ಮಾಡಿಬಿಡುತ್ತಿದ್ದುವು. ಈ ರೀತಿಯಲ್ಲಿ ರಥಗಳನ್ನೂ, ರಥಿಕರನ್ನೂ ಸೆಳೆದಪ್ಪಳಿಸುತ್ತಿದ್ದ ಆನೆಗಳ ಸ್ವರೂಪವು–ಸರೋವರದಲ್ಲಿ ಬೆಳೆದಿರುವ ಕಮಲದ ದಂಟುಗಳನ್ನು ಬುಡಸಹಿತ ಕೀಳುವ ಆನೆಗಳ ಸ್ವರೂಪದಂತೆಯೇ ಇದ್ದಿತು. ಈ ರೀತಿಯಲ್ಲಿ ಪ್ರಾಣಗಳನ್ನು ತೊರೆದ ಕುದುರೆಸವಾರರಿಂದಲೂ, ಪದಾತಿಗಳಿಂದಲೂ, ಧ್ವಜಯುಕ್ತವಾದ ಮಹಾರಥಗಳಿಂದಲೂ ವಿಶಾಲವಾದ ಆ ಯುದ್ಧಭೂಮಿಯು ತುಂಬಿಹೋಗಿದ್ದಿತು.”

ಒ೧ನೆಯ ಅಧ್ಯಾಯವು ಮುಗಿಯಿತು.

೭೨ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಕೌರವ-ಪಾಂಡವರ ಘೋರಯುದ್ಧದ ವರ್ಣನೆ

ಸಂಜಯನು ಮುಂದುವರಿಸಿ ಹೇಳುತ್ತಾನೆ :

“ಮಹಾರಾಜ! ಶಿಖಂಡಿಯು ಮತ್ಸ್ಯನರೇಶನಾದ ವಿರಾಟನೊಡನೆ ಕೂಡಿಕೊಂಡು ಸುದುರ್ಜಯನಾದ, ಮಹಾಧನುಷ್ಮಂತನಾದ ಭೀಷ್ಮನಿದ್ದೆಡೆಗೆ ಧಾವಿಸಿದನು. ಮತ್ತೊಂದು ರಂಗದಲ್ಲಿ ಅರ್ಜುನನು ದ್ರೋಣರನ್ನೂ, ಕೃಪ

ರನ್ನೂ, ಮಹಾಧನುಷ್ಮಂತನಾದ-ಮಹಾಬಲನಾದ ವಿಕರ್ಣನನ್ನೂ ಮತ್ತು ಶೂರರಾದ ಇನ್ನೂ ಅನೇಕರಾಜರನ್ನೂ ಎದುರಿಸಿದನು. ಮತ್ತೊಂದು ವಿಭಾಗದಲ್ಲಿ ಭೀಮಸೇನನು-ಬಂಧುಗಳಿಂದಲೂ, ಅಮಾತ್ಯರಿಂದಲೂ ಕೂಡಿಕೊಂಡು ಯುದ್ಧಮಾಡುತ್ತಿದ್ದ ಸೈಂಧವನನ್ನೂ, ಪೂರ್ವ ಮತ್ತು ದಕ್ಷಿಣ ದೇಶಗಳ ರಾಜರನ್ನೂ, ಅಸಹನಶೀಲನಾದ ಮಹಾಧನುಷ್ಮಂತನಾದ ನಿನ್ನ ಮಗ ದುರ್ಯೋಧನನನ್ನೂ ದುಃಸಹನನ್ನೂ ಆಕ್ರಮಿಸಿದನು. ಸಹದೇವನು–ದುರ್ಜಯರೂ, ಮಹಾಧನುಷ್ಮಂತರೂ, ಮಹಾರಥರೂ ಮತ್ತು ಪಿತಾ ಪುತ್ರರೂ ಆದ ಶಕುನಿ-ಉಲೂಕರೊಡನೆ ಯುದ್ಧಮಾಡುತ್ತಿದ್ದನು. ನಿನ್ನ ಮಗನಿಂದ ವಂಚಿತನಾದ ಮಹಾರಥನಾದ ಯುಧಿಷ್ಠಿರಮಹಾರಾಜನು ನಿನ್ನ ಪಕ್ಷದ ಗಜಸೈನ್ಯದೊಡನೆ ಯುದ್ಧಮಾಡುತ್ತಿದ್ದನು. ಶೂರಯೋಧರನ್ನೂ ಗೋಳಾಡಿಸುವ ಸಾಮರ್ಥ್ಯವುಳ್ಳ ಶೂರರಲ್ಲಿ ಇಂದ್ರನಂತಿರುವ ಮಾದ್ರಿಯ ಮಗನಾದ ನಕುಲನು ತ್ರಿಗರ್ತಸೈನ್ಯದೊಡನೆ ಯುದ್ಧಮಾಡುತ್ತಿದ್ದನು. ಸಾತ್ಯಕಿ, ಚೇಕಿತಾನ ಮತ್ತು ಮಹಾರಥನಾದ ಅಭಿಮನ್ಯು–ಇವರು ಸಂಕ್ರುದ್ಧರಾಗಿ ಶಾಲ್ವಸೈನಿಕರ ಮೇಲೂ ಕೈಕಯಸೈನಿಕರ ಮೇಲೂ ಆಕ್ರಮಣ ನಡೆಸಿದರು. ಸುದುರ್ಜಯನಾದ ಧೃಷ್ಟಕೇತು ಮತ್ತು ಘಟೋತ್ಕಚರಾಕ್ಷಸ–ಇವರು ನಿನ್ನ ಮಕ್ಕಳ ರಥಸೈನ್ಯದ ಮೇಲೆ ಆಕ್ರಮಣನಡೆಸುತ್ತಿದ್ದರು. ಆತ್ಮಬಲಸಂಪನ್ನನಾದ, ಮಹಾಬಲನಾದ, ಸೇನಾಪತಿಯಾದ ಧೃಷ್ಟದ್ಯುಮ್ನನು ಉಗ್ರಕರ್ಮರಾದ ದ್ರೋಣರೊಡನೆ ಯುದ್ಧಮಾಡುತ್ತಿದ್ದನು. ಈ ರೀತಿಯಲ್ಲಿ ಮಹಾ ಧನುಷ್ಮಂತರಾದ ಶೂರರಾದ ನಿನ್ನ ಕಡೆಯ ಯೋಧರು ಪಾಂಡವರೊಡನೆ ಕುರುಕ್ಷೇತ್ರರಣಾಂಗಣದಲ್ಲಿ ಭಯಂಕರವಾದ ಯುದ್ಧದಲ್ಲಿ ತೊಡಗಿದ್ದರು.

ಸೂರ್ಯನು ನಡುನೆತ್ತಿಗೆ ಬರಲಾಗಿ, ಆಕಾಶವು ತಾಪಗೊಳ್ಳುತ್ತಿರಲಾಗಿ, ಕೌರವರು ಮತ್ತು ಪಾಂಡವರು ಪರಸ್ಪರ ಸಂಹಾರಕ್ರಿಯೆಯಲ್ಲಿ ತೊಡಗಿದ್ದರು. (ಮಧ್ಯಾಹ್ನಕಾಲದ ಸೂರ್ಯನ ತಾಪವೂ ಅವರನ್ನು ಯುದ್ಧದಿಂದ ವಿಮುಖರನ್ನಾಗಿ ಮಾಡಲಿಲ್ಲ.) ಧ್ವಜಗಳಿಂದಲೂ ಮತ್ತು ಪತಾಕೆಗಳಿಂದಲೂ ಕೂಡಿದ್ದ, ಚಿನ್ನದಿಂದ ಚಿತ್ರಿತವಾದ ಅಂಗಗಳಿಂದ ಕೂಡಿದ್ದ ಮತ್ತು ಹುಲಿಯ ಚರ್ಮದ ಆವರಣವನ್ನು ಹೊಂದಿದ್ದ ರಥಗಳು ಸಮರಾಂಗಣದಲ್ಲಿ ಅತ್ತಲಿಂದಿತ್ತ-ಇತ್ತಲಿಂದತ್ತ ಚಲಿಸುತ್ತಾ ಪ್ರಕಾಶಿಸಿದುವು.

ಸಿಂಹಗಳಂತೆಯೇ ಗರ್ಜನೆಮಾಡುತ್ತಿದ್ದ, ಪರಸ್ಪರವಾಗಿ ವಿಜಯವನ್ನು ಗಳಿಸ ಬೇಕೆಂಬ ಆಕಾಂಕ್ಷೆಯನ್ನು ಹೊಂದಿ ಅಲ್ಲಿ ನೆರೆದಿದ್ದ ಯೋಧರ ಶಬ್ದವು ಬಹು ಘೋರವಾಗಿದ್ದಿತು. ಶೂರರಾದ ಸೃಂಜಯರು ಕುರುರಾಜರೊಡನೆ ಮಾಡು ತ್ತಿದ್ದ ಯುದ್ಧವು ನಿಶ್ಚಯವಾಗಿಯೂ ಸುದಾರುಣವಾಗಿಯೂ, ಪರಮಾದ್ಭುತ ವಾಗಿಯೂ ಇದ್ದಿತು. ಅವರು ಪರಸ್ಪರವಾಗಿ ಬಿಡುತ್ತಿದ್ದ ಅಸಂಖ್ಯಾತವಾದ ಬಾಣಗಳಿಂದ ರಣರಂಗವೆಲ್ಲವೂ ಮುಚ್ಚಿಯೇಹೋಯಿತು. ಆ ಸಮಯದಲ್ಲಿ ನಾವು ಆಕಾಶವನ್ನಾಗಲೀ, ದಿಕ್ಕುಗಳನ್ನಾಗಲೀ, ಸೂರ್ಯನನ್ನಾಗಲೀ ಕಾಣಲೇ ಇಲ್ಲ. ಶುದ್ಧವಾದ ಅಗ್ರಭಾಗಗಳುಳ್ಳ ಶಕ್ತ್ಯಾಯುಧಗಳ, ಯೋಧರ ಕೈಯಿಂದ ಹೊರಬರುತ್ತಿರುವ ತೋಮರಗಳ ಮತ್ತು ಹದಮಾಡಿದ್ದ ಕತ್ತಿ ಗಳ–ಕನ್ನೈದಿಲೆಗೆ (ನೀಲಕಮಲಕ್ಕೆ ) ಸಮಾನವಾದ ಪ್ರಭೆಗಳೂ–ಯೋಧರು ತೊಟ್ಟಿದ್ದ ಚಿತ್ರ-ವಿಚಿತ್ರವಾದ ಕವಚಗಳ ಮತ್ತು ಆಭರಣಗಳ ಪ್ರಭೆಗಳೂ ಸಹ ಅಂತರಿಕ್ಷಗಳನ್ನೂ, ದಿಕ್ಕುಗಳನ್ನೂ, ಉಪದಿಕ್ಕುಗಳನ್ನೂ ತಮ್ಮ ಉಜ್ವಲ ಪ್ರಕಾಶದಿಂದ ಬೆಳಗುತ್ತಿದ್ದುವು. ಚಂದ್ರ-ಸೂರ್ಯರಿಗೆ ಸಮಾನವಾದ ಪ್ರಭೆ ಯಿಂದ ಕೂಡಿದ್ದ ರಾಜರ ಶರೀರಗಳಿಂದಲೂ ಆ ರಣಾಂಗಣವು ಬಹುವಾಗಿ ಪ್ರಕಾಶಿಸುತ್ತಿದ್ದಿತು. ರಥಗಳ ಸಮೂಹಗಳೂ ಮತ್ತು ಯುದ್ಧಮಾಡಲು ಆಗಮಿಸಿದ್ದ ನರವ್ಯಾಘ್ರರೂ (ರಾಜರು) ಆ ಯುದ್ಧಸಮಯದಲ್ಲಿ ಆಕಾಶ ದಲ್ಲಿರುವ ಗ್ರಹಗಳಂತೆಯೇ ಪ್ರಕಾಶಿಸುತ್ತಿದ್ದರು.

ಮಹಾರಾಜ! ನಾನು ಮುಂದೆ ಭೀಷ್ಮ-ಭೀಮರ ಯುದ್ಧದ ವಿವರಣೆ ಯನ್ನು ಹೇಳುತ್ತೇನೆ. ರಥಿಗಳಲ್ಲಿ ಶ್ರೇಷ್ಠನಾದ, ಪರಮಕ್ರುದ್ಧನಾಗಿದ್ದ ಭೀಷ್ಮನು ಮಹಾಬಲಿಷ್ಠನಾದ ಭೀಮಸೇನನನ್ನು ಎಲ್ಲ ಸೈನಿಕರೂ ನೋಡು ತ್ತಿದ್ದಂತೆಯೇ ತಡೆದು ನಿಲ್ಲಿಸಿದನು. ಭೀಷ್ಮನ ಧನುಸ್ಸಿನಿಂದ ಚ್ಯುತವಾದ, ಚಿನ್ನದ ರೆಕ್ಕೆಗಳನ್ನು ಹೊಂದಿದ್ದ, ಶಿಲೆಯಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಎಣ್ಣೆಯಲ್ಲಿ ನೆನೆಸಲ್ಪಟ್ಟಿದ್ದ ತೀಕ್ಷ್ಣವಾದ ಬಾಣಗಳು ಭೀಮನನ್ನು ರಭಸದಿಂದ ಪ್ರಹರಿಸಿದುವು. ಅದರಿಂದ ಸಂಕ್ರುದ್ಧನಾದ, ಮಹಾಬಲನಾದ ಭೀಮಸೇನನು ಕೋಪಗೊಂಡ ಸರ್ಪಕ್ಕೆ ಸಮಾನವಾಗಿದ್ದ ಶಕ್ತ್ಯಾಯುಧವನ್ನು ಭೀಷ್ಮನ ಮೇಲೆ ರಭಸದಿಂದ ಪ್ರಯೋಗಿಸಿದನು. ಸುವರ್ಣಮಯವಾದ ದಂಡವನ್ನು ಹೊಂದಿದ್ದ, ರಭಸದಿಂದ ತನ್ನ ಮೇಲೆ ಬೀಳಲಿದ್ದ ದುರಾಸದವಾದ ಆ ಶಕ್ತ್ಯಾ

ಯುಧವನ್ನು ಬಗ್ಗಿದ ಗಿಣ್ಣುಗಳಿಂದ ಕೂಡಿದ ಬಾಣಗಳಿಂದ ಭೀಷ್ಮನು ಕತ್ತರಿಸಿದನು. ಅನಂತರ ಭೀಷ್ಮನು ನಿಶಿತವಾಗಿಯೂ, ಹದಮಾಡಿದ್ದಾಗಿಯೂ ಇದ್ದ ಭಲ್ಲವೆಂಬ ಮತ್ತೊಂದು ಬಾಣದಿಂದ ಭೀಮಸೇನನ ಧನುಸ್ಸನ್ನು ಎರಡು ಭಾಗಗಳಾಗಿ ಕತ್ತರಿಸಿಬಿಟ್ಟನು. ಆ ಸಮಯಕ್ಕೆ ಸರಿಯಾಗಿ ಸಾತ್ಯಕಿಯು ಭೀಮನ ಬಳಿಗೆ ಬಹುಶೀಘ್ರವಾಗಿ ಬಂದು ತೀಕ್ಷ್ಣವಾದ ತೇಜಸ್ಸಿನಿಂದ ಕೂಡಿದ್ದ ಅನೇಕಬಾಣಗಳಿಂದ ನಿನ್ನ ತಂದೆಯನ್ನು ಬಾಧೆ ಪಡಿಸಿದನು. ಅದಕ್ಕೆ ಪ್ರತಿಯಾಗಿ ಭೀಷ್ಮನು ಪರಮದಾರುಣವಾಗಿಯೂ, ತೀಕ್ಷ್ಣವಾಗಿಯೂ ಇದ್ದ ಬಾಣವೊಂದನ್ನು ಧನುಸ್ಸಿಗೆ ಅನುಸಂಧಾನ ಮಾಡಿ ವಾರ್ಷ್ಣೇಯನ (ಸಾತ್ಯಕಿಯ) ರಥದಲ್ಲಿದ್ದ ಸಾರಥಿಗೆ ಗುರಿಯಿಟ್ಟು ಪ್ರಹರಿಸಿ ಅವನನ್ನು ರಥದಿಂದ ಕೆಳಕ್ಕೆ ಕೆಡವಿಬಿಟ್ಟನು. ಸಾತ್ಯಕಿಯ ರಥದ ಸಾರಥಿಯು ಸತ್ತುಹೋಗಲಾಗಿ ರಥಕ್ಕೆ ಕಟ್ಟಿದ್ದ ಕುದುರೆಗಳು ದಿಕ್ಕಾಪಾಲಾಗಿ ರಥವನ್ನು ಎಳೆದುಕೊಂಡೇ ಓಡಿದುವು. ವಾಯುವೇಗ-ಮನೋವೇಗಗಳಿಗೆ ಸಮಾನವಾದ ವೇಗವುಳ್ಳ ಆ ಕುದುರೆಗಳು ಓಡಿಹೋಗಲು ಎಲ್ಲೆಲ್ಲಿ ಸ್ವಲ್ಪ ಸ್ಥಳಾವಕಾಶವು ಸಿಕ್ಕುತ್ತಿದ್ದಿತೋ ಅಲ್ಲಲ್ಲಿಗೇ ರಭಸದಿಂದ ಓಡಿಹೋಗುತ್ತಿದ್ದುವು. ಹೀಗೆ ದಿಕ್ಕುಕಾಣದೇ ಓಡುತ್ತಿದ್ದಾಗ ಅನೇಕರು ರಥಚಕ್ರಗಳ ಅಡಿಯಲ್ಲಿ ಸಿಕ್ಕಿ ಸತ್ತರು. ಅದರಿಂದ ಸೈನ್ಯ ಸಮೂಹದಲ್ಲಿ ಕೋಲಾಹಲವೆದ್ದಿತು. ಮಹಾತ್ಮರಾದ ಪಾಂಡವರ ಕಡೆಯಲ್ಲಿಯೂ ಹಾಹಾಕಾರವೆದ್ದಿತು. 'ಸಾತ್ಯಕಿಯ ರಥದ ಬಳಿಗೆ ಓಡಿರಿ!' 'ಹಿಡಿಯಿರಿ!' 'ಕುದುರೆಗಳನ್ನು ನಿಯಂತ್ರಿಸಿರಿ!'–ಇತ್ಯಾದಿ ಶಬ್ದಗಳು ಸರ್ವತ್ರ ಕೇಳಿಬರುತ್ತಿದ್ದು ದೊಡ್ಡದಾದ ಗದ್ದಲವೇ ಉಂಟಾಯಿತು. ಅದೇ ಸಮಯದಲ್ಲಿ ಶಾಂತನುವಿನ ಮಗನಾದ ಭೀಷ್ಮನು–ಇಂದ್ರನು ಅಸುರಸೇನೆಯನ್ನು ವಿನಾಶಗೊಳಿಸಿದಂತೆ–ಪಾಂಡವಸೇನೆಯನ್ನು ವಿನಾಶಗೊಳಿಸಿದನು. ಭೀಷ್ಮನಿಂದ ಸತತವಾಗಿ ವಧಿಸಲ್ಪಡುತ್ತಿದ್ದರೂ ಪಾಂಚಾಲ–ಸೋಮಕರು ಭೀಷ್ಮನೊಡನೆ ಯುದ್ಧವನ್ನು ಮಾಡಿಯೇ ತೀರಬೇಕೆಂದು ದೃಢನಿಶ್ಚಯ ಮಾಡಿ ಭೀಷ್ಮನನ್ನೇ ಎದುರಿಸಿದರು. ಧೃಷ್ಟದ್ಯುಮ್ನನೇ ಮೊದಲಾದ ಪಾಂಡವರ ಕಡೆಯ ಎಲ್ಲ ರಾಜರೂ ನಿನ್ನ ಮಗನ ಸೈನ್ಯವನ್ನು ಪರಾಜಯಗೊಳಿಸುವ ಇಚ್ಛೆಯುಳ್ಳವರಾಗಿ ಭೀಷ್ಮನನ್ನೇ ಪುನಃ ಆಕ್ರಮಿಸಿದರು. ಅದೇ

ರೀತಿಯಲ್ಲಿ ಭೀಷ್ಮ-ದ್ರೋಣಪ್ರಮುಖರಾದ ಕೌರವರೂ ಸಹ ಬಹುಶೀಘ್ರ ವಾಗಿ ಪಾಂಡವರ ಸೈನ್ಯವನ್ನು ಮುತ್ತಿದರು. ಪುನಃ ಭಯಂಕರವಾದ ಯುದ್ಧವು ಪ್ರಾರಂಭವಾಯಿತು.”

ರ೨ನೆಯ ಅಧ್ಯಾಯವು ಮುಗಿಯಿತು.

೭೩ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ವಿರಾಟ-ಭೀಷ್ಮ, ಅಶ್ವತ್ಥಾಮ-ಅರ್ಜುನ, ದುರ್ಯೋಧನ-ಭೀಮಸೇನ ಮತ್ತು ಅಭಿಮನ್ಯು-ಲಕ್ಷ್ಮಣ ಇವರ ದ್ವಂದ್ವಯುದ್ಧವರ್ಣನೆ

ಸಂಜಯನು ಮುಂದುವರಿಸಿ ಹೇಳುತ್ತಾನೆ :

“ಮಹಾರಾಜ! ವಿರಾಟ-ಭೀಷ್ಮರಿಗೆ ದ್ವಂದ್ವಯುದ್ಧವು ಪ್ರಾರಂಭ ವಾಯಿತು. ಮಹಾರಥನಾದ ವಿರಾಟನು ಮಹಾರಥನಾದ ಭೀಷ್ಮನನ್ನು ಮೂರು ಬಾಣಗಳಿಂದ ಪೀಡಿಸಿದನು. ಇಷ್ಟು ಮಾತ್ರವಲ್ಲ ; ಮತ್ತೆ ಮೂರು ಬಾಣಗಳನ್ನು ಪ್ರಯೋಗಿಸಿ ಭೀಷ್ಮನ ರಥದ ಕುದುರೆಗಳನ್ನೂ ಗಾಯಗೊಳಿ ಸಿದನು. ಅನಂತರ ಸಿದ್ಧಹಸ್ತನಾದ, ಮಹಾಬಲನಾದ, ಮಹಾಧನುಷ್ಮಂತ ನಾದ ಶಾಂತನವನು ಚಿನ್ನದ ರೆಕ್ಕೆಗಳನ್ನು ಹೊಂದಿದ್ದ ಹತ್ತು ಬಾಣಗಳಿಂದ ವಿರಾಟನನ್ನು ಪ್ರಹರಿಸಿದನು.

ರಣರಂಗದ ಮತ್ತೊಂದು ವಿಭಾಗದಲ್ಲಿ ಅಶ್ವತ್ಥಾಮನಿಗೂ-ಅರ್ಜುನ ನಿಗೂ ದ್ವಂದ್ವಯುದ್ಧವು ನಡೆಯುತ್ತಿದ್ದಿತು. ಮಹಾರಥನಾದ, ಭಯಂಕರ ವಾದ ಧನುಸ್ಸನ್ನು ಧರಿಸಿದ್ದ, ದೃಢಹಸ್ತನಾದ, ದ್ರೋಣಪುತ್ರನಾದ ಅಶ್ವತ್ಥಾ ಮನು ಆರು ಬಾಣಗಳಿಂದ ಗಾಂಡೀವಧನುರ್ಧರನಾದ ಅರ್ಜುನನ ವಕ್ಷ ಸ್ಥಳವನ್ನು ಪ್ರಹರಿಸಿದನು. ಶತ್ರುವೀರಸಂಹಾರಕನಾದ, ಶತ್ರುಕರ್ಶನನಾದ ಅರ್ಜುನನು ತೀಕ್ಷ್ಣವಾದ ಬಾಣಗಳಿಂದ ದ್ರೌಣಿಯ ಧನುಸ್ಸನ್ನು ಕತ್ತರಿಸಿದ್ದಲ್ಲದೇ ಅಶ್ವತ್ಥಾಮನನ್ನೂ ಬಹುವಾಗಿ ಗಾಯಗೊಳಿಸಿದನು. ಅರ್ಜುನನು ತನ್ನ ಧನುಸ್ಸನ್ನು ಕತ್ತರಿಸಿದುದನ್ನು ನೋಡಿ ದ್ರೌಣಿಯ ಸಹನೆಯು ಮೀರಿತು. ಕ್ರೋಧಮೂರ್ಛಿತನಾದ, ವೇಗವಂತನಾದ ದ್ರೌಣಿಯು ಬಹುಶೀಘ್ರವಾಗಿ

ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ನಿಶಿತವಾದ ತೊಂಬತ್ತು ಬಾಣಗಳಿಂದ ಅರ್ಜುನನನ್ನು ಬಾಧೆಪಡಿಸಿದನು. ಅದೇ ರೀತಿಯಲ್ಲಿ ಶ್ರೇಷ್ಠವಾದ ಎಪ್ಪತ್ತು ಬಾಣಗಳಿಂದ ವಾಸುದೇವನನ್ನೂ ಪ್ರಹರಿಸಿದನು. ಆ ಪ್ರಹಾರದಿಂದಾಗಿ ಕೃಷ್ಣಾರ್ಜುನರಿಬ್ಬರೂ ಕ್ರೋಧಾಭಿಭೂತರಾದರು. ಇಬ್ಬರ ಕಣ್ಣುಗಳೂ ಕೆಂಪೇರಿದುವು. ಅರ್ಜುನನು ದೀರ್ಘವಾಗಿಯೂ ಬಿಸಿಯಾಗಿಯೂ ಇದ್ದ ನಿಟ್ಟುಸಿರುಬಿಡುತ್ತಿದ್ದನು. ಗುರುಪುತ್ರನ ವಿಷಯದಲ್ಲಿ ತಾನು ಏನು ಮಾಡಬೇಕೆಂಬುದರ ಬಗೆಗೆ ಪುನಃ ಪುನಃ ಯೋಚಿಸಿದನು. ಎಡಗೈಯಿಂದ ಗಾಂಡೀವಧನುಸ್ಸನ್ನು ಪೀಡಿಸುತ್ತಿರುವನೋ ಎಂಬಂತೆ ಸುಭದ್ರವಾಗಿ ಹಿಡಿದನು. ಬಹುಕ್ರುದ್ಧನಾಗಿದ್ದ ಗಾಂಡೀವಿಯು ನಿಶಿತವಾಗಿದ್ದ, ಬಗ್ಗಿದ ಗಿಣ್ಣುಗಳನ್ನು ಹೊಂದಿದ್ದ, ಜೀವವನ್ನೇ ಕೊನೆಗಾಣಿಸುವ ಸಾಮರ್ಥ್ಯವನ್ನು ಹೊಂದಿದ್ದ, ಘೋರವಾಗಿ ಕಾಣುತ್ತಿದ್ದ ಬಾಣಗಳನ್ನು ಬತ್ತಳಿಕೆಯಿಂದ ತೆಗೆ ದನು. ಬಲಿಷ್ಠರಲ್ಲಿ ಶ್ರೇಷ್ಠನಾದ ಅರ್ಜುನನು ಆ ಬಾಣಗಳಿಂದ ದ್ರೌಣಿಯನ್ನು ಪ್ರಹರಿಸಿದನು. ಆ ಬಾಣಗಳು ದ್ರೌಣಿಯ ಕವಚದ ಒಳಹೊಕ್ಕು ಅವನ ರಕ್ತವನ್ನೂ ಕುಡಿದುಬಿಟ್ಟವು. (ಕವಚವನ್ನು ಭೇದಿಸಿ ಶರೀರದ ಒಳಹೊಕ್ಕವು.) ಅರ್ಜುನನಿಂದ ತನ್ನ ಶರೀರವು ಛಿನ್ನ-ಭಿನ್ನವಾದರೂ ಮಹಾಪರಾಕ್ರಮಿಯಾದ ದ್ರೌಣಿಯು ವ್ಯಥೆಪಡಲಿಲ್ಲ. ದ್ರೋಣಪುತ್ರನು ಸ್ವಲ್ಪವಾದರೂ ವಿಹ್ವಲನಾಗದೇ ಹಿಂದಿನಂತೆಯೇ ಬಾಣಗಳ ಮಳೆಗರೆಯುತ್ತಾ ಮಹಾವ್ರತನಾದ ಭೀಷ್ಮನನ್ನು ರಕ್ಷಿಸುವ ಆಶಯದಿಂದ ಸುಸ್ಥಿರನಾಗಿ ನಿಂತು ಅರ್ಜುನನೊಡನೆ ಯುದ್ಧವನ್ನು ಮುಂದುವರಿಸಿದನು. ಕೃಷ್ಣಾರ್ಜುನರಿಬ್ಬರನ್ನೂ ಎದುರಿಸಿ ಧೈರ್ಯದಿಂದ ಯುದ್ಧಮಾಡುತ್ತಿದ್ದ ಅಶ್ವತ್ಥಾಮನನ್ನು–ಸುದಾರುಣವಾದ ಕರ್ಮಮಾಡುತ್ತಿರುವನೆಂದು–ಕುರುಸತ್ತಮರೆಲ್ಲರೂ ಪ್ರಶಂಸೆಮಾಡಿದರು. ಸುದುರ್ಲಭವಾದ ಉಪಸಂಹಾರಸಹಿತವಾದ ಅಸ್ತ್ರಗಳ ಸಮುದಾಯವನ್ನು ದ್ರೋಣಾಚಾರ್ಯರಿಂದ ಪಡೆದುಕೊಂಡಿದ್ದ ಅಶ್ವತ್ಥಾಮನು ಭಯರಹಿತನಾಗಿ ಪಾಂಡವರ ಸೈನ್ಯದೊಡನೆ ಸತತವಾಗಿ ಯುದ್ಧಮಾಡುತ್ತಿದ್ದನು.

ಅರ್ಜುನನೊಡನೆ ಯುದ್ಧಮಾಡುವಾಗಲೂ ಅಶ್ವತ್ಥಾಮನು ಸ್ವಲ್ಪವಾದರೂ ಕದಲದೇ ಸುಸ್ಥಿರವಾಗಿ ನಿಂತು ಯುದ್ಧಮಾಡುತ್ತಿದ್ದನು. ಆದರೆ ಮಹಾರಾಜ! ಅರ್ಜುನನೇ ಅಶ್ವತ್ಥಾಮನ ವಿಷಯದಲ್ಲಿ ಕೃಪೆತೋರಿದನು.

ಇದಕ್ಕೆ ಕಾರಣವಿಷ್ಟೇ. ಅಶ್ವತ್ಥಾಮನ ವಿಷಯದಲ್ಲಿ ಅರ್ಜುನನ ಭಾವನೆಯು ಈ ರೀತಿಯಾಗಿದ್ದಿತು :

**ಮಮೈಷ ಆಚಾರ್ಯಸುತೋ ದ್ರೋಣಸ್ಯಾಪಿ ಪ್ರಿಯಃ ಸುತಃ ।**
**ಬ್ರಾಹ್ಮಣಶ್ಚ ವಿಶೇಷೇಣ ಮಾನನೀಯೋ ಮಮೇತಿ ಚ ॥೧೪॥**

"ಇವನು ನನ್ನ ಆಚಾರ್ಯರ ಮಗ. ಮೇಲಾಗಿ ಇವನು ನನ್ನ ಆಚಾರ್ಯರಾದ ದ್ರೋಣರಿಗೆ ಅತ್ಯಂತಪ್ರಿಯನಾದ ಮಗನಾಗಿದ್ದಾನೆ. ಎಲ್ಲಕ್ಕಿಂತಲೂ ವಿಶೇಷವಾಗಿ ಇವನು ಬ್ರಾಹ್ಮಣ. ಆದುದರಿಂದ ಅಶ್ವತ್ಥಾಮನು ನನಗೆ ಸರ್ವಪ್ರಕಾರದಿಂದಲೂ ಮಾನನೀಯನೇ ಆಗಿದ್ದಾನೆ."

ಹೀಗೆಂದು ನಿಶ್ಚಯಿಸಿ ವೀರನಾದ, ಶತ್ರುತಾಪನನಾದ, ರಥಿಕರಲ್ಲಿ ಶ್ರೇಷ್ಠನಾದ ಬೀಭತ್ಸುವು ಭಾರದ್ವಾಜನ ಮಗನಾದ ಅಶ್ವತ್ಥಾಮನ ವಿಷಯದಲ್ಲಿ ಕೃಪೆತೋರಿದನು. ಶ್ವೇತವಾಹನನಾದ, ಪರಾಕ್ರಮಿಯಾದ, ಕೌಂತೇಯನು ದ್ರೌಣಿಯನ್ನು ಅಲ್ಲಿಯೇ ಬಿಟ್ಟು ನಿನ್ನ ಕಡೆಯ ಸೈನಿಕರೊಡನೆ ಯುದ್ಧಮಾಡುತ್ತಾ ಅಪಾರಸಂಖ್ಯೆಯಲ್ಲಿ ಅವರನ್ನು ಸಂಹರಿಸಿದನು.

ಮಹಾರಾಜ! ಮತ್ತೊಂದು ವಿಭಾಗದಲ್ಲಿ ಭೀಮ-ದುರ್ಯೋಧನರು ದ್ವಂದ್ವಯುದ್ಧವನ್ನು ಮಾಡುತ್ತಿದ್ದರು. ಅದರ ವರದಿಯನ್ನು ಒಪ್ಪಿಸುತ್ತೇನೆ. ಸಾವಧಾನವಾಗಿ ಕೇಳು :

ನಿನ್ನ ಮಗನಾದ ದುರ್ಯೋಧನನು ಗೃಧ್ರಗಳ ರೆಕ್ಕೆಗಳನ್ನು ಹೊಂದಿದ್ದ, ಮತ್ತು ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿದ್ದ. ಉಜ್ಜುಕಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಹತ್ತು ಬಾಣಗಳಿಂದ ಮಹಾಧನುಷ್ಮಂತನಾದ ಭೀಮಸೇನನನ್ನು ಪ್ರಹರಿಸಿದನು. ಅದರಿಂದ ಪರಮಕ್ರುದ್ಧನಾದ ಭೀಮಸೇನನು ಶತ್ರುಗಳ ಪ್ರಾಣಾಪಹಾರಕವಾದ, ಚಿತ್ರಿತವಾಗಿದ್ದ, ದೃಢವಾದ ಧನುಸ್ಸೊಂದನ್ನು ಕೈಗೆ ತೆಗೆದುಕೊಂಡನು. ಬತ್ತಳಿಕೆಯಿಂದ ಹತ್ತು ಬಾಣಗಳನ್ನು ತೆಗೆದನು. ನೇರವಾಗಿ ಹೋಗುವ, ವೇಗದಿಂದ ಕೂಡಿದ್ದ, ತೀಕ್ಷ್ಣವಾಗಿದ್ದ ಆ ಹತ್ತು ಬಾಣಗಳನ್ನು ಧನುಸ್ಸಿನಲ್ಲಿ ಯೋಜಿಸಿ ಕರ್ಣಪರ್ಯಂತವಾಗಿ ಸೆಳೆದು ಅವ್ಯಗ್ರನಾಗಿ ಕುರುರಾಜನ ವಕ್ಷಸ್ಥಲದಲ್ಲಿ ಪ್ರಯೋಗಿಸಿದನು. ದುರ್ಯೋಧನನು ತನ್ನ ಕತ್ತಿನಲ್ಲಿ ಕಾಂಚನಸೂತ್ರವೊಂದನ್ನು (ಚಿನ್ನದ ಸರ) ಧರಿಸಿದ್ದನು.

ಅದರ ಮಧ್ಯಭಾಗದಲ್ಲಿ ಒಂದು ಮಣಿಯೂ ಇದ್ದು ಅದು ದುರ್ಯೋಧನನ ವಕ್ಷಸ್ಥಳವನ್ನು ಅಲಂಕರಿಸಿದ್ದಿತು. ಭೀಮನ ಹತ್ತು ಬಾಣಗಳೂ ದುರ್ಯೋಧ ನನ ವಕ್ಷಸ್ಥಳದಲ್ಲಿ ನೆಟ್ಟುಕೊಂಡುವು. ಆ ಸಮಯದಲ್ಲಿ ಬಾಣಗಳಿಂದ ಆಚ್ಛಾದಿತವಾಗಿದ್ದ ಆ ಮಣಿಯು ಅಂತರಿಕ್ಷದಲ್ಲಿ ಗ್ರಹಗಳಿಂದ ಸಮಾವೃತನಾದ ಸೂರ್ಯನಂತೆಯೇ ಪರಿಶೋಭಿಸಿತು. ಭೀಮಸೇನನಿಂದ ತಾಡಿತನಾದ ತೇಜಸ್ವಿಯಾದ ನಿನ್ನ ಮಗನು–ಮದಿಸಿದ ಆನೆಯು ಚಪ್ಪಾಳೆಯ ಶಬ್ದವನ್ನು ಸಹಿಸದಂತೆ–ಭೀಮಸೇನನ ಔದ್ಧತ್ಯವನ್ನು ಸಹಿಸಲಿಲ್ಲ. ಸಂಕ್ರುದ್ಧನಾದ ದುರ್ಯೋಧನನು ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿದ್ದ, ಉಜ್ಜು ಕಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಬಾಣಗಳಿಂದ ಭೀಮನನ್ನು ಪ್ರಹರಿ ಸಿದನು ಮತ್ತು ಪಾಂಡವರ ಸೈನ್ಯವನ್ನೂ ಸಹ ಭಯಪಡಿಸಿದನು. ಆ ಇಬ್ಬರು ಮಹಾಬಲರಾದ ನಿನ್ನ ಮಕ್ಕಳು ಪರಸ್ಪರವಾಗಿ ಯುದ್ಧಮಾಡುತ್ತಾ ಒಬ್ಬರು ಮತ್ತೊಬ್ಬರನ್ನು ಬಾಣಗಳಿಂದ ಗಾಯಗೊಳಿಸುತ್ತಾ ಇಬ್ಬರೂ ದೇವತೆ ಗಳಂತೆಯೇ ಪ್ರಕಾಶಿಸಿದರು.

ಮತ್ತೊಂದು ರಂಗದಲ್ಲಿ ನಡೆಯುತ್ತಿದ್ದ ಯುದ್ಧದ ಪರಿಯನ್ನು ಹೇಳು ತ್ತೇನೆ, ಮಹಾರಾಜ!

ಶತ್ರುಪಕ್ಷದ ವೀರರನ್ನು ನಾಶಮಾಡಲು ಸಮರ್ಥನಾದ ಸುಭದ್ರೆಯ ಮಗನಾದ ಅಭಿಮನ್ಯುವು ನರವ್ಯಾಘ್ರನಾದ ಚಿತ್ರಸೇನನನ್ನು ಹತ್ತು ಬಾಣ ಗಳಿಂದ ಪ್ರಹರಿಸಿದನು. ಪುರುಮಿತ್ರನನ್ನು ಏಳುಬಾಣಗಳಿಂದ ಪ್ರಹರಿಸಿದನು. ಯುದ್ಧದಲ್ಲಿ ದೇವೇಂದ್ರನಿಗೆ ಸಮನಾಗಿಯೇ ಯುದ್ಧಮಾಡುತ್ತಿದ್ದ ಅಭಿ ಮನ್ಯುವು ಮರುಕ್ಷಣದಲ್ಲಿಯೇ ಸತ್ಯವ್ರತನನ್ನು ಎಪ್ಪತ್ತು ಬಾಣಗಳಿಂದ ಪ್ರಹ ರಿಸಿ ರಣರಂಗದಲ್ಲಿ ನರ್ತಿಸುತ್ತಿರುವನೋ ಎಂಬಂತೆ–ಎದುರಾಗಿ ಹೋದ ವರನ್ನೆಲ್ಲಾ ನಿಶಿತವಾದ ಬಾಣಗಳಿಂದ ಪೀಡಿಸುತ್ತಾ ನಮಗೆಲ್ಲರಿಗೂ ಸಂಕಟ ವನ್ನುಂಟುಮಾಡಿದನು. ಆ ಸಮಯದಲ್ಲಿ ಚಿತ್ರಸೇನನೂ ಸಂಕ್ರುದ್ಧನಾಗಿ ಅಭಿ ಮನ್ಯುವನ್ನು ಹತ್ತು ಬಾಣಗಳಿಂದ ಪ್ರಹರಿಸಿದನು. ಅವನನ್ನನುಸರಿಸಿ ಸತ್ಯ ವ್ರತನು ಒಂಬತ್ತು ಬಾಣಗಳಿಂದಲೂ, ಪುರುಮಿತ್ರನು ಏಳುಬಾಣ ಗಳಿಂದಲೂ ಅಭಿಮನ್ಯುವನ್ನು ಪ್ರಹರಿಸಿದರು. ಬಾಣಗಳ ಆ ಪ್ರಹಾರ ದಿಂದಾಗಿ ಅಭಿಮನ್ಯುವಿನ ಶರೀರದಿಂದ ರಕ್ತವು ಪ್ರವಹಿಸತೊಡಗಿತು.

ಆದರೂ ವಿಚಲನಾಗದೇ ಆರ್ಜುನಿಯು ಶತ್ರುನಿವಾರಕವಾದ, ದೊಡ್ಡ ದಾಗಿಯೂ ಚಿತ್ರಿತವಾಗಿಯೂ ಇದ್ದ ಚಿತ್ರಸೇನನ ಧನುಸ್ಸನ್ನು ಎರಡಾಗಿ ಕತ್ತರಿಸಿಬಿಟ್ಟನು. ಮರುಕ್ಷಣದಲ್ಲಿಯೇ ಮಹಾರಥನಾದ ಚಿತ್ರಸೇನನ ಕವಚ ವನ್ನೂ ಕತ್ತರಿಸಿ ಮತ್ತೊಂದು ಬಾಣವನ್ನು ಅವನ ವಕ್ಷಸ್ಥಳಕ್ಕೆ ಗುರಿಯಿಟ್ಟು ಹೊಡೆದನು. ಚಿತ್ರಸೇನನ ದುಃಸ್ಥಿತಿಯನ್ನು ಕಂಡು ಮಹಾರಥರಾದ ನಿನ್ನ ಕಡೆಯ ರಾಜಪುತ್ರರೆಲ್ಲರೂ ಒಟ್ಟಾಗಿ ಸೇರಿ ಕುಪಿತರಾಗಿ ನಿಶಿತವಾದ ಬಾಣ ಗಳಿಂದ ಅಭಿಮನ್ಯುವನ್ನು ಪ್ರಹರಿಸಿದರು. ಶ್ರೇಷ್ಠವಾದ ಅಸ್ತ್ರಗಳ ಅನು ಸಂಧಾನಗಳನ್ನು ತಿಳಿದುಕೊಂಡಿದ್ದ ಅಭಿಮನ್ಯುವು ಸ್ವಲ್ಪವೂ ವಿಚಲಿತನಾಗದೇ ತನ್ನನ್ನು ನಾಲ್ಕು ಕಡೆಯಿಂದಲೂ ಆಕ್ರಮಿಸಿದ್ದ ಕೌರವಮಹಾರಥರೆಲ್ಲರನ್ನೂ ತೀಕ್ಷ್ಣವಾದ ಬಾಣಗಳಿಂದ ಪೀಡಿಸಿದನು. ಅರಣ್ಯದಲ್ಲಿ ಹತ್ತಿಕೊಂಡ ದಾವಾ ಗ್ನಿಯು ತೃಣಸಮೂಹವನ್ನು ನಿರಾಯಾಸವಾಗಿ ದಹಿಸುವಂತೆ–ಯುದ್ಧ ಸಮಯದಲ್ಲಿ ಲೀಲಾಜಾಲವಾಗಿ ಕೌರವರ ಸೈನ್ಯವನ್ನು ದಹಿಸುತ್ತಿದ್ದ (ಸಂಹರಿ ಸುತ್ತಿದ್ದ) ಅಭಿಮನ್ಯುವಿನ ಅದ್ಭುತಕರ್ಮವನ್ನು ನೋಡಿ ನಿನ್ನ ಮಕ್ಕಳೆಲ್ಲರೂ ಅವನನ್ನು ನಾಲ್ಕೂ ಕಡೆಗಳಿಂದಲೂ ಮುತ್ತಿಕೊಂಡರು. ಸುಭದ್ರಾಸುತನು ನಿನ್ನ ಸೈನ್ಯಗಳನ್ನು ವಿನಾಶಗೊಳಿಸುತ್ತಾ ಶಿಶಿರರ್ತುವು ಕಳೆದ ನಂತರ (ಗ್ರೀಷ್ಮರ್ತುವಿನಲ್ಲಿ) ಧಗ-ಧಗಿಸಿ ಉರಿಯುವ ಯಜ್ಞೇಶ್ವರನಿಗಿಂತಲೂ ಹೆಚ್ಚಾದ ಕಾಂತಿಯಿಂದ ವಿರಾಜಿಸಿದನು. ಮಹಾರಾಜ! ಸೌಭದ್ರನ ಅತುಲ ವಾದ ಪರಾಕ್ರಮವನ್ನು ಕಂಡು ನಿನ್ನ ಪೌತ್ರನಾದ ಲಕ್ಷ್ಮಣನು ಶೀಘ್ರಾತಿ ಶೀಘ್ರವಾಗಿ ಅಭಿಮನ್ಯುವನ್ನು ಎದುರಿಸಿ ನಿಂತನು. ಲಕ್ಷ್ಮಣನನ್ನು ತನ್ನೆದುರಿ ನಲ್ಲಿ ನೋಡಿದೊಡನೆಯೇ ಪರಮಕ್ರುದ್ಧನಾದ ಅಭಿಮನ್ಯುವು ಶುಭ ಲಕ್ಷಣಯುಕ್ತನಾದ ಅವನನ್ನು ಆರು ಬಾಣಗಳಿಂದಲೂ, ಅವನ ಸಾರಥಿ ಯನ್ನು ಮೂರು ಬಾಣಗಳಿಂದಲೂ ಪ್ರಹರಿಸಿದನು. ಅದೇ ರೀತಿಯಲ್ಲಿ ಲಕ್ಷ್ಮಣನೂ ಸಹ ಅಭಿಮನ್ಯುವನ್ನು ನಿಶಿತವಾದ ಬಾಣಗಳಿಂದ ಪ್ರಹರಿ ಸಿದನು. ಅದು ನಮಗೆ ಪರಮಾದ್ಭುತವಾಗಿ ಕಂಡಿತು. ಮರುಕ್ಷಣದಲ್ಲಿಯೇ ಮಹಾಬಲನಾದ ಸೌಭದ್ರನು ಲಕ್ಷ್ಮಣನ ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆ ಗಳನ್ನೂ ಮತ್ತು ಸಾರಥಿಯನ್ನೂ ಸಂಹರಿಸಿ ನಿಶಿತವಾದ ಬಾಣಗಳಿಂದ ಲಕ್ಷ್ಮಣನನ್ನೂ ಆಕ್ರಮಿಸಿದನು. ಶತ್ರುವೀರಹಂತಕನಾದ ಲಕ್ಷ್ಮಣನು ತನ್ನ

ರಥದ ಕುದುರೆಗಳು ಸತ್ತುಹೋದರೂ ಸ್ವಲ್ಪವಾದರೂ ಧೃತಿಗೆಡದೇ ರಥದಲ್ಲಿಯೇ ನಿಂತುಕೊಂಡು ಪರಮಕ್ರುದ್ಧನಾಗಿ ಅಭಿಮನ್ಯುವಿನ ರಥದ ಕಡೆಗೆ ಶಕ್ತ್ಯಾಯುಧವನ್ನು ರಭಸದಿಂದ ಎಸೆದನು. ದುರಾಸದವಾದ ಘೋರ ರೂಪದಿಂದ ಕೂಡಿ ಬಹುವೇಗವಾಗಿ ತನ್ನ ಕಡೆಗೆ ಸರ್ಪದಂತೆಯೇ ಬರುತ್ತಿದ್ದ ಶಕ್ತ್ಯಾಯುಧವನ್ನು ಅಭಿಮನ್ಯುವು ತೀಕ್ಷ್ಣವಾದ ಬಾಣಗಳಿಂದ ಕತ್ತರಿಸಿಬಿಟ್ಟನು. ಆ ಸಮಯಕ್ಕೆ ಸರಿಯಾಗಿ ಕೃಪಾಚಾರ್ಯರು ಲಕ್ಷ್ಮಣನನ್ನು ತಮ್ಮ ರಥದ ಮೇಲೆ ಕುಳ್ಳಿರಿಸಿಕೊಂಡು ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಬೇರೆಯ ಕಡೆಗೆ ಹೊರಟುಹೋದರು.

ಬಹುಭಯಂಕರವಾದ ಕೌರವ-ಪಾಂಡವರ ಸಂಘರ್ಷವು ನಡೆಯುತ್ತಿರಲಾಗಿ ಪರಸ್ಪರವಾಗಿ ಸಂಹಾರಮಾಡಬೇಕೆನ್ನುವ ಇಚ್ಛೆಯಿಂದ ಯುದ್ಧ ಮಾಡುತ್ತಾ ತಮ್ಮ ಎದುರಾಳಿಗಳನ್ನು ಕಂಡ-ಕಂಡೆಡೆಗಳಲ್ಲಿ ಸಂಹರಿಸುತ್ತಾ ಉಭಯಪಕ್ಷಗಳ ಯೋಧರೂ ಯುದ್ಧವನ್ನು ಮುಂದುವರಿಸಿದರು. ನಿನ್ನ ಕಡೆಯ ಮಹಾಧನುಷ್ಮಂತರೂ ಪಾಂಡವರ ಕಡೆಯ ಮಹಾರಥರೂ ತಮ್ಮ ತಮ್ಮ ಪ್ರಾಣಗಳನ್ನೇ ಆಹುತಿಕೊಡಲು ಸಿದ್ಧರಾಗಿ ಪರಸ್ಪರ ವಿಧ್ವಂಸನ ಕ್ರಿಯೆಯಲ್ಲಿ ತೊಡಗಿದ್ದರು. ಅನೇಕಯೋಧರ ತಲೆಗೂದಲು ಬಿಚ್ಚಿ ಹೋಗಿದ್ದಿತು. ಅನೇಕರಿಗೆ ಕವಚಗಳೇ ಇರಲಿಲ್ಲ. ರಥಶೂನ್ಯರಾಗಿದ್ದರು. ಧನುಸ್ಸುಗಳೂ ಶತ್ರುಪಕ್ಷದವರಿಂದ ಕತ್ತರಿಸಲ್ಪಟ್ಟಿದ್ದುವು. ಹೀಗಿದ್ದರೂ ಸಹ ಅವರು ಯುದ್ಧವನ್ನು ನಿಲ್ಲಿಸಲಿಲ್ಲ. ಅಂತಹ ದಾರುಣಸ್ಥಿತಿಯಲ್ಲಿದ್ದ ಸೃಂಜಯ ಯೋಧರು ಕುರುಗಳೊಡನೆ ತೋಳುಗಳ ಅವಲಂಬನೆಯಿಂದಲೇ ಮಲ್ಲ ಯುದ್ಧವನ್ನು ಮಾಡುತ್ತಿದ್ದರು.

ರಣರಂಗದ ಒಂದು ಕಡೆಯಲ್ಲಿ ಮಹಾಬಾಹುವಾದ ಮಹಾಬಲನಾದ ಭೀಷ್ಮನು ಸಂಕ್ರುದ್ಧನಾಗಿ ದಿವ್ಯಾಸ್ತ್ರಗಳಿಂದ ಮಹಾತ್ಮರಾದ ಪಾಂಡವರ ಸೈನ್ಯವನ್ನು ಅವ್ಯಾಹತವಾಗಿ ಸಂಹಾರಮಾಡುತ್ತಿದ್ದನು. ಭೀಷ್ಮನ ಬಾಣಗಳಿಗೆ ಸಿಕ್ಕಿ ಪ್ರಾಣಕಳೆದುಕೊಂಡ ಕುದುರೆಗಳಿಂದಲೂ, ಆನೆಗಳಿಂದಲೂ, ಪದಾತಿಗಳಿಂದಲೂ, ರಥಿಗಳಿಂದಲೂ, ಕುದುರೆಸವಾರರಿಂದಲೂ ಭೂಮಿಯು ಆಚ್ಛಾದಿತವಾಯಿತು."

೭೩ನೆಯ ಅಧ್ಯಾಯವು ಮುಗಿಯಿತು.

೭೪ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

# ಸಾತ್ಯಕಿ-ಭೂರಿಶ್ರವಸರ ಯುದ್ಧ: ಭೂರಿಶ್ರವಸನು ಸಾತ್ಯಕಿಯ ಹತ್ತು ಮಕ್ಕಳನ್ನು ಸಂಹರಿಸಿದುದು : ಅರ್ಜುನನ ಪರಾಕ್ರಮ : ಐದನೆಯ ದಿವಸದ ಯುದ್ಧದ ಉಪಸಂಹಾರ

ಸಂಜಯನು ಸಾತ್ಯಕಿ-ಭೂರಿಶ್ರವಸರ ಯುದ್ಧವನ್ನು ವರ್ಣನೆಮಾಡುತ್ತಾ ಧೃತರಾಷ್ಟ್ರನಿಗೆ ಹೇಳುತ್ತಾನೆ :

“ಮಹಾರಾಜ! ಯುದ್ಧದುರ್ಮದನಾದ ಸಾತ್ಯಕಿಯು ಮಹಾಭಾರವನ್ನೂ (ವೀರರ ಪರಾಕ್ರಮವನ್ನು ) ತಡೆದುಕೊಳ್ಳುವಷ್ಟು ಬಲವಾಗಿದ್ದ, ಉತ್ತಮೋತ್ತಮವಾಗಿದ್ದ, ಧನುಸ್ಸಿನ ನಾಣನ್ನು ಕಿವಿಯವರೆಗೂ ಸೆಳೆದು ಸರ್ಪಗಳಿಗೆ ಸಮಾನವಾಗಿದ್ದ ರೆಕ್ಕೆಗಳಿಂದ ಕೂಡಿದ್ದ ಬಾಣಗಳನ್ನು–ಧನುರ್ವಿದ್ಯೆಯಲ್ಲಿ ತನಗಿದ್ದ ಪ್ರಗಾಢಪಾಂಡಿತ್ಯವನ್ನೂ, ಶೀಘ್ರಕಾರಿತ್ವವನ್ನೂ ಮತ್ತು ವಿಚಿತ್ರವಾದ ಹಸ್ತಲಾಘವದ ಪರಿಚಯವನ್ನೂ ಮಾಡಿಕೊಡುತ್ತಾ–ಶತ್ರುಗಳ ಮೇಲೆ ಪ್ರಹರಿಸಿದನು. ಎವೆಯಿಕ್ಕುವುದರೊಳಗೆ ಬತ್ತಳಿಕೆಯಿಂದ ಬಾಣವನ್ನು ತೆಗೆದು ಧನುಸ್ಸಿನಲ್ಲಿ ಯೋಜಿಸಿ, ಶಿಂಜಿನಿಯನ್ನು ಶರದೊಡನೆ ಆಕರ್ಣಾಂತವಾಗಿ ಸೆಳೆದು ಶತ್ರುವಿನ ಮೇಲೆ ಬಿಟ್ಟು ಸಂಹರಿಸುತ್ತಿದ್ದನು. ಆದಾನ- ಸಂಧಾನ - ಆಕರ್ಷಣ - ಪ್ರಯೋಗ –ಇವುಗಳಾವುವೂ ಗೋಚರಿಸದೇ ‘ಸೊಯ್’ ಎಂಬ ಶಬ್ದವು ಮಾತ್ರವೇ ಪ್ರತಿಕ್ಷಣದಲ್ಲಿಯೂ ಕೇಳಿಸುತ್ತಿದ್ದು ಆ ಶಬ್ದದೊಡನೆ, ‘ಅಯ್ಯೋ’ ಎಂದು ಎದುರಾಳಿಯು ಪ್ರಾಣತೊರೆದು ಕೆಳಕ್ಕೆ ಬೀಳುತ್ತಿದ್ದುದು ಕಾಣುತ್ತಿದ್ದಿತು. ಈ ರೀತಿಯಲ್ಲಿ ಅನವರತವಾಗಿ ಬಾಣಗಳನ್ನು ಬಿಡುತ್ತಿದ್ದ ಸಾತ್ಯಕಿಯ ರೂಪವು ಆ ಸಮಯದಲ್ಲಿ–ಮಳೆಗರೆಯುತ್ತಿರುವ ಮೇಘದಂತೆ–ಅತ್ಯದ್ಭುತವಾಗಿ ಕಂಡಿತು. ಕ್ಷಣ-ಕ್ಷಣಕ್ಕೂ ಬಲದಿಂದ ವೃದ್ಧಿಹೊಂದುತ್ತಿರುವ ಸಾತ್ಯಕಿಯನ್ನು ನೋಡಿ ದುರ್ಯೋಧನರಾಜನು ಅವನ ಬಲವನ್ನು ಕುಗ್ಗಿಸುವ ಸಲುವಾಗಿ ಹತ್ತುಸಾವಿರ ರಥಸೈನ್ಯವನ್ನು ಕಳುಹಿಸಿಕೊಟ್ಟನು. ವೀರ್ಯವಂತನಾದ, ಸತ್ಯವಿಕ್ರಮನಾದ, ಶ್ರೇಷ್ಠವಾದ ಧನುಸ್ಸನ್ನು ಹೊಂದಿದ್ದ ಸಾತ್ಯಕಿಯು ದುರ್ಯೋಧನನು ಕಳುಹಿಸಿದ ಆ ಎಲ್ಲ ಮಹಾಧನುಷ್ಮಂತರನ್ನೂ ದಿವ್ಯಾಸ್ತ್ರಗಳಿಂದ ಸಂಹಾರಮಾಡಿಬಿಟ್ಟನು.

ವೀರನಾದ ಸಾತ್ಯಕಿಯು ಅನ್ಯರಿಂದ ದುಸ್ಸಾಧ್ಯವಾದ ಮತ್ತು ದಾರುಣವಾದ ಆ ಹನನಕರ್ಮವನ್ನು ಮಾಡಿ ಧನುಸ್ಸನ್ನು ಹಿಡಿದು ಭೂರಿಶ್ರವಸನ ಬಳಿಗೆ ಬಂದನು. ಕುರುಗಳ ಕೀರ್ತಿವರ್ಧನನಾದ ಭೂರಿಶ್ರವಸನಾದರೋ ಸಾತ್ಯಕಿಯಿಂದ ನಿನ್ನ ಸೈನ್ಯವು ವಿಧ್ವಂಸಿತವಾದುದನ್ನು ನೋಡಿ ಪರಮಕ್ರುದ್ಧನಾಗಿ ಅವನು ತನ್ನ ಬಳಿಗೆ ಬರುವುದರ ಮೊದಲೇ ತಾನೇ ಮುನ್ನುಗ್ಗಿ ಹೋಗಿ ಸಾತ್ಯಕಿಯನ್ನು ಎದುರಿಸಿ ನಿಂತನು. ಇಂದ್ರನ ಧನುಸ್ಸಿಗೆ ಸಮಾನವಾಗಿದ್ದ ದೊಡ್ಡದಾದ ಧನುಸ್ಸನ್ನು ಒಮ್ಮೆ ಟೇಂಕಾರಮಾಡಿ ಬಾಣವನ್ನು ಯೋಜಿಸಿ ದೀರ್ಘವಾಗಿ ಸೆಳೆದು ವಜ್ರಾಯುಧಕ್ಕೆ ಸಮಾನವಾದ ಮತ್ತು ಸರ್ಪೋಪಮಗಳಾದ ಸಾವಿರಾರು ಬಾಣಗಳನ್ನು ತನ್ನ ಕೈಚಳಕವನ್ನು ತೋರಿಸುತ್ತಾ ನಿಮಿಷಮಾತ್ರದಲ್ಲಿ ಸೃಷ್ಟಿಸಿಬಿಟ್ಟನು. ಮಹಾರಾಜ! ಮೃತ್ಯುಸದೃಶವಾಗಿದ್ದ ಭೂರಿಶ್ರವಸನ ಬಾಣಗಳ ಪ್ರಹಾರವನ್ನು ಸಾತ್ಯಕಿಯ ಹಿಂಬದಿಯಲ್ಲಿದ್ದ ಸೈನಿಕರು ತಡೆದುಕೊಳ್ಳಲಾರದೇ ಯುದ್ಧದುರ್ಮದನಾದ ಸಾತ್ಯಕಿಯೊಬ್ಬನನ್ನೇ ರಣಾಂಗಣದಲ್ಲಿ ಬಿಟ್ಟು ದಿಕ್ಕಾಪಾಲಾಗಿ ಓಡಿಹೋದರು. ಈ ರೀತಿಯಲ್ಲಿ ತಮ್ಮ ತಂದೆಯೊಬ್ಬನನ್ನೇ ಬಿಟ್ಟು ಪಾಂಡವಪಕ್ಷದ ಸೈನಿಕರು ಓಡಿಹೋಗುತ್ತಿರುವುದನ್ನು ನೋಡಿ ಮಹಾಬಲರಾದ, ಮಹಾರಥರೆಂದು ಪ್ರಸಿದ್ಧಿಯನ್ನು ಪಡೆದಿದ್ದ, ಚಿತ್ರಿತವಾದ ಕವಚಗಳನ್ನೂ ನಾನಾವಿಧವಾದ ಆಯುಧಗಳನ್ನೂ ಮತ್ತು ನಾನಾವರ್ಣಗಳ ಧ್ವಜಗಳನ್ನೂ ಹೊಂದಿದ್ದ ಯುಯುಧಾನನ (ಸಾತ್ಯಕಿಯ) ಹತ್ತು ಮಕ್ಕಳು ಮಹಾಧನುಷ್ಮಂತನಾದ ಯೂಪಸ್ತಂಭದ ಚಿಹ್ನೆಯನ್ನು ಧ್ವಜದಲ್ಲಿ ಹೊಂದಿದ್ದ ಭೂರಿಶ್ರವಸನ ಬಳಿಗೆ ಬಂದು ಕ್ರುದ್ಧರಾಗಿ ಅವನೊಡನೆ ಹೀಗೆಂದು ಹೇಳಿದರು :

**ಭೋ ಭೋಃ ಕೌರವದಾಯಾದ ಸಹಾಸ್ಮಾಭಿರ್ಮಹಾಬಲ ।**
**ಏಹಿ ಯುಧ್ಯಸ್ವ ಸಂಗ್ರಾಮೇ ಸಮಸ್ತೈಃ ಪೃಥಗೇವ ವಾ ॥೧೪॥**

"ಎಲೈ ಮಹಾಬಲಿಷ್ಠನಾದ *ಕೌರವದಾಯಾದನೇ! (ಕೌರವ

---

* ಭೂರಿಶ್ರವಸನು ಕುರುವಂಶೀಯನಾದ ಸೋಮದತ್ತನ ಮಗ. ಆದುದರಿಂದ ಅವನನ್ನು ಕೌರವದಾಯಾದ ಎಂದು ಕರೆದಿದ್ದಾರೆ. ಅವನ ತಮ್ಮಂದಿರ ಹೆಸರು ಭೂರಿ ಮತ್ತು ಶಲ. ಶಲನ ವಿಷಯವು ಈ ಹಿಂದೆಯೇ ಬಂದಿದೆ.

ಪುತ್ರನೇ!) ಇತ್ತ ಬಾ! ನಮ್ಮೊಡನೆ ಯುದ್ಧಮಾಡು. ನಾವು ಹತ್ತು ಮಂದಿ ಇದ್ದೇವೆ. ನಮ್ಮೆಲ್ಲರೊಡನೆಯೂ ಯುದ್ಧಮಾಡಬಹುದು. ಅಥವಾ ನಿನಗೆ ಅಸಾಧ್ಯವೆನಿಸಿದರೆ ನಮ್ಮಲ್ಲಿ ಒಬ್ಬೊಬ್ಬರನ್ನಾಗಿಯೇ ಆರಿಸಿಕೊಂಡು ಪ್ರತ್ಯೇಕ-ಪ್ರತ್ಯೇಕವಾಗಿಯೂ ಯುದ್ಧಮಾಡಬಹುದಾಗಿದೆ. ನಾವು ಯಾವು ದಕ್ಕಾದರೂ ಸಿದ್ಧರಾಗಿದ್ದೇವೆ.

**ಅಸ್ಮಾನ್ವಾ ತ್ವಂ ಪರಾಜಿತ್ಯ ಯಶಃ ಪ್ರಾಪ್ನುಹಿ ಸಂಯುಗೇ ।**
**ವಯಂ ವಾ ತ್ವಾಂ ಪರಾಜಿತ್ಯ ಪ್ರೀತಿಂ ಧಾಸ್ಯಾಮಹೇ ಪಿತುಃ ॥೧೫॥**

ಯುದ್ಧದಲ್ಲಿ ನೀನು ನಮ್ಮನ್ನಾದರೂ ಪರಾಜಯಗೊಳಿಸಿ ಶಾಶ್ವತವಾದ ಯಶಸ್ಸನ್ನು ಪಡೆಯುವವನಾಗು. ಅಥವಾ ನಾವಾದರೂ ನಿನ್ನನ್ನು ಪರಾಜಯ ಗೊಳಿಸಿ ನಮ್ಮ ತಂದೆಯ ಪ್ರೀತಿಯನ್ನಾದರೂ ಹೆಚ್ಚಿಸಿಕೊಳ್ಳುತ್ತೇವೆ."

ಶೂರರಾದ ಸಾತ್ಯಕಿಯ ಹತ್ತು ಮಂದಿಮಕ್ಕಳು ಹೀಗೆಂದು ಹೇಳಿ ತನ್ನೊಡನೆ ಯುದ್ಧಸನ್ನದ್ಧರಾಗಿ ನಿಂತಿರುವುದನ್ನು ನೋಡಿ ಪರಾಕ್ರಮವನ್ನು ಶ್ಲಾಘಿಸುವ ಸ್ವಭಾವವುಳ್ಳ ನರಶ್ರೇಷ್ಠನಾದ ಭೂರಿಶ್ರವಸನು ಅವರಿಗೆ ಹೇಳಿದನು:

"ವೀರರೇ! ನೀವೀಗ ಹೇಳಿದ ರೀತಿಯಲ್ಲಿಯೇ ಯುದ್ಧಮಾಡಬೇಕೆಂಬ ಬುದ್ಧಿಯು ನಿಮಗೆ ಇರುವುದಾದರೆ ಹಾಗೆಯೇ ಆಗಲಿ. ನೀವು ಸಾಧುವಾದ ವೀರೋಚಿತವಾದ ಮಾತುಗಳನ್ನೇ ಹೇಳಿರುತ್ತೀರಿ. ನೀವು ಹತ್ತು ಮಂದಿಯೂ ಒಟ್ಟಾಗಿಯೇ ಸೇರಿ ಪ್ರಯತ್ನಪೂರ್ವಕವಾಗಿ ಯುದ್ಧಮಾಡಿರಿ. ನೀವು ಯಾವುದೇ ಬಗೆಯಿಂದ ಯುದ್ಧಮಾಡಿದರೂ ನಾನು ನಿಮ್ಮನ್ನು ಈ ಯುದ್ಧದಲ್ಲಿ ಸಂಹರಿಸುತ್ತೇನೆ."

ಭೂರಿಶ್ರವಸನು ಹೀಗೆಂದು ಹೇಳಿದೊಡನೆಯೇ ಮಹಾಧನುಷ್ಮಂತ ರಾದ, ವೀರರಾದ, ಕಾರ್ಯವನ್ನು ಬಹುಶೀಘ್ರವಾಗಿ ಮಾಡಿಮುಗಿಸುವ ಸ್ವಭಾವವುಳ್ಳ ಸಾತ್ಯಕಿಯ ಹತ್ತುಮಂದಿ ಮಕ್ಕಳೂ ಏಕಕಾಲದಲ್ಲಿ ಅಪಾರವಾಗಿ ಬಾಣಗಳ ಮಳೆಗರೆಯುತ್ತಾ ಅರಿಂದಮನಾದ ಭೂರಿಶ್ರವಸನನ್ನು ಆಕ್ರಮಿ ಸಿದರು. ಅಂದಿನ ಅಪರಾಹ್ಣಸಮಯದಲ್ಲಿ ಯುದ್ಧವು ಬಹುಭಯಂಕರವಾಗಿ ಪರಿಣಮಿಸಿತು. ಒಂದು ಪಕ್ಷದಲ್ಲಿ ಭೂರಿಶ್ರವಸನೊಬ್ಬನೇ ನಿಂತು ಯುದ್ಧ

ಮಾಡುತ್ತಿದ್ದನು. ಎದುರು ಪಕ್ಷದಲ್ಲಿ ಅನೇಕವೀರರೆಲ್ಲರೂ ಒಟ್ಟಾಗಿ ಸೇರಿ ಅವನ ಮೇಲೆ ಯುದ್ಧಮಾಡುತ್ತಿದ್ದರು.

ಯಾವ ರೀತಿಯಲ್ಲಿ ವರ್ಷಾಕಾಲದಲ್ಲಿ ಮೇಘಗಳು ಮೇರುಪರ್ವತ ವನ್ನು ನೀರಿನಿಂದ ತೋಯಿಸಿಬಿಡುತ್ತವೆಯೋ–ಅದೇ ರೀತಿಯಲ್ಲಿ ರಥಿಗಳಲ್ಲಿ ಶ್ರೇಷ್ಠನಾದ ಏಕೈಕವೀರನಾದ ಭೂರಿಶ್ರವಸನನ್ನು ಸಾತ್ಯಕಿಯ ಮಕ್ಕಳು ಬಾಣ ಗಳಿಂದ ಮುಚ್ಚಿಬಿಟ್ಟರು. ಮಹಾರಾಜ! ಸಾತ್ಯಕಿಯ ಮಕ್ಕಳು ಬಿಟ್ಟ ಬಾಣಗಳು ಸಾಮಾನ್ಯಬಾಣಗಳಾಗಿರಲಿಲ್ಲ. ಘೋರರೂಪಿಗಳಾಗಿದ್ದುವು. ಯಮ ದಂಡಗಳಂತಿದ್ದುವು. ಇಂದ್ರನ ವಜ್ರಾಯುಧದಂತೆಯೇ ಇದ್ದುವು. ಸಾತ್ಯಕಿಯ ಮಕ್ಕಳು ಬಿಟ್ಟ ತೀಕ್ಷ್ಣವಾದ ಆ ಬಾಣಗಳೆಲ್ಲವನ್ನೂ ಮಹಾರಥನಾದ ಭೂರಿ ಶ್ರವಸನು–ಅವುಗಳಿನ್ನೂ ತನ್ನ ಸಮೀಪಕ್ಕೆ ಬರುವ ಮೊದಲೇ–ಸ್ವಲ್ಪವಾದರೂ ಭ್ರಾಂತನಾಗದೇ ಬಹುಶೀಘ್ರವಾಗಿ ಕತ್ತರಿಸಿದನು. ನಿಶ್ಚಯವಾಗಿಯೂ ಭೂರಿ ಶ್ರವಸನು ತೋರಿದ ಅಂದಿನ ಪರಾಕ್ರಮವು ಪರಮಾದ್ಭುತವಾಗಿ ಕಂಡಿತು. ಒಬ್ಬನೇ ಒಬ್ಬನು ಸ್ವಲ್ಪವಾದರೂ ಭಯಗೊಳ್ಳದೆ ಅನೇಕರೊಡನೆ ಯುದ್ಧದಲ್ಲಿ ತೊಡಗಿದ್ದನು. ಮೇಲಾಗಿ ಅವರು ನಾಲ್ಕು ದಿಕ್ಕುಗಳಿಂದಲೂ ಬಿಡುತ್ತಿದ್ದ ಬಾಣಗಳನ್ನು ಅವುಗಳು ತನ್ನ ಸಮೀಪಕ್ಕೆ ಬರುವ ಮೊದಲೇ ಕತ್ತರಿಸಿಯೂ ಬಿಡುತ್ತಿದ್ದನು. ಆದರೆ ಹಲವಾರು ಬಾರಿ ತಾವು ಬಿಟ್ಟ ಬಾಣಗಳನ್ನು ಭೂರಿ ಶ್ರವಸನು ಕತ್ತರಿಸಿದರೂ ಸಾತ್ಯಕಿಯ ಮಕ್ಕಳು ನಿರುತ್ಸಾಹಿಗಳಾಗಲಿಲ್ಲ. ಮಹಾರಥರಾದ ಅವರು ಬಾಣಗಳ ಮಳೆಗರೆದು ತಮ್ಮ ಬಾಣಗಳೆಲ್ಲವನ್ನೂ ಭೂರಿಶ್ರವಸನು ಕತ್ತರಿಸಿಹಾಕಲಾಗಿ ಮಹಾಬಾಹುವಾದ ಅವನನ್ನು ಸುತ್ತು ಗಟ್ಟಿಕೊಂಡು ಕೊಲ್ಲಲು ಪ್ರಯತ್ನಿಸಿದರು. ಅನಂತರದಲ್ಲಿ ಪರಮಕ್ರುದ್ಧನಾದ ಸೌಮದತ್ತಿಯು ಮಹಾರಥರಾದ ಸಾತ್ಯಕಿಯ ಹತ್ತು ಮಕ್ಕಳೊಡನೆ ಯುದ್ಧ ಮಾಡುತ್ತಾ ಅವರೆಲ್ಲರ ಧನುಸ್ಸುಗಳನ್ನೂ ಏಕಕಾಲದಲ್ಲಿ ಕತ್ತರಿಸಿಬಿಟ್ಟನು. ಅವರೆಲ್ಲರೂ ಧನುಸ್ಸಿನಿಂದ ವಿಹೀನರಾದೊಡನೆಯೇ ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಭೂರಿಶ್ರವಸನು ಸಾತ್ಯಕಿಯ ಹತ್ತು ಮಕ್ಕಳ ತಲೆಗಳನ್ನೂ ಕತ್ತರಿಸಿಬಿಟ್ಟನು. ಸಿಡಿಲಿನ ಬಡಿತದಿಂದ ವೃಕ್ಷಗಳು ಭಗ್ನವಾಗಿ ಕೆಳಗೆ ಬೀಳು ವಂತೆ–ವಜ್ರಾಯುಧಕ್ಕೆ ಸಮಾನವಾದ ಭೂರಿಶ್ರವಸನ ಬಾಣಗಳ ಪ್ರಹಾರ ದಿಂದ ಸಾತ್ಯಕಿಯ ಮಕ್ಕಳೆಲ್ಲರೂ ರಣಭೂಮಿಯಲ್ಲಿ ಹತರಾಗಿ ಬಿದ್ದರು.

ಮಹಾಬಲರಾದ ತನ್ನ ಮಕ್ಕಳು ಯುದ್ಧದಲ್ಲಿ ಹತರಾದುದನ್ನು ಕಂಡು ವೀರನಾದ ಸಾತ್ಯಕಿಯೊಮ್ಮೆ ಗಟ್ಟಿಯಾಗಿ ಗರ್ಜಿಸಿ ಯುದ್ಧದುರ್ಮದನಾದ ಭೂರಿಶ್ರವಸನ ಕಡೆಗೆ ಧಾವಿಸಿದನು. ಅನಂತರ ಭೂರಿಶ್ರವಸ-ಸಾತ್ಯಕಿಯರ ನಡುವೆ ಘೋರವಾದ ಯುದ್ಧವು ಪ್ರಾರಂಭವಾಯಿತು. ಅವರು ಪರಸ್ಪರವಾಗಿ ರಥವನ್ನು ರಥದಿಂದ ಪೀಡಿಸುತ್ತಿದ್ದರು. (ರಥದಿಂದ ರಥವನ್ನು ಪೀಡಿಸುವುದೆಂದರೆ ರಥದ ಕುದುರೆಗಳನ್ನು ಸಂಹರಿಸುವುದು. ಧ್ವಜವನ್ನು ಕತ್ತರಿಸುವುದು. ಸಾರಥಿಯನ್ನು ಸಂಹರಿಸುವುದು ; ಇತ್ಯಾದಿ.) ಹೀಗೆ ಮಾಡಿ ಇಬ್ಬರೂ ಅಶ್ವ-ಸಾರಥಿಸಹಿತವಾಗಿ ತಮ್ಮ-ತಮ್ಮ ರಥಗಳನ್ನು ಕಳೆದು ಕೊಂಡರು. ಅನಂತರ ಇಬ್ಬರೂ ತಮ್ಮ-ತಮ್ಮ ರಥಗಳಿಂದ ನೆಗೆದು ಎದುರು-ಬದುರಾಗಿ ನಿಂತರು. ನರವ್ಯಾಘ್ರರಾದ ಇಬ್ಬರೂ ಖಡ್ಗಗಳನ್ನೂ, ಗುರಾಣಿಗಳನ್ನೂ ಹಿಡಿದು ಯುದ್ಧಸನ್ನದ್ಧರಾಗಿ ನಿಂತು ಬಹುವಾಗಿ ಶೋಭಿಸಿದರು. ಶ್ರೇಷ್ಠವಾದ ಕತ್ತಿಯನ್ನು ಹಿಡಿದು ಭೂರಿಶ್ರವಸನಿಗೆ ಎದುರಾಗಿ ನಿಂತಿದ್ದ ಸಾತ್ಯಕಿಯ ಸಮೀಪಕ್ಕೆ ಭೀಮಸೇನನು ಬಂದು ಅವಸರದಿಂದ ಅವನನ್ನು ತನ್ನ ರಥಕ್ಕೆ ಹತ್ತಿಸಿಕೊಂಡನು. ಮಹಾರಾಜ! ನಿನ್ನ ಮಗನಾದ ದುರ್ಯೋಧನನೂ ಸಹ ಎಲ್ಲ ಧನುಷ್ಮಂತರೂ ನೋಡುತ್ತಿದ್ದಂತೆಯೇ ಬಹಳ ಬೇಗ ಭೂರಿಶ್ರವಸನನ್ನು ತನ್ನ ರಥಕ್ಕೆ ಹತ್ತಿಸಿಕೊಂಡನು. ಅಲ್ಲಿ ಹೀಗೆ ನಡೆಯುತ್ತಿರಲಾಗಿ ಮತ್ತೊಂದು ವಿಭಾಗದಲ್ಲಿ ಕ್ರೋಧಮೂರ್ಛಿತರಾದ ಪಾಂಡವರು ಮಹಾರಥನಾದ ಭೀಷ್ಮನೊಡನೆ ಯುದ್ಧಮಾಡುತ್ತಿದ್ದರು. ಸೂರ್ಯನು ಕೆಂಪುಬಣ್ಣಕ್ಕೆ ತಿರುಗುತ್ತಿರಲಾಗಿ (ಅಸ್ತಮಿಸುತ್ತಿರಲಾಗಿ) ಧನಂಜಯನು ಬಹಳ ಅವಸರದಿಂದ ಬಾಣಗಳ ಮಳೆಗರೆಯುತ್ತಾ ದುರ್ಯೋಧನನ ಪಕ್ಷದ ಇಪ್ಪತ್ತೈದು ಸಾವಿರ ಮಹಾರಥರನ್ನು ಸಂಹರಿಸಿದನು. ಅವರೆಲ್ಲರೂ ದುರ್ಯೋಧನನ ಆಜ್ಞಾನುಸಾರವಾಗಿ ಪಾರ್ಥನನ್ನು ಸಂಹಾರಮಾಡುವ ಆಶಯದಿಂದಲೇ ಬಂದಿದ್ದರು. ಆದರೆ ಅವರು ಪಾರ್ಥನ ಸಮೀಪಕ್ಕೆ ಬರುತ್ತಿದ್ದಂತೆಯೇ–ಬೆಂಕಿಯ ಸಮೀಪಕ್ಕೆ ಹೋದ ಪತಂಗದ ಹುಳುಗಳಂತೆ–ಕ್ಷಣಮಾತ್ರದಲ್ಲಿ ನಾಶಹೊಂದಿದರು. ಅನಂತರ ಧನುರ್ವೇದವಿಶಾರದರಾದ ಮತ್ಸ್ಯರು ಮತ್ತು ಕೇಕಯರು ಅಭಿಮನ್ಯುವಿನೊಡನಿದ್ದ ಮಹಾರಥನಾದ ಪಾರ್ಥನನ್ನು ಸುತ್ತುವರಿದು ಕೌರವರೊಡನೆ

ಯುದ್ಧಮಾಡಲು ಪುನಃ ಸಿದ್ಧರಾಗಿ ನಿಂತರು. ಆ ವೇಳೆಗೆ ಸರಿಯಾಗಿ ಸೂರ್ಯನು ಅಸ್ತಮಿತನಾದನು. ಎಲ್ಲ ಸೈನಿಕರಿಗೂ ಕತ್ತಲೆಯು ಸಮೀಪಿಸಿ ದುದರಿಂದ ಭ್ರಾಂತಿಯುಂಟಾಯಿತು. ಸಂಧ್ಯಾಕಾಲವು ಉಪಸ್ಥಿತವಾದುದ ರಿಂದ ನಿನ್ನ ತಂದೆಯಾದ ದೇವವ್ರತನೂ ಸೈನ್ಯಗಳನ್ನು ಹಿಂದಕ್ಕೆ ಸರಿಯುವಂತೆ ಆಜ್ಞಾಪಿಸಿದನು. ಭೀಷ್ಮನ ರಥದ ಕುದುರೆಗಳೂ ಕೂಡ ಬಹುವಾಗಿ ಬಳಲಿ ದ್ದುವು. ಕೌರವ-ಪಾಂಡವರ ಪರಸ್ಪರಸಮಾಗಮದಲ್ಲಿ ಎರಡು ಕಡೆಯ ಸೈನ್ಯ ಗಳೂ ಬಹುವಾಗಿ ಉದ್ವಿಗ್ನಗೊಂಡಿದ್ದುವು. ಆದುದರಿಂದಲೇ ಶಿಬಿರಗಳಿಗೆ ಹೋಗಿ ಸೇರಿಕೊಂಡವು.

ಮಹಾರಾಜ! ಅನಂತರ ಸೃಂಜಯಸಹಿತರಾದ ಪಾಂಡವರು ಮತ್ತು ಕೌರವರು ತಮ್ಮ-ತಮ್ಮ ಶಿಬಿರಗಳಿಗೆ ಹೋಗಿ ವಿಧಿಪೂರ್ವಕವಾಗಿ ಕರ್ಮ ಗಳನ್ನು ಮುಗಿಸಿ ವಿಶ್ರಾಂತಿಯನ್ನು ಪಡೆದರು."

ಒಳನೆಯ ಅಧ್ಯಾಯವು ಮುಗಿಯಿತು.

## ಐದನೆಯ ದಿವಸದ ಯುದ್ಧದ ವಿಶ್ಲೇಷಣೆ

ನಾಲ್ಕು ದಿವಸಗಳ ಯುದ್ಧದ ವಾರ್ತೆಯನ್ನು ಕೇಳಿ ಅಥವಾ ಓದಿ ಬೇಸತ್ತಿರುವವರಿಗೆ ಮನಸ್ಸಿಗೆ ಸಮಾಧಾನವನ್ನು ತರುವ ಒಂದು ಪ್ರಸಂಗವು ಇಲ್ಲಿ ಬರುತ್ತದೆ. ಐದನೆಯ ದಿವಸದ ಯುದ್ಧವು ಪ್ರಾರಂಭವಾಗುವ ಮೊದಲು ಧೃತರಾಷ್ಟ್ರನು ಪಾಂಡವರ ವಿಜಯದ ರಹಸ್ಯವನ್ನು ಕೇಳುತ್ತಾನೆ. ಅದಕ್ಕೆ ಉತ್ತರವಾಗಿ ಸಂಜಯನು ಅದೇ ವಿಷಯದಲ್ಲಿ ಭೀಷ್ಮ-ದುರ್ಯೋಧನರ ನಡುವೆ ನಡೆದ ಸಂವಾದವನ್ನು ವಿವರಿಸಿ ಹೇಳುತ್ತಾನೆ. ಇಲ್ಲಿ ಬರುವ ಭಗವಂತನ ವರ್ಣನೆಯು ಮನಸ್ಸಿಗೆ ಸಮಾಧಾನವನ್ನುಂಟುಮಾಡುವು ದಾಗಿದೆ. ವಾಚಕರೂ ಸಹ ಆ ಪ್ರಾರ್ಥನಾಶ್ಲೋಕಗಳನ್ನು ಪಠಿಸಲಿ–ಎಂಬ ದೃಷ್ಟಿಯಿಂದ ಈ ಪ್ರಕರಣದಲ್ಲಿ ಬರುವ ಶ್ಲೋಕಗಳನ್ನು ಯಥಾವತ್ತಾಗಿ ಕೊಟ್ಟು ವಿವರಿಸಿದ್ದೇವೆ.

ಐದನೆಯ ದಿವಸದ ಯುದ್ಧದಲ್ಲಿ ಕೌರವರು ಮಕರವ್ಯೂಹವನ್ನೂ ಪಾಂಡವರು ಶ್ಯೇನವ್ಯೂಹವನ್ನೂ ರಚಿಸುತ್ತಾರೆ. ಭೀಷ್ಮನಿಗೂ-ಭೀಮನಿಗೂ

ಮೊದಲು ಯುದ್ಧವು ಪ್ರಾರಂಭವಾಗುತ್ತದೆ. ಅನಂತರ ಅರ್ಜುನನು ಭೀಷ್ಮನನ್ನು ಎದುರಿಸುತ್ತಾನೆ. ದುರ್ಯೋಧನನ ಪ್ರಾರ್ಥನೆಯಂತೆ ದ್ರೋಣರು ಪಾಂಡವರ ಸೈನ್ಯವನ್ನು ಬಗ್ಗುಬಡಿಯುತ್ತಿರುತ್ತಾರೆ. ಸಾತ್ಯಕಿಯು ಅವರೊಡನೆ ಯುದ್ಧಮಾಡುತ್ತಾನೆ. ಸಾತ್ಯಕಿಯು ಅಪಾಯದಲ್ಲಿ ಸಿಕ್ಕಿದಾಗ ಭೀಮನು ಅವನ ಸಹಾಯಕ್ಕೆ ಹೋಗುತ್ತಾನೆ. ಅನಂತರ ದ್ರೋಣ-ಭೀಷ್ಮ-ಶಲ್ಯರೂ ಭೀಮನನ್ನು ಆಕ್ರಮಿಸುತ್ತಾರೆ. ಭೀಮನ ಕಡೆಗೆ ದ್ರೌಪದಿಯ ಮಕ್ಕಳು, ಅಭಿಮನ್ಯು ಮುಂತಾದವರು ಸೇರಿಕೊಳ್ಳುತ್ತಾರೆ. ಆ ಮಧ್ಯದಲ್ಲಿ ಶಿಖಂಡಿಯು ಭೀಷ್ಮನನ್ನು ಎದುರಿಸುತ್ತಾನೆ. ಭೀಷ್ಮನು ಅವನೊಡನೆ ಯುದ್ಧಮಾಡುವುದಿಲ್ಲ. ಅನಂತರ ದ್ರೋಣರು ಶಿಖಂಡಿಯನ್ನು ಎದುರಿಸುತ್ತಾರೆ. ಶಿಖಂಡಿಯು ಅವರ ಮುಂದೆ ನಿಲ್ಲಲಾರದೇ ಹೊರಟುಹೋಗುತ್ತಾನೆ. ಅನಂತರ ಅರ್ಜುನನಿಗೂ–ಭೀಷ್ಮನಿಗೂ ಯುದ್ಧವು ಪ್ರಾರಂಭವಾಗುತ್ತದೆ.

ಮುಂದಿನ ೭೦ನೆಯ ಅಧ್ಯಾಯದಲ್ಲಿ ಸಂಪೂರ್ಣವಾಗಿ ಯುದ್ಧದ ವರ್ಣನೆಯೇ ಇದೆ. ಕಡೆಯಲ್ಲಿ ಭೀಷ್ಮನಿಗೂ ಭೀಮನಿಗೂ ಯುದ್ಧವು ಪ್ರಾರಂಭವಾಗಿ ಅಧ್ಯಾಯವು ಮುಗಿಯುತ್ತದೆ. ೭೧ನೆಯ ಅಧ್ಯಾಯದಲ್ಲಿ ಅರ್ಜುನನ ರಥದ ಮತ್ತು ಗಾಂಡೀವಧನುಸ್ಸಿನ ವರ್ಣನೆಯಿದೆ. ಹದಿನಾಲ್ಕು ಸಾವಿರ ಸೈನ್ಯದೊಡನೆ ಶಕುನಿಯೂ ಅರ್ಜುನನ ಮೇಲೆ ಯುದ್ಧಕ್ಕೆ ಹೋಗುತ್ತಾನೆ. ಅನಂತರ ದ್ವಂದ್ವಯುದ್ಧವು ಪ್ರಾರಂಭವಾಗುತ್ತದೆ. ಅಧ್ಯಾಯದ ಕಡೆಯಲ್ಲಿ ಸಲಗಗಳ ಉಪಟಳದ ವರ್ಣನೆಯಿದೆ.

೭೨ನೆಯ ಅಧ್ಯಾಯದಲ್ಲಿ ಪುನಃ ದ್ವಂದ್ವಯುದ್ಧವು ಪ್ರಾರಂಭವಾಗುತ್ತದೆ. ಆ ವೇಳೆಗೆ ಮಧ್ಯಾಹ್ನವಾಗುತ್ತದೆ. ಭೀಷ್ಮನಿಗೂ-ಭೀಮನಿಗೂ ಘೋರವಾದ ಯುದ್ಧವಾಗುತ್ತದೆ. ಭೀಮಸೇನನ ಧನುಸ್ಸನ್ನು ಭೀಷ್ಮನು ಕತ್ತರಿಸಿಬಿಡುತ್ತಾನೆ. ಆ ವೇಳೆಗೆ ಸಾತ್ಯಕಿಯು ಭೀಮನ ಸಹಾಯಕ್ಕೆ ಬರುತ್ತಾನೆ. ಸಾತ್ಯಕಿಯ ಸಾರಥಿಯನ್ನೇ ಭೀಷ್ಮನು ಸಂಹರಿಸುತ್ತಾನೆ. ಕುದುರೆಗಳು ರಥವನ್ನು ಎಳೆದುಕೊಂಡು ದಿಕ್ಕಾಪಾಲಾಗಿ ಓಡಿಹೋಗುತ್ತವೆ. ಪಾಂಡವರ ಸೈನ್ಯದಲ್ಲಿ ಹಾಹಾಕಾರವುಂಟಾಗುತ್ತದೆ. ಆದರೂ ಸಹ ಧೈರ್ಯಗೆಡದೇ ಎಲ್ಲರೂ ಒಟ್ಟಾಗಿ ಭೀಷ್ಮನನ್ನು ಪುನಃ ಆಕ್ರಮಿಸುತ್ತಾರೆ. ಇಲ್ಲಿಗೆ ೭೨ನೆಯ ಅಧ್ಯಾಯವು ಮುಗಿಯುತ್ತದೆ.

೭೩ನೆಯ ಅಧ್ಯಾಯದಲ್ಲಿ ವಿರಾಟ-ಭೀಷ್ಮ, ಅಶ್ವತ್ಥಾಮ-ಅರ್ಜುನ, ದುರ್ಯೋಧನ-ಭೀಮಸೇನ ಮತ್ತು ಅಭಿಮನ್ಯು-ಲಕ್ಷ್ಮಣ ಇವರಿಗೆ ದ್ವಂದ್ವ ಯುದ್ಧವು ನಡೆಯುತ್ತದೆ. ಅಶ್ವತ್ಥಾಮನು ಗುರುಪುತ್ರನೆಂಬ ಮತ್ತು ಬ್ರಾಹ್ಮಣ ನೆಂಬ ಭಾವನೆಯಿಂದ ಅವನೊಡನೆ ಅರ್ಜುನನು ಹೆಚ್ಚು ಹೊತ್ತು ಯುದ್ಧ ಮಾಡುವುದಿಲ್ಲ. ಅಭಿಮನ್ಯುವಿಗೂ ದುರ್ಯೋಧನನ ಮಗನಾದ ಲಕ್ಷ್ಮಣ ನಿಗೂ ಘೋರಯುದ್ಧವು ನಡೆಯುತ್ತದೆ. ಲಕ್ಷ್ಮಣನು ರಥವನ್ನು ಕಳೆದು ಕೊಂಡು ತೊಂದರೆಯಲ್ಲಿದ್ದಾಗ ಕೃಪರು ಅವನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟುಹೋಗುತ್ತಾರೆ. ಭೀಷ್ಮನ ಸಂಹಾರಕ್ರಿಯೆಯ ವರ್ಣನೆಯೊಡನೆ ಅಧ್ಯಾಯವು ಮುಗಿಯುತ್ತದೆ. ೭೪ನೆಯ ಅಧ್ಯಾಯದಲ್ಲಿ ಸಾತ್ಯಕಿ-ಭೂರಿಶ್ರವಸರ ಯುದ್ಧದ ವರ್ಣನೆಯಿದೆ. ಆ ಮಧ್ಯದಲ್ಲಿ ಬಂದ ಸಾತ್ಯಕಿಯ ಹತ್ತುಮಂದಿ ಮಕ್ಕಳು ಭೂರಿಶ್ರವಸನಿಂದ ವಧಿಸಲ್ಪಡುತ್ತಾರೆ. ಐದನೆಯ ದಿವಸದ ಯುದ್ಧದಲ್ಲಿ ಸಾತ್ಯಕಿಯ ಹತ್ತು ಮಕ್ಕಳು ಸತ್ತುದೇ ಪಾಂಡವರ ಕಡೆಯ ನಷ್ಟವೆಂದು ಪರಿಗಣಿಸಬಹುದು. ಅರ್ಜುನನು ಇಪ್ಪತ್ತೈದು ಸಾವಿರ ಕುರುಸೈನಿಕರನ್ನೂ ಸಂಹರಿಸಿದನೆಂದು ಅಧ್ಯಾಯದ ಕಡೆಯಲ್ಲಿ ಹೇಳಿದೆ. ಐದ ನೆಯ ದಿವಸದ ಯುದ್ಧದಲ್ಲಿ ಯಾವ ಪಕ್ಷದವರಿಗೂ ಗೆಲುವಾಯಿತೆಂದಾ ಗಲೀ—ಪರಾಜಯವಾಯಿತೆಂದಾಗಲೀ ಹೇಳಿಕೊಳ್ಳುವ ರೀತಿಯಲ್ಲಿ ಅದು ಮುಗಿಯಲಿಲ್ಲ.

೭೫ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಆರನೆಯ ದಿವಸದ ಯುದ್ಧಾರಂಭ : ಪಾಂಡವರು ಮಕರವ್ಯೂಹ ವನ್ನೂ ಕೌರವರು ಕ್ರೌಂಚವ್ಯೂಹವನ್ನೂ ರಚಿಸಿಕೊಂಡು ಯುದ್ಧಕ್ಕೆ ಪ್ರವೃತ್ತರಾದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಕುರು-ಪಾಂಡವರು ರಾತ್ರಿಯಲ್ಲಿ ವಿಶ್ರಮಿಸಿಕೊಂಡು ರಾತ್ರಿಯು ಕಳೆದು ಬೆಳಗಾಗುತ್ತಲೇ ಯುದ್ಧಮಾಡಲು ರಣರಂಗಕ್ಕೆ ಪ್ರಯಾಣ ಮಾಡಿದರು. ಆ ಸಮಯದಲ್ಲಿ ನಿನ್ನ ಪಕ್ಷದಲ್ಲಿ ಮತ್ತು ಪಾಂಡವರ ಪಕ್ಷದಲ್ಲಿ ದೊಡ್ಡ ಕೋಲಾಹಲವೆದ್ದಿತು. ಕೆಲವರು ಯುದ್ಧಕ್ಕೆ ರಥಗಳನ್ನು ಸಜ್ಜುಗೊಳಿ ಸುತ್ತಿದ್ದರು. ಮತ್ತೆ ಕೆಲವರು ಆನೆಗಳ ಮೇಲೆ ಅಂಬಾರಿಗಳನ್ನೂ ಬಾಣ ಬತ್ತಳಿಕೆಗಳನ್ನೂ ಇಡುತ್ತಿದ್ದು ಗಜಸೈನ್ಯಗಳನ್ನು ಯುದ್ಧಕ್ಕೆ ಸಿದ್ಧಗೊಳಿಸುತ್ತಿ

ದ್ದರು. ಪದಾತಿಸೈನಿಕರು ಕವಚಗಳನ್ನೂ, ಶಿರಸ್ತ್ರಾಣಗಳನ್ನೂ ಧರಿಸಿಕೊಂಡು ಯುದ್ಧಸನ್ನದ್ಧರಾಗುತ್ತಿದ್ದರು. ಅಶ್ವಸೈನಿಕರೂ ತಮ್ಮ-ತಮ್ಮ ಕುದುರೆಗಳನ್ನು ಜೀನುಗಳಿಂದಲೂ, ಲಗಾಮುಗಳಿಂದಲೂ ಯುದ್ಧಕ್ಕೆ ಸಜ್ಜುಗೊಳಿಸುತ್ತಿದ್ದರು. ಇದರ ಜೊತೆಗೆ ಎಲ್ಲ ಕಡೆಗಳಲ್ಲಿಯೂ ಶಂಖ-ದುಂದುಭಿನಿನಾದ ಗಳಾಗುತ್ತಿದ್ದುವು. ಆ ಶಬ್ದಗಳೆಲ್ಲವೂ ಸೇರಿ ದೊಡ್ಡ ಗದ್ದಲವಾಗುತ್ತಿರುವಂತೆ ಕೇಳಿಬರುತ್ತಿದ್ದಿತು.

ಪಾಂಡವರ ಪಕ್ಷದಲ್ಲಿ ಯುಧಿಷ್ಠಿರಮಹಾರಾಜನು ಸೇನಾಪತಿಯಾದ ಧೃಷ್ಟದ್ಯುಮ್ನನೊಡನೆ ಆರನೆಯ ದಿವಸದ ಯುದ್ಧದ ವಿಷಯವನ್ನು ಪ್ರಸ್ತಾಪಿ ಸುತ್ತಾ–

**ವ್ಯೂಹಂ ವ್ಯೂಹ ಮಹಾಬಾಹೋ ಮಕರಂ ಶತ್ರುನಾಶನಮ್ ॥೪॥**

"ಮಹಾಬಾಹುವೇ! ಮಕರವೆಂಬ ಶತ್ರುನಾಶಕವಾದ ವ್ಯೂಹವನ್ನು ರಚಿಸು" ಎಂದು ಹೇಳಿದನು. ಮಹಾರಥನಾದ ಧೃಷ್ಟದ್ಯುಮ್ನನು ಹಾಗೆಯೇ ಆಗಲೆಂದು ಹೇಳಿ ತನ್ನ ಕಡೆಯ ರಥಿಗಳೆಲ್ಲರಿಗೂ ಮಕರವ್ಯೂಹವನ್ನು ರಚಿಸುವಂತೆ ಆಜ್ಞೆಯನ್ನು ನೀಡಿದನು. ಸ್ವಲ್ಪ ಹೊತ್ತಿನಲ್ಲಿಯೇ ಮಕರವ್ಯೂಹವು ಸಿದ್ಧವಾಯಿತು. ಮಕರವ್ಯೂಹದ ತಲೆಯ ಭಾಗದಲ್ಲಿ ದ್ರುಪದ–ಧನಂಜಯರಿದ್ದರು. ಕಣ್ಣುಗಳ ಸ್ಥಾನಗಳಲ್ಲಿ ಸಹದೇವ-ನಕುಲರಿದ್ದರು. ಮಹಾಬಲನಾದ ಭೀಮಸೇನನು ಆ ಮಕರವ್ಯೂಹದ ಮುಖವೇ ಆಗಿದ್ದನು. ಅಭಿಮನ್ಯು, ದ್ರೌಪದಿಯ ಐವರು ಮಕ್ಕಳು, ಘಟೋತ್ಕಚ, ಸಾತ್ಯಕಿ ಮತ್ತು ಧರ್ಮರಾಜ–ಇವರು ಆ ವ್ಯೂಹದ ಕುತ್ತಿಗೆಯ ಭಾಗದಲ್ಲಿದ್ದರು. ಪೃಷ್ಠಭಾಗ ದಲ್ಲಿ ವಾಹಿನೀಪತಿಯಾದ ವಿರಾಟನೂ, ವಿಶಾಲವಾದ ಸೈನ್ಯದಿಂದ ಪರಿ ವೃತನಾದ ಧೃಷ್ಟದ್ಯುಮ್ನನೂ ಇದ್ದರು. ಮಕರವ್ಯೂಹದ ವಾಮಪಾರ್ಶ್ವದಲ್ಲಿ ಐವರು ಕೇಕಯಸಹೋದರರಿದ್ದರು. ನರವ್ಯಾಘ್ರನಾದ ಧೃಷ್ಟಕೇತು ಮತ್ತು ವೀರ್ಯವಂತನಾದ ಚೇಕಿತಾನರಿಬ್ಬರೂ ವ್ಯೂಹದ ದಕ್ಷಿಣಭಾಗದಲ್ಲಿದ್ದು ಆ ವ್ಯೂಹದ ರಕ್ಷಣೆಗೆ ಸಜ್ಜಾಗಿ ನಿಂತಿದ್ದರು. ಮಕರವ್ಯೂಹದ ಎರಡು ಕಾಲುಗಳ ಸ್ಥಾನಗಳಲ್ಲಿ ಶ್ರೀಮಂತನಾದ, ಮಹಾರಥನಾದ ಕುಂತಿಭೋಜನೂ, ದೊಡ್ಡದಾದ ಸೈನ್ಯದೊಡನೆ ಶತಾನೀಕನೂ ಉಪಸ್ಥಿತರಾಗಿದ್ದರು. ವ್ಯೂಹದ ಪುಚ್ಛಸ್ಥಾನದಲ್ಲಿ ಬಲಿಷ್ಠನಾದ, ಸೋಮಕಸೈನಿಕರಿಂದ ಪರಿವೃತನಾದ,

ಮಹಾಧನುಷ್ಮಂತನಾದ ಬಲಿಷ್ಠನಾದ ಶಿಖಂಡಿಯೂ ಮತ್ತು ಇರಾವಂತನೂ ಇದ್ದರು. ಈ ರೀತಿಯಲ್ಲಿ ಪಾಂಡವರು ಮಹಾವ್ಯೂಹವನ್ನು ರಚಿಸಿಕೊಂಡು ಸೂರ್ಯೋದಯವಾದೊಡನೆಯೇ ಯುದ್ಧಮಾಡುವ ಸಲುವಾಗಿ ಪುನಃ ಕವಚಗಳನ್ನು ತೊಟ್ಟುಕೊಂಡರು. ಗಜಾಶ್ವ-ರಥ-ಪದಾತಿಗಳಿಂದಲೂ, ಎತ್ತರ ದಲ್ಲಿ ಪರಿಶೋಭಿಸುತ್ತಿದ್ದ ಛತ್ರಗಳಿಂದಲೂ-ಧ್ವಜಗಳಿಂದಲೂ, ವಿಮಲ ವಾಗಿಯೂ–ಹರಿತವಾಗಿಯೂ ಇದ್ದ ಶಸ್ತ್ರಗಳಿಂದಲೂ ಕೂಡಿದವರಾಗಿ ಬಹಳ ಬೇಗ ಕೌರವರನ್ನು ಆಕ್ರಮಿಸಿದರು.

ಅಂದು ಪಾಂಡವರ ಸೈನ್ಯವು ಮಕರವ್ಯೂಹಕ್ರಮದಲ್ಲಿರುವುದನ್ನು ಕಂಡು ನಿನ್ನ ತಂದೆಯಾದ ದೇವವ್ರತನು ತನ್ನ ಸೈನ್ಯವನ್ನು ಮಕರವ್ಯೂಹಕ್ಕೆ ಪ್ರತಿಯಾದ ಕ್ರೌಂಚವ್ಯೂಹಕ್ರಮದಲ್ಲಿ ನಿಲ್ಲಿಸಿದನು. ಆ ಕ್ರೌಂಚವ್ಯೂಹದ ಕೊಕ್ಕಿನ ಪ್ರದೇಶದಲ್ಲಿ ಮಹಾಧನುಷ್ಮಂತರಾದ ದ್ರೋಣರು ವಿರಾಜಿಸಿದರು. ಅಶ್ವತ್ಥಾಮ-ಕೃಪರು ಅದರ ಎರಡು ಕಣ್ಣುಗಳ ಸ್ಥಾನದಲ್ಲಿದ್ದರು. ಸರ್ವ ಧನುಷ್ಮಂತರಿಗೂ ಶ್ರೇಷ್ಠನಾದ, ನರಶ್ರೇಷ್ಠನಾದ ಕೃತವರ್ಮನು ಕಾಂಬೋಜ ಮತ್ತು ಬಾಹ್ಲಿಕ ದೇಶಗಳ ಶ್ರೇಷ್ಠಸೈನಿಕರೊಡನೆ ಕ್ರೌಂಚವ್ಯೂಹದ ಶಿರಸ್ಥಾನದಲ್ಲಿ ಉಪಸ್ಥಿತನಾಗಿದ್ದನು. ಕುತ್ತಿಗೆಯಲ್ಲಿ ಶೂರಸೇನನೂ, ಅನೇಕರಾಜರಿಂದ ಪರಿವೃತನಾಗಿದ್ದ ನಿನ್ನ ಮಗ ದುರ್ಯೋಧನನೂ ನಿಂತಿದ್ದರು. ನರಶ್ರೇಷ್ಠನಾದ ಭಗದತ್ತನು ಮದ್ರ-ಸೌವೀರ-ಕೇಕಯಯೋಧರೊಡನೆಯೂ ದೊಡ್ಡದಾದ ಸೈನ್ಯದೊಡನೆಯೂ ಕೂಡಿಕೊಂಡು ಕ್ರೌಂಚವ್ಯೂಹದ ವಕ್ಷಃಸ್ಥಲದಲ್ಲಿದ್ದನು. ಪ್ರಸ್ಥಲಾಧಿಪತಿಯಾದ (ತ್ರಿಗರ್ತರಾಜನಾದ) ಸುಶರ್ಮನು ಕವಚವನ್ನು ಧರಿಸಿ ತನ್ನ ಅಪಾರಸೈನ್ಯದೊಡನೆ ವ್ಯೂಹದ ಎಡರೆಕ್ಕೆಯನ್ನು ಆಶ್ರಯಿಸಿ ನಿಂತಿದ್ದನು. ತುಷಾರರು, ಯವನರು, ಶಕರು ಮತ್ತು ಚೂಚುಪದೇಶೀಯರು ಕ್ರೌಂಚ ವ್ಯೂಹದ ಬಲರೆಕ್ಕೆಯನ್ನಾಶ್ರಯಿಸಿ ನಿಂತಿದ್ದರು. ಶ್ರುತಾಯುಷ, ಶತಾಯುಷ, ಸೌಮದತ್ತಿ (ಭೂರಿಶ್ರವಸ)–ಇವರೆಲ್ಲರೂ ಪರಸ್ಪರವಾಗಿ ರಕ್ಷಣೆಮಾಡಿ ಕೊಳ್ಳುತ್ತಾ ವ್ಯೂಹದ ಪೃಷ್ಠಪ್ರದೇಶದಲ್ಲಿ ನಿಂತಿದ್ದರು. ಮಾರಿಷ! ನಾನು ಹಿಂದೆ ಹೇಳಿದಂತೆ ಸೂರ್ಯೋದಯವಾಗುತ್ತಲೇ ಪಾಂಡವ-ಕೌರವರು ರಣಾಂಗಣಕ್ಕೆ ಧಾವಿಸಿದರು. ಅನಂತರ ಭಯಂಕರವಾದ ಯುದ್ಧವು ಪ್ರಾರಂಭವಾಯಿತು.

ರಥಸೈನ್ಯಗಳ ಮೇಲೆ ಗಜಸೈನ್ಯಗಳು ದಾಳಿನಡೆಸಿದುವು. ರಥಿಗಳು ಗಜಸೈನಿಕರ ಮೇಲೆ ದಾಳಿನಡೆಸಿದರು. ಅಶ್ವಾರೋಹಿಗಳನ್ನು ರಥಾರೋಹಿಗಳೂ, ಗಜಯೋಧರೂ ಆಕ್ರಮಿಸಿದರು. ಗಜಸೈನಿಕರ ಮೇಲೆ ರಥಾರೋಹಿಗಳೂ, ಕುದುರೆಸವಾರರೂ ದಾಳಿ ನಡೆಸಿದರು. ಕುದುರೆಸವಾರರು ರಥಿಕರನ್ನು ಆಕ್ರಮಿಸಿದರು. ಗಜಸೈನ್ಯಗಳನ್ನು ಅಶ್ವಸೈನ್ಯಗಳು ಆಕ್ರಮಿಸಿದುವು. ರಥಸೈನಿಕರು ಅಶ್ವಸೈನಿಕರನ್ನು ಎದುರಿಸಿನಿಂತರು. ಕೆಲವು ಕಡೆಗಳಲ್ಲಿ ರಥಸೈನಿಕರೂ ಪದಾತಿಗಳೊಡನೆ ಯುದ್ಧಮಾಡುತ್ತಿದ್ದರು. ಅಶ್ವಸೈನಿಕರೂ ಪದಾತಿಗಳೊಡನೆ ಕಾಳಗಮಾಡುತ್ತಿದ್ದರು. ಮಹಾರಾಜ! ಈ ರೀತಿಯಲ್ಲಿ ಅಸಹನೆಯಿಂದ ಕೂಡಿದ್ದ ಆ ಸೈನಿಕರು ಅನ್ಯೋನ್ಯವಾಗಿ ಕಾದಾಡುತ್ತಿದ್ದರು.

ಭೀಮಸೇನಾರ್ಜುನ-ನಕುಲ-ಸಹದೇವರುಗಳಿಂದಲೂ ಇತರ ಮಹಾರಥರಿಂದಲೂ ರಕ್ಷಿತವಾಗಿದ್ದ ಪಾಂಡವರ ಸೈನ್ಯವು ನಕ್ಷತ್ರಗಳಿಂದ ರಾತ್ರಿಯು ಶೋಭಿಸುವಂತೆ ಪರಿಶೋಭಿಸುತ್ತಿದ್ದಿತು. ಅದೇ ರೀತಿಯಲ್ಲಿ ಭೀಷ್ಮ-ಕೃಪ-ದ್ರೋಣ-ಶಲ್ಯ-ದುರ್ಯೋಧನಾದಿಗಳಿಂದ ರಕ್ಷಿತವಾಗಿದ್ದ ನಿನ್ನ ಸೇನೆಯೂ ಸಹ ಗ್ರಹಗಳಿಂದ ಕೂಡಿದ ಆಕಾಶದಂತೆಯೇ ಪರಿಶೋಭಿಸುತ್ತಿದ್ದಿತು.

ಕುಂತಿಯ ಮಗನಾದ, ಮಹಾಪರಾಕ್ರಮಿಯಾದ ಭೀಮಸೇನನು–ಕ್ರೌಂಚವ್ಯೂಹದ ಕೊಕ್ಕಿನ ಭಾಗದಲ್ಲಿ (ವ್ಯೂಹದ ಅಗ್ರಭಾಗದಲ್ಲಿ) ದ್ರೋಣರು ನಿಂತಿರುವುದನ್ನು ನೋಡಿ ವೇಗಗತಿಯುಳ್ಳ ಕುದುರೆಗಳಿಂದ ಯೋಜಿತವಾಗಿದ್ದ ರಥದಲ್ಲಿ ಕುಳಿತು ದ್ರೋಣರ ಸೈನ್ಯದ ಕಡೆಗೆ ಧಾವಿಸಿದನು. ಭೀಮನು ತಮಗೆ ಎದುರಾಗಿ ರಭಸದಿಂದ ಬರುತ್ತಿರುವುದನ್ನು ಕಂಡು ಸಮರಶ್ಲಾಘಿಗಳಾದ ದ್ರೋಣರು ಪರಮಕ್ರುದ್ಧರಾಗಿ ಲೋಹಮಯವಾದ ಒಂಬತ್ತು ಬಾಣಗಳಿಂದ ಭೀಮಸೇನನ ಮರ್ಮಸ್ಥಾನವನ್ನು ಲಕ್ಷಿಸಿ ಪ್ರಹರಿಸಿದರು. ದ್ರೋಣರಿಂದ ಬಹಳ ಬಲವಾಗಿ ಪ್ರಹೃತನಾದ ಭೀಮನು ಕ್ರುದ್ಧನಾಗಿ ಮರುಕ್ಷಣದಲ್ಲಿಯೇ ದ್ರೋಣರ ಸಾರಥಿಯನ್ನು ಯಮಾಲಯಕ್ಕೆ ಕಳುಹಿಸಿಬಿಟ್ಟನು. ಅದರಿಂದ ಪ್ರತಾಪವಂತರಾದ ದ್ರೋಣರು ಸಂಭ್ರಾಂತರಾಗಲಿಲ್ಲ. ರಥದ ಸಾರಥ್ಯವನ್ನೂ ತಾವೇ ವಹಿಸಿಕೊಂಡು ಕುದುರೆಗಳನ್ನು ನಿಯಂತ್ರಿಸುತ್ತಾ–ಹತ್ತಿಯರಾಶಿಯನ್ನು ಅಗ್ನಿಯು ಕ್ಷಣಮಾತ್ರದಲ್ಲಿ ಭಸ್ಮಮಾಡಿಬಿಡುವಂತೆ–ಪಾಂಡವರ ಸೇನೆಯನ್ನು ಬಗ್ಗುಬಡಿದುಬಿಟ್ಟರು. ಭೀಷ್ಮ- ದ್ರೋಣರಿಬ್ಬರೂ ಸೇರಿಕೊಂಡು

ಪಾಂಡವರ ಸೇನೆಯನ್ನು ಅವ್ಯಾಹತವಾಗಿ ಸಂಹರಿಸುತ್ತಿರಲಾಗಿ ಅಳಿದುಳಿದಿದ್ದ ಸೃಂಜಯ-ಕೇಕಯನರೋತ್ತಮರು ಅವರಿಗೆದುರಾಗಿ ನಿಲ್ಲಲಾರದೇ ಪ್ರಾಣ ಭಯದಿಂದ ಪಲಾಯನಮಾಡುವುದರಲ್ಲಿ ಉದ್ಯುಕ್ತರಾದರು. (ಹಿಮ್ಮೆಟ್ಟಲು ಸಿದ್ಧತೆಯನ್ನು ನಡೆಸಿದರು.) ಅದೇ ರೀತಿಯಲ್ಲಿ ಭೀಮಾರ್ಜುನರಿಂದ ಕ್ಷತ-ವಿಕ್ಷತವಾದ ನಿನ್ನ ಸೈನ್ಯವೂ ಸಹ ಮದಿಸಿದ (ಪತಿಯ ವಿರಹದಿಂದ ಕಾಮಾತುರಳಾದ) ಶ್ರೇಷ್ಠಸ್ತ್ರೀಯಂತೆ–ಅಲ್ಲಲ್ಲಿಯೇ ಮೂರ್ಛಿತವಾಗಿ ಬೀಳುತ್ತಿದ್ದಿತು.

ವೀರಶ್ರೇಷ್ಠರ ಕ್ಷಯಕರವಾಗಿದ್ದ ಆ ಯುದ್ಧದಲ್ಲಿ ಎರಡು ಪಕ್ಷಗಳವರೂ ರಚಿಸಿದ್ದ ವ್ಯೂಹಗಳೂ ಒಡೆದುಹೋದುವು. ಅನಂತರ ನಿನ್ನ ಮತ್ತು ಪಾಂಡವರ ಸೈನ್ಯದಲ್ಲಿ ಘೋರವಾದ ಸಮ್ಮಿಶ್ರಣವಾಯಿತು (ಘರ್ಷಣೆ ಯಾಯಿತು.) ಮಹಾರಾಜ! ನಿನ್ನ ಕಡೆಯವರು ಶತ್ರುಪಕ್ಷದವರೊಡನೆ ಮಾಡುತ್ತಿದ್ದ ಯುದ್ಧವು ಪರಮಾದ್ಭುತವಾಗಿ ಕಾಣುತ್ತಿದ್ದಿತು. ಎಲ್ಲರೂ ಶತ್ರು ಪಕ್ಷದವರನ್ನು ನಾಶಪಡಿಸಬೇಕೆಂಬ ಒಂದೇ ಮನಸ್ಸುಳ್ಳವರಾಗಿ ಯುದ್ಧ ಮಾಡುತ್ತಿದ್ದರು. ಪಾಂಡವರೂ ಮತ್ತು ಮಹಾಬಲರಾದ ಕೌರವರೂ ಪರಸ್ಪರವಾಗಿ ಬಿಡುತ್ತಿದ್ದ ಅಸ್ತ್ರಗಳನ್ನು ನಿವಾರಣೆಮಾಡಿಕೊಳ್ಳುತ್ತಾ ಯುದ್ಧ ವನ್ನು ಮುಂದುವರಿಸಿದರು."

ಒ೫ನೆಯ ಅಧ್ಯಾಯವು ಮುಗಿಯಿತು.

ಒ೬ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನ ಚಿಂತೆ

ಧೃತರಾಷ್ಟ್ರನು ಸಂಜಯನೊಡನೆ ಹೇಳುತ್ತಾನೆ :

"ಸಂಜಯ! ನಾನು ನಿನ್ನಿಂದ ಐದು ದಿವಸಗಳ ಯುದ್ಧದ ವಿವರಣೆ ಯನ್ನು ಕೇಳಿದೆನು. ಆರನೆಯ ದಿವಸದ ಸಮಾಚಾರವನ್ನೂ ಕೇಳುತ್ತಿದ್ದೇನೆ. ನಮ್ಮ ಸೈನ್ಯದ ವಿಷಯದಲ್ಲಿ ಕೆಲವು ಮಾತುಗಳನ್ನು ನಿನ್ನೊಡನೆ ಹೇಳ ಬೇಕೆಂದಿರುತ್ತೇನೆ. ನಿನಗೆ ತಿಳಿದಿರುವಂತೆಯೇ ನಮ್ಮ ಸೈನ್ಯವು ಶತ್ರುಸೈನ್ಯದ ದೃಷ್ಟಿಯಿಂದ ಬಹುಸಂಖ್ಯಾತವಾದುದು ಅಥವಾ ಅನೇಕಸದ್ಗುಣಗಳಿಂದ ಸಂಪನ್ನವಾದುದು, ಬಹುವಿಧವಾದುದು, ಚತುರಂಗಬಲಸಮೇತವಾದುದು.

ರಥ-ಗಜಾಶ್ವ-ಪದಾತಿಗಳಲ್ಲಿ ಯಾವ ವಿಭಾಗದಲ್ಲಿಯೂ ನ್ಯೂನತೆಯಿಲ್ಲದುದು. ಅನುದಿನವೂ ವ್ಯೂಹಗಳು ಯಥಾಶಾಸ್ತ್ರವಾಗಿ ರಚಿಸಲ್ಪಡುತ್ತಿದ್ದುವು. ಈ ಎಲ್ಲ ಕಾರಣಗಳಿಂದಲೂ ನಮ್ಮ ಸೈನ್ಯವು ಅಮೋಘವಾಗಿತ್ತು ಎಂಬುದರಲ್ಲಿ ಸಂಶಯವೇ ಇಲ್ಲ. ಮೇಲಾಗಿ ನಮ್ಮ ಸೈನ್ಯವು ನಮ್ಮ ವಿಷಯದಲ್ಲಿ ಪ್ರಸನ್ನವಾಗಿಯೂ ಇದೆ ; ಅನುರಕ್ತವಾಗಿಯೂ ಇದೆ ; ವಿನೀತವಾಗಿಯೂ ಇದೆ. ನಮ್ಮ ಸೈನಿಕರಲ್ಲಿ ಯಾರಿಗೂ ಯಾವ ವಿಧವಾದ ದುರ್ವ್ಯಸನಗಳೂ ಇಲ್ಲ. ಇದೂ ಅಲ್ಲದೇ ಅವರ ಪರಾಕ್ರಮವೆಷ್ಟೆಂಬುದನ್ನು ನಾವು ಹಿಂದೆಯೇ ನೋಡಿ ತಿಳಿದುಕೊಂಡಿದ್ದೆವು.

**ನಾತಿವೃದ್ಧಮಬಾಲಂ ಚ ನ ಕೃಶಂ ನ ಚ ಪೀವರಮ್ ।**
**ಲಘುವೃತ್ತಾಯತಪ್ರಾಯಂ ಸಾರಯೋಧಮನಾಮಯಮ್ ॥೩॥**

ಸಂಜಯ! ನಮ್ಮ ಸೈನಿಕರು ಹೇಗಿದ್ದಾರೆಂದರೆ : ಅತಿವೃದ್ಧರೂ ಅಲ್ಲ ; ಬಾಲಕರೂ ಅಲ್ಲ. ಬಹಳ ಕೃಶರೂ ಅಲ್ಲ ; ಸ್ಥೂಲಕಾಯರೂ ಅಲ್ಲ. ಶರೀರ ಲಾಘವವುಳ್ಳವರಾಗಿಯೂ (ಶಕ್ತಿವಂತರಾಗಿಯೂ) ನೀರೋಗದೃಢಕಾಯರಾಗಿಯೂ ಇರುವ ಯೋಧರಿಂದ ನಮ್ಮ ಸೈನ್ಯವು ಸಂಪನ್ನವಾಗಿದೆ. ಎಲ್ಲರೂ ಕವಚಗಳನ್ನು ತೊಟ್ಟು ಅಸ್ತ್ರ-ಶಸ್ತ್ರಗಳನ್ನು ಧಾರಣೆಮಾಡಿರುತ್ತಾರೆ. ಬಹುಸಂಖ್ಯಾತವಾದ ಶಸ್ತ್ರಗಳನ್ನು ಸಂಗ್ರಹಿಸಿರುತ್ತಾರೆ. ಪ್ರತಿಯೊಬ್ಬ ಯೋಧನೂ ಖಡ್ಗಯುದ್ಧದಲ್ಲಿಯೂ, ಮಲ್ಲಯುದ್ಧದಲ್ಲಿಯೂ, ಗದಾಯುದ್ಧದಲ್ಲಿಯೂ ಕೋವಿದನಾಗಿದ್ದಾನೆ. ನಮ್ಮ ಸೈನ್ಯವು ಪ್ರಾಸ, ಋಷ್ಟಿ, ತೋಮರ, ಲೋಹಮಯವಾದ ಪರಿಘಾಯುಧ, ಭಿಂದಿಪಾಲ, ಶಕ್ತಿ, ಮುಸಲ, ಕಂಪನ, ಚಾಪ ಈಟಿ–ಇವೇ ಮುಂತಾದ ಆಯುಧಗಳ ಪ್ರಯೋಗಗಳಲ್ಲಿಯೂ, ಕವಣೆಯಿಂದ ಎಸೆಯುವುದರಲ್ಲಿಯೂ, ಚಿತ್ರ-ವಿಚಿತ್ರವಾದ ಮುಷ್ಟಿಯುದ್ಧದಲ್ಲಿಯೂ ಸಮರ್ಥರಾಗಿರುತ್ತಾರೆ. ನಮ್ಮ ಸೈನಿಕರಿಗೆ ಧನುರ್ವೇದವೇ ಮೊದಲಾದ ವಿದ್ಯೆಗಳಲ್ಲಿ ಪ್ರತ್ಯಕ್ಷಾನುಭವವಿದೆ. ಅಸ್ತ್ರ-ಶಸ್ತ್ರಗಳ ಅಭ್ಯಾಸದಲ್ಲಿಯೂ ಹೆಚ್ಚು ಪರಿಶ್ರಮವಿದೆ. ಶಸ್ತ್ರಗ್ರಹಣಕ್ಕೆ ಸಂಬಂಧಿಸಿದ ಆದಾನ, ಸಂಧಾನ, ಆಕರ್ಷಣ, ಪ್ರಕ್ಷೇಪ ಮುಂತಾದ ವಿದ್ಯೆಗಳಲ್ಲಿ ಪಾರಂಗತರಾಗಿರುತ್ತಾರೆ. ನಮ್ಮ ಸೈನಿಕರು ಆನೆಗಳನ್ನು ಮತ್ತು ಕುದುರೆಗಳನ್ನು ಹತ್ತುವುದರಲ್ಲಿಯೂ, ಅವುಗಳಿಂದ ಇಳಿಯುವುದರಲ್ಲಿಯೂ, ಅವುಗಳ ಮೇಲೆ ಕುಳಿತು ಮುಂದೆ

ಹೋಗುವುದರಲ್ಲಿಯೂ, ಮಧ್ಯದಲ್ಲಿಯೇ ಅವುಗಳ ಮೇಲಿನಿಂದ ಕೆಳಕ್ಕೆ ನೆಗೆಯುವುದರಲ್ಲಿಯೂ, ಶತ್ರುಗಳನ್ನು ಚೆನ್ನಾಗಿ ಪ್ರಹರಿಸುವುದರಲ್ಲಿಯೂ, ಶತ್ರುಗಳನ್ನು ಸಂಹಾರಮಾಡುತ್ತಾ ಮುಂದೆ-ಮುಂದೆ ಹೋಗುವುದರ ಲ್ಲಿಯೂ, ಸಮಯವು ಬಂದಾಗ ಉಪಾಯದಿಂದ ಹಿಮ್ಮೆಟ್ಟುವುದರಲ್ಲಿಯೂ ಪ್ರವೀಣರಾಗಿದ್ದಾರೆ. ರಣಾಂಗಣಕ್ಕೆ ಕರೆತರುವ ಮೊದಲು ಆನೆ, ಕುದುರೆ ಮತ್ತು ರಥ ಮುಂತಾದ ವಾಹನಗಳಲ್ಲಿ ಸೈನಿಕರನ್ನು ಕುಳ್ಳಿರಿಸಿ ಅವುಗಳ ಮೇಲೆ ಅವರ ಹತೋಟಿ ಎಷ್ಟಿದೆಯೆಂಬುದನ್ನು ನಾನಾವಿಧವಾದ ಕ್ರಮ ಗಳಿಂದ ಪರೀಕ್ಷಿಸಿದ್ದಾಗಿದೆ. ಹಾಗೆ ಪರೀಕ್ಷಿಸಿಯೇ ಅವರವರ ಯೋಗ್ಯತೆಗೆ ಅನುಸಾರವಾಗಿ ಯಥೋಚಿತವಾದ ವೇತನವನ್ನೂ ಕೊಡಲಾಗುತ್ತಿದೆ. ಒಬ್ಬನ ಸತ್ಕುಲಪ್ರಸೂತತೆ, ಕಾರ್ಯಸಾಮರ್ಥ್ಯ–ಇತ್ಯಾದಿಗಳನ್ನು ಅನೇಕ ರೀತಿಗಳಲ್ಲಿ ಪರೀಕ್ಷಿಸಿ ನಾವು ಸೈನಿಕರನ್ನು ಆರಿಸಿಕೊಂಡಿರುವೆವೇ ಹೊರತು ಯಾವುದೋ ಒಂದು ಸಮೂಹದಿಂದಾಗಲೀ, ಯಾವನಾದರೂ ಒಬ್ಬನು ನಮಗೆ ಉಪಕಾರಮಾಡಿರುವನೆಂಬ ಕಾರಣದಿಂದಾಗಲೀ, ಅವನು ನಮಗೆ ಬಂಧುವಾಗಿದ್ದಾನೆಂಬ ಕಾರಣದಿಂದಾಗಲೀ, ನಮ್ಮ ಸ್ನೇಹಿತರ ಬಲಾತ್ಕಾರ ದಿಂದಾಗಲೀ–ನಾವು ನಮ್ಮ ಸೈನ್ಯದಲ್ಲಿ ಕುಲೀನರಲ್ಲದವರನ್ನು ಸೇರಿಸಿ ಕೊಂಡಿರುವುದಿಲ್ಲ. ಯಾವ ದಾಕ್ಷಿಣ್ಯಕ್ಕೂ ಒಳಗಾಗದೇ ಕೇವಲ ಅರ್ಹತೆಯ ಆಧಾರದ ಮೇಲೆಯೇ ನಾವು ನಮ್ಮ ಸೈನಿಕರನ್ನು ಆರಿಸಿಕೊಂಡಿರುತ್ತೇವೆ. ನಮ್ಮ ಸೇನೆಯಲ್ಲಿ ಇರುವವರೆಲ್ಲರೂ ಐಶ್ವರ್ಯಸಂಪನ್ನರಾಗಿಯೂ ಮತ್ತು ಶ್ರೇಷ್ಠರಾಗಿಯೂ ಇದ್ದಾರೆ. ನಮ್ಮ ಸೈನಿಕರ ಸಂಬಂಧಿಗಳಾದ ಬಂಧುಗಳೂ ಸಹ ತುಷ್ಟರಾಗಿದ್ದಾರೆ. ನಾವು ಅವರೆಲ್ಲರಿಗೂ ಅನೇಕರೀತಿಯಲ್ಲಿ ಹೆಚ್ಚು ಉಪಕಾರವನ್ನು ಮಾಡಿದ್ದೇವೆ. ನಮ್ಮ ಸೈನಿಕರೆಲ್ಲರೂ ಯಶಸ್ವಿಗಳಾಗಿಯೂ ಮಾನಶೀಲರಾಗಿಯೂ ಇದ್ದಾರೆ. ನಮ್ಮ ಸೈನಿಕರ ನಿಷ್ಠೆ, ಕಾರ್ಯ ಮತ್ತು ವ್ಯವಹಾರಗಳನ್ನು ಪ್ರತ್ಯಕ್ಷವಾಗಿ ನೋಡಿರುವ ಲೋಕಪಾಲೋಪಮರಾದ ಮುಖ್ಯ-ಮುಖ್ಯರಾದ ಸ್ವಜನರು ಈ ಸೈನಿಕರ ಪಾಲನ-ಪೋಷಣೆಗಳನ್ನು ಮಾಡುತ್ತಿದ್ದಾರೆ. ಈ ವಿಷಯವು ಲೋಕಪ್ರಸಿದ್ಧವೇ ಆಗಿದೆ. ತಮ್ಮ ಸ್ವಂತ ಇಚ್ಛೆಯಿಂದಲೇ ಸೈನ್ಯಗಳಿಂದಲೂ, ಸೇವಕರಿಂದಲೂ ಕೂಡಿಕೊಂಡು ನಮ್ಮನ್ನು ಬಂದುಸೇರಿದ ಲೋಕಸಮ್ಮತರಾದ ಅನೇಕಕ್ಷತ್ರಿಯರಿಂದ ನಮ್ಮ

ಅಪಾರಸೈನ್ಯವು ಸಂರಕ್ಷಿತವಾಗಿದೆ. ಸಂಜಯ! ನಮ್ಮ ಸೈನ್ಯವು ಮಹಾಸಾಗರ ದಂತೆ ಸರ್ವಪ್ರಕಾರದಿಂದಲೂ ಪರಿಪೂರ್ಣವಾಗಿದೆ. ಸಮುದ್ರವು ನಾಲ್ಕು ದಿಕ್ಕುಗಳಿಂದಲೂ ಬಂದ ನದಿಗಳಿಂದ ತುಂಬುವಂತೆ ನಮ್ಮ ಸೈನ್ಯವು ಎಲ್ಲ ಕಡೆಗಳಿಂದ ಬಂದಿರುವ ಯೋಧರಿಂದ ತುಂಬಿದೆ. ನಮ್ಮ ಸೈನ್ಯವು ರೆಕ್ಕೆಗಳೇ ಇಲ್ಲದಿದ್ದರೂ ಪಕ್ಷಿಗಳಷ್ಟೇ ವೇಗವಾಗಿ ಸಂಚರಿಸುವ ರಥಗಳಿಂದಲೂ, ಆನೆಗಳಿಂದಲೂ ಕೂಡಿ ಸಂಪನ್ನವಾಗಿದೆ.

ನಾನಾಬಗೆಯ ಯೋಧರೇ ಈ ಸೈನ್ಯಸಾಗರಕ್ಕೆ ಜಲಪ್ರಾಯರಾಗಿದ್ದಾರೆ. ರಥ, ಆನೆ, ಕುದುರೆ ಮುಂತಾದ ವಾಹನಗಳೇ ಸಾಗರದ ದೊಡ್ಡ ಮತ್ತು ಚಿಕ್ಕದಾದ ತರಂಗಗಳಂತಿವೆ. ಸಮುದ್ರವನ್ನು ಜಲಚರಪ್ರಾಣಿಗಳು ತುಂಬಿ ಕೊಂಡಿರುವಂತೆ ಕ್ಷೇಪಣಿ, ಕತ್ತಿ, ಗದೆ, ಶಕ್ತ್ಯಾಯುಧ, ಬಾಣಗಳು, ಪ್ರಾಸ ಮುಂತಾದ ಆಯುಧಗಳು ಸೇನಾಸಮುದ್ರವನ್ನು ತುಂಬಿಕೊಂಡಿವೆ. ಸಮುದ್ರವು ನಾನಾವಿಧವಾದ ರತ್ನಗಳ ಹರಳುಗಳಿಂದ ಕೂಡಿರುವಂತೆ–ನಮ್ಮ ಸೇನಾಸಮುದ್ರವು ಧ್ವಜ ಮತ್ತು ರತ್ನಖಚಿತವಾದ ಆಭರಣಗಳಿಂದ ಸಂಪನ್ನವಾಗಿದೆ. ವಾಯುವಿನ ವೇಗದಿಂದ ಸಮುದ್ರವು ವಿಚಲಿತವಾಗು ವಂತೆ–ಓಡುತ್ತಿರುವ ಕುದುರೆಗಳಿಂದ ಸೇನಾಸಮುದ್ರವು ವಿಚಲಿತವಾಗಿರು ವಂತೆ ಕಾಣುತ್ತದೆ. ಸಮುದ್ರವು ಅಪಾರವಾಗಿರುವಂತೆ (ಸಮುದ್ರದ ಮತ್ತೊಂದು ತೀರವನ್ನು ನೋಡಲು ಸಾಧ್ಯವಾಗದಂತೆ) ನಮ್ಮ ಸೇನೆಯೂ ಸಹ ಅಪಾರವಾಗಿದೆ. ಸಮುದ್ರವು ಗರ್ಜಿಸುವಂತೆ ನಮ್ಮ ಸೇನಾಸಮುದ್ರವೂ ಸಹ ಯೋಧರ ಗರ್ಜನೆಯಿಂದ ಕೂಡಿದ್ದಾಗಿದೆ. ಆದುದರಿಂದ ನಮ್ಮ ಸೈನ್ಯವು ದೊಡ್ಡ ಸಮುದ್ರಕ್ಕೆ ಸದೃಶವಾಗಿಯೇ ಇದೆ.

ಎಲ್ಲಕ್ಕಿಂತಲೂ ಮಿಗಿಲಾಗಿ ನಮ್ಮ ಸೇನೆಯು–ದ್ರೋಣ, ಭೀಷ್ಮ, ಕೃತ ವರ್ಮ, ಕೃಪ, ದುಃಶಾಸನ, ಜಯದ್ರಥ, ಭಗದತ್ತ, ವಿಕರ್ಣ, ಅಶ್ವತ್ಥಾಮ, ಶಕುನಿ, ಬಾಹ್ಲಿಕ–ಇವರೇ ಮುಂತಾದ ಪ್ರಮುಖವೀರರಿಂದಲೂ ಶಕ್ತಿಮಂತ ರಾದ ಮಹಾತ್ಮರಿಂದಲೂ ಅಭಿರಕ್ಷಿತವಾಗಿದೆ. ಇಂತಹ ಪ್ರಬಲಸೇನೆಯೂ ಸಹ ಯುದ್ಧದಲ್ಲಿ ಶತ್ರುಗಳಿಂದ ವಿಧ್ವಂಸಿತವಾಯಿತು ಎಂದರೆ ಇದಕ್ಕೆ ಕಾರಣ ನಮ್ಮ ಹಿಂದಿನ ಪ್ರಾರಬ್ಧಕರ್ಮದ ಫಲವೇ ಆಗಿದೆ. ಸಂಜಯ! ಹಿಂದಿನ ದುರದೃಷ್ಟವೇ ಇದಕ್ಕೆ ಮುಖ್ಯಕಾರಣ. ಇಷ್ಟು ಅಪಾರವಾದ ಸೇನಾಸಂಗ್ರಹ ವನ್ನು ಪ್ರಪಂಚದ ಮಾನವರು ಇದುವರೆಗೂ ನೋಡಿಯೇ ಇರಲಿಲ್ಲ. ಮನು

ಷ್ಯರ ಮಾತು ಹಾಗಿರಲಿ, ಪ್ರಾಚೀನರಾದ ಮಹಾಭಾಗರಾದ ಋಷಿಗಳೂ ಸಹ ಭೂಮಿಯ ಮೇಲೆ ಇಂತಹ ಅಪಾರವಾದ ಸೇನಾಸಂಗ್ರಹವನ್ನು ನೋಡಿರುವುದಿಲ್ಲ. ಶಸ್ತ್ರಾಸ್ತ್ರಗಳ ಸಂಪತ್ತಿನಿಂದ ಕೂಡಿರುವ ಇಂತಹ ಅಪಾರವಾದ ಅಮೋಘವಾದ ಸಮುದಾಯವೂ ಯುದ್ಧದಲ್ಲಿ ಶತ್ರುಗಳಿಂದ ಅವ್ಯಾಹತವಾಗಿ ವಧಿಸಲ್ಪಡುತ್ತಿದೆಯೆಂದರೆ ಇದು ಕೇವಲ ಅದೃಷ್ಟದ ವಿಷಯವಲ್ಲದೇ ಮತ್ತೇನು? ಸಂಜಯ! ಎಲ್ಲವೂ ನನಗೆ ವಿಪರೀತವಾಗಿಯೇ ಕಾಣುತ್ತಿದೆ. ಇಂತಹ ಘೋರವಾದ ಸೇನಾಸಮೂಹವೂ ಯುದ್ಧದಲ್ಲಿ ಪಾಂಡವರನ್ನು ದಾಟಲಿಲ್ಲವೆಂದರೆ (ಜಯಿಸಲಿಲ್ಲವೆಂದರೆ) ಇದು ನನಗೆ ಅತ್ಯಾಶ್ಚರ್ಯವಾಗಿ ಕಾಣುತ್ತಿದೆ. ನಿಶ್ಚಯವಾಗಿ ಹೇಳುವುದಾದರೆ ಅಲ್ಪಬಲರಾದ ಪಾಂಡವರು ಮಾತ್ರವೇ ನಮ್ಮೊಡನೆ ಯುದ್ಧಮಾಡುತ್ತಿಲ್ಲ. ಅಲ್ಲಿ ಪ್ರೇಕ್ಷಕರಾಗಿ ಬಂದಿರುವ ದೇವತೆಗಳೂ ಸಹ ಪಾಂಡವರೊಡನೆ ಸೇರಿ ಕೊಂಡು ನಮ್ಮ ಮೇಲೆ ಯುದ್ಧಮಾಡುತ್ತಿದ್ದಾರೆ. ಆದುದರಿಂದಲೇ ನಮ್ಮ ಸೈನ್ಯವು ಪ್ರತಿದಿನವೂ ನಾಶಹೊಂದುತ್ತಲೇ ಇದೆ. ಹಿಂದೆ ವಿದುರನು ನನ್ನೊ ಡನೆ ಹಿತವೂ, ಪಥ್ಯವೂ ಆದ ಮಾತುಗಳನ್ನೇ ನಿತ್ಯವೂ ಹೇಳುತ್ತಿದ್ದನು. ಆದರೆ ವಿದುರನ ಆ ಮಾತುಗಳನ್ನು ಮೂರ್ಖನಾದ ನನ್ನ ಮಗ ದುರ್ಯೋಧನನು ಅಂಗೀಕರಿಸಲಿಲ್ಲ. ಮಹಾತ್ಮನಾದ, ಸರ್ವಜ್ಞನಾದ ವಿದುರನ ಬುದ್ಧಿಗೆ ಹೀಗಾಗುವುದೆಂಬುದು ಮೊದಲೇ ತಿಳಿದಿದ್ದಿತು. ಇಂದು ಏನು ನಡೆಯುತ್ತಿದೆಯೋ ಅದು ಅವನ ದೃಷ್ಟಿಗೆ ಹಿಂದೆಯೇ ಗೋಚರಿಸಿದ್ದಿತು.

**ಅಥವಾ ಭಾವ್ಯಮೇವಂ ಹಿ ಸಂಜಯೈತೇನ ಸರ್ವಥಾ ।**
**ಪುರಾ ಧಾತ್ರಾ ಯಥಾ ಸೃಷ್ಟಂ ತತ್ತಥಾ ನೈತದನ್ಯಥಾ ॥೨೬॥**

ಸಂಜಯ! ಅಥವಾ ಇದು ಹೀಗೆಯೇ ಆಗಬೇಕೆಂದಿದ್ದಿತೋ ಏನೋ ; ಯಾರು ಬಲ್ಲರು? ಹಿಂದೆ ಬ್ರಹ್ಮನು ಯಾವ ರೀತಿಯಲ್ಲಿ ಒಬ್ಬೊಬ್ಬರ ಅದೃಷ್ಟವನ್ನೂ ವಿಲೇಖಿಸಿದ್ದಾನೆಯೋ ಅದು ಸರ್ವಥಾ ಹಾಗೆಯೇ ನಡೆಯುತ್ತದೆ. ಅದನ್ನು ವ್ಯತ್ಯಾಸಮಾಡಲು ಯಾರಿಂದಲೂ ಖಂಡಿತವಾಗಿಯೂ ಸಾಧ್ಯವೇ ಆಗುವುದಿಲ್ಲ."

ಒ೬ನೆಯ ಅಧ್ಯಾಯವು ಮುಗಿಯಿತು.

೭೭ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಮಸೇನ, ಧೃಷ್ಟದ್ಯುಮ್ನ ಮತ್ತು ದ್ರೋಣರ ಪರಾಕ್ರಮ ವರ್ಣನೆ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ನೀನು ಮಾಡಿದ ಅಪರಾಧದಿಂದಲೇ ನಿನಗೆ ಈ ವಿಧವಾದ ವ್ಯಸನವು ಪ್ರಾಪ್ತವಾಗಿದೆ. ಪಾಂಡವರ ವಿಷಯದಲ್ಲಿ ಧರ್ಮಸಂಕರದಿಂದ ಎಂದರೆ ಅಧರ್ಮದಿಂದ ಮಾಡಲ್ಪಟ್ಟ ಕಾರ್ಯಗಳು ಯಾವುವೆಂಬುದನ್ನು ನೀನು ತಿಳಿದುಕೊಂಡಿದ್ದೆ. ಆದರೆ ದುರ್ಯೋಧನನು ಅದನ್ನು ತಿಳಿದವನಾಗಿರಲಿಲ್ಲ. ಪಾಂಡವರ ವಿಷಯದಲ್ಲಿ ನಿನ್ನ ಮಕ್ಕಳು ಅಧರ್ಮದಿಂದ ವರ್ತಿಸುತ್ತಿರುವರೆಂಬುದು ನಿನಗೆ ಸಂಪೂರ್ಣವಾಗಿ ತಿಳಿದಿದ್ದಿತು. ಆದರೆ ದುರ್ಯೋಧನನಿಗೆ ಅದರ ವಿವೇಚನೆಯೂ ಇರಲಿಲ್ಲ. ನಿನಗೆ ಅವನು ಮಾಡುತ್ತಿರುವುದು ಧರ್ಮವಿಹಿತವಲ್ಲವೆಂಬುದು ತಿಳಿದಿದ್ದರೂ ಪುತ್ರವ್ಯಾಮೋಹದಿಂದ ತಡೆಯಲು ಹೋಗುತ್ತಿರಲಿಲ್ಲ. ಈ ನಿನ್ನ ಒಂದು ಮುಖ್ಯದೋಷದಿಂದಲೇ ಸರ್ವವಿನಾಶಕರವಾದ ದ್ಯೂತವು ನಡೆಯಿತು. ನಿನ್ನ ದೋಷದಿಂದಲೇ ಈಗ ಪಾಂಡವರೊಡನೆ ಯುದ್ಧವೂ ನಡೆಯುತ್ತಿದೆ. (ಈ ಹಿಂದೆ ನೀನೇ ವಿವರಿಸಿದಂತೆ ನಿನ್ನ ಕಡೆಯಲ್ಲಿ ಅಪಾರವಾದ ಸೈನ್ಯವಿರುವುದೆಂಬ ಭ್ರಾಂತಿಯಿಂದ ಮತ್ತು ನಿನ್ನ ಮಗನು ಜಯಿಸಿಯೇ ತೀರುವನೆಂಬ ದೃಢನಂಬಿಕೆಯಿಂದ ನೀನು ಯುದ್ಧವನ್ನು ತಡೆಯಲು ಪ್ರಯತ್ನಿಸಲಿಲ್ಲ.) ಈ ನಿನ್ನ ದೋಷವೇ ಪಾಂಡವರೊಡನೆ ಯುದ್ಧಕ್ಕೆ ಕಾರಣವಾಯಿತು. ನೀನು ಸ್ವಯಂ ತಪ್ಪುಮಾಡಿದೆ. ಆ ತಪ್ಪಿಗೆ ಫಲವನ್ನೂ ಸಹ ನೀನೇ ಅನುಭವಿಸಬೇಕು.

**ಆತ್ಮನೈವ ಕೃತಂ ಕರ್ಮ ಆತ್ಮನೈವೋಪಭುಜ್ಯತೇ ।**
**ಇಹ ಚ ಪ್ರೇತ್ಯ ವಾ ರಾಜಂಸ್ತ್ವಯಾ ಪ್ರಾಪ್ತಂ ಯಥಾತಥಮ್ ॥**

ಇಹಲೋಕದಲ್ಲಿಯೇ ಆಗಲೀ ಪರಲೋಕದಲ್ಲಿಯೇ ಆಗಲೀ–ತಾನು ಮಾಡಿದ ಕರ್ಮದ ಫಲವನ್ನು ತಾನೇ ಅನುಭವಿಸಿಯೇ ತೀರಬೇಕು. ಈ ನ್ಯಾಯದಂತೆ ನೀನೀಗ ಮಾಡಿದ ಪಾಪದ ಫಲವನ್ನು ಅನುಭವಿಸಬೇಕಾದ ಕಾಲವು ಪ್ರಾಪ್ತವಾಗಿದೆ.

ಅನಿವಾರ್ಯವಾಗಿಯೇ ಬಂದಿರುವ ಈ ವ್ಯಸನವನ್ನು ಹೊಂದಿದ್ದರೂ

ನೀನು ಸ್ಥೈರ್ಯದಿಂದಿರು. ಯುದ್ಧವು ಹೇಗೆ ನಡೆಯುತ್ತಿರುವುದೋ ಹಾಗೆಯೇ ವಿವರಿಸುತ್ತಿರುವ ನನ್ನ ಮಾತನ್ನು ಕೇಳು.

ಭೀಮಸೇನನು ನಿಶಿತವಾದ ಬಾಣಗಳಿಂದ ನಿನ್ನ ವಿಶಾಲವಾದ ಸೈನ್ಯ ವನ್ನು ಭೇದಿಸಿಕೊಂಡು ದುರ್ಯೋಧನನ ಎಲ್ಲ ತಮ್ಮಂದಿರನ್ನೂ ಆಕ್ರಮಿ ಸಿದನು. ಭೀಷ್ಮನಿಂದ ರಕ್ಷಿಸಲ್ಪಡುತ್ತಿದ್ದ ವಿಶಾಲಸೇನೆಯೊಳಕ್ಕೆ ನುಗ್ಗಿ- ದುಃಶಾಸನ, ದುರ್ವಿಷಹ, ದುಃಸಹ, ದುರ್ಮದ, ಜಯ, ಜಯತ್ಸೇನ, ವಿಕರ್ಣ, ಚಿತ್ರಸೇನ, ಸುದರ್ಶನ, ಚಾರುಚಿತ್ರ, ಸುವರ್ಮಾ, ದುಷ್ಕರ್ಣ, ಕರ್ಣ (ದುರ್ಯೋಧನನ ತಮ್ಮ )–ಇವರೇ ಮೊದಲಾದ ಮಹಾರಥರಾದ ಪರಮಕ್ರುದ್ಧರಾದ ಧೃತರಾಷ್ಟ್ರನ ಮಕ್ಕಳನ್ನು ಮಹಾರಥನಾದ ಭೀಮಸೇನನು ನೋಡಿದನು. ಸೇನೆಯೊಳಗೆ ನುಗ್ಗಿಬಂದ ಭೀಮಸೇನನನ್ನು ನೋಡಿ ಆ ಎಲ್ಲ ರಾಜರೂ (ದುರ್ಯೋಧನನ ಅನುಜರು) ಹೀಗೆ ಮಾತನಾಡಿಕೊಂಡರು :

**ಜೀವಗ್ರಾಹಂ ನಿಗೃಹ್ಣೀಮೋ ವಯಮೇನಂ ನರಾಧಿಪಾಃ ॥೧೦॥**

'ನಾವುಗಳೆಲ್ಲರೂ ಸೇರಿ ಇವನನ್ನು ಜೀವಸಹಿತವಾಗಿಯೇ ಸೆರೆ ಹಿಡಿಯೋಣ.' ಹೀಗೆ ನಿಶ್ಚಯಿಸಿದ ದುರ್ಯೋಧನನ ಸಹೋದರರೆಲ್ಲರೂ ಪ್ರಜಾಸಂಹಾರಕಾಲದಲ್ಲಿ (ಪ್ರಳಯಕಾಲದಲ್ಲಿ) ಕ್ರೂರವಾದ ಮಹಾಗ್ರಹ ಗಳು ಸೂರ್ಯನನ್ನು ಸುತ್ತುವರಿಯುವಂತೆ–ಭೀಮನನ್ನು ಸುತ್ತುವರಿದರು. (ಆಗ ಭೀಮನು ಕ್ರೂರಗ್ರಹಗಳಿಂದ ಪರಿವೃತನಾದ ಸೂರ್ಯನಂತಿದ್ದನು.) ದೇವಾಸುರರ ಯುದ್ಧಕಾಲದಲ್ಲಿ ದಾನವಸೈನ್ಯವನ್ನು ಪ್ರವೇಶಿಸಿದ ದೇವೇಂದ್ರ ನನ್ನು ಯಾವ ರೀತಿಯಲ್ಲಿ ಭಯವು ಬಾಧೆಪಡಿಸಲಿಲ್ಲವೋ–ಅದೇ ರೀತಿ ಯಲ್ಲಿ ಶತ್ರುಸೈನ್ಯದೊಳಕ್ಕೆ ನುಗ್ಗಿ ನಿಂತಿದ್ದ ಭೀಮನನ್ನು ಭಯವೆಂಬುದು ಸ್ಪರ್ಶಿಸಲೂ ಇಲ್ಲ. (ಶತ್ರುಗಳ ಮಧ್ಯದಲ್ಲಿ ಭೀಮಸೇನನು ಸ್ವಲ್ಪವಾದರೂ ಭಯಪಡದೇ ಅಚಲನಾಗಿ ನಿಂತಿದ್ದನು.) ಅನಂತರ ಯುದ್ಧೋದ್ಯುಕ್ತ ರಾಗಿದ್ದ, ನೂರಾರು, ಸಾವಿರಾರು ರಥಿಕರು ನಾಲ್ಕು ದಿಕ್ಕುಗಳಿಂದಲೂ ತೀಕ್ಷ್ಣವಾದ ಬಾಣಗಳನ್ನು ಸುರಿಸುತ್ತಾ ಏಕಾಕಿಯಾಗಿದ್ದ ಭೀಮನನ್ನು ಆಕ್ರಮಿಸಿದರು. ಶೂರನಾದ ಭೀಮಸೇನನು ನಿನ್ನ ಮಕ್ಕಳನ್ನು ಲಕ್ಷ್ಯಕ್ಕೇ ತೆಗೆದುಕೊಳ್ಳದೆ ನಿನ್ನ ಪಕ್ಷದ ಶ್ರೇಷ್ಠಯೋಧರನ್ನೂ, ಹಸ್ತ್ಯಶ್ವ-ರಥ- ಪದಾತಿಸೈನ್ಯಗಳನ್ನೂ ಅಪಾರಸಂಖ್ಯೆಯಲ್ಲಿ ಸಂಹಾರಮಾಡಿದನು. ತನ್ನನ್ನು

ಸೆರೆಹಿಡಿಯಬೇಕೆಂದಿದ್ದ ರಾಜರ ಪ್ರಯತ್ನವನ್ನು ತಿಳಿದು ಮಹಾತ್ಮನಾದ ಭೀಮಸೇನನು ಎಲ್ಲರನ್ನೂ ಸಂಹರಿಸಬೇಕೆಂದು ಮನಸ್ಸುಮಾಡಿದನು. ಹೀಗೆ ನಿಶ್ಚಯಿಸಿ ರಥವನ್ನು ತ್ಯಜಿಸಿ, ಕೆಳಕ್ಕೆ ಧುಮುಕಿ ಗದೆಯನ್ನೆತ್ತಿಕೊಂಡು ಧೃತರಾಷ್ಟ್ರನ ಮಕ್ಕಳ ಮಹಾರ್ಣವರೂಪವಾದ ಆ ಸೈನ್ಯಸಮೂಹವನ್ನು ಮರ್ದನಮಾಡಲು ಉಪಕ್ರಮಿಸಿದನು.

ಮಹಾರಾಜ! ಭೀಮಸೇನನು ಕೌರವಸೈನ್ಯವನ್ನು ಪ್ರವೇಶಿಸಿದನಂತರ ಧೃಷ್ಟದ್ಯುಮ್ನನು ದ್ರೋಣರೊಡನೆ ಯುದ್ಧಮಾಡುವುದನ್ನು ಬಿಟ್ಟು ಶಕುನಿ ಯಿದ್ದೆಡೆಗೆ ಅವಸರದಿಂದ ಹೋದನು. ನರರ್ಷಭನಾದ ಧೃಷ್ಟದ್ಯುಮ್ನನು ನಿನ್ನ ಅಪಾರವಾದ ಸೇನೆಯನ್ನೂ ನಿವಾರಿಸಿಕೊಂಡು ಭೀಮಸೇನನ ಶೂನ್ಯ ರಥವಿದ್ದೆಡೆಗೆ ಆಗಮಿಸಿದನು. ರಥದಲ್ಲಿ ಭೀಮಸೇನನ ಸಾರಥಿಯಾದ ವಿಶೋಕನೊಬ್ಬನೇ ಇದ್ದುದನ್ನು ಕಂಡು ಧೃಷ್ಟದ್ಯುಮ್ನನು ದುಃಖಿತನೂ ಮತ್ತು ಬುದ್ಧಿಗೆಟ್ಟವನೂ ಆದನು. (ಭೀಮಸೇನನು ರಥದಲ್ಲಿ ಇಲ್ಲದೇ ಇದ್ದುದರಿಂದ ಅವನು ಮೃತನಾಗಿಬಿಟ್ಟಿರಬಹುದೆಂಬುದೇ ಧೃಷ್ಟದ್ಯುಮ್ನನ ದುಃಖಕ್ಕೆ ಕಾರಣವಾಗಿದ್ದಿತು.) ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ, ಕಂಬನಿಗರೆ ಯುತ್ತಾ, ಗದ್ಗದಸ್ವರದಿಂದ ಮಾತನಾಡುತ್ತಾ ಬಹುದುಃಖಿತನಾಗಿದ್ದ ಪಾರ್ಷತನು ಹೀಗೆಂದು ಹೇಳಿದನು.

"ಮಮ ಪ್ರಾಣೈಃ ಪ್ರಿಯತಮಃ ಭೀಮಃ ಕ್ವ?–ವಿಶೋಕ! ನನ್ನ ಪ್ರಾಣಗಳಿಗಿಂತಲೂ ಪ್ರಿಯತಮನಾದ ಭೀಮನೆಲ್ಲಿ?"

ವಿಶೋಕನು ಬದ್ಧಾಂಜಲಿಯಾಗಿ, ಧೃಷ್ಟದ್ಯುಮ್ನನೊಡನೆ ಹೇಳಿದನು :

"ಪರಾಕ್ರಮಿಯಾದ, ಬಲಿಷ್ಠನಾದ ಪಾಂಡುನಂದನನು ನನ್ನನ್ನು ಇಲ್ಲಿಯೇ ಇರುವಂತೆ ಹೇಳಿ ಗದಾಪಾಣಿಯಾಗಿ ಧೃತರಾಷ್ಟ್ರನ ಮಕ್ಕಳ ಈ ಸೇನಾಸಮುದ್ರವನ್ನು ಪ್ರವೇಶಿಸಿದನು.

ಪುರುಷವ್ಯಾಘ್ರನಾದ ಅವನು ಹೊರಡುವ ಸಮಯದಲ್ಲಿ ನನ್ನೊಡನೆ ಪ್ರೀತಿಯುಕ್ತವಾದ ಈ ಮಾತನ್ನೂ ಹೇಳಿದನು : 'ನೀನು ಮುಹೂರ್ತಕಾಲ ಈ ಕುದುರೆಗಳನ್ನು ತಡೆಹಿಡಿದುಕೊಂಡು ನನ್ನನ್ನು ಪ್ರತೀಕ್ಷಿಸುತ್ತಾ ಇಲ್ಲಿಯೇ ಇರು. ನನ್ನನ್ನು ವಧೆಮಾಡಲು ಉದ್ಯುಕ್ತನಾಗಿರುವ ಈ ಧಾರ್ತರಾಷ್ಟ್ರರನ್ನು ಈಗಲೇ ಸಂಹರಿಸಿ ಬಂದುಬಿಡುತ್ತೇನೆ. ಅಲ್ಲಿಯವರೆಗೂ ನೀನು ಇಲ್ಲಿಯೇ

ಇರಬೇಕು'–ಹೀಗೆಂದು ಹೇಳಿ ಗದಾಪಾಣಿಯಾಗಿ ಹೋಗುತ್ತಿದ್ದ ಮಹಾ ಬಲಿಷ್ಠನಾದ ಭೀಮಸೇನನನ್ನು ನೋಡಿ ಶತ್ರುಪಕ್ಷದ ಸೈನಿಕರೆಲ್ಲರಿಗೂ ರೋಮಾಂಚನವಾಯಿತು. ಭಯಂಕರವಾದ ಮತ್ತು ಬಹುಘೋರವಾದ ಯುದ್ಧವು ನಡೆಯುತ್ತಿರಲಾಗಿ ವೃಕೋದರನು ಮಹಾವ್ಯೂಹವನ್ನು ಭೇದಿಸಿ ಕೊಂಡು ನುಗ್ಗಿಯೇಬಿಟ್ಟನು."

ವಿಶೋಕನ ಆ ಮಾತನ್ನು ಕೇಳಿ ಧೃಷ್ಟದ್ಯುಮ್ನನು ಪ್ರತ್ಯುತ್ತರಿಸಿದನು :

**ನ ಹಿ ಮೇ ಜೀವಿತೇನಾಪಿ ವಿದ್ಯತೇಽದ್ಯ ಪ್ರಯೋಜನಮ್ ।**
**ಭೀಮಸೇನಂ ರಣೇ ಹಿತ್ವಾ ಸ್ನೇಹಮುತ್ಸೃಜ್ಯ ಪಾಣ್ಡವೈಃ ॥೨೬॥**

"ಯುದ್ಧದಲ್ಲಿ ಭೀಮಸೇನನನ್ನು ಬಿಟ್ಟು ಆ ಕಾರಣಕ್ಕಾಗಿಯೇ ಪಾಂಡವ ರೊಡನೆ ಸ್ನೇಹವನ್ನೂ ಕಳೆದುಕೊಂಡು ನಾನು ಜೀವಿಸಿರುವುದರಲ್ಲಿ ಯಾವ ಪ್ರಯೋಜನವೂ ಇಲ್ಲ. ನಾನು ಯುದ್ಧಭೂಮಿಯಲ್ಲಿ ಉಪಸ್ಥಿತನಾಗಿದ್ದೂ ಭೀಮಸೇನನೊಬ್ಬನೇ ಮಹಾವ್ಯೂಹವನ್ನು ಭೇದಿಸಿ ಹಾದಿಯನ್ನು ಮಾಡಿ ಕೊಂಡು ವ್ಯೂಹದೊಳಕ್ಕೆ ನುಗ್ಗಿಹೋಗಿರುವ ಈ ಸನ್ನಿವೇಶದಲ್ಲಿ ಭೀಮಸೇನ ನಿಲ್ಲದೇ ನಾನೇನಾದರೂ ಹೋದೆನೆಂದರೆ ನನ್ನನ್ನು ಕ್ಷತ್ರಿಯನೆಂದು ಯಾರಾ ದರೂ ಹೇಳಿಯಾರೇ? (ಕ್ಷತ್ರಿಯರು ನನ್ನ ವಿಷಯದಲ್ಲಿ ಏನು ಹೇಳಿಯಾರು?)

**ಅಸ್ವಸ್ತಿ ತಸ್ಯ ಕುರ್ವನ್ತಿ ದೇವಾಃ ಶಕ್ರಪುರೋಗಮಾಃ ।**
**ಯಃ ಸಹಾಯಾನ್ಪರಿತ್ಯಜ್ಯ ಸ್ವಸ್ತಿಮಾನಾವ್ರಜೇದ್ಗೃಹಮ್ ॥೨೯॥**

ಯಾವನು ತನ್ನ ಸಹಾಯಕರವನ್ನು ಬಿಟ್ಟು ತಾನು ಸುಕುಶಲಿಯಾಗಿ ಮನೆಗೆ ಹೋಗುತ್ತಾನೆಯೋ ಅವನಿಗೆ ಇಂದ್ರಾದಿದೇವತೆಗಳು ಅನಿಷ್ಟವನ್ನುಂಟು ಮಾಡುತ್ತಾರೆ. ಮಹಾಬಲನಾದ ಭೀಮನು ನನಗೆ ಸ್ನೇಹಿತನೂ ಆಗಿದ್ದಾನೆ ; ಸಂಬಂಧಿಯೂ ಆಗಿದ್ದಾನೆ. ಅವನು ನಮ್ಮೆಲ್ಲರ ಭಕ್ತನಾಗಿದ್ದಾನೆ. ಶತ್ರುನಿಷೂದನನಾದ ಅವನಿಗೆ ನಾನೂ ಸಹ ಭಕ್ತನಾಗಿದ್ದೇನೆ. ಆದುದರಿಂದ ಎಲ್ಲಿ ಭೀಮಸೇನನಿರುವನೋ ಅಲ್ಲಿಗೆ ನಾನೂ ಹೋಗುತ್ತೇನೆ. ವಾಸವನು ದಾನವರನ್ನು ಧ್ವಂಸಗೊಳಿಸಿದಂತೆ–ನಾನು ಶತ್ರುಗಳನ್ನು ಸಂಹಾರಮಾಡುವು ದನ್ನಾದರೂ ನೋಡು, ವಿಶೋಕ!"

ಹೀಗೆಂಬುದಾಗಿ ಹೇಳಿ ವೀರನಾದ ಧೃಷ್ಟದ್ಯುಮ್ನನು, ಭೀಮಸೇನನು ಗದೆಯಿಂದ ಆನೆಗಳನ್ನು ಸಂಹರಿಸಿ ಒಳಗೆ ಹೋಗಲು ನಿರ್ಮಿಸಿದ್ದ ಮಾರ್ಗದಲ್ಲಿ ಕೌರವಸೇನಾವ್ಯೂಹದ ಮಧ್ಯಭಾಗವನ್ನು ಪ್ರವೇಶಿಸಿದನು. ಅಲ್ಲಿ ಬಿರುಗಾಳಿಯು ವೃಕ್ಷಗಳನ್ನು ಭಗ್ನಗೊಳಿಸುವಂತೆ–ಶತ್ರುಗಳನ್ನು ಭಗ್ನಗೊಳಿಸುತ್ತಿದ್ದ ಮತ್ತು ಶತ್ರುಗಳ ಸೈನ್ಯವನ್ನು ಯಜ್ಞೇಶ್ವರನಂತೆಯೇ ದಹಿಸುತ್ತಿದ್ದ ಭೀಮನನ್ನು ಧೃಷ್ಟದ್ಯುಮ್ನನು ಕಂಡನು.

ಸಮರಾಂಗಣದಲ್ಲಿ ಭೀಮನಿಂದ ವಧಿಸಲ್ಪಡುತ್ತಿದ್ದ ರಥಿಕರು, ಕುದುರೆ ಸವಾರರು, ಪದಾತಿಗಳು ಮತ್ತು ಗಜಸೈನಿಕರು ಪ್ರಾಣಬಿಡುವ ಸಮಯದಲ್ಲಿ ಗಟ್ಟಿಯಾಗಿ ಆರ್ತಧ್ವನಿಮಾಡುತ್ತಿದ್ದರು. ಚಿತ್ರಯೋಧಿಯಾದ, ಯುದ್ಧಕುಶಲನಾದ ಭೀಮಸೇನನಿಂದ ವಧಿಸಲ್ಪಡುತ್ತಿದ್ದ ನಿನ್ನ ಸೈನ್ಯದಲ್ಲಿ ದೊಡ್ಡ ಹಾಹಾಕಾರವೆದ್ದಿತು. ಅದನ್ನು ಕಂಡು ಅಸ್ತ್ರವಿದ್ಯೆಯಲ್ಲಿ ನಿಷ್ಣಾತರಾಗಿದ್ದ ಹಲವಾರು ಯೋಧರು ಸ್ವಲ್ಪವಾದರೂ ಭಯಗೊಳ್ಳದೆ ಬಾಣಗಳ ವೃಷ್ಟಿಯಿಂದ ಭೀಮನನ್ನು ಆಕ್ರಮಿಸಿದರು. ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ಕೌರವವ್ಯೂಹದ ಸುತ್ತಲೂ ತಿರುಗುತ್ತಿದ್ದ, ಸುಸಂಘಟಿತವಾಗಿದ್ದ ಮತ್ತು ಘೋರವಾಗಿದ್ದ ಸೈನ್ಯದಿಂದ ಆಕ್ರಾಂತನಾಗಿದ್ದ, ಬಾಣಗಳಿಂದ ಕ್ಷತ-ವಿಕ್ಷತವಾಗಿದ್ದ ಶರೀರವನ್ನು ಹೊಂದಿದ್ದ, ಪದಾತಿಯಾಗಿದ್ದ, ಕ್ರೋಧವೆಂಬ ವಿಷವನ್ನೇ ಕಾರುತ್ತಿದ್ದ, ಪ್ರಲಯಕಾಲದ ಯಮನೋಪಾದಿಯಲ್ಲಿದ್ದ, ಗದಾಪಾಣಿಯಾಗಿದ್ದ ಭೀಮಸೇನನನ್ನು ಲೋಕವೀರನಾದ ಧೃಷ್ಟದ್ಯುಮ್ನನು ನೋಡಿ, ಅವನನ್ನು ಆಶ್ವಸಿಸುವ ಸಲುವಾಗಿ ಅವನ ಸಮೀಪಕ್ಕೆ ಹೋದನು. ಮಹಾತ್ಮನಾದ ಧೃಷ್ಟದ್ಯುಮ್ನನು ಮರುಕ್ಷಣದಲ್ಲಿಯೇ ಭೀಮಸೇನನನ್ನು ತನ್ನ ರಥಕ್ಕೆ ಹತ್ತಿಸಿಕೊಂಡು ಅವನ ಅಂಗಾಂಗಗಳಲ್ಲಿ ಚುಚ್ಚಿಕೊಂಡಿದ್ದ ಬಾಣಗಳೆಲ್ಲವನ್ನೂ ತೆಗೆದು ಗಾಢವಾಗಿ ಆಲಿಂಗಿಸಿಕೊಂಡು ಶತ್ರುಗಳ ಮಧ್ಯದಲ್ಲಿಯೇ ಭೀಮಸೇನನನ್ನು ಸಂತೈಸಿದನು.

ಮಹಾರಾಜ! ಮಹತ್ತರವಾದ ಪರಸ್ಪರಮರ್ದನಕ್ರಿಯೆಯು ನಡೆಯುತ್ತಿರಲಾಗಿ, ನಿನ್ನ ಹಿರಿಯ ಮಗನಾದ ದುರ್ಯೋಧನನು ತನ್ನ ತಮ್ಮಂದಿರ ಬಳಿಗೆ ಬಂದು ಹೇಳಿದನು : "ದುರಾತ್ಮನಾದ ಈ ದ್ರುಪದನ ಮಗನು ಭೀಮ

ಸೇನನೊಡನೆ ಬಂದು ಸೇರಿಕೊಂಡಿದ್ದಾನೆ. ಇವನನ್ನು ನಾವು ನಮ್ಮ ಅಪಾರ ಸೈನ್ಯದೊಡನೆ ಆಕ್ರಮಿಸೋಣ. ನಮ್ಮ ಶತ್ರುವು ಸೈನ್ಯಕ್ಕೆ ಹಾನಿಯನ್ನುಂಟು ಮಾಡದಂತೆ ನೋಡಿಕೊಳ್ಳಬೇಕಾಗಿದೆ."

ದುರ್ಯೋಧನನು ಹೇಳಿದ ಮಾತುಗಳನ್ನು ಕೇಳಿ, ಧೃಷ್ಟದ್ಯುಮ್ನನು ಭೀಮನೊಡನೆ ಯುದ್ಧಕ್ಕೆ ಬಂದುದನ್ನು ಸಹಿಸದ ನಿನ್ನ ಮಕ್ಕಳು, ದುರ್ಯೋಧನನ ಆಜ್ಞೆಯಿಂದ ಪ್ರೇರಿತರಾಗಿ–ಪ್ರಲಯಕಾಲದಲ್ಲಿ ಹುಟ್ಟಿಕೊಳ್ಳುವ ಭಯಂಕರವಾದ ಧೂಮಕೇತುಗಳಂತೆ–ಆಯುಧಗಳನ್ನೆತ್ತಿಕೊಂಡು ಧೃಷ್ಟದ್ಯುಮ್ನನನ್ನು ವಧೆಮಾಡುವುದಕ್ಕೋಸ್ಕರ ಅವನ ಮೇಲೆ ಬಿದ್ದರು. ಅಸ್ತ್ರಗಳನ್ನೂ ಮತ್ತು ಧನುಸ್ಸುಗಳನ್ನೂ ಹಿಡಿದುಕೊಂಡು ಆ ಧಾರ್ತರಾಷ್ಟ್ರ ವೀರರು ರಥಚಕ್ರನೇಮಿಗಳ ಗಡ-ಗಡಾಶಬ್ದದಿಂದ ಭೂಮಿಯನ್ನು ನಡುಗಿಸುತ್ತಾ–ಮೇಘಗಳು ಪರ್ವತವನ್ನು ಮಳೆಗರೆಯುವಿಕೆಯಿಂದ ಮುಚ್ಚಿಬಿಡುವಂತೆ–ದ್ರುಪದನ ಮಗನನ್ನು ಬಾಣಗಳಿಂದ ಮುಚ್ಚಿಬಿಟ್ಟರು. ಆದರೆ ಚಿತ್ರಯೋಧಿಯಾದ ಧೃಷ್ಟದ್ಯುಮ್ನನು ತನ್ನ ಬಾಣಗಳಿಂದ ತನ್ನೆದುರಾಗಿ ಬಂದ ಬಾಣಗಳೆಲ್ಲವನ್ನೂ ಕತ್ತರಿಸಿಬಿಟ್ಟನು ಮತ್ತು ಅವರ ಶಸ್ತ್ರಗಳ ಪ್ರಹಾರದಿಂದ ತಾನು ಸ್ವಲ್ಪವಾದರೂ ವ್ಯಥಿತನಾಗಲಿಲ್ಲ.

ಮೇಲೆ ಬೀಳುತ್ತಿರುವ ಕೊಬ್ಬಿದ ನಿನ್ನ ಮಕ್ಕಳನ್ನೂ ಮತ್ತು ಸುತ್ತಲೂ ನಿಂತಿರುವ ವೀರರನ್ನೂ ನೋಡಿ ಅವರನ್ನು ವಧೆಮಾಡುವ ಇಚ್ಛೆಯಿಂದ ಯುವಕನಾದ, ಮಹಾರಥನಾದ ಧೃಷ್ಟದ್ಯುಮ್ನನು ಉಗ್ರವಾದ ಪ್ರಮೋಹನಾಸ್ತ್ರವನ್ನು ಅವರ ಮೇಲೆ ಪ್ರಯೋಗಿಸಿದನು. ಯುದ್ಧಕಾಲದಲ್ಲಿ ದೈತ್ಯರ ಮೇಲೆ ಮಹೇಂದ್ರನು ಕೋಪಗೊಳ್ಳುವಂತೆ–ನಿನ್ನ ಮಕ್ಕಳ ವಿಷಯದಲ್ಲಿ ಧೃಷ್ಟದ್ಯುಮ್ನನು ಬಹುವಾಗಿ ಕೋಪಗೊಂಡನು. ಪಾರ್ಷತನು ಪ್ರಯೋಗಿಸಿದ ಪ್ರಮೋಹನಾಸ್ತ್ರದಿಂದ ಬುದ್ಧಿಯನ್ನೂ ಸತ್ತ್ವವನ್ನೂ ಕಳೆದುಕೊಂಡ ನೃವೀರರಾದ ನಿನ್ನ ಮಕ್ಕಳು ಪ್ರಜ್ಞಾಹೀನರಾದರು. ಕಳೆದುಹೋದ ಆಯುಷ್ಯವುಳ್ಳವರಂತೆ ಮೋಹಗೊಂಡು ಪ್ರಜ್ಞಾಹೀನರಾಗಿ ಬಿದ್ದಿದ್ದ ನಿನ್ನ ಮಕ್ಕಳನ್ನು ನೋಡಿದೊಡನೆಯೇ ಎಲ್ಲ ಕುರುಗಳೂ ಗಜಾಶ್ವ-ರಥ-ಪದಾತಿಗಳೊಡನೆ ಎಲ್ಲ ಕಡೆಗಳಿಂದಲೂ ಪಲಾಯನಮಾಡಿದರು.

ಅದೇ ಸಮಯದಲ್ಲಿ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು ದ್ರುಪದನ ಬಳಿಗೆ ಬಂದು ಅವನನ್ನು ದಾರುಣವಾದ ಮೂರು ಬಾಣಗಳಿಂದ ಪ್ರಹರಿಸಿದರು. ದ್ರೋಣರ ಪ್ರಹಾರದಿಂದ ಬಹುವಾಗಿ ಗಾಯಗೊಂಡ ದ್ರುಪದನು ಹಿಂದಿನ ವೈರವನ್ನು ಸ್ಮರಿಸುತ್ತಾ ದ್ರೋಣರೊಡನೆ ಯುದ್ಧಮಾಡ ಲಿಚ್ಛಿಸದೆ ಬಹಳ ದೂರಕ್ಕೆ ಹೊರಟುಹೋದನು. ದ್ರುಪದನನ್ನು ಈ ರೀತಿ ಯಲ್ಲಿ ಜಯಿಸಿದ ದ್ರೋಣರು ಗಟ್ಟಿಯಾಗಿ ಶಂಖವನ್ನೂದಿದರು. ದ್ರೋಣರು ಮಾಡಿದ ಶಂಖಧ್ವನಿಯನ್ನು ಕೇಳಿ ಎಲ್ಲ ಸೋಮಕಕ್ಷತ್ರಿಯರೂ ಭಯ ಗೊಂಡರು. ಅನಂತರ ತೇಜಸ್ವಿಗಳಾದ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು ಧೃಷ್ಟದ್ಯುಮ್ನನು ಪ್ರಯೋಗಿಸಿದ ಸಮ್ಮೋಹನಾಸ್ತ್ರದಿಂದ ನಿನ್ನ ಮಕ್ಕಳು ಗತಪ್ರಜ್ಞರಾಗಿ ರಣರಂಗದಲ್ಲಿ ಬಿದ್ದಿರುವರೆಂಬ ವಾರ್ತೆಯನ್ನು



ಕೇಳಿದರು. ಒಡನೆಯೇ ದ್ರೋಣರು ಬಹಳ ಅವಸರದಿಂದ ಧೃತರಾಷ್ಟ್ರನ ಮಕ್ಕಳು ಪ್ರಜ್ಞಾಹೀನರಾಗಿ ಬಿದ್ದಿದ್ದ ಸ್ಥಳಕ್ಕೆ ಧಾವಿಸಿದರು. ಅಲ್ಲವರು ರಣಾಂಗಣದಲ್ಲಿ ಉದಾಯುಧರಾಗಿ ಸಂಚರಿಸುತ್ತಿದ್ದ ಭೀಮ–ಧೃಷ್ಟದ್ಯುಮ್ನ ರನ್ನೂ, ಮೋಹಾವಿಷ್ಟರಾಗಿ ಬಿದ್ದಿದ್ದ ನಿನ್ನ ಮಕ್ಕಳನ್ನೂ ನೋಡಿದರು. ಅನಂತರ ದ್ರೋಣರು ಪ್ರಜ್ಞಾಸ್ತ್ರವನ್ನು ತೆಗೆದುಕೊಂಡು ಪ್ರಯೋಗಿಸಿ ಮೋಹ ನಾಸ್ತ್ರವನ್ನು ವಿನಾಶಗೊಳಿಸಿದರು. ಅದರಿಂದ ಗತಪ್ರಾಣರಂತೆ ರಣಾಂಗಣ

ದಲ್ಲಿ ಬಿದ್ದಿದ್ದ ಮಹಾರಥರಾದ ನಿನ್ನ ಮಕ್ಕಳು ಪ್ರತ್ಯಾಗತಪ್ರಾಣರಾದರು. (ಚೇತನಾಶಕ್ತಿಯನ್ನು ಪುನಃ ಪಡೆದುಕೊಂಡರು.)

ಧಾರ್ತರಾಷ್ಟ್ರರು ಎಚ್ಚರಗೊಳ್ಳುತ್ತಲೇ ಭೀಮ-ಧೃಷ್ಟದ್ಯುಮ್ನರ ಸಂಗಡ ಯುದ್ಧಕ್ಕೆ ಹೊರಟರು. ಅದನ್ನು ತಿಳಿದ ಯುಧಿಷ್ಠಿರನು ತನ್ನ ಸೈನಿಕರನ್ನು ಕರೆದು ಹೇಳಿದನು : "ನೀವು ಯುದ್ಧದಲ್ಲಿ ನಿಮ್ಮ ಸರ್ವಶಕ್ತಿಯನ್ನೂ ಕೇಂದ್ರೀ ಕರಿಸಿಕೊಂಡು ಭೀಮ-ಪಾರ್ಷತರನ್ನು ಅನುಸರಿಸಿ ನಡೆಯಿರಿ. ಮಹಾರಥ ರಾದ ಅಭಿಮನ್ಯುಪ್ರಮುಖರಾದ ಹನ್ನೆರಡು ಮಂದಿ ವೀರರು ಕವಚಗಳನ್ನು ಧರಿಸಿ ಸುಸಜ್ಜಿತರಾಗಿ ಭೀಮ-ಪಾರ್ಷತರನ್ನು ಸಮೀಪಿಸಿ ಅವರ ಸ್ಥಿತಿ-ಗತಿ ಗಳನ್ನು (ಸುದ್ದಿಯನ್ನು) ತಿಳಿದುಕೊಳ್ಳುತ್ತಿರಲಿ. ಹೀಗೆ ಮಾಡದಿದ್ದರೆ ನನ್ನ ಮನಸ್ಸು ನಿಶ್ಚಿಂತವಾಗಿರಲಾರದು."

ಯುಧಿಷ್ಠಿರನಿಂದ ಹೀಗೆ ಆಜ್ಞಪ್ತರಾದ ವಿಕ್ರಾಂತಯೋಧರಾದ, ಶೂರ ರಾದ, ಪುರುಷಮಾನಿಗಳಾದ ಆ ಎಲ್ಲ ಯೋಧರೂ–'ಬಾಢಂ' 'ಹಾಗೆಯೇ ಆಗಲಿ'–ಎಂದು ಹೇಳಿ, ಸೂರ್ಯನು ಆಕಾಶದ ಮಧ್ಯಭಾಗಕ್ಕೆ ಬರಲಾಗಿ (ಮಧ್ಯಾಹ್ನವಾಗಲಾಗಿ), ಎಲ್ಲರೂ ಭೀಮ-ಪಾರ್ಷತರು ಯುದ್ಧಮಾಡುತ್ತಿದ್ದ ಸ್ಥಳಕ್ಕೆ ತೆರಳಿದರು. ಐವರು ಕೇಕಯರಾಜಕುಮಾರರು, ಐವರು ದ್ರೌಪದಿಯ ಮಕ್ಕಳು ಮತ್ತು ಪರಾಕ್ರಮಿಯಾದ ಧೃಷ್ಟಕೇತು–ಈ ಹನ್ನೊಂದು ಮಂದಿ ಯೋಧರು ಅಭಿಮನ್ಯುವನ್ನು ಮುಂದೆ ಮಾಡಿಕೊಂಡು, ದೊಡ್ಡ ಸೈನ್ಯದಿಂದ ಕೂಡಿದವರಾಗಿ ಸೂಚೀಮುಖವೆಂಬ ಸಮರವ್ಯೂಹವನ್ನು ರಚಿಸಿಕೊಂಡು, ಧಾರ್ತರಾಷ್ಟ್ರರ ರಥಸೈನ್ಯವನ್ನು ಮರ್ದನಮಾಡಲು ಉಪಕ್ರಮಿಸಿದರು. ಭೀಮಸೇನನ ಭಯದಿಂದ ಆವಿಷ್ಟವಾಗಿದ್ದ ಮತ್ತು ಧೃಷ್ಟದ್ಯುಮ್ನನ ಬಾಣ ಗಳಿಂದ ವಿಮೋಹಿತವಾಗಿದ್ದ ನಿನ್ನ ಸೇನೆಯು ಮಹಾಧನುಷ್ಮಂತರಾದ ಅಭಿಮನ್ಯುಮುಖ್ಯರಾದ ಯೋಧರನ್ನು ತಡೆಯಲು ಸಾಧ್ಯವಾಗದೇ ಮತ್ತಿ ನಿಂದಲೂ, ಮೂರ್ಛೆಯಿಂದಲೂ ವಿಸ್ಮೃತಿಯನ್ನು ಹೊಂದಿ–ದಾರಿಗಾಣದೇ ಬೀದಿಯ ಮಧ್ಯದಲ್ಲಿ ಬಿದ್ದಿರುವ ಸ್ತ್ರೀಯಂತೆ–ಕ್ರಿಯಾರಹಿತವಾಗಿ ನಿಂತಿದ್ದಿತು.

ಸುವರ್ಣನಿರ್ಮಿತವಾದ ಧ್ವಜಗಳಿಂದ ಸುಶೋಭಿತರಾಗಿದ್ದ, ಮಹಾ ಧನುಷ್ಮಂತರಾಗಿದ್ದ, ಕುಲೀನರಾಗಿದ್ದ ಅಭಿಮನ್ಯುವೇ ಮೊದಲಾದ ಯೋಧರು

ಧೃಷ್ಟದ್ಯುಮ್ನ-ವೃಕೋದರರನ್ನು ರಕ್ಷಿಸುವ ಸಲುವಾಗಿ ಮುಂದೆ-ಮುಂದೆ ಧಾವಿಸಿದರು. ಬೆಂಗಾವಲಾಗಿ ಬಂದ ಅಭಿಮನ್ಯುಪುರೋಗಮರಾದ ಯೋಧರನ್ನು ನೋಡಿ ಶತ್ರುಗಳನ್ನು ಕೊಲ್ಲುತ್ತಿದ್ದ ಭೀಮ-ಪಾರ್ಷತರು ಹರ್ಷೋತ್ಸಾಹಗೊಂಡರು. ಪ್ರಜ್ಞಾನಾಸ್ತ್ರದಿಂದ ನಿನ್ನ ಮಕ್ಕಳನ್ನು ಎಚ್ಚರಿಸಿದನಂತರ ದ್ರೋಣರು ಧೃಷ್ಟದ್ಯುಮ್ನ-ಭೀಮರನ್ನು ಆಕ್ರಮಿಸಲು ಅವರ ಕಡೆಗೆ ಧಾವಿಸಿದರು. ಬಹಳ ಅವಸರದಿಂದ ತನ್ನಕಡೆಗೆ ಬರುತ್ತಿದ್ದ ಗುರುಗಳಾದ ದ್ರೋಣರನ್ನು ನೋಡಿ ಪಾಂಚಾಲ್ಯನು ನಿನ್ನ ಮಕ್ಕಳನ್ನು ವಧೆಮಾಡುವ ಮನಸ್ಸು ಮಾಡಲಿಲ್ಲ. (ನಿನ್ನ ಮಕ್ಕಳೊಡನೆ ಯುದ್ಧವನ್ನು ನಿಲ್ಲಿಸಿ ರಥವನ್ನು ದ್ರೋಣ ರಿಗೆ ಅಭಿಮುಖವಾಗಿ ನಿಲ್ಲಿಸಿದನು.) ಸುಸಂಕ್ರುದ್ಧನಾದ ಪಾರ್ಷತನು ವೃಕೋದರನನ್ನು ಕೇಕಯರಾಜಕುಮಾರನ ರಥದ ಮೇಲೆ ಕುಳ್ಳಿರಿಸಿ, ಇಷ್ವಸ್ತ್ರಪಾರಂಗತರಾದ ದ್ರೋಣರ ಮೇಲೆ ದಾಳಿಮಾಡಿದನು. ಶತ್ರುನಾಶಕರಾದ, ಪ್ರತಾಪವಂತರಾದ ಭಾರದ್ವಾಜರು ಪರಮಕ್ರುದ್ಧರಾಗಿ ತಮ್ಮ ಮೇಲೆ ಬೀಳುತ್ತಿದ್ದ ಪಾರ್ಷತನ ಧನುಸ್ಸನ್ನು ಒಂದೇ ಒಂದು ಬಾಣದಿಂದ ಕತ್ತರಿಸಿಬಿಟ್ಟರು. ಅನ್ನವಿಟ್ಟ ಸ್ವಾಮಿಯನ್ನು ಸ್ಮರಿಸುತ್ತಾ ದುರ್ಯೋಧನನ ಹಿತಾರ್ಥವಾಗಿ ಇನ್ನೂ ಅನೇಕ ಬಾಣಗಳನ್ನು ನೂರಾರು ಸಂಖ್ಯೆಯಲ್ಲಿ ದ್ರೋಣರು ಧೃಷ್ಟದ್ಯುಮ್ನನ ಮೇಲೆ ಪ್ರಯೋಗಿಸಿದರು. ಶತ್ರುವೀರಸಂಹಾರಕನಾದ ಪಾರ್ಷತನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಚಿನ್ನದ ರೆಕ್ಕೆಗಳನ್ನು ಹೊಂದಿದ್ದ ಉಜ್ಜುಕಲ್ಲಿನಿಂದ ಚೂಪಾಗಿ ಮಾಡಲ್ಪಟ್ಟಿದ್ದ ಇಪ್ಪತ್ತು ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ಶತ್ರುಕರ್ಶಕರಾದ ದ್ರೋಣರು ಧೃಷ್ಟದ್ಯುಮ್ನನ ಆ ಧನುಸ್ಸನ್ನೂ ಕತ್ತರಿಸಿದರು. ನಾಲ್ಕು ಬಾಣಗಳಿಂದ ಪಾರ್ಷತನ ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನೂ ಸಂಹರಿಸಿದರು. ಅನಂತರ ಧೃಷ್ಟದ್ಯುಮ್ನನ ಸಾರಥಿಯನ್ನೂ ಭಲ್ಲವೆಂಬ ಬಾಣದಿಂದ ಮೃತ್ಯುವಶನನ್ನಾಗಿ ಮಾಡಿದರು. ಮಹಾರಥನಾದ ಧೃಷ್ಟದ್ಯುಮ್ನನು ಒಡನೆಯೇ ಕುದುರೆಗಳಿಂದ ವಿಹೀನವಾದ ತನ್ನ ರಥದಿಂದ ಕೆಳಕ್ಕೆ ಧುಮುಕಿ ಹತ್ತಿರದಲ್ಲಿಯೇ ಇದ್ದ ಅಭಿಮನ್ಯುವಿನ ಮಹಾರಥಕ್ಕೆ ಹತ್ತಿದನು.

ಅನಂತರ ಭೀಮಸೇನ-ಪಾರ್ಷತರು ನೋಡುತ್ತಿದ್ದಂತೆಯೇ ರಥ-ಗಜಾಶ್ವ-ಪದಾತಿಗಳಿಂದ ಕೂಡಿದ್ದ ಪಾಂಡವರ ವಾಹಿನಿಯು ಭಯದಿಂದ ನಡುಗತೊಡಗಿತು. ಅಮಿತತೇಜಸ್ವಿಗಳಾದ ದ್ರೋಣರು ಪಾಂಡವರ ಸೈನ್ಯ

ವನ್ನು ಬಗ್ಗುಬಡಿಯುತ್ತಿದ್ದರು. ಅಲ್ಲಿದ್ದ ಪಾಂಡವಮಹಾರಥರು ಎಷ್ಟೇ ಪ್ರಯತ್ನಿಸಿದರೂ ಸೇನಾವಿಧ್ವಂಸನಕ್ರಿಯೆಯಿಂದ ದ್ರೋಣರನ್ನು ತಡೆಯಲು ಸಮರ್ಥರಾಗಲಿಲ್ಲ. ದ್ರೋಣರಿಂದ ಬಿಡಲ್ಪಟ್ಟ ನಿಶಿತವಾದ ಬಾಣಗಳಿಂದ ಸಂಹರಿಸಲ್ಪಡುತ್ತಿದ್ದ ಆ ಮಹಾಸೇನೆಯು ಅಲ್ಲೋಲ-ಕಲ್ಲೋಲವಾದ ಮಹಾಸಾಗರದಂತೆ ಅಲ್ಲಲ್ಲಿಯೇ ಸುತ್ತುತ್ತಿದ್ದಿತು. (ಅಲ್ಲಲ್ಲಿಯೇ ಸುತ್ತುತ್ತಿದ್ದು ದ್ರೋಣರ ಬಾಣಗಳಿಗೆ ಲಕ್ಷ್ಯವಾಗುತ್ತಿದ್ದಿತು.) ಈ ರೀತಿಯಲ್ಲಿ ಪ್ರಭಗ್ನವಾಗು ತ್ತಿದ್ದ ಪಾಂಡವಸೈನ್ಯವನ್ನು ನೋಡಿ ನಿನ್ನ ಸೈನಿಕರು ಅಮಿತಾನಂದವನ್ನು ಪಡೆದರು. ಕ್ರುದ್ಧರಾದ ದ್ರೋಣಾಚಾರ್ಯರು ಅವ್ಯಾಹತವಾಗಿ ಶತ್ರುಸೈನ್ಯ ವನ್ನು ಸಂಹರಿಸುತ್ತಿರುವುದನ್ನು ನೋಡಿ ಎಲ್ಲ ಕಡೆಗಳಿಂದಲೂ ನಿನ್ನ ಕಡೆಯ ಯೋಧರು 'ಸಾಧು ದ್ರೋಣ! ಸಾಧು'–ಎಂಬುದಾಗಿ ಕೂಗಿಕೊಂಡರು."

೭೭ನೆಯ ಅಧ್ಯಾಯವು ಮುಗಿಯಿತು.

೭೮ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಉಭಯಪಕ್ಷಗಳ ಸೈನ್ಯಗಳ ಸಂಕುಲಯುದ್ಧ

ಸಂಜಯನು ಯುದ್ಧದ ವಿವರಣೆಯನ್ನು ಮುಂದುವರಿಸಿ ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಮೋಹನಾಸ್ತ್ರದಿಂದ ಭ್ರಾಂತನಾಗಿದ್ದ ದುರ್ಯೋಧನನು ದ್ರೋಣರು ಗಳಿಸಿದ ವಿಜಯದಿಂದಾಗಿ ವಿಮೋಹಿತನಾಗಿ ಪುನಃ ಯುದ್ಧಕ್ಕೆ ಹಿಂದಿರುಗಿ ಅಚ್ಯುತನಾದ (ಯುದ್ಧದಿಂದ ಯಾವುದೇ ಕಾರಣದಿಂದಲೂ ಚ್ಯುತನಾಗದ) ಭೀಮನನ್ನು ಬಾಣಗಳ ಮಳೆಗರೆಯುವಿಕೆಯಿಂದ ಮುಚ್ಚಿ ಬಿಟ್ಟನು. ಮಹಾರಥರಾದ ನಿನ್ನ ಇತರ ಪುತ್ರರೂ ಒಟ್ಟಾಗಿ ಸೇರಿ ಪ್ರಯತ್ನ ಪೂರ್ವಕವಾಗಿ ಭೀಮನೊಡನೆ ಯುದ್ಧಮಾಡಲು ತೊಡಗಿದರು. ಮಹಾ ಬಾಹುವಾದ ಭೀಮಸೇನನೂ ಸಹ ತನ್ನ ರಥದ ಬಳಿಗೆ ಹೋಗಿ ಅದರಲ್ಲಿ ಕುಳಿತು ದುರ್ಯೋಧನನ ಸಮೀಪಕ್ಕೆ ತೆರಳಿದನು. ಬಳಿಕ ಮೃತ್ಯುಪ್ರಾಪಕ ವಾದ, ದೃಢವಾದ, ಮಹಾವೇಗಯುಕ್ತವಾದ ಧನುಸ್ಸನ್ನು ತೆಗೆದುಕೊಂಡು, ಶಿಂಜಿನಿಯನ್ನು ಜೋಡಿಸಿ ಸಜ್ಜುಗೊಳಿಸಿ, ನಿನ್ನ ಮಗನನ್ನು ಅನೇಕಾನೇಕ

ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ದುರ್ಯೋಧನರಾಜನೂ ಸುತೀಕ್ಷ್ಣವಾದ ನಾರಾಚದಿಂದ ಮಹಾಬಲನಾದ ಭೀಮಸೇನನ ಮರ್ಮ ಸ್ಥಳವನ್ನು ಪ್ರಹರಿಸಿದನು. ನಿನ್ನ ಮಗನ ಬಾಣಪ್ರಹಾರದಿಂದ ಬಹಳವಾಗಿ ಗಾಯಗೊಂಡ ಮಹಾಧನುಷ್ಮಂತನಾದ ಭೀಮಸೇನನು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಶೀಘ್ರವಾಗಿ ಧನುಸ್ಸಿನಲ್ಲಿ ಮೂರು ಬಾಣಗಳನ್ನು ಅನುಸಂಧಾನಮಾಡಿ ಸೆಳೆದು ದುರ್ಯೋಧನನ ತೋಳುಗಳಿಗೂ ಮತ್ತು ವಕ್ಷಃಸ್ಥಳಕ್ಕೂ ಗುರಿಯಿಟ್ಟು ಪ್ರಹರಿಸಿದನು.

ಬಾಣವಿದ್ಧನಾದ ರಾಜನು ಮೂರು ಶಿಖರಗಳಿಂದ ಕೂಡಿದ ಗಿರಿರಾಜ ನಂತೆಯೇ ಪ್ರಕಾಶಿಸಿದನು. ಕ್ರುದ್ಧರಾಗಿದ್ದ ಪರಸ್ಪರವಾಗಿ ಕಾದಾಡುತ್ತಿದ್ದ, ಭೀಮ-ದುರ್ಯೋಧನರನ್ನು ರಣರಂಗದಲ್ಲಿ ನೋಡಿದ ಶೂರರಾದ, ಜೀವಿ ತದ ಆಶೆಯನ್ನೇ ತೊರೆದಿದ್ದ, ದುರ್ಯೋಧನನ ತಮ್ಮಂದಿರು ಭೀಮಕರ್ಮ ನಾದ ಭೀಮಸೇನನನ್ನು ಜೀವಸಹಿತವಾಗಿ ಬಂಧಿಸಬೇಕೆಂದಿದ್ದ ತಮ್ಮ ಹಿಂದಿನ ನಿರ್ಧಾರವನ್ನು ಸ್ಮರಿಸಿಕೊಂಡವರಾಗಿ, ಅದನ್ನು ಕಾರ್ಯಗತ ಮಾಡಲು ಪುನಃ ದೃಢವಾಗಿ ನಿಶ್ಚಯಿಸಿ ಭೀಮನನ್ನು ಬಂಧಿಸಲು ಪ್ರಯತ್ನ ಮಾಡತೊಡಗಿದರು. ದುರ್ಯೋಧನಾನುಜರು ತನ್ನ ಮೇಲೆ ಆಕ್ರಮಣ ಮಾಡಲು ಬರುತ್ತಿರುವುದನ್ನು ಕಂಡು ಮಹಾಬಲನಾದ ಭೀಮಸೇನನು– ಸಲಗವೊಂದು ತನ್ನ ಪ್ರತಿಪಕ್ಷದಲ್ಲಿರುವ ಆನೆಗಳ ಮೇಲೆ ದಾಳಿಮಾಡಲು ಹೋಗುವಂತೆ–ಅವರನ್ನು ಎದುರಿಸಲು ಸಿದ್ಧನಾಗಿ ನಿಂತನು. ತೇಜಸ್ವಿಯಾದ, ಯಶಸ್ವಿಯಾದ ಭೀಮಸೇನನು ಬಹುಕ್ರುದ್ಧನಾಗಿ ತೀಕ್ಷ್ಣವಾದ ಬಾಣದಿಂದ ನಿನ್ನ ಮಗನಾದ ಚಿತ್ರಸೇನನನ್ನು ಪ್ರಹರಿಸಿದನು. ಅದೇ ರೀತಿಯಲ್ಲಿ ನಿನ್ನ ಬೇರೆಯ ಮಕ್ಕಳನ್ನೂ ಸಹ ಚಿನ್ನದ ರೆಕ್ಕೆಗಳಿಂದ ಮಾಡಿದ್ದ ಸುತೀಕ್ಷ್ಣವಾದ ಅನೇಕ ಬಾಣಗಳಿಂದ ಪ್ರಹರಿಸಿದನು. ಧರ್ಮರಾಜನಿಂದ ಆಜ್ಞಪ್ತರಾಗಿ ಭೀಮಸೇನನನ್ನು ಅನುಸರಿಸಿ ಬರುತ್ತಿದ್ದ ಅಭಿಮನ್ಯುಪ್ರಭೃತಿಗಳಾದ ಹನ್ನೆರಡು ಮಂದಿ ಮಹಾರಥರು, ಸೈನ್ಯವನ್ನು ಎಲ್ಲ ಪ್ರಕಾರಗಳಿಂದಲೂ ವ್ಯವಸ್ಥಿ ಗೊಳಿಸಿಕೊಂಡು ಮಹಾಬಲರಾದ ನಿನ್ನ ಮಕ್ಕಳ ಮೇಲೆ ದಾಳಿಯನ್ನು ಆರಂಭಿಸಿದರು. ರಥಸ್ಥರಾಗಿದ್ದ, ಮಹಾಶೂರರಾಗಿದ್ದ, ಸೂರ್ಯಾಗ್ನಿಗಳಿಗೆ ಸಮಾನವಾದ ತೇಜಸ್ಸನ್ನು ಹೊಂದಿದ್ದ, ಮಹಾಧನುರ್ಧರರಾಗಿದ್ದ, ಉತ್ತಮ

ವಾದ ಕಾಂತಿಯಿಂದ ಪರಿಶೋಭಿಸುತ್ತಿದ್ದ, ಸುವರ್ಣಮಯವಾದ ಕಿರೀಟ ಗಳನ್ನು ಧರಿಸಿ ರಾರಾಜಿಸುತ್ತಿದ್ದ, ದೀಪ್ತಿಮಂತರಾಗಿದ್ದ ಅಭಿಮನ್ಯುವೇ ಮೊದ ಲಾದ ಯೋಧರನ್ನು ಕಂಡು ಮಹಾಬಲರಾದ ನಿನ್ನ ಮಕ್ಕಳು ಭೀಮನನ್ನು ಬಿಟ್ಟು ಹೊರಟುಹೋದರು. ಆದರೆ ನಿನ್ನ ಮಕ್ಕಳು ಜೀವಸಹಿತವಾಗಿ ತಪ್ಪಿಸಿಕೊಂಡು ಹೋದುದನ್ನು ಭೀಮಸೇನನು ಸಹಿಸಲಿಲ್ಲ. ಅವರನ್ನು ಬೆನ್ನಟ್ಟಿ ಹೋಗಿ ಬಾಣಗಳಿಂದ ಬಹುವಾಗಿ ಬಾಧೆಪಡಿಸಿದನು. ವೀರನಾದ ಅಭಿಮನ್ಯುವು, ಧೃಷ್ಟದ್ಯುಮ್ನ ಮತ್ತು ಭೀಮರೊಡನೆ ಸೇರಿಕೊಂಡು ಯುದ್ಧ ಮಾಡುತ್ತಿರುವುದನ್ನು ಕಂಡು, ನಿನ್ನ ಸೈನ್ಯದಲ್ಲಿದ್ದ ದುರ್ಯೋಧನಪ್ರಭೃತಿಗಳಾದ ಮಹಾರಥರು ಧನುಸ್ಸುಗಳನ್ನು ಹಿಡಿದು ಶೀಘ್ರಗಾಮಿಗಳಾದ ಕುದುರೆಗಳನ್ನು ಕಟ್ಟಿದ್ದ ರಥಗಳಲ್ಲಿ ಕುಳಿತು ಭೀಮಾದಿಗಳ ರಥಗಳಿದ್ದ ಸ್ಥಳಕ್ಕೆ ಧಾವಿಸಿದರು. ಮಹಾರಾಜ! ಅಪರಾಹ್ಣದಲ್ಲಿ ಬಲಿಷ್ಠರಾದ ನಿನ್ನ ಕಡೆಯ ಯೋಧರಿಗೂ, ಶತ್ರುಪಕ್ಷದ ಯೋಧರಿಗೂ ಘೋರವಾದ ಯುದ್ಧವು ಪುನಃ ಪ್ರಾರಂಭವಾಯಿತು. ಅಭಿಮನ್ಯುವು ವಿಕರ್ಣನ ರಥದ ಕುದುರೆಗಳನ್ನು ಸಂಹರಿಸಿ ವಿಕರ್ಣನನ್ನೂ ಕ್ಷುದ್ರಕಗಳೆಂಬ ಇಪ್ಪತ್ತೈದು ಬಾಣಗಳಿಂದ ಪ್ರಹರಿ ಸಿದನು. ಮಹಾರಥನಾದ ವಿಕರ್ಣನು ಕುದುರೆಗಳಿಂದ ವಿಹೀನವಾಗಿದ್ದ ರಥ ದಿಂದಿಳಿದು ಚಿತ್ರಸೇನನ ರಥಕ್ಕೆ ಹತ್ತಿದನು. ಒಂದೇ ರಥದಲ್ಲಿ ಕುಳಿತಿದ್ದ, ಕುಲವರ್ಧನರಾದ ಆ ಇಬ್ಬರು ಸೋದರರನ್ನೂ ಆರ್ಜುನಿಯು ಬಾಣಗಳೆಂಬ ಬಲೆಯಿಂದ ಮುಚ್ಚಿಬಿಟ್ಟನು. ಅದಕ್ಕೆ ಪ್ರತಿಯಾಗಿ ಚಿತ್ರಸೇನ-ವಿಕರ್ಣರು ಕಾರ್ಷ್ಣಿಯನ್ನು ಐದೈದು ಬಾಣಗಳಿಂದ ಪ್ರಹರಿಸಿದರು. ಮೇರುವಿನಂತೆ ಸುಸ್ಥಿರನಾಗಿ ನಿಂತಿದ್ದ ಅಭಿಮನ್ಯುವು ಬಾಣಗಳ ಆ ಪ್ರಹಾರದಿಂದ ಸ್ವಲ್ಪವಾದರೂ ವಿಚಲಿತನಾಗಲಿಲ್ಲ. ದುಃಶಾಸನನು ಏಕಾಕಿಯಾಗಿ ಆ ಯುದ್ಧ ದಲ್ಲಿ ಐವರು ಕೇಕಯರಾಜರನ್ನು ಎದುರಿಸಿ ಯುದ್ಧಮಾಡುತ್ತಿದ್ದನು. ಅದು ನಿಶ್ಚಯವಾಗಿಯೂ ಪರಮಾದ್ಭುತವಾಗಿದ್ದಿತು. ಮತ್ತೊಂದು ಕಡೆಯಲ್ಲಿ ಕ್ರುದ್ಧರಾದ ದ್ರೌಪದಿಯ ಐವರು ಮಕ್ಕಳು ಸರ್ಪಕ್ಕೆ ಸಮಾನವಾದ ಆಕಾರ ಗಳನ್ನು ಹೊಂದಿದ್ದ ಬಾಣಗಳಿಂದ ನಿನ್ನ ಹಿರಿಯ ಮಗನಾದ ದುರ್ಯೋಧನ ನನ್ನು ತಡೆದು ನಿಲ್ಲಿಸಿದರು.

ದುರ್ಧರ್ಷನಾದ ನಿನ್ನ ಮಗನೂ ಸಹ ನಿಶಿತವಾದ ಬಾಣಗಳಿಂದ

ದ್ರೌಪದಿಯ ಐವರು ಮಕ್ಕಳನ್ನು ಪ್ರತ್ಯೇಕ-ಪ್ರತ್ಯೇಕವಾಗಿ ಪ್ರಹರಿಸಿದನು. ಪ್ರತಿಯಾಗಿ ಪ್ರತಿವಿಂಧ್ಯಾದಿಗಳಿಂದಲೂ ಪ್ರಹೃತನಾದ ದುರ್ಯೋಧನನ ಶರೀರದಿಂದ ರಕ್ತವು ಪ್ರವಹಿಸತೊಡಗಿತು. ಆ ಸಮಯದಲ್ಲಿ ದುರ್ಯೋಧನನು ಗೈರಿಕಾದಿ ಧಾತುಗಳ ಸಮ್ಮಿಶ್ರಣದಿಂದ ಕೂಡಿದ ಝರಿಗಳುಳ್ಳ ಪರ್ವತದಂತೆಯೇ ಪ್ರಕಾಶಿಸಿದನು. ಆ ಸಮಯದಲ್ಲಿ ಬಲಾಢ್ಯನಾದ ಭೀಷ್ಮನೂ ಸಹ ಪಾಂಡವರ ಸೈನ್ಯವನ್ನು–ಗೋಪಾಲಕನು ಹಸುಗಳನ್ನು ತರುಬುವಂತೆ–ತರುಬಿದನು. ಅನಂತರ ಶತ್ರುಗಳನ್ನು ಅವ್ಯಾಹತವಾಗಿ ಸಂಹರಿಸುತ್ತಿದ್ದ ಅರ್ಜುನನ ಗಾಂಡೀವಧನುಸ್ಸಿನ ಟೇಂಕಾರವು ಸೇನೆಯ ದಕ್ಷಿಣಭಾಗದಲ್ಲಿ ಕೇಳಿಬಂದಿತು. ಕುರು-ಪಾಂಡವರ ಸೈನ್ಯಗಳಲ್ಲಿ ಸಂಹೃತರಾಗಿದ್ದವರ ಮುಂಡಗಳು ರಣಾಂಗಣದ ಸುತ್ತಲೂ ಎದ್ದು ನಿಂತಿದ್ದುವು. ಸೈನ್ಯಗಳೆಂಬ ಮಹಾಸಾಗರದಲ್ಲಿ ಬಾಣಗಳ ಪ್ರಹಾರಗಳಿಂದ ಯೋಧರ ಶರೀರಗಳಿಂದ ಹೊರಬರುತ್ತಿದ್ದ ರಕ್ತವೇ ನೀರಾಗಿದ್ದಿತು. ಬಾಣಗಳೇ ಸುಳಿಯ ರೂಪದಲ್ಲಿದ್ದುವು. ಆನೆಗಳು ದ್ವೀಪಪ್ರಾಯವಾಗಿದ್ದುವು. ಕುದುರೆಗಳು ಸೈನ್ಯ ಸಾಗರದ ಅಲೆಗಳಾಗಿದ್ದುವು. ಇಂತಹ ಮಹಾಸಾಗರವನ್ನು ರಥಗಳೆಂಬ ನೌಕೆಯ ಮೂಲಕವಾಗಿ ನರವ್ಯಾಘ್ರರು ದಾಟುತ್ತಿದ್ದರು.

ಸಾವಿರಾರು ನರೋತ್ತಮರು–ಕತ್ತರಿಸಿದ ಕೈಗಳುಳ್ಳವರಾಗಿ, ಕತ್ತರಿಸಿದ ಕವಚಗಳುಳ್ಳವರಾಗಿ, ಕತ್ತರಿಸಿದ ಶರೀರವುಳ್ಳವರಾಗಿ ರಣಾಂಗಣದಲ್ಲಿ ಬಿದ್ದಿದ್ದುದು ಕಂಡುಬಂದಿತು. ಅಪಾರವಾದ ರಕ್ತದಿಂದ ತೋಯಿಸಲ್ಪಟ್ಟ ಸಂಹತವಾದ ಮದಿಸಿದ ಆನೆಗಳಿಂದ ಕೂಡಿದ್ದ ಆ ರಣಭೂಮಿಯು ಪರ್ವತಗಳಿಂದ ವ್ಯಾಪ್ತವಾಗಿರುವಂತೆ ಕಾಣುತ್ತಿದ್ದಿತು. ಅಂತಹ ಭಯಂಕರವಾದ ಸನ್ನಿವೇಶದಲ್ಲಿಯೂ ನಾವು ಒಂದು ಪರಮಾದ್ಭುತವನ್ನು ಅಲ್ಲಿ ಕಂಡೆವು. ನಿನ್ನ ಪಕ್ಷದಲ್ಲಿಯೇ ಆಗಲೀ, ಪಾಂಡವರ ಪಕ್ಷದಲ್ಲಿಯೇ ಆಗಲೀ–ಯುದ್ಧವನ್ನು ಬೇಡವೆಂದು ಹೇಳುವವನು ಯಾವನೊಬ್ಬನೂ ಇರಲಿಲ್ಲ. ಇದು ನಮಗೆ ಅತ್ಯಾಶ್ಚರ್ಯವಾಗಿ ಕಂಡುಬಂದಿತು.

ಈ ಪ್ರಕಾರವಾಗಿ ನಿನ್ನ ಕಡೆಯ ವೀರರು ಮಹಾಯಶಸ್ಸನ್ನು ಆಶಿಸು

ತ್ತಲೂ ಯುದ್ಧದಲ್ಲಿ ಜಯಗಳಿಸುವ ಆಶಯದಿಂದಲೂ ಪಾಂಡವರೊಡನೆ ಯುದ್ಧಮಾಡುತ್ತಿದ್ದರು."

೭೮ನೆಯ ಅಧ್ಯಾಯವು ಮುಗಿಯಿತು.

೭೯ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಮಸೇನನಿಂದ ದುರ್ಯೋಧನನ ಪರಾಜಯ : ಅಭಿಮನ್ಯುವಿಗೂ ಮತ್ತು ಧೃತರಾಷ್ಟ್ರನ ಮಕ್ಕಳಿಗೂ ನಡೆದ ಯುದ್ಧದ ವರ್ಣನೆ : ಆರನೆಯ ದಿವಸದ ಯುದ್ಧದ ಪರಿಸಮಾಪ್ತಿ

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಸೂರ್ಯನು ಕೆಂಪುಬಣ್ಣಕ್ಕೆ ತಿರುಗುತ್ತಿರಲಾಗಿ (ಸಂಧ್ಯಾಕಾಲವಾಗುತ್ತಿರಲಾಗಿ) ಯುದ್ಧೋತ್ಸಾಹಿಯಾದ ದುರ್ಯೋಧನನು ಭೀಮನನ್ನು ಸಂಹಾರಮಾಡುವ ಉತ್ಕಟೇಚ್ಛೆಯಿಂದ ಅವನ ಕಡೆಗೆ ಧಾವಿಸಿದನು. ನೃವೀರನಾದ, ದೃಢಶತ್ರುವಾದ ದುರ್ಯೋಧನನು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ ಪರಮಕ್ರುದ್ಧನಾದ ಭೀಮಸೇನನು ಈ ಮಾತುಗಳನ್ನು ಹೇಳಿದನು :

"ದುರ್ಯೋಧನ! ಅನೇಕವರ್ಷಗಳಿಂದ ಬಯಸುತ್ತಿದ್ದ ಕಾಲವು (ನಿನ್ನನ್ನು ಕೊಲ್ಲುವ ಕಾಲವು) ಈಗ ಸನ್ನಿಹಿತವಾಗಿದೆ. ನೀನೇನಾದರೂ ಯುದ್ಧವನ್ನು ಬಿಟ್ಟು ಓಡಿಹೋಗದಿದ್ದರೆ ಖಂಡಿತವಾಗಿಯೂ ನಾನು ನಿನ್ನನ್ನು ಇಂದು ಸಂಹಾರಮಾಡುತ್ತೇನೆ. ನಾನೀಗಲೇ ನಿನ್ನನ್ನು ಸಂಹರಿಸಿ ಕುಂತಿಯ ಮತ್ತು ದ್ರೌಪದಿಯ ಮನಸ್ಸಿನ ಕ್ಲೇಶವನ್ನು ಸಮಗ್ರವಾಗಿ ಹೋಗಲಾಡಿಸುತ್ತೇನೆ. ಗಾಂಧಾರಿಯ ಮಗನೇ! ಕೇವಲ ಮಾತ್ಸರ್ಯದ ಕಾರಣದಿಂದ ನೀನು ಹಿಂದೆ ಪಾಂಡವರನ್ನು ಅವಮಾನಗೊಳಿಸಿದೆಯಲ್ಲವೇ? ನಿರಪರಾಧಿಗಳನ್ನು ಅಪಮಾನಗೊಳಿಸಿದ ಪಾಪದ ಫಲವಾಗಿ ಈಗ ನಿನಗೆ ಈ ಸಂಕಟವು ಪ್ರಾಪ್ತವಾಗಿದೆ. ಈಗಲಾದರೂ ಕಣ್ತೆರೆದುನೋಡು. ಹಿಂದೆ ಕರ್ಣನ ಮತ್ತು ಶಕುನಿಯ ಸಲಹೆಗಳನ್ನು ಪಡೆದು ಪಾಂಡವರನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ

ಸ್ವೇಚ್ಛೆಯಿಂದ ಮನಬಂದಂತೆ ಕಾರ್ಯಮಾಡಿರುವೆ. ಸಂಧಿಗಾಗಿ ಪ್ರಾರ್ಥನೆ ಮಾಡಲು ಬಂದ ದಾಶಾರ್ಹನಾದ ಭಗವಾನ್ ಶ್ರೀಕೃಷ್ಣನನ್ನು ಮೋಹಪರವಶನಾಗಿ ಅವಮಾನಿಸಿರುವೆ. ಆನಂದತುಂದಿಲನಾಗಿ ಉಲೂಕನ ಮೂಲಕ ಯಾವ ಸಂದೇಶವನ್ನು ಕಳುಹಿಸಿದೆಯೋ–ಆ ಸಂದೇಶದ ಕಾರಣದಿಂದಲೇ ಸಬಾಂಧವನಾದ, ಸಾನುಜನಾದ ನಿನ್ನನ್ನು ಸಂಹಾರಮಾಡುತ್ತೇನೆ. ನೀನು ಹಿಂದೆ ನಮ್ಮ ವಿಷಯವಾಗಿ ಮಾಡಿರುವ ಎಲ್ಲ ಪಾಪಗಳಿಗೂ ತಕ್ಕುದಾದ, ಉಚಿತವಾದ ಕಾರ್ಯವನ್ನೇ ನಾನೀಗ ಮಾಡುತ್ತೇನೆ.” ಹೀಗೆಂಬುದಾಗಿ ಹೇಳಿ ಭೀಮಸೇನನು ತನ್ನ ಘೋರವಾದ ಧನುಸ್ಸನ್ನು ಅನೇಕ ಬಾರಿ ಅಳ್ಳಾಡಿಸುತ್ತಾ ಶಿಂಜಿನಿಯನ್ನು ಎಳೆದೆಳೆದು ಬಿಡುತ್ತಾ, ಟೇಂಕಾರಮಾಡುತ್ತಾ, ವಜ್ರಾಯುಧಕ್ಕೆ ಸಮಾನವಾದ ಪ್ರಭೆಯಿಂದ ಕೂಡಿದ್ದ, ಘೋರವಾಗಿ ಕಾಣುತ್ತಿದ್ದ ಬಾಣಗಳನ್ನು ಬತ್ತಳಿಕೆಯಿಂದ ತೆಗೆದು ಬಿಲ್ಲಿನಲ್ಲಿ ಯೋಜಿಸಿದನು. ಕ್ರುದ್ಧನಾದ ಭೀಮಸೇನನು ನೇರವಾಗಿ ಹೋಗುವ, ಪ್ರಜ್ವಲಿಸುವ ಅಗ್ನಿಯ ಶಿಖೆಗೆ ಸಮಾನವಾಗಿ ಕಾಣುತ್ತಿದ್ದ, ವಜ್ರಾಯುಧಸದೃಶವಾದ ಇಪ್ಪತ್ತಾರು ಬಾಣಗಳನ್ನು ಸುಯೋಧನನ ಮೇಲೆ ಪ್ರಯೋಗಿಸಿ ಪ್ರಾಣವೊಂದನ್ನು ಹೊರತಾಗಿ ಅವನ ಸರ್ವಸ್ವವನ್ನೂ ಅಪಹರಿಸಿಬಿಟ್ಟನು. ಭೀಮಸೇನನು ಎರಡು ಬಾಣಗಳಿಂದ ದುರ್ಯೋಧನನ ಧನುಸ್ಸನ್ನು ಕತ್ತರಿಸಿದನು. ಮತ್ತೆರಡು ಬಾಣಗಳಿಂದ ಸೂತನನ್ನು ಸಂಹರಿಸಿದನು. ಮತ್ತೆ ನಾಲ್ಕು ಬಾಣಗಳಿಂದ ವೇಗಶಾಲಿಗಳಾಗಿದ್ದ ನಾಲ್ಕು ಕುದುರೆಗಳನ್ನೂ ಯಮಾಲಯಕ್ಕೆ ಕಳುಹಿಸಿಬಿಟ್ಟನು.

ಅರಿಮರ್ದನನಾದ ಭೀಮಸೇನನು ಮತ್ತೆರಡು ಬಾಣಗಳನ್ನು ಕಿವಿಯವರೆಗೂ ಸೆಳೆದು ದುರ್ಯೋಧನರಾಜನ ಛತ್ರವನ್ನು ಕತ್ತರಿಸಿದನು. ಪುನಃ ಆರು ಬಾಣಗಳನ್ನು ಬತ್ತಳಿಕೆಯಿಂದ ತೆಗೆದು ಧನುಸ್ಸಿನಲ್ಲಿ ಯೋಜಿಸಿ ಆಕರ್ಣಾಂತವಾಗಿ ಸೆಳೆದು ಪ್ರಜ್ವಲಿಸುತ್ತಿದ್ದ ದುರ್ಯೋಧನನ ಉತ್ತಮೋತ್ತಮವಾದ ಧ್ವಜವನ್ನೂ ಕತ್ತರಿಸಿ ನಿನ್ನ ಮಗನು ನೋಡುತ್ತಿದ್ದಂತೆಯೇ ಗಟ್ಟಿಯಾಗಿ ಗರ್ಜಿಸಿದನು. ಮೋಡದಿಂದ ಮಿಂಚು ಹೊರಬರುವಂತೆ ನಾನಾ ರತ್ನವಿಭೂಷಿತವಾದ ರಥದ ಶಿರಃಪ್ರದೇಶದಿಂದ ಅತ್ಯಂತಕಾಂತಿಯುಕ್ತವಾಗಿದ್ದ ಧ್ವಜವು ಕೆಳಕ್ಕೆ ಬಿದ್ದಿತು. ಸೂರ್ಯನಿಗೆ ಸಮಾನವಾಗಿ ಪ್ರಜ್ವಲಿಸುತ್ತಿದ್ದ,

ಮಣಿಮಯವಾಗಿದ್ದ ನಾಗನ (ಹಾವಿನ ಅಥವಾ ಆನೆಯ) ಚಿಹ್ನೆಯನ್ನು ಹೊಂದಿದ್ದ ಕುರುಪತಿಯಾದ ದುರ್ಯೋಧನನ ಧ್ವಜವು ಭೀಮನಿಂದ ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದುದನ್ನು ಎಲ್ಲ ರಾಜರೂ ನೋಡಿದರು. ಅನಂತರ ಮಹಾರಥನಾದ ಭೀಮಸೇನನು ನಗು-ನಗುತ್ತಾ ಸಲಗವೊಂದನ್ನು ಅಂಕುಶದಿಂದ ಮಾವಟಿಗನು ಇರಿಯುವಂತೆ ವೀರನಾದ ದುರ್ಯೋಧನನನ್ನು ಹತ್ತು ಬಾಣಗಳಿಂದ ಪ್ರಹರಿಸಿದನು.

ಅನಂತರ ಮಹಾರಥನಾದ, ಸಿಂಧುರಾಜನಾದ ಜಯದ್ರಥನು ಸತ್ಪುರುಷರೊಡನೆ ದುರ್ಯೋಧನನ ಹಿಂದೆ ನಿಂತು ಅವನ ರಕ್ಷಣಾಕಾರ್ಯವನ್ನು ವಹಿಸಿಕೊಂಡನು. ರಥಿಗಳಲ್ಲಿ ಶ್ರೇಷ್ಠರಾದ ಕೃಪರು ಅಮಿತೌಜಸ್ಕನಾದ, ಅಸಹನಶೀಲನಾದ, ಕುರುವಂಶಸಂಭೂತನಾದ ದುರ್ಯೋಧನನನ್ನು ತಮ್ಮ ರಥಕ್ಕೆ ಹತ್ತಿಸಿಕೊಂಡರು. ಭೀಮಸೇನನಿಂದ ಬಲವಾದ ಪೆಟ್ಟುತಿಂದಿದ್ದ ಮತ್ತು ಅದರಿಂದಲೇ ವ್ಯಥಿತನಾಗಿದ್ದ ದುರ್ಯೋಧನನು ಕೃಪರ ರಥದ ಹಿಂಬದಿಯ ಆಸನದಲ್ಲಿ ಕುಳಿತನು. ಅನಂತರ ಜಯದ್ರಥನು ಭೀಮನನ್ನು ಜಯಿಸುವ ಇಚ್ಛೆಯಿಂದ ಅನೇಕ ಸಾವಿರ ರಥಗಳಿಂದ ಅವನನ್ನು ಸುತ್ತುವರಿದು ಭೀಮನ ಎಲ್ಲ ದಿಕ್ಕುಗಳನ್ನು ಮುಚ್ಚಿಬಿಟ್ಟನು. (ಭೀಮನು ಅಲ್ಲಿಂದ ಹೋಗದಂತೆ ತಡೆಹಿಡಿದನು.) ಆ ಸಮಯದಲ್ಲಿ ಧೃಷ್ಟಕೇತು, ಪರಾಕ್ರಮಿಯಾದ ಅಭಿಮನ್ಯು, ಐವರು ಕೇಕಯರಾಜಕುಮಾರರು ಮತ್ತು ಐವರು ದ್ರೌಪದಿಯ ಮಕ್ಕಳು ಈ ಹನ್ನೆರಡು ಮಂದಿ ಯುಧಿಷ್ಠಿರನಿಂದ ನಿಯೋಜಿತರಾದ ಯೋಧರು ನಿನ್ನ ಮಕ್ಕಳೊಡನೆ ಯುದ್ಧಮಾಡುತ್ತಿದ್ದರು. ಹೀಗೆ ಯುದ್ಧಮಾಡುತ್ತಿದ್ದಾಗ ಚಿತ್ರಸೇನ, ಸುಚಿತ್ರ, ಚಿತ್ರಾಂಗ, ಚಿತ್ರದರ್ಶನ, ಚಾರುಚಿತ್ರ, ಸುಚಾರು, ನಂದ ಮತ್ತು ಉಪನಂದ–ಈ ಎಂಟು ಮಂದಿ ಮಹಾಧನುಷ್ಮಂತರಾದ, ಸುಕುಮಾರರಾದ, ಯಶೋವಂತರಾದ ರಾಜಕುಮಾರರು ಅಭಿಮನ್ಯುವಿನ ರಥವನ್ನು ನಾಲ್ಕು ದಿಕ್ಕುಗಳಿಂದಲೂ ಮುತ್ತಿದರು. ಒಡನೆಯೇ ಮಹಾತ್ಮನಾದ ಅಭಿಮನ್ಯುವು ಬಗ್ಗಿದ ಗಿಣ್ಣುಗಳುಳ್ಳ ನಿಶಿತವಾದ ಐದೈದು ಬಾಣಗಳಿಂದ ಪ್ರತಿಯೊಬ್ಬ ರಾಜಕುಮಾರರನ್ನೂ ಪ್ರಹರಿಸಿದನು. ವಿಚಿತ್ರವಾದ ಧನುಸ್ಸಿನಿಂದ ನಿಃಸೃತವಾದ ವಜ್ರಾಯುಧಕ್ಕೂ ಮತ್ತು ಮೃತ್ಯುವಿಗೂ ಸಮಾನವಾಗಿದ್ದ ಬಾಣಗಳಿಂದ ಪ್ರಹೃತರಾದ ನಿನ್ನ ಮಕ್ಕಳು ಸಹನಾತೀತರಾಗಿ–ಮೇರು

ಪರ್ವತವನ್ನು ಮೋಡಗಳು ನೀರಿನಿಂದ ಮುಚ್ಚಿಬಿಡುವಂತೆ–ತೀಕ್ಷ್ಣವಾದ ಬಾಣಗಳಿಂದ ರಥಸತ್ತಮನಾದ ಸೌಭದ್ರನನ್ನು ಮುಚ್ಚಿಬಿಟ್ಟರು. ಅಸ್ತ್ರವಿದ್ಯಾ ವಿಶಾರದನಾದ, ಯುದ್ಧದುರ್ಮದನಾದ ಅಭಿಮನ್ಯುವು ನಿನ್ನ ಮಕ್ಕಳಿಂದ ಪೀಡಿಸಲ್ಪಟ್ಟರೂ–ದೇವಾಸುರಯುದ್ಧದಲ್ಲಿ ವಜ್ರಪಾಣಿಯಾದ ಇಂದ್ರನು



ಮಹಾಸುರರನ್ನು ಭಯಪಡಿಸುತ್ತಿದ್ದಂತೆ–ತನ್ನ ಪರಾಕ್ರಮದಿಂದ ನಿನ್ನ ಮಕ್ಕಳನ್ನು ನಡುಗಿಸಿಬಿಟ್ಟನು.

ತನ್ನನ್ನು ಸುತ್ತುವರಿದಿದ್ದ ಎಂಟು ಮಂದಿ ರಾಜಕುಮಾರರನ್ನು ಪೀಡಿಸುತ್ತಿದ್ದುದಲ್ಲದೆ ರಥಿಶ್ರೇಷ್ಠನಾದ ಅಭಿಮನ್ಯುವು ಘೋರವಾದ, ವಿಷಸರ್ಪಗಳಂತಿದ್ದ ಭಲ್ಲಗಳೆಂಬ ಹದಿನಾಲ್ಕು ಬಾಣಗಳನ್ನು ವಿಕರ್ಣನ ಮೇಲೆ ಪ್ರಯೋಗಿಸಿ ವಿಕರ್ಣನ ರಥದ ಧ್ವಜವನ್ನೂ, ಸೂತನನ್ನೂ, ಕುದುರೆಗಳನ್ನೂ ಕೆಳಗುರುಳಿಸಿದನು. ಆ ಸಮಯದಲ್ಲಿ ನಿಶ್ಚಯವಾಗಿಯೂ ಅಭಿಮನ್ಯುವು ನೃತ್ಯಮಾಡುತ್ತಿರುವನೋ ಎಂಬಂತೆ ಕಾಣುತ್ತಿದ್ದನು. ಮಹಾರಾಜ! ಸೂತನನ್ನೂ, ಕುದುರೆಗಳನ್ನೂ ಸಂಹರಿಸಿದನಂತರ ಮಹಾಬಲನಾದ, ಸಂಕ್ರುದ್ಧನಾದ ಅಭಿಮನ್ಯುವು ಹೊಂಬಣ್ಣದ, ಅಪ್ರತಿಹತವಾದ, ಉಜ್ಜುಕಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಬಾಣಗಳನ್ನು ವಿಕರ್ಣನ ಮೇಲೆ ಪ್ರಯೋ

ಗಿಸಿದನು. ಗೃಧ್ರದ ರೆಕ್ಕೆಗಳನ್ನೇ ತುದಿಯಲ್ಲಿ ಹೊಂದಿದ್ದ ಆ ತೀಕ್ಷ್ಣವಾದ ಬಾಣಗಳು ವಿಕರ್ಣನನ್ನು ಸೇರಿ ಅವನ ಶರೀರವನ್ನು ಭೇದಿಸಿಕೊಂಡು ಹೊರ ಬಂದು ಜ್ವಲಿಸುತ್ತಿರುವ ಸರ್ಪಗಳಂತೆ ಭೂಮಿಯನ್ನು ಸೇರಿದುವು. ಸುವರ್ಣ ಮಯವಾದ ರೆಕ್ಕೆಗಳನ್ನೂ ಮತ್ತು ಅಗ್ರಭಾಗವನ್ನೂ ಹೊಂದಿದ್ದು ವಿಕರ್ಣನ ರಕ್ತದಿಂದ ನೆನೆದಿದ್ದ ಆ ಬಾಣಗಳು ನೆಲಕ್ಕೆ ಚುಚ್ಚಿಕೊಂಡಿದ್ದಾಗ ರಕ್ತವನ್ನೇ ನಾದರೂ ವಾಂತಿಮಾಡುತ್ತಿವೆಯೋ ಎಂಬಂತೆ ಕಾಣುತ್ತಿದ್ದುವು. ಅಭಿಮನ್ಯು ವಿನ ಬಾಣಪ್ರಹಾರದಿಂದ ಕ್ಷತ-ವಿಕ್ಷತನಾಗಿದ್ದ ವಿಕರ್ಣನನ್ನು ನೋಡಿ ಅವನ ಇತರ ಸಹೋದರರು ಸೌಭದ್ರಪ್ರಮುಖರಾದ ರಥಿಕರ ಮೇಲೆ ಆಕ್ರಮಣ ನಡೆಸಿದರು. ಅದೇ ರೀತಿಯಲ್ಲಿ ಸೂರ್ಯಸಮಾನವರ್ಚಸ್ಕರಾಗಿದ್ದ ನಿನ್ನ ಮಕ್ಕಳು ಬೇರೆಯ ರಥಿಕರ ರಥಗಳನ್ನು ಆಕ್ರಮಿಸಿದರು. ಈ ರೀತಿಯಲ್ಲಿ ಯುದ್ಧದುರ್ಮದರಾಗಿದ್ದ, ಪರಮಕ್ರುದ್ಧರಾಗಿದ್ದ ಕೌರವ-ಪಾಂಡವರಾಜ ಕುಮಾರರು ಪರಸ್ಪರವಾಗಿ ಯುದ್ಧಮಾಡುತ್ತಿದ್ದರು.

ದುರ್ಮುಖನು ದ್ರೌಪದಿಯ ಮಗನಾದ ಶ್ರುತಕರ್ಮನನ್ನು ಶೀಘ್ರ ಗಾಮಿಗಳಾದ ಏಳು ಬಾಣಗಳಿಂದ ಪ್ರಹರಿಸಿ, ಒಂದು ಬಾಣದಿಂದ ಧ್ವಜ ವನ್ನೂ, ಏಳು ಬಾಣಗಳಿಂದ ಶ್ರುತಕರ್ಮನ ಸಾರಥಿಯನ್ನೂ ಪ್ರಹರಿಸಿದನು. ವಾಯುಸಮಾನವಾದ ವೇಗದಿಂದ ಕೂಡಿದ್ದ, ಸುವರ್ಣಮಯವಾದ ಬಲೆ ಗಳಿಂದ ಆಚ್ಛಾದಿತವಾಗಿದ್ದ ಶ್ರುತಕರ್ಮನ ಕುದುರೆಗಳನ್ನು ದುರ್ಮುಖನು ಆರು ಬಾಣಗಳಿಂದ ಸಂಹರಿಸಿ ಅವನ ಸಾರಥಿಯನ್ನೂ ಸಹ ರಥದಿಂದ ಕೆಳಕ್ಕೆ ಕೆಡವಿಬಿಟ್ಟನು. ಮಹಾರಥನಾದ ಶ್ರುತಕರ್ಮನು ಕುದುರೆಗಳಿಂದ ವಿಹೀನ ವಾಗಿದ್ದ ರಥದಲ್ಲಿ ನಿಂತುಕೊಂಡು ಪರಮಕ್ರುದ್ಧನಾಗಿ ಧಗಧಗಿಸುತ್ತಿರುವ ಉಲ್ಕೆಯಂತೆಯೇ ಇದ್ದ ಶಕ್ತ್ಯಾಯುಧವನ್ನು ದುರ್ಮುಖನ ಮೇಲೆ ಪ್ರಯೋ ಗಿಸಿದನು. ಆ ಶಕ್ತ್ಯಾಯುಧವು ಯಶೋವಂತನಾದ ದುರ್ಮುಖನ ಪ್ರಕಾಶ ಮಾನವಾಗಿದ್ದ ಕವಚವನ್ನು ಕತ್ತರಿಸಿ ಅವನನ್ನೂ ಭೇದಿಸಿ ತನ್ನ ತೇಜಸ್ಸಿನಿಂದ ಬೆಳಗುತ್ತಾ ಭೂಮಿಯನ್ನು ಸೀಳಿಕೊಂಡು ಅದರೊಳಗೆ ಪ್ರವೇಶಿಸಿತು. ಶ್ರುತ ಕರ್ಮನು ರಥಹೀನನಾದುದನ್ನು ಕಂಡು ದ್ರೌಪದಿಯ ಇನ್ನೊಬ್ಬ ಮಗನಾದ ಮಹಾರಥನಾದ ಸುತಸೋಮನು ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ

ಶ್ರುತಕರ್ಮನನ್ನು ತನ್ನ ರಥಕ್ಕೆ ಹತ್ತಿಸಿಕೊಂಡನು. ದ್ರೌಪದಿಯ ಮತ್ತೊಬ್ಬ ಮಗನಾದ ವೀರನಾದ ಶ್ರುತಕೀರ್ತಿಯು ನಿನ್ನ ಮಗನಾದ, ಯಶಸ್ವಿಯಾದ ಜಯತ್ಸೇನನನ್ನು ಸಂಹರಿಸಬೇಕೆಂಬ ಇಚ್ಛೆಯಿಂದ ಅವನನ್ನು ಆಕ್ರಮಿಸಿದನು. ಶ್ರುತಕೀರ್ತಿಯು ಧನುಸ್ಸಿಗೆ ಶಿಂಜಿನಿಯನ್ನು ಸೆಳೆದು ಕಟ್ಟಿ ಟೇಂಕಾರಮಾಡಿ ಬಾಣವನ್ನು ಯೋಜಿಸಿ ಸೆಳೆದುಬಿಡುವುದರಲ್ಲಿದ್ದಾಗ ನಿನ್ನ ಮಗನಾದ ಜಯತ್ಸೇನನು ನಗು-ನಗುತ್ತಾ ತೀಕ್ಷ್ಣವಾಗಿದ್ದ ಕ್ಷುರಪ್ರವೆಂಬ ಬಾಣದಿಂದ ಬಹುಶೀಘ್ರವಾಗಿ ಶ್ರುತಕೀರ್ತಿಯ ಧನುಸ್ಸನ್ನು ಕತ್ತರಿಸಿಬಿಟ್ಟನು. ತನ್ನ ಸಹೋದರನು ಧನುಸ್ಸಿನಿಂದ ವಿಹೀನನಾದುದನ್ನು ಕಂಡು, ನಕುಲನ ಮಗ ನಾದ ತೇಜಸ್ವಿಯಾದ ಶತಾನೀಕನು ಸಿಂಹದಂತೆ ಬಾರಿ-ಬಾರಿಗೂ ಗರ್ಜನೆ ಮಾಡುತ್ತಾ ತನ್ನ ಸೋದರನಿದ್ದೆಡೆಗೆ ಧಾವಿಸಿಬಂದನು.

ಮರುಕ್ಷಣದಲ್ಲಿಯೇ ಶತಾನೀಕನು ಗಟ್ಟಿಯಾಗಿ ಧನುಷ್ಟಂಕಾರಮಾಡಿ ಹತ್ತು ಬಾಣಗಳಿಂದ ಜಯತ್ಸೇನನನ್ನು ಪ್ರಹರಿಸಿ ಮದೋದಕವನ್ನು ಸುರಿಸು ತ್ತಿರುವ ಆನೆಯೋಪಾದಿಯಲ್ಲಿ ಗಟ್ಟಿಯಾಗಿ ಗರ್ಜಿಸಿದನು. ಅನಂತರ ಕವ ಚವೇ ಮೊದಲಾದ ಎಲ್ಲ ಆವರಣಗಳನ್ನೂ ಭೇದಿಸಿಕೊಂಡು ಹೋಗಲು ಸಮರ್ಥವಾದ ಮತ್ತೊಂದು ತೀಕ್ಷ್ಣವಾದ ಬಾಣದಿಂದ ಶತಾನೀಕನು ಜಯ ತ್ಸೇನನ ಹೃದಯಕ್ಕೆ ಗುರಿಯಿಟ್ಟು ಪ್ರಹರಿಸಿದನು. ಈ ಸಮಯಕ್ಕೆ ಸರಿಯಾಗಿ ತನ್ನ ಸೋದರನಾದ ಜಯತ್ಸೇನನ ಸಮೀಪದಲ್ಲಿಯೇ ಇದ್ದ ದುಷ್ಕರ್ಣನು ಕ್ರೋಧಮೂರ್ಛಿತನಾಗಿ ನಕುಲನ ಮಗನಾದ ಶತಾನೀಕನ ಧನುಸ್ಸನ್ನು ಕತ್ತರಿ ಸಿದನು. ಅನಂತರ ಭಾರವನ್ನು ಸಹಿಸುವುದಾಗಿಯೂ, ಉತ್ತಮೋತ್ತಮ ವಾಗಿಯೂ ಇದ್ದ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಮಹಾಬಲ ನಾದ ಶತಾನೀಕನು ಆ ಧನುಸ್ಸಿನಲ್ಲಿ ಘೋರವಾಗಿದ್ದ ಬಾಣಗಳನ್ನು ಅನು ಸಂಧಾನಮಾಡಿದನು. ಜಯತ್ಸೇನನ ಮುಂದುಗಡೆಯಲ್ಲಿಯೇ ನಿಂತಿದ್ದ ದುಷ್ಕರ್ಣನನ್ನು 'ತಿಷ್ಠ! ತಿಷ್ಠ!' 'ನಿಲ್ಲು! ನಿಲ್ಲು!' ಎಂದು ಸಂಬೋಧಿ ಸುತ್ತಾ ಸರ್ಪಗಳಂತೆಯೇ ಪ್ರಜ್ವಲಿಸುತ್ತಿದ್ದ, ಚೂಪಾಗಿದ್ದ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು. ಅನಂತರ ಒಂದು ಬಾಣದಿಂದ ದುಷ್ಕರ್ಣನ ಧನುಸ್ಸನ್ನು ಕತ್ತರಿಸಿ, ಮತ್ತೆರಡು ಬಾಣಗಳಿಂದ ಸೂತನನ್ನೂ, ಪುನಃ ಏಳು

ಬಾಣಗಳಿಂದ ದುಷ್ಕರ್ಣನನ್ನೂ ಪ್ರಹರಿಸಿದನು. ಅನಂತರ ಶತಾನೀಕನು ಮನೋವೇಗ-ವಾಯುವೇಗದಿಂದ ಕೂಡಿದ್ದ ನಾನಾಬಣ್ಣದ ದುಷ್ಕರ್ಣನ ರಥದ ಕುದುರೆಗಳನ್ನು ಹನ್ನೆರಡು ಬಾಣಗಳಿಂದ ಪ್ರಹರಿಸಿದನು. ಅನಂತರ ಲಕ್ಷ್ಯವನ್ನು ಬಹುಶೀಘ್ರವಾಗಿ ಭೇದಿಸುವ ಸಾಮರ್ಥ್ಯದಿಂದ ಕೂಡಿದ್ದ ಮತ್ತೊಂದು ಭಲ್ಲವೆಂಬ ಹೆಸರಿನ ಬಾಣದಿಂದ ಶತಾನೀಕನು ದುಷ್ಕರ್ಣನ ಹೃದಯಕ್ಕೆ ಗುರಿಯಿಟ್ಟು ದೃಢವಾಗಿ ಪ್ರಹರಿಸಿದನು. ಸಿಡಿಲು ತಗುಲಿದ ವೃಕ್ಷದಂತೆಯೇ ದುಷ್ಕರ್ಣನು ಭೂಮಿಯ ಮೇಲೆ ಬಿದ್ದನು. ದುಷ್ಕರ್ಣನು ಬಾಣದ ಆಘಾತದಿಂದ ಪೀಡಿತನಾಗಿ ಬಿದ್ದಿರುವುದನ್ನು ಕಂಡು ನಿನ್ನ ಕಡೆಯ ಐವರು ಮಹಾರಥರು ಶತಾನೀಕನನ್ನು ಸಂಹಾರಮಾಡುವ ಇಚ್ಛೆಯಿಂದ ಅವನನ್ನು ಸುತ್ತುವರಿದು ಬಾಣಗಳ ಸಮೂಹದಿಂದ ಅವನನ್ನು ಮುಚ್ಚಿ ಬಿಟ್ಟರು. ಬಾಣಗಳ ಸಮೂಹದಿಂದ ಮುಚ್ಚಲ್ಪಟ್ಟಿದ್ದ ಶತಾನೀಕನನ್ನು ಕಂಡು ಐವರು ಕೇಕಯಸೋದರರು ಪರಮಕ್ರುದ್ಧರಾಗಿ ಶತಾನೀಕನನ್ನು ರಕ್ಷಿಸುವ ಸಲುವಾಗಿ ಅವನ ಸಮೀಪಕ್ಕೆ ಬಂದರು. ಕೇಕಯರಾಜಕುಮಾರರು ಶತಾನೀಕನ ಸಹಾಯಕ್ಕೆ ಬಂದುದನ್ನು ಕಂಡು ಮಹಾರಥರಾದ ನಿನ್ನ ಮಕ್ಕಳು ಆನೆಗಳನ್ನು (ಆನೆಗಳ ಗುಂಪನ್ನು) ಮತ್ತೊಂದು ಆನೆಗಳ ಗುಂಪು ಎದುರಿಸು ವಂತೆ ಕೇಕಯರಾಜಕುಮಾರರನ್ನು ಎದುರಿಸಲು ಹೋದರು. ಕ್ರುದ್ಧರಾದ ದುರ್ಮುಖ, ದುರ್ಜಯ, ದುರ್ಮರ್ಷಣ, ಶೂರನಾದ ಶತ್ರುಂಜಯ ಮತ್ತು ಶತ್ರುಸಹ–ಈ ಐವರೂ ಐವರು ಕೇಕಯಸಹೋದರರನ್ನು ಎದುರಿಸಿದರು. ಮನೋವೇಗಕ್ಕೆ ಸಮಾನವಾದ ವೇಗವುಳ್ಳ ಕುದುರೆಗಳಿಂದ ಯುಕ್ತವಾಗಿದ್ದ ಮತ್ತು ನಾನಾವರ್ಣಗಳಿಂದ ಚಿತ್ರಿತವಾಗಿದ್ದ, ಪತಾಕೆಗಳಿಂದ ಅಲಂಕೃತ ವಾಗಿದ್ದ, ನಗರಸದೃಶವಾಗಿದ್ದ (ನಗರದಂತೆ ಸಕಲಸಂಭಾರಗಳಿಂದಲೂ ಸಮೃದ್ಧವಾಗಿದ್ದ) ರಥಗಳಿಂದ ಕೂಡಿದ್ದ, ಶ್ರೇಷ್ಠವಾಗಿದ್ದ ಧನುಸ್ಸುಗಳನ್ನು ಧರಿಸಿದ್ದ, ವಿಚಿತ್ರವಾದ ಕವಚಗಳನ್ನೂ ಮತ್ತು ಧ್ವಜಗಳನ್ನೂ ಹೊಂದಿದ್ದ ನಿನ್ನ ವೀರಪುತ್ರರು–ಅರಣ್ಯದಿಂದ ಅರಣ್ಯಕ್ಕೆ ಹೋಗುವ ಸಿಂಹ ಗಳಂತೆ–ಶತ್ರುಸೈನ್ಯವನ್ನು ಪ್ರವೇಶಿಸಿದರು. ರಥಸೈನ್ಯಗಳಿಂದಲೂ, ಗಜಸೈನ್ಯ ಗಳಿಂದಲೂ ಸಂಕುಲಿತವಾಗಿದ್ದ, ಪರಸ್ಪರವಾಗಿ ಪ್ರಹರಿಸಲ್ಪಡುತ್ತಿದ್ದ ಮಹಾ

ಭಯಂಕರವಾಗಿದ್ದ ಮತ್ತು ಮಹಾಘೋರವಾಗಿದ್ದ ಕೇಕಯ-ದುರ್ಮುಖಾದಿಗಳ ಮಹಾಯುದ್ಧವು ನಡೆಯುತ್ತಿದ್ದಿತು. ಪರಸ್ಪರವಾಗಿ ಮಾಡಿದ ಅಪರಾಧಗಳನ್ನು ಸ್ಮರಿಸಿಕೊಂಡು ಸೂರ್ಯನು ಅಸ್ತಮಿಸುತ್ತಿದ್ದ ಮುಹೂರ್ತದಲ್ಲಿಯೂ ಸುದಾರುಣವಾದ ಯಮನ ರಾಷ್ಟ್ರದ ಪ್ರಜಾಸಂಖ್ಯೆಯನ್ನು ಹೆಚ್ಚಿಸುವ ಯುದ್ಧವನ್ನು ಮಾಡುತ್ತಿದ್ದರು. ಸಾವಿರಾರು ರಥಿಕರೂ ಕುದುರೆಸವಾರರೂ ಅಂದಿನ ಆ ಮಹಾಯುದ್ಧದಲ್ಲಿ ಮಡಿದರು. ಅನಂತರ ಕ್ರುದ್ಧನಾದ ಶಾಂತನುವಿನ ಮಗನಾದ ಭೀಷ್ಮನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಮಹಾತ್ಮರಾದ ಕೇಕಯರ ಸೈನ್ಯವನ್ನು ವಿನಾಶಗೊಳಿಸಿದನು. ನಿಶಿತವಾದ ಬಾಣಗಳಿಂದ ಪಾಂಚಾಲರ ಸೈನ್ಯಗಳನ್ನೂ ಯಮನ ಮನೆಗೆ ಕಳುಹಿಸಿ ಕೊಟ್ಟನು.

ಈ ರೀತಿಯಾಗಿ ಮಹಾಧನುಷ್ಮಂತನಾದ ಭೀಷ್ಮನು ಪಾಂಡವರ ಸೈನ್ಯವನ್ನು ಭಗ್ನಗೊಳಿಸಿ ಸೈನಿಕರನ್ನು ಶಿಬಿರಗಳಿಗೆ ಹಿಂದಿರುಗುವಂತೆ ಆಜ್ಞಾಪಿಸಿ, ತಾನೂ ಸಹ ತನ್ನ ಶಿಬಿರಕ್ಕೆ ತೆರಳಿದನು. ಧರ್ಮರಾಜನೂ ಕೂಡ ಧೃಷ್ಟದ್ಯುಮ್ನ-ವೃಕೋದರರು ಸುರಕ್ಷಿತರಾಗಿರುವುದನ್ನು ಕಂಡು ಪ್ರಹೃಷ್ಟನಾಗಿ ಅವರ ನೆತ್ತಿಯನ್ನು ಆಘ್ರಾಣಿಸಿ ತನ್ನ ಶಿಬಿರಕ್ಕೆ ತೆರಳಿದನು."

೭೯ನೆಯ ಅಧ್ಯಾಯವು ಮುಗಿಯಿತು.

## ಆರನೆಯ ದಿವಸದ ಯುದ್ಧದ ವಿಶ್ಲೇಷಣೆ

ಎರಡನೆಯ ದಿವಸ ಪಾಂಡವರು ರಚಿಸಿದ್ದ ಕ್ರೌಂಚವ್ಯೂಹವನ್ನು ಕೌರವರೂ, ಐದನೆಯ ದಿವಸ ಕೌರವರು ರಚಿಸಿದ್ದ ಮಕರವ್ಯೂಹವನ್ನು ಪಾಂಡವರೂ ರಚಿಸಿಕೊಂಡು ಯುದ್ಧವನ್ನು ಪ್ರಾರಂಭಿಸುತ್ತಾರೆ. ಮೊದಲು ಭೀಮನಿಗೂ-ದ್ರೋಣರಿಗೂ ಯುದ್ಧವು ಪ್ರಾರಂಭವಾಗುತ್ತದೆ. ಸಾರಥಿಯು ಸತ್ತುಹೋದರೂ ಸಾರಥ್ಯವನ್ನೂ ತಾವೇ ಮಾಡಿಕೊಂಡು ಶತ್ರುಗಳನ್ನು ವಿಧ್ವಂಸನಗೊಳಿಸುತ್ತಿದ್ದ ದ್ರೋಣರ ಪರಾಕ್ರಮವನ್ನು ನಾವಿಲ್ಲಿ ಕಾಣಬಹುದಾಗಿದೆ. ಭೀಷ್ಮ-ದ್ರೋಣರು ಪಾಂಡವರ ಸೈನ್ಯವನ್ನೂ–ಭೀಮಾರ್ಜುನರು ಕೌರವರ ಸೈನ್ಯವನ್ನೂ ಭಗ್ನಗೊಳಿಸುತ್ತಾರೆ. ೭೬ನೆಯ ಅಧ್ಯಾಯದಲ್ಲಿ ಧೃತ

ರಾಷ್ಟ್ರನ ಚಿಂತೆಯನ್ನು ನೆಪಮಾಡಿಕೊಂಡು ವ್ಯಾಸರು ಸೈನ್ಯದ ವ್ಯವಸ್ಥೆಯು ಹೇಗಿರಬೇಕು? ಧೃತರಾಷ್ಟ್ರನ ಸೈನ್ಯದ ವ್ಯವಸ್ಥೆಯು ಹೇಗಿತ್ತು?-ಎಂಬುದನ್ನು ಮನಮೋಹಕವಾಗಿ ಚಿತ್ರಿಸಿದ್ದಾರೆ. ಇಲ್ಲಿರುವ ಸೈನ್ಯವ್ಯವಸ್ಥೆಯ ಅನೇಕ ವಿಷಯಗಳು ಇಂದಿಗೂ ಅನುಕರಣೀಯವಾಗಿವೆ. ಸೈನ್ಯವು ಸುವ್ಯವಸ್ಥೆಯಿಂದಿರಬೇಕಾದುದು ನಿಜ. ಆದರೆ ಜೊತೆಗೆ ಜಯಿಸಲು ದೈವಬಲವೂ ಇರಬೇಕು–ಎಂಬ ನಿರ್ಧಾರಕ್ಕೆ ಧೃತರಾಷ್ಟ್ರನೂ ಬರುತ್ತಾನೆ. ಇತ್ತೀಚೆಗೆ ನಮ್ಮ ದೇಶದಲ್ಲಿ ನಡೆದ ಮೂರು ಯುದ್ಧಗಳ ಸಮಯದಲ್ಲಿ ದೇಶಾದ್ಯಂತವಾಗಿ ಎಲ್ಲ ದೇವರುಗಳಿಗೂ ಪೂಜೆಯನ್ನು ಸಲ್ಲಿಸಬೇಕೆಂದು ನಿರೂಪವನ್ನು ಹೊರಡಿಸಿದುದು ಇದೇ ಹಿನ್ನೆಲೆಯಲ್ಲಿಯೇ. ಭಾರತಯುದ್ಧದಲ್ಲಿ ಈ ವಿಷಯವು ಚೆನ್ನಾಗಿ ಮನದಟ್ಟಾಗುತ್ತದೆ. ಭೀಮನು ದುರ್ಯೋಧನಾದಿಗಳನ್ನು ಅನೇಕಬಾರಿ ಎದುರಿಸಿದರೂ ಅವರಲ್ಲಿ ಯಾರೊಬ್ಬರ ಸಂಹಾರವನ್ನೂ ಅಂದು ಭೀಮನು ಮಾಡುವುದಿಲ್ಲ. ಭೀಮನು ಏಕಾಕಿಯಾಗಿ, ಗದಾಪಾಣಿಯಾಗಿ ರಥವೂ ಇಲ್ಲದೇ ಶತ್ರುಸೈನ್ಯವನ್ನು ಧ್ವಂಸಮಾಡುತ್ತಾನೆ. ಇದರ ವರ್ಣನೆಯು ೭೭ನೆಯ ಅಧ್ಯಾಯದಲ್ಲಿ ಬರುತ್ತದೆ. ಕೆಲವು ಸಮಯದ ನಂತರ ಧೃಷ್ಟದ್ಯುಮ್ನನೂ ಭೀಮನ ಸಹಾಯಕ್ಕೆ ಹೋಗುತ್ತಾನೆ. ಈ ಅಧ್ಯಾಯದಲ್ಲಿ ಮುಖ್ಯವಾದ ಎರಡು ಅಸ್ತ್ರಗಳ ಪ್ರಯೋಗಸನ್ನಿವೇಶವಿದೆ. ಧೃಷ್ಟದ್ಯುಮ್ನನು ಪ್ರಮೋಹನಾಸ್ತ್ರವನ್ನು ಪ್ರಯೋಗಿಸಿ ಕೌರವರ ಸೇನೆಯನ್ನು ಪ್ರಜ್ಞಾಹೀನವನ್ನಾಗಿ ಮಾಡುತ್ತಾನೆ. ಅದಕ್ಕೆ ಪ್ರತಿಯಾಗಿ ದ್ರೋಣರು ಪ್ರಜ್ಞಾಸ್ತ್ರವನ್ನು ಪ್ರಯೋಗಿಸಿ ಪ್ರಮೋಹನಾಸ್ತ್ರವನ್ನು ವಿನಾಶಗೊಳಿಸಿ ಕೌರವಸೈನ್ಯಕ್ಕೆ ಯಥಾಪೂರ್ವವಾಗಿ ಪ್ರಜ್ಞೆಯು ಬರುವಂತೆ ಮಾಡುತ್ತಾರೆ. ದ್ರೋಣರು ದ್ರುಪದನನ್ನು ಪರಾಜಯಗೊಳಿಸುತ್ತಾರೆ. ಆ ಮಧ್ಯದಲ್ಲಿ ಅಭಿಮನ್ಯು ಪ್ರಮುಖರಾದ ಹನ್ನೆರಡು ಮಂದಿ ಯೋಧರು ಸೂಚೀಮುಖವೆಂಬ ವ್ಯೂಹವನ್ನು ರಚಿಸಿಕೊಂಡು ಶತ್ರುಗಳನ್ನು ಸಂಹರಿಸುತ್ತಾರೆ. ದ್ರೋಣರಿಗೂ ಧೃಷ್ಟದ್ಯುಮ್ನನಿಗೂ ಯುದ್ಧವಾಗುತ್ತದೆ. ಕಟ್ಟಕಡೆಗೆ ದ್ರೋಣರ ಸಂಹಾರಕ್ರಿಯೆಯನ್ನು ಯಾರಿಂದಲೂ ನಿಲ್ಲಿಸಲು ಸಾಧ್ಯವಾಗುವುದಿಲ್ಲ. ೭೮ನೆಯ ಅಧ್ಯಾಯದಲ್ಲಿ ದುರ್ಯೋಧನನೇ ಭೀಮಸೇನನೊಡನೆ ಯುದ್ಧವನ್ನು ಆರಂಭಿಸುತ್ತಾನೆ. ಅನಂತರ ಅದು ಸರ್ವವ್ಯಾಪಿಯಾಗುತ್ತದೆ. ಅಭಿಮನ್ಯು, ಐವರು ಕೇಕಯರಾಜರು, ಐವರು ದ್ರೌಪದಿಯ

ಮಕ್ಕಳು, ಧೃಷ್ಟಕೇತು–ಈ ಹನ್ನೆರಡು ಮಂದಿ ಯೋಧರೊಂದು ಕಡೆ. ದುರ್ಯೋಧನನ ತಮ್ಮಂದಿರು ಒಂದು ಕಡೆ. ಅವರ ಪರಸ್ಪರಯುದ್ಧದ ವರ್ಣನೆಯು ಈ ಅಧ್ಯಾಯವನ್ನು ತುಂಬಿದೆ. ಭೀಷ್ಮನೊಮ್ಮೆ–ಅರ್ಜುನ ನೊಮ್ಮೆ ಕಾಣಿಸಿಕೊಳ್ಳುತ್ತಾರೆ. ಕಡೆಯಲ್ಲಿ ರಣರಂಗದ ಘೋರವರ್ಣನೆಯಿದೆ. ೭೯ನೆಯ ಅಧ್ಯಾಯವು ಸಹ ಭೀಮ-ದುರ್ಯೋಧನರ ಯುದ್ಧದಿಂದಲೇ ಪ್ರಾರಂಭವಾಗುತ್ತದೆ. ದುರ್ಯೋಧನನು ಭೀಮನಿಂದ ಪರಾಜಯ ಹೊಂದುತ್ತಾನೆ. ಈ ಅಧ್ಯಾಯದಲ್ಲಿ ದ್ರೌಪದಿಯ ಐವರು ಮಕ್ಕಳೂ ಪ್ರತ್ಯೇಕ-ಪ್ರತ್ಯೇಕವಾಗಿ ಯುದ್ಧಮಾಡಿದ ವರ್ಣನೆಯಿದೆ. ಕಡೆಗೆ ಭೀಷ್ಮನು ಪಾಂಡವರ ಸೈನ್ಯವನ್ನು ಧ್ವಂಸಮಾಡಿದನೆಂಬ ವಿಷಯವಿದೆ. ಎರಡು ಕಡೆಗಳ ಲ್ಲಿಯೂ ಸೈನ್ಯದ ನಷ್ಟವಾದರೂ ಪ್ರಮುಖರಾದವರು ಯಾರೂ ಆ ದಿವಸ ಅಸುನೀಗುವುದಿಲ್ಲ. ಆದುದರಿಂದ ಉಭಯಪಕ್ಷಗಳಲ್ಲಿ ಯಾರಿಗೂ ಹೆಚ್ಚು ಆತಂಕವಿಲ್ಲ.

೮೦ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ದುರ್ಯೋಧನನಿಗೆ ಭೀಷ್ಮರ ಆಶ್ವಾಸನೆ: ಏಳನೆಯ ದಿವಸದ ಯುದ್ಧಕ್ಕೆ ಕೌರವಸೈನಿಕರ ಪ್ರಸ್ಥಾನ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಪರಸ್ಪರವಾಗಿ ಅಪರಾಧಿಗಳಾದ ಎಲ್ಲ ಶೂರರೂ ರಕ್ತ ದಿಂದ ತೋಯ್ದವರಾಗಿ ತಮ್ಮ-ತಮ್ಮ ಶಿಬಿರಗಳನ್ನು ಸೇರಿದರು. ಯಥಾ ಯೋಗ್ಯವಾಗಿ ವಿಶ್ರಮಿಸಿಕೊಂಡು, ಯುದ್ಧದಲ್ಲಿ ತೋರಿದ ಸಾಹಸಕ್ಕಾಗಿ ಒಬ್ಬರನ್ನು ಮತ್ತೊಬ್ಬರು ಪ್ರಶಂಸೆಮಾಡುತ್ತಾ ಪುನಃ ಯುದ್ಧಮಾಡುವ ಇಚ್ಛೆ ಯಿಂದ ಯುದ್ಧಕ್ಕೆ ಸಜ್ಜಾಗುತ್ತಿರುವಂತೆ ಕಂಡುಬಂದಿತು. ಆ ಸಮಯದಲ್ಲಿ ನಿನ್ನ ಮಗನಾದ ದುರ್ಯೋಧನನು ಚಿಂತೆಯಲ್ಲಿ ಮಗ್ನನಾಗಿದ್ದನು. ಅವನ ಶರೀರದಿಂದ ರಕ್ತವಿನ್ನೂ ಸ್ರವಿಸುತ್ತಲೇ ಇದ್ದಿತು. ಆ ಸ್ಥಿತಿಯಲ್ಲವನು ಪಿತಾಮಹನಾದ ಭೀಷ್ಮನ ಬಳಿಗೆ ಹೋಗಿ ಪ್ರಶ್ನಿಸಿದನು :

"ತಾತ! ನಮ್ಮ ಸೈನ್ಯಗಳು ಭಯಂಕರವಾಗಿ ರೌದ್ರರೂಪವನ್ನು ತಾಳಿ ಯುದ್ಧಮಾಡುತ್ತವೆ. ವ್ಯೂಹವೂ ಸಹ ಯಥಾವಿಧಿಯಾಗಿ ರಚಿಸಲ್ಪಡು

ತ್ತಿದೆ. ನಮ್ಮ ಕಡೆಯಲ್ಲಿ ಹೆಚ್ಚು ಸೈನಿಕರಿದ್ದು ಅಪಾರವಾದ ಧ್ವಜಗಳಿಂದಲೂ ಯುಕ್ತವಾಗಿದೆ. ನಮ್ಮ ಸೈನ್ಯದಲ್ಲಿ ನ್ಯೂನತೆಯನ್ನೇ ನಾನು ಕಾಣದವ ನಾಗಿದ್ದೇನೆ. ಹೀಗಿದ್ದರೂ ಸಹ ಪಾಂಡವಮಹಾರಥರು ಬಹಳ ಬೇಗ ನಮ್ಮ ವ್ಯೂಹವನ್ನು ಭೇದಿಸಿ ನಮ್ಮ ಸೈನ್ಯಕ್ಕೆ ಪೀಡೆಯನ್ನುಂಟುಮಾಡಿ ಅನೇಕ ಸೈನಿಕರನ್ನು ಸಂಹರಿಸಿ ಹೊರಟುಹೋಗುತ್ತಾರೆ. ಯುದ್ಧದಲ್ಲವರು ತಮ್ಮ ಪರಾಕ್ರಮದಿಂದ ಮತ್ತು ಬಾಣಪ್ರಯೋಗಕೌಶಲದಿಂದ ನಮ್ಮ ಸೈನಿಕರನ್ನು ಭ್ರಾಂತರನ್ನಾಗಿ ಮಾಡಿ ತಮ್ಮ ಕೀರ್ತಿಯನ್ನು ದಿನ-ದಿನಕ್ಕೂ ಹೆಚ್ಚಿಸಿ



ಕೊಳ್ಳುತ್ತಿದ್ದಾರೆ. ಪಾಂಡವರು ರಚಿಸಿಕೊಂಡಿದ್ದ ಮಕರವ್ಯೂಹವೂ ಸಹ ವಜ್ರದಂತೆ ದುರ್ಭೇದ್ಯವಾಗಿದ್ದಿತು. ನಮ್ಮ ವ್ಯೂಹಕ್ಕೆ ನುಗ್ಗಿದ ಭೀಮನು ಬಿಟ್ಟ ಯಮದಂಡಕ್ಕೆ ಸಮಾನವಾದ, ಪ್ರಕಾಶದಿಂದ ಕೂಡಿದ್ದ, ಘೋರವಾಗಿದ್ದ ಬಾಣಗಳಿಂದ ನಾನು ಕ್ಷತ-ವಿಕ್ಷತನಾದೆನು. ಕ್ರುದ್ಧನಾದ ಭೀಮಸೇನನನ್ನು ನೋಡಿದೊಡನೆಯೇ ನಾನು ಭಯದಿಂದ ಪ್ರಜ್ಞಾಹೀನನಾಗಿಬಿಡುತ್ತೇನೆ. ಈಗಲಂತೂ ನನಗೆ ಶಾಂತಿಯೆಂಬುದೇ ಇಲ್ಲವಾಗಿದೆ. ಸತ್ಯಸಂಧನೇ! ಕೇವಲ ನಿನ್ನ ಪ್ರಸಾದದಿಂದ (ಕೃಪೆಯಿಂದ) ಪಾಂಡವರನ್ನು ಸಂಹರಿಸಿ ಯುದ್ಧದಲ್ಲಿ ಜಯಗಳಿಸಲು ಇಚ್ಛಿಸಿದ್ದೇನೆ."

ಧೃತರಾಷ್ಟ್ರಮಹಾರಾಜ! ದುರ್ಯೋಧನನು ಹೀಗೆ ನಯ-ವಿನಯ

ಗಳಿಂದ ಮಾತನಾಡಿದರೂ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ಏಕಾಗ್ರಚಿತ್ತನಾದ, ಜಿತೇಂದ್ರಿಯನಾದ, ಗಂಗೆಯ ಮಗನಾದ ಭೀಷ್ಮನು–ಅವನ ಮುಖ ಭಾವದಿಂದಲೇ ಕೌರವನು ಕುಪಿತನಾಗಿರುವನೆಂಬುದನ್ನು ತಿಳಿದು ಗಟ್ಟಿಯಾಗಿ ನಗುತ್ತಾ ಹೇಳಿದನು :

"ರಾಜಕುಮಾರ! ವಿಶೇಷಪ್ರಯತ್ನದಿಂದ ನಾನು ಶತ್ರುಸೇನೆಯೊಳಕ್ಕೆ ನುಗ್ಗಿ ಮನಃಪೂರ್ವಕವಾಗಿ ನಿನಗೆ ವಿಜಯವಾಗುವಂತೆ ಮಾಡಬೇಕೆಂದೂ ಇದರಿಂದ ನೀನು ಸುಖಿಯಾಗಬೇಕೆಂದೂ ಇಚ್ಛಿಸಿ ಪ್ರಯತ್ನಿಸುತ್ತಿದ್ದೇನೆ. ನಿನಗೆ ವಿಜಯವನ್ನು ಸಾಧಿಸಿಕೊಡಬೇಕೆಂಬ ಆಶಯದಿಂದಿರುವ ನಾನು ನನ್ನ ರಕ್ಷಣೆಯ ವಿಷಯವಾಗಿ ಯೋಚಿಸುತ್ತಲೇ ಇಲ್ಲ. ನಾನೂ ಸಹ ಸೇನೆಯೊಳಕ್ಕೆ ನುಗ್ಗಿ ಹೋಗುತ್ತಿದ್ದೇನೆಯೇ ಹೊರತು ಆತ್ಮರಕ್ಷಣೆಯ ಸಲುವಾಗಿ ಯುದ್ಧದಿಂದ ಹಿಂದಕ್ಕೆ ಸರಿದಿರುವುದಿಲ್ಲ ಅಥವಾ ಬೇರೆಯವರನ್ನು ಯುದ್ಧಕ್ಕೆ ಕಳುಹಿಸಿ ನಾನು ಹಿಂದೆ ನಿಂತಿಲ್ಲ. ಪಾಂಡವರ ಸಹಾಯಕ್ಕೆ ಬಂದಿರುವ ಮಹಾರಥರು ಭಯಂಕರರಾಗಿದ್ದಾರೆ. ಯಶೋವಂತರಾಗಿದ್ದಾರೆ. ಶೂರತಮರಾಗಿದ್ದಾರೆ. ಸಕಲವಿಧವಾದ ಶಸ್ತ್ರಾಸ್ತ್ರಗಳನ್ನೂ ಬಲ್ಲವರಾಗಿದ್ದಾರೆ. ಅವರು ಬಳಲಿಕೆಯನ್ನೇ ಕಾಣದವರಾಗಿದ್ದಾರೆ. ಎಷ್ಟುಹೊತ್ತು ಯುದ್ಧಮಾಡಿದರೂ ಅವರಿಗೆ ಬಳಲಿಕೆಯೇ ಆಗುವುದಿಲ್ಲ. ಮೇಲಾಗಿ ಅವರು ರೋಷವೆಂಬ ವಿಷವನ್ನೇ ಕಾರುತ್ತಾ ಯುದ್ಧಮಾಡುತ್ತಾರೆ. ದುರ್ಯೋಧನ! ಅವರು ವೀರ್ಯ-ಪರಾಕ್ರಮಗಳಿಂದ ಕೊಬ್ಬಿದ್ದಾರೆ. ನಿನ್ನೊಡನೆ ಶತ್ರುತ್ವವನ್ನು ಹೊಂದಿದ್ದಾರೆ. ಅವರನ್ನು ಶೀಘ್ರವಾಗಿ ಪರಾಜಯಗೊಳಿಸಲು ಖಂಡಿತವಾಗಿಯೂ ಸಾಧ್ಯ ವಾಗುವುದಿಲ್ಲ. ನನ್ನ ವಿಷಯವಾಗಿ ಹೇಳುವುದಾದರೆ : ನಾನು ಮನಃಪೂರ್ವಕ ವಾಗಿ ನನ್ನ ಪ್ರಾಣಗಳನ್ನೇ ಒತ್ತೆಯಿಟ್ಟು ಪಾಂಡವರ ಸೇನೆಯನ್ನು ಎದುರಿಸಿ ಯುದ್ಧಮಾಡುತ್ತಿದ್ದೇನೆ. ಮಹಾನುಭಾವನೇ! ನಿನ್ನ ಸಲುವಾಗಿ ನಾನು ನನ್ನ ಜೀವಿತವನ್ನು ರಕ್ಷಿಸಿಕೊಳ್ಳುವ ಆಶಯವುಳ್ಳವನಾಗಿಲ್ಲ. ನಿನ್ನ ಸಲುವಾಗಿ ನಾನು ದೇವತೆಗಳಿಂದೊಡಗೂಡಿದ ಭಯಂಕರರಾದ ದೈತ್ಯರನ್ನೂ ಸಹ ದಹಿಸಿಯೇನು. ಹೀಗಿರುವಾಗ ಮಾನವಸಾಮಾನ್ಯರಾದ ಶತ್ರುಸೈನಿಕರ ವಿಷಯದಲ್ಲಿ ಹೇಳತಕ್ಕದ್ದೇನಿದೆ? ಮಹಾರಾಜ! ನಾನು ಪಾಂಡವರೊಡ ನೆಯೂ ಯುದ್ಧಮಾಡುತ್ತೇನೆ. ನಿನಗೆ ಪ್ರಿಯವಾಗುವ ಎಲ್ಲ ಕಾರ್ಯಗಳನ್ನೂ ಮಾಡುತ್ತೇನೆ."

ಧೃತರಾಷ್ಟ್ರ! ಪಿತಾಮಹನ ಮಾತನ್ನು ಕೇಳಿ ದುರ್ಯೋಧನನ ಮನಸ್ಸು ಪ್ರಸನ್ನವಾಯಿತು. ಹೃಷ್ಟನಾದ ನಿನ್ನ ಮಗನು ಎಲ್ಲ ಸೈನ್ಯಗಳನ್ನೂ ಮತ್ತು ಎಲ್ಲ ರಾಜರನ್ನೂ ಕುರಿತು 'ನಿರ್ಗಚ್ಛತ' 'ಯುದ್ಧಕ್ಕೆ ಹೊರಡಿರಿ' ಎಂದು ಆಜ್ಞಾಪಿಸಿದನು. ದುರ್ಯೋಧನನ ಆಜ್ಞಾನುಸಾರವಾಗಿ ರಥ-ಗಜಾಶ್ವ-ಪದಾತಿಗಳಿಂದ ಸಮೃದ್ಧವಾದ ಮಹಾಸೈನ್ಯವು ಹೊರಟಿತು. ನಿನ್ನ ಆ ವಿಶಾಲವಾದ ಸೇನೆಯು ನಾನಾವಿಧವಾದ ಶಸ್ತ್ರಾಸ್ತ್ರಗಳಿಂದ ಸಂಪನ್ನವಾಗಿದ್ದಿತು. ಸೈನಿಕರು ಅಮಿತವಾದ ಹರ್ಷೋತ್ಸಾಹವುಳ್ಳವರಾಗಿದ್ದರು. ರಣರಂಗದಲ್ಲಿ ಸಜ್ಜಾಗಿನಿಂತಿದ್ದ ರಥ-ಗಜಾಶ್ವ-ಪದಾತಿಗಳಿಂದ ಆ ಮಹಾಸೇನೆಯು ಬಹಳವಾಗಿ ವಿರಾಜಿಸಿತು. ನಿನ್ನ ಸೈನಿಕಗಣಗಳು ಶಸ್ತ್ರಾಸ್ತ್ರವಿದರಾದ ವೀರಯೋಧರಿಂದ ನಿಯಂತ್ರಿಸಲ್ಪಟ್ಟಿದ್ದುವು. ವಿಧಿವತ್ತಾಗಿ ಅನುಶಾಸಿತರಾಗಿ ರಣರಂಗಕ್ಕೆ ಪ್ರಯಾಣಮಾಡುತ್ತಿದ್ದ ರಥಸಮೂಹಗಳಿಂದ ಮತ್ತು ಪದಾತಿ- ಗಜಾಶ್ವ ಸಮೂಹಗಳ ಪದಸಂಘಟ್ಟನೆಗಳಿಂದ ಉದ್ಭೂತವಾದ ಧೂಳಿಯು ಸೂರ್ಯನ ಕಿರಣಗಳನ್ನೂ ಆಚ್ಛಾದಿಸುತ್ತಾ ಬಾಲಸೂರ್ಯನಂತೆ ಎಳೆ ಗೆಂಪಾದ ಬಣ್ಣವುಳ್ಳದ್ದಾಗಿ ಶೋಭಿಸುತ್ತಿದ್ದಿತು. ರಥಗಳ ಮೇಲೂ ಆನೆಗಳ ಮೇಲೂ ಪ್ರತಿಷ್ಠಿತವಾಗಿದ್ದ ಪತಾಕೆಗಳು ಗಾಳಿಯ ಬೀಸುವಿಕೆಯಿಂದ ಫಟ-ಫಟನೆ ಹಾರಾಡುತ್ತಾ ಸುತ್ತಲೂ ಪ್ರಕಾಶಿಸುತ್ತಿದ್ದುವು. ಆನೆಗಳು- ಗುಂಪು-ಗುಂಪಾಗಿ ಮಾವಟಿಗರಿಂದ ಸರಿಯಾದ ರೀತಿಯಲ್ಲಿ ನಡೆಸಲ್ಪಡುತ್ತಾ ಸುತ್ತಲೂ ಪ್ರಕಾಶಿಸುತ್ತಿದ್ದುವು. ನಾನಾವರ್ಣಗಳ ಪತಾಕೆಗಳನ್ನು ಹೊಂದಿದ್ದ ಅವುಗಳು ಆಕಾಶದಲ್ಲಿ ಮಿಂಚಿನಿಂದ ಕೂಡಿದ ಮೇಘಗಳಂತೆಯೇ ಕಾಣುತ್ತಿದ್ದುವು. ಯುಗದ ಆದಿಯಲ್ಲಿ ದೇವತೆಗಳೂ ಮತ್ತು ದೈತ್ಯರೂ ಸೇರಿ ಅಮೃತಪ್ರಾಪ್ತಿಗಾಗಿ ಸಮುದ್ರವನ್ನು ಕಡೆಯುತ್ತಿರುವಾಗ ಯಾವ ಘೋರ ಶಬ್ದವಾಗುತ್ತಿದ್ದಿತೋ–ಅದೇ ವಿಧವಾದ ಅತಿಘೋರವಾದ ತುಮುಲಶಬ್ದವು ರಾಜರು ಮಾಡುತ್ತಿದ್ದ ಧನುಷ್ಟೇಂಕಾರದಿಂದ ಉಂಟಾಯಿತು. ಮಹಾರಾಜ! ನಿನ್ನ ಮಗನ ಆ ಮಹಾಸೇನೆಯು ಉಗ್ರವಾಗಿ ಕಾಣುತ್ತಿದ್ದ ಆನೆಗಳಿಂದ ಸಮೃದ್ಧವಾಗಿದ್ದಿತು. ಅನೇಕರೂಪಗಳಿಂದಲೂ ನಾನಾ ವರ್ಣಗಳಿಂದಲೂ ವಿರಾಜಿಸುತ್ತಿದ್ದಿತು. ಶತ್ರುಗಳ ಸೈನ್ಯವನ್ನು ಸಂಹರಿಸುವ ಸಾಮರ್ಥ್ಯದಿಂದ ಕೂಡಿದ್ದ ಆ ಮಹಾಸೈನ್ಯವು ಆ ಸಮಯದಲ್ಲಿ ಪ್ರಲಯ

ಕಾಲದಲ್ಲಿ ಹುಟ್ಟಿಕೊಳ್ಳುವ ಮೋಡಗಳ ಸಮೂಹದಂತೆಯೇ ಭಯಂಕರ ವಾಗಿ ಕಾಣುತ್ತಿದ್ದಿತು."

೮೦ನೆಯ ಅಧ್ಯಾಯವು ಮುಗಿಯಿತು.

೮೧ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಏಳನೆಯ ದಿವಸದ ಯುದ್ಧ ಪ್ರಾರಂಭ : ಮಂಡಲ ಮತ್ತು ವಜ್ರವ್ಯೂಹಗಳ ರಚನೆ : ಭಯಂಕರಯುದ್ಧ

ಸಂಜಯನು ಧೃತರಾಷ್ಟ್ರನೊಡನೆ ಹೇಳುತ್ತಾನೆ :

"ಮಹಾರಾಜ! ಪುನಃ ಚಿಂತಾಮಗ್ನನಾಗಿದ್ದ ನಿನ್ನ ಮಗನನ್ನು ಕುರಿತು ಭರತಶ್ರೇಷ್ಠನಾದ ಗಾಂಗೇಯನು ಅವನ ಮನಸ್ಸಿಗೆ ಹರ್ಷವನ್ನುಂಟು ಮಾಡುವ ಈ ಮಾತನ್ನು ಹೇಳಿದನು :

"ದುರ್ಯೋಧನ! ನಾನು, ದ್ರೋಣರು, ಶಲ್ಯ, ಸಾತ್ವತವಂಶೀಯ ನಾದ ಕೃತವರ್ಮಾ, ಅಶ್ವತ್ಥಾಮಾ, ವಿಕರ್ಣ, ಭಗದತ್ತ, ಸುಬಲನ ಮಗನಾದ ಶಕುನಿ, ಅವಂತಿದೇಶದ ರಾಜಕುಮಾರರಾದ ವಿಂದಾನುವಿಂದರು, ಬಾಹ್ಲಿಕ ದೇಶದ ವೀರರೊಡನಿರುವ ಬಾಹ್ಲೀಕ, ಬಲಿಷ್ಠನಾದ ತ್ರಿಗರ್ತರಾಜ, ಜಯಿ ಸಲು ಅಸಾಧ್ಯನಾದ ಮಗಧರಾಜ, ಕೋಸಲನರೇಶನಾದ ಬೃಹದ್ಬಲ, ಚಿತ್ರ ಸೇನ, ವಿವಿಂಶತಿ, ದೊಡ್ಡ-ದೊಡ್ಡ ಧ್ವಜಗಳಿಂದ ಶೋಭಾಯಮಾನವಾಗಿ ಕಾಣುತ್ತಿರುವ ಅನೇಕ ಸಾವಿರ ರಥಗಳು, ಕುದುರೆಸವಾರರಿಂದ ಯುಕ್ತವಾದ ದೇಶೀಯ ಕುದುರೆಗಳು, ಗಂಡಸ್ಥಲದಿಂದ ಮದೋದಕವನ್ನು ಸುರಿಸುತ್ತಿ ರುವ ಮದಿಸಿದ ಆನೆಗಳು, ನಾನಾವಿಧವಾದ ಆಯುಧಗಳನ್ನೂ ಧ್ವಜಗಳನ್ನೂ ಧರಿಸಿರುವ ನಾನಾದೇಶದ ಪದಾತಿಸೈನಿಕರು–ಇವರೆಲ್ಲರೂ ನಿನ್ನ ಸಲುವಾಗಿ ಯುದ್ಧಮಾಡಲು ರಣಾಂಗಣಕ್ಕೆ ಬಂದಿರುತ್ತಾರೆ. ಇವರು ಮಾತ್ರವಲ್ಲ ; ಇನ್ನೂ ಅನೇಕ ಬಹುಸಂಖ್ಯಾತಸೈನಿಕರೂ ನಿನ್ನ ಸಲುವಾಗಿ ಪ್ರಾಣಗಳನ್ನೂ ಒತ್ತೆಯಿಟ್ಟು ಯುದ್ಧಮಾಡಲು ಸಿದ್ಧರಾಗಿರುತ್ತಾರೆ. ಇವರು ದೇವತೆಗಳನ್ನಾದರೂ ಯುದ್ಧದಲ್ಲಿ ಜಯಿಸಿಯಾರೆಂಬುದು ನನ್ನ ಅಭಿಮತವಾಗಿದೆ. ಆದರೆ ನಿನಗೆ ಹಿತವಾದ ಮಾತುಗಳನ್ನು ಹೇಳುವುದೂ ನನ್ನ ಕರ್ತವ್ಯವೇ ಆಗಿದೆ.

**ಅಶಕ್ಯಾಃ ಪಾಣ್ಡವಾ ಜೇತುಂ ದೇವೈರಪಿ ಸವಾಸವೈಃ ॥೮॥**

ನಮ್ಮ ಸೈನಿಕರು ಅಸಂಖ್ಯಾತರಾಗಿ ಅಜಯ್ಯರಾಗಿದ್ದರೂ ಪಾಂಡವರ ವಿಷಯದಲ್ಲಿ ಹೇಳುವುದಾದರೆ–ಅವರನ್ನು ಜಯಿಸಲು ಇಂದ್ರಸಹಿತರಾದ ದೇವತೆಗಳಿಂದಲೂ ಸಾಧ್ಯವಾಗುವುದಿಲ್ಲ. ಅವರು ಭಗವಂತನಾದ ವಾಸು ದೇವನ ಸಹಾಯವನ್ನು ಪಡೆದಿರುತ್ತಾರೆ. ಮಹೇಂದ್ರನಿಗೆ ಸದೃಶವಾದ ಪರಾಕ್ರಮವುಳ್ಳವರೂ ಆಗಿರುತ್ತಾರೆ. ಆದರೆ ಅವರು ಅಜಯ್ಯರೆಂಬ ಕಾರಣದಿಂದ ನಾನು ನಿನ್ನ ವಿಜಯಕ್ಕೆ ಪ್ರಯತ್ನಿಸುವುದಿಲ್ಲವೆಂದು ಮಾತ್ರ ಭಾವಿಸಬೇಡ. ಸರ್ವಪ್ರಯತ್ನದಿಂದಲೂ ನಾನು ನೀನು ಹೇಳಿದಂತೆಯೇ ಮಾಡುತ್ತೇನೆ. ಜಯಗಳಿಸಿಕೊಡಲೂ ಸಂಪೂರ್ಣವಾಗಿ ಪ್ರಯತ್ನಿಸುತ್ತೇನೆ. ಪಾಂಡವರನ್ನಾದರೂ ನಾನು ಯುದ್ಧದಲ್ಲಿ ಜಯಿಸುತ್ತೇನೆ ; ಅಥವಾ ನನ್ನನ್ನಾ ದರೂ ಪಾಂಡವರು ಜಯಿಸುತ್ತಾರೆ."–ಹೀಗೆ ಹೇಳಿ ಭೀಷ್ಮನು ದುರ್ಯೋ ಧನನಿಗೆ ಶುಭಾವಹವಾದ ವೀರ್ಯವತ್ತಾದ ವಿಶಲ್ಯಕರಣೀ ಎಂಬ ಔಷಧಿ ಯನ್ನು ಕೊಟ್ಟನು. ಆ ವಿಶಲ್ಯಕರಣಿಯ ಪ್ರಭಾವದಿಂದಾಗಿ ದುರ್ಯೋಧನನ ಅಂಗಾಂಗಗಳಲ್ಲಿಯೂ ಚುಚ್ಚಿಕೊಂಡಿದ್ದ ಬಾಣಗಳು ಸುಲಭವಾಗಿ ಹೊರ ಬಂದುವು ಮತ್ತು ಬಾಣಗಳ ಪ್ರಹಾರದಿಂದ ಉಂಟಾಗಿದ್ದ ವೇದನೆಯೂ ಹೊರಟುಹೋಯಿತು. ವಿಶಲ್ಯಕರಣಿಯ ಮಹಿಮೆಯಿಂದಾಗಿ ದುರ್ಯೋ ಧನನು ವಿಶಲ್ಯನಾದನು. (ಚೂಪಾದ ಮೊನೆಯುಳ್ಳ ಬಾಣಗಳ ಅಗ್ರಭಾಗಗಳು ಅವನ ಶರೀರದಿಂದ ಹೊರಬಂದುವು.)

ಅನಂತರ ನಿರ್ಮಲವಾಗಿದ್ದ ಪ್ರಾತಃಕಾಲದಲ್ಲಿ ವ್ಯೂಹಶಾಸ್ತ್ರವಿಶಾರದ ನಾದ, ವೀರ್ಯವಂತನಾದ, ಮನುಜಶ್ರೇಷ್ಠನಾದ ಭೀಷ್ಮನು ಮಂಡಲವೆಂಬ ವ್ಯೂಹವನ್ನು ತಾನೇ ನಿರ್ಮಿಸಿದನು. ಆ ಮಂಡಲವ್ಯೂಹವು ನಾನಾವಿಧವಾದ ಅಸ್ತ್ರ-ಶಸ್ತ್ರಗಳಿಂದ ಪರ್ಯಾಪ್ತವಾಗಿದ್ದಿತು. ಮುಖ್ಯ-ಮುಖ್ಯರಾದ ಯೋಧ ರಿಂದ ಪೂರ್ಣವಾಗಿದ್ದಿತು. ಆನೆ ಮತ್ತು ಕಾಲಾಳುಗಳಿಂದಲೂ ಅನೇಕ ಸಾವಿರ ರಥಗಳಿಂದಲೂ ಪರಿವೃತವಾಗಿದ್ದಿತು. ಋಷ್ಟಿ ಮತ್ತು ತೋಮರಗಳನ್ನು ಹಿಡಿದಿದ್ದ ಅಶ್ವಾರೋಹಿಗಳ ದೊಡ್ಡ ಸಮುದಾಯದಿಂದ ಕೂಡಿದ್ದಿತು.

**ನಾಗೇ ನಾಗೇ ರಥಾಃ ಸಪ್ತ ಸಪ್ತ ಚಾಶ್ವಾ ರಥೇ ರಥೇ ।**
**ಅನ್ವಶ್ವಂ ದಶ ಧಾನುಷ್ಕಾ ಧಾನುಷ್ಕೇ ದಶ ಚರ್ಮಿಣಃ ॥೧೪॥**

ಒಂದೊಂದು ಆನೆಯ ಹಿಂಬದಿಯಲ್ಲಿಯೂ ಏಳೇಳು ರಥಗಳಿದ್ದುವು.

ಒಂದೊಂದು ರಥದೊಡನೆಯೂ ಏಳೇಳು ಕುದುರೆಗಳಿದ್ದುವು. ಒಂದೊಂದು ಕುದುರೆಯ ಜೊತೆಯಲ್ಲಿಯೂ ಹತ್ತು-ಹತ್ತು ಮಂದಿ ಧನುರ್ಧಾರಿಗಳಾದ ಯೋಧರಿದ್ದರು. ಒಬ್ಬೊಬ್ಬ ಯೋಧನ ಜೊತೆಯಲ್ಲಿಯೂ ಕತ್ತಿ-ಗುರಾಣಿ ಗಳನ್ನು ಹಿಡಿದಿದ್ದ ಹತ್ತು ಮಂದಿ ಪದಾತಿಗಳಿದ್ದರು.

ಮಹಾರಾಜ! ಮಹಾರಥರೆಲ್ಲರೂ ಸೇರಿ ನಿನ್ನ ಅಪಾರಸೈನ್ಯವನ್ನು ಇಂತಹ ವ್ಯೂಹಕ್ರಮದಲ್ಲಿ ನಿಲ್ಲಿಸಿದ್ದರು. ಭೀಷ್ಮನಿಂದ ರಕ್ಷಿತವಾಗಿದ್ದ ಮಂಡಲ ವ್ಯೂಹವು ಮಹಾಯುದ್ಧಕ್ಕೆ ಸಜ್ಜಾಗಿ ನಿಂತಿದ್ದಿತು. ಹತ್ತುಸಾವಿರ ಕುದುರೆಗಳು, ಅಷ್ಟೇ ಸಂಖ್ಯೆಯ ಆನೆಗಳು, ಹತ್ತುಸಾವಿರ ರಥಗಳು ಮತ್ತು ಕವಚಗಳನ್ನು ಧರಿಸಿದ್ದ ಚಿತ್ರಸೇನನೇ ಮೊದಲಾದ ಶೂರರಾದ ನಿನ್ನ ಮಕ್ಕಳು ಪಿತಾಮಹ ನನ್ನು ರಕ್ಷಿಸುತ್ತಿದ್ದರು. ಅವರೆಲ್ಲರಿಂದಲೂ ಭೀಷ್ಮನು ರಕ್ಷಿಸಲ್ಪಡುತ್ತಿದ್ದನು. ಭೀಷ್ಮನಿಂದ ಅವರೆಲ್ಲರೂ ರಕ್ಷಿತರಾಗಿದ್ದರು. ಈ ರೀತಿಯಲ್ಲಿ ಪರಸ್ಪರವಾಗಿ ರಕ್ಷಣೆಗಳನ್ನು ವ್ಯವಸ್ಥೆಗೊಳಿಸಿ ಮಹಾಬಲರಾದ ರಾಜರು ಯುದ್ಧಸನ್ನದ್ಧ ರಾಗಿರುವುದು ಅಲ್ಲಿ ಕಂಡುಬರುತ್ತಿದ್ದಿತು. ಕವಚವನ್ನು ಧರಿಸಿ ರಥದಲ್ಲಿ ಕುಳಿತಿದ್ದ ಶ್ರೀಸಂಪನ್ನನಾದ ದುರ್ಯೋಧನನು ಸ್ವರ್ಗದಲ್ಲಿರುವ ಇಂದ್ರ ನಂತೆಯೇ ವಿರಾಜಿಸಿದನು. ಅನಂತರ ನಿನ್ನ ಮಕ್ಕಳೆಲ್ಲರೂ ಸೇರಿ ಮಾಡಿದ ಸಿಂಹನಾದಗಳ ಮಹಾಶಬ್ದವು ಕೇಳಿಬಂದಿತು. ಅದರ ಜೊತೆಯಲ್ಲಿಯೇ ವಿಪುಲವಾದ ರಥಚಕ್ರಗಳ ಗಡ-ಗಡಾ ಶಬ್ದವೂ, ವಾದಿತ್ರಗಳ (ನಾಲ್ಕು ವಿಧ ವಾದ್ಯಗಳ) ಧ್ವನಿಯೂ ಕೇಳಿಸಿತು. ಭೀಷ್ಮನಿಂದ ರಚಿತವಾಗಿದ್ದ ಮಂಡಲ ವೆಂಬ ಕೌರವಸೇನೆಯ ಮಹಾವ್ಯೂಹವೂ ಪಶ್ಚಿಮಾಭಿಮುಖವಾಗಿದ್ದಿತು. ಅದು ಅಭೇದ್ಯವಾಗಿಯೂ, ಶತ್ರುಸಂಹಾರಕರವಾಗಿಯೂ ಇದ್ದಿತು. ಶತ್ರು ಗಳಿಗೆ ದುರಾಸದವಾದ ಆ ಮಂಡಲಮಹಾವ್ಯೂಹವನ್ನು ನೋಡಿ ಯುಧಿಷ್ಠಿರ ರಾಜನು ವಜ್ರವೆಂಬ ವ್ಯೂಹವನ್ನು ತಾನೇ ರಚಿಸಿದನು. ಸೈನ್ಯವನ್ನು ವಜ್ರ ವ್ಯೂಹಕ್ರಮದಲ್ಲಿ ನಿಲ್ಲಿಸಿದನಂತರ ಆಯಾಯಾ ಸ್ಥಾನಗಳಲ್ಲಿ ನಿಂತಿದ್ದ ರಥಿಗಳು, ಕುದುರೆಸವಾರರು ಮತ್ತು ಎಲ್ಲ ಸೈನಿಕರೂ ಸಿಂಹನಾದಗಳನ್ನು ಮಾಡಿದರು. ಪ್ರಹಾರಕುಶಲರಾದ ಶೂರರು ವ್ಯೂಹವನ್ನು ಭೇದಿಸುವ ಇಚ್ಛೆಯಿಂದ ಪರಸ್ಪರ ಯುದ್ಧಾಕಾಂಕ್ಷಿಗಳಾಗಿ ಸೈನ್ಯದೊಡನೆ ಹೊರಟರು.

ದ್ರೋಣರು ಮತ್ಸ್ಯನನ್ನು ಎದುರಿಸಿದರು. ಅಶ್ವತ್ಥಾಮನು ಶಿಖಂಡಿ

ಯನ್ನು ಎದುರಿಸಿದನು. ದುರ್ಯೋಧನರಾಜನು ದ್ರುಪದನ ಮೇಲೆ ದಾಳಿ ನಡೆಸಿದನು. ನಕುಲ-ಸಹದೇವರು ತಮ್ಮ ಸೋದರಮಾವನಾದ ಶಲ್ಯನನ್ನು ಎದುರಿಸಿ ನಿಂತರು. ಅವಂತಿಯ ರಾಜಕುಮಾರರಾದ ವಿಂದಾನುವಿಂದರು ಇರಾವಂತನ ಮೇಲೆ ಆಕ್ರಮಣನಡೆಸಿದರು. ದುರ್ಯೋಧನನ ಕಡೆಯ ಎಲ್ಲ ರಾಜರೂ ಒಟ್ಟಾಗಿ ಸೇರಿ ಅರ್ಜುನನನ್ನು ಮುತ್ತಿದರು. ಮುಂದೆ-ಮುಂದೆ ಹೋಗುತ್ತಿದ್ದ ಹಾರ್ದಿಕ್ಯನನ್ನು ಭೀಮಸೇನನು ತಡೆದು ನಿಲ್ಲಿಸಿ ಅವನೊಡನೆ ಯುದ್ಧವನ್ನು ಪ್ರಾರಂಭಿಸಿದನು. ಶಕ್ತಿಶಾಲಿಯಾದ ಅಭಿಮನ್ಯುವು ನಿನ್ನ ಮಕ್ಕಳಾದ ಚಿತ್ರಸೇನ, ವಿಕರ್ಣ ಮತ್ತು ದುರ್ಮರ್ಷಣರೊಡನೆ ಯುದ್ಧವನ್ನಾರಂಭಿಸಿದನು. ಮಹಾಧನುಷ್ಮಂತನಾದ ಪ್ರಾಗ್ಜ್ಯೋತಿಷನು ರಾಕ್ಷಸೋತ್ತಮನಾದ, ಹಿಡಿಂಬೆಯ ಮಗನಾದ ಘಟೋತ್ಕಚನ ಬಳಿಗೆ–ಮದಿಸಿದ ಆನೆಯು ಮತ್ತೊಂದು ಮದಿಸಿದ ಆನೆಯ ಬಳಿಗೆ ಹೋಗುವಂತೆ–ಯುದ್ಧಮಾಡಲು ವೇಗವಾಗಿ ಹೋದನು. ಸಸೈನ್ಯನಾದ, ಯುದ್ಧದುರ್ಮದನಾದ ಸಾತ್ಯಕಿಯನ್ನು ಕ್ರುದ್ಧನಾದ ಅಲಂಬುಷರಾಕ್ಷಸನು ಆಕ್ರಮಿಸಿದನು. ಭೂರಿಶ್ರವಸನು ಪ್ರಯತ್ನಪೂರ್ವಕವಾಗಿ ಧೃಷ್ಟಕೇತುವಿನೊಡನೆ ಯುದ್ಧವನ್ನು ಪ್ರಾರಂಭಿ ಸಿದನು. ಧರ್ಮಪುತ್ರನಾದ ಯುಧಿಷ್ಠಿರನು ಶ್ರುತಾಯುಷನ ಮೇಲೆ ಆಕ್ರಮಣ ಮಾಡಿದನು. ಯುದ್ಧಸಮಯದಲ್ಲಿ ಚೇಕಿತಾನನು ಕೃಪಾಚಾರ್ಯರೊಡನೆಯೇ ಯುದ್ಧಮಾಡಿದನು. ಉಳಿದ ಪಾಂಡವರ ಕಡೆಯ ರಾಜರೆಲ್ಲರೂ ಮಹಾರಥನಾದ ಭೀಷ್ಮನ ಮೇಲೆ ಪ್ರಯತ್ನಪೂರ್ವಕವಾಗಿ ಆಕ್ರಮಣವನ್ನು ನಡೆಸಿದರು. ದುರ್ಯೋಧನನ ಕಡೆಯ ರಾಜಸಮೂಹಗಳೆಲ್ಲವೂ ಶಕ್ತಿ-ತೋಮರ-ನಾರಾಚ-ಗದೆ ಮತ್ತು ಪರಿಘಗಳನ್ನು ಹಿಡಿದುಕೊಂಡು ಧನಂಜಯನನ್ನು ಸುತ್ತುವರಿದುವು.

ರಾಜರೆಲ್ಲರೂ ತನ್ನನ್ನು ಸುತ್ತುವರಿಯುತ್ತಿರುವುದನ್ನು ಕಂಡು ಕ್ರುದ್ಧನಾದ ಅರ್ಜುನನು ಶ್ರೀಕೃಷ್ಣನನ್ನು ಕುರಿತು ಹೇಳಿದನು : “ಕೇಶವ! ರಣಾಂಗಣದಲ್ಲಿ ದುರ್ಯೋಧನನ ಸೇನೆಯನ್ನು ನೋಡು! ವ್ಯೂಹರಚನೆಯಲ್ಲಿ ಪಾರಂಗತನಾದ ಮಹಾತ್ಮನಾದ ಭೀಷ್ಮನು ದುರ್ಯೋಧನನ ಸೈನ್ಯವನ್ನು ಮಂಡಲವ್ಯೂಹಕ್ರಮದಲ್ಲಿ ನಿಲ್ಲಿಸಿದ್ದಾನೆ. ಯುದ್ಧಾಕಾಂಕ್ಷಿಗಳಾದ, ಶೂರರಾದ, ಕವಚಧಾರಿಗಳಾದ ಈ ಸೈನಿಕರನ್ನು ನೋಡು. ತನ್ನ ಸೋದರ

ರೊಡನೆ ತ್ರಿಗರ್ತರಾಜನೂ ಇಲ್ಲಿಯೇ ಇದ್ದಾನೆ. ಜನಾರ್ದನ! ನನ್ನೊಡನೆ ಯಾರು ಯುದ್ಧಮಾಡಲು ಇಚ್ಛಿಸಿದ್ದಾರೆಯೋ ಅವರೆಲ್ಲರನ್ನೂ ಈ ರಣಾಂಗಣದಲ್ಲಿ ನೀನು ನೋಡುತ್ತಿರುವಂತೆಯೇ ನಾಶಪಡಿಸುತ್ತೇನೆ.”

ಮಹಾರಾಜ! ಇಷ್ಟು ಹೇಳಿ ಕೌಂತೇಯನು ಧನುಸ್ಸಿನ ಶಿಂಜಿನಿಯನ್ನು ಒಮ್ಮೆ ಒರೆಸಿ ನರಾಧಿಪತಿಗಳ ಸಮೂಹದ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದನು. ಅದಕ್ಕೆ ಪ್ರತಿಯಾಗಿ ಮಹಾಧನುಷ್ಮಂತರಾದ ರಾಜರೂ ಸಹ ವರ್ಷಾಕಾಲದಲ್ಲಿ ಮೋಡಗಳು ನೀರಿನ ಧಾರೆಗಳಿಂದ ಸರೋವರವನ್ನು ತುಂಬಿಬಿಡುವಂತೆ–ಅರ್ಜುನನನ್ನು ಬಾಣಗಳಿಂದ ತುಂಬಿಬಿಟ್ಟರು. ಕೃಷ್ಣಾರ್ಜುನರಿಬ್ಬರೂ ಬಾಣಗಳಿಂದ ಆಚ್ಛಾದಿತರಾದುದನ್ನು ಕಂಡು ನಿನ್ನ ಸೈನ್ಯದಲ್ಲಿ ದೊಡ್ಡ ಹಾಹಾಕಾರವುಂಟಾಯಿತು. (ಕೋಲಾಹಲವುಂಟಾಯಿತು.) ಕೃಷ್ಣಾರ್ಜುನರು ಬಾಣಗಳಿಂದ ಮುಚ್ಚಲ್ಪಟ್ಟಿದ್ದನ್ನು ಕಂಡು ದೇವತೆಗಳೂ, ದೇವರ್ಷಿಗಳೂ, ಸರ್ವದೇವತೆಗಳಿಂದೊಡಗೂಡಿದ ಗಂಧರ್ವರೂ ಬಹುವಾಗಿ ಅಚ್ಚರಿಗೊಂಡರು. ಮಹಾರಾಜ! ಆ ಸಮಯದಲ್ಲಿ ಕ್ರುದ್ಧನಾದ ಅರ್ಜುನನು ಶತ್ರುಗಳ ಮೇಲೆ ಐಂದ್ರಾಸ್ತ್ರವನ್ನು ಪ್ರಯೋಗಿಸಿದನು. ಅರ್ಜುನನ ಅದ್ಭುತವಾದ ಪರಾಕ್ರಮವನ್ನು ನಾವಾಗ ನೋಡಿದೆವು. ಅರ್ಜುನನು ಬಿಟ್ಟ ಐಂದ್ರಾಸ್ತ್ರವು ಶತ್ರುಗಳಿಂದ ಬಿಡಲ್ಪಟ್ಟಿದ್ದ ಬಾಣಗಳ ಸಮೂಹವನ್ನು ಕ್ಷಣಮಾತ್ರದಲ್ಲಿ ನಿರಸನಗೊಳಿಸಿತಲ್ಲದೇ ಅಲ್ಲಿದ್ದ ಶತ್ರುಪಕ್ಷದ ರಾಜರೆಲ್ಲರನ್ನೂ ಪೀಡಿಸಿತು. ಅಲ್ಲಿ ಬಾಣಗಳಿಂದ ಗಾಯಗೊಳ್ಳದಿರುವವರು ಯಾರೂ ಇರಲಿಲ್ಲ. ಅರ್ಜುನನು ಶತ್ರುಪಕ್ಷದಲ್ಲಿದ್ದ ಸಾವಿರಾರು ರಾಜರನ್ನೂ ಅಸಂಖ್ಯಾತವಾದ ಕುದುರೆಗಳನ್ನೂ ಸಾವಿರಾರು ಆನೆಗಳನ್ನೂ ಬಾಣಗಳಿಂದ ಪೀಡಿಸಿದನು. ಕೆಲವರನ್ನು ಎರಡೆರಡು ಬಾಣಗಳಿಂದಲೂ, ಕೆಲವರನ್ನು ಮೂರು ಮೂರು ಬಾಣಗಳಿಂದಲೂ ಅವನು ಗಾಯಗೊಳಿಸಿದನು. ಅರ್ಜುನನಿಂದ ಪೀಡಿಸಲ್ಪಟ್ಟ ಆ ಎಲ್ಲ ರಾಜರೂ ಮತ್ತು ಸೈನಿಕರೂ ಸೇನಾಪತಿಯಾದ ಭೀಷ್ಮನನ್ನೇ ಶರಣುಹೊಂದಿದರು. ಅಗಾಧವಾದ ವಿಪತ್ತೆಂಬ ಸಮುದ್ರದಲ್ಲಿ ಮುಳುಗಿಹೋಗುತ್ತಿದ್ದ ಅವರಿಗೆ ಆ ಸಮಯದಲ್ಲಿ ಭೀಷ್ಮನೇ ಆಪತ್ಸಮುದ್ರವನ್ನು ದಾಟಿಸುವ ಹಡಗಾಗಿ ಪರಿಣಮಿಸಿದನು. ಮಹಾರಾಜ! ಪಾಂಡವರ ಆಕ್ರಮಣದಿಂದಾಗಿ ನಿನ್ನ ಸೈನ್ಯವು ಭಗ್ನವಾಗಿ ಹೋಯಿತು. ದೊಡ್ಡ ಸಮುದ್ರವು ಬಿರುಗಾಳಿಯಿಂದ ಅಲ್ಲೋಲ-

ಕಲ್ಲೋಲವಾಗುವಂತೆ–ನಿನ್ನ ಸೈನ್ಯವು ಪಾಂಡವರ ಆಕ್ರಮಣದಿಂದಾಗಿ ಚದುರಿ ಹೋಯಿತು."

೮೧ನೆಯ ಅಧ್ಯಾಯವು ಮುಗಿಯಿತು.

೮೨ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಕೃಷ್ಣಾರ್ಜುನರಿಗೆ ಹೆದರಿ ಕೌರವರ ಪಲಾಯನ : ದ್ರೋಣ–ವಿರಾಟರ ಯುದ್ಧವರ್ಣನೆ : ವಿರಾಟನ ಮಗನಾದ ಶಂಖನ ವಧೆ : ಶಿಖಂಡಿ–ಅಶ್ವತ್ಥಾಮರ ಯುದ್ಧವರ್ಣನೆ : ಸಾತ್ಯಕಿಯಿಂದ ಅಲಂಬುಷನ ಪರಾಜಯ : ಧೃಷ್ಟದ್ಯುಮ್ನನಿಂದ ದುರ್ಯೋಧನನ ಪರಾಜಯ : ಭೀಮಸೇನ–ಕೃತವರ್ಮರ ಯುದ್ಧವರ್ಣನೆ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ನಾನು ಹೇಳಿದ ರೀತಿಯಲ್ಲಿ ಯುದ್ಧವು ನಡೆಯುತ್ತಿದ್ದು ಅರ್ಜುನನನ್ನು ಎದುರಿಸಿ ನಿಂತಿದ್ದ ಸುಶರ್ಮನು (ತ್ರಿಗರ್ತರಾಜನು) ಹೆಚ್ಚು ಹೊತ್ತು ಎದುರಿಸಿ ನಿಲ್ಲಲಾರದೇ ದೂರಸರಿದನು. ನಿನ್ನ ಕಡೆಯ ವೀರಯೋಧರೂ ಸಹ ಭಗ್ನರಾಗಿ ಹೋದರು. ಸಾಗರೋಪಮವಾಗಿದ್ದ ನಿನ್ನ ಸೈನ್ಯವು ಬಹಳ ಬೇಗ ಅಲ್ಲೋಲ-ಕಲ್ಲೋಲವಾಗಿಬಿಟ್ಟಿತು. ಆ ಸಮಯದಲ್ಲಿ ನಿನ್ನ ಪಕ್ಷದ ಸೈನಿಕರಿಗೆ ಆಶ್ವಾಸನೆಯನ್ನು ನೀಡುತ್ತಾ ಗಾಂಗೇಯನು ಬಹಳ ಬೇಗನೆ ಅರ್ಜುನನನ್ನು ಆಕ್ರಮಿಸಿದನು. ಪಾರ್ಥನ ಪರಾಕ್ರಮವನ್ನು ನೋಡಿ ದುರ್ಯೋಧನರಾಜನು ಬಹಳ ಆತುರದಿಂದ ರಾಜರ ಸಮೀಪಕ್ಕೆ ಬಂದು ಅವರೆಲ್ಲರನ್ನೂ ಕುರಿತು ಹೇಳಿದನು : (ಆ ಸೈನ್ಯದ ಮಧ್ಯಭಾಗದಲ್ಲಿದ್ದ ಮತ್ತು ಎಲ್ಲ ಸೈನ್ಯಕ್ಕೂ ಪ್ರಮುಖನಾಗಿದ್ದ ಅರ್ಜುನನಿಂದ ಪರಾಜಿತನಾಗಿ, ಹಿಮ್ಮೆಟ್ಟಿದ್ದ ಮಹಾಬಲನಾದ ಸುಶರ್ಮನನ್ನು ಸಂತೋಷಗೊಳಿಸುವುದೂ ಸಹ ದುರ್ಯೋಧನನ ಇಚ್ಛೆಯಾಗಿದ್ದಿತು.)

"ಈ ನಮ್ಮ ಕುರುಶ್ರೇಷ್ಠನಾದ ಶಾಂತನುವಿನ ಮಗನಾದ ಭೀಷ್ಮನು ಜೀವದ ಹಂಗನ್ನೂ ತೊರೆದು ಸಂಪೂರ್ಣಮನಸ್ಸಿನಿಂದ ಧನಂಜಯನೊಡನೆ ಯುದ್ಧಮಾಡಲು ಇಚ್ಛಿಸಿದ್ದಾನೆ. ಸರ್ವಸೈನ್ಯದ ಜೊತೆಯಲ್ಲೂ ಅರ್ಜುನನ

ಮೇಲೆ ದಾಳಿಮಾಡಲು ಹೋಗುತ್ತಿರುವ ಭರತಕುಲನಂದನನಾದ ಪಿತಾಮಹನನ್ನು ನೀವೆಲ್ಲರೂ ಸರ್ವಪ್ರಯತ್ನದಿಂದಲೂ ಯುದ್ಧದಲ್ಲಿ ಸಂರಕ್ಷಿಸಬೇಕಾಗಿದೆ."

ಮಹಾರಾಜ! ದುರ್ಯೋಧನನ ಆಜ್ಞೆಯನ್ನು 'ಬಾಢಂ'–ಎಂದು ಹೇಳುತ್ತಾ ಶಿರಸಾವಹಿಸಿ ಎಲ್ಲ ರಾಜರ ಸೈನ್ಯಸಮೂಹಗಳೂ ಭೀಷ್ಮನ ಸಮೀಪಕ್ಕೇ ಧಾವಿಸಿದುವು. ಹಿಂದೆಯೇ ಹೇಳಿದಂತೆ ಶಾಂತನುವಿನ ಮಗನಾದ ಭೀಷ್ಮನು ಬಹಳ ತ್ವರೆಯಿಂದ ಅರ್ಜುನನ ಸಮೀಪಕ್ಕೆ ಹೋದನು. ಮಹಾ ಬಲನಾದ ಅರ್ಜುನನು, ಭೀಷ್ಮನು ತನ್ನ ಕಡೆಗೆ ಬರುತ್ತಿರುವುದನ್ನು ಕಂಡು ತಾನೇ ಮುಂದೆ ನಡೆದು ಭೀಷ್ಮನನ್ನೆದುರಿಸಿ ನಿಂತನು. ಅಚ್ಚಬಿಳಿಯದಾಗಿದ್ದ ಕುದುರೆಗಳಿಂದ ಯುಕ್ತವಾಗಿದ್ದ, ಭಯಂಕರನಾದ ವಾನರನನ್ನೇ ಧ್ವಜದಲ್ಲಿ ಹೊಂದಿದ್ದ, ಮೇಘದ ನಿನಾದವನ್ನೇ ಅನುಕರಿಸುವ ಚಕ್ರಗಳ ಗಟ್ಟಿಯಾದ ಗಡ-ಗಡಾಶಬ್ದದಿಂದ ಕೂಡಿದ್ದ, ಬಹಳ ಶೋಭಾಯಮಾನವಾಗಿದ್ದ ರಥದಲ್ಲಿ ಕುಳಿತು ಅರ್ಜುನನು ಭೀಷ್ಮನ ಸಮೀಪಕ್ಕೆ ಹೋದನು. ಭೀಷ್ಮನ ಸಮೀಪಕ್ಕೆ ಬರುತ್ತಿದ್ದ ಧನಂಜಯನನ್ನು ನೋಡಿದೊಡನೆಯೇ ಭಯಗೊಂಡ ನಿನ್ನ ಕಡೆಯ ಸೈನಿಕರ ಮಧ್ಯದಲ್ಲಿ ದೊಡ್ಡ ಗದ್ದಲವುಂಟಾಯಿತು. ಕಡಿವಾಣಗಳನ್ನು ಕೈಯಲ್ಲಿ ಹಿಡಿದಿದ್ದ, ಮಧ್ಯಾಹ್ನದ ಸೂರ್ಯನಂತೆಯೇ ಉಗ್ರವಾದ ತೇಜಸ್ಸಿನಿಂದ ವಿಶಿಷ್ಟನಾಗಿದ್ದ ಶ್ರೀಕೃಷ್ಣನೂ ಸಹ ರಥದಲ್ಲಿ ಕುಳಿತಿರುವುದನ್ನು ಕಂಡು ನಿನ್ನ ಯೋಧರು ಅರ್ಜುನನ ರಥದ ಕಡೆಗೆ ತಿರುಗಿನೋಡಲೂ ಅಸಮರ್ಥರಾದರು. ಅದರಂತೆಯೇ ಬಿಳಿಯ ಕುದುರೆಗಳಿಂದ ಯೋಜಿತವಾದ ರಥದಲ್ಲಿ ಕುಳಿತಿದ್ದ ಬಿಳಿಯದಾದ ಧನುಸ್ಸನ್ನೂ ಧರಿಸಿದ್ದ, ಆಗ ತಾನೇ ಹುಟ್ಟಿದ ಶ್ವೇತ ಗ್ರಹದಂತೆಯೇ ಕಾಣುತ್ತಿದ್ದ ಭೀಷ್ಮನನ್ನು ನೋಡಲೂ ಪಾಂಡವಸೈನಿಕರು ಅಸಮರ್ಥರಾದರು. ಭೀಷ್ಮನು ಮಹಾತ್ಮರಾದ ತ್ರಿಗರ್ತರಿಂದಲೂ, ಸಹೋದರರಿಂದಲೂ, ಮಕ್ಕಳಿಂದಲೂ ಇನ್ನೂ ಅನೇಕ ಮಹಾರಥರಿಂದಲೂ ಪರಿವೃತನಾಗಿದ್ದನು. ಮತ್ತೊಂದು ವಿಭಾಗದಲ್ಲಿ ದ್ರೋಣರಿಗೂ-ಮತ್ಸ್ಯರಾಜನಾದ ವಿರಾಟನಿಗೂ ಯುದ್ಧವು ನಡೆಯುತ್ತಿದ್ದಿತು. ದ್ರೋಣರು ವಿರಾಟನನ್ನು ಒಂದು ಬಾಣದಿಂದ ಗಾಯಗೊಳಿಸಿ, ಮತ್ತೊಂದು ಬಾಣದಿಂದ ಧ್ವಜವನ್ನೂ, ಇನ್ನೊಂದು ಬಾಣದಿಂದ ವಿರಾಟನ ಧನುಸ್ಸನ್ನೂ ಕತ್ತರಿಸಿಬಿಟ್ಟರು.

ವಾಹಿನೀಪತಿಯಾದ ವಿರಾಟನು ದ್ರೋಣರು ಕತ್ತರಿಸಿದ ಧನುಸ್ಸನ್ನು ಕೆಳಗಿಟ್ಟು ಪರಾಕ್ರಮದ ಭಾರವನ್ನು ಸಹಿಸುವ ಸಾಮರ್ಥ್ಯವಿದ್ದ ಸುದೃಢವಾದ ಮತ್ತೊಂದು ಧನುಸ್ಸನ್ನು ಬಹುಶೀಘ್ರವಾಗಿ ಕೈಗೆತ್ತಿಕೊಂಡನು. ಸರ್ಪದ ಆಕಾರವಿದ್ದ, ಸರ್ಪಗಳಂತೆಯೇ ಥಳ-ಥಳಿಸುತ್ತಿದ್ದ ಬಾಣಗಳನ್ನು ಧನುಸ್ಸಿನಲ್ಲಿ ಯೋಜಿಸಿ ಮೂರು ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ಮತ್ತೆ ನಾಲ್ಕು ಬಾಣಗಳಿಂದ ದ್ರೋಣರ ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನೂ ಪ್ರಹರಿಸಿದನು. ಒಂದು ಬಾಣದಿಂದ ಧ್ವಜವನ್ನೂ, ಮತ್ತೈದು ಬಾಣಗಳಿಂದ ಸಾರಥಿಯನ್ನೂ, ಮತ್ತೊಂದು ಬಾಣದಿಂದ ದ್ರೋಣರ ಧನುಸ್ಸನ್ನೂ ಪ್ರಹರಿಸಿದನು. ವಿರಾಟನು ಮಾಡಿದ ಆ ಮಹಾಸಾಹಸಕಾರ್ಯದಿಂದ ದ್ವಿಜಶ್ರೇಷ್ಠರಾದ ದ್ರೋಣರು ಪರಮಕ್ರುದ್ಧರಾದರು. ಬಗ್ಗಿದ ಗಿಣ್ಣುಗಳಿದ್ದ ಎಂಟು ಬಾಣಗಳಿಂದ ದ್ರೋಣರು ವಿರಾಟನ ರಥಕ್ಕೆ ಕಟ್ಟಿದ್ದ ಕುದುರೆಗಳನ್ನು ಸಂಹರಿಸಿ ಒಂದು ಬಾಣದಿಂದ ಸೂತನನ್ನೂ ಸಂಹರಿಸಿದರು. ಹತಾಶ್ವನೂ ಹತಸಾರಥಿಯೂ ಆದ ವಿರಾಟನು ಒಡನೆಯೇ ರಥದಿಂದ ಕೆಳಕ್ಕೆ ಧುಮುಕಿ ತನ್ನ ಮಗನ ರಥಕ್ಕೆ ಹತ್ತಿ ಕುಳಿತನು. ಒಂದೇ ರಥದಲ್ಲಿದ್ದ ತಂದೆ-ಮಕ್ಕಳಿಬ್ಬರೂ ದ್ರೋಣರನ್ನು ಬಾಣಗಳ ಸುರಿಸುವಿಕೆಯಿಂದ ಮುಂದೆ ಹೋಗದಂತೆ ತಡೆದುಬಿಟ್ಟರು. ಕ್ರುದ್ಧರಾದ ಭಾರದ್ವಾಜರು ಸರ್ಪಕ್ಕೆ ಸಮಾನವಾದ ಬಾಣವೊಂದನ್ನು ಬತ್ತಳಿಕೆಯಿಂದ ತೆಗೆದು ಧನುಸ್ಸಿಗೆ ಯೋಜಿಸಿ ವಿರಾಟನ ಮಗನಾದ ಶಂಖನ ಮೇಲೆ ಪ್ರಯೋಗಿಸಿದರು. ಆ ಬಾಣವು ಶಂಖನ ಹೃದಯವನ್ನು ಭೇದಿಸಿಕೊಂಡು ಅವನ ರಕ್ತವನ್ನು ಹೀರಿ ಕೆಂಪಾದ ರಕ್ತದಿಂದ ನೆನೆಸಲ್ಪಟ್ಟ ರೆಕ್ಕೆಯುಳ್ಳದ್ದಾಗಿ ಭೂಮಿಯನ್ನು ಹೊಕ್ಕಿತು. ಭಾರದ್ವಾಜರ ಬಾಣದಿಂದ ಹತನಾದ ಶಂಖನು ಧನುಸ್ಸನ್ನೂ, ಬಾಣಗಳನ್ನೂ ವಿಸರ್ಜಿಸಿ ತಂದೆಯ ಪಕ್ಕದಲ್ಲಿಯೇ ಬಿದ್ದುಬಿಟ್ಟನು. ತನ್ನ ಮಗನು ಮರಣಹೊಂದಿದುದನ್ನು ನೋಡಿ ವಿರಾಟನು ಬಾಯ್ದೆರೆದು ಬರುತ್ತಿರುವ ಯಮರಾಜನನ್ನು ಕಂಡು ಓಡುವಂತೆ–ಭಯದಿಂದ ದ್ರೋಣರನ್ನು ಅಲ್ಲಿಯೇ ಬಿಟ್ಟು ಓಡಿದನು. ತನ್ನನ್ನೆದುರಿಸಿ ಯುದ್ಧಮಾಡುತ್ತಿದ್ದ ವಿರಾಟನು ಹೊರಟುಹೋದನಂತರ ದ್ರೋಣರು ಪಾಂಡವರ ಮಹಾಸೈನ್ಯವನ್ನು ನೂರಾರು-ಸಾವಿರಾರು ಸಂಖ್ಯೆಯಲ್ಲಿ ಸಂಹರಿಸಲು ಪ್ರಾರಂಭಿಸಿದರು.

ಮತ್ತೊಂದು ವಿಭಾಗದಲ್ಲಿ ಶಿಖಂಡಿ ಮತ್ತು ಅಶ್ವತ್ಥಾಮರು ಯುದ್ಧದಲ್ಲಿ

ತೊಡಗಿದ್ದರು. ಶಿಖಂಡಿಯು ಶೀಘ್ರಗಾಮಿಗಳಾದ ಮೂರು ನಾರಾಚಗಳಿಂದ ಅಶ್ವತ್ಥಾಮನ ಹುಬ್ಬುಗಳ ಮಧ್ಯಭಾಗಕ್ಕೆ ಗುರಿಯಿಟ್ಟು ಪ್ರಹರಿಸಿದನು. ಹಣೆಯಲ್ಲಿ ಚುಚ್ಚಿಕೊಂಡ ಆ ಮೂರು ಬಾಣಗಳಿಂದ ರಥಿಶ್ರೇಷ್ಠನಾದ ಅಶ್ವತ್ಥಾಮನು ಸ್ವರ್ಣಮಯವಾದ ಮೂರು ಶಿಖರಗಳಿಂದ ಕೂಡಿದ ಮೇರುಪರ್ವತದಂತೆಯೇ ಪ್ರಕಾಶಿಸಿದನು. ಶಿಖಂಡಿಯ ಬಾಣಪ್ರಹಾರದಿಂದ ಬಹುಕ್ರುದ್ಧನಾದ ಅಶ್ವತ್ಥಾಮನು * ನಿಮೇಷಾರ್ಧದಲ್ಲಿ ಶಿಖಂಡಿಯ ರಥದ ಧ್ವಜವನ್ನು ಕತ್ತರಿಸಿದನು. ಸೂತನನ್ನೂ, ಕುದುರೆಗಳನ್ನೂ ಸಂಹರಿಸಿದನು. ಅವನಲ್ಲಿದ್ದ ಗದೆ, ಖಡ್ಗ, ಶಕ್ತಿ–ಮುಂತಾದ ಆಯುಧಗಳನ್ನೂ ಸಹ ಅನೇಕ ಬಾಣಗಳಿಂದ ಕತ್ತರಿಸಿ ಕೆಳಕ್ಕೆ ಕೆಡವಿಬಿಟ್ಟನು. ರಥಿಗಳಲ್ಲಿ ಶ್ರೇಷ್ಠನಾದ ಹತಾಶ್ವನಾದ, ಶತ್ರುತಾಪನನಾದ ಶಿಖಂಡಿಯು ಒಡನೆಯೇ ರಥದಿಂದ ಧುಮುಕಿ ಹರಿತವಾಗಿದ್ದ ಮತ್ತು ಸ್ವಚ್ಛವಾಗಿದ್ದ ಕತ್ತಿಯನ್ನೂ ಮತ್ತು ಗುರಾಣಿಯನ್ನೂ ಹಿಡಿದು ಗಿಡಗಪಕ್ಷಿಯಂತೆ ರಣಾಂಗಣದ ಸುತ್ತಲೂ ಶತ್ರುಗಳನ್ನು ಸಂಹರಿಸುತ್ತಾ ತಿರುಗತೊಡಗಿದನು. ಯುದ್ಧದಲ್ಲಿ ಕತ್ತಿಯನ್ನು ಹಿಡಿದು ವರಸೆ-ವರಸೆಯಾಗಿ ತಿರುಗಿಸುತ್ತಿದ್ದ ಶಿಖಂಡಿಯನ್ನು ಪ್ರಹರಿಸಲು ಅಶ್ವತ್ಥಾಮನಿಗೆ ಸ್ವಲ್ಪ ಅವಕಾಶವೂ ಸಿಕ್ಕಲಿಲ್ಲ. ಇದು ನಿಶ್ಚಯವಾಗಿಯೂ ನಮಗೆ ಪರಮಾದ್ಭುತವಾಗಿ ಕಂಡಿತು. ಮಹಾಕೋಪಿಷ್ಠನಾದ ಅಶ್ವತ್ಥಾಮನು ಶಿಖಂಡಿಯ ಮೇಲೆ ಅನೇಕ ಸಾವಿರ ಬಾಣಗಳನ್ನು ಸುರಿಸಿದನು. ಬಲಿಷ್ಠರಲ್ಲಿ ಶ್ರೇಷ್ಠನಾದ ಶಿಖಂಡಿಯು ಅವ್ಯಾಹತವಾಗಿ ತನ್ನ ಮೇಲೆ ಬಂದು ಬೀಳುತ್ತಿದ್ದ ಸುದಾರುಣವಾದ ಬಾಣಗಳ ಸಾಲನ್ನು ತೀಕ್ಷ್ಣವಾದ ಅಲುಗಿನಿಂದ ಕೂಡಿದ್ದ ಕತ್ತಿಯಿಂದ ಕತ್ತರಿಸಿಬಿಟ್ಟನು.

ಅನಂತರ ಅಶ್ವತ್ಥಾಮನು ನೂರು ಚಂದ್ರರ ಚಿಹ್ನೆಗಳಿಂದ ಸುಮನೋಹರವಾಗಿದ್ದ ಶಿಖಂಡಿಯ ಗುರಾಣಿಯನ್ನೂ ಮತ್ತು ಕತ್ತಿಯನ್ನೂ ತುಂಡರಿಸಿದನು. ಬಳಿಕ ಚೂಪಾಗಿದ್ದ ಅನೇಕ ಬಾಣಗಳಿಂದ ದ್ರೌಣಿಯು ಶಿಖಂಡಿಯನ್ನೂ ಗಾಯಗೊಳಿಸಿದನು. ಅಶ್ವತ್ಥಾಮನ ಬಾಣಗಳಿಂದ ಕತ್ತರಿಸಲ್ಪಟ್ಟ ಕತ್ತಿಯ ಅರ್ಧಭಾಗವನ್ನೇ ಶಿಖಂಡಿಯು ರಭಸದಿಂದ ಅಶ್ವತ್ಥಾಮನ ಕಡೆಗೆ

---

* ಕಣ್ಣು ಮುಚ್ಚಿ ತೆಗೆಯುವ ವೇಳೆಗೆ ನಿಮೇಷಕಾಲವೆಂದು ಹೆಸರು. ಅದರ ಅರ್ಧ ಕಾಲ-ಕೇವಲ ಕಣ್ಣುಮುಚ್ಚುವಷ್ಟು ಕಾಲ. ಅತ್ಯಲ್ಪಕಾಲವೆಂದು ಅರ್ಥ.

ಎಸೆದನು. ಪ್ರಲಯಕಾಲದ ಅಗ್ನಿಯ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿ ತನ್ನ ಮೇಲೆ ಬೀಳಲಿದ್ದ ಖಡ್ಗಾಗ್ರ್ರವನ್ನೂ ದ್ರೌಣಿಯು ತನ್ನ ಕೈಚಳಕ



ವನ್ನು ತೋರಿಸುತ್ತಾ ಕ್ಷಣಮಾತ್ರದಲ್ಲಿ ಕತ್ತರಿಸಿಬಿಟ್ಟನು. ಪುನಃ ನಿರಾಯುಧ ನಾಗಿದ್ದ ಶಿಖಂಡಿಯನ್ನು ನೂರಾರು ಲೋಹಮಯವಾದ ಬಾಣಗಳಿಂದ ದ್ರೌಣಿಯು ಗಾಯಗೊಳಿಸಿದನು. ಅಶ್ವತ್ಥಾಮನ ನಿಶಿತವಾದ ನೂರಾರು ಬಾಣಗಳಿಂದ ಪ್ರಹೃತನಾದ ಶಿಖಂಡಿಯು ಬಹುಶೀಘ್ರವಾಗಿ ಮಹಾತ್ಮನಾದ ಮಾಧವನ (ಸಾತ್ಯಕಿಯ) ರಥವನ್ನು ಹತ್ತಿಕೊಂಡನು.

ಆ ಸಮಯದಲ್ಲಿ ಸಾತ್ಯಕಿಗೂ–ಅಲಂಬುಷರಾಕ್ಷಸನಿಗೂ ಘೋರವಾದ ಯುದ್ಧವು ನಡೆಯುತ್ತಿದ್ದಿತು. ಸಂಕ್ರುದ್ಧನಾದ ಸಾತ್ಯಕಿಯು ಕ್ರೂರಿಯಾದ ಅಲಂಬುಷರಾಕ್ಷಸನನ್ನು ತೀಕ್ಷ್ಣವಾದ ಅನೇಕಾನೇಕಬಾಣಗಳಿಂದ ಪ್ರಹರಿಸಿ ದನು. ಅದಕ್ಕೆ ಪ್ರತಿಯಾಗಿ ರಾಕ್ಷಸೇಂದ್ರನಾದ ಅಲಂಬುಷನೂ ಅರ್ಧಚಂದ್ರ ವೆಂಬ ಬಾಣದಿಂದ ಸಾತ್ಯಕಿಯ ಧನುಸ್ಸನ್ನು ಕತ್ತರಿಸಿ ಅನಂತರ ಸಾತ್ಯಕಿಯನ್ನೂ ಬಾಣಗಳಿಂದ ಗಾಯಗೊಳಿಸಿದನು. ಅಷ್ಟರಿಂದಲೇ ಅವನು ಸುಮ್ಮನಾಗಲಿಲ್ಲ. ರಾಕ್ಷಸೀಮಾಯೆಯನ್ನು ಸೃಷ್ಟಿಸಿ ಸಾತ್ಯಕಿಯನ್ನು ಬಾಣಗಳಿಂದಲೇ ಮುಚ್ಚಿಬಿಟ್ಟನು. ಆ ಸಮಯದಲ್ಲಿ ಶೈನೇಯನು ತೋರಿದ ಪರಾಕ್ರಮವು ಪರಮಾದ್ಭುತವಾಗಿ ನಮಗೆ ಕಂಡಿತು. ಮಾಯಾಕಲ್ಪಿತವಾದ ಸಾವಿರಾರು

ಬಾಣಗಳು ತನ್ನ ಮೇಲೆ ಅವ್ಯಾಹತವಾಗಿ ಬೀಳುತ್ತಿದ್ದರೂ ಸಾತ್ಯಕಿಯು ಸ್ವಲ್ಪವೂ ಭ್ರಾಂತನಾಗದೇ ಹಿಂದೆ ಅರ್ಜುನನಿಂದ ಪಡೆದುಕೊಂಡಿದ್ದ ಐಂದ್ರಾಸ್ತ್ರವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಅಭಿಮಂತ್ರಿಸಿ ಪ್ರಯೋಗಿಸಿದನು. ಆ ಮಹಾಸ್ತ್ರವು ಕ್ಷಣಮಾತ್ರದಲ್ಲಿ ರಾಕ್ಷಸನ ಮಾಯೆಯನ್ನು ಭಸ್ಮ ಮಾಡಿತಲ್ಲದೆ–ಮಹಾಮೇಘವು ವರ್ಷಾಕಾಲದಲ್ಲಿ ಪರ್ವತವನ್ನು ನೀರಿನಿಂದ ಮುಚ್ಚಿಬಿಡುವಂತೆ–ಅಲಂಬುಷನನ್ನು ಸುತ್ತಲೂ ಬಾಣಗಳಿಂದ ಮುಚ್ಚಿ ಬಿಟ್ಟಿತು. ಈ ರೀತಿಯಾಗಿ ಸಾತ್ಯಕಿಯಿಂದ ಪೀಡಿಸಲ್ಪಟ್ಟ ಅಲಂಬುಷ ರಾಕ್ಷಸನು ಪ್ರಾಣಭಯದಿಂದ ಸಾತ್ಯಕಿಯನ್ನು ಪರಿತ್ಯಜಿಸಿ ಹೊರಟು ಹೋದನು. ಇಂದ್ರನಿಂದಲೂ ಯುದ್ಧದಲ್ಲಿ ಪರಾಜಿತನಾಗದಿದ್ದ ಅಲಂಬುಷ ರಾಕ್ಷಸನನ್ನು ನಿನ್ನ ಸೈನಿಕರೆಲ್ಲರೂ ನೋಡುತ್ತಿದ್ದಂತೆಯೇ ಗೆದ್ದು ಸಾತ್ಯಕಿಯು ಸಿಂಹನಾದವನ್ನು ಮಾಡಿದನು. ಸತ್ಯವಿಕ್ರಮನಾದ ಸಾತ್ಯಕಿಯು ನಿಶಿತವಾದ ಅನೇಕಬಾಣಗಳಿಂದ ನಿನ್ನ ಸೈನಿಕರನ್ನು ಸಂಹರಿಸಲು ಉಪಕ್ರಮಿಸಿದನು. ಅನೇಕಯೋಧರು ಪ್ರಾಣಭಯದಿಂದ ಪಲಾಯನಮಾಡಿದರು.

ಮತ್ತೊಂದು ವಿಭಾಗದಲ್ಲಿ ನಿನ್ನ ಮಗನಿಗೂ ಮತ್ತು ಪಾಂಡವರ ಸೇನಾ ಪತಿಯಾದ ಧೃಷ್ಟದ್ಯುಮ್ನನಿಗೂ ಘೋರವಾದ ಯುದ್ಧವು ನಡೆಯುತ್ತಿದ್ದಿತು. ದ್ರುಪದನ ಮಗನಾದ ಬಲಿಷ್ಠನಾದ ಧೃಷ್ಟದ್ಯುಮ್ನನು ಜನೇಶ್ವರನಾದ ದುರ್ಯೋಧನನನ್ನು ಬಗ್ಗಿದ ಗಿಣ್ಣುಗಳುಳ್ಳ ಬಾಣಗಳಿಂದ ಮುಚ್ಚಿಬಿಟ್ಟನು. ಧೃಷ್ಟದ್ಯುಮ್ನನು ಬಿಟ್ಟ ಸಾವಿರಾರು ಬಾಣಗಳಿಂದ ಆಚ್ಛಾದಿತನಾಗಿದ್ದರೂ ಸಹ ನಿನ್ನ ಮಗನು ಸ್ವಲ್ಪವಾದರೂ ವ್ಯಥಿತನಾಗಲಿಲ್ಲ. ಅವನು ಬಿಟ್ಟ ಬಾಣ ಗಳೆಲ್ಲವನ್ನೂ ಕತ್ತರಿಸಿ ಬಹುಶೀಘ್ರವಾಗಿ ಧೃಷ್ಟದ್ಯುಮ್ನನನ್ನು ತೊಂಬತ್ತು ಬಾಣಗಳಿಂದ ದುರ್ಯೋಧನನು ಪ್ರಹರಿಸಿದನು. ಇದು ನಮಗೆ ಪರಮಾ ದ್ಭುತವಾಗಿ ಕಂಡಿತು.

ಪೂಜ್ಯನೇ! ದುರ್ಯೋಧನನ ಈ ಸಾಹಸಕಾರ್ಯದಿಂದ ಪರಮ ಕ್ರುದ್ಧನಾದ ಪಾಂಡವರ ಸೇನಾಪತಿಯು ನಿನ್ನ ಮಗನ ಧನುಸ್ಸನ್ನು ಕತ್ತರಿಸಿ ಬಿಟ್ಟನು. ಮರುಕ್ಷಣದಲ್ಲಿಯೇ ಮಹಾಬಲನಾದ ಧೃಷ್ಟದ್ಯುಮ್ನನು ದುರ್ಯೋ ಧನನ ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನು ಸಂಹರಿಸಿದನು. ಪುನಃ ಸುನಿಶಿತ

ವಾದ ಏಳು ಬಾಣಗಳಿಂದ ದುರ್ಯೋಧನನನ್ನು ಗಾಯಗೊಳಿಸಿದನು. ದುರ್ಯೋಧನನು ಕುದುರೆಗಳಿಂದ ವಿಹೀನವಾಗಿದ್ದ ರಥದಿಂದ ಒಡನೆಯೇ ಕೆಳಕ್ಕೆ ಧುಮುಕಿ ಕತ್ತಿಯನ್ನು ಹಿಡಿದು ಪದಾತಿಯಾಗಿಯೇ ಪಾರ್ಷತನ ಬಳಿಗೆ ಧಾವಿಸಿದನು. ಆ ವೇಳೆಗೆ ಸರಿಯಾಗಿ ರಾಜನನ್ನು ಬಹುವಾಗಿ ಪ್ರೀತಿಸುತ್ತಿದ್ದ ಮಹಾಬಲನಾದ ಶಕುನಿಯು ಭೂಮಂಡಲಕ್ಕೇ ರಾಜನಾದ ದುರ್ಯೋಧನನ ಬಳಿಗೆ ಬಂದು ಅವನನ್ನು ತನ್ನ ರಥಕ್ಕೆ ಹತ್ತಿಸಿಕೊಂಡನು. ಈ ರೀತಿಯಲ್ಲಿ ಶತ್ರುವೀರಸಂಹಾರಕನಾದ ಧೃಷ್ಟದ್ಯುಮ್ನನು ನಿನ್ನ ಮಗನನ್ನು ಸೋಲಿಸಿ–ವಜ್ರಪಾಣಿಯಾದ ಇಂದ್ರನು ಅಸುರರನ್ನು ವಿನಾಶಮಾಡಿದಂತೆ–ನಿನ್ನ ಸೈನ್ಯವನ್ನು ಸಂಹರಿಸಲು ಉಪಕ್ರಮಿಸಿದನು.

ರಣಾಂಗಣದ ಮತ್ತೊಂದು ವಿಭಾಗದಲ್ಲಿ ಭೀಮನಿಗೂ–ಕೃತವರ್ಮನಿಗೂ ಘೋರವಾದ ಯುದ್ಧವು ನಡೆಯುತ್ತಿದ್ದಿತು. ಮಹಾರಥನಾದ ಕೃತವರ್ಮನು ಭೀಮನನ್ನು ಅನೇಕಬಾಣಗಳಿಂದ ಪೀಡಿಸಿದನಲ್ಲದೇ–ಮಹಾಮೇಘವು ಸೂರ್ಯನನ್ನು ಮುಚ್ಚಿಬಿಡುವಂತೆ-ಮಹಾಬಲನಾದ ಭೀಮನನ್ನು ಬಾಣಗಳಿಂದ ಮುಚ್ಚಿಬಿಟ್ಟನು. ಪರಂತಪನಾದ ಭೀಮನು ಕೃತವರ್ಮನ ಆ ಸಾಹಸಕೃತ್ಯದಿಂದ ಅಧೀರನಾಗಲಿಲ್ಲ. ಗಟ್ಟಿಯಾಗಿ ಒಮ್ಮೆ ಗಹ-ಗಹಿಸಿ ನಕ್ಕು ಕ್ರೋಧವನ್ನು ತಾಳಿ ಅನೇಕಬಾಣಗಳಿಂದ ಕೃತವರ್ಮನನ್ನು ಪ್ರಹರಿಸಿದನು. ಸತ್ಯಕೋವಿದನಾದ, ಸಾತ್ವತವಂಶಪ್ರದೀಪನಾದ, ಅತಿರಥನಾದ ಕೃತವರ್ಮನೂ ಸಹ ಭೀಮನು ಬಿಟ್ಟ ಬಾಣಗಳಿಂದ ವಿಚಲಿತನಾಗಲಿಲ್ಲ. ಪುನಃ ಭೀಮನನ್ನೇ ಅನೇಕಬಾಣಗಳಿಂದ ಪೀಡಿಸಿದನು. ಮರುಕ್ಷಣದಲ್ಲಿಯೇ ಕ್ರುದ್ಧನಾಗಿದ್ದ, ಮಹಾರಥನಾದ ಭೀಮಸೇನನು ಕೃತವರ್ಮನ ರಥಕ್ಕೆ ಕಟ್ಟಿದ ನಾಲ್ಕು ಕುದುರೆಗಳನ್ನೂ, ಸುಸಜ್ಜಿತನಾಗಿದ್ದ ಸಾರಥಿಯನ್ನೂ ಸಂಹರಿಸಿ, ಧ್ವಜವನ್ನೂ ಸಹ ಕತ್ತರಿಸಿ ಕೆಳಕ್ಕೆ ಬೀಳಿಸಿದನು. ಅನಂತರ ಶತ್ರುವೀರಸಂಹಾರಕನಾದ ಭೀಮಸೇನನು ಅಶ್ವ-ಸಾರಥಿಗಳಿಂದ ವಿಹೀನನಾಗಿದ್ದ ಕೃತವರ್ಮನನ್ನು ಅನೇಕಬಾಣಗಳಿಂದ ಗಾಯಗೊಳಿಸಿದನು. ಭೀಮನ ಅವ್ಯಾಹತವಾದ ಬಾಣಗಳ ಪ್ರಹಾರದಿಂದ ಕೃತವರ್ಮನ ಅಂಗಾಂಗಗಳೆಲ್ಲವೂ ಕ್ಷತ-ವಿಕ್ಷತವಾಗಿ ದ್ದುದು ಕಂಡುಬಂದಿತು. ಹತಾಶ್ವನಾದ ಕೃತವರ್ಮನು ಭೀಮಸೇನನ ಶಸ್ತ್ರಾಘಾತವನ್ನು ಹೆಚ್ಚು ಹೊತ್ತು ತಡೆದುಕೊಳ್ಳಲಾರದವನಾಗಿ ನಿನ್ನ ಮಗನ

ಸಮಕ್ಷದಲ್ಲಿಯೇ ನಿನ್ನ ಭಾವಮೈದುನನಾದ ವೃಷಕನ ರಥವನ್ನು ಹತ್ತಿಕುಳಿತನು. ಕೃತವರ್ಮನು ಪರಾಜಿತನಾಗಲಾಗಿ ಸಂಕ್ರುದ್ಧನಾದ ಭೀಮಸೇನನು ನಿನ್ನ ಸೈನ್ಯದ ಮೇಲೆ ದಾಳಿನಡೆಸಿ–ದಂಡಪಾಣಿಯಾದ ಯಮನಂತೆ–ಅನೇಕ ಸೈನಿಕರನ್ನು ಸಂಹರಿಸಿದನು."

೮೨ನೆಯ ಅಧ್ಯಾಯವು ಮುಗಿಯಿತು.

೮೩ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಇರಾವಂತನಿಂದ ವಿಂದಾನುವಿಂದರ ಪರಾಜಯ : ಭಗದತ್ತನಿಂದ ಘಟೋತ್ಕಚನ ಪರಾಜಯ : ನಕುಲ-ಸಹದೇವರಿಂದ ಶಲ್ಯನ ಪರಾಜಯ

ಯುದ್ಧವಾರ್ತೆಯನ್ನು ಕೇಳುತ್ತಿದ್ದ ಧೃತರಾಷ್ಟ್ರನು ತನ್ನ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತಾ ಹೇಳುತ್ತಾನೆ :

"ಸಂಜಯ! ನಮ್ಮವರಿಗೂ ಮತ್ತು ಪಾಂಡವರಿಗೂ ನಡೆದ ಅನೇಕ ವಿಚಿತ್ರವಾದ ದ್ವೈರಥಗಳ (ಇಬ್ಬರು ರಥಿಕರು ಪರಸ್ಪರವಾಗಿ ಮಾಡುವ ಯುದ್ಧ) ಯುದ್ಧದ ವಿವರಣೆಯನ್ನು ನಿನ್ನಿಂದ ಕೇಳಿದೆನು. ಆದರೆ ಇದುವರೆಗೆ ನೀನು ಹೇಳಿದ ವಿವರಣೆಯಲ್ಲಿ ನಮ್ಮ ಪಕ್ಷದವರು ಗೆದ್ದ ಸಂಗತಿಯನ್ನಾಗಲೀ, ಸಂತೋಷವನ್ನುಂಟುಮಾಡತಕ್ಕ ನಮ್ಮ ಪಕ್ಷದವರ ಸಾಧನೆಯನ್ನಾಗಲೀ ಅಥವಾ ನಮ್ಮ ಕಡೆಯವರು ಸಂತೋಷಭರಿತರಾಗಿದ್ದಾರೆಂಬ ವಿಷಯವನ್ನಾಗಲೀ–ನೀನು ನನಗೆ ಹೇಳಿಯೇ ಇಲ್ಲ. ಇದಕ್ಕೆ ಪ್ರತಿಯಾಗಿ ನಿತ್ಯವೂ ಪಾಂಡುವಿನ ಮಕ್ಕಳು ಹೃಷ್ಟರಾಗಿದ್ದರೆಂದೂ, ಅವರ ಕಡೆಯ ಸೈನ್ಯವು ಭಗ್ನವಾಗಲಿಲ್ಲವೆಂದೂ, ಅವರು ಜಯಗಳಿಸಿದರೆಂದೂ ಹೇಳುತ್ತಲೇ ಇರುವೆ. ನನ್ನ ಮಕ್ಕಳ ವಿಷಯವನ್ನು ಹೇಳುವಾಗಲೆಲ್ಲಾ ಅವರು ಖಿನ್ನವದನರಾಗಿದ್ದರು; ಖಿನ್ನಮನಸ್ಕರಾಗಿದ್ದರು ; ಪರಾಕ್ರಮಹೀನರಾಗಿದ್ದರು ; ಪಾಂಡವರಿಂದ ಪರಾಜಿತರಾದರು–ಎಂಬುದಾಗಿಯೇ ಹೇಳುವೆ. ಸೂತ! ನಿಶ್ಚಯವಾಗಿಯೂ ಇದು ಕೇವಲ ದೈವದ ಕೈವಾಡವೇ ಸರಿ. ಇದರಲ್ಲಿ ಸಂಶಯವೇ ಇಲ್ಲ."

"ಮಹಾರಾಜ! ಅವರು ನಿರುತ್ಸಾಹಿಗಳಾಗಿ ಯುದ್ಧವನ್ನೇ ಮಾಡಲಿಲ್ಲ

ವೆಂದು ನಾನು ಯಾವಾಗಲೂ ಹೇಳಿಲ್ಲ. ಯಥಾಶಕ್ತಿ ಉತ್ಸಾಹಿಗಳಾಗಿಯೇ ನಿನ್ನವರು ತಮ್ಮ ಶಕ್ತಿಮೀರಿದ ಶ್ರೇಷ್ಠವಾದ ಪೌರುಷವನ್ನೇ ಪ್ರದರ್ಶಿಸುತ್ತಾ ಯುದ್ಧದಲ್ಲಿ ಶತ್ರುಗಳೊಡನೆ ಹೋರಾಡುತ್ತಾರೆ.

**ಗಜ್ಗಾಯಾಃ ಸುರನದ್ಯಾ ವೈ ಸ್ವಾದು ಭೂತ್ವಾ ಯಥೋದಕಮ್ ।**
**ಮಹೋದಧೇರ್ಗುಣಾಭ್ಯಾಸಾಲ್ಲವಣತ್ವಂ ನಿಗಚ್ಛತಿ ॥೫॥**

**ತಥಾ ತತ್ಪೌರುಷಂ ರಾಜಂಸ್ತಾವಕಾನಾಂ ಪರಂತಪ ।**
**ಪ್ರಾಪ್ಯ ಪಾಣ್ಡುಸುತಾನ್ವೀರಾನ್ವ್ಯರ್ಥಂ ಭವತಿ ಸಂಯುಗೇ ॥೬॥**

ದೇವನದಿಯಾದ ಗಂಗೆಯಲ್ಲಿ ನೀರು ಸಿಹಿಯಾಗಿಯೇ ಇದ್ದರೂ ಮಹೋದಧಿಯೊಡನೆ (ಸಮುದ್ರವನ್ನು) ಸೇರುವುದರಿಂದ ಅದರ ಗುಣ ದೊಡನೆ ಬೆರೆತು ಸಿಹಿಯಾಗಿದ್ದ ನೀರೂ ಉಪ್ಪಾಗಿಬಿಡುತ್ತದೆ. ಸಮುದ್ರದಲ್ಲಿ ಗಂಗೆಯ ಅಸ್ತಿತ್ವವೇ ಉಳಿಯುವುದಿಲ್ಲ. ಅದೇ ರೀತಿಯಲ್ಲಿ ನಿನ್ನ ಮಕ್ಕಳ ಪೌರುಷವೆಲ್ಲವೂ ಪಾಂಡುವಿನ ಮಕ್ಕಳನ್ನು ಎದುರಿಸುವವರೆಗೆ ಮಾತ್ರವೇ ಇರುತ್ತದೆ. ಅವರನ್ನು ಎದುರಿಸಿ ನಿಂತೊಡನೆಯೇ ಯುದ್ಧದಲ್ಲಿ ನಿನ್ನವರ ಪೌರುಷವು ವ್ಯರ್ಥವಾಗಿಬಿಡುತ್ತದೆ. ನಿನ್ನ ಮಕ್ಕಳು ನಿಶ್ಚಯವಾಗಿಯೂ ಒಳ್ಳೆಯ ಸಂಘಟನೆಯಿಂದಲೇ ಯುದ್ಧಮಾಡುತ್ತಾರೆ. ದುಷ್ಕರವಾದ ಕರ್ಮ ವನ್ನೇ ಮಾಡುತ್ತಾರೆ. ಶಕ್ತಿಮೀರಿ ಪರಾಕ್ರಮವನ್ನೂ ತೋರಿಸುತ್ತಾರೆ. ಆದುದ ರಿಂದ ನಿನ್ನವರ ವಿಷಯದಲ್ಲಿ ನೀನು ದೋಷವನ್ನೆಣಿಸುವ ಕಾರಣವಿಲ್ಲ. ನಿನ್ನದು ಮತ್ತು ನಿನ್ನ ಮಗನದು ಇಬ್ಬರದ್ದೇ ಮಹಾಪರಾಧ. ನಿನ್ನ ಮಗನೊಡನೆ ನೀನೂ ಸೇರಿಕೊಂಡು ಮಾಡಿದ ಅಪರಾಧದಿಂದಾಗಿ ಯಮನ ರಾಷ್ಟ್ರವನ್ನು ವೃದ್ಧಿಪಡಿಸುವಂತಹ ಘೋರವಾದ ಸಂಹಾರಕ್ರಿಯೆಯು ಇಂದು ಭೂಮಂಡಲದಲ್ಲಿ ಆಗುತ್ತಿದೆ.

ನಿನ್ನ ಅಪರಾಧದಿಂದಲೇ ಉಂಟಾಗಿರುವ ಈ ಪರಿಸ್ಥಿತಿಯನ್ನು ಕುರಿತು ಶೋಕಿಸುವುದರಿಂದ ಪ್ರಯೋಜನವೇನು? ಈ ಯುದ್ಧದಲ್ಲಿ ಭಾಗವಹಿಸಿ ರುವ ಯಾವ ರಾಜರೂ ಸರ್ವಥಾ ತಮ್ಮ ಜೀವವನ್ನು ರಕ್ಷಿಸಿಕೊಳ್ಳಲಾರರು. (ಜೀವದ ಹಂಗನ್ನೇ ತೊರೆದು ಹೋರಾಡುತ್ತಿದ್ದಾರೆ.) ಇಲ್ಲಿ ಸೇರಿರತಕ್ಕ ರಾಜರು ಯುದ್ಧದಲ್ಲಿ ಮಡಿದು ಸತ್ಪುರುಷರಿಗೆ ಸಿಕ್ಕುವ ಲೋಕಗಳನ್ನು ಇಚ್ಛಿಸುವವರಾಗಿ ನಿತ್ಯವೂ ಸ್ವರ್ಗಪರಾಯಣರಾಗಿ ಶತ್ರುಸೈನ್ಯದೊಳಕ್ಕೆ

ನುಗ್ಗಿ ಯುದ್ಧಮಾಡುತ್ತಾರೆ. ಅಂದಿನ (ಏಳನೆಯ ದಿವಸದ) ಪೂರ್ವಾಹ್ಣದಲ್ಲಿ ನಡೆದ ಯುದ್ಧದಲ್ಲಿ ಅಪಾರವಾದ ಜನಕ್ಷಯವಾಯಿತು. ನೀನು ಏಕಾಗ್ರ ಚಿತ್ತನಾಗಿ ದೇವಾಸುರಯುದ್ಧಕ್ಕೆ ಸಮಾನವಾದ ಕುರು-ಪಾಂಡವರ ಯುದ್ಧ ವಾರ್ತೆಯನ್ನು ಆಲಿಸು.

ಮಹಾಧನುಷ್ಮಂತರಾದ, ಮಹಾಬಲರಾದ ಯುದ್ಧೋನ್ಮತ್ತರಾದ ಅವಂತಿಯ ರಾಜಕುಮಾರರಾದ ವಿಂದಾನುವಿಂದರು ಅರ್ಜುನನ ಮಗನಾದ ಇರಾವಂತನನ್ನು ಸಂಧಿಸಿ ಅವನೊಡನೆ ಯುದ್ಧದಲ್ಲಿ ತೊಡಗಿದರು. ಅವರ ನಡುವೆ ರೋಮಾಂಚಕಾರಿಯಾದ ದೊಡ್ಡ ಯುದ್ಧವಾಯಿತು. ಕ್ರುದ್ಧನಾದ ಇರಾವಂತನು ಬಗ್ಗಿದ ಗಿಣ್ಣುಗಳಿದ್ದ ನಿಶಿತವಾದ ಬಾಣಗಳಿಂದ ದೇವರೂಪಿ ಗಳಾದ ವಿಂದಾನುವಿಂದರನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಚಿತ್ರ ಯೋಧಿಗಳಾದ ಆ ರಾಜಕುಮಾರರು ಇರಾವಂತನನ್ನೂ ಬಾಣಗಳಿಂದ ಪ್ರಹರಿಸಿದರು. ಎರಡು ಬಣದವರೂ ತಮ್ಮ ಶತ್ರುಗಳನ್ನು ನಾಶಪಡಿಸುವುದ ರಲ್ಲಿ ಪ್ರಯತ್ನಶೀಲರಾಗಿದ್ದರು. ಪರಸ್ಪರವಾಗಿ ಬಿಡುತ್ತಿದ್ದ ಅಸ್ತ್ರಗಳನ್ನು ಪ್ರಯತ್ನಪೂರ್ವಕವಾಗಿ ನಿವಾರಿಸಿಕೊಳ್ಳುತ್ತಿದ್ದರು. ಹೀಗೆ ಯುದ್ಧಮಾಡುತ್ತಿದ್ದ ಅವರಲ್ಲಿ ಯಾವ ವಿಧವಾದ ಅಂತರವೂ ಕಾಣುತ್ತಿರಲಿಲ್ಲ. ಒಬ್ಬನು ಹೆಚ್ಚು, ಮತ್ತೊಬ್ಬನು ಕಡಿಮೆ—ಎಂದೂ ಹೇಳಲಾಗುತ್ತಿರಲಿಲ್ಲ.

ಅನಂತರ ಇರಾವಂತನು ನಾಲ್ಕು ಬಾಣಗಳಿಂದ ಅನುವಿಂದನ ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನೂ ಯಮಾಲಯಕ್ಕೆ ಕಳುಹಿಸಿಕೊಟ್ಟನು. ಸುತೀಕ್ಷ್ಣವಾದ ಭಲ್ಲಗಳೆಂಬ ಎರಡು ಬಾಣಗಳಿಂದ ಅನುವಿಂದನ ಧನು ಸ್ಸನ್ನೂ ಮತ್ತು ಧ್ವಜವನ್ನೂ ಕತ್ತರಿಸಿಬಿಟ್ಟನು. ನಿಶ್ಚಯವಾಗಿಯೂ ಇರಾವಂತನ ಕಾರ್ಯವು ಪರಮಾದ್ಭುತವಾಗಿ ನಮಗೆ ಕಾಣಿಸಿತು. ಹತಾಶ್ವನಾದ ಅನುವಿಂದನು ಒಡನೆಯೇ ವಿಂದನ ರಥದಲ್ಲಿ ಹತ್ತಿಕುಳಿತು ಉತ್ತಮೋತ್ತಮ ವಾದ ಭಾರವನ್ನು ಧರಿಸತಕ್ಕ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಯುದ್ಧಕ್ಕೆ ಸಿದ್ಧನಾದನು. ಒಂದೇ ರಥದಲ್ಲಿ ಕುಳಿತಿದ್ದ, ರಥಿಗಳಲ್ಲಿ ಶ್ರೇಷ್ಠರಾದ ಅವಂತೀರಾಜಕುಮಾರರು ಮಹಾತ್ಮನಾದ ಇರಾವಂತನ ಮೇಲೆ ಬಹುಶೀಘ್ರ ವಾಗಿ ಅನೇಕಬಾಣಗಳನ್ನು ಸುರಿಸಿದರು. ಅವರಿಂದ ಬಿಡಲ್ಪಟ್ಟ, ಸುವರ್ಣ

ಭೂಷಿತಗಳಾದ, ಮಹಾವೇಗದಿಂದ ಕೂಡಿದ್ದ ಬಾಣಗಳು ಸೂರ್ಯನ ಮಾರ್ಗಕ್ಕೆ ಹೋಗಿ (ಆಕಾಶಕ್ಕೆ ಹೋಗಿ) ಆಕಾಶವನ್ನೇ ತುಂಬಿಬಿಟ್ಟುವು. ಕ್ರುದ್ಧನಾದ ಇರಾವಂತನು ಮಹಾರಥರಾದ ಇಬ್ಬರು ಸಹೋದರರ ಮೇಲೂ ಬಾಣಗಳ ಮಳೆಯನ್ನೇ ಕರೆದನು. ಅವರ ರಥದ ಸಾರಥಿಯನ್ನೂ ಸಂಹರಿಸಿದನು. ಗತಪ್ರಾಣನಾಗಿ ಸಾರಥಿಯು ಕೆಳಗುರುಳಲಾಗಿ ಗಾಬರಿಗೊಂಡ ಕುದುರೆಗಳು ರಥವನ್ನೆಳೆದುಕೊಂಡು ದಿಕ್ಕಾಪಾಲಾಗಿ ಓಡಿದುವು. ಮಹಾರಾಜ! ಈ ರೀತಿಯಾಗಿ ಉಲೂಪಿಯ ಮಗನಾದ ಇರಾವಂತನು ಆ ಇಬ್ಬರು ವಿಂದಾನುವಿಂದರನ್ನು ಪರಾಜಯಗೊಳಿಸಿ ತನ್ನ ಪೌರುಷವನ್ನು ಪ್ರಕಟಪಡಿಸುತ್ತಾ ನಿನ್ನ ಸೈನ್ಯವನ್ನು ಸಂಹರಿಸಲು ಉಪಕ್ರಮಿಸಿದನು. ಯುದ್ಧಕ್ಷೇತ್ರದಲ್ಲಿ ಇರಾವಂತನಿಂದ ಬಹುವಾಗಿ ಪೀಡಿಸಲ್ಪಟ್ಟ ನಿನ್ನ ವಿಶಾಲವಾದ ಸೇನೆಯು– ವಿಷಪಾನಮಾಡಿದ ಮನುಷ್ಯನಂತೆ–ನಾನಾರೀತಿಯಲ್ಲಿ ಉದ್ವೇಗವನ್ನು ಪ್ರಕಟಗೊಳಿಸಲು ಉಪಕ್ರಮಿಸಿತು.

ಮಹಾರಾಜ! ರಣಾಂಗಣದ ಮತ್ತೊಂದು ವಿಭಾಗದಲ್ಲಿ ರಾಕ್ಷಸೇಂದ್ರನಾದ ಘಟೋತ್ಕಚನಿಗೂ-ಭಗದತ್ತನಿಗೂ ಯುದ್ಧವಾಗುತ್ತಿದ್ದಿತು. ಮಹಾಬಲನಾದ, ಹಿಡಿಂಬೆಯ ಮಗನಾದ, ರಾಕ್ಷಸೇಂದ್ರನಾದ ಘಟೋತ್ಕಚನು ಸೂರ್ಯನಿಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ಧ್ವಜಯುಕ್ತವಾಗಿದ್ದ ರಥದಲ್ಲಿ ಕುಳಿತು ಭಗದತ್ತನನ್ನು ಆಕ್ರಮಿಸಿದನು.

ಹಿಂದೆ ಯಾವ ರೀತಿಯಲ್ಲಿ ತಾರಕಾಮಯಸಂಗ್ರಾಮದಲ್ಲಿ ಇಂದ್ರನು ಐರಾವತದ ಮೇಲೆ ಕುಳಿತು ಯುದ್ಧಕ್ಕೆ ಹೋಗಿದ್ದನೋ–ಅದೇ ರೀತಿಯಲ್ಲಿ ಪ್ರಾಗ್ಜ್ಯೋತಿಷನೂ ಸಹ ಗಜಾರೂಢನಾಗಿ ಕುಳಿತಿದ್ದನು. ಯುದ್ಧವನ್ನು ನೋಡಲು ಬಂದಿದ್ದ ದೇವರ್ಷಿ-ಗಂಧರ್ವರು ಹೈಡಿಂಬ-ಭಗದತ್ತರ ಪರಾಕ್ರಮದಲ್ಲಿ ಕಿಂಚಿದ್ವ್ಯತ್ಯಾಸವನ್ನೂ ಕಾಣಲಿಲ್ಲ. ಯಾವ ರೀತಿಯಲ್ಲಿ ಹಿಂದೆ ನಡೆದ ದೇವ-ದಾನವರ ಯುದ್ಧದಲ್ಲಿ ಇಂದ್ರನು ದಾನವರನ್ನು ಶಸ್ತ್ರಪ್ರಹಾರಗಳಿಂದ ಭಯಪಡಿಸಿದನೋ ಅದೇ ರೀತಿಯಲ್ಲಿ ಭಗದತ್ತನು ಶಸ್ತ್ರಾಸ್ತ್ರಗಳ ಅನವರತ ಪ್ರಹಾರದಿಂದ ಪಾಂಡವರ ಸೈನ್ಯವನ್ನು ಓಡಿಸಿಬಿಟ್ಟನು. (ಅನೇಕರು ಮಡಿದರು. ಅಳಿದುಳಿದವರು ಓಡಿಹೋದರು.) ಭಗದತ್ತನ ಉಪಟಳದಿಂದ ದಿಕ್ಕಾಪಾಲಾಗಿ ಓಡುತ್ತಿದ್ದ ಪಾಂಡವಸೈನಿಕರಿಗೆ ಆ ಸಮಯದಲ್ಲಿ ತಮ್ಮನ್ನು

ಭಗದತ್ತನಿಂದ ರಕ್ಷಿಸುವ ಒಬ್ಬ ಯೋಧನೂ ಸಿಗಲಿಲ್ಲ. ಆಗ ಪಾಂಡವರ ಕಡೆಯ ರಾಜರ ಸಮೂಹದಲ್ಲಿ ಭೀಮಸೇನನ ಮಗನಾದ ಘಟೋತ್ಕಚ ನೊಬ್ಬನೇ ವಿಚಲಿತನಾಗದೆ ಅಲ್ಲಿಯೇ ಇದ್ದನು. ಉಳಿದ ಮಹಾರಥರು ಭಗದತ್ತನ ಉಪಟಳವನ್ನು ತಾಳಲಾರದೆ ಖಿನ್ನಮನಸ್ಕರಾಗಿ ಓಡಿಹೋದರು. ಘಟೋತ್ಕಚನೊಬ್ಬನು ವಿಚಲಿತನಾಗದೆ ಭಗದತ್ತನಿಗೆದುರಾಗಿ ನಿಂತಿರುವು ದನ್ನು ಕಂಡು ಪಾಂಡವರ ಕಡೆಯ ಸೈನಿಕರು ಪುನಃ ಯುದ್ಧಕ್ಕೆ ಹಿಂದಿರುಗಿದರು. ಅದನ್ನು ನೋಡಿ ನಿನ್ನ ಸೈನ್ಯದಲ್ಲಿ ದೊಡ್ಡ ಹಾಹಾಕಾರವೆದ್ದಿತು. ಮೇರು ಪರ್ವತವನ್ನು ಕಾರ್ಮುಗಿಲು ಮಳೆಯಿಂದ ಮುಚ್ಚಿಬಿಡುವಂತೆ–ಘಟೋ ತ್ಕಚನು ಭಗದತ್ತನನ್ನು ಬಾಣಗಳಿಂದ ಮುಚ್ಚಿಬಿಟ್ಟನು. ರಾಕ್ಷಸನ ಧನುಸ್ಸಿನಿಂದ ಚ್ಯುತವಾದ ಅಷ್ಟು ಬಾಣಗಳನ್ನೂ ಭಗದತ್ತನು ಕ್ಷಣಮಾತ್ರದಲ್ಲಿ ಕತ್ತರಿಸಿ, ಒಡನೆಯೇ ಬಾಣಗಳಿಂದ ಘಟೋತ್ಕಚನ ಮರ್ಮಸ್ಥಳಗಳನ್ನು ಗಾಯ ಗೊಳಿಸಿದನು. ಪರ್ವತವು ಭೇದಿಸಲ್ಪಟ್ಟರೂ ಸಹ ಸುಸ್ಥಿರವಾಗಿಯೇ ಇರು ವಂತೆ ಬಗ್ಗಿದ ಗಿಣ್ಣುಗಳುಳ್ಳ ಅನೇಕ ಬಾಣಗಳಿಂದ ಪ್ರಹೃತನಾದರೂ ಘಟೋ ತ್ಕಚನು ನಿಂತಲ್ಲಿಂದ ಚಲಿಸಲೂ ಇಲ್ಲ ; ದುಃಖಿತನೂ ಆಗಲಿಲ್ಲ. ಸುಸ್ಥಿರನಾಗಿ ನಿಂತು ಭಗದತ್ತನೊಡನೆ ಸೆಣೆಸುತ್ತಿದ್ದನು. ಅದರಿಂದ ಕ್ರುದ್ಧನಾದ ಪ್ರಾಗ್ಜ್ಯೋ ತಿಷನು ಹದಿನಾಲ್ಕು ತೋಮರಗಳಿಂದ ಭೈಮಸೇನಿಯನ್ನು ಪ್ರಹರಿಸಿದನು. ಅವುಗಳೆಲ್ಲವನ್ನೂ ರಾಕ್ಷಸನು ಕ್ಷಣಮಾತ್ರದಲ್ಲಿ ಕತ್ತರಿಸಿದನು. ಅನಂತರ ಘಟೋತ್ಕಚನು ಗೃಧ್ರಪಕ್ಷಿಯ ರೆಕ್ಕೆಗಳಿಂದ ಕೂಡಿದ್ದ ಎಪ್ಪತ್ತು ಬಾಣಗಳಿಂದ ಭಗದತ್ತನನ್ನು ಪ್ರಹರಿಸಿದನು. ನಗುತ್ತಿರುವನೋ ಎಂಬಂತೆ ಕಾಣುತ್ತಿದ್ದ ಭಗ ದತ್ತನು ಆ ಎಲ್ಲ ಬಾಣಗಳನ್ನೂ ಕತ್ತರಿಸಿ ಪುನಃ ಬಾಣಗಳಿಂದ ಘಟೋತ್ಕಚನ ರಥದ ನಾಲ್ಕು ಕುದುರೆಗಳನ್ನು ಸಂಹರಿಸಿದನು. ಕುದುರೆಗಳು ಸತ್ತುಹೋಗಿ ದ್ದರೂ ಅದೇ ರಥದಲ್ಲಿ ನಿಂತುಕೊಂಡು ಪ್ರತಾಪವಂತನಾದ ರಾಕ್ಷಸೇಂದ್ರನಾದ ಭೈಮಿಯು ಭಗದತ್ತನ ಆನೆಯ ಮೇಲೆ ಶಕ್ತ್ಯಾಯುಧವನ್ನು ಪ್ರಯೋಗಿಸಿದನು. ಬಹುವೇಗವಾಗಿ ಬರುತ್ತಿದ್ದ ಸುವರ್ಣಮಯವಾದ ದಂಡವನ್ನು ಹೊಂದಿದ್ದ, ಮರುಕ್ಷಣದಲ್ಲಿಯೇ ತನ್ನ ಆನೆಯ ಮೇಲೆ ಬೀಳುವುದಾಗಿದ್ದ ಆ ಶಕ್ತ್ಯಾಯುಧವನ್ನು ಭಗದತ್ತನು ಮೂರು ಭಾಗಗಳಾಗಿ ಕತ್ತರಿಸಿಬಿಟ್ಟನು. ಆ ಮೂರು ಚೂರುಗಳೂ ಭೂಮಿಯ ಮೇಲೆ ಚದುರಿದಂತೆ ಬಿದ್ದುವು.

ಹಿಂದೆ ಇಂದ್ರನೊಡನೆ ಯುದ್ಧಮಾಡುತ್ತಿದ್ದಾಗ ದೈತ್ಯಶ್ರೇಷ್ಠನಾದ ನಮುಚಿಯು ಪಲಾಯನಮಾಡಿದಂತೆ-ತಾನು ಬಿಟ್ಟ ಶಕ್ತ್ಯಾಯುಧವು ವಿನಾಶವಾದುದನ್ನು ನೋಡಿ ಹಿಡಿಂಬಾಪುತ್ರನು ಭಯದಿಂದ ಪಲಾಯನಮಾಡಿದನು.

ಘಟೋತ್ಕಚನು ಶೂರನಾಗಿದ್ದನು. ಮಹಾಪರಾಕ್ರಮಿಯಾಗಿದ್ದನು. ಮಹಾಪೌರುಷವುಳ್ಳವನೆಂದೂ ವಿಖ್ಯಾತನಾಗಿದ್ದನು. ಯುದ್ಧದಲ್ಲಿ ಯಮ ಮತ್ತು ವರುಣರಿಂದಲೂ ಸಹ ಅಜೇಯನಾಗಿದ್ದನು. ಅಂತಹವನೂ ಸಹ ಭಗದತ್ತನಿಂದ ಪರಾಜಯಹೊಂದಿದನು. ಭಗದತ್ತನ ಆನೆಯು–ಅರಣ್ಯದ ಆನೆಯು ಸರೋವರದ ಕಮಲಗಳನ್ನು ಕಿತ್ತು ತುಳಿದು ಹಾಳುಮಾಡುವಂತೆ–ಪಾಂಡವರ ಸೈನ್ಯವನ್ನು ತುಳಿದು ಧ್ವಂಸಮಾಡಲು ಉಪಕ್ರಮಿಸಿತು.

ರಣಾಂಗಣದ ಮತ್ತೊಂದು ವಿಭಾಗದಲ್ಲಿ ಶಲ್ಯನು ತನ್ನ ತಂಗಿಯ ಮಕ್ಕಳಾದ ನಕುಲ-ಸಹದೇವರೊಡನೆ ಯುದ್ಧದಲ್ಲಿ ತೊಡಗಿದ್ದನು. ಮಹಾರಾಜ! ಪಾಂಡುನಂದನರಾದ ನಕುಲ-ಸಹದೇವರು ತಮ್ಮ ಸೋದರಮಾವನನ್ನು ಬಾಣಗಳ ಸಮೂಹದಿಂದ ಮುಚ್ಚಿಬಿಟ್ಟರು. ತಮ್ಮ ಮಾತುಲನು ಯುದ್ಧದಲ್ಲಿ ಉತ್ಸಾಹಿತನಾಗಿರುವುದನ್ನು ಕಂಡು ಸಹದೇವನು–ಕಾಲಮೇಘವು ಸೂರ್ಯನನ್ನು ಮುಚ್ಚಿಬಿಡುವಂತೆ–ಬಾಣಗಳ ಸಮೂಹದಿಂದ ಶಲ್ಯನನ್ನು ಮುಚ್ಚಿಬಿಟ್ಟನು. ಈ ರೀತಿಯಲ್ಲಿ ಬಾಣಗಳಿಂದ ಆಚ್ಛಾದಿತನಾದರೂ ಸಹ ಶಲ್ಯನು ಪ್ರಸನ್ನತರನಾಗಿರುವಂತೆಯೇ ಕಾಣುತ್ತಿದ್ದನು. ತಾಯಿಯ ಸಂಬಂಧದ ಕಾರಣದಿಂದಾಗಿ ನಕುಲ-ಸಹದೇವರಿಗೂ ಸಹ ಶಲ್ಯನ ಮೇಲೆ ಅನುಪಮವಾದ ಪ್ರೀತಿಯೇ ಇದ್ದಿತು. ಹೀಗಿದ್ದರೂ ಸಹ ಅವರು ಪರಸ್ಪರ ಜಿಘಾಂಸೆಯಿಂದಲೇ ಯುದ್ಧಮಾಡುತ್ತಿದ್ದರು. ಮಹಾರಥನಾದ ಶಲ್ಯನು ನಗು-ನಗುತ್ತಲೇ ಉತ್ತಮವಾದ ನಾಲ್ಕು ಬಾಣಗಳಿಂದ ನಕುಲನ ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನು ಪ್ರಹರಿಸಿ ಯಮನ ಮನೆಗೆ ಕಳುಹಿಸಿದನು. ಮಹಾರಥನಾದ ನಕುಲನು ಕುದುರೆಗಳಿಂದ ವಿಹೀನವಾಗಿದ್ದ ರಥದಿಂದ ಧುಮುಕಿ ಬಹಳ ಬೇಗ ಪಕ್ಕದಲ್ಲಿಯೇ ಇದ್ದ ಯಶೋವಂತನಾದ ತನ್ನ ತಮ್ಮನ ರಥವನ್ನೇ ಹತ್ತಿಕೊಂಡನು. ಒಂದೇ ರಥದಲ್ಲಿ ಕುಳಿತಿದ್ದ ಆ ಶೂರರು ತಮ್ಮ ಧನುಸ್ಸನ್ನು ಕಿವಿಯವರೆಗೂ ಸೆಳೆದು ನೂರಾರು ಬಾಣಗಳನ್ನು ಒಂದಾದ ಮೇಲೆ ಮತ್ತೊಂದರಂತೆ ಬಿಡುತ್ತಾ ಕ್ಷಣಮಾತ್ರದಲ್ಲಿ ಮದ್ರೇಶ್ವರನ ರಥವನ್ನು ಬಾಣಗಳಿಂದ ಮುಚ್ಚಿಬಿಟ್ಟರು. ತನ್ನ

ಸೋದರಳಿಯಂದಿರು ಬಿಟ್ಟ ಬಗ್ಗಿದ ಗಿಣ್ಣುಗಳುಳ್ಳ ಬಾಣಗಳಿಂದ ಮುಚ್ಚ ಲ್ಪಟ್ಟರೂ ನರವ್ಯಾಘ್ರನಾದ ಶಲ್ಯನು ಸ್ವಲ್ಪವೂ ವಿಚಲಿತನಾಗಲಿಲ್ಲ. ಪರ್ವತ ದಂತೆ ಅಚಲನಾಗಿದ್ದನು. ಪುನಃ ಅವನು ಮಂದಹಾಸದಿಂದಲೇ ತನ್ನ ತಂಗಿಯ ಮಕ್ಕಳು ಬಿಟ್ಟ ವೃಷ್ಟಿರೂಪವಾದ ಬಾಣಗಳನ್ನು ಕ್ಷಣಮಾತ್ರದಲ್ಲಿ ಕತ್ತರಿಸಿ ಬಿಟ್ಟನು. ಅದರಿಂದ ಕ್ರುದ್ಧನಾದ ವೀರ್ಯವಂತನಾದ ಸಹದೇವನು ಬಾಣ ವೊಂದನ್ನು ಬತ್ತಳಿಕೆಯಿಂದ ತೆಗೆದು ಧನುಸ್ಸಿಗೆ ಯೋಜಿಸಿ ಶಿಂಜಿನಿಯನ್ನು ದೀರ್ಘವಾಗಿ ಸೆಳೆದು ಮದ್ರರಾಜನಿಗೆ ಗುರಿಯಿಟ್ಟು ಹೊಡೆದನು. ಸಹದೇವ ನಿಂದ ಬಿಡಲ್ಪಟ್ಟ ಗರುಡ ಮತ್ತು ವಾಯುಗಳಿಗೆ ಸಮಾನವಾದ ವೇಗ ವನ್ನು ಹೊಂದಿದ್ದ ಆ ಬಾಣವು ಮದ್ರರಾಜನನ್ನು ಭೇದಿಸಿ ಭೂಮಿಯ ಮೇಲೆ ಬಿದ್ದಿತು. ಬಾಣದಿಂದ ಬಲವಾದ ಪೆಟ್ಟಿನಿಂದ ವ್ಯಥಿತನಾದ ಶಲ್ಯನು ರಥದ ಹಿಂಭಾಗಕ್ಕೆ ಸರಿದು ಕುಳಿತನು. ಬಹಳವಾದ ಯಾತನೆಯಿಂದಾಗಿ



ಮರುಕ್ಷಣದಲ್ಲಿಯೇ ಅವನು ಮೂರ್ಛಿತನಾದನು. ಯಮಳರಿಂದ ಬಹುವಾಗಿ ಪೀಡಿತನಾದ ರಾಜನು ಜ್ಞಾನಶೂನ್ಯನಾಗಿ ಬಿದ್ದಿರು ವುದನ್ನು ನೋಡಿ ಶಲ್ಯನ ಸೂತನು ರಥವನ್ನು ರಣಾಂಗಣದಿಂದ ಹೊರಕ್ಕೆ ಕೊಂಡೊಯ್ದನು. ರಣಾಂಗಣದಿಂದ ಹಿಂದಿರುಗುತ್ತಿರುವ ಮದ್ರರಾಜನ ರಥವನ್ನು ಕಂಡು ನಿನ್ನ ಮಕ್ಕಳೆಲ್ಲರೂ ಖಿನ್ನಮನಸ್ಕರಾಗಿ ಮದ್ರರಾಜನು ಬದುಕಿರಲಾರನೆಂದು ಚಿಂತಿಸಿದರು. ಮಾದ್ರಿಯ ಮಕ್ಕ

ಳಾದ, ಮಹಾರಥರಾದ ನಕುಲ-ಸಹದೇವರು ಯುದ್ಧದಲ್ಲಿ ತಮ್ಮ ಸೋದರ ಮಾವನನ್ನು ಗೆದ್ದು ಸಂತೋಷಗೊಂಡವರಾಗಿ ಶಂಖಗಳನ್ನು ಊದಿದರಲ್ಲದೇ ಸಿಂಹನಾದಗಳನ್ನೂ ಮಾಡಿದರು. ತಮ್ಮ ವಿಜಯದಿಂದ ಪ್ರಹೃಷ್ಟರಾದ ನಕುಲ-ಸಹದೇವರು ಇಂದ್ರೋಪೇಂದ್ರರು ದೈತ್ಯರ ಸೈನ್ಯವನ್ನು ಎದುರಿಸಿದಂತೆ–ನಿನ್ನ ಸೈನ್ಯವನ್ನು ಬೆನ್ನಟ್ಟಿದರು."

೮೩ನೆಯ ಅಧ್ಯಾಯವು ಮುಗಿಯಿತು.

೮೪ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಯುಧಿಷ್ಠಿರನಿಂದ ಶ್ರುತಾಯುಷನು ಪರಾಜಿತನಾದುದು : ಚೇಕಿತಾನ ಮತ್ತು ಕೃಪಾಚಾರ್ಯರು ಮೂರ್ಛಿತರಾದುದು : ಭೂರಿಶ್ರವಸನಿಂದ ಧೃಷ್ಟಕೇತುವೂ, ಅಭಿಮನ್ಯುವಿನಿಂದ ಚಿತ್ರಸೇನನೇ ಮೊದಲಾದವರೂ ಪರಾಜಿತರಾದುದು : ಸುಶರ್ಮನೇ ಮೊದಲಾದವರೊಡನೆ ಅರ್ಜುನನ ಯುದ್ಧ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಸೂರ್ಯನು ನಡುನೆತ್ತಿಯ ಮೇಲೆ ಬರಲಾಗಿ (ಮಧ್ಯಾಹ್ನವಾಗಲಾಗಿ), ಶ್ರುತಾಯುಷನು ಯುದ್ಧಕ್ಕೆ ಸಜ್ಜಾಗಿ ನಿಂತಿರುವುದನ್ನು ನೋಡಿ ಯುಧಿಷ್ಠಿರನು ರಥವನ್ನು ಅವನ ಬಳಿಗೆ ಒಯ್ಯುವಂತೆ ಸಾರಥಿಗೆ ಹೇಳಿದನು. ರಥವು ಅರಿಂದಮನಾದ ಶ್ರುತಾಯುಷನ ಸಮೀಪಕ್ಕೆ ಹೋಗುತ್ತಲೇ ಯುಧಿಷ್ಠಿರನು ಬಗ್ಗಿದ ಗಿಣ್ಣುಗಳಿದ್ದ ಮತ್ತು ತೀಕ್ಷ್ಣವಾಗಿದ್ದ ಒಂಬತ್ತು ಬಾಣಗಳಿಂದ ಶ್ರುತಾಯುಷನನ್ನು ಪ್ರಹರಿಸಿದನು. ಮಹಾಧನುಷ್ಮಂತನಾದ ಶ್ರುತಾಯುಷನು ಧರ್ಮಪುತ್ರನು ಬಿಟ್ಟ ಒಂಬತ್ತು ಬಾಣಗಳನ್ನೂ ಕತ್ತರಿಸಿ ಅದಕ್ಕೆ ಪ್ರತಿಯಾಗಿ ಏಳು ಬಾಣಗಳಿಂದ ಕೌಂತೇಯನನ್ನು ಪ್ರಹರಿಸಿದನು. ಆ ಏಳು ಬಾಣಗಳೂ ಮಹಾತ್ಮನಾದ ಧರ್ಮರಾಜನ ಕವಚವನ್ನು ಭೇದಿಸಿಕೊಂಡು ದೇಹದಲ್ಲಿ ಅವನ ಪ್ರಾಣಗಳೆಲ್ಲಿವೆಯೆಂಬುದನ್ನು ಹುಡುಕುತ್ತಿವೆಯೋ ಎಂಬಂತೆ ಶರೀರದ ಒಳಹೊಕ್ಕು ರಕ್ತವನ್ನು ಹೀರಿದುವು. ಮಹಾತ್ಮನಾದ ಶ್ರುತಾಯುಷನಿಂದ ಈ ರೀತಿಯಲ್ಲಿ ಪ್ರಹೃತನಾದ ಪಾಂಡವನು

ಒಡನೆಯೇ ಸಂಕ್ರುದ್ಧನಾಗಿ ವರಾಹಕರ್ಣವೆಂಬ ಬಾಣವನ್ನು ಬತ್ತಳಿಕೆಯಿಂದ ತೆಗೆದು ಧನುಸ್ಸಿನಲ್ಲಿ ಯೋಜಿಸಿ ಆಕರ್ಣಾಂತವಾಗಿ ಸೆಳೆದು ಶ್ರುತಾಯುಷನ ವಕ್ಷಃಸ್ಥಳಕ್ಕೆ ಗುರಿಯಿಟ್ಟು ಹೊಡೆದನು. ರಥಶ್ರೇಷ್ಠನಾದ ಪಾರ್ಥನು ಭಲ್ಲವೆಂಬ ಮತ್ತೊಂದು ಬಾಣದಿಂದ ಮಹಾತ್ಮನಾದ ಶ್ರುತಾಯುಷನ ರಥದ ಪತಾಕೆಯನ್ನು ಕತ್ತರಿಸಿ ಕೆಳಕ್ಕೆ ಬೀಳಿಸಿದನು. ತನ್ನ ಪತಾಕೆಯು ಕೆಳಕ್ಕೆ ಬಿದ್ದುದನ್ನು ಕಂಡು ಶ್ರುತಾಯುಷರಾಜನು ಪಾಂಡವನನ್ನು ತೀಕ್ಷ್ಣವಾದ ಏಳು ಬಾಣಗಳಿಂದ ಪ್ರಹರಿಸಿದನು. ಆ ಸಮಯದಲ್ಲಿ ಯುಧಿಷ್ಠಿರನು–ಪ್ರಲಯ ಕಾಲದಲ್ಲಿ ಸರ್ವಪ್ರಾಣಿಗಳನ್ನೂ ದಹಿಸಲಿಚ್ಛಿಸಿ ಹೊರಟಿರುವ ಯಜ್ಞೇಶ್ವರನಂತೆಯೇ–ಕ್ರೋಧದಿಂದ ಪ್ರಜ್ವಲಿಸುತ್ತಿದ್ದನು. ಶಾಂತಗುಣವೇ ಮೂರ್ತಿವೆತ್ತಂತಿದ್ದ ಯುಧಿಷ್ಠಿರನು ಕೋಪಗೊಂಡಿದ್ದನ್ನು ಕಂಡು ಪ್ರೇಕ್ಷಕರಾಗಿ ಬಂದಿದ್ದ ದೇವ-ಗಂಧರ್ವ-ರಾಕ್ಷಸರು ಬಹುವಾಗಿ ವ್ಯಥೆಪಟ್ಟರು. ಅಂತೆಯೇ ಜಗತ್ತೇ ವ್ಯಾಕುಲಗೊಂಡಿತು. ಆ ಸಮಯದಲ್ಲಿ ಎಲ್ಲ ಪ್ರಾಣಿಗಳೂ ಮನಸ್ಸಿನಲ್ಲಿ–'ಕ್ರುದ್ಧನಾದ ಈ ರಾಜನೀಗ ಮೂರು ಲೋಕಗಳನ್ನೂ ಸುಟ್ಟೇಬಿಡುತ್ತಾನೆ'–ಎಂದು ಅಂದುಕೊಂಡುವು. ಮಹಾರಾಜ! ಯುಧಿಷ್ಠಿರನು ಕೋಪಗೊಂಡಿದ್ದ ಆ ಸಮಯದಲ್ಲಿ ಲೋಕಗಳಿಗೆ ಶಾಂತಿಯುಂಟಾಗಲೆಂದು ದೇವರ್ಷಿಗಳೆಲ್ಲರೂ ಸ್ವಸ್ತಿವಾಚನಮಾಡಿದರು. ಕ್ರೋಧಸಮಾವಿಷ್ಟನಾಗಿದ್ದ ಯುಧಿಷ್ಠಿರನು ಕಟವಾಯಿಗಳನ್ನು ನಾಲಿಗೆಯಿಂದ ನೆಕ್ಕಿಕೊಳ್ಳುತ್ತಾ ಪ್ರಲಯ ಕಾಲದಲ್ಲಿ ಹುಟ್ಟುವ ಸೂರ್ಯನಿಗೆ ಸಮಾನವಾದ ಘೋರರೂಪವನ್ನು ತಾಳಿದನು. ಆ ಸಮಯದಲ್ಲಿ ನಿನ್ನ ಎಲ್ಲ ಸೈನಿಕರೂ ತಮ್ಮ ಜೀವಿತದ ಮೇಲಿದ್ದ ಆಶೆಯನ್ನು ಸಂಪೂರ್ಣವಾಗಿ ತೊರೆದೇಬಿಟ್ಟರು. ಮಹಾಯಶಸ್ವಿಯಾದ ಯುಧಿಷ್ಠಿರನು ತಾನೇ ತಾನಾಗಿ ಬಂದ ಆ ಮಹಾಕೋಪವನ್ನು ಧೈರ್ಯದಿಂದ ತಡೆಹಿಡಿದು ತನ್ನ ಹಿಂದಿನ ಶಾಂತಸ್ವರೂಪವನ್ನೇ ತಳೆದು, ಶ್ರುತಾಯುಷನ ಧನುಸ್ಸನ್ನು ಮುಷ್ಟಿಪ್ರದೇಶದಲ್ಲಿ ಕತ್ತರಿಸಿಬಿಟ್ಟನು. ಅನಂತರ ಧನುಸ್ಸಿನಿಂದ ವಿಹೀನನಾಗಿದ್ದ ಶ್ರುತಾಯುಷನನ್ನು ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ನಾರಾಚವೆಂಬ ಬಾಣದಿಂದ ವಕ್ಷಃಸ್ಥಳದಲ್ಲಿ ಪ್ರಹರಿಸಿದನು.

ಶ್ರುತಾಯುಷನನ್ನು ಪ್ರಹರಿಸಿದ ಮರುಕ್ಷಣದಲ್ಲಿಯೇ ಮಹಾಬಲನಾದ ಯುಧಿಷ್ಠಿರನು ಮಹಾತ್ಮನಾದ ಅವನ ರಥದ ಕುದುರೆಗಳನ್ನು ಬಾಣಗಳಿಂದ

ಸಂಹರಿಸಿ, ಶ್ರುತಾಯುಷನ ಸೂತನನ್ನೂ ಯಮಾಲಯಕ್ಕೆ ಕಳುಹಿಸಿಬಿಟ್ಟನು. ಶ್ರುತಾಯುಷನು ಕುದುರೆಗಳಿಂದಲೂ ಮತ್ತು ಸಾರಥಿಯಿಂದಲೂ ವಿಹೀನವಾಗಿದ್ದ ರಥವನ್ನು ಪರಿತ್ಯಜಿಸಿ ರಾಜನಾದ ಯುಧಿಷ್ಠಿರನ ಪರಾಕ್ರಮವನ್ನು ಮನಗಂಡು ಯುದ್ಧಮಾಡುವುದನ್ನು ಬಿಟ್ಟು ಓಡಿಹೋದನು. ಮಹಾಧನುಷ್ಮಂತನಾದ ಶ್ರುತಾಯುಷನನ್ನು ಧರ್ಮಜನು ಪರಾಜಯಗೊಳಿಸಿದನಂತರ ದುರ್ಯೋಧನನ ಎಲ್ಲ ಸೈನ್ಯವೂ ಹಿಮ್ಮೆಟ್ಟಿತು. ಅಂತಹ ಸಾಹಸಕಾರ್ಯವನ್ನು ಮಾಡಿದ ಧರ್ಮಪುತ್ರನಾದ ಯುಧಿಷ್ಠಿರನು ಬಾಯ್ದೆರೆದು ನಿಂತಿರುವ ಕಾಲನೋಪಾದಿಯಲ್ಲಿ ನಿನ್ನ ಸೈನಿಕರನ್ನು ಸಂಹರಿಸಲು ಉಪಕ್ರಮಿಸಿದನು. ಮಹಾರಾಜ! ಮತ್ತೊಂದು ವಿಭಾಗದಲ್ಲಿ ವೃಷ್ಣಿವಂಶಪ್ರದೀಪಕನಾದ ಚೇಕಿತಾನನು ರಥಿಗಳಲ್ಲಿ ಶ್ರೇಷ್ಠರಾದ ಕೃಪರನ್ನು ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಬಾಣಗಳಿಂದ ಮುಚ್ಚಿಬಿಟ್ಟನು. ಚೇಕಿತಾನನು ಬಿಟ್ಟ ಬಾಣಗಳು ತಮ್ಮ ಸಮೀಪಕ್ಕೆ ಬರುವ ಮೊದಲೇ ಕೃಪರು ಅವನ್ನು ಕತ್ತರಿಸಿ ವಿಜಯಗಳಿಸಲು ಪ್ರಯತ್ನಪೂರ್ವಕವಾಗಿ ಯುದ್ಧಮಾಡುತ್ತಿದ್ದ ಚೇಕಿತಾನನನ್ನು ಬಾಣಗಳಿಂದ ಪ್ರಹರಿಸಿದರು. ಕ್ಷಿಪ್ರಹಸ್ತರಾದ ಕೃಪರು ಭಲ್ಲವೆಂಬ ಮತ್ತೊಂದು ಬಾಣದಿಂದ ಚೇಕಿತಾನನ ಧನುಸ್ಸನ್ನು ಕತ್ತರಿಸಿ ಮತ್ತೊಂದು ಬಾಣದಿಂದ ಅವನ ಸಾರಥಿಯನ್ನೂ ಸಂಹರಿಸಿದರು. ಕೃಪರು ಅಷ್ಟರಿಂದಲೇ ತೃಪ್ತರಾಗಲಿಲ್ಲ. ಚೇಕಿತಾನನ ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನೂ, ಅವನ ರಥದ ಪಾರ್ಶ್ವಗಳ ರಕ್ಷಕರಾಗಿದ್ದ ಇಬ್ಬರು ಸಾರಥಿಗಳನ್ನೂ ನಿಶಿತವಾದ ಬಾಣಗಳಿಂದ ಸಂಹರಿಸಿದರು. ಧನುಸ್ಸು, ಕುದುರೆಗಳು, ಸಾರಥಿ ಇವರೆಲ್ಲರಿಂದಲೂ ವಿಹೀನನಾದ ಸಾತ್ವತನು ಒಡನೆಯೇ ರಥದಿಂದ ಧುಮುಕಿ ಗದೆಯನ್ನು ಕೈಗೆ ತೆಗೆದುಕೊಂಡನು. ಗದಾಧಾರಿಗಳಲ್ಲಿ ಶ್ರೇಷ್ಠನಾದ ಸಾತ್ವತನು ವೀರಘಾತಿನಿಯಾದ ಆ ಗದೆಯಿಂದ ನಿಮಿಷಮಾತ್ರದಲ್ಲಿ ಗೌತಮರ ಕುದುರೆಗಳನ್ನು ಸಂಹರಿಸಿ ಅನಂತರ ಮತ್ತೊಂದು ಗದಾಪ್ರಹಾರದಿಂದ ಸಾರಥಿಯನ್ನೂ ಕೆಳಗುರುಳಿಸಿದನು. ಅದನ್ನು ಕಂಡು ಕ್ರುದ್ಧರಾದ ಕೃಪರು ತಾವೂ ರಥದಿಂದಿಳಿದು ಚೇಕಿತಾನನ ಮೇಲೆ ಹದಿನಾರು ಬಾಣಗಳನ್ನು ಪ್ರಯೋಗಿಸಿದರು. ಆ ಬಾಣಗಳು ಸಾತ್ವತನನ್ನು ಭೇದಿಸಿಕೊಂಡು ಹೊರಬಂದು ಭೂಮಿಯನ್ನು ಹೊಕ್ಕವು. ಗೌತಮರ ಪ್ರಹಾರದಿಂದ ಪರಮಕ್ರುದ್ಧನಾದ ಚೇಕಿತಾನನು ಗೌತಮರನ್ನು ವಧೆಮಾಡುವ ಉದ್ದೇಶದಿಂದ–ಇಂದ್ರನು ವೃತ್ರಾಸುರನನ್ನು ವಜ್ರಾಯುಧ

ದಿಂದ ಪ್ರಹರಿಸಿದಂತೆ–ಗದೆಯನ್ನು ವರಸೆಯ ಕ್ರಮದಲ್ಲಿ ತಿರುಗಿಸಿ ಗೌತಮರ ಮೇಲೆ ಪ್ರಯೋಗಿಸಿದನು. ತನ್ನ ಮೇಲೆ ಬೀಳುವುದರಲ್ಲಿದ್ದ ಪಚ್ಚೆಕಲ್ಲಿನಿಂದಲೇ ನಿರ್ಮಿತವಾಗಿದ್ದ, ಸ್ವಚ್ಛವಾಗಿದ್ದ ಆ ಮಹಾಗದೆಯನ್ನು ಕೃಪರು ಅನೇಕ ಸಹಸ್ರ ಬಾಣಗಳ ಪ್ರಯೋಗದಿಂದ ತಡೆದುಬಿಟ್ಟರು. ಅದರಿಂದ ಮತ್ತೂ ಕೋಪಗೊಂಡ ಚೇಕಿತಾನನು ಒರೆಯಿಂದ ಕತ್ತಿಯನ್ನು ಸೆಳೆದು ಮೇಲೆತ್ತಿಕೊಂಡು ಅತ್ಯವಸರದಿಂದ ಗೌತಮರ ಸಮೀಪಕ್ಕೆ ಧಾವಿಸಿದನು. ಚೇಕಿತಾನನು ಖಡ್ಗಹಸ್ತನಾಗಿ ಬರುತ್ತಿರುವುದನ್ನು ನೋಡಿ ಜಿತೇಂದ್ರಿಯರಾದ ಕೃಪರೂ ಸಹ ಧನುಸ್ಸನ್ನು ಬದಿಗಿಟ್ಟು ಕತ್ತಿಯನ್ನು ಹಿಡಿದುಕೊಂಡು ಅತ್ಯವಸರದಿಂದಲೇ ಮುಂದೆಹೋಗಿ ಚೇಕಿತಾನನನ್ನು ಮಾರ್ಗಮಧ್ಯ ದಲ್ಲಿಯೇ ಸಂಧಿಸಿದರು. ಕೃಪ-ಚೇಕಿತಾನರು ಬಲಸಂಪನ್ನರಾಗಿದ್ದರು. ಶ್ರೇಷ್ಠ ವಾದ ಕತ್ತಿಗಳನ್ನು ಧರಿಸಿದವರಾಗಿದ್ದರು. ಸುತೀಕ್ಷ್ಣವಾಗಿದ್ದ ಕತ್ತಿಗಳಿಂದ ಇಬ್ಬರೂ ಪರಸ್ಪರವಾಗಿ ಹೋರಾಡಿದರು. ಕತ್ತಿಯ ವೇಗದಿಂದ ಪ್ರಹೃತರಾದ ಪುರುಷರ್ಷಭರಾದ ಕೃಪ-ಚೇಕಿತಾನರಿಬ್ಬರೂ ಬಹಳವಾಗಿ ಗಾಯಗೊಂಡವ ರಾಗಿ ಸರ್ವಪ್ರಾಣಿಗಳಿಗೂ ನಿವಾಸಭೂತವಾಗಿರುವ ಭೂಮಿಯ ಮೇಲೆ ಬಿದ್ದರು.

ಖಡ್ಗಯುದ್ಧದಲ್ಲಿ ಅಧಿಕಶ್ರಮದಿಂದಾಗಿ ಇಬ್ಬರೂ ಬಹಳವಾಗಿ ಸೋತಿ ದ್ದರು. ಪರಸ್ಪರ ಕ್ಷತ-ವಿಕ್ಷತರಾಗಿ ಮೂರ್ಛೆಯಿಂದ ಆವೃತವಾದ ಅಂಗವುಳ್ಳವ ರಾಗಿದ್ದರು (ಮೂರ್ಛಿತರಾದರು). ಆ ವೇಳೆಗೆ ಸರಿಯಾಗಿ ಯುದ್ಧದುರ್ಮದನಾದ ಕರಕರ್ಷನು ಚೇಕಿತಾನನ ಮೇಲೆ ತನಗಿದ್ದ ಸ್ನೇಹದ ಕಾರಣದಿಂದಾಗಿ ವೇಗದಿಂದ ಚೇಕಿತಾನನಿದ್ದೆಡೆಗೆ ಬಂದು ಅವನು ಮೂರ್ಛಿತನಾಗಿ ಬಿದ್ದಿರುವುದನ್ನು ನೋಡಿ ಎಲ್ಲ ಸೈನಿಕರೂ ನೋಡುತ್ತಿ ದ್ದಂತೆಯೇ ಅವನನ್ನೆತ್ತಿ ತನ್ನ ರಥದಲ್ಲಿ ಕುಳ್ಳಿರಿಸಿಕೊಂಡನು. ಅದೇ ರೀತಿಯಲ್ಲಿ ನಿನ್ನ ಭಾವಮೈದುನನಾದ ಶೂರನಾದ ಶಕುನಿಯೂ ಸಹ ರಥಿಗಳಲ್ಲಿ ಶ್ರೇಷ್ಠರಾದ ಗೌತಮರನ್ನೆತ್ತಿ ತನ್ನ ರಥದಲ್ಲಿ ಕುಳ್ಳಿರಿಸಿಕೊಂಡನು.

ರಣಾಂಗಣದ ಮತ್ತೊಂದು ವಿಭಾಗದಲ್ಲಿ ಸೋಮದತ್ತನ ಮಗನಾದ ಭೂರಿಶ್ರವಸನಿಗೂ–ಧೃಷ್ಟಕೇತುವಿಗೂ ಯುದ್ಧವು ನಡೆಯುತ್ತಿದ್ದಿತು. ಮಹಾ ಬಲನಾದ, ಪರಮಕ್ರುದ್ಧನಾದ ಧೃಷ್ಟಕೇತುವು ಭೂರಿಶ್ರವಸನ ವಕ್ಷಃಸ್ಥಳವನ್ನು

ತೊಂಬತ್ತು ಬಾಣಗಳಿಂದ ಪ್ರಹರಿಸಿದನು. ಮಧ್ಯಾಹ್ನಕಾಲದಲ್ಲಿ ಸೂರ್ಯನು ಕಿರಣಗಳಿಂದ ಅತ್ಯಧಿಕವಾಗಿ ಪರಿಶೋಭಿಸುವಂತೆಯೇ ಹೃದಿಸ್ಥವಾದ ತೊಂಬತ್ತು ಬಾಣಗಳಿಂದ ಭೂರಿಶ್ರವಸನು ಪರಿಶೋಭಿಸಿದನು. ಆದರೆ ಅದ ರಿಂದ ಸೌಮದತ್ತಿಯು ಅಧೀರನಾಗಲಿಲ್ಲ. ಮಹಾರಥನಾದ ಧೃಷ್ಟಕೇತುವನ್ನು ಉತ್ತಮವಾದ ಬಾಣಗಳಿಂದ–ಸೂತನಿಂದಲೂ, ಅಶ್ವಗಳಿಂದಲೂ ವಿಹೀನ ನನ್ನಾಗಿ ಮಾಡಿ (ಅವನ ಸಾರಥಿಯನ್ನೂ ಕುದುರೆಗಳನ್ನೂ ಸಂಹರಿಸಿ) ರಥ ಹೀನನನ್ನಾಗಿಯೂ ಮಾಡಿಬಿಟ್ಟನು. ಧೃಷ್ಟಕೇತುವು ರಥಹೀನನಾದುದನ್ನು ಕಂಡು ಭೂರಿಶ್ರವಸನು ಬಾಣಗಳ ಮಳೆಗರೆದು ಅವನನ್ನು ಮುಚ್ಚಿಬಿಟ್ಟನು. ಮಹಾತ್ಮನಾದ ಧೃಷ್ಟಕೇತುವು ಸೂತನಿಂದಲೂ, ಕುದುರೆಗಳಿಂದಲೂ ವಿಹೀನವಾಗಿದ್ದ ರಥವನ್ನು ಒಡನೆಯೇ ತ್ಯಜಿಸಿ ಶತಾನೀಕನ ರಥವನ್ನು ಹತ್ತಿ ಕುಳಿತನು.

ಮಹಾರಾಜ! ರಣಾಂಗಣದ ಮತ್ತೊಂದು ಕಡೆಯಲ್ಲಿ ರಥಿಗಳಾದ ಚಿತ್ರಸೇನ, ವಿಕರ್ಣ ಮತ್ತು ದುರ್ಮರ್ಷಣರು ಸುವರ್ಣಮಯವಾದ ಕವಚ ಗಳನ್ನು ಧರಿಸಿ ಸೌಭದ್ರನ ಮೇಲೆ ದಾಳಿಮಾಡುತ್ತಿದ್ದರು. ಶರೀರಕ್ಕೆ ವಾತ-ಪಿತ್ತ-ಕಫಗಳೊಡನೆ ಘೋರವಾದ ಘರ್ಷಣೆಯುಂಟಾಗುವಂತೆ–ಅಭಿಮನ್ಯು ವಿಗೂ ಮತ್ತು ಆ ಮೂವರು ಧೃತರಾಷ್ಟ್ರರಾಜಕುಮಾರರಿಗೂ ಘೋರವಾದ ಯುದ್ಧವು ಪ್ರಾರಂಭವಾಯಿತು.

ಅಭಿಮನ್ಯುವು ತನ್ನ ಪರಾಕ್ರಮದಿಂದಲೂ ಮತ್ತು ಹಸ್ತಲಾಘವ ದಿಂದಲೂ ನಿನ್ನ ಮಕ್ಕಳನ್ನು ಕ್ಷಣಮಾತ್ರದಲ್ಲಿ ರಥಹೀನರನ್ನಾಗಿ ಮಾಡಿಬಿಟ್ಟನು. ಆದರೆ ನರವ್ಯಾಘ್ರನಾದ ಅಭಿಮನ್ಯುವು ದೊಡ್ಡಪ್ಪನಾದ ಭೀಮನು ಮಾಡಿರುವ ಪ್ರತಿಜ್ಞಾವಚನವನ್ನು ಸ್ಮರಿಸಿ ಆ ನಿನ್ನ ಮೂವರು ಮಕ್ಕಳನ್ನು ಸಂಹರಿಸಲಿಲ್ಲ.

ಅನಂತರ ಸಾವಿರಾರು ರಾಜರಿಂದಲೂ, ಗಜಾಶ್ವ-ರಥಗಳಲ್ಲಿ ಕುಳಿತು ಹೋಗುವ ಯೋಧರಿಂದಲೂ ಪರಿವೃತನಾದ, ದೇವತೆಗಳಿಂದಲೂ ಎದುರಿ ಸಲು ಅಸಾಧ್ಯನಾದ ಭೀಷ್ಮನು ನಿನ್ನ ಮಕ್ಕಳನ್ನು ರಕ್ಷಿಸುವ ಸಲುವಾಗಿ–ಮಹಾ ರಥನಾದ, ಏಕಾಕಿಯಾದ, ಬಾಲಕನಾದ ಅಭಿಮನ್ಯುವನ್ನು ಲಕ್ಷ್ಯವಾಗಿಟ್ಟು ಕೊಂಡು ಬಹುಶೀಘ್ರವಾಗಿ ಹೋಗುತ್ತಿರುವುದನ್ನು ನೋಡಿ ಕುಂತೀಪುತ್ರ

ನಾದ ಶ್ವೇತವಾಹನನಾದ ಅರ್ಜುನನು ವಾಸುದೇವನೊಡನೆ ಹೀಗೆಂದು ಹೇಳಿದನು :

"ಹೃಷೀಕೇಶ! ಅಪಾರಸಂಖ್ಯೆಯಲ್ಲಿ ರಥಿಗಳು ಎಲ್ಲಿ ನಿಂತಿರುವರೋ ಅಲ್ಲಿಗೆ ಹೋಗುವಂತೆ ಕುದುರೆಗಳನ್ನು ಪ್ರಚೋದಿಸು. ಅಲ್ಲಿ ಯುದ್ಧಕ್ಕೆ ಸಜ್ಜಾಗಿ ನಿಂತಿರುವವರೆಲ್ಲರೂ ಶೂರರಾಗಿಯೂ, ಅನೇಕಾಸ್ತ್ರಗಳನ್ನು ಸಿದ್ಧಿ ಮಾಡಿಕೊಂಡಿರುವವರಾಗಿಯೂ ಮತ್ತು ಯುದ್ಧೋನ್ಮತ್ತರಾಗಿಯೂ ಇರುತ್ತಾರೆ. ನಮ್ಮ ಸೈನ್ಯವನ್ನವರು ಸಂಹರಿಸಲು ಪ್ರಾರಂಭಿಸುವುದರೊಳಗಾಗಿ ನಾವಲ್ಲಿಗೆ ಹೋಗುವಂತೆ ಕುದುರೆಗಳನ್ನು ದೌಡಾಯಿಸು." ಅಮಿತವಾದ ತೇಜಸ್ಸಿನಿಂದ ಕೂಡಿದ್ದ ಅರ್ಜುನನ ಮಾತಿನಂತೆಯೇ ಶ್ರೀಕೃಷ್ಣನು ಬಿಳಿಯ ಕುದುರೆಗಳಿಂದ ಯುಕ್ತವಾಗಿದ್ದ ರಥವನ್ನು ಅರ್ಜುನನು ಹೇಳಿದ ಸ್ಥಳಕ್ಕೆ ಕೊಂಡೊಯ್ದನು. ಕ್ರುದ್ಧನಾದ ಅರ್ಜುನನು ನಿನ್ನ ಸೈನ್ಯವಿದ್ದ ಕಡೆಗೆ ಬರುತ್ತಿದ್ದುದನ್ನು ನೋಡಿ ನಿನ್ನ ಸೈನ್ಯದಲ್ಲಿ ದೊಡ್ಡ ಕೋಲಾಹಲವುಂಟಾಯಿತು. ಅರ್ಜುನನು ಭೀಷ್ಮನನ್ನು ರಕ್ಷಿಸುತ್ತಿದ್ದ ರಾಜರ ಸಮೀಪಕ್ಕೆ ಹೋಗಿ ಆ ರಾಜರ ಮಧ್ಯದಲ್ಲಿದ್ದ ಸುಶರ್ಮನನ್ನು ಕುರಿತು ಈ ಮಾತನ್ನು ಹೇಳಿದನು :

"ವೀರನೇ! ನೀನು ಯೋಧರಲ್ಲಿ ಶ್ರೇಷ್ಠನೆಂಬುದನ್ನೂ ಮತ್ತು ನೀನು ನಮಗೆ ಹಳೆಯ ಶತ್ರುವೆಂಬುದನ್ನೂ ನಾನು ತಿಳಿದಿರುತ್ತೇನೆ. ನೀವು ನಮಗೆ ಬಹಳ ಅನ್ಯಾಯಮಾಡಿದ್ದೀರಿ. ಅಂದು ಮಾಡಿದ ಅನ್ಯಾಯಕ್ಕಾಗಿ ಇಂದು ಸುದಾರುಣವಾದ ಫಲವು ನಿಮಗೆ ಸನ್ನಿಹಿತವಾಗಿದೆ. ಈಗ ನಾನು ನಿನಗೆ ಬಹಳ ಹಿಂದೆಯೇ ಪ್ರೇತರಾಗಿಹೋದ (ಮರಣಹೊಂದಿದ) ಪಿತಾಮಹರನ್ನು ತೋರಿಸುತ್ತೇನೆ. (ನನ್ನ ಕೈಯಲ್ಲಿ ಸಂಹೃತನಾಗುವ ನೀನು ಈಗಲೇ ಪ್ರೇತರಾಜ್ಯಕ್ಕೆ ಹೋಗಿ ಅಲ್ಲಿರುವ ನಿನ್ನ ಪಿತಾಮಹರನ್ನು ಸಂದರ್ಶಿಸುವೆ.)"

ಶತ್ರುಗಳನ್ನು ಘಾಸಿಪಡಿಸುವ ಬೀಭತ್ಸುವು ಇಂತಹ ಕಠಿಣವಾದ ಮಾತುಗಳನ್ನಾಡಿದರೂ ಆ ಮಾತುಗಳನ್ನು ಕೇಳಿಸಿಕೊಂಡ, ರಥಗಳ ಸಮೂಹಕ್ಕೇ ನಾಯಕನಾದ ಸುಶರ್ಮನು ಅರ್ಜುನನ ಮಾತಿಗೆ ಪ್ರತಿಯಾಗಿ ಒಳ್ಳೆಯ ಮಾತನ್ನಾಗಲೀ, ಕೆಟ್ಟಮಾತನ್ನಾಗಲೀ ಆಡಲಿಲ್ಲ. ಅನೇಕ ರಾಜರಿಂದ ಪರಿವೃತನಾಗಿದ್ದ ಸುಶರ್ಮನು ನಿನ್ನ ಮಕ್ಕಳೊಡನೆ ಅರ್ಜುನನ ರಥವನ್ನು ಹಿಂದೆ-ಮುಂದೆ ಮತ್ತು ಅಕ್ಕ-ಪಕ್ಕಗಳಲ್ಲಿ (ಎಲ್ಲ ದಿಕ್ಕುಗಳಿಂದಲೂ) ಮುತ್ತಿಗೆ

ಹಾಕಿ ಮೇಘಗಳು ಸೂರ್ಯನನ್ನು ಮುಚ್ಚಿಬಿಡುವಂತೆ–ಬಾಣಗಳಿಂದ ಕಿರೀಟಿಯನ್ನು ಮುಚ್ಚಿಬಿಟ್ಟನು.

ಅನಂತರ ನಿನ್ನ ಕಡೆಯವರಿಗೂ ಮತ್ತು ಪಾಂಡವರಿಗೂ ನಡುವೆ ನೀರಿನೋಪಾದಿಯಲ್ಲಿ ರಕ್ತವನ್ನು ಪ್ರವಹಿಸಿದ ಮಹಾಘೋರವಾದ ಯುದ್ಧವು ನಡೆಯಿತು.”

೮೪ನೆಯ ಅಧ್ಯಾಯವು ಮುಗಿಯಿತು.

೮೫ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಅರ್ಜುನನ ಪರಾಕ್ರಮ : ಪಾಂಡವರು ಭೀಷ್ಮನ ಮೇಲೆ ಆಕ್ರಮಣ ಮಾಡಿದುದು : ಯುಧಿಷ್ಠಿರನು ಶಿಖಂಡಿಯನ್ನು ನಿಂದಿಸಿದುದು : ಭೀಮನ ಪೌರುಷ

ಸಂಜಯನು ಧೃತರಾಷ್ಟ್ರನಿಗೆ ಅರ್ಜುನನ ಯುದ್ಧವನ್ನು ವರ್ಣಿಸಿ ಹೇಳುತ್ತಾನೆ :

“ಮಹಾರಾಜ! ನಿನ್ನ ಕಡೆಯ ಎಲ್ಲ ಮಹಾರಥರಿಂದಲೂ ಏಕಕಾಲದಲ್ಲಿ ಬಾಣಗಳಿಂದ ಪ್ರಹೃತನಾದ ಧನಂಜಯನು ಕಾಲಿನಿಂದ ತುಳಿಯಲ್ಪಟ್ಟ ಸರ್ಪದಂತೆ ನಿಟ್ಟುಸಿರುಬಿಡುತ್ತಾ ಒಂದೊಂದೇ ಬಾಣದಿಂದ ತನ್ನ ಸುತ್ತಲೂ ಇದ್ದ ಮಹಾರಥರ ಧನುಸ್ಸುಗಳನ್ನೂ ಕ್ಷಣಮಾತ್ರದಲ್ಲಿ ಕತ್ತರಿಸಿದನು. ‘ತನ್ನನ್ನು ಎದುರಿಸುತ್ತಿರುವ ಈ ರಾಜರಲ್ಲಿ ಯಾರೊಬ್ಬರನ್ನೂ ಉಳಿಸಕೂಡದು. ನಿಃಶೇಷವಾಗಿ ಎಲ್ಲರನ್ನೂ ಸಂಹರಿಸಿಬಿಡಬೇಕು’–ಎಂದು ನಿಶ್ಚಯಿಸಿದ ಮಹಾತ್ಮನಾದ ಅರ್ಜುನನು ಒಂದೇ ಬಾರಿಗೆ ಸುತ್ತಲೂ ಇದ್ದ ಎಲ್ಲ ರಾಜರನ್ನೂ ಬಾಣಗಳಿಂದ ಗಾಯಗೊಳಿಸಿದನು. ಇಂದ್ರನ ಮಗನಾದ ಅರ್ಜುನನಿಂದ ಪ್ರಹೃತರಾದ ಆ ರಾಜರು ಬಾಣಾಘಾತಗಳ ಗಾಯಗಳಿಂದ ಹೊರಬಂದ ರಕ್ತದಿಂದ ತೋಯ್ದುವರಾಗಿ ತಮ್ಮ-ತಮ್ಮ ರಥಗಳಿಂದ ಕೆಳಗುರುಳಿದರು. ಕೆಲವರ ಶರೀರಗಳು ಕ್ಷತ-ವಿಕ್ಷತವಾಗಿದ್ದುವು. ಕೆಲವರ ಶಿರಸ್ಸುಗಳೇ ಕೆಳಕ್ಕೆ ಬಿದ್ದಿದ್ದುವು. ಕೆಲವರ ಕವಚಗಳು ಕತ್ತರಿಸಿ ಕೆಳಗೆ ಬಿದ್ದಿದ್ದುವು. ಮತ್ತೆ ಕೆಲವರು ಅಸುವನ್ನೇ ನೀಗಿದ್ದರು.

ವಿಚಿತ್ರರೂಪಗಳನ್ನು ಧರಿಸಿದ್ದ ರಾಜರು ಪಾರ್ಥನ ಬಲದಿಂದ ಪರಾಜಯವನ್ನು ಹೊಂದಿ ನೆಲದ ಮೇಲೆ ಬಿದ್ದು ಒಂದೇ ಬಾರಿಗೆ ವಿನಾಶಹೊಂದಿದರು. ಪಾರ್ಥನನ್ನು ಸುತ್ತುವರಿದಿದ್ದ ರಾಜರೆಲ್ಲರೂ ಹತರಾದುದನ್ನು ಕಂಡು ತ್ರಿಗರ್ತರಾಜನು ರಥದಲ್ಲಿ ಕುಳಿತು ಅರ್ಜುನನನ್ನು ಆಕ್ರಮಿಸಿದನು. ಗತಿಸಿಹೋದ ರಾಜರ ಪೃಷ್ಠರಕ್ಷಕರಾಗಿದ್ದ ಮೂವತ್ತೆರಡು ಮಂದಿ ರಥಿಕರೂ ತ್ರಿಗರ್ತರಾಜನಾದ ಸುಶರ್ಮನ ಜೊತೆಯಲ್ಲಿ ಸೇರಿ ಅರ್ಜುನನನ್ನು ಆಕ್ರಮಿಸಿದರು. ಅವರೆಲ್ಲರೂ ಸೇರಿಕೊಂಡು ಅರ್ಜುನನನ್ನು ಪುನಃ ಸುತ್ತುಗಟ್ಟಿ ನಿಂತು ಘೋರವಾದ ನಿನಾದವನ್ನುಂಟುಮಾಡುವ ಧನುಸ್ಸುಗಳನ್ನು ಆಕರ್ಣಾಂತವಾಗಿ ಸೆಳೆದು–ಮೋಡಗಳು ಮಳೆಗರೆಯುವಿಕೆಯಿಂದ ಪರ್ವತವನ್ನು ಮುಚ್ಚಿಬಿಡುವಂತೆ–ಬಾಣಗಳ ಸಮೂಹವನ್ನೇ ಮಳೆಯ ರೂಪದಲ್ಲಿ ಅರ್ಜುನನ ಮೇಲೆ ಸುರಿಸಿ ಅವನನ್ನು ಮುಚ್ಚಿದರು. ಶರವೃಷ್ಟಿಯಿಂದ ಪೀಡಿತನಾದ ಧನಂಜಯನು ಕುಪಿತನಾಗಿ ಎಣ್ಣೆಯಲ್ಲಿ ನೆನೆಸಲ್ಪಟ್ಟ ಅರುವತ್ತು ಬಾಣಗಳಿಂದ ಪೃಷ್ಠರಕ್ಷಕರನ್ನು ಸಂಹರಿಸಿದನು. ಈ ರೀತಿಯಲ್ಲಿ ಅನೇಕ ರಾಜರನ್ನೂ ಮತ್ತು ಅವರ ಪೃಷ್ಠರಕ್ಷಕರನ್ನೂ ಯುದ್ಧದಲ್ಲಿ ಜಯಿಸಿ, ಕೌರವರ ಅಸಂಖ್ಯಾತರಾದ ಸೈನಿಕರನ್ನೂ ಸಂಹರಿಸಿ, ಸುಪ್ರೀತನಾದ, ಯಶಸ್ವಿಯಾದ ಧನಂಜಯನು ಭೀಷ್ಮನನ್ನು ವಧೆಮಾಡುವ ಅವಸರದಿಂದ ಹೊರಡಲನುವಾದನು. ತ್ರಿಗರ್ತಾಧಿಪತಿಯು ತನ್ನ ಬಂಧುವರ್ಗದವರೆಲ್ಲರೂ ಮಹಾತ್ಮನಾದ ಅರ್ಜುನನಿಂದ ಹತರಾದುದನ್ನು ಕಂಡು ಅಧೀರನಾಗದೇ, ಅಳಿದುಳಿದಿದ್ದ ಇನ್ನೂ ಅನೇಕ ರಾಜರನ್ನು ಮುಂದೆಮಾಡಿಕೊಂಡು ಅರ್ಜುನನನ್ನು ಸಂಹರಿಸುವ ಸಲುವಾಗಿ ಅವಸರದಿಂದ ಅವನನ್ನು ಆಕ್ರಮಿಸಿದನು. ಅಸ್ತ್ರವಿದರಲ್ಲಿ ಶ್ರೇಷ್ಠನಾದ ಸುಶರ್ಮನೇ ಮೊದಲಾದ ರಾಜರು ಪಾರ್ಥನನ್ನು ಆಕ್ರಮಿಸುತ್ತಿರುವುದನ್ನು ನೋಡಿ ಶಿಖಂಡಿಪ್ರಮುಖರಾದ ಮಹಾರಥರು ಅರ್ಜುನನ ರಥವನ್ನು ರಕ್ಷಿಸುವ ಸಲುವಾಗಿ ನಿಶಿತವಾದ ಶಸ್ತ್ರಾಸ್ತ್ರಗಳನ್ನು ಧರಿಸಿ ಅರ್ಜುನನ ರಥದ ಕಡೆಗೆ ಹೊರಟರು. ಇತ್ತಲಾಗಿ, ತ್ರಿಗರ್ತರಾಜನೊಡನೆ ಸೇರಿಕೊಂಡು ಅನೇಕ ರಾಜರು ತನ್ನ ಮೇಲೆ ಬಿದ್ದುದನ್ನು ಕಂಡು ಧನುಷ್ಮಂತನಾದ ಅರ್ಜುನನು ಗಾಂಡೀವಧನುಸ್ಸಿನಿಂದ ಪ್ರಮುಕ್ತವಾದ, ನಿಶಿತವಾದ ಬಾಣಗಳಿಂದ ತನ್ನ ಮೇಲೆ ದಾಳಿಮಾಡಲು ಬಂದವರೆಲ್ಲರನ್ನೂ

ಧ್ವಂಸಮಾಡಿ ಪುನಃ ಭೀಷ್ಮನಿದ್ದಲ್ಲಿಗೇ ಹೋಗಲಿಚ್ಛೆಸಿದಾಗ–ದುರ್ಯೋಧನ ನನ್ನೂ ಸೈಂಧವನೇ ಮೊದಲಾದ ರಾಜರನ್ನೂ ನೋಡಿದನು. ದುರ್ಯೋಧನಾದಿಗಳು ಪಾರ್ಥನನ್ನು ಮುಂದೆ ಹೋಗದಂತೆ ತಡೆಯುತ್ತಿದ್ದರು. ಆ ಸಮಯದಲ್ಲಿ ಅನಂತಪರಾಕ್ರಮಿಯಾದ, ಮಹಾತೇಜಸ್ವಿಯಾದ ವೀರನಾದ ಅರ್ಜುನನು ಮುಹೂರ್ತಕಾಲ ಬಲಪೂರ್ವಕವಾಗಿ ಅವರೊಡನೆ ಯುದ್ಧ ಮಾಡಿ ಅವರು ತನಗೆ ಪ್ರತಿಬಂಧಕವನ್ನುಂಟುಮಾಡದಂತೆ ಮಾಡಿದನು. ಅನಂತರ ದುರ್ಯೋಧನನನ್ನೂ ಜಯದ್ರಥನೇ ಮೊದಲಾದ ರಾಜರನ್ನೂ ಅಲ್ಲಿಯೇ ಬಿಟ್ಟು ಭೀಮಬಲನಾದ ಮನನಶೀಲನಾದ ಅರ್ಜುನನು ಶರ-ಚಾಪಪಾಣಿಯಾಗಿ ಗಾಂಗೇಯನ ಸಮೀಪಕ್ಕೆ ತೆರಳಿದನು. ಅದೇ ಸಮಯ ದಲ್ಲಿ ಪ್ರಬಲನಾದ, ಅನಂತಕೀರ್ತಿಯಾದ, ಮಹಾತ್ಮನಾದ ಯುಧಿಷ್ಠಿರನೂ ಸಹ *ತನ್ನ ಭಾಗಕ್ಕೆ ಬಂದಿದ್ದ ಮದ್ರಾಧಿಪತಿಯಾದ ಶಲ್ಯನನ್ನು ಪರಿತ್ಯಜಿಸಿ ಕೋಪಾವಿಷ್ಟನಾಗಿ ಶಾಂತನುವಿನ ಮಗನಾದ ಭೀಷ್ಮನೊಡನೆಯೇ ಯುದ್ಧ ಮಾಡಲು ನಕುಲ-ಸಹದೇವ-ಭೀಮಸೇನರೊಡನೆ ತೆರಳಿದನು.

ಮಹಾರಥರಾದ ಐವರು ಪಾಂಡವರೂ ಸಂಘಟಿತರಾಗಿ ಏಕಕಾಲದಲ್ಲಿ ತನ್ನನ್ನು ಆಕ್ರಮಿಸಲು ಬಂದರೂ ಸಹ ಚಿತ್ರಯೋಧಿಯಾದ, ಗಂಗೆಯ ಮಗ ನಾದ, ಮಹಾತ್ಮನಾದ ಶಾಂತನವನು ಎದೆಗುಂದಲಿಲ್ಲ. ಆ ವೇಳೆಗೆ ಜಯದ್ರಥಾದಿ ರಾಜರೂ, ದುರ್ಯೋಧನನೂ ಭೀಷ್ಮನ ರಕ್ಷಣೆಗಾಗಿ ಬಂದರು. ಸತ್ಯಸಂಧನಾದ, ಉಗ್ರಬಲನಾದ, ಮನಸ್ವಿಯಾದ ಜಯದ್ರಥನು ತನ್ನ ಶ್ರೇಷ್ಠವಾದ ಧನುಸ್ಸಿನಿಂದ ಪ್ರಯತ್ನಪೂರ್ವಕವಾಗಿ ಮಹಾರಥರಾದ ಪಾಂಡವರ ಧನುಸ್ಸುಗಳನ್ನು ಕ್ಷಣಮಾತ್ರದಲ್ಲಿ ಕತ್ತರಿಸಿದನು. ಕ್ರೋಧವೆಂಬ ವಿಷವನ್ನೇ ಕಾರುತ್ತಿದ್ದ, ಮಹಾತ್ಮನಾದ ದುರ್ಯೋಧನನು ಕೋಪಾವಿಷ್ಟನಾಗಿ ಯುಧಿಷ್ಠಿರನನ್ನೂ, ಭೀಮಸೇನನನ್ನೂ, ಯಮಳರನ್ನೂ, ಪಾರ್ಥ-ಕೃಷ್ಣರನ್ನೂ ಅಗ್ನಿಯ ಪ್ರಕಾಶದಂತೆ ಕಂಗೊಳಿಸುತ್ತಿದ್ದ ಬಾಣಗಳಿಂದ ಪ್ರಹರಿಸಿದನು.

---

* 'ಸ್ವಭಾಗಪ್ರಾಪ್ತಂ' ಎಂದು ಮೂಲದಲ್ಲಿದೆ. ಸಾಮಾನ್ಯವಾಗಿ ಒಬ್ಬೊಬ್ಬರೂ ತಮಗೆ ಬೇಕಾದ ಪ್ರತಿಕಕ್ಷಿಯನ್ನು ಮೊದಲೇ ಆರಿಸಿಕೊಂಡಿರುತ್ತಿದ್ದರು. ಅದರಂತೆ ಯುಧಿಷ್ಠಿರನು ಶಲ್ಯನನ್ನು ಪ್ರತಿಕಕ್ಷಿಯನ್ನಾಗಿ ಆರಿಸಿಕೊಂಡಿದ್ದನು. ಆದುದರಿಂದ ಶಲ್ಯನು ಯುಧಿಷ್ಠಿರನಿಗೆ ಸ್ವಭಾಗಪ್ರಾಪ್ತನು.

ಸಂಘಟಿತರಾದ ದೈತ್ಯರಿಂದ ದೇವತೆಗಳು ಪ್ರಹೃತರಾದಂತೆ ಪಾಂಡವರು ಬಹುಕುಪಿತರಾಗಿದ್ದ ಕೃಪ-ಶಲ್ಯ-ಶಲ-ಚಿತ್ರಸೇನರಿಂದಲೂ ಬಾಣಗಳಿಂದ ಪ್ರಹೃತರಾದರು. ಪಾಂಡವರ ಪಕ್ಷದಲ್ಲಿ ಭೀಷ್ಮನೊಡನೆ ಯುದ್ಧಮಾಡಲು ಶಿಖಂಡಿಯೂ ಬಂದಿದ್ದನು. ಜಯದ್ರಥನು ಎಲ್ಲರ ಧನುಸ್ಸುಗಳನ್ನೂ ಕತ್ತರಿಸುತ್ತಿದ್ದಂತೆಯೇ ಭೀಷ್ಮನು ಶಿಖಂಡಿಯ ಧನುಸ್ಸನ್ನು ಕತ್ತರಿಸಿದನು. * ಶಿಖಂಡಿಯೇ ಭೀಷ್ಮನ ಸಂಹಾರಕನೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿತ್ತು. ಆದರೆ ಶಿಖಂಡಿಯು ಭೀಷ್ಮನನ್ನು ಸಂಹರಿಸುವ ಬದಲಾಗಿ ಭೀಷ್ಮನೇ ಶಿಖಂಡಿಯ ಧನುಸ್ಸನ್ನು ಕತ್ತರಿಸಿದುದರಿಂದ ಯುಧಿಷ್ಠಿರನಿಗೆ ಶಿಖಂಡಿಯ ಮೇಲೆ ಕೋಪವುಂಟಾಯಿತು. ಮಹಾತ್ಮನಾದ ಅಜಾತಶತ್ರುವು ಕ್ರುದ್ಧನಾಗಿ ಶಿಖಂಡಿಗೆ ಈ ಮಾತನ್ನು ಹೇಳಿದನು :

“ವೀರನೇ! ನಿನ್ನ ತಂದೆಯ ಮುಂದೆ ನೀನು ಏನು ಹೇಳಿದ್ದೆ ಯೆಂಬುದು ಸ್ಮರಣೆಯಲ್ಲಿರುವುದೇ? ‘ನಿರ್ಮಲಸೂರ್ಯನ ಪ್ರಕಾಶಕ್ಕೆ ಸಮಾನವಾದ ಪ್ರಕಾಶದಿಂದ ಕೂಡಿರುವ ಬಾಣಗಳಿಂದ ನಾನು ಮಹಾವ್ರತನಾದ ಭೀಷ್ಮನನ್ನು ಸಂಹಾರಮಾಡುತ್ತೇನೆ. ಇದನ್ನು ನಾನು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ’–ಎಂದು ಪ್ರತಿಜ್ಞೆಮಾಡಿ ಹೇಳಿದ್ದೆಯಲ್ಲವೇ? ಆದರೆ ಆ ಪ್ರತಿಜ್ಞೆಯನ್ನು ನೀನು ಇದುವರೆಗೂ ಸಫಲವನ್ನಾಗಿ ಮಾಡಲಿಲ್ಲ. ನಿನ್ನ ಪ್ರತಿಜ್ಞೆಯು ಕೇವಲ ಪ್ರತಿಜ್ಞೆಯಾಗಿ ಉಳಿದಿರುವುದೇ ಹೊರತು ಕಾರ್ಯಗತವಾಗಿರುವುದಿಲ್ಲ. ಏಕೆಂದರೆ : ನೀನಿನ್ನೂ ಯುದ್ಧದಲ್ಲಿ ದೇವವ್ರತನನ್ನು ಸಂಹಾರಮಾಡಿರುವುದಿಲ್ಲ.

* ಹಿಂದೊಮ್ಮೆ ಶಿಖಂಡಿಯು ತನ್ನ ಎದುರಾಗಿ ಬಂದೊಡನೆಯೇ ಜನ್ಮತಃ ಅವನು ಸ್ತ್ರೀಯಾಗಿದ್ದ ಕಾರಣದಿಂದ ಯುದ್ಧಮಾಡುವುದಿಲ್ಲವೆಂದು ಭೀಷ್ಮನು ಸುಮ್ಮನಿದ್ದು ಬಿಟ್ಟನು. ಈಗ ಧನುಸ್ಸನ್ನು ಕತ್ತರಿಸಿದುದು ಹೇಗೆ?–ಇದಕ್ಕೆ ಸಮಾಧಾನವನ್ನು ಒಬ್ಬರು ಹೀಗೆ ಹೇಳಿದ್ದಾರೆ ; ‘ಹಿಂದೆ ಶಿಖಂಡಿಯೊಬ್ಬನೇ ಭೀಷ್ಮನನ್ನು ಎದುರಿಸಲು ಹೋಗಿದ್ದನು. ಆ ಸಮಯದಲ್ಲಿ ಅವನೊಡನೆ ಯುದ್ಧಮಾಡಲು ಭೀಷ್ಮನು ನಿರಾಕರಿಸಿದನು. ಪ್ರಕೃತ ತನ್ನೆದುರಾಗಿ ನಿಂತಿರುವವರು ಪಂಚಪಾಂಡವರು. ಇದು ಶಿಖಂಡಿಯೊಡನೆ ನೇರವಾದ ಯುದ್ಧವಲ್ಲ. ಆದುದರಿಂದ ಇದು ದೋಷವಾಗುವುದಿಲ್ಲ. ಎರಡನೆಯದಾಗಿ : ಭೀಷ್ಮನು ಶಿಖಂಡಿಯ ಧನುಸ್ಸನ್ನು ಕತ್ತರಿಸಿದನೇ ಹೊರತು ಅವನಿಗೆ ಗಾಯವನ್ನು ಮಾಡಲಿಲ್ಲ.’

ವೀರನೇ! ಮಿಥ್ಯಾಪ್ರತಿಜ್ಞನಾಗಬೇಡ. ಸ್ವಧರ್ಮವನ್ನೂ, ಸ್ವಕುಲವನ್ನೂ ರಕ್ಷಿಸು. ನಿನ್ನ ಯಶಸ್ಸನ್ನು ರಕ್ಷಿಸಿಕೋ.

ನೀನೇ ನೋಡು! ಯುದ್ಧದಲ್ಲಿ ಭೀಷ್ಮನು ಭಯಂಕರವಾದ ವೇಗದಿಂದ ಯುದ್ಧಮಾಡುತ್ತಿದ್ದಾನೆ. ಮೃತ್ಯುಪರವಶನಾದವನನ್ನು ಕಾಲವು ಯಾವ ರೀತಿಯಲ್ಲಿ ಕ್ಷಣಮಾತ್ರದಲ್ಲಿ ಅಪಹರಿಸಿಬಿಡುವುದೋ–ಅದೇ ರೀತಿಯಲ್ಲಿ ಅತಿತೀಕ್ಷ್ಣವಾದ ವೇಗದಿಂದ ಕೂಡಿರುವ ಶರಗಳ ಸಮೂಹದಿಂದ ನನ್ನ ಸೈನ್ಯಸಮೂಹವೆಲ್ಲವನ್ನೂ ಭೀಷ್ಮನು ದಹಿಸಿಬಿಡುತ್ತಿದ್ದಾನೆ. ಯುದ್ಧದಲ್ಲಿ ಭೀಷ್ಮನು ನಿನ್ನ ಧನುಸ್ಸನ್ನು ಕತ್ತರಿಸಿ ನಿನ್ನನ್ನು ಪರಾಜಿತನನ್ನಾಗಿ ಮಾಡಿದ್ದಾನೆ. ಅವನ ದೃಷ್ಟಿಯಿಂದ ನೀನು ನಿರಪೇಕ್ಷನಾಗಿದ್ದೀಯೆ. ಬಂಧುಗಳನ್ನೂ, ಸೋದರರನ್ನೂ ಬಿಟ್ಟು ನೀನು ಎಲ್ಲಿಗೆ ತಾನೇ ಹೋಗುವೆ? ಈ ರೀತಿಯಲ್ಲಿ ಧನುಸ್ಸನ್ನು ಕಳೆದುಕೊಂಡು ಯುದ್ಧದಿಂದ ವಿಮುಖನಾಗುವುದು ನಿನಗೆ ಯೋಗ್ಯವಾಗಿ ಕಾಣುವುದಿಲ್ಲ.

ದ್ರುಪದಕುಮಾರ! ಅನಂತಪರಾಕ್ರಮನಾದ ಭೀಷ್ಮನನ್ನೂ, ಅವನಿಂದ ಭಿನ್ನವಾದ ಮತ್ತು ಅವನಿಗೆ ಭಯಪಟ್ಟು ಓಡುತ್ತಿರುವ ನಮ್ಮ ಸೈನ್ಯವನ್ನೂ ನೋಡಿ ನೀನೂ ಕೂಡ ನಿಶ್ಚಯವಾಗಿಯೂ ಭಯಪಟ್ಟಿರುವೆ. ಆದುದ ರಿಂದಲೇ ನಿನ್ನ ಮುಖವೂ ಬಣ್ಣಗೆಟ್ಟಿದೆ. ಅಪ್ರಸನ್ನವಾಗಿದೆ. ಸಂತಸದ ಭಾವನೆ ಯಿಂದ ಕೂಡಿರುವುದಿಲ್ಲ. ಮಹಾಯುದ್ಧದಲ್ಲಿ ತೊಡಗಿರುವ ನೃವೀರನಾದ ಅರ್ಜುನನು ಎಲ್ಲಿರುವನೆಂಬ ವಿಷಯವೂ ತಿಳಿಯದು. ಹೀಗಿರುವಾಗ ಭೀಷ್ಮನ ಸಂಹಾರಕನೆಂದು ಪ್ರಸಿದ್ಧನಾಗಿರುವ ನೀನು ಭೀಷ್ಮನಿಗಾಗಿ ಭಯ ಪಡುವುದೇಕೆ?"

ಮಹಾರಾಜ! ಧರ್ಮರಾಜನು ಹೇಳಿದ ಕಠಿನವಾದ ಅಕ್ಷರಗಳಿಂದ ನಿಬದ್ಧವಾಗಿದ್ದ, ವಿರೋಧೋಕ್ತಿಗಳಿಂದಲೂ ಕೂಡಿದ್ದ ಮಾತನ್ನು ಕೇಳಿ ಮಹಾತ್ಮನಾದ ಶಿಖಂಡಿಯು ಆ ಕಠಿನವಾದ ಮಾತುಗಳಿಂದ ತನಗೆ ತಿರಸ್ಕಾರ ವಾಯಿತೆಂದು ಭಾವಿಸಿ, ಒಡನೆಯೇ ಭೀಷ್ಮನ ವಧೆಗಾಗಿ ಸಜ್ಜಾದನು. ಭೀಷ್ಮನ ಬಳಿಗೆ ಬಹಳ ವೇಗದಿಂದ ಧಾವಿಸುತ್ತಿದ್ದ, ಅತ್ಯಂತವೇಗದಿಂದ ಭೀಷ್ಮನ ಮೇಲೆ ಬೀಳಲಿದ್ದ ಶಿಖಂಡಿಯನ್ನು ಶಲ್ಯನು ಸುದುರ್ಜಯವಾದ, ಘೋರವಾದ ಅಸ್ತ್ರಪ್ರಯೋಗದಿಂದ ತಡೆದುಬಿಟ್ಟನು. ಪ್ರಲಯಕಾಲದ ಅಗ್ನಿಯ ಪ್ರಕಾಶಕ್ಕೆ

ಸಮಾನವಾದ ಪ್ರಕಾಶವನ್ನು ಹೊಂದಿದ್ದ, ಚೆನ್ನಾಗಿ ಪ್ರಕಟಗೊಂಡಿದ್ದ ಅಸ್ತ್ರವನ್ನು ನೋಡಿಯೂ ಸಹ ಮಹೇಂದ್ರನಿಗೆ ಸಮಾನವಾದ ಪ್ರಭಾವದಿಂದ ಕೂಡಿದ್ದ ದ್ರುಪದನ ಮಗನು ಭ್ರಾಂತಿಗೊಳ್ಳಲಿಲ್ಲ. ಮಹಾಧನುಷ್ಮಂತನಾದ ಶಿಖಂಡಿಯು ಶಲ್ಯನು ಬಿಟ್ಟ ಮಹಾಸ್ತ್ರವನ್ನು ನಾನಾವಿಧವಾದ ಪ್ರತ್ಯಸ್ತ್ರಗಳಿಂದ ಪ್ರತಿಬಂಧಿಸುತ್ತಾ ಅಲ್ಲಿಯೇ ನಿಂತಿದ್ದನು. ಶಲ್ಯನು ಬಿಟ್ಟ ಅಸ್ತ್ರಕ್ಕೆ ಪ್ರತಿಘಾತವನ್ನುಂಟುಮಾಡುವ ಉಗ್ರವಾದ ವಾರುಣಾಸ್ತ್ರವನ್ನು ಶಿಖಂಡಿಯು ಕೈಗೆತ್ತಿಕೊಂಡನು. ಧನುಸ್ಸಿಗೆ ಯೋಜಿಸಿ ಅಭಿಮಂತ್ರಿಸಿ ಶಿಖಂಡಿಯು ಬಿಟ್ಟ ವಾರುಣಾಸ್ತ್ರವು ಶಲ್ಯನು ಬಿಟ್ಟ ಅಸ್ತ್ರವನ್ನು ಸೀಳಿಹಾಕುತ್ತಿರುವುದನ್ನು ಯುದ್ಧದಲ್ಲಿ ಪಾಲ್ಗೊಂಡಿದ್ದ ಎಲ್ಲ ರಾಜರೂ ಮತ್ತು ಯುದ್ಧಪ್ರೇಕ್ಷಕರಾಗಿದ್ದ ಮಹರ್ಷಿಗಳೂ ನೋಡಿದರು. ಮಹಾತ್ಮನಾದ ಭೀಷ್ಮನಾದರೋ ಎರಡು ಪಕ್ಷದವರಿಗೂ ಯುದ್ಧವಾಗುತ್ತಿದ್ದಾಗ ಅಜಮೀಢಕುಲನಂದನನಾದ, ಪಾಂಡುವಿನ ಮಗನಾದ ಯುಧಿಷ್ಠಿರನ ಚಿತ್ರಿತವಾಗಿದ್ದ ಧನುಸ್ಸನ್ನೂ ಮತ್ತು ಧ್ವಜವನ್ನೂ ಕತ್ತರಿಸಿ ಗರ್ಜನೆಮಾಡಿದನು. ಧನುಸ್ಸನ್ನೂ, ಧ್ವಜವನ್ನೂ ಕಳೆದುಕೊಂಡು ಭೀತನಾಗಿದ್ದ ಯುಧಿಷ್ಠಿರನನ್ನು ನೋಡಿ ಭೀಮಸೇನನು, ಶರಯುಕ್ತವಾಗಿದ್ದ ಧನುಸ್ಸನ್ನು ರಥದಲ್ಲಿಯೇ ಇಟ್ಟು ಗದಾಪಾಣಿಯಾಗಿ ರಥದಿಂದ ಧುಮುಕಿ ಪದಾತಿಯಾಗಿಯೇ ಜಯದ್ರಥನನ್ನು ಆಕ್ರಮಿಸಿದನು. ಈ ರೀತಿಯಾಗಿ ಬಹಳ ವೇಗದಿಂದ ತನ್ನ ಮೇಲೆ ಬೀಳುತ್ತಿದ್ದ ಗದಾಪಾಣಿಯಾದ ಭೀಮಸೇನನನ್ನು ಜಯದ್ರಥನು ಯಮದಂಡಕ್ಕೆ ಸಮಾನವಾಗಿದ್ದ, ಘೋರವಾಗಿದ್ದ, ನಿಶಿತವಾಗಿದ್ದ ಐದುನೂರು ಬಾಣಗಳಿಂದ ಪ್ರಹರಿಸಿದನು. ಕೋಪದಿಂದಾವೃತವಾದ ಮನಸ್ಸಿನಿಂದ ಕೂಡಿದ್ದ ವೇಗಶಾಲಿಯಾದ ವೃಕೋದರನು ಜಯದ್ರಥನು ಪ್ರಹರಿಸಿದ ಐದು ನೂರು ಬಾಣಗಳ ವಿಷಯವಾಗಿ ಲಕ್ಷ್ಯಕೊಡಲೇ ಇಲ್ಲ. ಗದಾಪಾಣಿಯಾಗಿ ಮುನ್ನುಗ್ಗಿ ಸಿಂಧುರಾಜನ ರಥಕ್ಕೆ ಕಟ್ಟಿದ್ದ ಪಾರಿವಾಳದ ಬಣ್ಣದಿಂದ ಕೂಡಿದ್ದ ನಾಲ್ಕು ಕುದುರೆಗಳನ್ನು ಗದಾಪ್ರಹಾರದಿಂದ ಸಂಹರಿಸಿದನು. ಅದನ್ನು ನೋಡಿ ಅಪ್ರತಿಮಪ್ರಭಾವನಾದ, ದೇವರಾಜಸದೃಶನಾದ ನಿನ್ನ ಮಗನು (ಚಿತ್ರಸೇನನು) ರಥದಲ್ಲಿ ಕುಳಿತು ಬಹಳ ಅವಸರದಿಂದ ಭೀಮಸೇನನನ್ನು ಸಂಹಾರಮಾಡುವ ಸಲುವಾಗಿ ಆಯುಧವನ್ನೆತ್ತಿಕೊಂಡೇ ಅಲ್ಲಿಗೆ ಬಂದನು.

ಆ ಸಮಯದಲ್ಲಿ ಭೀಮಸೇನನು ಸಿಂಹನಾದಮಾಡಿ ಗದೆಯಿಂದಲೂ ಭಯಪಡಿಸುತ್ತಾ ಬಹಳ ಶೀಘ್ರವಾಗಿ ತನ್ನನ್ನು ಸಂಹರಿಸಲೆಂದು ಉದ್ಯತಾಯುಧನಾಗಿ ಬಂದ ಚಿತ್ರಸೇನನ ಕಡೆಗೆ ನುಗ್ಗಿದನು. ಭೀಮನು ಎತ್ತಿ ಹಿಡಿದಿದ್ದ ಯಮದಂಡಸದೃಶವಾಗಿದ್ದ ಆ ಗದೆಯನ್ನು ನೋಡಿ ಸಮಸ್ತಕೌರವರೂ ತಮ್ಮ ಮೇಲೆ ಗದಾಪಾತವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಉಗ್ರತೇಜಸ್ಕನಾದ ನಿನ್ನ ಮಗನನ್ನು ಅಲ್ಲಿಯೇ ಬಿಟ್ಟು ಪಲಾಯನಮಾಡಿದರು. ಅತ್ಯಂತಮೋಹಕರವಾದ, ದಾರುಣವಾದ ಮತ್ತು ಘೋರವಾದ ಯುದ್ಧದಲ್ಲಿ ಮಹಾಗದೆಯು ತನ್ನ ಮೇಲೆ ಬೀಳುತ್ತಿರುವುದನ್ನು ನಿರೀಕ್ಷಿಸಿಯೂ ಸಹ ನಿನ್ನ ಮಗನಾದ ಚಿತ್ರಸೇನನು ಕಿಂಕರ್ತವ್ಯತಾಮೂಢನಾಗಲಿಲ್ಲ. ಒಡನೆಯೇ ಚಿತ್ರಸೇನನು ಖಡ್ಗವನ್ನೂ ವಿಶಾಲವಾದ ಗುರಾಣಿಯನ್ನೂ ಕೈಯಲ್ಲಿ ಹಿಡಿದು ಪರ್ವತದ ಶಿಖರದಿಂದ ಸಿಂಹವು ಕೆಳಕ್ಕೆ ಹಾರುವಂತೆ–ರಥದ ಮೇಲಿಂದ ಕೆಳಕ್ಕೆ ಧುಮುಕಿ ರಣಾಂಗಣದ ಮತ್ತೊಂದು ಕಡೆಗೆ ಹೊರಟುಹೋದನು. ಭೀಮನು ಎತ್ತಿದ್ದ ಗದೆಯು ಚಿತ್ರಸೇನನ ರಥದ ಮೇಲೆ ಬಿದ್ದೇಬಿಟ್ಟಿತು. ಸುಚಿತ್ರವಾದ ರಥವನ್ನೂ, ಕುದುರೆಗಳನ್ನೂ ಮತ್ತು ಸೂತನನ್ನೂ ಧ್ವಂಸ ಮಾಡಿ–ಆಕಾಶದಿಂದ ಚ್ಯುತವಾದ ದೊಡ್ಡ ಉಲ್ಕೆಯು ಭೂಮಿಯ ಮೇಲೆ ಬೀಳುವಂತೆ–ಭೀಮನ ಗದೆಯು ಭೂಮಿಯ ಮೇಲೆ ಬಿದ್ದಿತು. ಆ ಸಮಯ ದಲ್ಲಿ ನಿನ್ನ ಎಲ್ಲ ಸೈನಿಕರೂ ಚಿತ್ರಸೇನನ ಅತ್ಯಾಶ್ಚರ್ಯಕರವಾದ ಸಾಹಸ ಕಾರ್ಯವನ್ನು (ಆಶ್ಚರ್ಯಕರವಾದ ಈ ಘಟನೆಯನ್ನು) ನೋಡಿ ಸಂಪ್ರಹೃಷ್ಟ ರಾದರು. ಎಲ್ಲರೂ ಎಲ್ಲ ಕಡೆಗಳಿಂದಲೂ ಸಿಂಹನಾದಗಳನ್ನು ಮಾಡಿದರು. ನಿನ್ನ ಮಗನ ಶೌರ್ಯವನ್ನು ಬಹುವಾಗಿ ಪ್ರಶಂಸೆಮಾಡಿದರು."

ೢೢ೫ನೆಯ ಅಧ್ಯಾಯವು ಮುಗಿಯಿತು.

೮೬ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಷ್ಮ–ಯುಧಿಷ್ಠಿರರ ಯುದ್ಧ: ಧೃಷ್ಟದ್ಯುಮ್ನ–ಸಾತ್ಯಕಿಗಳೊಡನೆ ವಿಂದಾನುವಿಂದರ ಸಂಗ್ರಾಮ : ದ್ರೋಣಾದಿಗಳ ಪರಾಕ್ರಮ : ಏಳನೆಯ ದಿನದ ಯುದ್ಧದ ಪರಿಸಮಾಪ್ತಿ

ಸಂಜಯನು ಮುಂದುವರಿದು ಹೇಳುತ್ತಾನೆ :

"ಧೃತರಾಷ್ಟ್ರ! ರಥಹೀನನಾಗಿದ್ದ ಯಶೋವಂತನಾದ ಚಿತ್ರಸೇನನನ್ನು ನಿನ್ನ ಮಗನಾದ ವಿಕರ್ಣನು ತನ್ನ ರಥಕ್ಕೆ ಹತ್ತಿಸಿಕೊಂಡನು. ಈ ರೀತಿಯಲ್ಲಿ ಭಯಂಕರವಾದ ಮತ್ತು ಘೋರವಾದ ಯುದ್ಧವು ನಡೆಯುತ್ತಿರಲಾಗಿ, ಶಾಂತನುವಿನ ಮಗನಾದ ಭೀಷ್ಮನು ಯುಧಿಷ್ಠಿರನ ಮೇಲೆ ದಾಳಿಮಾಡಿದನು. ಅದನ್ನು ನೋಡಿ ಸೃಂಜಯವೀರರು ರಥ-ಗಜಾಶ್ವ-ಸೈನಿಕರಿಂದ ಸಮೇತರಾಗಿ ನಡುಗಿದರು. ಭೀಷ್ಮನು ಯುಧಿಷ್ಠಿರನ ಮೇಲೆ ಯುದ್ಧಕ್ಕೆ ಹೋದುದನ್ನು ಕಂಡು ಪಾಂಡವನು ಮೃತ್ಯುವಿನ ದವಡೆಗೆ ಸಿಕ್ಕಿಬಿದ್ದನೆಂದೇ ಭಾವಿಸಿಬಿಟ್ಟರು. ಪ್ರಭುವಾದ, ಕುರುನಂದನನಾದ ಯುಧಿಷ್ಠಿರನು ನಕುಲ-ಸಹದೇವರಿಂದ ಕೂಡಿಕೊಂಡವನಾಗಿ ಮಹಾಧನುಷ್ಮಂತನಾದ, ನರವ್ಯಾಘ್ರನಾದ ಶಾಂತನುವಿನ ಮಗನಾದ ಭೀಷ್ಮನನ್ನು ಎದುರಿಸಿದನು. ಅನಂತರ ಪಾಂಡವನು ಸಾವಿರಾರು ಬಾಣಗಳನ್ನು ಬಿಡುತ್ತಾ–ಮೇಘವು ಸೂರ್ಯನನ್ನು ಮುಚ್ಚಿಬಿಡುವಂತೆ–ಬಾಣಗಳಿಂದ ಭೀಷ್ಮನನ್ನು ಮುಚ್ಚಿಬಿಟ್ಟನು. ಯುಧಿಷ್ಠಿರನು ಆಕರ್ಣಾಂತವಾಗಿ ಶಿಂಜಿನಿಯನ್ನು ಸೆಳೆದು ಸುವ್ಯವಸ್ಥಿತವಾಗಿ ಬಿಟ್ಟಿದ್ದ ಸಾವಿರಾರು ಬಾಣಗಳನ್ನೂ ಗಾಂಗೇಯನು ತನ್ನ ಬಾಣಗಳಿಂದ ನಿರಸನಗೊಳಿಸಿದನು. ಯುಧಿಷ್ಠಿರನ ಬಾಣಗಳನ್ನು ನಿರಸನಗೊಳಿಸಲು ಬಿಟ್ಟ ಭೀಷ್ಮನ ಬಾಣಗಳು ಆಕಾಶದಲ್ಲಿ ಹಾರಾಡುವ ಪಕ್ಷಿಗಳ ಸಮೂಹದಂತೆ ಕಾಣುತ್ತಿದ್ದುವು. ಕೇವಲ ಅರ್ಧನಿಮಿಷದೊಳಗಾಗಿ ಶಾಂತನುವಿನ ಮಗನಾದ ಭೀಷ್ಮನು ಕೌಂತೇಯನನ್ನು ಪ್ರತ್ಯೇಕ-ಪ್ರತ್ಯೇಕವಾದ ಬಾಣಗಳ ಸಮೂಹದಿಂದ ಅದೃಶ್ಯನನ್ನಾಗಿ ಮಾಡಿಬಿಟ್ಟನು. ಅದಕ್ಕೆ ಪ್ರತಿಯಾಗಿ ಯುಧಿಷ್ಠಿರನು ಮಹಾತ್ಮನಾದ ಭೀಷ್ಮನ ಮೇಲೆ ಸರ್ಪಕ್ಕೆ ಸಮಾನವಾದ ನಾರಾಚವನ್ನು (ಬಾಣವನ್ನು) ಪ್ರಯೋಗಿಸಿದನು. ಯುಧಿಷ್ಠಿರನ ಧನುಸ್ಸಿನಿಂದ ಚ್ಯುತವಾದ ನಾರಾಚವು ತನ್ನ ಸಮೀಪಕ್ಕೆ ಬರುವುದರಲ್ಲಿದ್ದಾಗಲೇ ಮಹಾರಥನಾದ ಭೀಷ್ಮನು ಕ್ಷುರಪ್ರವೆಂಬ ಬಾಣವಿಶೇಷದಿಂದ ಅದನ್ನು ಕತ್ತರಿಸಿಬಿಟ್ಟನು. ಯುಧಿಷ್ಠಿರನು ಬಿಟ್ಟ ಕಾಲಸದೃಶವಾಗಿದ್ದ ನಾರಾಚವನ್ನು ಕತ್ತರಿಸಿದ ನಂತರ ಭೀಷ್ಮನು ಸುವರ್ಣಾಭರಣಗಳಿಂದ ಸಮಲಂಕೃತವಾಗಿದ್ದ ಯುಧಿಷ್ಠಿರನ ಕುದುರೆಗಳನ್ನು ಸಂಹರಿಸಿದನು. ಧರ್ಮಪುತ್ರನಾದ ಯುಧಿಷ್ಠಿರನು ಅಶ್ವಗಳಿಂದ ವಿಹೀನವಾಗಿದ್ದ ರಥವನ್ನು ಒಡನೆಯೇ ಪರಿತ್ಯಜಿಸಿ, ಮಹಾತ್ಮನಾದ ನಕುಲನ ರಥಕ್ಕೆ ಹತ್ತಿಕುಳಿತನು. ಪರಪುರಂಜಯ

ನಾದ ಭೀಷ್ಮನು ಪರಮಕ್ರುದ್ಧನಾಗಿ ನಕುಲ-ಸಹದೇವರನ್ನೂ ಆಕ್ರಮಿಸಿ ಅವರನ್ನೂ ಸಹ ಬಾಣಗಳಿಂದ ಮುಚ್ಚಿಬಿಟ್ಟನು. ಭೀಷ್ಮನ ಬಾಣಗಳಿಂದ ಬಹುವಾಗಿ ಪೀಡಿತರಾದ ನಕುಲ-ಸಹದೇವರನ್ನು ನೋಡಿ ಭೀಷ್ಮನನ್ನು ವಧಿಸುವ ಇಚ್ಛೆಯಿಂದ, ಅದನ್ನು ಹೇಗೆ ಸಾಧಿಸಬೇಕೆಂಬುದರ ಬಗೆಗೆ ಯುಧಿಷ್ಠಿರನು ಚಿಂತಾಮಗ್ನನಾದನು. ಸ್ವಲ್ಪಹೊತ್ತು ಚಿಂತಿಸುತ್ತಿದ್ದು ಅನಂತರ ಯುಧಿಷ್ಠಿರನು ತನ್ನ ವಶವರ್ತಿಗಳಾಗಿದ್ದ ರಾಜರನ್ನೂ ಮತ್ತು ಸ್ನೇಹಿತರನ್ನೂ ಉದ್ದೇಶಿಸಿ 'ಭೀಷ್ಮಂ ಶಾನ್ತನವಂ ಸರ್ವೇ ನಿಹತ' 'ಎಲ್ಲರೂ ಸೇರಿ ಶಾಂತನುವಿನ ಮಗನಾದ ಭೀಷ್ಮನನ್ನು ಸಂಹರಿಸಿರಿ'–ಎಂದು ಹುರಿದುಂಬಿಸಿದನು. ಧರ್ಮಜನು ಹೇಳಿದ ಆ ಮಾತನ್ನು ಕೇಳುತ್ತಲೇ ಎಲ್ಲ ರಾಜರೂ ಅಸಂಖ್ಯಾತವಾದ ರಥಸೈನ್ಯದೊಡನೆ ಪಿತಾಮಹನನ್ನು ನಾಲ್ಕು ಕಡೆಗಳಿಂದಲೂ ಮುತ್ತಿಗೆ ಹಾಕಿದರು. ಯುಧಿಷ್ಠಿರನ ಅನುಯಾಯಿಗಳಾದ ರಾಜರಿಂದ ಪರಿವೃತನಾಗಿದ್ದ ನಿನ್ನ ತಂದೆಯಾದ ದೇವವ್ರತನು ಧನುಸ್ಸಿನಿಂದಲೇ ಆಟವಾಡುತ್ತಾ ತನ್ನ ಸುತ್ತಲೂ ಇದ್ದ ಮಹಾರಥರನ್ನು ಒಬ್ಬೊಬ್ಬರನ್ನಾಗಿ ಸಂಹಾರಮಾಡಲು ಉಪಕ್ರಮಿಸಿದನು. ಅರಣ್ಯದಲ್ಲಿ ಮೃಗಗಳ ಮಧ್ಯೆ ಪ್ರವೇಶಿಸಿ ಲೀಲೆಯಿಂದ ಅವುಗಳನ್ನು ಬೇಟೆಯಾಡುವ ಸಿಂಹದ ಶಿಶುವಿನಂತೆ– ರಣಾಂಗಣದಲ್ಲಿ ಧನುಷ್ಪಾಣಿಯಾಗಿ ಶತ್ರುರಾಜರನ್ನು ಸಂಹರಿಸುತ್ತಿದ್ದ ಭೀಷ್ಮನನ್ನು ಪಾರ್ಥರು ನೋಡಿದರು. ರಣಾಂಗಣದಲ್ಲಿ ವೀರರನ್ನು ತನ್ನ ಗರ್ಜನೆಯಿಂದ ಭಯಪಡಿಸುತ್ತಾ ಬಾಣಗಳಿಂದ ಬಾಧೆಪಡಿಸುತ್ತಾ ಇದ್ದ ಭೀಷ್ಮನನ್ನು ನೋಡಿ–ಸಿಂಹವನ್ನು ಕಂಡು ಪ್ರಾಣಿಗಳ ಸಮೂಹಗಳು ಭಯಪಡುವಂತೆ–ಪಾಂಡವಯೋಧರು ಭಯಪಟ್ಟರು. ವಾಯುಸಹಾಯಕನಾದ ಅಗ್ನಿಯು ಒಣಹುಲ್ಲನ್ನು ದಹಿಸುತ್ತಲೇ ಹೋಗುವಂತೆ–ಭಾರತಸಿಂಹನಾದ ಭೀಷ್ಮನು ಪಾಂಡವರ ಸೈನ್ಯವನ್ನು ಸಂಹರಿಸುತ್ತಲೇ ಹೋಗುತ್ತಿರುವುದನ್ನು ಎಲ್ಲ ಕ್ಷತ್ರಿಯರೂ ನೋಡಿದರು. ಕುಶಲನಾದ ಮನುಷ್ಯನು ತಾಲವೃಕ್ಷಗಳಿಂದ ಪಕ್ವವಾದ ಹಣ್ಣುಗಳನ್ನು ಉದುರಿಸುವಂತೆ–ಭೀಷ್ಮನು ಪಾಂಡವರ ಕಡೆಯ ರಥಿಕರ ತಲೆಗಳನ್ನು ಕೆಳಗುರುಳಿಸುತ್ತಿದ್ದನು. ಭೂಮಿಯ ಮೇಲೆ ಪಟ-ಪಟನೆ ಬೀಳುತ್ತಿದ್ದ ಸೈನಿಕರ ತಲೆಗಳು ಆಕಾಶದ ಕಡೆಯಿಂದ ಭೂಮಿಯ ಮೇಲೆ ಬೀಳುವ ಕಲ್ಲುಗಳು ಶಬ್ದಮಾಡುವಂತೆಯೇ–ಭಯಂಕರವಾಗಿ ಶಬ್ದಮಾಡುತ್ತಿದ್ದುವು.

ಈ ರೀತಿಯಲ್ಲಿ ಭಯಂಕರವಾದ ಯುದ್ಧವು ನಡೆಯುತ್ತಿರಲಾಗಿ

ಉಭಯಪಕ್ಷಗಳ ಸೈನಿಕರಿಗೂ ಪುನಃ ಸಂಘರ್ಷಣೆಯು ಪ್ರಾರಂಭವಾಯಿತು. ಎರಡೂ ಪಕ್ಷಗಳ ವ್ಯೂಹಗಳು ಭಗ್ನವಾಗಿ ಹೋದನಂತರ ಎಲ್ಲ ಕ್ಷತ್ರಿಯರೂ ಪರಸ್ಪರವಾಗಿ ಒಬ್ಬೊಬ್ಬನನ್ನೇ ಯುದ್ಧಕ್ಕೆ ಕರೆಯುತ್ತಾ ಕಾದಾಡತೊಡಗಿದರು. ಶಿಖಂಡಿಯು ಭರತಕುಲಪಿತಾಮಹನಾದ ಭೀಷ್ಮನ ಬಳಿಗೆ ಹೋಗಿ ನಿಲ್ಲು-ನಿಲ್ಲೆಂದು ಹೇಳುತ್ತಾ ಅತ್ಯಂತವೇಗವಾಗಿ ಅವನ ಮೇಲೆ ಬೀಳಲು ಹೋದನು. ಶಿಖಂಡಿಯು ಪೂರ್ವದಲ್ಲಿ ಹೆಣ್ಣಾಗಿದ್ದನೆಂಬುದನ್ನು ಜ್ಞಾಪಿಸಿಕೊಂಡು, ತನ್ನನ್ನು ಅಟ್ಟಿಸಿಕೊಂಡು ಬರುತ್ತಿದ್ದ ಅವನನ್ನು ನಿರ್ಲಕ್ಷಿಸಿ, ಭೀಷ್ಮನು ಸೃಂಜಯರ ಮೇಲೆ ಯುದ್ಧಕ್ಕೆ ಹೋದನು. ಸೃಂಜಯರಾದರೋ ಆ ಸಮಯ ದಲ್ಲಿ ಅತ್ಯಂತ ಹರ್ಷಯುಕ್ತನಾಗಿದ್ದ ಭೀಷ್ಮನನ್ನು ನೋಡಿ ಶಂಖನಾದ ಮಿಶ್ರಿತವಾದ ವಿಧ-ವಿಧವಾದ ಸಿಂಹನಾದಗಳನ್ನು ಮಾಡಿದರು. ಸೂರ್ಯನು ಪಶ್ಚಿಮದಿಕ್ಕಿಗೆ ಹೋದ ಸಮಯದಲ್ಲಿ (ಸಾಯಂಕಾಲದಲ್ಲಿ) ರಥಸೈನ್ಯ ಮತ್ತು ಗಜಸೈನ್ಯಗಳ ಸಮ್ಮಿಶ್ರಣದ ಘೋರಯುದ್ಧವು ಪ್ರಾರಂಭವಾಯಿತು. ಪಾಂಚಾಲರಾಜಕುಮಾರನಾದ ಧೃಷ್ಟದ್ಯುಮ್ನನೂ ಮತ್ತು ಮಹಾರಥನಾದ ಸಾತ್ಯಕಿಯೂ ಶಕ್ತಿ-ತೋಮರಗಳ ಸುರಿಸುವಿಕೆಯಿಂದ ಶತ್ರುಪಕ್ಷದ ಸೈನ್ಯ ವನ್ನು ಬಹುವಾಗಿ ಪೀಡಿಸಿದರು. ಅನೇಕಾನೇಕ ಶಸ್ತ್ರಗಳಿಂದ ಧೃಷ್ಟದ್ಯುಮ್ನ-ಸಾತ್ಯಕಿಗಳು ನಿನ್ನ ಸೈನಿಕರನ್ನು ಸಂಹರಿಸಿದರು. ಜೊತೆಯ ಸೈನಿಕರು ತಂಡ ತಂಡವಾಗಿ ಶತ್ರುಗಳ ಬಾಣಗಳಿಗೆ ಸಿಕ್ಕಿ ಸತ್ತು ಬೀಳುತ್ತಿದ್ದರೂ ಸಹ ಅಳಿದುಳಿದ ನಿನ್ನ ಸೈನಿಕರು ಪ್ರಾಣಭಯದಿಂದ ರಣರಂಗವನ್ನು ಬಿಟ್ಟು ಹೋಗಲಿಲ್ಲ. ಯುದ್ಧದಲ್ಲಿ ಹಿಂದಿರುಗಕೂಡದೆಂಬ ಶ್ರೇಷ್ಠವಾದ ನಿಶ್ಚಯ ವನ್ನು ಮಾಡಿ ಅಮಿತೋತ್ಸಾಹದಿಂದ ಶತ್ರುಗಳ ಸಂಹಾರವನ್ನು ಮಾಡು ತ್ತಿದ್ದರು. ಮಹಾತ್ಮನಾದ ಪಾರ್ಷತನಿಂದ ಯುದ್ಧದಲ್ಲಿ ವಧಿಸಲ್ಪಡುತ್ತಿದ್ದ ಮಹಾತ್ಮರಾದ ನಿನ್ನ ಸೈನಿಕರ ಮಧ್ಯದಲ್ಲಿ ಗಟ್ಟಿಯಾದ ರೋದನವು ಕೇಳಿ ಬಂದಿತು. ನಿಮ್ಮ ಕಡೆಯವರ ಘೋರವಾದ ಆಕ್ರಂದನವನ್ನು ಕೇಳಿ ಮಹಾ ರಥರಾದ ಅವಂತೀದೇಶದ ರಾಜಕುಮಾರರಾದ ವಿಂದ ಮತ್ತು ಅನು ವಿಂದರು ಧೃಷ್ಟದ್ಯುಮ್ನನನ್ನು ಎದುರಿಸಿ ನಿಂತರು. ಅವರಿಬ್ಬರೂ ಪಾರ್ಷತನ ರಥದ ಕುದುರೆಗಳನ್ನು ಅತ್ಯಂತವೇಗದಿಂದ ಸಂಹರಿಸಿದವರಾಗಿ ಬಾಣಗಳ ಮಳೆಗರೆಯುವಿಕೆಯಿಂದ ಧೃಷ್ಟದ್ಯುಮ್ನನನ್ನು ಮುಚ್ಚಿಬಿಟ್ಟರು. ಮಹಾಬಲ ನಾದ ಧೃಷ್ಟದ್ಯುಮ್ನನು ಕುದುರೆಗಳಿಂದ ವಿಹೀನವಾಗಿದ್ದ ರಥದಿಂದ

ಬಹು ಬೇಗ ಧುಮುಕಿ ಅಷ್ಟೇ ವೇಗದಿಂದ ಮಹಾತ್ಮನಾದ ಸಾತ್ಯಕಿಯ ರಥವನ್ನು ಹತ್ತಿಕೊಂಡನು. ಆ ಸಮಯಕ್ಕೆ ಸರಿಯಾಗಿ ಕ್ರುದ್ಧನಾದ ಯುಧಿಷ್ಠಿರರಾಜನು ಮಹಾಸೈನ್ಯದಿಂದ ಅನುಸೃತನಾಗಿ ಪರಂತಪರಾದ ಅವಂತಿಯ ರಾಜಕುಮಾರರ ಮೇಲೆ ದಾಳಿನಡೆಸಿದನು. ಅದೇ ರೀತಿಯಲ್ಲಿ ನಿನ್ನ ಮಗನಾದ ದುರ್ಯೋಧನನೂ ಸಹ ಸರ್ವಪ್ರಯತ್ನದಿಂದಲೂ ಯುದ್ಧ ದಲ್ಲಿ ವಿಂದಾನುವಿಂದರನ್ನು ರಕ್ಷಣೆಮಾಡುವ ಆಶೆಯಿಂದ ತನ್ನ ಸೈನಿಕರೊಡನೆ ಅವರನ್ನು ಸುತ್ತುವರಿದು ನಿಂತನು. ವಜ್ರಪಾಣಿಯಾದ ಇಂದ್ರನು ಅಸುರ ರನ್ನು ಎದುರಿಸಿ ಯುದ್ಧಮಾಡಿದಂತೆ–ಕ್ರುದ್ಧನಾದ ಅರ್ಜುನನು ಕೌರವಪಕ್ಷದ ಕ್ಷತ್ರಿಯರನ್ನು ಎದುರಿಸಿ ಯುದ್ಧಮಾಡಿದನು. ನಿನ್ನ ಮಗನಿಗೆ ಪ್ರಿಯ ವನ್ನುಂಟುಮಾಡುವ ಆಕಾಂಕ್ಷೆಯಿಂದ ದ್ರೋಣರು ಪರಮಕ್ರುದ್ಧರಾಗಿ– ಹತ್ತಿಯರಾಶಿಯನ್ನು ಅಗ್ನಿಯು ಕ್ಷಣಾರ್ಧದಲ್ಲಿ ಭಸ್ಮಮಾಡಿಬಿಡುವಂತೆ–ಎಲ್ಲ ಪಾಂಚಾಲಸೈನಿಕರನ್ನೂ ಧ್ವಂಸಮಾಡಿದರು.

ಮಹಾರಾಜ! ದುರ್ಯೋಧನಪ್ರಮುಖರಾದ ನಿನ್ನ ಮಕ್ಕಳು ಭೀಷ್ಮ ನನ್ನು ಸುತ್ತುವರಿದು ನಿಂತು ಪಾಂಡವರೊಡನೆ ಯುದ್ಧಮಾಡುತ್ತಿದ್ದರು. ಸೂರ್ಯನು ಕೆಂಪುಬಣ್ಣಕ್ಕೆ ತಿರುಗುತ್ತಿರಲಾಗಿ, ದುರ್ಯೋಧನರಾಜನು ತನ್ನ ಕಡೆಯ ಯೋಧರನ್ನು ಕುರಿತು 'ಶೀಘ್ರವಾಗಿ ಮಾಡಿ ಮುಗಿಸಿರಿ'–ಎಂದು ಹೇಳಿದನು. ದುರ್ಯೋಧನನ ಆಜ್ಞೆಯಂತೆ ಎಲ್ಲ ಯೋಧರೂ ಹೆಚ್ಚಿನ ವೇಗ ದಿಂದ ಯುದ್ಧಮಾಡುತ್ತಾ ದುಷ್ಕರವಾದ ಹನನಕರ್ಮವನ್ನು ಮುಂದುವರಿ ಸುತ್ತಿದ್ದರು. ಸೂರ್ಯನು ಅಸ್ತಾಚಲವನ್ನು ಏರಿದ್ದರಿಂದ ಭೂಮಿಯಲ್ಲಿ ಅವನ ಪ್ರಕಾಶವು ಲುಪ್ತವಾಗಿ ಹೋಗಿದ್ದಿತು. ರಾತ್ರಿಯು ಪ್ರಾರಂಭವಾಗಲಿದ್ದ ಆ ಕ್ಷಣದಿಂದ ರಕ್ತದ ಪ್ರವಾಹದಿಂದ ಪರಿಪೂರ್ಣವಾಗಿದ್ದ ಭಯಂಕರವಾಗಿದ್ದ ಅಲೆಗಳಿಂದ ಕೂಡಿದ್ದ ನದಿಯೊಂದು ರಣರಂಗದಲ್ಲಿ ಹರಿಯತೊಡಗಿತು. ಆ ರಕ್ತನದಿಯು ಗುಳ್ಳೇನರಿಗಳ ಸಮೂಹದಿಂದ ನಿಬಿಡವಾಗಿದ್ದಿತು. ಅಮಂಗಳಕರವಾದ ಮತ್ತು ವಿಕಾರಧ್ವನಿಯಿಂದ ಕೂಗುತ್ತಿದ್ದ ನರಿ ಗಳಿಂದಲೂ, ಭೂತಗಳ ಸಮೂಹಗಳಿಂದಲೂ ವ್ಯಾಪ್ತವಾಗಿದ್ದ ಆ ರಣ ರಂಗವು ಅತ್ಯಂತಭಯಾನಕವಾಗಿ ಕಾಣುತ್ತಿದ್ದಿತು. ರಾಕ್ಷಸರು, ಪಿಶಾಚಗಳು

ಮತ್ತು ಇತರ ಮಾಂಸಾಹಾರಿಗಳಾದ ಪ್ರಾಣಿಗಳು ನೂರಾರು-ಸಾವಿರಾರು ಸಂಖ್ಯೆಯಲ್ಲಿ ರಣಾಂಗಣದ ಸುತ್ತಲೂ ಕಾಣಿಸಿಕೊಂಡುವು.

ಅನಂತರದಲ್ಲಿ ಅರ್ಜುನನು ಯುದ್ಧದಲ್ಲಿ ಸುಶರ್ಮನೇ ಮೊದಲಾದ ದುರ್ಯೋಧನನ ಅನುಯಾಯಿಗಳನ್ನು ಪರಾಜಯಗೊಳಿಸಿ ತನ್ನ ಶಿಬಿರಕ್ಕೆ ಹೊರಟುಹೋದನು. ಕುರುಕುಲನಂದನನಾದ ಯುಧಿಷ್ಠಿರನೂ ಸಹ ರಾತ್ರಿಯಾಗುತ್ತಲೇ ತನ್ನ ಅನುಜರೊಡನೆಯೂ (ನಕುಲ-ಸಹದೇವರೊಡನೆಯೂ) ಸೈನಿಕರೊಡನೆಯೂ ಪರಿವೃತನಾಗಿ ತನ್ನ ಶಿಬಿರಕ್ಕೆ ತೆರಳಿದನು. ಭೀಮಸೇನನೂ ಸಹ ದುರ್ಯೋಧನಪ್ರಮುಖರಾದ ಮಹಾರಥರನ್ನು ಯುದ್ಧದಲ್ಲಿ ಪರಾಜಯಗೊಳಿಸಿ ತನ್ನ ಶಿಬಿರಕ್ಕೆ ತೆರಳಿದನು. ರಾಜನಾದ ದುರ್ಯೋಧನನು ತನ್ನ ಅನುಯಾಯಿಗಳೊಡನೆ ಭೀಷ್ಮನನ್ನು ಸುತ್ತುಗಟ್ಟಿ ಅವನ ಜೊತೆಯಲ್ಲಿ ಬಹುಶೀಘ್ರವಾಗಿ ತನ್ನ ಶಿಬಿರವನ್ನು ಸೇರಿದನು. ದ್ರೋಣರು, ಅಶ್ವತ್ಥಾಮಾ, ಕೃಪ, ಶಲ್ಯ, ಕೃತವರ್ಮಾ–ಇವರು ತಮ್ಮ ಎಲ್ಲ ಸೈನ್ಯವನ್ನೂ ಸುತ್ತುಗಟ್ಟಿಕೊಂಡು ತಮ್ಮ-ತಮ್ಮ ಶಿಬಿರಗಳಿಗೆ ತೆರಳಿದರು. ಅದೇ ರೀತಿಯಲ್ಲಿ ಸಾತ್ಯಕಿ ಮತ್ತು ಧೃಷ್ಟದ್ಯುಮ್ನರೂ ಪಾಂಡವಯೋಧರನ್ನು ಸುತ್ತುಗಟ್ಟಿಕೊಂಡು ತಮ್ಮ ಶಿಬಿರಗಳಿಗೆ ತೆರಳಿದರು. ಮಹಾರಾಜ! ಈ ರೀತಿ ಯಲ್ಲಿ ರಾತ್ರಿಯಾಗುತ್ತಲೇ ನಿನ್ನ ಕಡೆಯವರು ಮತ್ತು ಪಾಂಡವರ ಕಡೆಯ ವರು ತಮ್ಮ-ತಮ್ಮ ಸೈನ್ಯಗಳೊಡನೆ ತಮ್ಮ-ತಮ್ಮ ಶಿಬಿರಗಳಿಗೆ ಪ್ರಯಾಣ ಮಾಡಿದರು. ಶಿಬಿರಗಳನ್ನು ಸೇರಿದನಂತರ ಪಾಂಡವರು ಮತ್ತು ಕೌರವರು ತಮ್ಮ-ತಮ್ಮಲ್ಲಿಯೇ ಪರಸ್ಪರವಾಗಿ ಪ್ರಶಂಸೆಮಾಡಿಕೊಳ್ಳುತ್ತಾ ವಿಶ್ರಾಂತರಾದರು. ಉಭಯಪಕ್ಷಗಳ ಶಿಬಿರಗಳಲ್ಲಿಯೂ ಶೂರಯೋಧರು *ಗುಲ್ಮಗಳನ್ನು ಯಥಾವಿಧಿಯಾಗಿ ವಿಂಗಡಿಸಿ ಅದರ ರಕ್ಷಣೆಯ ವ್ಯವಸ್ಥೆಯನ್ನು ಮಾಡಿದರು. ತಮ್ಮ ಅಂಗಾಂಗಗಳಲ್ಲಿ ಚುಚ್ಚಿಕೊಂಡಿದ್ದ ಬಾಣಗಳ ತುಂಡುಗಳನ್ನು ತೆಗೆದುಹಾಕಿದರು. ವಿಧ-ವಿಧವಾದ ಓಷಧಿಲತೆಗಳಿಂದ ಮಿಶ್ರಿತವಾದ ನೀರಿನಲ್ಲಿ ಸ್ನಾನಮಾಡಿದರು. ಅನಂತರ

---

* ೯ ಆನೆ, ೯ ರಥ, ೨೭ ಕುದುರೆಸವಾರರು ಮತ್ತು ೪೫ ಪದಾತಿಗಳು ಇರುವ ಗುಂಪಿಗೆ ಗುಲ್ಮ ಎಂದು ಹೆಸರು. ಇಲ್ಲಿ 'ಶಿಬಿರಗಳನ್ನು ರಕ್ಷಿಸಲು ಕಾವಲುಪಡೆಯ ವ್ಯವಸ್ಥೆಮಾಡಿದರು'–ಎಂದು ಭಾವಿಸಬಹುದಾಗಿದೆ.

ವೇದ-ವೇದಾಂಗಪಾರಂಗತರಾದ ಶ್ರೋತ್ರಿಯರು ಅವರೆಲ್ಲರಿಗೂ ಸ್ವಸ್ತಿ ವಾಚನಮಾಡಿದರು. ವಂದಿ-ಮಾಗಧರು ವೀರಯೋಧರನ್ನು ನಾನಾವಿಧ ವಾಗಿ ಸ್ತೋತ್ರಮಾಡಿದರು. ಯಶೋವಂತರಾದ ಯೋಧರು ಸಂಗೀತ ಮತ್ತು ವಾದ್ಯಗಳೊಡನೆ ಮನದಣಿಯುವಂತೆ ಕ್ರೀಡಾವಿನೋದಗಳಲ್ಲಿ ಪಾಲ್ಗೊಂಡರು. ಒಂದು ಮುಹೂರ್ತಕಾಲ ಅಲ್ಲಿಯ ದೃಶ್ಯಗಳೆಲ್ಲವೂ ಸ್ವರ್ಗ ಸದೃಶವಾಗಿದ್ದುವು. ಆ ಸಮಯದಲ್ಲಿ ಮಹಾರಥರು ಯುದ್ಧಕ್ಕೆ ಸಂಬಂಧಿಸಿದ ಯಾವ ಸಮಾಚಾರವನ್ನೂ ಪ್ರಸ್ತಾಪಿಸಲಿಲ್ಲ. ಬಹುಸಂಖ್ಯಾತವಾದ ಆನೆ ಗಳಿಂದಲೂ ಮತ್ತು ಕುದುರೆಗಳಿಂದಲೂ ಕೂಡಿದ್ದ ಮತ್ತು ಯುದ್ಧದಿಂದ ಪರಿಶ್ರಾಂತರಾದ ಜನರಿಂದ ಕೂಡಿದ್ದ ಎರಡೂ ಪಕ್ಷಗಳ ಸೈನ್ಯಗಳು ಮಲಗಿರ ಲಾಗಿ, ಆ ಸನ್ನಿವೇಶವು ಪ್ರೇಕ್ಷಣೀಯವಾಗಿ ಕಂಡಿತು."

೮೬ನೆಯ ಅಧ್ಯಾಯವು ಮುಗಿಯಿತು.

## ೭ನೆಯ ದಿವಸದ ಯುದ್ಧದ ವಿಶ್ಲೇಷಣೆ

ಏಳನೆಯ ದಿವಸದ ಯುದ್ಧದಲ್ಲಿ ಕೌರವರು ಮಂಡಲವ್ಯೂಹವನ್ನೂ ಪಾಂಡವರು ವಜ್ರವ್ಯೂಹವನ್ನೂ ರಚಿಸುತ್ತಾರೆ. ಮಂಡಲವ್ಯೂಹವನ್ನು ಭೀಷ್ಮನೇ ರಚಿಸುತ್ತಾನೆ. ಅದುವರೆಗೆ ರಚಿತವಾದ ವ್ಯೂಹಗಳಲ್ಲಿ ರಥ-ಗಜಾಶ್ವ-ಪದಾತಿಗಳನ್ನು ಹೇಳಿರುವುದಿಲ್ಲ. ಮಂಡಲವ್ಯೂಹಕ್ಕೆ ಮಾತ್ರ ಎಷ್ಟೆಂಬುದನ್ನು ವಿವರಿಸಿ ಹೇಳಿದ್ದಾರೆ.

**ನಾಗೇ ನಾಗೇ ರಥಾಃ ಸಪ್ತ ಸಪ್ತ ಚಾಶ್ವಾ ರಥೇ ರಥೇ ।**
**ಅನ್ವಶ್ವಂ ದಶ ಧಾನುಷ್ಕಾ ಧಾನುಷ್ಕೇ ದಶ ಚರ್ಮಿಣಃ ॥೧೪॥**

ಕೌರವರ ಮಂಡಲವ್ಯೂಹಕ್ಕೆ ಪ್ರತಿಯಾಗಿ ಯುಧಿಷ್ಠಿರನು ವಜ್ರವ್ಯೂಹ ವನ್ನು ರಚಿಸುತ್ತಾನೆ. ವಜ್ರವ್ಯೂಹದ ವಿವರಣೆಯನ್ನು ಕೊಟ್ಟಿಲ್ಲ. ಮಂಡಲ ವ್ಯೂಹದಲ್ಲಾಗಲೀ, ವಜ್ರವ್ಯೂಹದಲ್ಲಾಗಲೀ ಹಿಂದಿನ ವ್ಯೂಹಗಳಲ್ಲಿ ಹೇಳು ತ್ತಿದ್ದಂತೆ ಯಾವ ಯಾವ ಮಹಾರಥರು ಎಲ್ಲೆಲ್ಲಿ ನಿಂತಿದ್ದರೆಂಬುದನ್ನು ಹೇಳಿರುವುದಿಲ್ಲ. ಇದೇ ಸಂದರ್ಭದಲ್ಲಿ 'ವಿಶಲ್ಯಕರಣೀ' ಎಂಬ ಓಷಧಿಯ ವಿಷಯವೂ ಬರುತ್ತದೆ. ಆ ಓಷಧಿಲತೆಯನ್ನು ಭೀಷ್ಮರು ದುರ್ಯೋಧನ

ನಿಗೆ ಕೊಡುತ್ತಾರೆ. ಅದರ ಲೇಪನದಿಂದ ದುರ್ಯೋಧನನು ಶಲ್ಯದಿಂದ (ಮುಳ್ಳಿನಿಂದ) ವಿಹೀನನಾಗುತ್ತಾನೆ. ಯಾತನೆಯೂ ಹೋಗಿಬಿಡುತ್ತದೆ. ಪ್ರತಿಯೊಬ್ಬ ಯೋಧನೂ ತನಗೆ ಅನುರೂಪನಾದವನನ್ನೇ ಆರಿಸಿಕೊಂಡು ಯುದ್ಧವನ್ನು ಪ್ರಾರಂಭಿಸುತ್ತಾರೆ. ದ್ರೋಣ-ವಿರಾಟ, ದ್ರೌಣಿ-ಶಿಖಂಡಿ, ದುರ್ಯೋಧನ-ದ್ರುಪದ, ನಕುಲ-ಸಹದೇವರು-ವಿಂದಾನುವಿಂದರು, ಭೀಮಸೇನ-ಹಾರ್ದಿಕ್ಯ, ಅಭಿಮನ್ಯು-ಚಿತ್ರಸೇನ, ವಿಕರ್ಣ-ದುರ್ಮರ್ಷಣರು, ಭಗದತ್ತ-ಘಟೋತ್ಕಚ, ಅಲಂಬುಷ-ಸಾತ್ಯಕಿ, ಭೂರಿಶ್ರವಸ-ಧೃಷ್ಟಕೇತು, ಶ್ರುತಾಯುಷ-ಧರ್ಮರಾಜ, ಚೇಕಿತಾನ-ಕೃಪ ಇತ್ಯಾದಿ. ಇವರುಗಳ ಯುದ್ಧವೇ ಮುಂದಿನ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿದೆ. ಭೀಷ್ಮನನ್ನು ಪಾಂಡವರ ಕಡೆಯ ರಾಜರೂ ಅರ್ಜುನನನ್ನು ಕೌರವರ ಕಡೆಯ ರಾಜರೂ ಮುತ್ತಿಗೆ ಹಾಕುತ್ತಾರೆ. ಭೀಷ್ಮಾರ್ಜುನರು ಪರಸ್ಪರವಾಗಿ ಯುದ್ಧಮಾಡುವುದೂ ವರ್ಣಿತವಾಗಿದೆ.

ವಿರಾಟ ಮತ್ತು ವಿರಾಟನ ಮಗ ಶಂಖ—ಈ ಇಬ್ಬರೂ ಒಂದೇ ರಥದಲ್ಲಿ ಕುಳಿತು ದ್ರೋಣರೊಡನೆ ಯುದ್ಧಮಾಡುತ್ತಾರೆ. ದ್ರೋಣರ ಬಾಣದಿಂದ ಪ್ರಹೃತನಾದ ಶಂಖನು ಮರಣಹೊಂದುತ್ತಾನೆ. ಏಳನೆಯ ದಿವಸದಲ್ಲಿ ಪಾಂಡವರ ಕಡೆಯಲ್ಲಾದ ಗಣನೀಯವಾದ ನಷ್ಟವೆಂದರೆ ಶಂಖನ ವಧೆ. ಉಳಿದಂತೆ ಜಯಾಪಜಯಗಳು ಎರಡು ಕಡೆಯವರಿಗೂ ಆಗುತ್ತದೆ. ಆದರೆ ಪರಾಜಯಗೊಂಡವರಲ್ಲಿ ದುರ್ಯೋಧನನ ಕಡೆಯವರೇ ಹೆಚ್ಚುಮಂದಿ. ಇಂತಹ ವಾರ್ತೆಗಳನ್ನೇ ಪದೇ-ಪದೇ ಕೇಳುತ್ತಿದ್ದ ಧೃತರಾಷ್ಟ್ರನು ಸಂಜಯನೊಡನೆ **ನ ಚೈವ ಮಾಮಕಂ ಕಿಂಚಿತ್ ಹೃಷ್ಟಂ ಶಂಸಸಿ ಸಂಜಯ । ಜೀಯಮಾನಾನ್ವಿಮನಸೋ ಮಾಮಕಾನ್ವಿಗತೌಜಸಃ । ವದಸೇ ಸಂಯುಗೇ ಸೂತ**—ಎಂದು ಗೋಳಿಡುತ್ತಾನೆ. ಯುಧಿಷ್ಠಿರನಿಗೂ ಶ್ರುತಾಯುಷನಿಗೂ ಯುದ್ಧವಾಗುವಾಗ ಶ್ರುತಾಯುಷನು ಏಳು ಬಾಣಗಳಿಂದ ಯುಧಿಷ್ಠಿರನನ್ನು ಗಾಯಗೊಳಿಸುತ್ತಾನೆ. ಅದರಿಂದ ಯುಧಿಷ್ಠಿರನು ಕುಪಿತನಾಗುತ್ತಾನೆ. ಯುಧಿಷ್ಠಿರನ ಕೋಪದ ಪರಿಣಾಮವೇನೆಂಬುದು ಇಲ್ಲಿ ಮನಮುಟ್ಟುವಂತೆ ಚಿತ್ರಿತವಾಗಿದೆ. ಅಂತಹ ಪ್ರಚಂಡಕೋಪವನ್ನೂ ಯುಧಿಷ್ಠಿರನು '**ಸ ತು ಧೈರ್ಯೇಣ ತಂ ಕೋಪಂ ಸಂನಿವಾರ್ಯ**'-ಧೈರ್ಯದಿಂದ ತೊಲಗಿಸಿ ಯುದ್ಧವನ್ನು ಮುಂದುವರಿಸಿದುದು ಗಮನೀಯವಾದ ಅಂಶ. ಮುಂದೆ

ಇದೇ ಅಧ್ಯಾಯದಲ್ಲಿ–ಚೇಕಿತಾನ ಮತ್ತು ಕೃಪಾಚಾರ್ಯರಿಬ್ಬರೂ ಕತ್ತಿ-ಗುರಾಣಿಗಳನ್ನು ಹಿಡಿದು ಯುದ್ಧಮಾಡುತ್ತಾ ಪರಸ್ಪರ ಕ್ಷತ-ವಿಕ್ಷತರಾಗಿ ಇಬ್ಬರೂ ಮೂರ್ಛಿತರಾಗಿ ಕೆಳಗೆ ಬೀಳುವ ವಿನೂತನ ಸನ್ನಿವೇಶವೊಂದು ಚಿತ್ರಿತವಾಗಿದೆ. ೮೫ನೆಯ ಅಧ್ಯಾಯದಲ್ಲಿ ಅರ್ಜುನನ ಪರಾಕ್ರಮವು ಮನ ಮುಟ್ಟುವಂತೆ ವರ್ಣಿತವಾಗಿದೆ. ಮತ್ತೊಂದು ಸನ್ನಿವೇಶದಲ್ಲಿ ಪಂಚಪಾಂಡವರೂ ಭೀಷ್ಮನೊಡನೆ ಯುದ್ಧಮಾಡುತ್ತಿರುತ್ತಾರೆ. ಶಿಖಂಡಿಮುಖ್ಯರಾದ ಯೋಧರೂ ಅರ್ಜುನನೊಡನೆ ಇರುತ್ತಾರೆ. ಭೀಷ್ಮನ ಕಡೆಯಲ್ಲಿದ್ದ ಜಯದ್ರಥನು ಒಮ್ಮೆ ಪಾಂಡವರ ಕಡೆಯ ಎಲ್ಲ ಯೋಧರ ಧನುಸ್ಸುಗಳನ್ನೂ ಕತ್ತರಿಸಿಬಿಡುತ್ತಾನೆ. ಅನಂತರ ದುರ್ಯೋಧನಾದಿಗಳು ಪಾಂಡವರನ್ನು ಸಾವಿರಾರು ಬಾಣಗಳಿಂದ ಗಾಯಗೊಳಿಸುತ್ತಾರೆ.

ಈ ಸಂದರ್ಭದಲ್ಲಿ ೧೮ನೆಯ ಶ್ಲೋಕವಾದ ನಂತರ **ಛಿನ್ನಾಯುಧಂ ಶಾನ್ತನವೇನ ರಾಜಾ ಶಿಖಣ್ಡಿನಂ ಪ್ರೇಕ್ಷ್ಯ** ಭೀಷ್ಮನು ಶಿಖಂಡಿಯ ಧನುಸ್ಸನ್ನು ಕತ್ತರಿಸಿದನೆಂಬ ವಿಷಯವು ಬರುತ್ತದೆ. ಭೀಷ್ಮನು ಈ ಹಿಂದೆ ಶಿಖಂಡಿಯನ್ನು ಎದುರಿಸಿದ ಪ್ರಕರಣವಾಗಲೀ ಅವನ ಮೇಲೆ ಬಾಣಬಿಟ್ಟ ಪ್ರಕರಣವಾಗಲೀ ಬರುವುದಿಲ್ಲ. ಶಿಖಂಡಿಯು ಎದುರಾಗಿ ಬಂದೊಡನೆಯೇ ಭೀಷ್ಮನು ಯುದ್ಧವನ್ನೇ ನಿಲ್ಲಿಸಿಬಿಡುತ್ತಾನೆ. ಅಂತಹ ಒಂದು ಪ್ರಕರಣವು ಏಳನೆಯ ದಿವಸದ ಯುದ್ಧದಲ್ಲಿಯೂ ಬರುತ್ತದೆ. ಹೀಗಿರುವಾಗ ಶಿಖಂಡಿಯು ಭೀಷ್ಮನಿಂದ ಛಿನ್ನಾಯುಧನಾದುದು ಹೇಗೆ? ೧೬ನೆಯ ಶ್ಲೋಕದಲ್ಲಿ ವರ್ಣಿಸಿರುವಂತೆ ಜಯದ್ರಥನಿಂದ ಛಿನ್ನಾಯುಧನಾಗಿರಬಹುದು. ಆದರೆ ಶಿಖಂಡಿಯು ಭೀಷ್ಮನನ್ನು ಯಾವಾಗ ಎದುರಿಸಿದನು? ಯಾವಾಗ ಶಿಖಂಡಿಯು ಛಿನ್ನಾಯುಧನಾದನು? ಎಂಬುದಕ್ಕೆ ಉತ್ತರವಿಲ್ಲ. ೧೯ನೆಯ ಶ್ಲೋಕದಿಂದ ೨೯ ಶ್ಲೋಕದವರೆಗೆ (**ಭೀಷ್ಮಸ್ತು ರಾಜನ್ಸಮರೇ ಮಹಾತ್ಮಾ** ಎಂಬುವವರೆಗೆ) ವಿಷಯಗಳು ವಿನೂತನವಾಗಿ ಕಂಡುಬಂದರೂ ಭಂಡಾರ್‌ಕರ್ ರಿಸರ್ಚ್ ಸಂಸ್ಥೆಯವರಾದಿಯಾಗಿ ಎಲ್ಲರೂ ಈ ಪಾಠವನ್ನು ಅಂಗೀಕರಿಸಿರುವುದರಿಂದ ಪ್ರಕ್ಷಿಪ್ತವೆಂದು ಕಂಡರೂ ನಾವಿದನ್ನು ಯಥಾವತ್ತಾಗಿಯೇ ಪ್ರಕಟಿಸಿದ್ದೇವೆ.

೮೬ನೆಯ ಅಧ್ಯಾಯದೊಡನೆ ೭ನೆಯ ದಿವಸದ ಯುದ್ಧವು ಮುಗಿಯು

ತ್ತದೆ. ಏಳನೆಯ ದಿವಸದಲ್ಲಿ ಎರಡೂ ಪಕ್ಷಗಳ ಜಯಾಪಜಯಗಳು ಮತ್ತು ಎರಡೂ ಕಡೆಗಳಲ್ಲಿ ಸೈನಿಕರ ವಿನಾಶ–ಇವುಗಳು ವರ್ಣಿತವಾಗಿವೆ. ಶಂಖನೊಬ್ಬನನ್ನು ಬಿಟ್ಟು ಮತ್ತಾವ ಹೆಸರಾಂತ ಯೋಧರೂ ಆ ದಿವಸ ಸಾಯುವುದಿಲ್ಲ. ಆದುದರಿಂದ ಎರಡೂ ಕಡೆಯವರಿಗೆ ಆ ದಿವಸ ಹೆಚ್ಚಿನ ಸಂತೋಷವಾಗಲೀ ಹೆಚ್ಚಿನ ದುಃಖವಾಗಲೀ ಆಗಲಿಲ್ಲವೆಂದು ಹೇಳಬಹುದಾಗಿದೆ.

೮೭ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಎಂಟನೆಯ ದಿವಸದ ವ್ಯೂಹರಚನೆ : ಉಭಯ ಪಕ್ಷಗಳಿಗೂ ಪರಸ್ಪರವಾಗಿ ನಡೆದ ಘೋರಯುದ್ಧದ ವರ್ಣನೆ

ಸಂಜಯನು ಮುಂದುವರಿದು ಧೃತರಾಷ್ಟ್ರನಿಗೆ ಹೇಳುತ್ತಾನೆ :

“ಮಹಾರಾಜ! ಕೌರವರ ಮತ್ತು ಪಾಂಡವರ ಕಡೆಯ ಜನೇಶ್ವರರು ಆ ರಾತ್ರಿಯನ್ನು ಸುಖವಾಗಿ ಕಳೆದು ಬೆಳಗಾಗುತ್ತಲೇ ಪುನಃ ಯುದ್ಧಕ್ಕಾಗಿ ಹೊರಟರು. ಎರಡು ಪಕ್ಷಗಳ ಸೈನ್ಯಗಳೂ ಶಿಬಿರಗಳಿಂದ ಯುದ್ಧಭೂಮಿಗೆ ಹೊರಟಾಗ ದೊಡ್ಡ ಶಬ್ದವಾಯಿತು. ಆ ಶಬ್ದವು ಸಾಗರದ ಭೋರ್ಗರೆಯುವ ಶಬ್ದಕ್ಕೆ ಸಮಾನವಾಗಿದ್ದಿತು.

ಅನಂತರ ರಾಜನಾದ ದುರ್ಯೋಧನ, ಚಿತ್ರಸೇನ, ವಿವಿಂಶತಿ, ರಥಿಗಳಲ್ಲಿ ಶ್ರೇಷ್ಠನಾದ ಭೀಷ್ಮ ಮತ್ತು ದ್ರೋಣರು–ಇವರೆಲ್ಲರೂ ಸಂಘಟಿತರಾಗಿ, ಸನ್ನದ್ಧರಾಗಿ ಪಾಂಡವರೊಡನೆ ಯುದ್ಧಮಾಡುವ ಸಲುವಾಗಿ, ಕವಚಗಳನ್ನು ಧರಿಸಿದವರಾಗಿ ವ್ಯೂಹರಚನೆಗೆ ಉಪಕ್ರಮಿಸಿದರು. ಮಹಾರಾಜ! ನಿನ್ನ ತಂದೆಯಾದ ಭೀಷ್ಮನು ಸಮುದ್ರದಂತೆ ಅತ್ಯಂತವಿಶಾಲವಾಗಿದ್ದ ಮತ್ತು ಭಯಂಕರವಾಗಿದ್ದ ಮಹಾವ್ಯೂಹವನ್ನು ರಚಿಸಿದನು. ಆನೆ, ಕುದುರೆ ಮುಂತಾದ ವಾಹನಗಳೇ ಮಹಾಸಮುದ್ರಕ್ಕೆ ಸಮಾನವಾದ ಆ ವ್ಯೂಹದ ಅಲೆಗಳಾಗಿದ್ದುವು. ಮಾಲವರಿಂದಲೂ, ದಾಕ್ಷಿಣಾತ್ಯರಿಂದಲೂ, ಅವಂತಿ ದೇಶದ ಸೈನಿಕರಿಂದಲೂ ಕೂಡಿಕೊಂಡು ಶಾಂತನುವಿನ ಮಗನಾದ ಭೀಷ್ಮನೇ ಆ ಎಲ್ಲ ಸೇನೆಗಳ ಮುಂದುಗಡೆಯಲ್ಲಿ ಹೋಗುತ್ತಿದ್ದನು.

ಭೀಷ್ಮನ ಹಿಂಭಾಗದಲ್ಲಿ ಪುಲಿಂದ, ಪಾರದ ಮತ್ತು ಕ್ಷುದ್ರಕ ಮಾಲವ ದೇಶದ ಸೈನಿಕರೊಡನೆ ಪ್ರತಾಪವಂತರಾದ ಭಾರದ್ವಾಜರು ಹೋಗುತ್ತಿದ್ದರು.

ದ್ರೋಣರ ಹಿಂಭಾಗದಲ್ಲಿ ಏಕಾಗ್ರಚಿತ್ತನಾದ, ಪ್ರತಾಪಶಾಲಿಯಾದ ಭಗದತ್ತನು ಮಗಧ, ಕಲಿಂಗ ಮತ್ತು ಪಿಶಾಚಸೈನಿಕರೊಡನೆ ರಣರಂಗಕ್ಕೆ ಹೋಗುತ್ತಿದ್ದನು. ಪ್ರಾಗ್ಜ್ಯೋತಿಷಪುರನರೇಶನಾದ ಭಗದತ್ತನನ್ನು ಅನುಸರಿಸಿ ಕೋಸಲದ ರಾಜನಾದ ಬೃಹದ್ಬಲನು ಮೇಕಲ, ಕುರುವಿಂದ ಮತ್ತು ತ್ರಿಪುರಸೈನಿಕರೊಡನೆ ಹೋಗುತ್ತಿದ್ದನು. ಬೃಹದ್ಬಲನ ಅನಂತರ ಶೂರನಾದ ಪ್ರಸ್ಥಲಾಧಿಪತಿಯಾದ ತ್ರಿಗರ್ತರಾಜನು ಬಹುಸಂಖ್ಯಾತರಾದ ಕಾಂಬೋಜರೊಡನೆಯೂ, ಸಾವಿರಾರು ಸಂಖ್ಯೆಯ ಯವನಸೈನಿಕರೊಡನೆಯೂ ರಣಾಂಗಣಕ್ಕೆ ಹೋಗುತ್ತಿದ್ದನು. ತ್ರಿಗರ್ತರಾಜನನ್ನು ಅನುಸರಿಸಿ ವೇಗವಂತನಾದ, ವೀರನಾದ ಅಶ್ವತ್ಥಾಮನು ತನ್ನ ಸಿಂಹನಾದದಿಂದ ಪ್ರಪಂಚವನ್ನೇ ಪ್ರತಿಧ್ವನಿಸುತ್ತಾ ರಣಾಂಗಣಕ್ಕೆ ಪ್ರಯಾಣಮಾಡಿದನು. ಅಶ್ವತ್ಥಾಮನ ಹಿಂಬದಿಯಲ್ಲಿ ಸಂಪೂರ್ಣಸೇನೆಯಿಂದಲೂ ಮತ್ತು ತನ್ನ ಅನುಜರಿಂದಲೂ ಪರಿವೃತನಾಗಿ ದುರ್ಯೋಧನನು ರಣಾಂಗಣಕ್ಕೆ ಹೋಗುತ್ತಿದ್ದನು. ಅನಂತರ ಶರದ್ವಂತನ ಪುತ್ರರಾದ ಕೃಪರು ಪ್ರಯಾಣಮಾಡಿದರು. ಈ ರೀತಿಯಲ್ಲಿ ಸಾಗರೋಪಮವಾಗಿದ್ದ ಮಹಾವ್ಯೂಹವು ಪಾಂಡವರೊಡನೆ ಯುದ್ಧ ಮಾಡುವ ಸಲುವಾಗಿ ರಣಾಂಗಣಕ್ಕೆ ಹೊರಟಿತು. ಸಾಗರೋಪಮವಾದ ಆ ಸೈನ್ಯದಲ್ಲಿ ನಾನಾವರ್ಣಗಳ ಪತಾಕೆಗಳೂ, ಶ್ವೇತಛತ್ರಗಳೂ ಪ್ರಕಾಶಿಸಿದುವು. ರಾಜರುಗಳು ಧರಿಸಿದ್ದ ಬಹುಮೂಲ್ಯವಾದ ಚಿತ್ರ-ವಿಚಿತ್ರವಾದ ಭುಜಬಂದಿಗಳೂ ಮತ್ತು ಧನುಸ್ಸುಗಳೂ ರಾರಾಜಿಸಿದುವು. ನಿನ್ನ ಕಡೆಯ ಮಹಾವ್ಯೂಹವನ್ನು ನೋಡಿ, ಒಡನೆಯೇ ಮಹಾರಥನಾದ ಯುಧಿಷ್ಠಿರನು ತನ್ನ ಪಕ್ಷದ ಸೇನಾನಾಯಕನಾದ ಪಾರ್ಷತನಿಗೆ ಹೇಳಿದನು : "ಮಹಾಧನುರ್ಧರ ದ್ರುಪದಕುಮಾರ! ನಮ್ಮ ಎದುರುಪಕ್ಷದವರು ನಿರ್ಮಿಸಿರುವ ಸಾಗರೋಪಮವಾದ ವ್ಯೂಹವನ್ನು ನೋಡು. ನೀನೂ ಸಹ ಅದಕ್ಕೆ ತಕ್ಕುದಾದ ಪ್ರತಿವ್ಯೂಹವನ್ನು ಅತಿಶೀಘ್ರವಾಗಿ ರಚಿಸುವವನಾಗು."

ಮಹಾರಾಜ! ಯುಧಿಷ್ಠಿರನ ಆಜ್ಞಾನುಸಾರವಾಗಿ ಕ್ರೂರಸ್ವಭಾವದ ಪಾರ್ಷತನು ಸುದಾರುಣವಾದ, ಶತ್ರುಪಕ್ಷದ ವ್ಯೂಹವನ್ನು ವಿನಾಶ ಮಾಡುವ ಸಾಮರ್ಥ್ಯವನ್ನು ಪಡೆದಿದ್ದ ಶೃಂಗಾಟಕವೆಂಬ ವ್ಯೂಹವನ್ನು ರಚಿಸಿದನು. ಆ ಶೃಂಗಾಟಕವ್ಯೂಹದ ಎರಡು ಕೋಡುಗಳ ಸ್ಥಾನಗಳಲ್ಲಿ

ರಥಿಗಳಿಂದಲೂ, ಅಶ್ವ-ಪದಾತಿಗಳಿಂದಲೂ ಸಮೇತರಾಗಿ ಭೀಮಸೇನನೂ ಮಹಾರಥನಾದ ಸಾತ್ಯಕಿಯೂ ಇದ್ದರು.

ಭೀಮಸೇನ-ಸಾತ್ಯಕಿಯರ ಮಧ್ಯಭಾಗದಲ್ಲಿ ಅಥವಾ ವ್ಯೂಹದ ಅಗ್ರ ಭಾಗದಲ್ಲಿ ಶ್ವೇತಾಶ್ವನಾದ, ಕೃಷ್ಣಸಾರಥಿಯಾದ, ನರಶ್ರೇಷ್ಠನಾದ ಅರ್ಜುನ ನಿದ್ದನು. ಶೃಂಗಾಟಕವ್ಯೂಹದ ನಡುಭಾಗದಲ್ಲಿ ಯುಧಿಷ್ಠಿರರಾಜನೂ ಮಾದ್ರಿಯ ಮಕ್ಕಳಾದ ನಕುಲ-ಸಹದೇವರೂ ಇದ್ದರು. ಅವರಾದನಂತರ ಉತ್ತರಭಾಗದಲ್ಲಿ ಸೇನಾಸಹಿತರಾದ, ಮಹಾಧನುಷ್ಮಂತರಾದ, ವ್ಯೂಹರಚನಾ ಶಾಸ್ತ್ರದಲ್ಲಿ ಪಾರಂಗತರಾದ ನರಾಧಿಪರು ಆ ವ್ಯೂಹದ ಅಂಗೋಪಾಂಗಗಳನ್ನು ತಮ್ಮ ಉಪಸ್ಥಿತಿಯಿಂದ ಪೂರ್ಣಗೊಳಿಸಿದರು. ಆ ವ್ಯೂಹದ ಹಿಂಭಾಗದಲ್ಲಿ ಅಭಿಮನ್ಯು, ಮಹಾರಥನಾದ ವಿರಾಟ, ಸಂಹೃಷ್ಟರಾಗಿದ್ದ ದ್ರೌಪದೇಯರು, ಘಟೋತ್ಕಚ ರಾಕ್ಷಸ ಇವರು ನಿಂತಿದ್ದರು. ಮಹಾರಾಜ! ಈ ರೀತಿಯಲ್ಲಿ ಶೃಂಗಾಟಕವೆಂಬ ಮಹಾವ್ಯೂಹವನ್ನು ಕೌರವರ ವ್ಯೂಹಕ್ಕೆ ಪ್ರತಿಯಾಗಿ ರಚಿಸಿಕೊಂಡು ಪಾಂಡವರ ಕಡೆಯ ಶೂರಯೋಧರು ಯುದ್ಧಮಾಡುವ ಮತ್ತು ಯುದ್ಧದಲ್ಲಿ ಜಯಗಳಿಸುವ ಇಚ್ಛೆಯಿಂದ ಸಜ್ಜಾಗಿ ನಿಂತಿದ್ದರು. ಶುದ್ಧಸ್ವರದಿಂದ ಕೂಡಿದ್ದ, ಭೇರೀಶಬ್ದಗಳಿಂದ ಮಿಶ್ರಿತವಾದ ಶಂಖ ಧ್ವನಿಗಳಿಂದಲೂ, ವೀರರ ಸಿಂಹನಾದಗಳಿಂದಲೂ ಭುಜಗಳನ್ನು ತಟ್ಟುವುದು, ಚಪ್ಪಾಳೆ ಹೊಡೆಯುವುದು, ಜಯಕಾರ ಕೂಗುವುದು ಇತ್ಯಾದಿ ಶಬ್ದ ಗಳಿಂದಲೂ ಎಲ್ಲ ದಿಕ್ಕುಗಳೂ ಪ್ರತಿಧ್ವನಿಸಿದುವು. ಅನಂತರ ಎರಡು ಪಕ್ಷಗಳ ಶೂರಯೋಧರೂ ರಣಾಂಗಣಕ್ಕೆ ಬಂದು ಎವೆಯಿಕ್ಕದ ಕಣ್ಣುಗಳಿಂದ ಪರ ಸ್ಪರವಾಗಿ ದುರ-ದುರನೆ ನೋಡಿದರು. ಮೊದಲು ಆ ಯೋಧರೆಲ್ಲರೂ ತಮಗೆ ಅನುರೂಪನಾದ ಪ್ರತಿಪಕ್ಷದ ಯೋಧನನ್ನು ಹೆಸರಿನಿಂದಲೇ ಕರೆದು ಯುದ್ಧಕ್ಕೆ ಆಹ್ವಾನಿಸಿ ಅವನೊಡನೆ ಯುದ್ಧಮಾಡುತ್ತಿದ್ದರು. ಸ್ವಲ್ಪಹೊತ್ತು ಕಳೆಯುತ್ತಲೇ ಪರಸ್ಪರವಾಗಿ ಕಾದಾಡುತ್ತಿದ್ದ ನಿನ್ನ ಕಡೆಯವರಿಗೂ ಮತ್ತು ಪಾಂಡವರ ಕಡೆಯವರಿಗೂ ಘೋರರೂಪವಾದ, ಭಯಾವಹವಾದ ಯುದ್ಧವು ಪ್ರಾರಂಭವಾಯಿತು. ಬಾಯ್ದೆರೆದುಕೊಂಡಿರುವ ಭಯಂಕರವಾದ ಸರ್ಪಗಳೋಪಾದಿಯಲ್ಲಿ ನಿಶಿತವಾದ ನಾರಾಚಗಳು ಆ ಯುದ್ಧದಲ್ಲಿ ತೆಕ್ಕೆ-ತೆಕ್ಕೆಯಾಗಿ ಉಭಯಪಕ್ಷಗಳ ಯೋಧರ ಮೇಲೂ ಬಂದು ಬೀಳುತ್ತಿದ್ದುವು.

ಮೋಡಗಳಿಂದ ಹೊರಬರುವ, ಕಾಂತಿಯಿಂದ ಕೂಡಿರುವ ಮಿಂಚುಗಳೋಪಾದಿಯಲ್ಲಿ ವಿಮಲವಾದ, ಎಣ್ಣೆಯಲ್ಲಿ ನೆನೆಸಿದ್ದ, ತೀಕ್ಷ್ಣವಾಗಿದ್ದ ಥಳಥಳಿಸುವ ಅನೇಕ ಸಹಸ್ರ ಶಕ್ತ್ಯಾಯುಧಗಳು ಎರಡು ಕಡೆಗಳಲ್ಲಿಯೂ ಬಂದು ಬೀಳುತ್ತಿದ್ದುವು. ಸುವರ್ಣಭೂಷಿತವಾದ, ವಿಮಲವಾದ ಪಟ್ಟಿಗಳಿಂದ ಕಟ್ಟಲ್ಪಟ್ಟಿದ್ದ, ಪರ್ವತದ ಶಿಖರಕ್ಕೆ ಸಮಾನವಾಗಿದ್ದ, ಶುಭಾವಹಗಳಾಗಿದ್ದ ಗದೆಗಳೂ ಸಹ ಎರಡೂ ಪಕ್ಷಗಳ ಸೈನಿಕರ ಮೇಲೂ ಬೀಳುತ್ತಿದ್ದುದು ಆ ರಣರಂಗದಲ್ಲಿ ಕಾಣುತ್ತಿದ್ದಿತು. ನಿರ್ಮಲವಾದ ಆಕಾಶದಂತೆ ಬಹಳ ಸ್ವಚ್ಛವಾಗಿ ಕಾಣುತ್ತಿದ್ದ ಕತ್ತಿಗಳೂ, ಎತ್ತಿನ ಚರ್ಮದಿಂದ ಮಾಡಲ್ಪಟ್ಟಿದ್ದ ಚಿತ್ರಿತವಾಗಿದ್ದ ಗುರಾಣಿ ಗಳೂ ಆ ಯುದ್ಧದಲ್ಲಿ ಉಪಯೋಗಿಸಲ್ಪಡುತ್ತಿದ್ದು ಪರಸ್ಪರಪ್ರಹಾರಕಾಲ ದಲ್ಲಿ ಅವುಗಳು ಬಹುವಾಗಿ ಶೋಭಿಸುತ್ತಿದ್ದುವು. ಎರಡು ಪಕ್ಷಗಳ ಸೈನ್ಯಗಳೂ ಆ ಯುದ್ಧದಲ್ಲಿ ಪರಸ್ಪರವಾಗಿ ಜೀವದ ಹಂಗನ್ನೂ ತೊರೆದು ಕಾದಾಡುತ್ತಿದ್ದಾಗ ಯುದ್ಧೋದ್ಯತರಾದ ದೇವತೆಗಳ ಮತ್ತು ದೈತ್ಯರ ಸೈನ್ಯಗಳಂತೆಯೇ ಅವು ಪರಿಶೋಭಿಸುತ್ತಿದ್ದುವು. ಈ ರೀತಿಯಲ್ಲಿ ಕೌರವ-ಪಾಂಡವಸೈನಿಕರು ರಣಾಂಗಣದ ಸುತ್ತಲೂ ಪ್ರತಿಪಕ್ಷದ ಯೋಧರನ್ನು ಎದುರಿಸಲು ಮುನ್ನುಗ್ಗುತ್ತಿದ್ದರು. ರಥಿಗಳಾದ ರಾಜಶ್ರೇಷ್ಠರು ಆ ಮಹಾಯುದ್ಧದಲ್ಲಿ ತಮ್ಮ ನಾಯಕರಿಂದ ಕಳುಹಿಸಲ್ಪಟ್ಟವರಾಗಿ ತಮ್ಮ ರಥದ ಮೂಕಿಯಿಂದ ಎದುರಾಳಿಯ ರಥದ ಮೂಕಿಗೆ ಡಿಕ್ಕಿಹೊಡೆಸಿ ಯುದ್ಧಮಾಡುತ್ತಿದ್ದರು. ಪರಸ್ಪರವಾಗಿ ದಂತಗಳಿಂದಲೇ ಬಡಿದಾಡುತ್ತಿದ್ದ ಆನೆಗಳ ದಂತಗಳ ಸಂಘರ್ಷಣದಿಂದಾಗಿ ಆ ದಂತಗಳಲ್ಲಿ ಹುಟ್ಟಿದ ಧೂಮಸಹಿತವಾದ ಅಗ್ನಿಯು ಎಲ್ಲ ದಿಕ್ಕುಗಳನ್ನೂ ವ್ಯಾಪಿಸಿತು. ಪರಸ್ಪರವಾಗಿ ಪ್ರಾಸಾಯುಧಗಳಿಂದ ಪ್ರಹೃತರಾದ ಗಜಯೋಧಿಗಳು–ಪರ್ವತದ ಶಿಖರಗಳಿಂದ ಕೆಳಕ್ಕೆ ಬೀಳುವ ವೃಕ್ಷಗಳಂತೆ–ಮೃತರಾಗಿ ಆನೆಯಿಂದ ಕೆಳಕ್ಕೆ ಬೀಳುತ್ತಿದ್ದುದು ರಣಾಂಗಣದ ಸುತ್ತಲೂ ಕಾಣುತ್ತಿದ್ದಿತು.

ನಖರ-ಪ್ರಾಸಯೋಧಿಗಳಾದ ಪದಾತಿಸೈನ್ಯಗಳು ಪರಸ್ಪರವಾಗಿ ವ್ಯಾಘ್ರನಖಗಳು ಮತ್ತು ಪ್ರಾಸಾಯುಧಗಳಿಂದಲೇ ಯುದ್ಧಮಾಡುತ್ತಾ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಿದ್ದಾಗ ವಿಚಿತ್ರವಾದ ರೂಪಗಳನ್ನು ಧರಿಸಿರುವಂತೆ ಕಾಣುತ್ತಿದ್ದರು. ಕುರು-ಪಾಂಡವಸೈನಿಕರು ಪರಸ್ಪರವಾಗಿ ಯುದ್ಧಕ್ಕೆ

ನಿಂತು ನಾನಾವಿಧವಾದ ಮತ್ತು ಘೋರವಾದ ಅಸ್ತ್ರಗಳಿಂದ ಒಬ್ಬರು ಮತ್ತೊಬ್ಬರನ್ನು ಯಮಾಲಯಕ್ಕೆ ಕಳುಹಿಸುತ್ತಿದ್ದರು.

ಈ ರೀತಿಯಲ್ಲಿ ಉಭಯಪಕ್ಷಗಳ ಸೈನಿಕರ ನಡುವೆ ಯುದ್ಧವು ನಡೆಯುತ್ತಿರುವಾಗ ಶಾಂತನುವಿನ ಮಗನಾದ ಭೀಷ್ಮನು ರಣಗರ್ಜನೆಯಿಂದ ಎಲ್ಲ ದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಾ, ಧನುಸ್ಸಿನ ಟೇಂಕಾರಶಬ್ದದಿಂದ ಶತ್ರುಪಕ್ಷದವರನ್ನು ಭ್ರಾಂತಿಗೊಳಿಸುತ್ತಾ ಪಾರ್ಥರನ್ನು ಆಕ್ರಮಿಸಿದನು. ಪಾಂಡವರ ಪಕ್ಷದ ಧೃಷ್ಟದ್ಯುಮ್ನಪ್ರಮುಖರಾದ ರಥಿಕರೂ ಸಹ ಭಯಂಕರವಾದ ಧ್ವನಿಯಿಂದ ಗರ್ಜನೆಮಾಡುತ್ತಾ ಯುದ್ಧಸನ್ನದ್ಧರಾಗಿ ಭೀಷ್ಮನ ಬಳಿಗೆ ಸಾರಿದರು.

ಮಹಾರಾಜ! ಅನಂತರದಲ್ಲಿ ನಿನ್ನ ಕಡೆಯವರಿಗೂ ಮತ್ತು ಪಾಂಡವರ ಕಡೆಯವರಿಗೂ ಘೋರವಾದ ಯುದ್ಧವು ಪ್ರಾರಂಭವಾಯಿತು. ಎರಡೂ ಪಕ್ಷಗಳ ನರಾಶ್ವ-ರಥ-ಗಜಸೈನ್ಯಗಳಿಗೂ ಪರಸ್ಪರವಾಗಿ ಘರ್ಷಣೆಯು ಮೊದಲಾಯಿತು.

೮೭ನೆಯ ಅಧ್ಯಾಯವು ಮುಗಿಯಿತು.

೮೮ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಷ್ಮನ ಪರಾಕ್ರಮ : ಭೀಮಸೇನನು ಧೃತರಾಷ್ಟ್ರನ ಎಂಟು ಮಂದಿ ಮಕ್ಕಳನ್ನು ಸಂಹರಿಸಿದುದು : ದುರ್ಯೋಧನನಿಗೂ ಮತ್ತು ಭೀಷ್ಮನಿಗೂ ಯುದ್ಧದ ವಿಷಯವಾಗಿ ಮಾತುಕತೆ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಭೀಷ್ಮನು ಪಾಂಡವರನ್ನು ಆಕ್ರಮಿಸಿದ ವಿಷಯವನ್ನು ಹೇಳಿದೆನಲ್ಲವೇ? ಪ್ರಜ್ವಲಿಸುತ್ತಿರುವ ಸೂರ್ಯನನ್ನು ನೋಡಲು ಶಕ್ಯವಾಗ ದಂತೆ–ಕ್ರುದ್ಧನಾಗಿದ್ದ, ಎಲ್ಲ ಕಡೆಗಳಲ್ಲಿಯೂ ತನ್ನ ಪರಾಕ್ರಮದಿಂದ ಶತ್ರು ಸೈನ್ಯವನ್ನು ದಹಿಸುತ್ತಿದ್ದ ಭೀಷ್ಮನನ್ನು ನೋಡಲು ಪಾಂಡವರಿಗೆ ಸಾಧ್ಯವಾಗ ಲಿಲ್ಲ. ಧರ್ಮರಾಜನ ಆಜ್ಞಾನುಸಾರವಾಗಿ ಪಾಂಡವರ ಕಡೆಯ ಎಲ್ಲ ಸೈನಿಕರೂ–ನಿಶಿತವಾದ ಬಾಣಗಳಿಂದ ಶತ್ರುಗಳನ್ನು ಮರ್ದನಮಾಡುತ್ತಿದ್ದ

ಗಾಂಗೇಯನ ಬಳಿಗೆ ಧಾವಿಸಿದರು. ಯುದ್ಧಮಾಡುವುದನ್ನೇ ವಿಶೇಷವಾಗಿ ಶ್ಲಾಘಿಸುವ ಸ್ವಭಾವವುಳ್ಳ ಭೀಷ್ಮನು ಸೋಮಕರನ್ನೂ, ಸೃಂಜಯರನ್ನೂ, ಮಹಾಧನುಷ್ಮಂತರಾದ ಪಾಂಚಾಲರನ್ನೂ ಬಾಣಗಳಿಂದ ನೂರಾರು ಸಂಖ್ಯೆ ಯಲ್ಲಿ ಸಂಹರಿಸಿದನು. ತಮ್ಮ ಕಡೆಯಲ್ಲಿ ಅನೇಕರು ಭೀಷ್ಮನ ಬಾಣಗಳಿಂದ ಪ್ರಾಣತೊರೆದುದನ್ನೂ ಲೆಕ್ಕಿಸದೆ, ಮರಣಭಯವನ್ನು ಸಂಪೂರ್ಣವಾಗಿ ಪರಿ ತ್ಯಜಿಸಿ, ಅಳಿದುಳಿದ ಪಾಂಚಾಲ-ಸೋಮಕ-ಸೃಂಜಯಯೋಧರು ಭೀಷ್ಮ ನನ್ನೇ ಪುನಃ ಆಕ್ರಮಿಸಿದರು. ಈ ರೀತಿಯಲ್ಲಿ ಪ್ರಾಣದ ಹಂಗನ್ನೂ ತೊರೆದು ಮೇಲೆ ಬಿದ್ದು ಬಂದ ವೀರರಥಿಗಳ ಕೈಗಳನ್ನೂ ಮತ್ತು ಶಿರಸ್ಸುಗಳನ್ನೂ ಶಂತನುವಿನ ಮಗನಾದ ಭೀಷ್ಮನು ಬಹುಬೇಗ ಕತ್ತರಿಸಿಬಿಟ್ಟನು. ದೇವವ್ರತನು ಅನೇಕರಥಿಕರನ್ನು ಅವರ ರಥಕ್ಕೆ ಕಟ್ಟಿದ್ದ ಕುದುರೆಗಳ ಸಂಹಾರದಿಂದ ರಥ ಹೀನರನ್ನಾಗಿ ಮಾಡಿದನು. ಭೀಷ್ಮನ ಶರಪ್ರಹಾರಕ್ಕೆ ಸಿಕ್ಕಿದ ಕುದುರೆಸವಾರರ ಶಿರಸ್ಸುಗಳು ಶರೀರಗಳಿಂದ ಕೆಳಗುರುಳಿದುವು. ಭೀಷ್ಮನ ಅಸ್ತ್ರಗಳಿಂದ ಮೂರ್ಛಿತವಾಗಿ ರಣಾಂಗಣದಲ್ಲಿ ಬಿದ್ದಿದ್ದ ಪರ್ವತೋಪಮವಾದ ಅನೇಕ ಆನೆಗಳನ್ನು ನಾವು ರಣಾಂಗಣದಲ್ಲಿ ನೋಡಿದೆವು. ಅನೇಕ ಆನೆಗಳನ್ನು ನಿಯಂತ್ರಿಸಲು ಅವುಗಳ ಮೇಲೆ ಮಾವುತರೇ ಇಲ್ಲದಿರುವುದನ್ನೂ ನಾವು ನೋಡಿದೆವು. ಆ ಸಮಯದಲ್ಲಿ ಮಹಾಬಲಿಷ್ಠನಾದ, ರಥಿಗಳಲ್ಲಿ ಶ್ರೇಷ್ಠನಾದ ಭೀಮನೊಬ್ಬನ ಹೊರತಾಗಿ ಭೀಷ್ಮನನ್ನೆದುರಿಸಿ ಯುದ್ಧಮಾಡುವವರು ಪಾಂಡವರ ಸೈನ್ಯದಲ್ಲಿಯೇ ಯಾರೂ ಇರಲಿಲ್ಲ. ಮಹಾಬಲಶಾಲಿಯಾದ ಭೀಮಸೇನನೊಬ್ಬನು ಆ ಸಮಯಕ್ಕೆ ಸರಿಯಾಗಿ ಭೀಷ್ಮನಿಗೆ ಅಭಿಮುಖನಾಗಿ ನಿಂತು ಅನೇಕಬಾಣಗಳಿಂದ ಭೀಷ್ಮನನ್ನು ಪ್ರಹರಿಸಿದನು. ಭೀಮ-ಭೀಷ್ಮರ ಸಮಾಗಮದ ಆ ವೇಳೆಯಲ್ಲಿ ನಿನ್ನ ಸೈನ್ಯದಲ್ಲಿ ಭಯಂಕರವಾದ ಕೋಲಾಹಲ ವುಂಟಾಯಿತು. ಭೀಷ್ಮನೊಡನೆ ಯುದ್ಧಮಾಡುತ್ತಿದ್ದಾಗ ಭೀಮನು ನಿನ್ನ ಎಲ್ಲ ಸೈನಿಕರಿಗೂ ಘೋರರೂಪನಾಗಿಯೂ, ಭಯಂಕರಾಕಾರನಾಗಿಯೂ ಕಂಡನು. ಅದರಿಂದ ಪಾಂಡವರು ಹೃಷ್ಟರಾಗಿ ಸಿಂಹನಾದಗಳನ್ನು ಮಾಡಿದರು. ಭೀಮ-ಭೀಷ್ಮರ ಸತತಪ್ರಹಾರಗಳಿಂದ ಜನಕ್ಷಯವಾಗುತ್ತಿದ್ದ ಆ ಸಮಯ ದಲ್ಲಿ ದುರ್ಯೋಧನರಾಜನು ತನ್ನ ಅನುಜರಿಂದ ಪರಿವೃತನಾಗಿ ಭೀಷ್ಮ ನನ್ನು ರಕ್ಷಿಸುತ್ತಿದ್ದನು. ದುರ್ಯೋಧನಾದಿಗಳು ಭೀಷ್ಮನನ್ನು ನಾಲ್ಕು ಕಡೆ

ಗಳಿಂದಲೂ ರಕ್ಷಿಸುತ್ತಿದ್ದರೂ ಸಹ ರಥಿಗಳಲ್ಲಿ ಶ್ರೇಷ್ಠನಾದ ಭೀಮನು ಭೀಷ್ಮನ ಸಾರಥಿಯನ್ನು ಸಂಹರಿಸಿದನು. ಸಾರಥಿಯಿಲ್ಲದೇ ಅನಿಯಂತ್ರಿತ ವಾಗಿದ್ದ ಭೀಷ್ಮನ ರಥದ ಕುದುರೆಗಳು ಗೊತ್ತುಗುರಿಯಿಲ್ಲದೇ ರಣಾಂಗಣದ ಸುತ್ತಲೂ ಓಡುತ್ತಿರಲಾಗಿ ಭೀಮಸೇನನು ಸುತೀಕ್ಷ್ಣವಾಗಿದ್ದ ಕ್ಷುರಪ್ರವೆಂಬ ಬಾಣದಿಂದ ನಿನ್ನ ಮಗನಾದ ಸುನಾಭನ ತಲೆಯನ್ನು ಕತ್ತರಿಸಿದನು. ಭೀಮನ ಬಾಣದಿಂದ ಹತನಾದ ಸುನಾಭನು ಭೂಮಿಯ ಮೇಲೆ ಬಿದ್ದನು. ಮಹಾರಾಜ! ಮಹಾರಥನಾದ ನಿನ್ನ ಮಗ ಸುನಾಭನು ಹತನಾಗಲಾಗಿ ಅವನ ಏಳು ಮಂದಿ ಶೂರರಾದ ಸೋದರರು ಸುನಾಭನ ವಧೆಯಿಂದಾದ ನಷ್ಟವನ್ನು ಸಹಿಸಿಕೊಳ್ಳಲಿಲ್ಲ. ಭೀಮನಿಗೆ ತಕ್ಕ ಶಾಸನವನ್ನು ಮಾಡಬೇಕೆಂದು ನಿಶ್ಚಯಿಸಿದವರಾಗಿ, ಯುದ್ಧಕಾಮರಾದ ಅರಿಮರ್ದನರಾದ ಆದಿತ್ಯಕೇತು, ಬಹ್ವಾಶೀ, ಕುಂಡಧಾರ, ಮಹೋದರ, ಅಪರಾಜಿತ, ಪಂಡಿತಕ, ಸುದುರ್ಜಯನಾದ ವಿಶಾಲಾಕ್ಷ–ಈ ಏಳು ಮಂದಿ ಸಹೋದರರು, ವಿಚಿತ್ರವಾದ ವೇಷ-ಭೂಷಣಗಳನ್ನು ಧರಿಸಿ ಸುಸಜ್ಜಿತರಾಗಿ, ವಿಚಿತ್ರವಾದ ಕವಚಗಳನ್ನು ತೊಟ್ಟು, ಬಗೆ-ಬಗೆಯ ಧ್ವಜವುಳ್ಳವರಾಗಿ ಪಾಂಡುಪುತ್ರನಾದ ಭೀಮಸೇನನನ್ನು ಮುತ್ತಿಗೆಹಾಕಿದರು. ಭೀಮನೊಡನೆ ನಡೆದ ಯುದ್ಧದಲ್ಲಿ ಮಹೋದರನು ವಜ್ರಾಯುಧಸದೃಶವಾಗಿದ್ದ ಒಂಬತ್ತು ಬಾಣಗಳಿಂದ– ನಮುಚಿಯನ್ನು ಇಂದ್ರನು ಪ್ರಹರಿಸಿದಂತೆ ಭೀಮಸೇನನನ್ನು ಪ್ರಹರಿಸಿದನು. ಅವನನ್ನೇ ಅನುಸರಿಸಿ ಆದಿತ್ಯಕೇತುವು ಎಪ್ಪತ್ತು ಬಾಣಗಳಿಂದಲೂ, ಬಹ್ವಾಶಿಯು ಐದು ಬಾಣಗಳಿಂದಲೂ, ಕುಂಡಧಾರನು ತೊಂಬತ್ತು ಬಾಣಗಳಿಂದಲೂ, ವಿಶಾಲಾಕ್ಷನು ಐದು ಬಾಣಗಳಿಂದಲೂ ಪ್ರಹರಿಸಿದರು. ಮಹಾರಥನಾದ ಭೀಮಸೇನನನ್ನು ಪರಾಜಯಗೊಳಿಸುವ ಇಚ್ಛೆಯಿಂದ ಅಪರಾಜಿತನು ಅನೇಕಬಾಣಗಳಿಂದ ಅವನನ್ನು ಪೀಡಿಸಿದನು. ಪಂಡಿತಕನೂ ಸಹ ಮೂರು ಬಾಣಗಳಿಂದ ಭೀಮನನ್ನು ಪ್ರಹರಿಸಿದನು. ಮಹಾಬಲನಾದ ಭೀಮಸೇನನು ಯುದ್ಧದಲ್ಲಿ ಶತ್ರುಗಳಿಂದಾದ ಆ ಪ್ರಹಾರವನ್ನು ಸಹಿಸಲಿಲ್ಲ. ಶತ್ರುಸೂದನನಾದ ಭೀಮಸೇನನು ತನ್ನ ಧನುಸ್ಸನ್ನು ಎಡಗೈಯಿಂದ ಚೆನ್ನಾಗಿ ಪೀಡಿಸಿ (ಬಗ್ಗಿಸಿ), ಬಗ್ಗಿದ ಗಿಣ್ಣಿನಿಂದ ಕೂಡಿದ್ದ ಬಾಣವನ್ನು ಧನುಸ್ಸಿನಲ್ಲಿ ಯೋಜಿಸಿ, ಶಿಂಜಿನಿಯನ್ನು ಆಕರ್ಣಾಂತವಾಗಿ ಸೆಳೆದು ಸುಂದರವಾದ ಮೂಗನ್ನು ಹೊಂದಿದ್ದ ನಿನ್ನ ಮಗ ಅಪರಾಜಿತನ

ಶಿರಸ್ಸನ್ನು ಕತ್ತರಿಸಿಬಿಟ್ಟನು. ಭೀಮಸೇನನಿಂದ ಪರಾಜಿತನಾದ ಅಪರಾಜಿತನ ಶಿರಸ್ಸು ಭೂಮಿಯ ಮೇಲೆ ಬಿದ್ದಿತು. ಮತ್ತೊಂದು ಭಲ್ಲದಿಂದ ಮಹಾರಥನಾದ ಕುಂಡಧಾರನನ್ನು ಎಲ್ಲರೂ ನೋಡುತ್ತಿದ್ದಂತೆಯೇ ಭೀಮಸೇನನು ಮೃತ್ಯುವಿನ ಲೋಕಕ್ಕೆ ಕಳುಹಿಸಿಕೊಟ್ಟನು. ಪುನಃ ಅಮೇಯಾತ್ಮನಾದ ಭೀಮಸೇನನು ಬಾಣವನ್ನು ಧನುಸ್ಸಿನಲ್ಲಿ ಚೆನ್ನಾಗಿ ಅನುಸಂಧಾನಮಾಡಿ ಪಂಡಿತಕನನ್ನು ಪ್ರಹರಿಸಿದನು. ಯಾವ ರೀತಿಯಲ್ಲಿ ಕಾಲಚೋದಿತವಾದ ಸರ್ಪವು ಮನುಷ್ಯನನ್ನು ಕಚ್ಚಿ ಬಿಲದೊಳಕ್ಕೆ ಸೇರಿಕೊಳ್ಳುತ್ತದೆಯೋ–ಅದೇ ರೀತಿಯಲ್ಲಿ ಭೀಮನು ಬಿಟ್ಟ ಆ ಬಾಣವು ಪಂಡಿತಕನನ್ನು ಸಂಹರಿಸಿ ಭೂಮಿಯ ಒಳಹೊಕ್ಕಿತು. ಪುನಃ ಅದೀನಾತ್ಮನಾದ ಭೀಮನು ಹಿಂದೆ ಕೌರವರು ತಮಗೆ ಕೊಟ್ಟ ಕ್ಲೇಶವನ್ನು ಸ್ಮರಿಸುತ್ತಾ ಮೂರು ಬಾಣಗಳಿಂದ ನಿನ್ನ ಮತ್ತೊಬ್ಬ ಮಗನಾದ ವಿಶಾಲಾಕ್ಷನನ್ನು ಸಂಹರಿಸಿ ಭೂಮಿಗೆ ಕೆಡವಿದನು. ಮಹಾಧನುಷ್ಮಂತನಾದ ಮಹೋದರನನ್ನು ಭೀಮಸೇನನು ಬಾಣದಿಂದ ವಕ್ಷಃಸ್ಥಲದಲ್ಲಿ ಪ್ರಹರಿಸಿದನು. ಭೀಮನ ಆ ಬಾಣಪ್ರಹಾರದಿಂದ ಅವನೂ ಸಹ ಹತನಾಗಿ ಭೂಮಿಯಲ್ಲಿ ಬಿದ್ದನು. ಆದಿತ್ಯಕೇತುವಿನ ಧ್ವಜವನ್ನು ಒಂದು ಬಾಣದಿಂದ ಕತ್ತರಿಸಿ ಅನಂತರ ಅತ್ಯಂತತೀಕ್ಷ್ಣವಾಗಿದ್ದ ಭಲ್ಲದಿಂದ ಅವನ ತಲೆಯನ್ನೂ ಕತ್ತರಿಸಿಬಿಟ್ಟನು. ಅನಂತರ ಕ್ರುದ್ಧನಾದ ಭೀಮಸೇನನು ಬಗ್ಗಿದ ಗಿಣ್ಣೆನಿಂದ ಕೂಡಿದ್ದ ಮತ್ತೊಂದು ಬಾಣದಿಂದ ಬಹ್ವಾಶಿ ಯನ್ನು ಸಂಹರಿಸಿ ಯಮನ ಮನೆಗೆ ಕಳುಹಿಸಿದನು. ಬಹ್ವಾಶಿಯ ಸಂಹಾರವೂ ಆದನಂತರ ಅಲ್ಲಿದ್ದ ನಿನ್ನ ಇತರ ಮಕ್ಕಳು ಭೀಮಸೇನನು ಹಿಂದೆ ಕೌರವಸಭೆಯಲ್ಲಿ ಮಾಡಿದ್ದ ಪ್ರತಿಜ್ಞೆಯು ಸತ್ಯವಾಗಿಬಿಡುವುದೆಂದು ಭಾವಿಸಿದವರಾಗಿ ಎಲ್ಲರೂ ಪಲಾಯನಮಾಡಿದರು. ಅನಂತರ ದುರ್ಯೋಧನನು ತನ್ನ ಸಹೋದರರ ವಧೆಯಿಂದಾದ ವ್ಯಸನದಿಂದ ಸಂಕಟಪಟ್ಟವನಾಗಿ ನಿನ್ನ ಯೋಧರನ್ನು ಕುರಿತು–'ಈ ಭೀಮಸೇನನನ್ನು ಈಗಲೇ ಸಂಹಾರ ಮಾಡಿರಿ'–ಎಂದು ಆಜ್ಞಾಪಿಸಿದನು. ಮಹಾಧನುಷ್ಮಂತರಾದ ನಿನ್ನ ಅಳಿದುಳಿದ ಮಕ್ಕಳು ಈ ರೀತಿಯಲ್ಲಿ ತಮ್ಮ ಸಹೋದರರು ಸಂಹತರಾದುದನ್ನು ನೋಡಿ ಹಿಂದೆ ಮಹಾಪ್ರಾಜ್ಞನಾದ ವಿದುರನು ಹಿತಕರವೂ-ಕ್ಷೇಮಕರವೂ ಆಗಿದ್ದ ಯಾವ ಮಾತುಗಳನ್ನು ಹೇಳಿದ್ದನೋ ಆ ಮಾತುಗಳನ್ನು ಸ್ಮರಿಸಿಕೊಂಡರು. ದಿವ್ಯದರ್ಶಿಯಾದ ವಿದುರನ ಅಂದಿನ ಮಾತು

ಇಂದು ಪ್ರತ್ಯಕ್ಷವಾಗಿ ಕಾರ್ಯರೂಪಕ್ಕೆ ಬಂದಿದೆಯೆಂದೂ ಅವರು ಭಾವಿಸಿದರು. ಮಹಾರಾಜ! ನೀನಾದರೋ ಲೋಭ-ಮೋಹಗಳಿಂದ ಕೂಡಿದವನಾಗಿ, ಪುತ್ರರ ಮೇಲಿನ ವ್ಯಾಮೋಹದಿಂದ ಹಿಂದೆ ವಿದುರನು ನಿನ್ನ ಹಿತಕ್ಕಾಗಿ ಸತ್ಯವೂ, ಮಹತ್ತ್ವಪೂರ್ಣವೂ ಆದ ಯಾವ ಮಾತನ್ನು ಹೇಳಿದ್ದನೋ–ಆ ಮಾತಿನ ಅರ್ಥವನ್ನು ತಿಳಿದುಕೊಳ್ಳಲಿಲ್ಲ. ವಿದುರನು ಹೇಳಿದ ರೀತಿಯಲ್ಲಿಯೇ ಬಲಿಷ್ಠನಾದ, ವಾಯುಪುತ್ರನಾದ, ಮಹಾಬಾಹುವಾದ ಭೀಮಸೇನನು ನಿನ್ನ ಮಕ್ಕಳ ಸಂಹಾರಕ್ಕಾಗಿಯೇ ಹುಟ್ಟಿದ್ದಾನೆ. ಅದೇ ರೀತಿಯಲ್ಲಿ ಅವನೀಗ ನಿನ್ನ ಮಕ್ಕಳನ್ನು ಒಬ್ಬೊಬ್ಬರನ್ನಾಗಿ ಸಂಹಾರಮಾಡುತ್ತಿದ್ದಾನೆ.

ಮಹಾರಾಜ! ನಾನು ಹೇಳಿದ ರೀತಿಯಲ್ಲಿ ನಿನ್ನ ಎಂಟು ಜನ ಮಕ್ಕಳ ಸಂಹಾರವಾದನಂತರ ದುರ್ಯೋಧನರಾಜನು ಸಹೋದರರ ಸಂಹಾರ ದಿಂದ ಬಹಳ ದುಃಖಿತನಾಗಿ ಭೀಷ್ಮನ ಬಳಿಗೆ ಹೋಗಿ ತನ್ನ ದುಃಖವನ್ನು ತೋಡಿಕೊಂಡು ಗೋಳಾಡಿದನು :

"ಪಿತಾಮಹ! ಶೂರರಾದ ನನ್ನ ಸಹೋದರರು ಯುದ್ಧದಲ್ಲಿ ಭೀಮಸೇನನಿಂದ ಹತರಾದರು. ಇತರ ಸೈನಿಕರು ವಿಜಯಗಳಿಸಬೇಕೆಂಬ ಆಶಯದಿಂದ ಹೆಚ್ಚಿನ ಪ್ರಯತ್ನಮಾಡಿದರೂ ಸಹ ಸಫಲರಾಗದೇ ಭೀಮಸೇನನಿಂದ ಸಂಹತರಾಗುತ್ತಿದ್ದಾರೆ. ನೀನಾದರೋ ಮಧ್ಯಸ್ಥನಾಗಿದ್ದುಕೊಂಡು ನಮ್ಮ ವಿಜಯಕ್ಕಾಗಿ ಪೂರ್ಣಮನಸ್ಸಿನಿಂದ ಯುದ್ಧಮಾಡದೇ ನಿತ್ಯವೂ ನಮ್ಮನ್ನು ಉಪೇಕ್ಷೆಮಾಡುತ್ತಲೇ ಇರುವೆ. ನಾನಾದರೋ ನಿನ್ನ ಮನೋಗತವಾದ ಅಭಿಪ್ರಾಯವನ್ನು ತಿಳಿಯದೆ ವಿನಾಶದ ಮಾರ್ಗವನ್ನೇ ಹಿಡಿದುಬಿಟ್ಟೆನು. ಈಗಿನ ನನ್ನ ದೌರ್ಭಾಗ್ಯವನ್ನಾದರೂ ನೋಡು, ಪಿತಾಮಹ!"

ಮಹಾರಾಜ! ದುರ್ಯೋಧನನ ಕಠಿನವಾದ ಮಾತನ್ನು ಕೇಳಿ ನಿನ್ನ ತಂದೆಯಾದ ದೇವವ್ರತನು ಕಂಬನಿದುಂಬಿದ ಕಣ್ಣುಗಳುಳ್ಳವನಾಗಿ ದುರ್ಯೋಧನನನ್ನು ಕುರಿತು ಹೇಳಿದನು :

"ದುರ್ಯೋಧನ! ಈ ವಿಷಯವನ್ನು ನಾನು ಮೊದಲೇ ಹೇಳಿದ್ದೆನು. ದ್ರೋಣರು, ವಿದುರ ಮತ್ತು ಯಶಸ್ವಿನಿಯಾದ ಗಾಂಧಾರಿಯೂ ಸಹ ನಿನಗೆ ಈ ವಿಷಯವನ್ನು ಹೇಳಿದ್ದರು. ಆದರೆ ಆಗ ನೀನು ನಾವು ಹೇಳಿದ ಮಾತನ್ನು

ಅರ್ಥಮಾಡಿಕೊಳ್ಳಲಿಲ್ಲ. ನಾನು ಯುದ್ಧದ ವಿಷಯದಲ್ಲಿಯೂ ಹಿಂದೆಯೇ ಒಂದು ಮಾತನ್ನು ಹೇಳಿದ್ದೆನು. ನನ್ನ ನಿಶ್ಚಿತವಾದ ಅಭಿಪ್ರಾಯವನ್ನು ಪ್ರಕಟಪಡಿಸಿದ್ದೆನು. ನನ್ನನ್ನೂ ಮತ್ತು ಆಚಾರ್ಯದ್ರೋಣರನ್ನೂ ನಿಮ್ಮಿಬ್ಬರ ನಡುವಿನ ಯುದ್ಧದಲ್ಲಿ ನಿಯೋಜಿಸಕೂಡದೆಂಬುದೇ ಅಂದಿನ ನನ್ನ ಸಲಹೆಯಾಗಿತ್ತು. ಏಕೆಂದರೆ : ನಾವಿಬ್ಬರೂ ಎರಡು ಪಕ್ಷದವರಲ್ಲಿಯೂ ಒಂದೇ ವಿಧವಾದ ಒಂದೇ ಸಮನಾದ ಸ್ನೇಹವುಳ್ಳವರಾಗಿದ್ದೇವೆ. ನೀನು ಇಂದು ನಿನ್ನ ಸಹೋದರರು ಹತರಾದುದಕ್ಕಾಗಿ ದುಃಖಪಡುತ್ತಿರುವೆ. ಆದರೆ ಈ ಹನನಕಾರ್ಯವು ಮುಂದುವರಿಯುತ್ತದೆ. ಇಷ್ಟಕ್ಕೇ ನಿಲ್ಲುವುದಿಲ್ಲ. ಯುದ್ಧಸಮಯದಲ್ಲಿ ಭೀಮಸೇನನು ಧೃತರಾಷ್ಟ್ರನ ಮಕ್ಕಳಲ್ಲಿ ಯಾರನ್ನು ನೋಡುತ್ತಾನೆಯೋ ಅವರುಗಳನ್ನು ಪ್ರತಿನಿತ್ಯವೂ ಸಂಹರಿಸುತ್ತಲೇ ಇರುತ್ತಾನೆ. ಸತ್ಯದ ಮೇಲೆ ಆಣೆಯಿಟ್ಟು ಈ ಮಾತುಗಳನ್ನು ಹೇಳುತ್ತಿದ್ದೇನೆ. ಈ ಸಮಯದಲ್ಲಿ ನಿನಗೆ ನನ್ನ ಸಲಹೆಯಿಷ್ಟೆ.

**ಸ ತ್ವಂ ರಾಜನ್ಸ್ಥಿರೋ ಭೂತ್ವಾ ರಣೇ ಕೃತ್ವಾ ದೃಢಾಂ ಮತಿಮ್ ।**
**ಯೋಧಯಸ್ವ ರಣೇ ಪಾರ್ಥಾನ್ಸ್ವರ್ಗಂ ಕೃತ್ವಾ ಪರಾಯಣಮ್ ॥**

ನೀನು ಸ್ಥಿರವಾಗಿರು. ಮನಸ್ಸನ್ನು ದೃಢಮಾಡಿಕೋ. ಧೃತಿಗೆಡಬೇಡ. ಯುದ್ಧಮಾಡುವುದರಲ್ಲಿಯೇ ನಿನಗೆ ಸುದೃಢವಾದ ಬುದ್ಧಿಯಿರಲಿ. ಸ್ವರ್ಗವನ್ನೇ ಅಂತಿಮಾಶ್ರಯವನ್ನಾಗಿ ಭಾವಿಸಿಕೊಂಡು ನೀನು ಪಾಂಡವರೊಡನೆ ಯುದ್ಧಮಾಡು.

ನಾನು ಮನಃಪೂರ್ವಕವಾಗಿ ಯುದ್ಧಮಾಡುತ್ತಿಲ್ಲವೆಂದಾಗಲೀ, ಮನಃಪೂರ್ವಕವಾಗಿ ಯುದ್ಧಮಾಡಿದರೆ ಪಾಂಡವರನ್ನು ಜಯಿಸಬಹುದೆಂದಾಗಲೀ ಭ್ರಮಿಸಬೇಡ.

**ನ ಶಕ್ಯಾಃ ಪಾಣ್ಡವಾ ಜೇತುಂ ಸೇನ್ದ್ರೈರಪಿ ಸುರಾಸುರೈಃ ।**
**ತಸ್ಮಾದ್ಯುದ್ಧೇ ಸ್ಥಿರಾಂ ಕೃತ್ವಾ ಮತಿಂ ಯುಧ್ಯಸ್ವ ಭಾರತ ॥೪೪॥**

ದುರ್ಯೋಧನ! ಪಾಂಡವರನ್ನು ಜಯಿಸಲು ಇಂದ್ರಸಹಿತರಾದ ದೇವಾಸುರರಿಗೂ ಸಾಧ್ಯವಾಗುವುದಿಲ್ಲ. (ಆದುದರಿಂದ ಅವರನ್ನು ಜಯಿಸುವ

ಆಶೆಯನ್ನು ಬಿಟ್ಟುಬಿಡು.) ಯುದ್ಧಮಾಡುವುದರಲ್ಲಿಯೇ ಸ್ಥಿರವಾದ ಬುದ್ಧಿಯನ್ನಿಡು. ಹಾಗೆಯೇ ಕಡೆಯವರೆಗೂ ಯುದ್ಧಮಾಡು."

೮೮ನೆಯ ಅಧ್ಯಾಯವು ಮುಗಿಯಿತು.

೮೯ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಕೌರವ-ಪಾಂಡವರ ಭಯಂಕರಯುದ್ಧದ ವರ್ಣನೆ : ಅಪಾರಸೈನ್ಯ ನಾಶ

ತನ್ನ ಮಕ್ಕಳ ಮರಣವಾರ್ತೆಯನ್ನು ಕೇಳಿ ದುಃಖಿತನಾದ ಧೃತರಾಷ್ಟ್ರನು ಸಂಜಯನಿಗೆ ಹೇಳುತ್ತಾನೆ :

"ಸಂಜಯ! ಯುದ್ಧದಲ್ಲಿ ಒಬ್ಬನೇ ಒಬ್ಬ ಭೀಮನಿಂದ ನನ್ನ ಎಂಟು ಮಂದಿ ಮಕ್ಕಳು ಹತರಾದುದನ್ನು ನೋಡಿ ಭೀಷ್ಮ-ದ್ರೋಣ-ಕೃಪಾದಿಗಳು ಏನು ಮಾಡಿದರು? ಹೇಳು. ಅನುದಿನವೂ ನನ್ನ ಮಕ್ಕಳು ಕ್ಷಯಿಸುತ್ತಲೇ ಇದ್ದಾರೆ. ನಿಶ್ಚಯವಾಗಿಯೂ ನನ್ನ ಮಕ್ಕಳು ದೈವದಿಂದ ತಿರಸ್ಕೃತರಾಗಿ ರುವರೆಂದೇ ನಾನು ಭಾವಿಸುತ್ತೇನೆ. ದೌರ್ಭಾಗ್ಯದ ಕಾರಣದಿಂದಲೇ ನನ್ನ ಮಕ್ಕಳು ಅನುದಿನವೂ ಶತ್ರುಗಳಿಂದ ಜಯಿಸಲ್ಪಡುತ್ತಿದ್ದಾರೆಯೇ ಹೊರತು ಶತ್ರುಗಳನ್ನವರು ಜಯಿಸುತ್ತಿಲ್ಲ. ಭೀಷ್ಮ-ದ್ರೋಣರು, ಮಹಾತ್ಮರಾದ ಕೃಪರು, ವೀರಶ್ರೇಷ್ಠನಾದ ಭೂರಿಶ್ರವಸ, ಭಗದತ್ತ, ಅಶ್ವತ್ಥಾಮಾ–ಇವರು ಗಳೇ ಅಲ್ಲದೇ ಯುದ್ಧದಿಂದ ಪ್ರತಿನಿವೃತ್ತರಾಗದೇ ಇರತಕ್ಕ ಇನ್ನೂ ಅನೇಕ ಮಹಾವೀರರಾದ ರಾಜರ ಮಧ್ಯದಲ್ಲಿ ಸುರಕ್ಷಿತರಾಗಿರತಕ್ಕ ನನ್ನ ಮಕ್ಕಳು ಯುದ್ಧದಲ್ಲಿ ಸಂಹರಿಸಲ್ಪಟ್ಟರೆಂದರೆ ಇದು ಕೇವಲ ದುರದೃಷ್ಟವಲ್ಲದೇ ಮತ್ತೇನು? ಸಂಜಯ! ನಿಶ್ಚಯವಾಗಿಯೂ ಮಂದಬುದ್ಧಿಯಾದ ದುರ್ಯೋಧನನು ಹಿಂದೆ ಹೇಳಿದುದನ್ನು ಅರ್ಥಮಾಡಿಕೊಳ್ಳಲಿಲ್ಲ. ನಾನು, ಭೀಷ್ಮ, ವಿದುರ, ಗಾಂಧಾರಿ ಎಲ್ಲರೂ ಸಹ ಅವನಿಗೆ ಹಿತವನ್ನುಂಟುಮಾಡುವ ಅಪೇಕ್ಷೆಯಿಂದ ಪದೇ ಪದೇ ತಡೆದರೂ ತಾನು ಯುದ್ಧದಲ್ಲಿ ಜಯಿಸಿಯೇ ತೀರುವೆನೆಂಬ ಭ್ರಾಂತಿಯಿಂದ ನಮ್ಮ ಮಾತನ್ನು ಅವನು ಅರ್ಥಮಾಡಿಕೊಳ್ಳಲಿಲ್ಲ ; ನಿರ್ಲಕ್ಷಿಸಿದನು. ಅದರ ಫಲವೇ ಈಗ ಪ್ರಾಪ್ತವಾಗಿದೆ. ಆ ಫಲವು ಯಾವುದೆಂದರೆ ಯುದ್ಧದಲ್ಲಿ ನನ್ನ

ಮೂರ್ಖರಾದ ಮಕ್ಕಳನ್ನು ಪ್ರತಿನಿತ್ಯವೂ ಸಂಕ್ರುದ್ಧನಾದ ಭೀಮನು ಯಮನ ಮನೆಗೆ ಕಳುಹಿಸುವನೆಂಬುದೇ ಆಗಿದೆ."

"ದುರ್ಯೋಧನನನ್ನು ತೆಗಳಿ ಪ್ರಯೋಜನವಿಲ್ಲ ಮಹಾರಾಜ! ಆ ಸಮಯದಲ್ಲಿ ನೀನೇ ವಿದುರನು ಹೇಳಿದ ಹಿತವಚನಗಳನ್ನು ಮನಸ್ಸಿಗೆ ತೆಗೆದುಕೊಳ್ಳಲಿಲ್ಲ. ಆದುದರಿಂದಲೇ ಈಗ ಪುತ್ರವಿನಾಶವೆಂಬ ಈ ಫಲವು ಪ್ರಾಪ್ತವಾಗಿದೆ. 'ದ್ಯೂತದಿಂದ ಮಕ್ಕಳನ್ನು ವಿಮುಖರನ್ನಾಗಿ ಮಾಡು. ದ್ಯೂತವಾಡಲು ಅನುಜ್ಞೆಯನ್ನು ಕೊಡಬೇಡ. ಪಾಂಡವರ ವಿಷಯದಲ್ಲಿ ದ್ರೋಹವನ್ನೆಸಗಬೇಡ'–ಎಂಬುದಾಗಿ ಹಿತಕಾಮಿಗಳಾದ ಸುಹೃದರು ಹೇಳುತ್ತಿದ್ದ ಮಾತುಗಳನ್ನು ನೀನು ಕೇಳಲಿಲ್ಲ. ಸನ್ನಿಹಿತಮರಣನಾದ ಪುರುಷನಿಗೆ ಔಷಧವು ಹಿಡಿಸದಂತೆ–ಸುಹೃದರ ಹಿತವಚನಗಳು ನಿನಗೆ ಪಥ್ಯವಾಗಲಿಲ್ಲ. ಸಾಧು-ಸತ್ಪುರುಷರೂ ಮತ್ತು ವಿದುರನೂ ಆ ಸಮಯದಲ್ಲಿ ದ್ಯೂತದ ಪರಿಣಾಮದ ವಿಷಯದಲ್ಲಿ ಯಾವ ಮಾತನ್ನು ಹೇಳಿದ್ದರೋ ಆ ಮಾತು ಇಂದು ನಿನ್ನ ಸಮಕ್ಷದಲ್ಲೇ ಸತ್ಯವಾಗಿ ಪರಿಣಮಿಸಲಿದೆ. ವಿದುರ-ದ್ರೋಣ-ಭೀಷ್ಮರ ಮತ್ತು ಇನ್ನೂ ಅನೇಕ ಹಿತೈಷಿಗಳ ಹಿತವಚನಗಳನ್ನು ಮಾನ್ಯ ಮಾಡದೇ ಇದ್ದುದರಿಂದ (ಕಾರ್ಯರೂಪಕ್ಕೆ ತರದೇ ಇದ್ದುದರಿಂದ) ಅದರ ಪರಿಣಾಮವಾಗಿ ಎಲ್ಲ ಕೌರವರೂ ವಿನಾಶಹೊಂದುತ್ತಾರೆ.

ಹಿತೈಷಿಗಳ ಮಾತಿನ ಉಲ್ಲಂಘನೆಯಿಂದಾಗಿ ಕೌರವರ ವಿನಾಶವಾಗುವುದೆಂಬುದು ಬಹಳ ಹಿಂದೆಯೇ ಸಿದ್ಧವಾಗಿದ್ದ ವಿಷಯವೇ ಆಗಿದೆ. ಆದರೆ ಅದು ಕಾರ್ಯರೂಪಕ್ಕೆ ಈಗ ಬಂದಿದೆ. ಆದುದರಿಂದ ಈಗ ಅದರ ವಿಷಯವಾಗಿ ಚಿಂತಿಸಿ ಫಲವಿಲ್ಲ. ಆದುದರಿಂದ ನೀನೀಗ ಯುದ್ಧವು ಯಾವ ರೀತಿಯಲ್ಲಿ ನಡೆಯಿತೆಂಬುದನ್ನು ಯಥಾವತ್ತಾಗಿ ನನ್ನಿಂದ ಕೇಳು. ಎಂಟನೆಯ ದಿವಸದ ಮಧ್ಯಾಹ್ನದ ವೇಳೆಯಲ್ಲಿ ಲೋಕಕ್ಷಯಕರವಾದ ಅತ್ಯಂತ ಘೋರವಾದ ಮತ್ತು ಭಯಂಕರವಾದ ಯುದ್ಧವು ನಡೆಯಿತು. ಅದನ್ನು ನಾನೀಗ ವರ್ಣಿಸುತ್ತೇನೆ ; ಕೇಳುವವನಾಗು. ನಾನು ಹಿಂದೆಯೇ ಹೇಳಿದಂತೆ ಧರ್ಮಪುತ್ರನ ಆಜ್ಞಾನುಸಾರವಾಗಿ ಅವನ ಕಡೆಯ ಸಂಕ್ರುದ್ಧವಾದ ಎಲ್ಲ ಸೈನ್ಯಗಳೂ ಭೀಷ್ಮನನ್ನೇ ಸಂಹರಿಸುವ ಇಚ್ಛೆಯಿಂದ ಅವನನ್ನೇ ಆಕ್ರಮಿಸಿದುವು. ಧೃಷ್ಟದ್ಯುಮ್ನ, ಶಿಖಂಡಿ, ಮಹಾರಥನಾದ ಸಾತ್ಯಕಿ–ಇವರೂ ಸಹ ತಮ್ಮ

ತಮ್ಮ ಸೈನ್ಯಗಳೊಡನೆ ಭೀಷ್ಮನನ್ನೇ ಆಕ್ರಮಿಸಿದರು. ವಿರಾಟ, ಸರ್ವ ಸೋಮಕಸೈನಿಕರಿಂದ ಕೂಡಿದ ದ್ರುಪದ–ಇವರೂ ಸಹ ಮಹಾರಥನಾದ ಭೀಷ್ಮನನ್ನೇ ಮುತ್ತಿದರು. ಕೇಕಯರು, ಧೃಷ್ಟಕೇತು, ಕವಚವನ್ನು ಧರಿಸಿದ್ದ ಕುಂತಿಭೋಜ–ಇವರೆಲ್ಲರೂ ತಮ್ಮ-ತಮ್ಮ ಸೈನ್ಯಗಳೊಡನೆ ಭೀಷ್ಮನನ್ನೇ ಆಕ್ರಮಿಸಿದರು. ಅರ್ಜುನ, ದ್ರೌಪದಿಯ ಐವರು ಮಕ್ಕಳು, ವೀರ್ಯ ವಂತನಾದ ಚೇಕಿತಾನ–ಇವರೆಲ್ಲರೂ ಭೀಷ್ಮನ ರಕ್ಷಣೆಗಾಗಿ ದುರ್ಯೋಧನ ನಿಂದ ಕಳುಹಿಸಲ್ಪಟ್ಟಿದ್ದ ರಾಜರ ಮೇಲೆ ದಾಳಿಯನ್ನು ಪ್ರಾರಂಭಿಸಿದರು. ಅಭಿಮನ್ಯು, ಮಹಾರಥನಾದ ಘಟೋತ್ಕಚ, ಸಂಕ್ರುದ್ಧನಾದ ಭೀಮಸೇನ ಇವರು ಕೌರವರ ಮೇಲೆ ಯುದ್ಧಮಾಡಲು ಹೋದರು. ಪಾಂಡವರು ತಮ್ಮ ಸೈನ್ಯವನ್ನು ಮೂರು ವಿಭಾಗಗಳನ್ನಾಗಿ ಮಾಡಿಕೊಂಡು ಕೌರವರ ಸೈನ್ಯವನ್ನು ಸಂಹರಿಸುತ್ತಿದ್ದರು. ಅದೇ ರೀತಿಯಲ್ಲಿ ಕೌರವರೂ ಸಹ ತಮ್ಮ ಸೈನ್ಯವನ್ನು ನಾನಾವಿಭಾಗಗಳನ್ನಾಗಿ ಮಾಡಿಕೊಂಡು ಪಾಂಡವರ ಸೈನ್ಯವನ್ನು ವಿನಾಶ ಗೊಳಿಸುತ್ತಿದ್ದರು.

ಕ್ರುದ್ಧರಾದ ದ್ರೋಣರು ಸೃಂಜಯರೊಡನೆ ಸೇರಿ ಯುದ್ಧಮಾಡುತ್ತಿದ್ದ ಶ್ರೇಷ್ಠರಾದ ಸೋಮಕರಥಿಗಳನ್ನು ಯುದ್ಧದಲ್ಲಿ ಸಂಹರಿಸಿ ಯಮನ ಮನೆಗೆ ಕಳುಹಿಸುತ್ತಿದ್ದರು. ಮಹಾಧನುಷ್ಮಂತರಾದ ದ್ರೋಣರು ಸೃಂಜಯರನ್ನು ಅವ್ಯಾಹತವಾಗಿ ಸಂಹರಿಸುತ್ತಿರಲು ಮಹಾತ್ಮರಾದ ಸೃಂಜಯರ ಸೈನ್ಯದಲ್ಲಿ ದೊಡ್ಡದಾದ ಗೋಳಾಟವುಂಟಾಯಿತು. ದ್ರೋಣರಿಂದ ಪ್ರಹೃತರಾದ ಅನೇಕ ಕ್ಷತ್ರಿಯರು ವ್ಯಾಧಿಪೀಡಿತರಾದ ಮನುಷ್ಯರಂತೆ–ಭೂಮಿಯ ಮೇಲೆ ಬಿದ್ದು ಸಂಕಟದಿಂದ ಹೊರಳಾಡುತ್ತಿದ್ದುದು ಕಾಣುತ್ತಿದ್ದಿತು. ಹಸಿವಿನಿಂದ ಪೀಡಿತ ರಾದವರು ಕಿರುಚಿಕೊಳ್ಳುವಂತೆ-ಆ ರಣರಂಗದಲ್ಲಿ ಶಸ್ತ್ರಪ್ರಹಾರದಿಂದ ಪೀಡಿತ ರಾಗಿ ಕೂಗುತ್ತಿರುವವರ, ಅಳುತ್ತಿರುವವರ ಮತ್ತು ಗರ್ಜಿಸುತ್ತಿರುವವರ ಶಬ್ದಗಳು ಸರ್ವದಾ ಕೇಳಿಬರುತ್ತಿದ್ದುವು. ದ್ರೋಣರು ಸೃಂಜಯ-ಸೋಮಕ ರನ್ನು ಧ್ವಂಸಮಾಡುತ್ತಿದ್ದಂತೆಯೇ ಮಹಾಬಲನಾದ ಭೀಮಸೇನನು ಪರಮ ಕ್ರುದ್ಧನಾಗಿ ಪ್ರಾಣಿಗಳ ಸಂಹಾರಕ್ಕಾಗಿಯೇ ಬಂದಿರುವ ಮತ್ತೊಬ್ಬ ಯಮ ನೋಪಾದಿಯಲ್ಲಿ ಕೌರವರ ಸೈನ್ಯವನ್ನು ಸಂಹರಿಸತೊಡಗಿದನು. ಆ ಮಹಾ ಯುದ್ಧದಲ್ಲಿ ಪರಸ್ಪರವಾಗಿ ವಧಿಸಲ್ಪಡುತ್ತಿದ್ದ ಸೈನಿಕರ ರಕ್ತದ ಧಾರೆಗಳಿಂದಲೇ

ಹುಟ್ಟಿದ ಘೋರವಾದ ನದಿಯು ರಣರಂಗದಲ್ಲಿ ಪ್ರವಹಿಸತೊಡಗಿತು. ಸತ್ತವರ ಸಂಖ್ಯೆಯಿಂದ ಯಮನ ರಾಜ್ಯದ ಜನಸಂಖ್ಯೆಯನ್ನು ಹೆಚ್ಚಿಸುವ ಕೌರವ-ಪಾಂಡವರ ಆ ಮಹಾಸಂಗ್ರಾಮವು ಅತ್ಯಂತಭೀಕರವಾಗಿ ಪರಿಣಮಿಸಿತು. ಕ್ರುದ್ಧನಾದ ಅದರಲ್ಲಿಯೂ ವಿಶೇಷವಾಗಿ ಅತ್ಯಂತರಭಸದಿಂದ ಕಾರ್ಯಗಳನ್ನು ಮಾಡಿಮುಗಿಸುವ ಸಾಮರ್ಥ್ಯದಿಂದ ಕೂಡಿದ್ದ ಭೀಮಸೇನನು ಕೌರವರ ಗಜಸೈನ್ಯದ ಬಳಿಗೆ ಹೋಗಿ ಅದನ್ನು ಮೃತ್ಯುವಿಗರ್ಪಿಸಲು ಉಪಕ್ರಮಿಸಿದನು. ಭೀಮನ ನಾರಾಚಗಳಿಂದ ಪ್ರಹೃತವಾದ ಆನೆಗಳಲ್ಲಿ ಕೆಲವು ಕೆಳಕ್ಕೆ ಬೀಳುತ್ತಿದ್ದುವು. ಮತ್ತೆ ಕೆಲವು ಕಿರುಚಿಕೊಳ್ಳುತ್ತಿದ್ದುವು. ಇನ್ನೂ ಕೆಲವು ಆನೆಗಳು ಮರಣಹೊಂದುತ್ತಿದ್ದುವು. ಮತ್ತೆ ಹಲವಾರು ಆನೆಗಳು ವೇದನೆಯನ್ನು ತಾಳಲಾರದೇ ರಣಾಂಗಣದ ಸುತ್ತಲೂ ಘೀಳಿಡುತ್ತಾ ತಿರುಗುತ್ತಿದ್ದುವು.

ಭೀಮನ ಬಾಣಗಳ ಪ್ರಹಾರದಿಂದಾಗಿ ಕೆಲವು ಮಹಾಗಜಗಳ ಸೊಂಡಿಲುಗಳೇ ಕತ್ತರಿಸಿಹೋಗಿದ್ದುವು. ಕೆಲವು ಆನೆಗಳು ಶರೀರಾದ್ಯಂತ ಕ್ಷತ-ವಿಕ್ಷತವಾಗಿದ್ದುವು. ಕೆಲವು ಭಯಗೊಂಡವುಗಳಾಗಿ ಕ್ರೌಂಚಪಕ್ಷಿಯಂತೆ ಚೀತ್ಕಾರಗಳನ್ನು ಮಾಡುತ್ತಾ ಭೂಮಿಯ ಮೇಲೆ ಮಲಗಿಬಿಡುತ್ತಿದ್ದುವು. ನಕುಲ-ಸಹದೇವರು ಕೌರವರ ಕಡೆಯ ಅಶ್ವಸೈನ್ಯದ ಮೇಲೆ ದಾಳಿನಡೆಸುತ್ತಿದ್ದರು. ಸ್ವರ್ಣದ ಆಭರಣಗಳಿಂದಲೂ, ಸ್ವರ್ಣಮಯವಾದ ಜೀನುಗಳಿಂದಲೂ ಅಲಂಕೃತವಾಗಿದ್ದ ಕೌರವರ ಕುದುರೆಗಳು, ಸಾವಿರಾರು ಸಂಖ್ಯೆಯಲ್ಲಿ ನಕುಲ-ಸಹದೇವರ ಬಾಣಗಳಿಂದ ವಧಿಸಲ್ಪಟ್ಟು ಕೆಳಗೆ ಬೀಳುತ್ತಿರುವುದು ಕಂಡುಬಂದಿತು. ಅಸುನೀಗಿ ತಂಡ-ತಂಡವಾಗಿ ಕೆಳಗೆ ಬೀಳುತ್ತಿದ್ದ ಕುದುರೆಗಳಿಂದ ಸಮರಾಂಗಣವು ತುಂಬಿಹೋಗಿದ್ದಿತು. ಕೆಲವು ಕುದುರೆ ಗಳಿಗೆ ನಾಲಿಗೆಯೇ ಇರಲಿಲ್ಲ. ಮತ್ತೆ ಕೆಲವು ದೀರ್ಘವಾಗಿ ನಿಟ್ಟುಸಿರುಗಳನ್ನು ಬಿಡುತ್ತಿದ್ದುವು. ಮತ್ತೆ ಕೆಲವು ಸಂಕಟದಿಂದ ಕೂಗಿಕೊಳ್ಳುತ್ತಿದ್ದುವು. ಮತ್ತೆ ಕೆಲವು ಸತ್ತೇ ಹೋಗಿದ್ದುವು. ಇಂತಹ ನಾನಾವಿಧವಾದ ಅವಸ್ಥೆಗಳಿಂದ ಕೂಡಿದ್ದ ಕುದುರೆಗಳಿಂದ ರಣಾಂಗಣವು ಪ್ರಕಾಶಿಸಿತು. ಮತ್ತೊಂದು ವಿಭಾಗದಲ್ಲಿ ಅರ್ಜುನನಿಂದ ಹತರಾದ ರಾಜರಿಂದ ವ್ಯಾಪ್ತವಾಗಿದ್ದ ರಣಾಂಗಣವು ಭಯಾನಕವಾಗಿ ಕಾಣುತ್ತಿದ್ದಿತು. ಭಗ್ನವಾಗಿದ್ದ ರಥಗಳಿಂದಲೂ, ಕತ್ತರಿಸಿಹೋಗಿದ್ದ ಧ್ವಜಪಟಗಳಿಂದಲೂ, ಛಿನ್ನ-ಭಿನ್ನವಾಗಿ ಮಾಡಲ್ಪಟ್ಟಿದ್ದ

ದೊಡ್ಡ-ದೊಡ್ಡ ಆಯುಧಗಳಿಂದಲೂ, ಚಾಮರಗಳಿಂದಲೂ, ವ್ಯಜನಗಳಿಂದಲೂ, ಪ್ರಭೆಯಿಂದ ಯುಕ್ತವಾದ ಶ್ವೇತಚ್ಛತ್ರಗಳಿಂದಲೂ, ಸುವರ್ಣಮಯಹಾರಗಳಿಂದಲೂ, ವಂಕಿಗಳಿಂದಲೂ (ಅಂಗದಗಳಿಂದಲೂ), ಕರ್ಣಕುಂಡಲಯುಕ್ತವಾಗಿದ್ದ ಶಿರಸ್ಸುಗಳಿಂದಲೂ, ಬಿಚ್ಚಿಹೋಗಿದ್ದ ಶಿರಸ್ತ್ರಾಣಗಳಿಂದಲೂ, ಪತಾಕೆಗಳಿಂದಲೂ, ಸುಂದರವಾದ ತೋಳುಮರಗಳಿಂದಲೂ (ರಥದ ನೊಗದ ಕೆಳಭಾಗದ ಮರ), ನೊಗಕ್ಕೂ ಮತ್ತು ಕುದುರೆಗಳ ಕುತ್ತಿಗೆಗಳಿಗೂ ಸೇರಿಸಿ ಬಿಗಿಯುವ ಹಗ್ಗಗಳಿಂದ ಕೂಡಿದ ನೊಗಗಳಿಂದಲೂ ಸರ್ವತ್ರ ವ್ಯಾಪ್ತವಾಗಿದ್ದ ರಣಾಂಗಣವು–ವಸಂತರ್ತುವಿನಲ್ಲಿ ನಾನಾವಿಧವಾದ ಕುಸುಮಗಳಿಂದ ಆಚ್ಛಾದಿತವಾದ ವೃಕ್ಷಗಳನ್ನೊಳಗೊಂಡ ಭೂಪ್ರದೇಶದಂತೆ ಕಾಣುತ್ತಿದ್ದಿತು. ಅದೇ ರೀತಿಯಲ್ಲಿ ಕ್ರುದ್ಧನಾದ ಭೀಷ್ಮನಿಂದಲೂ, ರಥಸತ್ತಮರಾದ ದ್ರೋಣರಿಂದಲೂ, ಅಶ್ವತ್ಥಾಮನಿಂದಲೂ, ಕೃಪರಿಂದಲೂ ಮತ್ತು ಕೃತವರ್ಮನಿಂದಲೂ ಸಾವಿರಾರು ಸಂಖ್ಯೆಯಲ್ಲಿ ಪಾಂಡವರ ಕಡೆಯ ರಾಜರೂ ಹತರಾಗಿ ಹೋದರು. ಒಟ್ಟಿನಲ್ಲಿ ಹೇಳುವುದಾದರೆ ಪಾಂಡವರ ಕೋಪದಿಂದ ನಿನ್ನ ಕಡೆಯ ಸೈನಿಕರೂ ಹತರಾದರು. ಭೀಷ್ಮಾದಿಗಳ ಕೋಪದಿಂದ ಪಾಂಡವರ ಕಡೆಯ ಸೈನಿಕರೂ ಹತರಾದರು."

ಲ೯ನೆಯ ಅಧ್ಯಾಯವು ಮುಗಿಯಿತು.

೯೦ನೆಯ ಅಧ್ಯಾಯ — ಭೀಷ್ಮವಧಪರ್ವ (ಮುಂದುವರಿದಿದೆ.)

## ಇರಾವಂತನು ಶಕುನಿಯ ಅನುಜರನ್ನು ಸಂಹರಿಸಿದುದು : ಅಲಂಬುಷನು ಇರಾವಂತನನ್ನು ಸಂಹರಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಈ ರೀತಿಯಲ್ಲಿ ಬಹುಭಯಂಕರವಾದ ವೀರಶ್ರೇಷ್ಠರ ವಿನಾಶಕರವಾದ ಯುದ್ಧವು ನಡೆಯುತ್ತಿರಲಾಗಿ, ಸುಬಲನ ಮಗನಾದ ಶ್ರೀಮಂತನಾದ ಶಕುನಿಯು ಪಾಂಡವರನ್ನು ಎದುರಿಸಿದನು. ಅದೇ ರೀತಿಯಲ್ಲಿ ಶತ್ರುವೀರಹಂತಕನಾದ, ಸಾತ್ವತವಂಶೀಯನಾದ ಹಾರ್ದಿಕ್ಯನೂ ಪಾಂಡವರ ಸೈನ್ಯದ ಮೇಲೆ ಆಕ್ರಮಣನಡೆಸಿದನು. ಕಾಂಬೋಜ, ನದೀಜ, ಆರಟ್ಟ (ಅರಬ್ಬಿ), ಮಹೀಜ, ಸಿಂಧುಜ, ವನಾಯುಜ, ಪಾರ್ವತೀಯ– ಮುಂತಾದ ಅನೇಕ ದೇಶಗಳ ಮತ್ತು ನಾನಾಜಾತಿಗಳ ಬಹುಸಂಖ್ಯಾತ ಅಶ್ವ

ಸೈನ್ಯಗಳು ಯುದ್ಧಭೂಮಿಯಲ್ಲಿ ಸರ್ವತ್ರ ವ್ಯಾಪಿಸಿದ್ದುವು. ಅನಂತರ ಅರ್ಜುನನ ಮಗನಾದ ಇರಾವಂತನು ಆನಂದತುಂದಿಲನಾಗಿ ತನ್ನ ಅಪಾರ ವಾದ ಅಶ್ವಸೇನೆಯೊಡನೆ ಕೌರವರ ಸೇನೆಯ ಮೇಲೆ ದಾಳಿಮಾಡಿದನು. ಅವನ ಅಶ್ವಸೇನೆಯಲ್ಲಿ ತಿತ್ತಿರಿಪ್ರದೇಶದಲ್ಲಿ ಹುಟ್ಟಿದ ಕುದುರೆಗಳೂ ಇದ್ದುವು. ಅವುಗಳೆಲ್ಲವೂ ಸುಂದರವಾಗಿದ್ದುವು. ವಾಯುವೇಗಕ್ಕೆ ಸಮಾನವಾದ ವೇಗವುಳ್ಳವುಗಳಾಗಿದ್ದುವು. ಸುವರ್ಣಾಭರಣಗಳಿಂದ ಅಲಂಕೃತವಾಗಿದ್ದುವು. ಅವುಗಳಿಗೆ ಕವಚಗಳನ್ನೂ ತೊಡಿಸಿದ್ದರು. ಯುದ್ಧೋಪಯೋಗಿಯಾದ ಸಕಲ ಸಂಭಾರಗಳಿಂದಲೂ ಆ ಕುದುರೆಗಳು ಸಜ್ಜಾಗಿದ್ದುವು. ಅಂತಹ ಅಪಾರವಾದ ಮತ್ತು ಅಜೇಯವಾದ ಅಶ್ವಸೈನ್ಯದೊಡನೆ ಇರಾವಂತನು ಶತ್ರುಸೈನ್ಯವನ್ನು ಆಕ್ರಮಿಸಿದನು.

ಮಹಾರಾಜ! ಇರಾವಂತನಾರೆಂಬುದು ನಿನಗೆ ತಿಳಿದಿರುವುದಲ್ಲವೇ? ಶ್ರೀಮಂತನಾದ ಅವನು ಅರ್ಜುನನ ಮಗ. ನಾಗರಾಜನಾದ ಕೌರವ್ಯನ ಮಗಳಾದ ಉಲೂಪಿಯಲ್ಲಿ ಅರ್ಜುನನಿಂದ ಹುಟ್ಟಿದವನು. ಅವನಿಗೆ ಇರಾವಂತನೆಂದು ಹೆಸರು. ಅವನು ವೀರ್ಯವಂತ.

[ಐರಾವತವಂಶೀಯನಾದ ಕೌರವ್ಯನು ತನ್ನ ಮಗಳನ್ನು ನಾಗನೊಬ್ಬ ನಿಗೆ ಮದುವೆಮಾಡಿಕೊಟ್ಟಿದ್ದನು. ಆದರೆ ಅವಳಿಗೆ ಮಕ್ಕಳಾಗಲಿಲ್ಲ. ಗರುಡ ನೊಮ್ಮೆ ಅವಳ ಪತಿಯನ್ನು ಹಿಡಿದು ತಿಂದುಹಾಕಿದನು. ಮಕ್ಕಳಾಗದೇ ಇದ್ದುದರಿಂದಲೂ ಮತ್ತು ಪತಿಯು ಸುಪರ್ಣನಿಂದ ಹತನಾದುದರಿಂದಲೂ ಉಲೂಪಿಯು ದೀನಮನಸ್ಕಳೂ, ದಯನೀಯಳೂ ಆಗಿದ್ದಳು. (ಅರ್ಜು ನನು ತೀರ್ಥಯಾತ್ರೆಯ ಸಮಯದಲ್ಲಿ ಹರಿದ್ವಾರಕ್ಕೆ ಹೋಗಿದ್ದನು. ಗಂಗೆ ಯಲ್ಲಿ ಸ್ನಾನಮಾಡಲು ಇಳಿದಾಗ ಕಾಮವಶಳಾಗಿದ್ದ ಉಲೂಪಿಯು ಅರ್ಜುನನನ್ನು ತನ್ನ ತಂದೆಯಾದ ಕೌರವ್ಯನ ಅರಮನೆಗೆ ಕರೆದುಕೊಂಡು ಹೋದಳು.) ಕಾಮಾತುರಳಾಗಿದ್ದ ಉಲೂಪಿಯನ್ನು ಅರ್ಜುನನು ಭಾರ್ಯೆ ಯನ್ನಾಗಿ ಪರಿಗ್ರಹಿಸಿದನು. ಈ ರೀತಿಯಲ್ಲಿ ಇರಾವಂತನು ಪರಕ್ಷೇತ್ರದಲ್ಲಿ ಹುಟ್ಟಿದ ಮಗನಾಗಿರುತ್ತಾನೆ. ಇರಾವಂತನು ನಾಗಲೋಕದಲ್ಲಿಯೇ ತಾಯಿ ಯಿಂದ ರಕ್ಷಿತನಾಗಿ ಅಭಿವೃದ್ಧಿಹೊಂದುತ್ತಿದ್ದನು. ಆದರೆ ದುರಾತ್ಮನಾದ ಅವನ ಚಿಕ್ಕಪ್ಪನು (ಅಶ್ವಸೇನ) ಪಾರ್ಥನ ಮೇಲಿನ ದ್ವೇಷದಿಂದ ಇರಾವಂತ ನನ್ನು ಮನೆಯಿಂದ ಓಡಿಸಿಬಿಟ್ಟನು. ಆ ಸಮಯದಲ್ಲಿ ಅರ್ಜುನನು

ಇಂದ್ರಲೋಕಕ್ಕೆ ಹೋಗಿದ್ದನು. ರೂಪವಂತನಾದ, ಬಲಸಂಪನ್ನನಾದ, ಸತ್ಯವಿಕ್ರಮನಾದ, ಗುಣವಂತನಾದ ಇರಾವಂತನು ತನ್ನ ತಂದೆಯು ದೇವ ಲೋಕಕ್ಕೆ ಹೋಗಿರುವನೆಂಬ ವಾರ್ತೆಯನ್ನು ಕೇಳಿ ಅರ್ಜುನನನ್ನು ಸಂದರ್ಶಿ ಸಲು ಅಲ್ಲಿಗೇ ಹೋದನು. ಮಹಾಬಾಹುವಾದ, ಸತ್ಯವಿಕ್ರಮನಾದ ಇರಾ ವಂತನು ದೇವಲೋಕದಲ್ಲಿದ್ದ ತನ್ನ ತಂದೆಯ ಬಳಿಗೆ ಹೋಗಿ ಏಕಾಗ್ರಚಿತ್ತ ನಾಗಿ ವಿನಯಪೂರ್ವಕವಾಗಿ ಅವನಿಗೆ ಅಭಿವಾದನೆಮಾಡಿ ಬದ್ಧಾಂಜಲಿ ಯಾಗಿ, ಮಹಾತ್ಮನಾದ ಅರ್ಜುನನಿಗೆ ತನ್ನ ಪರಿಚಯಮಾಡಿಕೊಟ್ಟನು.

'ಪ್ರಭುವೇ! ನಾನು ಇರಾವನ್ನಾಮಕನಾದ ನಿನ್ನ ಪುತ್ರನೇ ಆಗಿರು ತ್ತೇನೆ'–ಹೀಗೆಂಬುದಾಗಿ ಹೇಳಿ ಅರ್ಜುನನೊಡನೆ ತನ್ನ ತಾಯಿಯಾದ ಉಲೂಪಿಯ ಸಮಾಗಮದ ವಿಷಯವನ್ನೂ ಇರಾವಂತನು ಅರ್ಜುನನ ನೆನ ಪಿಗೆ ತಂದನು. ತನಗೂ ಉಲೂಪಿಗೂ ಯಾವ ರೀತಿಯಲ್ಲಿ ಸಮಾಗಮವು ನಡೆಯಿತೋ ಅದೆಲ್ಲವನ್ನೂ ಯಥಾವತ್ತಾಗಿ ಅರ್ಜುನನು ಸ್ಮರಿಸಿಕೊಂಡನು. ಗುಣಗಳಿಂದ ತನಗೆ ಸದೃಶನಾಗಿಯೇ ಇದ್ದ ಮಗನನ್ನು ಅರ್ಜುನನು ಆಲಿಂಗನಮಾಡಿಕೊಂಡು ಬಹಳ ಪ್ರಸನ್ನತೆಯಿಂದ ದೇವರಾಜನ ಅರಮನೆಗೆ ಇರಾವಂತನನ್ನೂ ಕರೆದುಕೊಂಡು ಹೋದನು. ಆ ಸಮಯದಲ್ಲಿ ಅರ್ಜುನನು ಮಹಾಬಾಹುವಾದ ಇರಾವಂತನಿಗೆ ಪ್ರೀತಿಪೂರ್ವಕವಾಗಿ ತನ್ನ ಸ್ವಂತಕಾರ್ಯದ ವಿಷಯವಾಗಿ ಹೀಗೆಂದು ಹೇಳಿದನು :

'ಯುದ್ಧಕಾಲೇ ತ್ವಯಾಸ್ಮಾಕಂ ಸಾಹ್ಯಂ ದೇಯಂ'–'ಯುದ್ಧಕಾಲದಲ್ಲಿ ನೀನು ನಮಗೆ ನಿನ್ನ ಸಹಕಾರವನ್ನು ಕೊಡಬೇಕು'–ಹೀಗೆಂದು ಆಜ್ಞಾಪಿಸಿದ ಅರ್ಜುನನಿಗೆ ಇರಾವಂತನು 'ಹಾಗೆಯೇ ಆಗಲಿ' ಎಂದು ಪ್ರತ್ಯುತ್ತರವಿತ್ತಿದ್ದನು.]

ಅಂದಿನ ಅವನ ಆಣತಿಯಂತೆ ಇರಾವಂತನು ಈಗ ಯುದ್ಧಕಾಲವಾದು ದರಿಂದ ಇಲ್ಲಿಗೆ ಬಂದಿರುತ್ತಾನೆ. ಅವನು ಇಲ್ಲಿಗೆ ಬರುವಾಗ ತನ್ನೊಡನೆ ಇಚ್ಛಾನುಸಾರವಾಗಿ ಬಣ್ಣಗಳನ್ನು ಬದಲಾಯಿಸಿಕೊಳ್ಳಬಲ್ಲ ಅತ್ಯಂತವೇಗವಾಗಿ ಹೋಗುವ ಅನೇಕ ಕುದುರೆಗಳನ್ನೂ ತಂದಿರುವನು. ಆ ಕುದುರೆಗಳು ಸುವರ್ಣಮಯವಾದ ಶಿರೋಭೂಷಣಗಳನ್ನು ಹೊಂದಿದ್ದು, ನಾನಾವರ್ಣ

ಗಳಿಂದ ಕೂಡಿದ್ದು ಮನಸ್ಸಿನ ವೇಗಕ್ಕೆ ಸಮಾನವಾದ ವೇಗವುಳ್ಳವುಗಳಾಗಿದ್ದುವು. ಮಹಾರಾಜ! ಆ ಕುದುರೆಗಳು ಮಹೋದಧಿಯಲ್ಲಿರುವ ಹಂಸ ಗಳಂತೆ ಹಾರಿಕೊಂಡೇ ಇಲ್ಲಿಗೆ ಬಂದುವು. ಅವುಗಳು ನಿನ್ನ ಸೈನ್ಯದಲ್ಲಿರುವ ಮನಸ್ಸಿಗೆ ಸಮಾನವಾದ ವೇಗವುಳ್ಳ ಕುದುರೆಗಳ ಸಮೂಹದೊಡನೆ ಸಂಘರ್ಷಿಸಿ, ಎದೆಗಳಿಂದ ಎದೆಗಳನ್ನೂ ಮೂಗುಗಳಿಂದ (ಮೂತಿಗಳಿಂದ) ಮೂಗುಗಳನ್ನೂ ಪರಸ್ಪರವಾಗಿ ಪ್ರಹರಿಸುತ್ತಾ ದಣಿದು ಸೊರಗಿ ಭೂಮಿಯ ಮೇಲೆ ಬೀಳುತ್ತಿದ್ದುವು. ಗರುಡನು ವೇಗಪೂರ್ವಕವಾಗಿ ಆಕಾಶದಿಂದ ಕೆಳ ಗಿಳಿಯುವಾಗ ಶಬ್ದವಾಗುವಂತೆ ಪರಸ್ಪರಪ್ರಹಾರದಿಂದ ಸೊರಗಿ-ಸೊಪ್ಪಾಗಿ ಕೆಳಗೆ ಬೀಳುತ್ತಿದ್ದ ಕುದುರೆಗಳ ದಾರುಣವಾದ ಶಬ್ದವು ಸರ್ವತ್ರ ಕೇಳಿಬರು ತ್ತಿದ್ದಿತು. ಅದೇ ರೀತಿಯಲ್ಲಿ ನಿನ್ನ ಕಡೆಯ ಕುದುರೆಸವಾರರೂ ಸಹ ಪಾಂಡ ವರ ಕಡೆಯ ಕುದುರೆಗಳ ಮೇಲೆ ತಮ್ಮ ಕುದುರೆಗಳನ್ನು ನುಗ್ಗಿಸಿ ಪರಸ್ಪರ ಸಂಹಾರಕಾರ್ಯವನ್ನು ಮಾಡಿಸುತ್ತಿದ್ದರು. ಈ ಪ್ರಕಾರವಾಗಿ ಅತ್ಯಂತಭಯಾ ನಕವಾದ ಘೋರಯುದ್ಧವು ನಡೆದನಂತರ ರಣಾಂಗಣದ ಸುತ್ತಲೂ ಇದ್ದ ಕುದುರೆಗಳ ಸಮೂಹಗಳು ವಿನಾಶಹೊಂದಿದುವು. ಭಯಂಕರವಾದ ಯುದ್ಧವು ಅನವರತವಾಗಿ ನಡೆಯುತ್ತಿದ್ದುದರಿಂದ ಶೂರಯೋಧರಲ್ಲಿದ್ದ ಬಾಣಗಳೂ ಮುಗಿದುಹೋದುವು. ಅವರ ಕುದುರೆಗಳೂ ಪರಸ್ಪರ ಸಂಘರ್ಷಣೆಯಿಂದ ಪ್ರಾಣತೊರೆದಿದ್ದುವು. ಯುದ್ಧದ ಶ್ರಮದಿಂದಾಗಿ ಸೈನಿ ಕರೂ ಆಯಾಸಗೊಂಡಿದ್ದರು. ಹೀಗಿದ್ದರೂ ಸಹ ಅವರು ಸುಮ್ಮನಿರದೆ ಪರಸ್ಪರವಾಗಿ ಸಂಘರ್ಷಿಸುತ್ತಾ ಪ್ರಾಣಗಳನ್ನು ತೊರೆಯುತ್ತಿದ್ದರು. ಈ ರೀತಿ ಯಲ್ಲಿ ಅಶ್ವಸೇನೆಯಲ್ಲಿ ಸ್ವಲ್ಪಭಾಗವು ಮಾತ್ರವೇ ಉಳಿದಿದ್ದು ಹೆಚ್ಚು ಸೈನ್ಯ ಭಾಗವು ವಿನಾಶಹೊಂದಲಾಗಿ ಶಕುನಿಯ ಶೂರಸಹೋದರರು ಯುದ್ಧ ಮಾಡಲು ಹೊರಟರು. ವಾಯುವೇಗಕ್ಕೆ ಸಮಾನವಾದ, ದುಃಸಹವಾದ ಸ್ಪರ್ಶ ವಿದ್ದ (ಮುಟ್ಟಲೂ ಕೂಡ ದುಃಸಾಧ್ಯವಾಗಿದ್ದ ), ಶತ್ರುಸೈನ್ಯಕ್ಕೆ ಬಿರುಗಾಳಿ ಯಿಂದುಂಟಾಗುವ ಆಘಾತವನ್ನು ಉಂಟುಮಾಡುವುದಾಗಿದ್ದ, ವೇಗದಲ್ಲಿ ವಾಯುವಿಗೆ ಸಮಾನವಾಗಿದ್ದ, ಬಲಿಷ್ಠವಾಗಿದ್ದ, ತೀರ ಚಿಕ್ಕವುಗಳೂ ತೀರ ವಯಸ್ಸಾದುವುಗಳೂ ಆಗಿರದೇ ಮಧ್ಯವಯಸ್ಸಿನಿಂದ ಕೂಡಿದ್ದ, ಶ್ರೇಷ್ಠವಾದ ಕುದುರೆಗಳನ್ನು ಹತ್ತಿ ಗಜ, ಗವಾಕ್ಷ, ವೃಷಭ, ಚರ್ಮವಂತ, ಆರ್ಜವ ಮತ್ತು ಶುಕ–ಈ ಆರು ಮಂದಿ ಬಲಸಂಪನ್ನರಾದ ಶಕುನಿಯ ತಮ್ಮಂದಿರು ತಮ್ಮ

ವಿಶಾಲಸೇನೆಯಿಂದ ಹೊರಬಂದರು. ಯದ್ಯಪಿ ಅವರು ತಮ್ಮ ಅಣ್ಣನಾದ ಶಕುನಿಯಿಂದಲೂ ಮತ್ತು ಮಹಾಬಲರಾದ ಹಿತೈಷಿಗಳಾದ ಇತರ ಯೋಧ ರಿಂದಲೂ ತಡೆಯಲ್ಪಟ್ಟರೂ–ಯುದ್ಧಸನ್ನದ್ಧರಾಗಿದ್ದ, ಯುದ್ಧಕುಶಲರಾಗಿದ್ದ ಭಯಂಕರವಾದ ರೂಪವನ್ನು ಹೊಂದಿದ್ದ ಮಹಾಬಲರಾದ ಅವರು ಯುದ್ಧಕ್ಕೆ ಹೊರಟೇಬಿಟ್ಟರು.

ಯುದ್ಧದುರ್ಮದರಾಗಿದ್ದ, ಮಹಾಬಲಿಷ್ಠರಾಗಿದ್ದ, ಸ್ವರ್ಗವನ್ನಾಗಲೀ–ವಿಜಯವನ್ನಾಗಲೀ ಇಚ್ಛಿಸಿ ಹೊರಟಿದ್ದ ಗಾಂಧಾರದೇಶದ ರಾಜಕುಮಾರರು ಪರಮಹೃಷ್ಟರಾಗಿ, ಪರಮದುರ್ಜಯವಾಗಿದ್ದ ಪಾಂಡವರ ಸೈನ್ಯವ್ಯೂಹವನ್ನು ಭೇದಿಸಿ ವ್ಯೂಹದೊಳಗೆ ಪ್ರವೇಶಿಸಿದರು. ವೀರ್ಯವಂತನಾದ ಇರಾವಂತನು ಶಕುನಿಯ ತಮ್ಮಂದಿರು ವ್ಯೂಹದೊಳಕ್ಕೆ ಪ್ರವೇಶಿಸಿದುದನ್ನು ಕಂಡು, ಭಯಂಕರವಾದ ಶಸ್ತ್ರಾಸ್ತ್ರಗಳನ್ನು ಹೊಂದಿದ್ದ ಮತ್ತು ವಿಚಿತ್ರವಾದ ಉಡುಪು ಗಳನ್ನು ಧರಿಸಿದ್ದ ಯೋಧರನ್ನು ಕುರಿತು–'ನಮ್ಮೊಡನೆ ಯುದ್ಧಕ್ಕೆ ಬಂದಿರುವ ದುರ್ಯೋಧನನ ಈ ಯೋಧರು ತಮ್ಮ ಸೇವಕರೊಡನೆ ಮತ್ತು ವಾಹನ ಗಳೊಡನೆ ಮೃತ್ಯುವನ್ನಪ್ಪುವಂತಹ ಯುದ್ಧನೀತಿಯನ್ನು ಕೈಗೊಳ್ಳಿರಿ'– ಎಂದು ಹೇಳಿದನು. ಹಾಗೆಯೇ ಆಗಲೆಂದು ಹೇಳಿದ ಇರಾವಂತನ ಎಲ್ಲ ಯೋಧರೂ ಇತರರಿಂದ ದುರ್ಜಯರಾದ ರಾಜಕುಮಾರರ ಸೈನ್ಯಸಮೂಹವನ್ನು ಕ್ಷಣಮಾತ್ರದಲ್ಲಿ ಧ್ವಂಸಮಾಡಿದರು. ತಮ್ಮ ಸೈನ್ಯಸಮೂಹವು ಇರಾವಂತನ ಸೈನ್ಯಸಮೂಹದಿಂದ ವಿನಾಶಹೊಂದಿದುದನ್ನು ನೋಡಿ ಸುಬಲನ ಆ ಎಲ್ಲ ಮಕ್ಕಳೂ ಉದ್ರಿಕ್ತರಾಗಿ ಇರಾವಂತನ ಮೇಲೆ ನುಗ್ಗಿ ನಾಲ್ಕು ಕಡೆಗಳಿಂದಲೂ ಅವನನ್ನು ಮುತ್ತಿಗೆ ಹಾಕಿದರು. ನಿಶಿತವಾದ ಪ್ರಾಸಗಳಿಂದ ಇರಾವಂತನನ್ನು ಪ್ರಹರಿಸುತ್ತಾ, ಪರಸ್ಪರವಾಗಿ ಪ್ರಹರಿಸುವ ಸೂಚನೆಯನ್ನು ಕೊಡುತ್ತಾ ಆ ಶೂರರು ಇರಾವಂತನಿಗೆ ವ್ಯಾಕುಲವನ್ನುಂಟುಮಾಡುತ್ತಾ ಅವನನ್ನು ಸುತ್ತುವರಿದು ಯುದ್ಧಮಾಡುತ್ತಿದ್ದರು.

ಮಹಾತ್ಮರಾದ ಸುಬಲನ ಮಕ್ಕಳು ಪ್ರಹರಿಸಿದ ತೀಕ್ಷ್ಣವಾದ ಪ್ರಾಸಾ ಯುಧಗಳಿಂದ ಕ್ಷತ-ವಿಕ್ಷತನಾದ ಇರಾವಂತನು ಸೋರುತ್ತಿರುವ ರಕ್ತ ದಿಂದ ತೋಯ್ದವನಾಗಿ–ಅಂಕುಶದಿಂದ ಚುಚ್ಚಲ್ಪಟ್ಟ ಆನೆಯಂತೆ–ವ್ಯಾಕುಲ

ಗೊಂಡನು. ಇರಾವಂತನಾದರೋ ಒಬ್ಬನೇ ಇದ್ದನು. ಅವನನ್ನು ಪ್ರಹರಿಸು ವವರು ಹೆಚ್ಚು ಸಂಖ್ಯೆಯಲ್ಲಿದ್ದರು. ಹಿಂದೆ-ಮುಂದೆ ಮತ್ತು ಪಾರ್ಶ್ವಗಳಲ್ಲಿ ಇರಾವಂತನು ಬಹಳವಾಗಿ ಪೀಡಿತನಾದರೂ ಧೈರ್ಯವನ್ನು ಕಳೆದುಕೊಳ್ಳ ಲಿಲ್ಲ. ಪರಪುರಂಜಯನಾದ ಇರಾವಂತನು ಪರಮಕ್ರುದ್ಧನಾಗಿ ಆ ಎಲ್ಲ ಸುಬಲನ ಮಕ್ಕಳನ್ನೂ ನಿಶಿತವಾದ ಬಾಣಗಳಿಂದ ಪ್ರಹರಿಸಿ ಅವರನ್ನು ಮೂರ್ಛೆಗೊಳಿಸಿದನು. ತನ್ನ ಶರೀರದೊಳಕ್ಕೆ ಚುಚ್ಚಿಕೊಂಡಿದ್ದ ಎಲ್ಲ ಪ್ರಾಸಾ ಯುಧಗಳನ್ನೂ  ಕಿತ್ತು ತೆಗೆದು ಆ ಪ್ರಾಸಾಯುಧಗಳಿಂದಲೇ ಸುಬಲನ ಮಕ್ಕಳನ್ನು ವೇಗಪೂರ್ವಕವಾಗಿ ಪ್ರಹರಿಸಿದನು. ಅನಂತರ ಸುನಿಶಿತವಾಗಿದ್ದ ಕತ್ತಿಯನ್ನು ಒರೆಯಿಂದ ತೆಗೆದು ಎಡಗೈಯಲ್ಲಿ ಗುರಾಣಿಯನ್ನು ಹಿಡಿದು ಸುಬಲನ ಮಕ್ಕಳನ್ನು ಸಂಹರಿಸುವ ಇಚ್ಛೆಯಿಂದ ಪದಾತಿಯಾಗಿಯೇ ಅವರ ಕಡೆಗೆ ಶೀಘ್ರವಾಗಿ ಧಾವಿಸಿದನು. ಆ ವೇಳೆಗೆ ಸೌಬಲರಿಗೂ ಪ್ರಜ್ಞೆಯು ಬಂದಿ ದ್ದಿತು. ಕ್ರೋಧಸಮಾವಿಷ್ಟರಾಗಿದ್ದ ಅವರೆಲ್ಲರೂ ಒಡನೆಯೇ ಮೇಲೆದ್ದು ಇರಾವಂತನ ಕಡೆಗೆ ಧಾವಿಸಿದರು. ಬಲದರ್ಪಿತನಾದ ಇರಾವಂತನೂ ಸಹ ಖಡ್ಗವನ್ನು ವರಸೆ-ವರಸೆಯಾಗಿ ತಿರುಗಿಸುವಿಕೆಯಿಂದ ಹಸ್ತಲಾಘವವನ್ನು ತೋರಿಸುತ್ತಾ ಸುಬಲನ ಮಕ್ಕಳನ್ನು ಎದುರಿಸಿದನು. ಸುಬಲಾತ್ಮಜರು ಶೀಘ್ರ ವಾಗಿ ಹೋಗತಕ್ಕ ಕುದುರೆಗಳಲ್ಲಿ ಕುಳಿತು ಇರಾವಂತನ ಸುತ್ತಲೂ ತಿರುಗು ತ್ತಿದ್ದರೂ ಸಹ ಅವನು ತನ್ನ ಹಸ್ತಲಾಘವದಿಂದ ಕತ್ತಿಯನ್ನು ವರಸೆ-ವರಸೆ ಯಾಗಿ ತಿರುಗಿಸುತ್ತಿದ್ದುದರಿಂದ ಇರಾವಂತನನ್ನು ಪ್ರಹರಿಸಲು ಸುಬಲಾತ್ಮಜ ರಿಗೆ ಅವಕಾಶವೇ ಇಲ್ಲವಾಯಿತು. ಇರಾವಂತನು ಭೂಮಿಯ ಮೇಲೆ ನಿಂತು ಕತ್ತಿಯನ್ನು ತಿರುಗಿಸುತ್ತಿರುವುದನ್ನು ಸುಬಲನ ಮಕ್ಕಳು ಗಮನಿಸಿ ಅವನನ್ನು ಸುತ್ತುವರಿದು ಬಂದಿಯಾಗಿ ಹಿಡಿಯಬೇಕೆಂದು ಪ್ರಯತ್ನಿಸಿದರು. ಶತ್ರು ಕರ್ಶನನಾದ ಇರಾವಂತನು ತನ್ನನ್ನು ಬಂಧಿಸುವ ಸಲುವಾಗಿ ತನ್ನ ಸಮೀಪಕ್ಕೆ ಬಂದ ಸುಬಲನ ಮಕ್ಕಳ ಶರೀರಗಳನ್ನು ಬಲಗಡೆಗೂ, ಕೆಲವೊಮ್ಮೆ ಎಡಗಡೆಗೂ, ಹಿಂದಕ್ಕೂ ಕತ್ತಿಯನ್ನು ವರಸೆ-ವರಸೆಯಾಗಿ ತಿರುಗಿಸುತ್ತಾ ಕತ್ತರಿಸಿಬಿಟ್ಟನು. ಅವರೆಲ್ಲರ ಆಯುಧಗಳನ್ನೂ, ಕೇಯೂರಗಳಿಂದ ಭೂಷಿತ ವಾದ ಭುಜಗಳನ್ನೂ ಇರಾವಂತನು ಕತ್ತರಿಸಿದನು. ಸುಬಲನ ಮಕ್ಕಳೆಲ್ಲರೂ ಕತ್ತರಿಸಿದ ಅಂಗವುಳ್ಳವರಾಗಿ ಪ್ರಾಣಗಳನ್ನು ತೊರೆದು  ಮೃತರಾಗಿ ಕೆಳಗುರು

ಳಿದರು. ಮಹಾರಾಜ! ಸುಬಲನ ಮಗನಾದ ವೃಷಭನೂ ಬಹುವಾಗಿ ಗಾಯ ಗೊಂಡಿದ್ದನು. ಆದರೂ ವೀರರನ್ನು ಉಚ್ಛೇದನಗೊಳಿಸುವ ಮಹಾ ಭಯಂಕರವಾದ ಸಂಗ್ರಾಮದಿಂದ ಅವನೊಬ್ಬನು ಮಾತ್ರ ತಪ್ಪಿಸಿಕೊಂಡನು. ಸುಬಲನ ಐದು ಮಂದಿ ಮಕ್ಕಳೂ ಇರಾವಂತನಿಂದ ಸಂಹತರಾಗಿ ಭೂಮಿಯ ಮೇಲೆ ಬಿದ್ದುದನ್ನು ನೋಡಿ ಭಯಗೊಂಡ ದುರ್ಯೋಧನನು ತನ್ನ ಬಂಧುಗಳ ವಿನಾಶದಿಂದ ಅತ್ಯಂತಕ್ರುದ್ಧನಾಗಿ ಘೋರದರ್ಶನನಾದ, ಮಹಾಧನುಷ್ಮಂತನಾದ, ಮಾಯಾವಿಯಾದ, ಬಕಾಸುರನ ವಧೆಯನ್ನು ಮಾಡಿದಂದಿನಿಂದಲೂ ಅರಿಂದಮನಾದ ಭೀಮನ ಮೇಲೆ ವೈರವನ್ನು ಸಾಧಿಸುತ್ತಿದ್ದ ಆರ್ಷ್ಯಶೃಂಗಿಯ (ಅಲಂಬುಷನ) ಬಳಿಗೆ ಧಾವಿಸಿ ಅವನೊಡನೆ ಹೇಳಿದನು : "ಅಲಂಬುಷ! ಇದೋ ನೋಡು. ಅರ್ಜುನನ ಮಗನಾದ ಈ ಇರಾವಂತನು ಮಹಾಮಾಯಾವಿಯಾಗಿದ್ದಾನೆ. ಇವನು ನನಗೆ ಅಪ್ರಿಯ ವನ್ನುಂಟುಮಾಡಲು ನನ್ನ ಸೈನ್ಯವನ್ನು ವಿನಾಶಗೊಳಿಸಿದ್ದಾನೆ. ನೀನೂ ಸಹ ಇಚ್ಛೆಬಂದಲ್ಲಿಗೆ ಹೋಗುವ ಸಾಮರ್ಥ್ಯವನ್ನು ಪಡೆದಿರುವೆ. ಮಾಯಾಸ್ತ್ರಗಳ ಪ್ರಯೋಗಗಳಲ್ಲಿಯೂ ವಿಶಾರದನಾಗಿರುವೆ. ಮೇಲಾಗಿ ನಿನಗೆ ಕುಂತಿಯ ಮಗನಾದ ಭೀಮಸೇನನ ಮೇಲೆ ಹಗೆತನವೂ ಇದೆ. ಆದುದರಿಂದ ನೀನೀಗಲೇ ಈ ಇರಾವಂತನನ್ನು ಸಂಹರಿಸು."

ದುರ್ಯೋಧನನು ಹೀಗೆಂದು ಆಜ್ಞಾಪಿಸಿದ ಕೂಡಲೇ ಘೋರದರ್ಶನ ನಾದ, ರಾಕ್ಷಸನಾದ ಅಲಂಬುಷನು 'ಬಾಢಂ' ಎಂದು ಪ್ರತ್ಯುತ್ತರಿಸಿ ಸಿಂಹ ನಾದಮಾಡುತ್ತಾ ಅರ್ಜುನನ ಮಗನಿದ್ದೆಡೆಗೆ ಧಾವಿಸಿದನು. ಅಲಂಬುಷ ನೊಡನೆ ಯುದ್ಧಕುಶಲರಿದ್ದರು. ಪ್ರಾಸಾಯುಧಪ್ರಯೋಗದಲ್ಲಿ ನಿಷ್ಣಾತರಾದ ಯೋಧರಿದ್ದರು. ಶತ್ರುಗಳನ್ನು ಸಮಯನೋಡಿ ಪ್ರಹರಿಸುವುದರಲ್ಲಿ ಕುಶಲ ರಾದ ವೀರರಿದ್ದರು. ಅವರಿಗೆ ತಮ್ಮದೇ ಆದ ದೊಡ್ಡ-ದೊಡ್ಡ ಸೈನ್ಯಗಳಿದ್ದುವು. ಅವರೆಲ್ಲರೂ ಯಥೋಚಿತವಾದ ವಾಹನಗಳಲ್ಲಿ ಕುಳಿತಿದ್ದರು. ಅಳಿದುಳಿದಿದ್ದ ಎರಡು ಸಾವಿರ ಶ್ರೇಷ್ಠರಾದ ಅಶ್ವಸೈನಿಕರಿಂದ ಸಮಾವೃತನಾಗಿದ್ದ ಅಲಂಬುಷನು ಮಹಾಬಲನಾದ ಇರಾವಂತನನ್ನು ಸಂಹರಿಸುವ ಇಚ್ಛೆಯಿಂದ ಅವನಿದ್ದಲ್ಲಿಗೆ ಧಾವಿಸಿದನು. ಪರಾಕ್ರಮಿಯಾದ ಇರಾವಂತನೂ ಸಹ ತನ್ನನ್ನು ಸಂಹರಿಸುವ ಇಚ್ಛೆಯಿಂದ ಬಂದ ರಾಕ್ಷಸನನ್ನೂ, ಅವನ ಅಪಾರವಾದ ಸೈನಿಕ

ರನ್ನೂ ನೋಡಿ ಸಂಕ್ರುದ್ಧನಾಗಿ ಬಹುವೇಗದಿಂದ ಅಲಂಬುಷನನ್ನು ತಡೆದು ನಿಲ್ಲಿಸಿದನು. ತನ್ನ ಮೇಲೆ ಇರಾವಂತನು ಬೀಳುತ್ತಿರುವುದನ್ನು ಕಂಡು ಮಹಾ ಬಲನಾದ ರಾಕ್ಷಸನು ಅತ್ಯವಸರದಿಂದ ಮಾಯಾಯುದ್ಧವನ್ನು ಮಾಡಲು ಉಪಕ್ರಮಿಸಿದನು. ಇರಾವಂತನ ಕಡೆಯಲ್ಲಿ ಅಶ್ವಸೈನ್ಯಗಳು ಎಷ್ಟಿದ್ದುವೋ ಅಷ್ಟೇ ಸಂಖ್ಯೆಯಲ್ಲಿ (ಎರಡು ಸಾವಿರ) ಅಲಂಬುಷನು ಮಾಯಾಮಯವಾದ ಕುದುರೆಗಳನ್ನು ಸೃಷ್ಟಿಸಿದನು. ಅವುಗಳ ಮೇಲೆ ಶೂಲ-ಪಟ್ಟಿಶಧಾರಿಗಳಾಗಿದ್ದ ಘೋರರೂಪಿಗಳಾದ ರಾಕ್ಷಸರು ಕುಳಿತಿದ್ದರು. ಪ್ರಹಾರಕುಶಲರಾದ ಎರಡು ಸಾವಿರ ಯೋಧರು ಕೋಪಸಮಾವಿಷ್ಟರಾಗಿ ಇರಾವಂತನ ಸೈನಿಕರೊಡನೆ ಯುದ್ಧಮಾಡಲು ತೊಡಗಿದರು. ಈ ರೀತಿಯಲ್ಲಿ ಪರಸ್ಪರವಾಗಿ ರಭಸದಿಂದ ಯುದ್ಧಮಾಡುತ್ತಿದ್ದ ಅವರು ಪರಸ್ಪರವಾಗಿ ಬಡಿದಾಡಿ ಅತ್ಯಲ್ಪಸಮಯ ದಲ್ಲಿಯೇ ಯಮಲೋಕವನ್ನು ಸೇರಿದರು. ಅವರ ಸೈನ್ಯಗಳೆಲ್ಲವೂ ನಾಶವಾಗ ಲಾಗಿ ಯುದ್ಧದುರ್ಮದರಾಗಿದ್ದ ಅಲಂಬುಷ-ಇರಾವಂತರು ವೃತ್ರ-ವಾಸವ ರೋಪಾದಿಯಲ್ಲಿ ದ್ವಂದ್ವಯುದ್ಧಕ್ಕೆ ಸಜ್ಜಾಗಿ ನಿಂತರು. ಯುದ್ಧದುರ್ಮದನಾದ ಅಲಂಬುಷರಾಕ್ಷಸನು ತನ್ನ ಕಡೆಗೆ ಬರುತ್ತಿರುವುದನ್ನು ಕಂಡು ಮಹಾಬಲನಾದ ಇರಾವಂತನು ಕೋಪಗೊಂಡವನಾಗಿ ಅವನ ಮೇಲೆ ತಾನೇ ಬಿದ್ದನು. ತನಗೆ ಅತ್ಯಂತಸಮೀಪವರ್ತಿಯಾಗಿದ್ದ, ದುರ್ಮತಿಯಾದ ಅಲಂಬುಷನ ಬಿಲ್ಲನ್ನೂ ಮತ್ತು ಬತ್ತಳಿಕೆಯನ್ನೂ ಅತಿಶೀಘ್ರವಾಗಿ ಕತ್ತಿಯಿಂದ ಕತ್ತರಿಸಿಬಿಟ್ಟನು. ತನ್ನ ಧನುಸ್ಸು ಇರಾವಂತನಿಂದ ಕತ್ತರಿಸಲ್ಪಟ್ಟುದನ್ನು ಕಂಡು ಅಲಂಬುಷನು ಕ್ರುದ್ಧನಾಗಿದ್ದ ಆರ್ಜುನಿಯನ್ನು ಮಾಯೆಯಿಂದ ವಿಮೋಹಗೊಳಿಸುವ ಸಲುವಾಗಿ ಆಕಾಶಕ್ಕೆ ಹಾರಿದನು. ಅನಂತರ ಇರಾವಂತನೂ ಸಹ ಆಕಾಶಕ್ಕೆ ಹಾರಿ ರಾಕ್ಷಸನನ್ನು ತನ್ನ ಮಾಯೆಗಳಿಂದ ಭ್ರಾಂತನನ್ನಾಗಿ ಮಾಡಿ ಅವನ ಶರೀರವನ್ನು ಬಾಣಗಳಿಂದ ಕ್ಷತ-ವಿಕ್ಷತಗೊಳಿಸಿದನು. ಮಾಯಾವಿದ್ಯೆಯ ಎಲ್ಲ ಮರ್ಮಗಳನ್ನೂ ಅರಿತಿದ್ದ ಕಾಮರೂಪನಾದ, ದುರಾಸದನಾದ ಇರಾವಂತನು ಅಲಂಬುಷನ ಶರೀರವನ್ನು ಕತ್ತರಿಸುತ್ತಲೇ ಇದ್ದನು. ಆದರೆ ಇರಾವಂತನು ಬಾಣಗಳಿಂದ ಕತ್ತರಿಸುತ್ತಿದ್ದಂತೆಲ್ಲಾ ಅಲಂಬುಷನು ಹೊಸ ಹೊಸ ಶರೀರಗಳನ್ನು ಧರಿಸಿ ಬರುತ್ತಲೇ ಇದ್ದನು ಮತ್ತು ಯೌವನವನ್ನು ತಾಳು ತ್ತಿದ್ದನು. ಮಾಯಾವಿದ್ಯೆಯನ್ನು ತಿಳಿದಿರುವವರಿಗೆ ಸಹಜವಾಗಿ ವಯಸ್ಸು

ಮತ್ತು ರೂಪಗಳು ಇಚ್ಛಿಸಿದಂತೆ ಲಭ್ಯವಾಗುತ್ತವೆ. ಈ ರೀತಿಯಲ್ಲಿ ಅಲಂಬುಷರಾಕ್ಷಸನ ಅಂಗಗಳು ಕತ್ತರಿಸಿದಂತೆಲ್ಲಾ ಪುನಃ ಪುನಃ ಸೇರಿಕೊಳ್ಳು ತ್ತಲೇ ಇದ್ದುವು. ಅಲಂಬುಷನು ಯೌವನವನ್ನು ತಾಳಿ ಪುನಃ ಪುನಃ ಇರಾವಂತನ ಮೇಲೆ ಯುದ್ಧಕ್ಕೆ ಬರುತ್ತಲೇ ಇದ್ದನು. ಅದರಿಂದ ಸಂಕ್ರುದ್ಧನಾದ ಇರಾವಂತನು ಮಹಾಬಲನಾದ ರಾಕ್ಷಸನನ್ನು ತೀಕ್ಷ್ಣವಾದ ಗಂಡುಗೊಡಲಿಯಿಂದ ಪುನಃ ಪುನಃ ಕತ್ತರಿಸುತ್ತಲೇ ಇದ್ದನು. ಬಲಿಷ್ಠನಾದ ಇರಾವಂತನಿಂದ ಅನವರತವಾಗಿ ಕತ್ತರಿಸಲ್ಪಟ್ಟ ಅಲಂಬುಷರಾಕ್ಷಸನು ಘೋರವಾಗಿ ಗರ್ಜನೆಮಾಡಿದನು. ಆ ಶಬ್ದವು ಅತ್ಯಂತಭಯಂಕರವಾಗಿದ್ದಿತು. ಗಂಡುಗೊಡಲಿಯ ಪೆಟ್ಟಿನಿಂದಾಗಿ ರಾಕ್ಷಸನ ಶರೀರದಿಂದ ಅಪಾರವಾದ ರಕ್ತವು ಸ್ರವಿಸಿತು. ಅದರಿಂದ ಕೋಪಗೊಂಡ ಬಲಿಷ್ಠನಾದ ರಾಕ್ಷಸನು ವೇಗದಿಂದ ಯುದ್ಧಮಾಡಲು ಉಪಕ್ರಮಿಸಿದನು. ಋಷ್ಯಶೃಂಗರಾಕ್ಷಸನ ಮಗನಾದ ಅಲಂಬುಷನು ತನ್ನ ಶತ್ರುವು ಕ್ಷಣ-ಕ್ಷಣಕ್ಕೂ ವರ್ಧಿಸುತ್ತಿರುವುದನ್ನು ನೋಡಿ ಘೋರವಾದ ರೂಪವನ್ನು ತಾಳಿ ಅರ್ಜುನನ ಮಗನಾದ, ಯಶೋವಂತನಾದ ವೀರನಾದ ಇರಾವಂತನನ್ನು ಬಂಧಿಸಲು ಪ್ರಯತ್ನಿಸಿದನು.

ಸಂಗ್ರಾಮದ ಮಧ್ಯದಲ್ಲಿ ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಅಲಂಬುಷನು ಇರಾವಂತನನ್ನು ಬಂಧಿಸಲು ಪ್ರಯತ್ನಿಸುತ್ತಿದ್ದನು. ದುರಾತ್ಮನಾದ ರಾಕ್ಷಸನ ವಿಚಿತ್ರವಾದ ಮಾಯೆಯನ್ನು ನೋಡಿ ಸಂಕ್ರುದ್ಧ ನಾದ ಇರಾವಂತನೂ ಸಹ ಹೊಸ-ಹೊಸ ಮಾಯೆಗಳನ್ನು ಸೃಷ್ಟಿಸಲು ಉಪಕ್ರಮಿಸಿದನು. ಯುದ್ಧದಲ್ಲಿ ಪ್ರತಿನಿವೃತ್ತನಾಗದ, ಕ್ರೋಧಾಭಿಭೂತ ನಾಗಿದ್ದ ಇರಾವಂತನು ಮಾಯಾಯುದ್ಧವನ್ನು ಮಾಡುತ್ತಿರಲಾಗಿ, ಅವನ ತಾಯಿಯ ಕಡೆಯ ಸರ್ಪಸಮೂಹವು ಅವನಿಗೆ ನೆರವಾಗಲು ಬಂದಿತು. ಅನೇಕಸರ್ಪಗಳಿಂದ ಪರಿವೃತನಾದ ಇರಾವಂತನು ಆ ಸಮಯದಲ್ಲಿ ಸರ್ಪರಾಜನಾದ, ವಿಶಾಲವಾದ ಹೆಡೆಯುಳ್ಳ ಅನಂತನಂತೆಯೇ ಅಗಾಧವಾದ ರೂಪವನ್ನು ತಾಳಿದನು. ಅನಂತರ ಅನೇಕ ಸರ್ಪಗಳಿಂದಲೇ ಅಲಂಬುಷರಾಕ್ಷಸನನ್ನು ಮುಚ್ಚಿಬಿಟ್ಟನು. ಸರ್ಪಗಳಿಂದ ಆಚ್ಛಾದಿತನಾದ ರಾಕ್ಷಸಪುಂಗವನು ಕ್ಷಣಕಾಲ ಚಿಂತಿಸಿ ಗರುಡನ ರೂಪವನ್ನು ಧರಿಸಿದವ ನಾಗಿ ತನ್ನನ್ನು ಆವರಿಸಿಕೊಂಡಿದ್ದ ಸರ್ಪಗಳನ್ನು ಭಕ್ಷಿಸತೊಡಗಿದನು. ತಾಯಿಯ ಕಡೆಯಿಂದ ಇರಾವಂತನ ಸಹಾಯಕ್ಕಾಗಿ ಬಂದಿದ್ದ ಸರ್ಪಗಳೆಲ್ಲ

ವನ್ನೂ ಅಲಂಬುಷನು ಮಾಯೆಯಿಂದ ಗರುಡನ ರೂಪವನ್ನು ಧರಿಸಿ ಭಕ್ಷಿಸಿದ ನಂತರ ತನ್ನ ಕಡೆಯವರೆಲ್ಲರ ವಿನಾಶದಿಂದ ಇರಾವಂತನು ವಿಮೋಹಿತನಾಗಿದ್ದಾಗ ಅಲಂಬುಷರಾಕ್ಷಸನು ಕತ್ತಿಯಿಂದ ಇರಾವಂತನ ತಲೆಯನ್ನು ಕತ್ತರಿಸಿ ಬಿಟ್ಟನು. ಕುಂಡಲ-ಕಿರೀಟಯುಕ್ತವಾಗಿದ್ದ, ಕಮಲ ಮತ್ತು ಚಂದ್ರರಿಗೆ ಸಮಾನವಾದ ಕಾಂತಿಯನ್ನು ಹೊಂದಿದ್ದ ಇರಾವಂತನ ತಲೆಯನ್ನು ರಾಕ್ಷಸನು ಭೂಮಿಯ ಮೇಲೆ ಕೆಡವಿದನು. ರಾಕ್ಷಸನಿಂದ ಅರ್ಜುನನ ಮಗನಾದ ಇರಾವಂತನು ಹತನಾಗಲಾಗಿ ದುರ್ಯೋಧನಪ್ರಮುಖರಾದ ನಿನ್ನ ಮಕ್ಕಳೂ ಮತ್ತು ಇತರರಾಜರೂ ಶೋಕರಹಿತರಾದರು. ಭಯಂಕರಸ್ವರೂಪವನ್ನು ತಾಳಿದ್ದ ಆ ಮಹಾಸಂಗ್ರಾಮದಲ್ಲಿ ಎರಡು ಸೇನೆಗಳ ನಡುವೆ ಪುನಃ ದೊಡ್ಡದಾದ ಮತ್ತು ಘೋರವಾದ ಸಂಕುಲಯುದ್ಧವು ಪ್ರಾರಂಭವಾಯಿತು. ಎರಡು ಪಕ್ಷಗಳಿಗೂ ಸೇರಿದ್ದ ಆನೆ, ಕುದುರೆ, ಪದಾತಿಗಳು ಆನೆಗಳಿಂದ ಹತರಾದರು. ರಥಗಳು, ಕುದುರೆಗಳು ಮತ್ತು ಆನೆಗಳು ಪದಾತಿಗಳಿಂದ ಹತವಾದುವು. ಅದೇ ರೀತಿಯಲ್ಲಿ ಪತ್ತಿ-ರಥ-ಹಯಸೈನಿಕರು ರಥಗಳಿಂದ ವಿನಾಶಹೊಂದಿದರು. ನಿನ್ನ ಮತ್ತು ಪಾಂಡವರ ಸೈನಿಕರ ಸಮೂಹದಲ್ಲಿ ಹೀಗೆಲ್ಲಾ ನಡೆಯಿತು. ತನ್ನ ಔರಸಪುತ್ರನಾದ ಇರಾವಂತನು ಹತನಾದನೆಂಬುದನ್ನು ತಿಳಿಯದ ಅರ್ಜುನನು ಸಮರಾಂಗಣದಲ್ಲಿ ಭೀಷ್ಮನನ್ನು ರಕ್ಷಿಸುತ್ತಿದ್ದ ಶೂರರಾದ ರಾಜರೆಲ್ಲರನ್ನೂ ಸಂಹಾರಮಾಡಿದನು. ಅದೇ ರೀತಿಯಲ್ಲಿ ನಿನ್ನ ಸೈನಿಕರೂ ಮತ್ತು ಸಾವಿರಾರು ಸೃಂಜಯಸೈನಿಕರೂ ಯುದ್ಧಾಗ್ನಿಯಲ್ಲಿ ತಮ್ಮ ಪ್ರಾಣಗಳನ್ನೇ ಆಹುತಿಯನ್ನಾಗಿ ಅರ್ಪಿಸುತ್ತಾ, ಒಬ್ಬರು ಮತ್ತೊಬ್ಬರನ್ನು ಸಂಹಾರಮಾಡುತ್ತಿದ್ದರು. ತಲೆಗೂದಲು ಬಿಚ್ಚಿದವರಾಗಿ, ಕವಚಹೀನರಾಗಿ, ರಥಹೀನರಾಗಿ, ಕತ್ತರಿಸಿದ ಕಾಯವುಳ್ಳವರಾಗಿ ಅರ್ಥಾತ್ ಯುದ್ಧಮಾಡಲು ಯಾವುದೊಂದು ಸಾಧನವೂ ಇಲ್ಲದೇ ಭುಜಗಳಿಂದಲೇ (ಭುಜಗಳನ್ನೇ ಆಯುಧಗಳನ್ನಾಗಿ ಮಾಡಿಕೊಂಡು) ಯುದ್ಧಮಾಡಲು ಉಪಕ್ರಮಿಸಿದರು. ಪರಂತಪನಾದ ಭೀಷ್ಮನು ಮರ್ಮಸ್ಥಳಗಳನ್ನು ಭೇದಿಸುವಂತಹ ತೀಕ್ಷ್ಣವಾದ ಬಾಣಗಳಿಂದ ಪಾಂಡವರ ಸೇನೆಯನ್ನು ಕಂಪನಗೊಳಿಸುತ್ತಾ ಅವರ ಕಡೆಯ ಅನೇಕಮಹಾರಥರನ್ನು ಸಂಹಾರಮಾಡಿದನು. ನಿಶ್ಚಯವಾಗಿಯೂ ಭೀಷ್ಮನು ಯುಧಿಷ್ಠಿರನ ಸೈನ್ಯದಲ್ಲಿದ್ದ ಅಸಂಖ್ಯಾತರಾದ ಪದಾತಿಗಳು, ಗಜಸೈನಿಕರು, ಅಶ್ವಾರೋಹಿಗಳು, ರಥಿಕರು–ಇವರೆಲ್ಲ

ರನ್ನೂ ಸಂಹಾರಮಾಡಿದನು. ಮಹಾರಾಜ! ನಾವು ಯುದ್ಧದಲ್ಲಿ ಭೀಷ್ಮನ ಅತ್ಯದ್ಭುತವಾದ, ಇಂದ್ರನ ಪರಾಕ್ರಮಕ್ಕೆ ಸದೃಶವಾದ ಪರಾಕ್ರಮವನ್ನು ನೋಡಿದೆವು. ಅದೇ ರೀತಿಯಲ್ಲಿಯೇ ಭೀಮಸೇನ, ಧೃಷ್ಟದ್ಯುಮ್ನ, ಧನುರ್ಧರನಾದ ಸಾತ್ಯಕಿ ಇವರ ಯುದ್ಧವೂ ಬಹುಭಯಂಕರವಾಗಿದ್ದಿತು ಮತ್ತು ಅವರ ಪರಾಕ್ರಮವೂ ಇಂದ್ರನ ಪರಾಕ್ರಮಕ್ಕೆ ಸಮಾನವಾದುದೇ ಆಗಿದ್ದಿತು. ದ್ರೋಣರ ಪರಾಕ್ರಮವನ್ನು ಕಂಡು ಪಾಂಡವರು ಭೀತರಾದರು. ದ್ರೋಣರಿಂದ ಪೀಡಿತರಾದ ಯೋಧರು–"ಒಬ್ಬರೇ ಒಬ್ಬ ದ್ರೋಣರು ಸರ್ವಸೈನಿಕರನ್ನೂ ಸಂಹರಿಸಲು ಶಕ್ತರಾಗಿದ್ದಾರೆ. ಹೀಗಿರುವಾಗ, ಪೃಥ್ವಿಯಲ್ಲಿರುವ ಶೂರರಿಂದಲೂ, ಯೋಧರ ಸಮೂಹಗಳಿಂದಲೂ ಅವರು ಸಮಾವೃತರಾಗಿರುವಾಗ ಹೇಳತಕ್ಕದ್ದೇನಿದೆ?"–ಎಂಬುದಾಗಿ ಪರಸ್ಪರ ಮಾತನಾಡಿಕೊಳ್ಳುತ್ತಿದ್ದರು. ಭಯಂಕರವಾದ ಆ ಮಹಾಯುದ್ಧವು ನಡೆಯುತ್ತಿರಲಾಗಿ, ಎರಡು ಪಕ್ಷಗಳ ಶೂರಯೋಧರೂ ಒಬ್ಬರು ಮತ್ತೊಬ್ಬರ ಉತ್ಕರ್ಷವನ್ನು ಸಹಿಸಿಕೊಳ್ಳುತ್ತಿರಲಿಲ್ಲ. ನಿನ್ನ ಕಡೆಯ ಮತ್ತು ಪಾಂಡವರ ಕಡೆಯ ಧನುಷ್ಮಂತರಾದ ಯೋಧರು ಸಂಕ್ರುದ್ಧರಾಗಿ ಭೂತಾವಿಷ್ಟರಾಗಿರುವರೋ ಎಂಬಂತೆ ರಾಕ್ಷಸರಂತೆಯೇ ನಿರ್ದಯರಾಗಿ, ಪರಸ್ಪರವಾಗಿ ಯುದ್ಧಮಾಡುತ್ತಿದ್ದರು.

ವೀರಶ್ರೇಷ್ಠರ ವಿನಾಶಕರವಾದ, ದೈತ್ಯರ ಯುದ್ಧಕ್ಕೆ ಸದೃಶವಾದ ಆ ಮಹಾಸಂಗ್ರಾಮದಲ್ಲಿ ತನ್ನ ಪ್ರಾಣಗಳನ್ನು ರಕ್ಷಿಸಿಕೊಳ್ಳಲು ಇಚ್ಛಿಸಿದ್ದ ಒಬ್ಬ ಯೋಧನನ್ನೂ ನಾವು ನೋಡಲಿಲ್ಲ. (ಎಲ್ಲ ಯೋಧರೂ ಪ್ರಾಣಗಳನ್ನೇ ಒತ್ತೆಯಾಗಿಟ್ಟು ಪ್ರಾಣಾಂತ್ಯದವರೆಗೂ ಕಾದಾಡುತ್ತಲೇ ಇದ್ದರು.)"

೯೦ನೆಯ ಅಧ್ಯಾಯವು ಮುಗಿಯಿತು.

೯೧ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಘಟೋತ್ಕಚನಿಗೂ ಮತ್ತು ದುರ್ಯೋಧನನಿಗೂ ಭಯಂಕರವಾದ ಯುದ್ಧ

ಇರಾವಂತನು ಸತ್ತುಹೋದ ವಾರ್ತೆಯನ್ನು ಕೇಳಿ ಧೃತರಾಷ್ಟ್ರನಿಗೂ ಸ್ವಲ್ಪ ನೆಮ್ಮದಿಯು ಲಭಿಸಿರಬಹುದು. ಕುತೂಹಲಾವಿಷ್ಟನಾದ ರಾಜನು ಸಂಜಯನನ್ನು ಕೇಳುತ್ತಾನೆ :

"ಇರಾವಂತನು ಹತನಾದುದನ್ನು ನೋಡಿ ಮಹಾರಥರಾದ ಪಾಂಡವರು ಮುಂದೇನು ಮಾಡಿದರೆಂಬುದನ್ನು ನನಗೆ ಹೇಳು ; ಸಂಜಯ!"

"ಮಹಾರಾಜ! ಯುದ್ಧಭೂಮಿಯಲ್ಲಿ ಇರಾವಂತನು ಹತನಾದುದನ್ನು ಕಂಡು ಭೀಮಸೇನನ ಮಗನಾದ ಘಟೋತ್ಕಚರಾಕ್ಷಸನು ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು. ಅವನ ಆ ಸಿಂಹನಾದದಿಂದಾಗಿ ಸಾಗರವೇ ವಸ್ತ್ರವಾಗಿ ಉಳ್ಳ, (ಸಾಗರಾಂತವಾದ) ಪರ್ವತಗಳಿಂದಲೂ–ಅರಣ್ಯ ಗಳಿಂದಲೂ ಕೂಡಿರುವ ಈ ಭೂಮಿಯೇ ಅಳ್ಳಾಡಿಬಿಟ್ಟಿತು. ಅಂತರಿಕ್ಷ, ದಿಕ್ಕುಗಳು ಮತ್ತು ಉಪದಿಕ್ಕುಗಳೂ ಸಹ ಕಂಪಿಸಿದುವು. ಘಟೋತ್ಕಚನು ಮಾಡಿದ ಸಿಂಹಗರ್ಜನೆಯನ್ನು ಕೇಳಿ ನಿನ್ನ ಕಡೆಯ ಸೈನಿಕರ ತೊಡೆಗಳು ನಿಶ್ಚೇಷ್ಟವಾದುವು. (ಜಡತ್ವವನ್ನು ಹೊಂದಿದುವು). ಶರೀರಗಳು ನಡುಗ ತೊಡಗಿದುವು. ಅಂಗಾಂಗಗಳಿಂದಲೂ ಬೆವರು ಹರಿಯತೊಡಗಿತು. ಘೋರಶಬ್ದವನ್ನು ಕೇಳಿ ದೀನಮನಸ್ಕರಾಗಿದ್ದ ನಿನ್ನ ಕಡೆಯ ಎಲ್ಲ ಸೈನಿಕರೂ– ಸಿಂಹದ ಗರ್ಜನೆಯನ್ನು ಕೇಳಿದ ಆನೆಗಳು ಭಯಪಡುವಂತೆ–ಭಯಪೂರ್ಣ ವಾದ ಚೇಷ್ಟೆಗಳನ್ನು ಮಾಡತೊಡಗಿದರು. ಘಟೋತ್ಕಚರಾಕ್ಷಸನು ಸಿಡಿಲಿ ನಂತೆ ಘೋರಗರ್ಜನೆಮಾಡಿ ಪ್ರಜ್ವಲಿಸುತ್ತಿದ್ದ ಶೂಲವೊಂದನ್ನು ಎತ್ತಿಕೊಂಡು ಭಯಂಕರವಾದ ರೂಪವನ್ನು ತಾಳಿ, ನಾನಾಬಗೆಯ ಅಸ್ತ್ರ-ಶಸ್ತ್ರಾದಿ ಪ್ರಹರಣಗಳನ್ನು ಹೊಂದಿದ್ದ ರಾಕ್ಷಸಪುಂಗವರಿಂದ ಪರಿವೃತನಾಗಿ, ಕಾಲಾಂತಕನಾದ ಯಮನೋಪಾದಿಯಲ್ಲಿ ಸುಸಂಕ್ರುದ್ಧನಾಗಿ ನಿನ್ನ ಸೈನಿಕರನ್ನು ಸಂಹಾರಮಾಡಲು ಉಪಕ್ರಮಿಸಿದನು. ಕ್ರುದ್ಧನಾಗಿದ್ದ, ಭಯಂಕರವಾದ ರೂಪವನ್ನು ಹೊಂದಿದ್ದ ರಾಕ್ಷಸನು ತಮ್ಮ ಮೇಲೆ ಆಕ್ರಮಣವನ್ನು ನಡೆಸುತ್ತಿರುವುದನ್ನು ಕಂಡು ನಿನ್ನ ಬಹುಪಾಲು ಸೈನ್ಯವು ಭಯಪಟ್ಟು ಯುದ್ಧದಿಂದ ಹಿಂದೆಗೆಯಿತು.

ಅನಂತರ ಘಟೋತ್ಕಚನ ದೆಸೆಯಿಂದ ತನ್ನ ಸೈನ್ಯವು ಭಯಗೊಂಡಿ ರುವುದನ್ನು ಕಂಡು ದುರ್ಯೋಧನರಾಜನು ದೊಡ್ಡದಾದ ಧನುಸ್ಸನ್ನು ಹಿಡಿದುಕೊಂಡು ಸಿಂಹದಂತೆ ಬಾರಿ-ಬಾರಿಗೂ ಗರ್ಜನೆಮಾಡುತ್ತಾ ಘಟೋತ್ಕಚನನ್ನು ಎದುರಿಸಿದನು.

ವಂಗದೇಶದ ರಾಜನು ಮದೋದಕವನ್ನು ಸುರಿಸುತ್ತಿದ್ದ ಹತ್ತು ಸಾವಿರ ಆನೆಗಳೊಡನೆ ದುರ್ಯೋಧನನನ್ನು ಹಿಂಬಾಲಿಸಿದನು. ಆನೆಯ ಸೈನ್ಯದಿಂದ

ಪರಿವೃತನಾಗಿ ನಿನ್ನ ಮಗನು ತನ್ನ ಮೇಲೆ ಬೀಳಲು ಬರುತ್ತಿರುವುದನ್ನು ಕಂಡು ಘಟೋತ್ಕಚನು ಬಹಳ ಕುಪಿತನಾದನು. ಅನಂತರ ರಾಕ್ಷಸರಿಗೂ–



ದುರ್ಯೋಧನನ ಸೈನಿಕರಿಗೂ ಭಯಂಕರವಾದ ಮತ್ತು ರೋಮಾಂಚಕಾರಿಯಾದ ಯುದ್ಧವು ಪ್ರಾರಂಭವಾಯಿತು. ಆಗತಾನೇ ಉದಯಿಸಿದ ಕಾರ್ಮುಗಿಲುಗಳ ಸಮೂಹದೋಪಾದಿಯಲ್ಲಿದ್ದ ಗಜಸೈನ್ಯವನ್ನು ನೋಡಿ ಶಸ್ತ್ರಪಾಣಿಗಳಾದ ಸಂಕ್ರುದ್ಧರಾದ ರಾಕ್ಷಸರು ಗಜಸೈನ್ಯದ ಕಡೆಗೆ ಧಾವಿಸಿದರು. ಮಿಂಚಿನಿಂದ ಕೂಡಿದ ಮೇಘಗಳಂತೆ ವಿಧ-ವಿಧವಾಗಿ ಗರ್ಜನೆಮಾಡುತ್ತಾ ಬಾಣಗಳಿಂದಲೂ, ಶಕ್ತ್ಯಾಯುಧಗಳಿಂದಲೂ, ಋಷ್ಟಿಗಳಿಂದಲೂ, ನಾರಾಚಗಳಿಂದಲೂ, ಭಿಂದಿಪಾಲಗಳಿಂದಲೂ, ಶೂಲಗಳಿಂದಲೂ, ಮುದ್ಗರಗಳಿಂದಲೂ, ಗಂಡುಗೊಡಲಿಗಳಿಂದಲೂ, ಪರ್ವತಗಳ ಶಿಖರಗಳಿಂದಲೂ ಮತ್ತು ವೃಕ್ಷಗಳಿಂದಲೂ ಪ್ರಹರಿಸಿ ಗಜಯೋಧಿಗಳನ್ನೂ ಮತ್ತು ಗಜಗಳನ್ನೂ ಸಂಹರಿಸಲು ಉಪಕ್ರಮಿಸಿದರು. ರಾಕ್ಷಸರಿಂದ ವಧಿಸಲ್ಪಡುತ್ತಿದ್ದ ಆನೆಗಳು ಒಡೆದುಹೋದ ಕುಂಭಸ್ಥಳವುಳ್ಳವುಗಳಾಗಿಯೂ, ರಕ್ತಹೀನವಾದುವುಗಳಾಗಿಯೂ, ಕತ್ತರಿಸಲ್ಪಟ್ಟ ಶರೀರವುಳ್ಳವುಗಳಾಗಿಯೂ ಇದ್ದುದನ್ನು ನಾವು ಕಂಡೆವು. ಈ ರೀತಿಯಲ್ಲಿ ಗಜಯೋಧಿಗಳೂ ಮತ್ತು ಗಜಗಳೂ ಕ್ಷೀಣಿಸಿಹೋಗಲಾಗಿ, ದುರ್ಯೋಧನನು ಕ್ರೋಧಪರವಶನಾಗಿ ತನ್ನ ಜೀವಿತದ ಆಸೆಯನ್ನೇ ಸಂಪೂರ್ಣವಾಗಿ ತೊರೆದು ರಾಕ್ಷಸ

ನನ್ನು ಆಕ್ರಮಿಸಿದನು. ಮಹಾಧನುಷ್ಮಂತನಾದ ದುರ್ಯೋಧನನು ರಾಕ್ಷಸರ ಮೇಲೆ ನಿಶಿತವಾದ ಬಾಣಗಳನ್ನು ಬಿಡುತ್ತಾ ಪ್ರಧಾನಭೂತರಾದ ರಾಕ್ಷಸರೆಲ್ಲ ರನ್ನೂ ಅತ್ಯಲ್ಪಕಾಲದಲ್ಲಿಯೇ ಸಂಹಾರಮಾಡಿದನು. ಭರತಶ್ರೇಷ್ಠ! ಸಂಕ್ರುದ್ಧನಾದ, ಯುದ್ಧಚತುರನಾದ, ಮಹಾಬಲನಾದ ನಿನ್ನ ಮಗ ದುರ್ಯೋಧನನು ವೇಗವಂತ, ಮಹಾರೌದ್ರ, ವಿದ್ಯುಜ್ಜಿಹ್ವ ಮತ್ತು ಪ್ರಮಾಥಿ–ಈ ನಾಲ್ವರು ರಾಕ್ಷಸನಾಯಕರನ್ನು ನಾಲ್ಕು ಬಾಣಗಳಿಂದ ಸಂಹಾರಮಾಡಿದನು. ಅನಂತರ ಅಮೇಯಾತ್ಮನಾದ, ಭರತಶ್ರೇಷ್ಠನಾದ ದುರ್ಯೋಧನನು ರಾಕ್ಷಸರ ಸೈನ್ಯದ ಮೇಲೆ ದುರಾಸದವಾದ (ಸಹಿಸಲು ಅಶಕ್ಯವಾದ) ಬಾಣಗಳ ಮಳೆಗರೆದನು. ನಿನ್ನ ಪುತ್ರನ ಆ ಮಹಾಕಾರ್ಯವನ್ನು ನೋಡಿ ಮಹಾಬಲನಾದ ಭೈಮಸೇನಿಯು ಕೋಪದಿಂದ ಉರಿದು ಹೋದನು. ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಕಾಂತಿಯನ್ನು ಹೊಂದಿದ್ದ ದೊಡ್ಡದಾದ ಧನುಸ್ಸನ್ನು ತೆಗೆದುಕೊಂಡು ಟೇಂಕಾರಮಾಡುತ್ತಾ ಅರಿಂದಮನಾದ ದುರ್ಯೋಧನನಿದ್ದೆಡೆಗೆ ಶೀಘ್ರವಾಗಿ ಧಾವಿಸಿದನು. ಕಾಲ ನಿಂದ ಸೃಷ್ಟಿಸಲ್ಪಟ್ಟಿದ್ದ ಅಂತಕನಂತೆಯೇ ಕಾಣುತ್ತಿದ್ದ, ತನ್ನ ಮೇಲೆ ಬೀಳಲು ರಭಸದಿಂದ ಬರುತ್ತಿದ್ದ ಘಟೋತ್ಕಚನನ್ನು ನೋಡಿ ನಿನ್ನ ಮಗ ದುರ್ಯೋಧನನು ಸ್ವಲ್ಪವಾದರೂ ವ್ಯಥೆಗೊಳ್ಳಲಿಲ್ಲ. ರಕ್ತಾಕ್ಷನಾಗಿದ್ದ, ಕ್ರೂರನಾಗಿದ್ದ ಮತ್ತು ಕ್ರುದ್ಧನಾಗಿದ್ದ ರಾಕ್ಷಸನು ದುರ್ಯೋಧನನಿಗೆ ಹೇಳಿದನು :

**ಅದ್ಯಾನೃಣ್ಯಂ ಗಮಿಷ್ಯಾಮಿ ಪಿತೄಣಾಂ ಮಾತುರೇವ ಚ ।**
**ಯೇ ತ್ವಯಾ ಸುನೃಶಂಸೇನ ದೀರ್ಘಕಾಲಂ ಪ್ರವಾಸಿತಾಃ ॥೨೬॥**

**ಯಚ್ಚ ತೇ ಪಾಣ್ಡವಾ ರಾಜಂಶ್ಛಲದ್ಯೂತೇ ಪರಾಜಿತಾಃ ।**
**ಯಚ್ಚೈವ ದ್ರೌಪದೀ ಕೃಷ್ಣಾ ಏಕವಸ್ತ್ರಾ ರಜಸ್ವಲಾ ॥೨೭॥**

**ಸಭಾಮಾನೀಯ ದುರ್ಬುದ್ಧೇ ಬಹುಧಾ ಕ್ಲೇಶಿತಾ ತ್ವಯಾ ।**
**ತವ ಚ ಪ್ರಿಯಕಾಮೇನ ಆಶ್ರಮಸ್ಥಾ ದುರಾತ್ಮನಾ ॥೨೮॥**

**ಸೈನ್ಧವೇನ ಪರಾಮೃಷ್ಟಾ ಪರಿಭೂಯ ಪಿತೄನ್ಮಮ ।**
**ಏತೇಷಾಮಪಮಾನಾನಾಮನ್ಯೇಷಾಂ ಚ ಕುಲಾಧಮ ।**
**ಅನ್ತಮದ್ಯ ಗಮಿಷ್ಯಾಮಿ ಯದಿ ನೋತ್ಸೃಜಸೇ ರಣಮ್ ॥೨೯॥**

"ಕುಲಾಧಮ! ನಾನು ಇದೀಗ ನನ್ನ ತಂದೆ-ತಾಯಿಗಳ (ಪಾಂಡವರ ಮತ್ತು ದ್ರೌಪದಿಯ) ಋಣದಿಂದ ಮುಕ್ತನಾಗುತ್ತೇನೆ. ಪುತ್ರನಾದ ನಾನು ಅವರ ಋಣವನ್ನು ತೀರಿಸುವ ಕಾಲವು ಈಗ ಸನ್ನಿಹಿತವಾಗಿದೆ. ಪಾಂಡವರಿನ್ನೂ ಬಾಲಕರಾಗಿದ್ದಾಗಲೇ ಮಹಾಕ್ರೂರಿಯಾದ ನೀನು ಉಪಾಯಾಂತರಗಳಿಂದ ಅವರನ್ನು ಹೊರಗಟ್ಟಿದೆ. ಅನಂತರ ಅವರನ್ನು ಮೋಸದ ಪಗಡೆಯಾಟದಲ್ಲಿ ಸೋಲಿಸಿದೆ. ದುರ್ಬುದ್ಧಿಯವನೇ! ರಜಸ್ವಲೆಯಾಗಿದ್ದ, ಒಂದೇ ವಸ್ತ್ರವನ್ನುಟ್ಟಿದ್ದ, ನನ್ನ ತಾಯಿಯಾದ ದ್ರೌಪದಿಯನ್ನು ತುಂಬಿದ ಸಭೆಗೆ ಸೆಳೆದು ತಂದು ಅವಳಿಗೆ ಬಹಳ ಕ್ಲೇಶವನ್ನುಂಟುಮಾಡಿದೆ. ನಿನಗೆ ಪ್ರಿಯವನ್ನುಂಟು ಮಾಡುವ ಇಚ್ಛೆಯಿಂದಲೇ ದುರಾತ್ಮನಾದ ಸೈಂಧವನು ನನ್ನ ತಂದೆಗಳನ್ನು ಲೆಕ್ಕಿಸದೇ ಆಶ್ರಮದಲ್ಲಿದ್ದ ದ್ರೌಪದಿಯನ್ನು ಅಪಹರಿಸಲು ಯತ್ನಿಸಿದನು. ಕುರುಕುಲಾಧಮ! ಒಂದುವೇಳೆ ನೀನಿಂದು ಯುದ್ಧವನ್ನು ಬಿಟ್ಟು ಓಡಿಹೋಗದಿದ್ದರೆ ನಿನ್ನ ಈ ಎಲ್ಲ ಅಪರಾಧಗಳಿಗೂ ಮತ್ತು ಇನ್ನೂ ಅನೇಕವಾದ ಅತ್ಯಾಚಾರಗಳಿಗೂ ಕೊನೆಯನ್ನು ಕಾಣಿಸುತ್ತೇನೆ."

ಹೀಗೆಂಬುದಾಗಿ ಹೇಳಿ ಹೈಡಿಂಬನು ತನ್ನ ದೊಡ್ಡದಾಗಿದ್ದ ಧನುಸ್ಸನ್ನು ಟೇಂಕಾರಮಾಡಿ, ಹಲ್ಲುಗಳಿಂದ ತುಟಿಗಳನ್ನು ಕಚ್ಚುತ್ತಾ, ಕಟವಾಯಿಗಳನ್ನು ನೆಕ್ಕುತ್ತಾ ಅಪಾರವಾದ ಬಾಣಗಳ ಸುರಿಸುವಿಕೆಯಿಂದ-ವರ್ಷರ್ತುವಿನಲ್ಲಿ ಮೇಘವು ಪರ್ವತವನ್ನು ಧಾರಾಕಾರವಾದ ಮಳೆಯಿಂದ ಮುಚ್ಚಿಬಿಡು ವಂತೆ–ದುರ್ಯೋಧನನನ್ನು ಮುಚ್ಚಿಬಿಟ್ಟನು.

೯೧ನೆಯ ಅಧ್ಯಾಯವು ಮುಗಿಯಿತು.

೯೨ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ದುರ್ಯೋಧನಾದಿ ಪ್ರಮುಖವೀರರೊಡನೆ ಘಟೋತ್ಕಚನ ಭಯಂಕರಯುದ್ಧದ ವರ್ಣನೆ

ಸಂಜಯನು ಧೃತರಾಷ್ಟ್ರನಿಗೆ ದುರ್ಯೋಧನ-ಹೈಡಿಂಬರ ಯುದ್ಧದ ವಿವರಣೆಯನ್ನು ಮುಂದುವರಿಸುತ್ತಾ ಹೇಳುತ್ತಾನೆ :

"ಮಹಾರಾಜ! ರಾಜೇಂದ್ರನಾದ ದುರ್ಯೋಧನನು ದಾನವರಿಂದಲೂ

ಸಹಿಸಿಕೊಳ್ಳಲು ಅಶಕ್ಯವಾದ ಹೈಡಿಂಬನ ಬಾಣಗಳ ವರ್ಷವನ್ನು–ಮಹಾ ಗಜವು ದೊಡ್ಡದಾದ ಮಳೆಯನ್ನು ನಿರಾಯಾಸವಾಗಿ ತಡೆದುಕೊಳ್ಳುವಂತೆ ತಡೆದನು. ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದ ಹಾವಿನಂತೆ, ನಿನ್ನ ಮಗನು ಕ್ರುದ್ಧನಾಗಿ ಹೈಡಿಂಬನನ್ನು ಜಯಿಸಲು ಸಾಧ್ಯವಾಗುವುದೋ ಇಲ್ಲವೋ ಎಂಬ ಸಂಶಯವನ್ನು ಹೊಂದಿದವನಾಗಿ ತೀಕ್ಷ್ಣವಾಗಿಯೂ, ಚೂಪಾಗಿಯೂ ಇದ್ದ ಇಪ್ಪತ್ತೈದು ಬಾಣಗಳನ್ನು ರಾಕ್ಷಸನ ಮೇಲೆ ಪ್ರಯೋಗಿಸಿದನು. ಗಂಧಮಾದನಪರ್ವತದ ಮೇಲೆ ಕೋಪಗೊಂಡ ವಿಷಸರ್ಪಗಳು ಬೀಳುವಂತೆ–ದುರ್ಯೋಧನನು ಬಿಟ್ಟ ಬಾಣಗಳು ರಾಕ್ಷಸಪುಂಗವನಾದ ಘಟೋತ್ಕಚನ ಮೇಲೆ ಒಡನೆಯೇ ಬಿದ್ದುವು. ಆ ಇಪ್ಪತ್ತೈದು ಬಾಣಗಳಿಂದ ಪ್ರಹೃತನಾದ ರಾಕ್ಷಸನು-ಕುಂಭಸ್ಥಳದಿಂದ ಮದೋದಕವನ್ನು ಸುರಿಸುತ್ತಿರುವ ಆನೆಯಂತೆ–ರಕ್ತವನ್ನು ಸುರಿಸುತ್ತಾ ದುರ್ಯೋಧನನನ್ನು ಸಂಹರಿಸಬೇಕೆಂದು ನಿಶ್ಚಯಿಸಿದನು. ಅನಂತರ ಪರ್ವತಗಳನ್ನೂ ಸಹ ಸೀಳಲು ಸಮರ್ಥವಾದ, ಪ್ರದೀಪ್ತವಾಗಿದ್ದ ದೊಡ್ಡ ಉಲ್ಕೆಯಂತೆಯೇ ಕಾಣುತ್ತಿದ್ದ, ಪ್ರಜ್ವಲಿಸುತ್ತಿರುವ ವಜ್ರಾಯುಧದಂತಿದ್ದ ಮಹಾಶಕ್ತ್ಯಾಯುಧವನ್ನು ತೆಗೆದುಕೊಂಡನು.

ಮಹಾಬಾಹುವಾದ ಘಟೋತ್ಕಚನು ನಿನ್ನ ಮಗನನ್ನು ಸಂಹರಿಸುವುದಕ್ಕೋಸ್ಕರ ಮಹಾಘೋರವಾದ ಶಕ್ತ್ಯಾಯುಧವನ್ನು ಪ್ರಯೋಗಿಸಲು ಮೇಲೆತ್ತಿರುವುದನ್ನು ಕಂಡು ವಂಗದೇಶದ ಅಧಿಪತಿಯು ಬಹಳ ಅವಸರದಿಂದ ದುರ್ಯೋಧನನನ್ನು ಪಾರುಮಾಡುವ ಸಲುವಾಗಿ ಪರ್ವತಸದೃಶವಾದ ಆನೆ ಯೊಂದನ್ನು ರಾಕ್ಷಸನ ಕಡೆಗೆ ಓಡಿಸಿದನು. ವಂಗನರೇಶನು ಶೀಘ್ರಗಾಮಿ ಯಾದ ಮತ್ತು ಬಹು ಬಲಿಷ್ಠವಾಗಿದ್ದ ಆನೆಯ ಮೇಲೆ ಕುಳಿತು ತಾನೂ ಸಹ ದುರ್ಯೋಧನನ ರಥವಿದ್ದ ಮಾರ್ಗವನ್ನು ಹಿಡಿದುಹೋದನು. ಅನಂತರ ಆನೆಯನ್ನು ದುರ್ಯೋಧನನ ರಥದ ಮುಂದೆ ನಿಲ್ಲಿಸಿ ಶಕ್ತ್ಯಾಯುಧವು ನೇರವಾಗಿ ದುರ್ಯೋಧನನ ಮೇಲೆ ಬೀಳದಂತೆ ಮಾಡಿದನು. ಧೀಮಂತನಾದ ವಂಗಾಧಿಪತಿಯು ತನ್ನ ಆನೆಯಿಂದ ದುರ್ಯೋಧನನ ರಥವಿದ್ದ ಮಾರ್ಗವನ್ನು ಮುಚ್ಚಿದುದನ್ನು ಕಂಡು ಘಟೋತ್ಕಚನು ಕ್ರೋಧದಿಂದ ಕೆಂಪಾದ ಕಣ್ಣುಗಳನ್ನು ಹೊಂದಿದವನಾಗಿ ದುರ್ಯೋಧನನನ್ನು ಪ್ರಹರಿಸಬೇಕೆಂದು ಮೇಲಕ್ಕೆತ್ತಿದ್ದ ಶಕ್ತ್ಯಾಯುಧವನ್ನು ಆನೆಯ ಕಡೆಗೇ ಎಸೆದನು. ರಾಕ್ಷಸನ ಬಾಹುಗಳಿಂದ ಪ್ರಮುಕ್ತವಾದ ಶಕ್ತ್ಯಾ

ಯುಧದಿಂದ ಪ್ರಹೃತವಾದ ಆನೆಯ ಕುಂಭಸ್ಥಳವು ಒಡೆದುಹೋಗಿ ರಕ್ತವು ಸುರಿಯಲಾರಂಭಿಸಿತು. ಯಾತನೆಯನ್ನು ಸಹಿಸಿಕೊಳ್ಳಲಾರದೇ ಆ ಆನೆಯು ಕೆಳಕ್ಕೆ ಬಿದ್ದು ಸತ್ತುಹೋಯಿತು. ವಂಗದೇಶಾಧಿಪತಿಯಾದ ಬಲಿಷ್ಠನಾದ ರಾಜನು ತಾನು ಕುಳಿತಿದ್ದ ಆನೆಯು ಕೆಳಕ್ಕೆ ಬೀಳುತ್ತಿದ್ದರೂ ಸಂಭ್ರಾಂತನಾಗದೇ ತಾನು ಕುಳಿತಿದ್ದ ಆಸನದಿಂದ ವೇಗವಾಗಿ ಭೂಮಿಗೆ ಧುಮುಕಿದನು.



ದುರ್ಯೋಧನನು ತನಗೆ ಆವರಣರೂಪವಾಗಿದ್ದ ಶ್ರೇಷ್ಠವಾದ ಆನೆಯು ಪ್ರಾಣತೊರೆದು ಕೆಳಕ್ಕೆ ಬಿದ್ದುದನ್ನೂ ಮತ್ತು ತನ್ನ ಸೈನ್ಯವು ಭಗ್ನವಾಗಿ ಹೋದುದನ್ನೂ ನೋಡಿ, ಪ್ರಾಣಾಪಾಯವು ಸನ್ನಿಹಿತವಾಗಿದ್ದು ಪಲಾಯನ ಮಾಡಬೇಕಾದ ಸಂದರ್ಭವು ಒದಗಿದ್ದರೂ ಕ್ಷತ್ರಧರ್ಮವನ್ನು ಪುರಸ್ಕರಿಸಿಯೂ ಮತ್ತು ಆತ್ಮಾಭಿಮಾನದ ಕಾರಣದಿಂದಲೂ ಯುದ್ಧದಿಂದ ವಿಚಲಿತನಾಗದೆ ಪರ್ವತದಂತೆ ಸುಸ್ಥಿರನಾಗಿಯೇ ನಿಂತಿದ್ದನು. ಕ್ರುದ್ಧನಾಗಿದ್ದ ರಾಜನು ಪ್ರಲಯಾಗ್ನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ನಿಶಿತವಾದ ಬಾಣವೊಂದನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಕಿವಿಯವರೆಗೂ ಸೆಳೆದು ಸುಘೋರನಾದ ನಿಶಾಚರನ ಮೇಲೆ ಪ್ರಯೋಗಿಸಿದನು. ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಪ್ರಭೆಯಿಂದ ಕೂಡಿದ್ದ ಬಾಣವು ರಭಸದಿಂದ ತನ್ನ ಕಡೆಗೆ ಬರುತ್ತಿರುವುದನ್ನು ಕಂಡು ಮಹಾತ್ಮನಾದ ಘಟೋತ್ಕಚನು ಬಹುಸುಲಭವಾಗಿಯೇ ಚಾಕಚಕ್ಯತೆ

ಯಿಂದ ತಪ್ಪಿಸಿಕೊಂಡುಬಿಟ್ಟನು. ಕೋಪದಿಂದ ಕೆಂಗಣ್ಣನಾಗಿದ್ದ ಘಟೋತ್ಕಚನು ಹಿಂದಿನಂತೆಯೇ ಪ್ರಲಯಕಾಲದ ಸಂವರ್ತಕಮೇಘದ ಗರ್ಜನೆಯಂತೆ–ಪುನಃ ಗಟ್ಟಿಯಾಗಿ ಗರ್ಜನೆಮಾಡಿ ಕೌರವಸೈನ್ಯವನ್ನು ಭಯಪಡಿಸಿದನು. ಭಯಂಕರನಾದ ಘಟೋತ್ಕಚರಾಕ್ಷಸನ ಸುಘೋರವಾದ ಸಿಂಹಗರ್ಜನೆ ಯನ್ನು ಕೇಳಿ ಭೀಷ್ಮನು ಆಚಾರ್ಯರಾದ ದ್ರೋಣರ ಬಳಿಗೆ ಹೋಗಿ ಅವರೊಡನೆ ಹೇಳಿದನು : "ರಾಕ್ಷಸನಿಂದ ಮಾಡಲ್ಪಟ್ಟ ಘೋರನಿನಾದವೊಂದು ಕೇಳಿಬರುತ್ತಿದೆಯಲ್ಲವೇ? ಆಚಾರ್ಯರೇ! ಈ ಧ್ವನಿಯಿಂದ ನಾನು ಊಹಿಸಿರುವುದೇನೆಂದರೆ ಹಿಡಿಂಬೆಯ ಮಗನಾದ ಘಟೋತ್ಕಚನು ನಿಶ್ಚಯವಾಗಿಯೂ ದುರ್ಯೋಧನನೊಡನೆಯೇ ನೇರವಾಗಿ ಯುದ್ಧಮಾಡುತ್ತಿದ್ದಾನೆ. ಯಾವ ಜೀವಿಯೂ ಈ ರಾಕ್ಷಸನನ್ನು ಯುದ್ಧದಲ್ಲಿ ಪರಾಜಯಗೊಳಿಸಲಾರನು. ದಯಮಾಡಿ ನೀವು ದುರ್ಯೋಧನನು ಇರುವಲ್ಲಿಗೇ ಹೋಗಿರಿ. ನಿಮಗೆ ಮಂಗಳವಾಗಲಿ. ರಾಜನನ್ನು ಸಂರಕ್ಷಿಸಿರಿ." ಹೀಗೆಂಬು ದಾಗಿ ದ್ರೋಣರನ್ನು ಪ್ರಾರ್ಥಿಸಿ ಅನಂತರ ತನ್ನ ಕಡೆಯ ವೀರಯೋಧರನ್ನು ಕುರಿತು ಭೀಷ್ಮನು ಹೇಳಿದನು :

"ಮಹಾತ್ಮನಾದ ಘಟೋತ್ಕಚನು ನಮ್ಮ ರಾಜನಾದ, ಮಹಾಭಾಗನಾದ ದುರ್ಯೋಧನನನ್ನು ಆಕ್ರಮಿಸಿದ್ದಾನೆ. ಪರಂತಪರೇ! ಈ ಸಮಯದಲ್ಲಿ ನಾವು ನಮ್ಮ ಮಹಾರಾಜನನ್ನು ಸಂರಕ್ಷಿಸುವುದು ನಮ್ಮೆಲ್ಲರ ಪರಮ ಕರ್ತವ್ಯವಾಗಿದೆ."

ಮಹಾರಾಜ! ಭೀಷ್ಮಪಿತಾಮಹನ ಈ ಮಾತನ್ನು ಕೇಳಿ ಮಹಾರಥ ರೆಲ್ಲರೂ ಅತ್ಯಂತಾವಸರದಿಂದ ಮಹಾವೇಗಯುಕ್ತರಾಗಿ ಕೌರವರಾಜನಿದ್ದೆ ಡೆಗೆ ಧಾವಿಸಿದರು. ದ್ರೋಣರು, ಸೋಮದತ್ತ, ಬಾಹ್ಲಿಕ, ಜಯದ್ರಥ, ಕೃಪರು, ಭೂರಿಶ್ರವಸ, ಶಲ್ಯ, ಅವಂತಿಯ ರಾಜಕುಮಾರ, ಬೃಹದ್ಬಲ, ಅಶ್ವತ್ಥಾಮಾ, ವಿಕರ್ಣ, ಚಿತ್ರಸೇನ, ವಿವಿಂಶತಿ–ಇವರೂ ಮತ್ತು ಇವರ ಅನುಯಾಯಿಗಳೂ ಅನೇಕ ಸಹಸ್ರ ರಥಾಶ್ವಸೈನಿಕರೊಡನೆ ನಿನ್ನ ಮಗನಾದ ದುರ್ಯೋಧನನನ್ನು ರಕ್ಷಿಸುವ ಸಲುವಾಗಿ ಧಾವಿಸಿದರು. ಘಟೋತ್ಕಚನನ್ನು ಎದುರಿಸಲು ಹೋದ ಆ ಮಹಾಸೇನೆಯು ಮಹಾರಥರಿಂದ ರಕ್ಷಿಸಲ್ಪಡುತ್ತಿದ್ದು ಯಾರಿಂದಲೂ ಎದುರಿಸಲು ಅಸಾಧ್ಯವಾಗಿತ್ತು.

ಆತತಾಯಿಯಾದ ದುರ್ಯೋಧನನು ಅಪಾರಸೈನ್ಯದೊಡನೆ ಬರುತ್ತಿ

ರುವುದನ್ನು ಕಂಡು ರಾಕ್ಷಸಶಿರೋಮಣಿಯಾದ ಮಹಾಬಾಹುವಾದ ಘಟೋತ್ಕಚನು ಮೈನಾಕಪರ್ವತದಂತೆ ಅಚಲನಾಗಿಯೇ ನಿಂತಿದ್ದನು. ಶೂಲ-ಮುದ್ಗರಹಸ್ತರಾಗಿಯೂ, ನಾನಾವಿಧವಾದ ಪ್ರಹರಣಗಳನ್ನು ಹೊಂದಿದವರಾಗಿಯೂ ಇದ್ದ ಜ್ಞಾತಿಗಳಿಂದ ಪರಿವೃತನಾಗಿದ್ದ ಘಟೋತ್ಕಚನು ದೊಡ್ಡದಾದ ಧನುಸ್ಸೊಂದನ್ನು ತೆಗೆದುಕೊಂಡು ಯುದ್ಧಸನ್ನದ್ಧನಾದನು. ಅನಂತರ ರಾಕ್ಷಸಮುಖ್ಯನಾದ ಘಟೋತ್ಕಚನಿಗೂ ಮತ್ತು ದುರ್ಯೋಧನನ ಸೈನಿಕರಿಗೂ ರೋಮಾಂಚಕಾರಿಯಾದ ಮತ್ತು ಘೋರವಾದ ಯುದ್ಧವು ಪ್ರಾರಂಭವಾಯಿತು. ಬಿದಿರುಮೆಳೆಗಳಿಗೆ ಬೆಂಕಿಯು ಹತ್ತಿಕೊಂಡಾಗ ಉಂಟಾಗುವ ಚಟ-ಚಟಾ ಶಬ್ದದಂತೆ ಧನುಸ್ಸುಗಳ ಟೇಂಕಾರದ ಭಯಂಕರಶಬ್ದವು ಸರ್ವತ್ರ ಕೇಳಿಬರುತ್ತಿದ್ದಿತು. ಅಸ್ತ್ರಗಳು ಸತತವಾಗಿ ಯೋಧರ ಕವಚಗಳ ಮೇಲೆ ಬೀಳುತ್ತಿದ್ದುದರಿಂದ ಹುಟ್ಟಿದ ಶಬ್ದಗಳು ಪರ್ವತಗಳು ಸೀಳಿಹೋಗುವಾಗ ಉಂಟಾಗುವ ಶಬ್ದಗಳಿಗೆ ಸಮಾನವಾಗಿದ್ದುವು. ಮಹಾರಾಜ! ವೀರಯೋಧರ ಬಾಹುಗಳಿಂದ ವಿಸೃಷ್ಟವಾದ ಆಕಾಶಗಾಮಿಗಳಾದ ತೋಮರಗಳ ಸ್ವರೂಪವು ತೀವ್ರಗತಿಯಿಂದ ಚಲಿಸುವ ಸರ್ಪಗಳಂತಿದ್ದಿತು.

ಅನಂತರ ಪರಮಕ್ರುದ್ಧನಾದ, ಮಹಾಬಾಹುವಾದ, ರಾಕ್ಷಸೇಂದ್ರನು ಭಯಂಕರವಾದ ಧ್ವನಿಯಿಂದ ಗರ್ಜನೆಮಾಡುತ್ತಾ ತನ್ನ ದೊಡ್ಡದಾದ ಧನುಸ್ಸನ್ನು ಟೇಂಕಾರಮಾಡಿ ಅರ್ಧಚಂದ್ರವೆಂಬ ಬಾಣವನ್ನು ಧನುಸ್ಸಿನಲ್ಲಿ ಯೋಜಿಸಿ ಆಕರ್ಣಾಂತವಾಗಿ ಸೆಳೆದು ದ್ರೋಣಾಚಾರ್ಯರ ಧನುಸ್ಸನ್ನು ಕತ್ತರಿಸಿದನು. ಭಲ್ಲವೆಂಬ ಮತ್ತೊಂದು ಬಾಣದಿಂದ ಸೋಮದತ್ತನ ಧ್ವಜವನ್ನು ಕತ್ತರಿಸಿ ಸಿಂಹನಾದವನ್ನು ಮಾಡಿದನು.

ಅನಂತರ ಘಟೋತ್ಕಚನು ಬಾಹ್ಲಿಕನನ್ನು ಮೂರು ಬಾಣಗಳಿಂದ ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಕೃಪರನ್ನು ಒಂದು ಬಾಣದಿಂದಲೂ, ಚಿತ್ರಸೇನನನ್ನು ಮೂರು ಬಾಣಗಳಿಂದಲೂ ಪ್ರಹರಿಸಿದನು. ಮತ್ತೊಂದು ಬಾಣವನ್ನು ಧನುಸ್ಸಿನಲ್ಲಿ ಯೋಜಿಸಿ ಪರಿಪೂರ್ಣವಾಗಿ ಸೆಳೆದು ಗುರಿಯಿಟ್ಟು ವಿಕರ್ಣನಿಗೆ ಪ್ರಹರಿಸಿದನು. ಆ ಬಾಣವು ಅವನ ಕೊರಳಿನ ಎಲುಬಿನ ಪ್ರದೇಶದಲ್ಲಿ ಬಿದ್ದಿತು. ಘಟೋತ್ಕಚನ ಪ್ರಹಾರದಿಂದಾಗಿ ವಿಕರ್ಣನು ರಕ್ತದಿಂದ ತೋಯ್ದು ತನ್ನ ರಥದ ಹಿಂಬದಿಯಲ್ಲಿ ಕುಳಿತುಬಿಟ್ಟನು. ಅನಂತರ

ಅಮೇಯಾತ್ಮನಾದ ಕ್ರುದ್ಧನಾದ ಘಟೋತ್ಕಚನು ಹದಿನೈದು ಬಾಣಗಳನ್ನು ಭೂರಿಶ್ರವಸನ ಮೇಲೆ ಪ್ರಯೋಗಿಸಿದನು. ಆ ನಾರಾಚಗಳು ಭೂರಿಶ್ರವಸನ ಕವಚವನ್ನು ಕತ್ತರಿಸಿ ಶೀಘ್ರವಾಗಿ ಭೂಮಿಯನ್ನು ಪ್ರವೇಶಿಸಿದುವು. ಅನಂತರ ಘಟೋತ್ಕಚನು ವಿವಿಂಶತಿಯ ಮತ್ತು ಅಶ್ವತ್ಥಾಮನ ಸಾರಥಿಗಳನ್ನು ಬಾಣಗಳಿಂದ ಪ್ರಹರಿಸಿದನು. ಆ ಇಬ್ಬರು ಸಾರಥಿಗಳೂ ಕುದುರೆಗಳ ಕಡಿವಾಣಗಳನ್ನು ಬಿಟ್ಟು ರಥದಿಂದ ಕೆಳಕ್ಕೆ ಬಿದ್ದರು. ಪುನಃ ರಾಕ್ಷಸನು ಅರ್ಧಚಂದ್ರವೆಂಬ ಬಾಣದಿಂದ ಸಿಂಧುರಾಜನಾದ ಜಯದ್ರಥನ ವರಾಹಚಿಹ್ನೆಯಿಂದ ಕೂಡಿದ್ದ ಸ್ವರ್ಣಭೂಷಿತವಾಗಿದ್ದ ಧ್ವಜವನ್ನು ಕತ್ತರಿಸಿ ಕೆಳಕ್ಕೆ ಕೆಡವಿದನು. ಎರಡನೆಯ ಬಾಣದಿಂದ ಅವನ ಧನುಸ್ಸನ್ನು ಕತ್ತರಿಸಿದನು. ಅನಂತರ ಕ್ರೋಧದಿಂದ ಕೆಂಪಾಗಿ ಮಾಡಲ್ಪಟ್ಟಿದ್ದ ಕಣ್ಣುಗಳುಳ್ಳವನಾಗಿದ್ದ ಘಟೋತ್ಕಚನು ಅವಂತೀ ದೇಶದ ರಾಜಕುಮಾರನ ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನು ನಾಲ್ಕು ಬಾಣಗಳಿಂದ ಸಂಹರಿಸಿದನು. ಧನುಸ್ಸಿನ ಶಿಂಜಿನಿಯನ್ನು ದೀರ್ಘವಾಗಿ ಸೆಳೆದು ಬಿಟ್ಟ ನಿಶಿತವಾದ ಬಾಣದಿಂದ ರಾಜಪುತ್ರನಾದ ಬೃಹದ್ಬಲನನ್ನು ಗಾಯಗೊಳಿಸಿದನು. ಆ ಬಾಣವು ಶರೀರದಲ್ಲಿ ಬಹಳ ಆಳಕ್ಕೆ ಹೋಗಿದ್ದುದರಿಂದ ಅದರ ನೋವನ್ನು ತಾಳಲಾರದೇ ವ್ಯಥಿತನಾದ ಬೃಹದ್ಬಲನು ರಥದ ಹಿಂಬದಿಯಲ್ಲಿ ಒರಗಿ ಕುಳಿತನು. ಕ್ರೋಧಾವಿಷ್ಟನಾಗಿ ರಥದಲ್ಲಿ ಕುಳಿತಿದ್ದ ರಾಕ್ಷಸಾಧಿಪನಾದ ಘಟೋತ್ಕಚನು ನಿಶಿತವಾಗಿದ್ದ ತೀಕ್ಷ್ಣವಾಗಿದ್ದ ಸರ್ಪೋಪಮಗಳಾದ ಬಾಣಗಳನ್ನು ಶಲ್ಯನ ಮೇಲೆ ಪ್ರಯೋಗಿಸಿದನು. ಆ ಬಾಣಗಳು ಯುದ್ಧವಿಶಾರದನಾದ ಶಲ್ಯನ ಶರೀರವನ್ನು ಭೇದಿಸಿ ಗಾಯಗೊಳಿಸಿದುವು."

೯೨ನೆಯ ಅಧ್ಯಾಯವು ಮುಗಿಯಿತು.

೯೩ನೆಯ ಅಧ್ಯಾಯ — ಭೀಷ್ಮವಧಪರ್ವ (ಮುಂದುವರಿದಿದೆ.)

## ಘಟೋತ್ಕಚನ ರಕ್ಷಣೆಗಾಗಿ ಬಂದ ಭೀಮನೇ ಮುಂತಾದವರೊಡನೆ ಕೌರವರ ಯುದ್ಧ ಮತ್ತು ಅವರ ಪಲಾಯನ

ಸಂಜಯನು ಘಟೋತ್ಕಚನ ಸಾಹಸಕೃತ್ಯಗಳನ್ನು ವರ್ಣಿಸುತ್ತಾ ಹೇಳುತ್ತಾನೆ :

"ಮಹಾರಾಜ! ಘಟೋತ್ಕಚನು ನಿನ್ನ ಕಡೆಯ ಮಹಾರಥರೆಲ್ಲರನ್ನೂ

ಯುದ್ಧದಿಂದ ವಿಮುಖರನ್ನಾಗಿ ಮಾಡಿ ದುರ್ಯೋಧನನನ್ನು ಸಂಹರಿಸುವ ಸಲುವಾಗಿ ಅವನ ಕಡೆಗೆ ಧಾವಿಸಿದನು. ಬಹಳ ವೇಗದಿಂದ ಘಟೋತ್ಕಚನು ರಾಜನ ಮೇಲೆ ಬೀಳುತ್ತಿರುವುದನ್ನು ಕಂಡು ಯುದ್ಧದುರ್ಮದರಾದ ನಿನ್ನ ಕಡೆಯ ಯೋಧರು ಭೈಮಿಯನ್ನು ಸಂಹರಿಸುವ ಸಲುವಾಗಿ ಅವನನ್ನು ಎದುರಿಸಿದರು. ತಾಲಪ್ರಮಾಣವಿದ್ದ (ಸುಮಾರು ನಾಲ್ಕು ಮೊಳ) ಧನುಸ್ಸಿನ ಶಿಂಜಿನಿಯನ್ನು ದೀರ್ಘವಾಗಿ ಸೆಳೆಯುತ್ತಾ, ಸಿಂಹಗಳ ಸಮೂಹದಂತೆಯೇ ಗರ್ಜನೆಮಾಡುತ್ತಾ ನಿನ್ನ ಕಡೆಯ ಮಹಾರಥರು ಘಟೋತ್ಕಚನೊಬ್ಬನನ್ನೇ ನಾಲ್ಕು ಕಡೆಗಳಿಂದಲೂ ಆಕ್ರಮಿಸಿದರು. ಶರದೃತುವಿನಲ್ಲಿ ಮೋಡಗಳು ಪರ್ವತವನ್ನು ನೀರಿನ ಧಾರೆಗಳಿಂದ ಮುಚ್ಚಿಬಿಡುವಂತೆ–ದುರ್ಯೋಧನನ ಕಡೆಯ ಮಹಾರಥರು ಘಟೋತ್ಕಚನನ್ನು ಸಂಪೂರ್ಣವಾಗಿ ಬಾಣಗಳ ವೃಷ್ಟಿಯಿಂದ ಮುಚ್ಚಿಬಿಟ್ಟರು. ಮಹಾರಥರು ಬಿಟ್ಟ ಬಹುತೀಕ್ಷ್ಣವಾದ ಆ ಬಾಣಗಳು ಘಟೋತ್ಕಚನ ಶರೀರದೊಳಕ್ಕೆ ಆಳವಾಗಿ ಹೊಕ್ಕು ಅವನಿಗೆ ಯಾತನೆಯನ್ನುಂಟುಮಾಡಿದುವು. ಅಂಕುಶದಿಂದ ತಿವಿಯಲ್ಪಟ್ಟ ಆನೆಯಂತೆ ರಾಕ್ಷಸನು ವ್ಯಥಿತನಾಗಿ ಎಲ್ಲಕಡೆಗಳಲ್ಲಿಯೂ ಹಾರಾಡುವ ಗರುಡನಂತೆ ಆಕಾಶಕ್ಕೆ ಹಾರಿಬಿಟ್ಟನು. ಕರ್ಕಶವಾದ ಧ್ವನಿಯನ್ನು ಹೊಂದಿದ್ದ ರಾಕ್ಷಸನು ಆಕಾಶದಲ್ಲಿಯೂ, ದಿಕ್ಕುಗಳಲ್ಲಿಯೂ, ಉಪದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಾ ಶರದೃತುವಿನ ಮೇಘದಂತೆ ಗಟ್ಟಿಯಾಗಿ ಗರ್ಜನೆ ಮಾಡಿದನು. ರಾಕ್ಷಸನು ಮಾಡಿದ ಆ ಘೋರಗರ್ಜನೆಯನ್ನು ಕೇಳಿ ಯುಧಿಷ್ಠಿರ ಮಹಾರಾಜನು ಅರಿಂದಮನಾದ ಭೀಮಸೇನನಿಗೆ ಹೇಳಿದನು : "ಭೀಮಸೇನ! ಘಟೋತ್ಕಚನು ಮಾಡುತ್ತಿರುವ ಭಯಂಕರಗರ್ಜನೆಯನ್ನು ಕೇಳಿದರೆ ಅವನು ಧೃತರಾಷ್ಟ್ರನ ಮಕ್ಕಳೊಡನೆಯೇ ಯುದ್ಧಮಾಡುತ್ತಿರುವನೆಂದು ನಿಶ್ಚಯಿಸಿ ಹೇಳಬಹುದಾಗಿದೆ. ರಾಕ್ಷಸಪುಂಗವನು ಗುರುತರವಾದ ಕಾರ್ಯವನ್ನು ನಿರ್ವಹಿಸುತ್ತಿದ್ದಾನೆ. ಪಿತಾಮಹನೂ ಸಹ ಕ್ರುದ್ಧನಾಗಿ ಪಾಂಚಾಲರನ್ನು ಸಂಹರಿಸಲು ಪ್ರಾರಂಭಿಸಿದ್ದಾನೆ. ಪಾಂಚಾಲರ ರಕ್ಷಣೆಗಾಗಿಯೇ ಅರ್ಜುನನು ಶತ್ರುಗಳೊಡನೆ ಯುದ್ಧದಲ್ಲಿ ತೊಡಗಿದ್ದಾನೆ. ಮಹಾಬಾಹುವೇ! ಅತ್ಯವಶ್ಯವಾಗಿ ಮಾಡಬೇಕಾದ ಎರಡು ಕಾರ್ಯಗಳಿವೆಯೆಂಬುದನ್ನು ನೀನು ಮನಗಂಡು ತನ್ನ ವಿಜಯದ (ರಕ್ಷಣೆಯ) ವಿಷಯ

ದಲ್ಲಿ ಅತ್ಯಂತ ಸಂಶಯಗ್ರಸ್ತನಾಗಿರುವ ಹಿಡಿಂಬಾಪುತ್ರನನ್ನು ರಕ್ಷಣೆಮಾಡು. ಈಗಲೇ ನೀನು ಅಲ್ಲಿಗೆ ಹೋಗು."

ಮಹಾರಾಜ! ವೃಕೋದರನು ಅಣ್ಣನ ಮಾತನ್ನು ಕೇಳಿ ತನ್ನ ಸಿಂಹ ನಾದದಿಂದ ಎಲ್ಲ ರಾಜರನ್ನೂ ಭಯಪಡಿಸುತ್ತಾ ಘಟೋತ್ಕಚನು ಯುದ್ಧ ಮಾಡುತ್ತಿದ್ದ ಸ್ಥಳಕ್ಕೆ ಅತಿಶೀಘ್ರವಾಗಿ ಧಾವಿಸಿದನು. ಪರ್ವಕಾಲದಲ್ಲಿ ಮಹೋದಧಿಯು ವೇಗದಿಂದ ಉಕ್ಕೇರಿ ಬರುವಂತೆ–ಬಹಳ ವೇಗವಾಗಿ ಹೋಗುತ್ತಿದ್ದ ಭೀಮಸೇನನನ್ನು ಅನುಸರಿಸಿ ಸತ್ಯಧೃತಿ, ರಣದುರ್ಮದನಾದ ಸೌಚಿತ್ತಿ, ಶ್ರೇಣಿಮಂತ, ವಸುದಾನ, ಕಾಶಿರಾಜನ ಮಗ ಅಭಿಭೂ, ಅಭಿಮನ್ಯುವೇ ಮೊದಲಾದ ಯೋಧರು, ಮಹಾರಥರಾದ ದ್ರೌಪದಿಯ ಐವರು ಪುತ್ರರು, ಪರಾಕ್ರಮಿಯಾದ ಕ್ಷತ್ರದೇವ, ಕ್ಷತ್ರಧರ್ಮಾ, ಅನೂಪದೇಶದ ರಾಜನಾದ, ತನ್ನ ಸೈನ್ಯದ ಸಾಮರ್ಥ್ಯದಲ್ಲಿ ಅಪಾರ ವಿಶ್ವಾಸವಿದ್ದ ನೀಲ–ಇವರು ದೊಡ್ಡದಾದ ರಥಸೈನ್ಯದೊಡನೆ ಹೋಗಿ ಘಟೋತ್ಕಚನನ್ನು ಸುತ್ತುವರಿದು ಕೌರವರೊಡನೆ ಯುದ್ಧಸನ್ನದ್ಧರಾಗಿ ನಿಂತರು. ಮದಿಸಿದ ಆನೆಗಳಿಂದಲೂ, ಪ್ರಹಾರಕುಶಲರಾದ ಗಜಯೋಧರಿಂದಲೂ ಕೂಡಿದ್ದ ಆರು ಸಾವಿರ ಗಜಸೈನಿಕರು ಒಟ್ಟುಗೂಡಿ ರಾಕ್ಷಸೇಂದ್ರನಾದ ಘಟೋತ್ಕಚನನ್ನು ರಕ್ಷಿಸುತ್ತಿದ್ದರು. ಅವರೆಲ್ಲರೂ ಗಟ್ಟಿಯಾದ ಸಿಂಹ ನಾದಗಳಿಂದಲೂ, ರಥನೇಮಿಗಳ ಗಡ-ಗಡಾಶಬ್ದಗಳಿಂದಲೂ, ಕುದುರೆಗಳ ಪಟ್-ಪಟ್ ಎಂಬ ಗೊರಸಿನ ಶಬ್ದಗಳಿಂದಲೂ ಭೂಮಿಯನ್ನೇ ನಡುಗಿ ಸುತ್ತಿದ್ದರು. ಪಾಂಡವರ ಕಡೆಯವರು ಬರುತ್ತಿದ್ದಾಗ ಆಗುತ್ತಿದ್ದ ಆ ಶಬ್ದವನ್ನು ಕೇಳಿ ಭೀಮಸೇನನ ಭಯದಿಂದ ಉದ್ವಿಗ್ನವಾದ ನಿನ್ನ ಸೈನ್ಯದ ಮುಖವು ವಿವರ್ಣವಾಯಿತು. ಘಟೋತ್ಕಚನ ಮೇಲೆಯೇ ಕೇಂದ್ರೀಕೃತವಾಗಿದ್ದ ನಿನ್ನ ಸೈನ್ಯವು ಭೀಮಾದಿಗಳ ಕಡೆಗೆ ತಿರುಗಿತು. ಅನಂತರ ಯುದ್ಧಭೂಮಿಯಿಂದ ಹಿಂದಿರುಗದೇ ಇರುವ ನಿನ್ನ ಕಡೆಯವರಿಗೂ ಮತ್ತು ಶತ್ರುಪಕ್ಷದ ಮಹಾತ್ಮರಿಗೂ ನಡುವೆ ಯುದ್ಧವು ಪ್ರಾರಂಭವಾಯಿತು. ನಾನಾರೂಪವಾದ ಶಸ್ತ್ರಗಳಿಂದ ಪ್ರಹರಿಸುತ್ತಾ, ಒಬ್ಬನು ಮತ್ತೊಬ್ಬನ ಮೇಲೆ ಆಕ್ರಮಣ ನಡೆಸುತ್ತಾ, ಮಹಾರಥರಾದ ಯೋಧರು ಯುದ್ಧವನ್ನು ಪ್ರಾರಂಭಿಸಿದರು. ಭೀರುಗಳಿಗೆ ಭಯಾವಹವಾದ ಮಹಾಘೋರವಾದ ಆ ಯುದ್ಧವು ಮಿಶ್ರಣಯುದ್ಧವಾಗಿ ಪರಿಣಮಿಸಿತು. ಅಶ್ವಯೋಧಿಗಳು–ಗಜಯೋಧಿ

ಗಳೊಡನೆಯೂ, ಪದಾತಿಗಳು–ರಥಿಕರೊಡನೆಯೂ ಯುದ್ಧಮಾಡತೊಡಗಿದರು. ಪರಸ್ಪರವಾಗಿ ಯೋಧರು ಹೆಸರಿನಿಂದ ಕರೆದು ಅವರನ್ನು ಅಟ್ಟಿಸಿಕೊಂಡು ಹೋಗಿ ಅವರೊಡನೆ ಯುದ್ಧಮಾಡುತ್ತಿದ್ದರು. ಯೋಧರ ಪರಸ್ಪರ ಸಂಘರ್ಷಣೆಯು ಸ್ವಲ್ಪಹೊತ್ತಿನಲ್ಲಿಯೇ ತೀವ್ರವಾಗಿ ಪರಿಣಮಿಸಿತು. ಗಜಾಶ್ವ-ರಥ-ಪದಾತಿಗಳ ಪದಸಂಘಟ್ಟನೆಗಳಿಂದಲೂ, ರಥಚಕ್ರಗಳಿಂದಲೂ ಹುಟ್ಟಿದ ಧೂಳಿಯೂ ಸ್ವಲ್ಪಹೊತ್ತಿನಲ್ಲಿಯೇ ಯೋಧರ ಸಂಘರ್ಷಣೆಯಿಂದ ಬೃಹತ್ತಾಗಿ ಪರಿಣಮಿಸಿತು. ಬೂದುಬಣ್ಣದ್ದಾಗಿಯೂ ಮತ್ತು ಕೆಂಪುಬಣ್ಣದ್ದಾಗಿಯೂ ಇದ್ದ ತೀವ್ರವಾದ ಆ ಧೂಳಿಯು ಸ್ವಲ್ಪಹೊತ್ತಿನಲ್ಲಿಯೇ ರಣಾಂಗಣವನ್ನೇ ಆವರಿಸಿಬಿಟ್ಟಿತು. ನಿನ್ನ ಕಡೆಯವರಾಗಲೀ–ಶತ್ರುಗಳ ಕಡೆಯವರಾಗಲೀ ಯಾರು-ಯಾರೆಂಬುದನ್ನು ತಿಳಿಯಲೂ ಸಾಧ್ಯವಾಗುತ್ತಿರಲಿಲ್ಲ. ಮರ್ಯಾದಾಶೂನ್ಯವಾದ, ರೋಮಾಂಚಕಾರಿಯಾದ, ಜನಸಂಹಾರಕಾರಿಯಾದ ಆ ಸಂದರ್ಭದಲ್ಲಿ–ತಂದೆಗೆ ಮಗನಾರೆಂಬುದಾಗಲೀ–ಮಗನಿಗೆ ತಂದೆಯಾರೆಂಬುದಾಗಲೀ ತಿಳಿಯುತ್ತಿರಲಿಲ್ಲ. (ತಂದೆ-ಮಗ ಮೊದಲಾದ ಸಂಬಂಧವನ್ನು ಗಮನಿಸದೇ ಯುದ್ಧಮಾಡುತ್ತಿದ್ದರು.) ಶಸ್ತ್ರಾಸ್ತ್ರಗಳ ಪ್ರಹಾರಗಳ ಮತ್ತು ಮನುಷ್ಯರ ಗರ್ಜನೆಗಳ ಶಬ್ದಗಳು ಸಮ್ಮಿಶ್ರವಾಗಿ ದೊಡ್ಡಶಬ್ದವಾಗಿ ಪರಿಣಮಿಸಿ ಭೂತ-ಪ್ರೇತಾದಿಗಳು ಮಾಡುವ ಶಬ್ದದಂತೆಯೇ ಬಹುಭಯಂಕರವಾಗಿ ಕೇಳಿಬರುತ್ತಿದ್ದಿತು. ಆನೆ, ಕುದುರೆ ಮತ್ತು ಮನುಷ್ಯರ ರಕ್ತವೇ ನೀರಾಗಿ ಉಳ್ಳ ಮತ್ತು ಕರುಳುಗಳೇ ಅಲೆಗಳಾಗಿ ಉಳ್ಳ ನದಿಯೊಂದು ಪ್ರವಹಿಸಿತು. ಯೋಧರ ತಲೆಗೂದಲುಗಳು ಆ ರಕ್ತನದಿಯ ಪಾಚಿಹುಲ್ಲಿನಂತಿದ್ದುವು. ಆಕಾಶದ ಕಡೆಯಿಂದ ಭೂಮಿಯ ಮೇಲೆ ಕಲ್ಲುಗಳು ಸತತವಾಗಿ ಬೀಳುತ್ತಿದ್ದರೆ ಯಾವ ಘೋರ ಶಬ್ದವುಂಟಾಗುವುದೋ ಅಂತಹುದೇ ಶಬ್ದವು ಬಾಣಗಳಿಂದಲೂ, ಕತ್ತಿಗಳಿಂದಲೂ ಕತ್ತರಿಸಲ್ಪಡುತ್ತಿದ್ದ ಮನುಷ್ಯರ ತಲೆಗಳು ಮುಂಡಗಳಿಂದ ಬೇರ್ಪಟ್ಟು ತೊಪ-ತೊಪನೆ ಕೆಳಕ್ಕೆ ಬೀಳುವಾಗ ಉಂಟಾಗುತ್ತಿದ್ದಿತು. ಶಿರಸ್ಸಿನಿಂದ ವಿಹೀನರಾದ ಮನುಷ್ಯರಿಂದಲೂ, ಕತ್ತರಿಸಿಹೋದ ಶರೀರಗಳುಳ್ಳ ಆನೆಗಳಿಂದಲೂ, ಛಿನ್ನ-ಭಿನ್ನವಾದ ಶರೀರಗಳುಳ್ಳ ಕುದುರೆಗಳಿಂದಲೂ ರಣಾಂಗಣವು ತುಂಬಿಹೋಗಿದ್ದಿತು. ನಾನಾವಿಧವಾದ ಶಸ್ತ್ರಾಸ್ತ್ರಗಳನ್ನು ಬಿಡುತ್ತಾ, ಒಬ್ಬರು ಮತ್ತೊಬ್ಬರನ್ನು ಬೆನ್ನಟ್ಟಿಹೋಗುತ್ತಾ, ಮಹಾ

ರಥರೆಲ್ಲರೂ ಯುದ್ಧದಲ್ಲಿಯೇ ಉದ್ಯುಕ್ತರಾಗಿದ್ದರು. ಅಶ್ವಾರೋಹಿಗಳಿಂದ ಪ್ರಚೋದಿತವಾದ ಕುದುರೆಗಳು ಎದುರುಪಕ್ಷದ ಕುದುರೆಗಳೊಡನೆ ಪರಸ್ಪರವಾಗಿ ಜೀವಿತಾಂತವಾಗಿ ಸೆಣೆಸುತ್ತಾ ಕಡೆಯಲ್ಲಿ ಪ್ರಾಣತೊರೆದು ಕೆಳಗೆ ಬೀಳುತ್ತಿದ್ದುವು. ಪದಾತಿಗಳು-ಪದಾತಿಗಳ ಬಳಿಗೆ ಹೋಗಿ ಕ್ರೋಧ ದಿಂದ ಕೆಂಪಾದ ಕಣ್ಣುಗಳುಳ್ಳವರಾಗಿ ಒಬ್ಬರನ್ನೊಬ್ಬರು ಬಿಗಿದಪ್ಪಿಕೊಂಡು



ಹಿಗ್ಗಾಮುಗ್ಗಾಗಿ ಸೆಳೆದಾಡಿ ಕೆಳಕ್ಕೆ ಬೀಳಿಸಿ ಸಂಹರಿಸುತ್ತಿದ್ದರು. ಮಾವಟಿಗರಿಂದ ಪ್ರಚೋದಿಸಲ್ಪಡುತ್ತಿದ್ದ ಶ್ರೇಷ್ಠವಾದ ಆನೆಗಳು ಶತ್ರುಪಕ್ಷದ ಆನೆಗಳ ಬಳಿಗೆ ಹೋಗಿ ಅವುಗಳನ್ನು ಸೊಂಡಿಲುಗಳಿಂದ ಹಿಡಿದೆಳೆದು ಕಾಳಗಕ್ಕೆ ಕರೆದು ದಂತಗಳ ಅಗ್ರಭಾಗಗಳಿಂದ ಗಾಯಗೊಳಿಸುತ್ತಿದ್ದುವು. ಆನೆಗಳ ಪರಸ್ಪರ

ಸಂಘರ್ಷಣೆಯಿಂದಾಗಿ ಅವುಗಳ ಶರೀರವೆಲ್ಲವೂ ರಕ್ತಮಯವಾಗುತ್ತಿದ್ದಿತು. ಪತಾಕೆಗಳಿಂದ ಅಲಂಕೃತವಾಗಿದ್ದ ರಕ್ತದಿಂದ ತೋಯ್ದಿದ್ದ ಆನೆಗಳು ಆ ಸಮಯದಲ್ಲಿ ವಿದ್ಯುತ್ತಿನಿಂದ ಕೂಡಿದ ಮೇಘಗಳಂತೆಯೇ ಕಾಣುತ್ತಿದ್ದುವು. ಪರಸ್ಪರ ಸಂಘರ್ಷಣೆಯಲ್ಲಿ ಕೆಲವು ಆನೆಗಳು ದಂತಗಳ ಅಗ್ರಭಾಗಗಳಿಂದ ಭೇದಿಸಲ್ಪಟ್ಟಿದ್ದುವು. ತೋಮರಗಳ ಪೆಟ್ಟುಬಿದ್ದು ಕೆಲವು ಆನೆಗಳಿಗೆ ಕುಂಭಸ್ಥಳಗಳೇ ಒಡೆದುಹೋಗುತ್ತಿದ್ದುವು. ಗುಡುಗು-ಸಿಡಿಲುಗಳ ಮೂಲಕವಾಗಿ ಗರ್ಜಿಸುತ್ತಿರುವ ಮೇಘಗಳಂತೆ ಆ ಆನೆಗಳು ಯಾತನೆಯಿಂದ ಚೀತ್ಕಾರಮಾಡುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದುವು. ಕೆಲವು ಆನೆಗಳ ಸೊಂಡಿಲುಗಳು ಎರಡು ತುಂಡುಗಳಾಗಿ ಕತ್ತರಿಸಿ ಹೋಗಿದ್ದುವು. ಮತ್ತೆ ಕೆಲವು ಆನೆಗಳಿಗೆ ಶರೀರಾದ್ಯಂತವಾಗಿ ಕ್ಷತವಾಗಿದ್ದಿತು. ಆ ಭಯಂಕರಯುದ್ಧದಲ್ಲಿ ಅಂತಹ ಆನೆಗಳು ಕತ್ತರಿಸಿದ ರೆಕ್ಕೆಗಳುಳ್ಳ ಪರ್ವತಗಳಂತೆಯೇ ರಣಾಂಗಣದ ಸುತ್ತಲೂ ಬಿದ್ದಿದ್ದುವು. ಒಂದು ಪಕ್ಷದ ಶ್ರೇಷ್ಠವಾದ ಆನೆಗಳು ಮತ್ತೊಂದು ಪಕ್ಷದ ಆನೆಗಳೊಡನೆ ಕಾಳಗ ವಾಡುತ್ತಿದ್ದಾಗ ತಮ್ಮ ಪಕ್ಕೆಗಳು ದಂತಗಳಿಂದ ಸೀಳಲ್ಪಟ್ಟು ರಕ್ತವನ್ನು ಸುರಿಸುತ್ತಿದ್ದ ಆನೆಗಳು ಗೈರಿಕಾದಿ ಧಾತುಗಳನ್ನು ಸುರಿಸುವ ಬೆಟ್ಟಗಳಂತೆ ಕಾಣುತ್ತಿದ್ದುವು. ನಾರಾಚಗಳಿಂದ ಮತ್ತು ತೋಮರಗಳಿಂದ ಪ್ರಹೃತವಾದ ಆನೆಗಳು ರಣಾಂಗಣದ ಸುತ್ತಲೂ ಓಡಾಡುತ್ತಿದ್ದು ಶಿಖರಗಳು ಕಳಚಿಬಿದ್ದ ಪರ್ವತಗಳಂತೆಯೇ ಕಾಣುತ್ತಿದ್ದುವು. ಮತ್ತೆ ಕೆಲವು ಆನೆಗಳು ಮದದಿಂದ ವಿವೇಚನೆಯನ್ನು ಕಳೆದುಕೊಂಡಿದ್ದು ಕೋಪಗೊಂಡವುಗಳಾಗಿ ಯಾವ ವಿಧವಾದ ಅಂಕೆಯೂ ಇಲ್ಲದೇ ಎದುರಾಗಿ ಸಿಕ್ಕಿದ ರಥಗಳನ್ನೂ, ಕುದುರೆಗಳನ್ನೂ, ಪದಾತಿಗಳನ್ನೂ ನೂರಾರು ಸಂಖ್ಯೆಯಲ್ಲಿ ಧ್ವಂಸಮಾಡು ತ್ತಿದ್ದುವು. ಇದೇ ರೀತಿಯಲ್ಲಿ ಕುದುರೆಸವಾರರಿಂದ ಪ್ರಾಸ-ತೋಮರಾದ್ಯಾ ಯುಧಗಳಿಂದ ಪ್ರಹರಿಸಲ್ಪಟ್ಟ ಕುದುರೆಗಳೂ ಸಹ ದಿಕ್ಕುಗೆಟ್ಟು ಓಡುತ್ತಾ ಆ ದಿಕ್ಕುಗಳಲ್ಲಿರುವವರಿಗೆ ವ್ಯಾಕುಲವನ್ನುಂಟುಮಾಡುತ್ತಾ ರಣಾಂಗಣ ದಲ್ಲಿ ಸಂಚರಿಸುತ್ತಿದ್ದುವು. ಕುಲೀನರಾದ ಮತ್ತು ತಮ್ಮ ಶರೀರಗಳನ್ನೇ ಯುದ್ಧಕ್ಕೆ ಆಹುತಿಯನ್ನಾಗಿ ಒಪ್ಪಿಸಿದ್ದ ರಥಿಗಳು ಶತ್ರುಪಕ್ಷದ ರಥಿಗಳೊಡನೆ ತಮ್ಮ ಎಲ್ಲ ಶಕ್ತಿಯನ್ನೂ ಕೇಂದ್ರೀಕರಿಸಿ ಸ್ವಲ್ಪವಾದರೂ ಭಯವೇ ಇಲ್ಲ ದವರಂತೆ ತಮ್ಮ ಅತುಲಪರಾಕ್ರಮವನ್ನು ಪ್ರದರ್ಶಿಸುತ್ತಿದ್ದರು. ಆ ಮಹಾ

ಯುದ್ಧದಲ್ಲಿ ವಿಜಯದಿಂದ–ಯಶಸ್ಸನ್ನಾಗಲೀ, ಮರಣದಿಂದ–ಸ್ವರ್ಗವನ್ನಾಗಲೀ ಅಭಿಲಷಿಸಿ ಯುದ್ಧಮಾಡುತ್ತಿದ್ದ ವೀರಯೋಧರು–ಸ್ವಯಂವರ ಸಮಯದಲ್ಲಿ ವಧುವಾದವಳು ತನಗೆ ಅನುರೂಪರಾದವರನ್ನು ಆರಿಸಿಕೊಳ್ಳುವಂತೆ–ತಮಗೆ ಬೇಕಾದ ಎದುರಾಳಿಯನ್ನು ಆರಿಸಿಕೊಂಡು ಅವನೊಡನೆ ಯುದ್ಧಮಾಡುತ್ತಿದ್ದರು. ಈ ರೀತಿಯಲ್ಲಿ ರೋಮಾಂಚಕರವಾದ ಯುದ್ಧವು ನಡೆಯುತ್ತಿರಲಾಗಿ ದುರ್ಯೋಧನನ ಮಹಾಸೈನ್ಯದ ಹೆಚ್ಚು ಭಾಗವೇ ಯುದ್ಧದಿಂದ ಹಿಮ್ಮೆಟ್ಟಿತು.”

೯೩ನೆಯ ಅಧ್ಯಾಯವು ಮುಗಿಯಿತು.

೯೪ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ದುರ್ಯೋಧನ-ಭೀಮಸೇನರ ಯುದ್ಧದ ವರ್ಣನೆ : ಅಶ್ವತ್ಥಾಮಾ-ನೀಲರ ಯುದ್ಧದ ವರ್ಣನೆ : ಘಟೋತ್ಕಚನ ಮಾಯೆಯಿಂದ ಮೋಹಿತವಾದ ಕೌರವಸೇನೆಯ ಪಲಾಯನ

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸುತ್ತಾ ಹೇಳುತ್ತಾನೆ :

“ಮಹಾರಾಜ! ತನ್ನ ಸೈನ್ಯವು ವಿಧ್ವಂಸಿತವಾದುದನ್ನು ನೋಡಿ ಸಂಕ್ರುದ್ಧನಾದ ದುರ್ಯೋಧನನು ಅರಿಂದಮನಾದ ಭೀಮಸೇನನನ್ನು ಆಕ್ರಮಿಸಿದನು. ಇಂದ್ರನ ವಜ್ರಾಯುಧದ ಧ್ವನಿಗೆ ಸಮಾನವಾದ ಟೇಂಕಾರ ಶಬ್ದದಿಂದ ಕೂಡಿದ್ದ ದೊಡ್ಡದಾದೊಂದು ಧನುಸ್ಸನ್ನು ತೆಗೆದುಕೊಂಡು ಬಾಣಗಳ ಸುರಿಸುವಿಕೆಯಿಂದ ಭೀಮಸೇನನನ್ನು ಮುಚ್ಚಿಬಿಟ್ಟನು. ಕೋಪಗೊಂಡಿದ್ದ ದುರ್ಯೋಧನನು ತೀಕ್ಷ್ಣವಾಗಿದ್ದ ರೆಕ್ಕೆಯಿಂದ ಕೂಡಿದ ಅರ್ಧಚಂದ್ರವೆಂಬ ಬಾಣವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಆಕರ್ಣಾಂತವಾಗಿ ಸೆಳೆದು ಭೀಮಸೇನನ ಧನುಸ್ಸನ್ನು ಕತ್ತರಿಸಿಬಿಟ್ಟನು. ಅನಂತರ ಅದೇ ಸರಿಯಾದ ಸಮಯವೆಂದು ಭಾವಿಸಿ ಅತ್ಯವಸರದಿಂದ ಮಹಾರಥನಾದ ದುರ್ಯೋಧನನು ಪರ್ವತವನ್ನಾದರೂ ಭೇದಿಸಬಲ್ಲುದಾಗಿದ್ದ ನಿಶಿತವಾಗಿದ್ದ ಒಂದು ಬಾಣವನ್ನು ಧನುಸ್ಸಿನಲ್ಲಿ ಯೋಜಿಸಿ ಶಿಂಜಿನಿಯನ್ನು ಸುದೀರ್ಘವಾಗಿ ಸೆಳೆದು ಭೀಮಸೇನನ ವಕ್ಷಃಸ್ಥಳಕ್ಕೆ ಗುರಿಯಿಟ್ಟು ಪ್ರಹರಿಸಿದನು. ಆ ಬಾಣವು ಭೀಮಸೇನನ ವಕ್ಷಃಸ್ಥಳದಲ್ಲಿ ಬಹಳ ಆಳದವರೆಗೂ ಚುಚ್ಚಿಕೊಂಡಿತು.

ಅದರಿಂದವನಿಗೆ ಬಹಳ ಯಾತನೆಯಾಯಿತು. ತೇಜಸ್ವಿಯಾದ ಭೀಮಸೇನನು ಕಟವಾಯಿಗಳನ್ನು ನೆಕ್ಕುತ್ತಾ ಸುವರ್ಣಭೂಷಿತವಾಗಿದ್ದ ಧ್ವಜದಂಡವನ್ನೇ ಅವಲಂಬನೆಯನ್ನಾಗಿ ಹಿಡಿದು ಕುಳಿದುಕೊಂಡನು. ಈ ರೀತಿಯಲ್ಲಿ ತನ್ನ ತಂದೆಯಾದ ಭೀಮಸೇನನು ವ್ಯಥಿತಚಿತ್ತನಾಗಿರುವುದನ್ನು ಕಂಡು ಘಟೋ ತ್ಕಚನು–ವಿಶ್ವವನ್ನೇ ದಹಿಸಲಿಚ್ಛಿಸಿರುವ ಪ್ರಲಯಾಗ್ನಿಯಂತೆ–ಕ್ರೋಧದಿಂದ ಕಿಡಿ-ಕಿಡಿಯಾದನು. ಅಭಿಮನ್ಯುಪ್ರಮುಖರಾದ ಪಾಂಡವರ ಕಡೆಯ ಮಹಾ ರಥರೂ ದುರ್ಯೋಧನನನ್ನು ಸಂಬೋಧಿಸಿ 'ನಿಲ್ಲು! ನಿಲ್ಲು! ನೀನು ನಮ್ಮಿಂದ ತಪ್ಪಿಸಿಕೊಳ್ಳಲಾರೆ'-ಎಂದು ನಾನಾಬಗೆಯಾಗಿ ಕೂಗುತ್ತಾ ಸಂಭ್ರಮ ದಿಂದ ಅಲ್ಲಿಗೆ ಬಂದರು. ಅಮಿತೋತ್ಸಾಹದಿಂದ ಕೂಡಿದ್ದ, ಕ್ರುದ್ಧರಾಗಿದ್ದ ಪಾಂಡವಮಹಾರಥರು ತಂಡ-ತಂಡವಾಗಿ ದುರ್ಯೋಧನನಿರುವೆಡೆಗೆ ಬರು ತ್ತಿರುವುದನ್ನು ನೋಡಿ ನಿನ್ನ ಕಡೆಯ ಮಹಾರಥರನ್ನುದ್ದೇಶಿಸಿ ದ್ರೋಣರು ಈ ಮಾತನ್ನು ಹೇಳಿದರು : "ವೀರಯೋಧರೇ! ಬೇಗನೆ ಹೋಗಿರಿ! ಪ್ರಾಣವು ಉಳಿಯುವುದೋ, ಇಲ್ಲವೋ–ಎಂಬ ಸಂಶಯದಿಂದ ಗ್ರಸ್ತನಾಗಿ ರುವ, ವ್ಯಸನವೆಂಬ ಸಮುದ್ರದಲ್ಲಿ ಮುಳುಗಿಹೋಗುತ್ತಿರುವ ರಾಜನನ್ನು ಸಂರಕ್ಷಿಸಿರಿ. ಮಹಾಧನುಷ್ಮಂತರಾದ ಕ್ರುದ್ಧರಾದ ಪಾಂಡವರ ಕಡೆಯ ಮಹಾ ರಥರು ಭೀಮಸೇನನನ್ನು ಮುಂದೆಮಾಡಿಕೊಂಡು ವಿಜಯವನ್ನು ಗಳಿಸ ಬೇಕೆಂಬ ದೃಢಸಂಕಲ್ಪದಿಂದ ನಾನಾವಿಧವಾದ ಶಸ್ತ್ರಗಳನ್ನು ಬಿಡುತ್ತಾ, ಭಯಂ ಕರವಾದ ಸಿಂಹನಾದಗಳಿಂದ ನಮ್ಮ ಕಡೆಯ ರಾಜರನ್ನು ಭಯಪಡಿಸುತ್ತಾ, ದುರ್ಯೋಧನನನ್ನು ನಾಲ್ಕೂ ಕಡೆಗಳಿಂದಲೂ ಆಕ್ರಮಿಸುತ್ತಿದ್ದಾರೆ. ಆದುದ ರಿಂದ ತಡಮಾಡದೇ ಶೀಘ್ರವಾಗಿ ಅಲ್ಲಿಗೆ ಹೋಗಿ ರಾಜನನ್ನು ರಕ್ಷಿಸಿರಿ."

ಮಹಾರಾಜ! ದ್ರೋಣರು ಹೇಳಿದ ಮಾತನ್ನು ಕೇಳಿ ಭೂರಿಶ್ರವಸನೇ ಮೊದಲಾದ ನಿನ್ನ ಕಡೆಯ ಯೋಧರು ಪಾಂಡವರ ಸೇನೆಯನ್ನು ಎದುರಿಸಿದರು. ಕೃಪ, ಭೂರಿಶ್ರವಸ, ಶಲ್ಯ, ದ್ರೋಣಪುತ್ರನಾದ ಅಶ್ವತ್ಥಾಮಾ, ವಿವಿಂಶತಿ, ಚಿತ್ರಸೇನ, ವಿಕರ್ಮ, ಸೈಂಧವ, ಬೃಹದ್ಬಲ, ಮಹಾಧನುಷ್ಮಂತರಾದ ಅವಂತಿಯ ಇಬ್ಬರು ರಾಜಕುಮಾರರು– ಇವರೆಲ್ಲರೂ ದುರ್ಯೋಧನನನ್ನು ರಕ್ಷಿಸಲು ಅವನನ್ನು ಸುತ್ತುವರಿದು ನಿಂತರು. ಅನಂತರ ಅವರೆಲ್ಲರೂ ಇಪ್ಪತ್ತು ಹೆಜ್ಜೆಗಳಷ್ಟು ಮುಂದೆ ಹೋಗಿ ಯುದ್ಧವನ್ನು ಪ್ರಾರಂಭಿಸಿದರು. ಪಾಂಡವ-ಕೌರವರಿಬ್ಬರೂ

ಒಬ್ಬರು ಮತ್ತೊಬ್ಬರನ್ನು ಸಂಹಾರಮಾಡುವುದರಲ್ಲಿಯೇ ಆಶಯವುಳ್ಳವರಾಗಿದ್ದರು. ಕೌರವಮಹಾರಥರನ್ನು ದುರ್ಯೋಧನನ ಸಹಾಯಕ್ಕಾಗಿ ಹೋಗುವಂತೆ ಹೇಳಿದ ದ್ರೋಣರು ತಾವೂ ಸಹ ಅವರ ಜೊತೆಯಲ್ಲಿಯೇ ಬಂದು ಯುದ್ಧದಲ್ಲಿ ಪಾಲ್ಗೊಂಡರು. ಮಹಾಬಾಹುಗಳಾದ ಭಾರದ್ವಾಜರು ತಮ್ಮ ಮಹಾಧನುಸ್ಸನ್ನೊಮ್ಮೆ ಟೇಂಕರಿಸಿ ಇಪ್ಪತ್ತಾರು ಬಾಣಗಳಿಂದ ಭೀಮನನ್ನು ಪ್ರಹರಿಸಿದರು. ಪುನಃ ಅವರು ವರ್ಷರ್ತುವಿನಲ್ಲಿ ಮೋಡವು ಜಲಧಾರೆಗಳಿಂದ ಪರ್ವತವನ್ನು ಮುಚ್ಚಿಬಿಡುವಂತೆ–ಬಾಣಗಳಿಂದ ಭೀಮಸೇನನನ್ನು ಬಹುಶೀಘ್ರವಾಗಿ ಮುಚ್ಚಿಬಿಟ್ಟರು. ಮಹಾಧನುಷ್ಮಂತನಾದ ಭೀಮಸೇನನು ಬಹಳ ಬೇಗ ದ್ರೋಣರು ಬಿಟ್ಟ ಬಾಣಗಳನ್ನು ಕತ್ತರಿಸಿ ಅದಕ್ಕೆ ಪ್ರತಿಯಾಗಿ ಹತ್ತು ಬಾಣಗಳಿಂದ ದ್ರೋಣರ ಎಡಪಾರ್ಶ್ವದಲ್ಲಿ ಪ್ರಹರಿಸಿದನು. ಭೀಮನು ಬಿಟ್ಟ ಹತ್ತು ಬಾಣಗಳೂ ಅವರ ಶರೀರದೊಳಗೆ ಆಳವಾಗಿ ನೆಟ್ಟುಕೊಂಡವು. ವಯೋವೃದ್ಧರಾಗಿಯೂ ಇದ್ದ ಅವರಿಗೆ ಅದರಿಂದ ಬಹಳ ಯಾತನೆಯಾಗಿ ಸಂಜ್ಞೆಯನ್ನೂ ಕಳೆದುಕೊಂಡು ರಥದ ಹಿಂದಿನ ಕಂಬವನ್ನು ಒರಗಿ ಕುಳಿತರು. ಗುರುಗಳು ಭೀಮಸೇನನ ಬಾಣಗಳ ಪ್ರಹಾರದಿಂದ ವ್ಯಥಿತರಾದುದನ್ನು ಕಂಡು ದುರ್ಯೋಧನರಾಜನೇ ಭೀಮಸೇನನನ್ನು ಎದುರಿಸಿದನು. ಅವನನ್ನು ಅನುಸರಿಸಿ ಸಂಕ್ರುದ್ಧನಾದ ಅಶ್ವತ್ಥಾಮನೂ ಭೀಮನೊಡನೆ ಯುದ್ಧಕ್ಕೆ ಹೋದನು. ಪ್ರಲಯಕಾಲದ ಅಂತಕ-ಯಮರಂತಿದ್ದ ದುರ್ಯೋಧನಾಶ್ವತ್ಥಾಮರು ತನ್ನ ಮೇಲೆ ರಭಸದಿಂದ ಬೀಳುತ್ತಿರುವುದನ್ನು ಕಂಡು ಭೀಮಸೇನನು ಒಡನೆಯೇ ಭಾರವಾಗಿದ್ದ ತನ್ನ ಗದೆಯನ್ನೆತ್ತಿಕೊಂಡು ರಥದಿಂದ ಕೆಳಕ್ಕೆ ಧುಮುಕಿ, ಅಚಲವಾದ ಪರ್ವತದೋಪಾದಿಯಲ್ಲಿ ನಿಂತು ಯಮನ ದಂಡದಂತೆಯೇ ಭಾರವಾಗಿದ್ದ ತನ್ನ ಗದೆಯನ್ನು ಮೇಲಕ್ಕೆತ್ತಿದನು. ಶಿಖರದಿಂದ ಕೂಡಿದ ಕೈಲಾಸಪರ್ವತದಂತೆ–ಗದೆಯನ್ನೆತ್ತಿಕೊಂಡು ನಿಂತಿದ್ದ ಭೀಮಸೇನನನ್ನು ನೋಡಿ, ದುರ್ಯೋಧನಾಶ್ವತ್ಥಾಮರಿಬ್ಬರೂ ಏಕಕಾಲದಲ್ಲಿ ಭೀಮನ ಕಡೆಗೆ ಧಾವಿಸಿಬಂದರು. ವೇಗವಂತರಾದ ಬಲಿಷ್ಠರಲ್ಲಿ ಶ್ರೇಷ್ಠರಾದ ಆ ಇಬ್ಬರೂ ಒಟ್ಟಾಗಿ ತನ್ನ ಮೇಲೆ ದಾಳಿಮಾಡಲು ಬರುತ್ತಿರುವುದನ್ನು ಕಂಡು ಭೀಮಸೇನನೂ ಸಹ ಬಹಳ ವೇಗದಿಂದ ಅವರ ಕಡೆಗೇ ಧಾವಿಸಿದನು.

ಬಹುಭಯಂಕರನಾಗಿ ಕಾಣುತ್ತಿದ್ದ ಕ್ರುದ್ಧನಾಗಿದ್ದ ಭೀಮಸೇನನು

ದುರ್ಯೋಧನಾಶ್ವತ್ಥಾಮರ ಮೇಲೆ ಬೀಳುತ್ತಿರುವುದನ್ನು ಕಂಡು ಕೌರವರ ಪಕ್ಷದ ಮಹಾರಥರು ಬಹಳ ಅವಸರದಿಂದ ಭೀಮನ ಕಡೆಗೆ ಧಾವಿಸಿದರು. ಆ ವೇಳೆಗೆ ದ್ರೋಣರೂ ಚೇತರಿಸಿಕೊಂಡಿದ್ದರು. ಭಾರದ್ವಾಜಪ್ರಮುಖರಾದ ಎಲ್ಲ ಮಹಾರಥರೂ ಭೀಮನನ್ನು ಸಂಹಾರಮಾಡುವ ಇಚ್ಛೆಯಿಂದ ನಾನಾ ವಿಧವಾದ ಶಸ್ತ್ರಗಳನ್ನು ಭೀಮನ ಎದೆಯ ಮೇಲೆ ಪ್ರಹರಿಸಿದರು. ಕೌರವ ಮಹಾರಥರೆಲ್ಲರೂ ಸೇರಿಕೊಂಡು ನಾಲ್ಕು ಕಡೆಯಿಂದಲೂ ಭೀಮಸೇನ ನನ್ನು ಬಹುವಾಗಿ ಪೀಡಿಸುತ್ತಿದ್ದರು. ಅವನಿಗೆ ಆ ಸಮಯದಲ್ಲಿ ಅಪಾಯದ ಸಂಶಯವುಂಟಾಗಿದ್ದಿತು. ಅಂತಹ ಸ್ಥಿತಿಯಲ್ಲಿದ್ದ, ಕೌರವಮಹಾರಥರೆಲ್ಲ ರಿಂದಲೂ ಪೀಡಿತನಾಗಿದ್ದ ಮಹಾರಥನಾದ ಭೀಮಸೇನನನ್ನು ರಕ್ಷಿಸುವ ಸಲುವಾಗಿ, ಅತ್ಯಂತಪ್ರಿಯವಾದ ಪ್ರಾಣಗಳನ್ನೂ ಬಿಡಲು ಸಿದ್ಧರಾಗಿ ಅಭಿಮನ್ಯುಪ್ರಮುಖರಾದ ಪಾಂಡವಮಹಾರಥರು ಭೀಮಸೇನನ ಸಮೀಪಕ್ಕೆ ಓಡಿಯೋಡಿ ಬಂದರು. ಅನೂಪದೇಶದ ಅಧಿಪತಿಯಾದ, ಶೂರನಾದ, ಭೀಮನ ಪ್ರಿಯಸಖನಾದ, ನೀಲಮೇಘಕ್ಕೆ ಸಮಾನವಾದ ಶರೀರಕಾಂತಿ ಯುಳ್ಳವನಾಗಿದ್ದ ನೀಲನು ಕ್ರುದ್ಧನಾಗಿ ದ್ರೌಣಿಯ ಮೇಲೆ ಯುದ್ಧಕ್ಕೆ ಹೋದನು. ಆ ಹಿಂದಿನ ದಿನಗಳಲ್ಲಿಯೂ ಮಹಾಧನುಷ್ಮಂತನಾದ ನೀಲನು ದ್ರೋಣಪುತ್ರನೊಡನೆಯೇ ಯುದ್ಧದಲ್ಲಿ ಸ್ಪರ್ಧಿಸುತ್ತಿದ್ದನು. ಯಾವನು ತನ್ನ ಕೋಪದಿಂದಲೂ ಮತ್ತು ತೇಜಸ್ಸಿನಿಂದಲೂ ಮೂರು ಲೋಕಗಳನ್ನೂ ಹೆದರಿಸಿದನೋ, ಯಾವನು ಎದುರಿಸಲು ಅಶಕ್ಯನಾಗಿದ್ದನೋ ಮತ್ತು ಯಾವನು ದೇವತೆಗಳಿಗೂ ಕೂಡ ಭಯಂಕರನಾಗಿದ್ದನೋ, ಅಂತಹ ದಾನವನಾದ ವಿಪ್ರಚಿತ್ತಿಯನ್ನು ಇಂದ್ರನು ಯಾವ ರೀತಿಯಲ್ಲಿ ಬಾಣಗಳಿಂದ ಪ್ರಹರಿಸಿದನೋ–ಅದೇ ರೀತಿಯಲ್ಲಿ ನೀಲನು ತನ್ನ ದೊಡ್ಡದಾದ ಧನುಸ್ಸನ್ನು ಟೇಂಕರಿಸಿ ಬಾಣವನ್ನು ಯೋಜಿಸಿ ಸುದೀರ್ಘವಾಗಿ ಸೆಳೆದು ದ್ರೌಣಿಯನ್ನು ಪ್ರಹರಿಸಿದನು. ನೀಲನು ಬಿಟ್ಟ ಬಾಣದಿಂದ ಗಾಢವಾಗಿ ಕ್ಷತನಾದ ದ್ರೌಣಿಯ ದೇಹದಿಂದ ರಕ್ತವು ಹೊರಡಲು ಅದರಿಂದ ಪೀಡಿತನಾಗಿ ಬಹಳವಾಗಿ ಕೋಪಗೊಂಡನು. ಅನಂತರ ಇಂದ್ರನ ವಜ್ರಾಯುಧದ ಧ್ವನಿಗೆ ಸಮಾನ ವಾದ ಟೇಂಕಾರಶಬ್ದದಿಂದ ಕೂಡಿದ್ದ ಚಿತ್ರಧನುಸ್ಸನ್ನೊಮ್ಮೆ ಟೇಂಕರಿಸಿ ಬುದ್ಧಿ ವಂತರಲ್ಲಿ ಶ್ರೇಷ್ಠನಾದ ಅಶ್ವತ್ಥಾಮನು ನೀಲನನ್ನು ವಿನಾಶಮಾಡಬೇಕೆಂದು ದೃಢವಾಗಿ ನಿಶ್ಚಯಿಸಿದನು. ಅನಂತರ ಅಶ್ವತ್ಥಾಮನು ಕಮ್ಮಾರನಿಂದ

ಶುದ್ಧಮಾಡಲ್ಪಟ್ಟಿದ್ದ ವಿಮಲವಾದ ಭಲ್ಲಗಳೆಂಬ ಬಾಣಗಳನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ನಾಲ್ಕು ಭಲ್ಲಗಳಿಂದ ನೀಲರಾಜನ ರಥದಲ್ಲಿದ್ದ ನಾಲ್ಕು ಕುದುರೆಗಳನ್ನೂ, ಒಂದು ಭಲ್ಲದಿಂದ ಸಾರಥಿಯನ್ನೂ ಸಂಹರಿಸಿ, ಮತ್ತೊಂದು ಬಾಣದಿಂದ ರಥದ ಧ್ವಜವನ್ನೂ ಕತ್ತರಿಸಿ, ಏಳನೆಯ ಭಲ್ಲ ದಿಂದ ನೀಲರಾಜನ ವಕ್ಷಃಸ್ಥಲವನ್ನೇ ಭೇದಿಸಿದನು. ಅಶ್ವತ್ಥಾಮನು ಬಿಟ್ಟ ಭಲ್ಲವು ನೀಲನ ಶರೀರದೊಳಕ್ಕೆ ಆಳವಾಗಿ ಹೊಕ್ಕಿದ್ದರಿಂದ ಅವನು ವ್ಯಥಿತ ವಾಗಿ ರಥದ ಹಿಂಬದಿಯಲ್ಲಿ ಕಂಬವನ್ನೊರಗಿ ಕುಳಿತನು. ಮೋಡಗಳ ಸಮೂಹಕ್ಕೆ ಸಮಾನವಾದ ಕಾಂತಿಯಿಂದ ಕೂಡಿದ್ದ ನೀಲರಾಜನು ಅಶ್ವತ್ಥಾಮನ ಬಾಣಪ್ರಹಾರದಿಂದ ವಿಮನಸ್ಕನಾದುದನ್ನು ಕಂಡು ಸಂಕ್ರುದ್ಧ ನಾದ ಘಟೋತ್ಕಚನು ತನ್ನ ಜ್ಞಾತಿಗಳಿಂದ ಪರಿವೃತನಾಗಿ ಯುದ್ಧದಲ್ಲಿ ಶೋಭಾಯಮಾನನಾಗಿ ಕಾಣುತ್ತಿದ್ದ ದ್ರೌಣಿಯ ಬಳಿಗೆ ಧಾವಿಸಿದನು. ಯುದ್ಧದುರ್ಮದರಾಗಿದ್ದ ಇತರ ರಾಕ್ಷಸರೂ ಅವನನ್ನು ಹಿಂಬಾಲಿಸಿದರು. ಘೋರದರ್ಶನನಾದ ರಾಕ್ಷಸನು ತನ್ನ ಮೇಲೆ ಬೀಳುತ್ತಿರುವುದನ್ನು ಕಂಡು ತೇಜಸ್ವಿಯಾದ ಅಶ್ವತ್ಥಾಮನು ಬಹಳ ವೇಗವಾಗಿ ಘಟೋತ್ಕಚನನ್ನು ಎದುರಿಸಿದನು. ಕ್ರುದ್ಧರಾದ ಯಾವ ರಾಕ್ಷಸರು ಘಟೋತ್ಕಚನ ಮುಂಭಾಗ ದಲ್ಲಿದ್ದು ಅವನನ್ನು ರಕ್ಷಿಸುತ್ತಿದ್ದರೋ ಅಂತಹ ಭಯಂಕರಸ್ವರೂಪರಾದ ರಾಕ್ಷಸರನ್ನು ಕ್ರುದ್ಧನಾದ ದ್ರೌಣಿಯು ಸಂಹರಿಸಲು ಉಪಕ್ರಮಿಸಿದನು. ಅಶ್ವತ್ಥಾಮನ ಧನುಸ್ಸಿನಿಂದ ಚ್ಯುತವಾದ ಬಾಣಗಳಿಂದ ಪೀಡಿತರಾದ ಅನೇಕರಾಕ್ಷಸರು ಯುದ್ಧದಿಂದ ಹಿಮ್ಮೆಟ್ಟಿದರು. ಅದನ್ನು ನೋಡಿ ಮಹಾ ಕಾಯನಾದ ಭೈಮಿಯು ಅತಿಕ್ರುದ್ಧನಾದನು. ಮಾಯಾವಿಯಾದ ರಾಕ್ಷಸಾಧಿಪನು ಯುದ್ಧದಲ್ಲಿ ಅಶ್ವತ್ಥಾಮನನ್ನು ವಿಮೋಹಗೊಳಿಸುತ್ತಾ ಘೋರರೂಪವಾದ ಸುದಾರುಣವಾದ ಮಾಯೆಯನ್ನು ನಿರ್ಮಿಸಿದನು. ಮಹಾರಾಜ! ಆ ಮಾಯೆಯ ಪ್ರಭಾವದಿಂದಾಗಿ ನಿನ್ನ ಎಲ್ಲ ಸೈನಿಕರೂ ಯುದ್ಧದಿಂದ ಹಿಮ್ಮೆಟ್ಟಿದರು. ನಿನ್ನ ಸೈನ್ಯದಲ್ಲಿಯೇ ಒಬ್ಬರು ಮತ್ತೊಬ್ಬರ ಕಣ್ಣಿಗೆ ಕತ್ತಿಗಳಿಂದ ಕತ್ತರಿಸಲ್ಪಟ್ಟವರಾಗಿಯೂ, ರಕ್ತದಿಂದ ತೋಯಿಸಲ್ಪಟ್ಟವರಾಗಿಯೂ, ಪ್ರಾಣೋತ್ಕ್ರಮಣಸಂಕಟದಿಂದ ಬಾಧೆ ಪಡುತ್ತಾ, ಭೂಮಿಯ ಮೇಲೆ ಅತ್ತಲಿತ್ತ ಹೊರಳಾಡುತ್ತಿರುವಂತೆಯೂ, ದೀನರಾಗಿ ಇರುವಂತೆಯೂ ಕಾಣುತ್ತಿದ್ದರು. ದ್ರೋಣರು, ದುರ್ಯೋಧನ

ಶಲ್ಯ, ಅಶ್ವತ್ಥಾಮಾ–ಇವರೇ ಮೊದಲಾದ ಪ್ರಾಯಶಃ ಕೌರವರಲ್ಲಿ ಪ್ರಧಾನಭೂತರಾದ ಎಲ್ಲ ಮಹಾರಥರೂ ವಿಧ್ವಂಸಿತರಾದಂತೆ ನಿನ್ನ ಸೈನಿಕರಿಗೆ ಕಂಡರು.

ಎಲ್ಲ ರಾಜರೂ, ಕುದುರೆಗಳೂ, ಕುದುರೆಸವಾರರೂ ಸಾವಿರಾರು ಸಂಖ್ಯೆಯಲ್ಲಿ ಕತ್ತರಿಸಲ್ಪಟ್ಟು ರಣರಂಗದಲ್ಲಿ ಬಿದ್ದಿರುವಂತೆ ನಿನ್ನ ಸೈನಿಕರಿಗೆ ಗೋಚರಿಸಿತು. ಇಂತಹ ಘೋರದೃಶ್ಯವನ್ನು ಕಂಡೊಡನೆಯೇ ನಿನ್ನ ಸೈನ್ಯವು ಶಿಬಿರದ ಕಡೆಗೆ ಪಲಾಯನಮಾಡಲು ಉಪಕ್ರಮಿಸಿತು. ಆ ಸಮಯದಲ್ಲಿ ನಾನೂ ಮತ್ತು ದೇವವ್ರತನೂ (ಭೀಷ್ಮನೂ)–"ಯೋಧರೇ! ಪಲಾಯನ ಮಾಡಬೇಡಿರಿ. ಯುದ್ಧವನ್ನು ಮುಂದುವರಿಸಿರಿ. ನಿಮಗೆ ಕಾಣುತ್ತಿರುವುದು ಕೇವಲ ಘಟೋತ್ಕಚರಾಕ್ಷಸನ ಮಾಯೆ. ಇದರಲ್ಲಿ ತಥ್ಯಾಂಶವಿಲ್ಲ"– ಎಂಬುದಾಗಿ ಕೂಗಿಕೊಂಡೆವು. ಆದರೂ ಘೋರದೃಶ್ಯವನ್ನು ನೋಡಿ ಬುದ್ಧಿಗೆಟ್ಟಿದ್ದ ಯೋಧರು ಹಿಂದಿರುಗಲಿಲ್ಲ. ಬಹಳ ಭೀತರಾಗಿದ್ದ ಅವರಿಗೆ ನಾವು ಹೇಳಿದ ಮಾತುಗಳಲ್ಲಿ ನಂಬಿಕೆಯುಂಟಾಗಲಿಲ್ಲ. ಸೈನಿಕರೆಲ್ಲರೂ ಹಿಂದೆ ನೋಡದೇ ಓಡುತ್ತಿರುವುದನ್ನು ಕಂಡು ಜಯಗಳಿಸಿದ ಪಾಂಡವರು ಘಟೋತ್ಕಚನೊಡನೆ ಸೇರಿ ಸಿಂಹನಾದಗಳನ್ನು ಮಾಡಿದರು. ಶಂಖ-ದುಂದುಭಿಗಳೇ ಮೊದಲಾದ ವಾದ್ಯಗಳ ಮೂಲಕವಾಗಿ ಜಯಘೋಷಗಳನ್ನು ನಾಲ್ಕುದಿಕ್ಕುಗಳಲ್ಲಿಯೂ ಮೊಳಗಿಸಿದರು. ಮಹಾರಾಜ! ಈ ರೀತಿಯಲ್ಲಿ ದುರಾತ್ಮನಾದ, ಹಿಡಿಂಬೆಯ ಮಗನಾದ ಘಟೋತ್ಕಚನಿಂದ ಸೂರ್ಯಾಸ್ತಮನದ ವೇಳೆಯಲ್ಲಿ ನಿನ್ನ ಸೈನ್ಯವು ಭಗ್ನಗೊಳಿಸಲ್ಪಟ್ಟು ದಿಕ್ಕಾಪಾಲಾಗಿ ಓಡಿಹೋಯಿತು."

ತೊಂಬತ್ತನಾಲ್ಕನೆಯ ಅಧ್ಯಾಯವು ಮುಗಿಯಿತು.

೯೫ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಷ್ಮನ ಆಜ್ಞೆಯಂತೆ ಭಗದತ್ತನು ಘಟೋತ್ಕಚ, ಭೀಮಸೇನ ಮತ್ತು ಪಾಂಡವರ ಸೈನ್ಯದೊಡನೆ ಯುದ್ಧಮಾಡಿದುದು

ಸಂಜಯನು ಧೃತರಾಷ್ಟ್ರನಿಗೆ ಮುಂದಿನ ವೃತ್ತಾಂತವನ್ನು ಹೇಳಲು ಉಪಕ್ರಮಿಸುತ್ತಾನೆ :

"ಮಹಾರಾಜ! ನಿನ್ನ ಪಕ್ಷದಲ್ಲಿ ರಾಕ್ಷಸನ ಉಪಟಳದಿಂದ ದೊಡ್ಡ ಗೋಳಾಟವಾಗುತ್ತಿರಲಾಗಿ, ದುರ್ಯೋಧನರಾಜನು ಗಾಂಗೇಯನ ಬಳಿಗೆ ಹೋಗಿ ಅಭಿವಾದನಮಾಡಿ ವಿನಯಪೂರ್ವಕವಾಗಿ ನಡೆದುದೆಲ್ಲವನ್ನೂ ಅವನಿಗೆ ಯಥಾನುಕ್ರಮವಾಗಿ ಹೇಳಲು ಉಪಕ್ರಮಿಸಿದನು. ಬಾರಿ ಬಾರಿಗೂ ನಿಟ್ಟುಸಿರುಬಿಡುತ್ತಾ ದುರ್ಧರ್ಷನಾದ ದುರ್ಯೋಧನನು ಘಟೋತ್ಕಚನಿಗೆ ಲಭಿಸಿದ ವಿಜಯವನ್ನೂ, ತನಗೆ ಉಂಟಾದ ಪರಾಭವವನ್ನೂ ವಿವರಿಸಿ ಹೇಳಿದನು. ಅನಂತರ ಕುರುಪಿತಾಮಹನಾದ ಭೀಷ್ಮನನ್ನು ಕುರಿತು ಇನ್ನೂ ಕೆಲವು ಮಾತುಗಳನ್ನು ಹೇಳಿದನು :

"ಪ್ರಭುವೇ! ಯಾವ ರೀತಿಯಲ್ಲಿ ನಮ್ಮ ಶತ್ರುಗಳಾದ ಪಾಂಡವರು ವಾಸುದೇವನ ಆಶ್ರಯವನ್ನು ಪಡೆದು ಯುದ್ಧಮಾಡುತ್ತಿರುವರೋ ಅದೇ ರೀತಿಯಲ್ಲಿ ನಾನೂ ಸಹ ನಿನ್ನನ್ನೇ ಆಶ್ರಯಿಸಿ, ನಿನ್ನ ಅವಲಂಬನೆಯಿಂದಲೇ ಪಾಂಡವರೊಡನೆ ಘೋರವಾದ ಯುದ್ಧವನ್ನು ಪ್ರಾರಂಭಿಸಿದೆನು. ನನ್ನೊಡನೆ ಇರುವ ಪ್ರಸಿದ್ಧವಾದ ಹನ್ನೊಂದು ಅಕ್ಷೌಹಿಣೀಸೈನ್ಯವೂ ಇಂದು ನಿನ್ನ ಅಧೀನ ದಲ್ಲಿದೆ. ನಿನ್ನ ಆಜ್ಞಾನುಸಾರವಾಗಿ ನಡೆಯಲು ಸರ್ವದಾ ಸಿದ್ಧವಾಗಿದೆ. ಮಹಾರಥನಾದ ನಿನ್ನನ್ನೇ ರಕ್ಷಕನನ್ನಾಗಿ ಆಶ್ರಯಿಸಿರುವ ಮತ್ತು ಹನ್ನೊಂದು ಅಕ್ಷೌಹಿಣೀಸೈನ್ಯವನ್ನು ಬೆನ್ನುಹಿಂದೆ ಇಟ್ಟುಕೊಂಡಿರುವ ನಾನಿಂದು ಭೀಮಸೇನ ಪ್ರಮುಖರಾದ, ಘಟೋತ್ಕಚನನ್ನು ಆಶ್ರಯಿಸಿ ಯುದ್ಧಮಾಡುತ್ತಿದ್ದ ಪಾಂಡವರಿಂದ ಯುದ್ಧದಲ್ಲಿ ಪರಾಜಯವನ್ನು ಹೊಂದಿದೆನು. ಈ ಅಪಮಾನವು ಅಗ್ನಿಯು ಒಣಗಿದ ಕಟ್ಟಿಗೆಯನ್ನು ಸುಡುವಂತೆ ನನ್ನ ಶರೀರ ವನ್ನು ಸುಡುತ್ತಿದೆ. ಮಹಾಭಾಗ! ಅರಿಂದಮ! ನಿನ್ನ ಕೃಪೆಯಿಂದ (ಒತ್ತಾಸೆ ಯಿಂದ) ಆ ರಾಕ್ಷಸಾಧಮನನ್ನು ನಾನೇ ಸಂಹಾರಮಾಡಲು ಇಚ್ಛಿಸಿದ್ದೇನೆ. ಪಿತಾಮಹ! ನಿನ್ನ ಆಶ್ರಯವನ್ನು (ಸಹಕಾರವನ್ನು) ಪಡೆದು ಎದುರಿಸಲು ಅಸಾಧ್ಯನಾದ ರಾಕ್ಷಸನನ್ನು ನಾನೇ ಎದುರಿಸಲು ನಿಶ್ಚಯಿಸಿದ್ದೇನೆ. ನನ್ನ ಮನೋರಥವನ್ನು ನಡೆಸಿಕೊಡುವುದು ನಿನಗೆ ಸಮುಚಿತವಾಗಿದೆ."

ಭರತಸತ್ತಮ! ದುರ್ಯೋಧನರಾಜನ ಮಾತನ್ನು ಕೇಳಿ ಶಾಂತನುವಿನ ಮಗನಾದ ಭೀಷ್ಮನು ದುರ್ಯೋಧನನನ್ನು ಕುರಿತು ಹೇಳಿದನು :

"ಕೌರವ! ನಾನು ಈಗ ಯಾವ ಮಾತನ್ನು ಹೇಳುತ್ತೇನೆಯೋ

ಅದನ್ನು ನೀನು ಸಾವಧಾನದಿಂದ ಕೇಳು ಮತ್ತು ನಾನು ನಿನಗೆ ಯಾವ ರೀತಿ ನಡೆದುಕೊಳ್ಳಬೇಕೆಂದು ಹೇಳುತ್ತೇನೆಯೋ ಅದೇ ರೀತಿಯಲ್ಲಿ ನೀನು ನಡೆದುಕೊಳ್ಳಬೇಕು.

**ಆತ್ಮಾ ರಕ್ಷ್ಯೋ ರಣೇ ತಾತ ಸರ್ವಾವಸ್ಥಾಸ್ವರಿಂದಮ ।**
**ಧರ್ಮರಾಜೇನ ಸಂಗ್ರಾಮಸ್ತ್ವಯಾ ಕಾರ್ಯಃ ಸದಾನಘ ॥೧೧॥**

**ಅರ್ಜುನೇನ ಯಮಾಭ್ಯಾಂ ವಾ ಭೀಮಸೇನೇನ ವಾ ಪುನಃ ।**
**ರಾಜಧರ್ಮಂ ಪುರಸ್ಕೃತ್ಯ ರಾಜಾ ರಾಜಾನಮಾರ್ಛತಿ ॥೧೨॥**

(ದುರ್ಯೋಧನನು ಘಟೋತ್ಕಚನೊಡನೆ ನೇರವಾಗಿ ಯುದ್ಧ ಮಾಡಲು ಅಭಿಲಷಿಸಿದ್ದಕ್ಕಾಗಿ ಭೀಷ್ಮನು ಈ ಮಾತನ್ನು ಹೇಳುತ್ತಿದ್ದಾನೆ.) ಅರಿಂದಮನೇ! ಯಾವುದೇ ಪರಿಸ್ಥಿತಿಯಲ್ಲಿಯೂ ರಾಜನಾದವನು ತನ್ನನ್ನು ತಾನು ರಕ್ಷಿಸಿಕೊಳ್ಳಲೇಬೇಕು. ನೀನು ಯಾವಾಗಲೂ ಧರ್ಮರಾಜನೊಡ ನೆಯೇ ಯುದ್ಧಮಾಡಬೇಕು. ರಾಜಧರ್ಮವನ್ನು ಅನುಸರಿಸಿ ನೀನು ಭೀಮಾರ್ಜುನ-ನಕುಲ-ಸಹದೇವರೊಡನೆಯೂ ಯುದ್ಧಮಾಡಬಹುದು. ಯಾವಾಗಲೂ ರಾಜರಾದವರು ರಾಜರೊಡನೆಯೇ ಯುದ್ಧ ಮಾಡುತ್ತಾರೆ. ದುರಾತ್ಮನಾದ ಘಟೋತ್ಕಚನೊಡನೆ ನೀನು ನೇರವಾಗಿ ಯುದ್ಧಮಾಡಬಾರದು. ಇದು ರಾಜಧರ್ಮ. ನಾನು, ದ್ರೋಣರು, ಕೃಪರು, ಅಶ್ವತ್ಥಾಮಾ, ಸಾತ್ವತವಂಶೀಯನಾದ ಕೃತವರ್ಮಾ, ಶಲ್ಯ, ಭೂರಿಶ್ರವಸ, ಮಹಾರಥನಾದ ವಿಕರ್ಣ, ದುಃಶಾಸನಪ್ರಮುಖರಾದ ನಿನ್ನ ಸಹೋದರರು– ಎಲ್ಲರೂ ಸೇರಿ ನಿನ್ನ ಸಲುವಾಗಿ ಮಹಾಬಲನಾದ ರಾಕ್ಷಸನೊಡನೆ ಯುದ್ಧ ಮಾಡುತ್ತೇವೆ. ಭಯಂಕರನಾದ ರಾಕ್ಷಸೇಂದ್ರನ ವಿಷಯದಲ್ಲಿ ನಿನಗೆ ಅತಿ ಹೆಚ್ಚಿನ ಕೋಪವಿರುವುದೇ ಆದರೆ ದುರ್ಮತಿಯಾದ ಆ ಘಟೋತ್ಕಚನೊಡನೆ ಯುದ್ಧಮಾಡಲು ಈ ಭಗದತ್ತನಾದರೂ ಹೋಗಲಿ. ಮಹೀಪಾಲನಾದ ಈ ಭಗದತ್ತನು ಯುದ್ಧದಲ್ಲಿ ಪುರಂದರನಿಗೆ ಸಮನಾಗಿ ಯುದ್ಧ ಮಾಡುವವನಾಗಿದ್ದಾನೆ."

ಮಹಾರಾಜ! ವಾಕ್ಯವಿಶಾರದನಾದ ಭೀಷ್ಮನು ದುರ್ಯೋಧನನಿಗೆ ಹೀಗೆ ಹೇಳಿ ಸಮಾಧಾನಪಡಿಸಿ ಪಾರ್ಥಿವೇಂದ್ರನಾದ ದುರ್ಯೋಧನನ ಸಮಕ್ಷದಲ್ಲಿಯೇ ರಾಜನಾದ ಭಗದತ್ತನಿಗೆ ಹೇಳಿದನು :

"ಮಹಾರಾಜ ಭಗದತ್ತ! ಈಗಲೇ ಶೀಘ್ರವಾಗಿ ಘಟೋತ್ಕಚನಿರುವೆಡೆಗೆ ಹೋಗು. ಶತ್ರುಗಳ ಕಡೆಯ ಸರ್ವಧನುಷ್ಮಂತರೂ ನೋಡುತ್ತಿರುವಂತೆಯೇ ಯುದ್ಧದುರ್ಮದನಾದ ಹೈಡಿಂಬನನ್ನು ಎದುರಿಸು. ಇಂದ್ರನು ತಾರಕಾಸುರನನ್ನು ಎದುರಿಸಿ ಯುದ್ಧಮಾಡಿದಂತೆಯೇ ನೀನಿಂದು–ಕ್ರೂರಕರ್ಮಿಯಾದ ರಾಕ್ಷಸನನ್ನು ಎದುರಿಸಿ ಯುದ್ಧಮಾಡಬೇಕಾಗಿದೆ. ಪರಂತಪ! ನೀನೇನೂ ಸಾಮಾನ್ಯನಲ್ಲ. ನಿನ್ನಲ್ಲಿ ಅನೇಕಾನೇಕ ದಿವ್ಯಾಸ್ತ್ರಗಳೂ ಇವೆ. ತಕ್ಕುದಾದ ಪರಾಕ್ರಮವೂ ಇದೆ. ಈ ಹಿಂದೆ ನೀನು ಅನೇಕ ದೇವತೆಗಳನ್ನೂ ಎದುರಿಸಿ ಯುದ್ಧಮಾಡಿರುವೆ. ಆದುದರಿಂದ ಇಂದಿನ ಯುದ್ಧದಲ್ಲಿ ಘಟೋತ್ಕಚನಿಗೆ ಸರಿಯಾದ ಪ್ರತಿಸ್ಪರ್ಧಿಯು ನೀನೇ ಆಗಿರುವೆ. ಸ್ವಬಲವನ್ನು ವೃದ್ಧಿಸಿಕೊಂಡು ನೀನೀಗಲೇ ಹೋಗಿ ರಾಕ್ಷಸಪುಂಗವನನ್ನು ಸಂಹರಿಸು."

ಮಹಾರಾಜ! ಕುರುಸೈನ್ಯದ ದಂಡನಾಯಕನಾದ ಭೀಷ್ಮನ ಮಾತನ್ನು ಕೇಳಿ ಭಗದತ್ತನು ಸಿಂಹನಾದಮಾಡುತ್ತಾ ಶತ್ರುಗಳನ್ನು ಎದುರಿಸಲು ಶೀಘ್ರವಾಗಿ ಹೊರಟುಹೋದನು. ಮೇಘದಂತೆ ಗರ್ಜನೆಮಾಡುತ್ತಾ ಸುಪ್ರತೀಕವೆಂಬ ಆನೆಯ ಮೇಲೆ ಬಹಳ ವೇಗವಾಗಿ ಬರುತ್ತಿದ್ದ ಭಗದತ್ತನನ್ನು ನೋಡಿ ಕ್ರುದ್ಧರಾದ ಪಾಂಡವಮಹಾರಥರು ಅವನನ್ನು ಎದುರಿಸಲು ಸಿದ್ಧರಾದರು. ಭೀಮಸೇನ, ಅಭಿಮನ್ಯು, ಘಟೋತ್ಕಚರಾಕ್ಷಸ, ದ್ರೌಪದಿಯ ಐವರು ಮಕ್ಕಳು, ಸತ್ಯಧೃತಿ, ಕ್ಷತ್ರದೇವ, ಚೇದಿರಾಜನಾದ ಧೃಷ್ಟಕೇತು, ವಸುದಾನ ಮತ್ತು ದಶಾರ್ಣರಾಜ–ಈ ಎಲ್ಲರೂ ಕ್ರೋಧಾವಿಷ್ಟರಾಗಿ ಭಗದತ್ತನನ್ನು ಎದುರಿಸಲು ಸಿದ್ಧರಾಗಿ ನಿಂತರು.

ಭಗದತ್ತನೂ ಸಹ ಸುಪ್ರತೀಕವೆಂಬ ಆನೆಯ ಮೇಲೆ ಕುಳಿತು ಪಾಂಡವ ಯೋಧರ ಮೇಲೆ ದಾಳಿಮಾಡಲು ಉಪಕ್ರಮಿಸಿದನು. ಅನಂತರ ಘೋರ ರೂಪವಾದ, ಭಯಾನಕವಾದ ಯಮರಾಜ್ಯವಿವರ್ಧಕವಾದ ಯುದ್ಧವು ಪಾಂಡವಯೋಧರಿಗೂ ಮತ್ತು ಭಗದತ್ತನಿಗೂ ಪ್ರಾರಂಭವಾಯಿತು.

ಮಹಾರಥರು ಪ್ರಯೋಗಿಸಿದ ಭಯಂಕರವಾದ ವೇಗದಿಂದ ಕೂಡಿದ್ದ, ಚೆನ್ನಾಗಿ ಹರಿತಮಾಡಲ್ಪಟ್ಟಿದ್ದ ಬಾಣಗಳು ಆನೆಗಳ ಮೇಲೂ, ರಥಗಳ ಮೇಲೂ ಬಿದ್ದುವು. ಗಜಾರೋಹಿಗಳಿಂದ ಪ್ರೇರಿತವಾದ ಮದಿಸಿದ ಮಹಾ ಗಜಗಳು ಪರಸ್ಪರ ಸಂಧಿಸಿ ನಿರ್ಭೀತಿಯಿಂದ ಕಾದಾಡಿದುವು. ಮದದಿಂದ

ವಿವೇಚನಾರಹಿತವಾಗಿದ್ದ, ರೋಷದಿಂದ ಕೂಡಿದ್ದ ಆನೆಗಳು ಪರಸ್ಪರವಾಗಿ ಸಂಘರ್ಷಿಸಿ ಒನಕೆಯಂತಿದ್ದ ದಂತಗಳಿಂದ ಪರಸ್ಪರವಾಗಿ ಸೀಳಿಹಾಕುತ್ತಿದ್ದುವು. ಚಾಮರಗಳಿಂದ ಭೂಷಿತವಾಗಿದ್ದ, ಪ್ರಾಸಹಸ್ತರಾದ ಸವಾರರನ್ನೊಳಗೊಂಡ ಕುದುರೆಗಳು ಅಶ್ವಾರೋಹಿಗಳಿಂದ ಪ್ರೇರಿಸಲ್ಪಟ್ಟವುಗಳಾಗಿ ಶತ್ರುಪಕ್ಷದ ಅಶ್ವಗಳ ಮೇಲೆ ರಭಸದಿಂದ ಬೀಳುತ್ತಿದ್ದುವು. ಪದಾತಿಗಳೂ ಕೂಡ ಶತ್ರುಪಕ್ಷದ ಪದಾತಿಸಮೂಹಗಳಿಂದ ಶಕ್ತಿ-ತೋಮರಾದ್ಯಾಯುಧಗಳಿಂದ ಪ್ರಹೃತರಾಗಿ ಸಾವಿರಾರು ಸಂಖ್ಯೆಯಲ್ಲಿ ಪ್ರಾಣತೊರೆದು ಭೂಮಿಯಲ್ಲಿ ಬಿದ್ದಿದ್ದರು. ರಥಿಗಳೂ ಸಹ ಶತ್ರುಪಕ್ಷದ ರಥಗಳ ಮೇಲೆ ದಾಳಿ ಮಾಡುತ್ತಾ ಕರ್ಣಿ, ನಾಲೀಕ ಮತ್ತು ಬಾಣಗಳಿಂದ ಅವರನ್ನು ಸಂಹರಿಸಿ ಸಿಂಹನಾದಗಳನ್ನು ಮಾಡುತ್ತಿದ್ದರು. ಈ ರೀತಿಯಲ್ಲಿ ಸರ್ವತ್ರ ರೋಮಾಂಚಕರವಾದ ಸಂಗ್ರಾಮವು ನಡೆಯುತ್ತಿರಲಾಗಿ ಮಹಾಧನುಷ್ಮಂತನಾದ ಭಗದತ್ತನು ಭೀಮಸೇನನ ಮೇಲೆ ದಾಳಿಮಾಡಿದನು. ಭಗದತ್ತನು ಆನೆಯ ಮೇಲೆ ಕುಳಿತಿದ್ದನು. ಆ ಆನೆಯ ಕುಂಭಸ್ಥಳದಿಂದ ಪರ್ವತದಿಂದ ಝರಿಗಳು ಪ್ರವಹಿಸುವಂತೆ–ಏಳು ಕಡೆಗಳಲ್ಲಿ ಮದೋದಕವು ಸುರಿಯುತ್ತಿದ್ದಿತು. ಇಂದ್ರನು ಐರಾವತವೆಂಬ ಆನೆಯ ಮೇಲೆ ಕುಳಿತು ಮಳೆಯನ್ನು ಸುರಿಸುವಂತೆ–ಭಗದತ್ತನು ಸುಪ್ರತೀಕವೆಂಬ ಮದಗಜದ ಮೇಲೆ ಕುಳಿತು ಶತ್ರುಗಳ ಮೇಲೆ ಮಳೆಯ ರೂಪದಲ್ಲಿ ಸಾವಿರಾರು ಬಾಣಗಳನ್ನು ಸುರಿಸಿದನು. ವರ್ಷರ್ತುವಿನಲ್ಲಿ ಮೇಘವು ಪರ್ವತವನ್ನು ಜಲಧಾರೆಗಳಿಂದ ಮುಚ್ಚಿಬಿಡುವಂತೆ–ಭಗದತ್ತನು ಭೀಮನನ್ನು ಧಾರಾರೂಪವಾದ ಬಾಣಗಳಿಂದ ಪ್ರಹರಿಸಿದನು. ಅದರಿಂದ ಸಂಕ್ರುದ್ಧನಾದ ಮಹಾಧನುಷ್ಮಂತನಾದ ಭೀಮಸೇನನು ಆನೆಯ ಕಾಲುಗಳನ್ನು ರಕ್ಷಿಸುತ್ತಿದ್ದ ನೂರಾರು ಯೋಧರನ್ನು ಬಾಣಗಳ ಮಳೆಗರೆಯುವಿಕೆಯಿಂದ ಸಂಹರಿಸಿದನು. ಪಾದರಕ್ಷಕರೆಲ್ಲರೂ ಹತರಾದುದನ್ನು ಕಂಡು ಕ್ರುದ್ಧನಾದ ಪ್ರತಾಪವಂತನಾದ ಭಗದತ್ತನು ತನ್ನ ಆನೆಯನ್ನೇ ಭೀಮಸೇನನ ರಥದ ಮೇಲೆ ನುಗ್ಗಿಸಿಬಿಟ್ಟನು. ಶಿಂಜಿನಿಯಿಂದ ಚ್ಯುತವಾದ ಬಾಣವು ಹೋಗುವಷ್ಟೇ ವೇಗದಲ್ಲಿ ಭಗದತ್ತನಿಂದ ಚೋದಿತವಾದ ಆ ಮದಗಜವು ಅರಿಂದಮನಾದ ಭೀಮಸೇನನ ಕಡೆಗೆ ನುಗ್ಗಿತು. ಮದಗಜವು ರಭಸದಿಂದ ಬರುತ್ತಿರುವುದನ್ನು ಕಂಡು ಕೇಕಯರಾಜಕುಮಾರರು, ಅಭಿಮನ್ಯು,

ದ್ರೌಪದಿಯಮಕ್ಕಳು, ಶೂರನಾದ ದಶಾರ್ಣರಾಜ, ಕ್ಷತ್ರದೇವ, ಚೇದಿರಾಜನಾದ ಧೃಷ್ಟಕೇತು ಮತ್ತು ಚಿತ್ರಕೇತು–ಇವರೆಲ್ಲರೂ ಕ್ರುದ್ಧರಾಗಿ ಭೀಮಸೇನನನ್ನೇ ಮುಂದೆ ಮಾಡಿಕೊಂಡು ಆ ಆನೆಯೊಂದನ್ನೇ ಸುತ್ತುವರಿದು ನಿಂತು ಅದರ ಮೇಲೆ ಬಾಣಗಳನ್ನು ಬಿಡಲು ಉಪಕ್ರಮಿಸಿದರು. ಅನೇಕ ವೀರಯೋಧರಿಂದ ಪ್ರಹೃತವಾದ ಆ ಆನೆಯು ಬಾಣಗಳ ಕ್ಷತದಿಂದ ಹೊರಹೊಮ್ಮಿದ ರಕ್ತವುಳ್ಳದ್ದಾಗಿ ಗೈರಿಕಾದಿ ಧಾತುಗಳಿಂದ ಚಿತ್ರಿತವಾಗಿರುವ ಪರ್ವತರಾಜನಂತೆಯೇ ಕಾಣುತ್ತಿದ್ದಿತು.

ಆ ಮಧ್ಯದಲ್ಲಿ ದಶಾರ್ಣಾಧಿಪತಿಯೂ ಸಹ ಪರ್ವತೋಪಮವಾಗಿದ್ದ ಆನೆಯ ಮೇಲೆ ಕುಳಿತು ಭಗದತ್ತನ ಆನೆಯ ಕಡೆಗೆ ಧಾವಿಸಿದನು. ಮೇಲೆ ಬೀಳಲು ಬರುತ್ತಿದ್ದ ದಶಾರ್ಣಾಧಿಪತಿಯ ಆನೆಯನ್ನು ಭಗದತ್ತನ ಸುಪ್ರತೀಕವು–ತೀರವು ಸಮುದ್ರವನ್ನು ಎಲ್ಲೆಮೀರದ ರೀತಿಯಲ್ಲಿ ನಿರೋಧಿಸುವಂತೆ–ತಡೆದುಬಿಟ್ಟಿತು. ಮಹಾತ್ಮನಾದ ದಶಾರ್ಣನ ಗಜರಾಜನನ್ನು ತಡೆದುದಕ್ಕಾಗಿ ಪಾಂಡವಸೈನಿಕರೂ ಸಹ ಭಗದತ್ತನ ಸುಪ್ರತೀಕವನ್ನು 'ಸಾಧು-ಸಾಧು' ಎಂದು ಪ್ರಶಂಸೆಮಾಡಿದರು. ಅನಂತರ ಕ್ರುದ್ಧನಾದ ಭಗದತ್ತನು ತನ್ನ ಮುಂದೆ ಚಲಿಸದೇ ನಿಂತಿದ್ದ ದಶಾರ್ಣರಾಜನ ಆನೆಯ ಮುಖಭಾಗವನ್ನು ಹದಿನಾಲ್ಕು ತೋಮರಗಳಿಂದ ಪ್ರಹರಿಸಿದನು. ಹಾವುಗಳು ಹುತ್ತವನ್ನು–ಸೇರಿಕೊಳ್ಳುವಂತೆ ಭಗದತ್ತನು ಬಿಟ್ಟ ಹದಿನಾಲ್ಕು ತೋಮರಗಳೂ ಸುವರ್ಣಮಯವಾದ ಶ್ರೇಷ್ಠವಾದ ಆನೆಯ ಕವಚವನ್ನು ಭೇದಿಸಿಕೊಂಡು ಶರೀರದ ಒಳಹೊಕ್ಕುವು. ತೋಮರಗಳು ಆನೆಯ ಶರೀರದಲ್ಲಿ ಬಹಳ ಆಳಕ್ಕೆ ಹೊಕ್ಕಿದ್ದರಿಂದ ದಶಾರ್ಣರಾಜನ ಆನೆಯು ಬಹಳ ಯಾತನೆಯನ್ನನುಭವಿಸಿತು. ಬಿರುಗಾಳಿಯು ವೃಕ್ಷಗಳನ್ನು ಕಿತ್ತೊಗೆಯುವಂತೆ–ತನ್ನ ಕಡೆಯ ಸೈನಿಕರನ್ನೇ ಸಮ್ಮರ್ದಿಸುತ್ತಾ ದಶಾರ್ಣಾಧಿಪತಿಯ ಆನೆಯು ಭಯಂಕರವಾಗಿ ಚೀತ್ಕಾರಮಾಡುತ್ತಾ ಓಡಿಹೋಯಿತು. ತಮ್ಮ ಕಡೆಯ ಆನೆಯು ಪರಾಜಯಗೊಂಡರೂ ಪಾಂಡವರ ಕಡೆಯ ಮಹಾರಥರು ವಿಚಲಿತರಾಗದೇ ಸಿಂಹನಾದಮಾಡಿ ಪುನಃ ಯುದ್ಧಮಾಡಲು ಸಿದ್ಧರಾಗಿ ನಿಂತರು. ಭೀಮನನ್ನು ಮುಂದೆಮಾಡಿಕೊಂಡು ನಾನಾವಿಧವಾದ, ಬಾಣಗಳನ್ನೂ, ಅನೇಕವಿಧವಾದ ಅಸ್ತ್ರಗಳನ್ನೂ ವಿಧ-ವಿಧವಾದ ಆಯುಧಗಳನ್ನೂ ಪ್ರಯೋಗಿಸುತ್ತಾ ಭಗದತ್ತನನ್ನು ಮುತ್ತಿದರು.

ಸಂಕ್ರುದ್ಧರಾಗಿದ್ದ, ಅಸಹನಶೀಲರಾಗಿದ್ದ ಪಾಂಡವಯೋಧರು ತನ್ನ ಮೇಲೆ ಬೀಳುತ್ತಿರುವುದನ್ನು ನೋಡಿ ಮತ್ತು ಅವರ ಘೋರವಾದ ಸಿಂಹಗರ್ಜನೆಗಳನ್ನೂ ಕೇಳಿ ಭಯವೆಂಬುದನ್ನು ತಿಳಿಯದಿದ್ದ ಮಹಾಧನುರ್ಧರನಾದ ಭಗದತ್ತನು ಕುಪಿತನಾಗಿ ಪುನಃ ತನ್ನ ಆನೆಯನ್ನೇ ಪಾಂಡವಯೋಧರ ಮೇಲೆ ನುಗ್ಗಿಸಿದನು. ಅಂಕುಶದಿಂದ ಚುಚ್ಚಲ್ಪಟ್ಟ ಮತ್ತು ಕಾಲಿನ ಅಂಗುಷ್ಠಗಳಿಂದ ಪ್ರೇರಿಸಲ್ಪಟ್ಟ ಭಗದತ್ತನ ಆ ಶ್ರೇಷ್ಠವಾದ ಮಹಾಗಜವು ಸಂವರ್ತಕ (ಪ್ರಲಯ ಕಾಲದ) ಮಹಾಗ್ನಿಯಂತೆ ಆ ಕ್ಷಣದಲ್ಲಿ ಮಹಾಭಯಂಕರವಾಗಿ ಪರಿಣಮಿಸಿತು. ರಥಗಳ ಸಮೂಹಗಳನ್ನೂ (ನೂರಾರು ಸಾವಿರಾರು ಸಂಖ್ಯೆಯಲ್ಲಿ) ಆನೆಗಳನ್ನೂ, ಸವಾರರಿಂದ ಕೂಡಿದ ಕುದುರೆಗಳನ್ನೂ, ಪದಾತಿಗಳನ್ನೂ ಸುಸಂಕ್ರುದ್ಧವಾದ ಆ ಮಹಾಗಜವು ಇಲ್ಲಿಂದಲ್ಲಿಗೂ ಅಲ್ಲಿಂದಿಲ್ಲಿಗೂ ರಭಸದಿಂದ ಓಡಾಡುತ್ತಾ ಧ್ವಂಸಮಾಡಿಬಿಟ್ಟಿತು. ಈ ರೀತಿಯಲ್ಲಿ ಆ ಮದಗಜದಿಂದ ಮರ್ದಿಸಲ್ಪಟ್ಟ ಪಾಂಡವರ ಮಹಾಸೈನ್ಯವು ಬೆಂಕಿಯ ಮೇಲಿಟ್ಟ ಚರ್ಮದಂತೆ ಸಂಕೋಚಗೊಂಡಿತು. (ಪಾಂಡವರ ಸೇನಾಸಂಖ್ಯೆಯು ಬಹಳವಾಗಿ ಕುಗ್ಗಿತು.) ಧೀಮಂತನಾದ ಭಗದತ್ತನಿಂದ ತನ್ನ ಅಪಾರಸೈನ್ಯವು ಭಗ್ನವಾದುದನ್ನು ನೋಡಿ ಸಂಕ್ರುದ್ಧನಾದ ಘಟೋತ್ಕಚನು ಭಗದತ್ತನನ್ನು ಆಕ್ರಮಿಸಿದನು. ಆ ಸಮಯದಲ್ಲಿ ಘಟೋತ್ಕಚನು ಬಹಳ ಭಯಂಕರವಾದ ರೂಪವನ್ನು ತಾಳಿ ಕೋಪದಿಂದ ಪ್ರಜ್ವಲಿಸುತ್ತಿರುವನೋ ಎಂಬಂತೆ–ವಿಕಟವೂ, ಕ್ರೂರವೂ ಆದ ಆಕಾರವುಳ್ಳವನಾದನು. ಅವನ ಮುಖ ಮತ್ತು ಕಣ್ಣುಗಳು ಪ್ರದೀಪ್ತವಾಗಿದ್ದುವು. ಮಹಾಬಲನಾದ ಘಟೋತ್ಕಚನು ಪರ್ವತವನ್ನಾದರೂ ಸೀಳಲು ಸಮರ್ಥವಾದ ವಿಮಲವಾದ ಶೂಲವೊಂದನ್ನು ಎತ್ತಿಕೊಂಡು ಭಗದತ್ತನ ಮಹಾಗಜವನ್ನು ಕೊಲ್ಲುವ ಅಪೇಕ್ಷೆಯಿಂದ ಒಡನೆಯೇ ಆನೆಯ ಮೇಲೆ ರಭಸದಿಂದ ಎಸೆದನು. ಆ ಶೂಲವು ಅಗ್ನಿಯ ಕಿಡಿಗಳ ಮಾಲೆಗಳಿಂದ ಸುತ್ತಲೂ ಆವೃತವಾಗಿದ್ದಿತು. ತನ್ನ ಕಡೆಗೆ ಬಹಳ ರಭಸದಿಂದ ಬರುತ್ತಿರುವ ಶೂಲವನ್ನು ಕಂಡು ಭಗದತ್ತನು ಸುಂದರವಾಗಿಯೂ, ತೀಕ್ಷ್ಣವಾಗಿಯೂ, ಸುದಾರುಣವಾಗಿಯೂ ಇದ್ದ ಅರ್ಧಚಂದ್ರವೆಂಬ ಬಾಣವನ್ನು ಪ್ರಯೋಗಿಸಿದನು.

ವೇಗವಂತನಾದ ಭಗದತ್ತನು ಅರ್ಧಚಂದ್ರವೆಂಬ ಬಾಣದಿಂದ

ಘಟೋತ್ಕಚನು ಬಿಟ್ಟ ಶೂಲವನ್ನು ಎರಡಾಗಿ ಕತ್ತರಿಸಿಬಿಟ್ಟನು. ಸುವರ್ಣ ಭೂಷಿತವಾಗಿದ್ದ ಆ ಶೂಲವು ಎರಡು ಭಾಗಗಳಾಗಿ ಕತ್ತರಿಸಲ್ಪಟ್ಟು–ಶಕ್ರ ನಿಂದ ಬಿಡಲ್ಪಟ್ಟು ಆಕಾಶದಲ್ಲಿ ಭ್ರಷ್ಟವಾಗಿ ಹೋದ (ಭಿನ್ನವಾಗಿ ಹೋದ) ವಜ್ರಾಯುಧದಂತೆಯೇ ಕೆಳಕ್ಕೆ ಬಿದ್ದಿತು. ರಾಕ್ಷಸನು ಬಿಟ್ಟ ಶೂಲವು ಎರಡು ತುಂಡುಗಳಾಗಿ ಮಾಡಲ್ಪಟ್ಟು ಕೆಳಕ್ಕೆ ಬಿದ್ದುದನ್ನು ನೋಡಿ ಭಗದತ್ತನು ಅಗ್ನಿಯ ಜ್ವಾಲೆಯಂತೆ ಪ್ರಜ್ವಲಿಸುತ್ತಿದ್ದ ಸುವರ್ಣಮಯವಾದ ದಂಡದಿಂದ ಕೂಡಿದ್ದ ಮಹಾಶಕ್ತ್ಯಾಯುಧವನ್ನು ಕೈಗೆ ತೆಗೆದುಕೊಂಡು ನಿಲ್ಲುನಿಲ್ಲೆಂದು ಕೂಗಿಹೇಳುತ್ತಾ ರಾಕ್ಷಸನ ಕಡೆಗೆ ರಭಸದಿಂದ ಎಸೆದನು. ಆಕಾಶದಲ್ಲಿನ ಸಿಡಿಲಿನಂತೆ ಪ್ರಕಾಶಮಾನವಾಗಿದ್ದ ಶಕ್ತ್ಯಾಯುಧವು ತನ್ನ ಮೇಲೆ ರಭಸದಿಂದ ಬೀಳುತ್ತಿರುವುದನ್ನು ಕಂಡು ರಾಕ್ಷಸನು ಬಹುಬೇಗ ಆಕಾಶಕ್ಕೆ ಹಾರಿ ರಭಸದಿಂದ ಬರುತ್ತಿದ್ದ ಶಕ್ತ್ಯಾಯುಧವನ್ನೇ ಕೈಯಲ್ಲಿ ಹಿಡಿದುಬಿಟ್ಟನು ಮತ್ತು ಗಟ್ಟಿಯಾಗಿ ಸಿಂಹನಾದವನ್ನೂ ಮಾಡಿದನು. ಇಷ್ಟು ಮಾತ್ರವಲ್ಲ. ಎಲ್ಲ ರಾಜರು ನೋಡುತ್ತಿದ್ದಂತೆಯೇ ಘೋರವಾಗಿದ್ದ ಆ ಶಕ್ತ್ಯಾಯುಧವನ್ನು ತನ್ನ ಮಂಡಿಯ ಮೇಲಿಟ್ಟುಕೊಂಡು ಬಗ್ಗಿಸಿ ಮುರಿದುಹಾಕಿದನು. ನಮಗೆಲ್ಲರಿಗೂ ಆ ಕಾರ್ಯವು ಅತ್ಯದ್ಭುತವಾಗಿ ಕಂಡುಬಂದಿತು. ಬಲಿಷ್ಠನಾದ ರಾಕ್ಷಸನ ಸಾಹಸಪೂರ್ಣವಾದ ಆ ಕಾರ್ಯವನ್ನು ಕಂಡು ಅಂತರಿಕ್ಷದಲ್ಲಿ ಪ್ರೇಕ್ಷಕರಾಗಿ ಬಂದಿದ್ದ ದೇವರ್ಷಿ-ಗಂಧರ್ವರೂ ವಿಸ್ಮಿತರಾದರು. ಭೀಮಸೇನಪ್ರಮುಖರಾದ ಪಾಂಡವರೂ ಸಹ **'ಸಾಧು–ಸಾಧು'** ಎಂಬ ಪ್ರಶಂಸಾವಚನದ ಘೋಷಣೆಗಳಿಂದಲೂ ಮತ್ತು ಸಿಂಹನಾದಗಳಿಂದಲೂ ಪೃಥ್ವಿಯನ್ನೇ ಪ್ರತಿಧ್ವನಿಸಿದರು. ಪ್ರಹೃಷ್ಟರಾದ ಮಹಾತ್ಮರ ಸಿಂಹಗರ್ಜನೆಯನ್ನು ಕೇಳಿ ಮಹಾಧನುಷ್ಮಂತನಾದ ಪ್ರತಾಪಶಾಲಿಯಾದ ಭಗದತ್ತನ ಸಹನೆಯು ಮೀರಿತು. ಅವರ ಸಿಂಹ ಗರ್ಜನೆಯು ಭಗದತ್ತನಿಗೆ ಅತ್ಯಂತವಾಗಿ ಅಸಹನೆಯನ್ನುಂಟುಮಾಡಿತು. ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಪ್ರಭೆಯಿಂದ ಕೂಡಿದ್ದ ದೊಡ್ಡದಾದ ಧನುಸ್ಸನ್ನು ಟೇಂಕರಿಸಿ ಭಗದತ್ತನು ಪಾಂಡವಮಹಾರಥರನ್ನು ವೇಗವಾಗಿ ತಡೆದನು. ಅಗ್ನಿಯಂತೆ ಪ್ರಕಾಶಮಾನವಾಗಿದ್ದ, ನಿರ್ಮಲವಾಗಿದ್ದ, ತೀಕ್ಷ್ಣ ವಾಗಿದ್ದ ನಾರಾಚಗಳೆಂಬ ಬಾಣಗಳನ್ನು ಬಿಡುತ್ತಿದ್ದ ಭಗದತ್ತನು ಭೀಮ ಸೇನನನ್ನು ಒಂದು ಬಾಣದಿಂದಲೂ, ಘಟೋತ್ಕಚನನ್ನು ಒಂಬತ್ತು ಬಾಣ

ಗಳಿಂದಲೂ ಪ್ರಹರಿಸಿದನು. ಅಭಿಮನ್ಯುವನ್ನು ಮೂರು ಬಾಣಗಳಿಂದಲೂ, ಮಿಕ್ಕ ಐವರು ಕೇಕಯರಾಜಕುಮಾರರನ್ನು ಐದು ಬಾಣಗಳಿಂದಲೂ ಪ್ರಹರಿಸಿದನು. ಭಗದತ್ತನು ಶಿಂಜಿನಿಯನ್ನು ಕರ್ಣಪರ್ಯಂತವಾಗಿ ಸೆಳೆದು ಬಗ್ಗಿದ ಗಿಣ್ಣೆದ್ದ ಬಾಣದಿಂದ ಕ್ಷತ್ರದೇವನ ಬಲತೋಳನ್ನು ಭೇದಿಸಿಬಿಟ್ಟನು. ಬಾಣಸಹಿತವಾದ ಉತ್ತಮೋತ್ತಮವಾದ ಅವನ ಧನುಸ್ಸು ಒಡನೆಯೇ ಕೆಳಕ್ಕೆ ಬಿದ್ದಿತು. ಕ್ಷತ್ರದೇವನ ತೋಳನ್ನು ಭೇದಿಸಿದ ನಂತರ–ಭಗದತ್ತನು ಐವರು ದ್ರೌಪದಿಯ ಮಕ್ಕಳನ್ನು ಐದು ಬಾಣಗಳಿಂದ ಪ್ರಹರಿಸಿ ಕ್ರೋಧಾವೇಶದಿಂದ ಭೀಮಸೇನನ ರಥಕ್ಕೆ ಕಟ್ಟಿದ್ದ ಕುದುರೆಗಳನ್ನೂ ಸಂಹರಿಸಿದನು. ಭೀಮನ ಸಿಂಹದ ಚಿಹ್ನೆಯಿದ್ದ ಧ್ವಜವನ್ನು ಮೂರು ಬಾಣಗಳಿಂದ ಕತ್ತರಿಸಿದನು. ಸಾರಥಿಯಾದ ವಿಶೋಕನ ಮೇಲೆ ಭಗದತ್ತನು ಬಿಟ್ಟ ಮೂರು ಬಾಣಗಳೂ ಅವನ ಶರೀರದಲ್ಲಿ ಬಹಳ ಆಳವಾಗಿ ನೆಟ್ಟುಕೊಂಡವು. ಅದರಿಂದ ವ್ಯಥಿತನಾದ ವಿಶೋಕನು ರಥದ ಹಿಂಬದಿಯ ಕಂಬವನ್ನು ಒರಗಿ ಕುಳಿತನು. ಅನಂತರ ರಥಿಗಳಲ್ಲಿ ಶ್ರೇಷ್ಠನಾದ, ರಥದಿಂದ ವಿಹೀನನಾದ ಭೀಮಸೇನನು ಗದೆಯನ್ನು ಹಿಡಿದುಕೊಂಡು ಬಹಳ ವೇಗವಾಗಿ ರಥದಿಂದ ಧುಮುಕಿದನು. ಶೃಂಗಯುಕ್ತವಾದ ಪರ್ವತದಂತೆ ಗದೆಯನ್ನು ಎತ್ತಿ ಹಿಡಿದು ನಿಂತಿದ್ದ ಭೀಮಸೇನನನ್ನು ನೋಡಿ ನಿನ್ನ ಕಡೆಯ ಸೈನಿಕರಿಗೆ ಮಹಾಭಯವುಂಟಾಯಿತು.

ಅದೇ ಸಮಯಕ್ಕೆ ಸರಿಯಾಗಿ ಕೃಷ್ಣಸಾರಥಿಯಾದ ಅರ್ಜುನನು ಸುತ್ತಲೂ ಇದ್ದ ಶತ್ರುಸೈನಿಕರನ್ನು ಧ್ವಂಸಮಾಡುತ್ತಾ ಪುರುಷವ್ಯಾಘ್ರರಾದ, ಮಹಾಬಲರಾದ, ತಂದೆ-ಮಕ್ಕಳು (ಭೀಮ-ಘಟೋತ್ಕಚರು) ಭಗದತ್ತನೊಡನೆ ಯುದ್ಧಮಾಡುತ್ತಿದ್ದ ಸ್ಥಳಕ್ಕೆ ಬಂದನು. ಅಲ್ಲವನು ಮಹಾರಥರಾದ ತನ್ನ ಸಹೋದರರು ಯುದ್ಧದಲ್ಲಿ ತೊಡಗಿರುವುದನ್ನು ನೋಡಿ ತಾನೂ ಸಹ ಶೀಘ್ರವಾಗಿ ಬಾಣಗಳನ್ನು ಬಿಡುತ್ತಾ ಯುದ್ಧವನ್ನು ಪ್ರಾರಂಭಿಸಿದನು. ಅದನ್ನು ನೋಡಿ ಮಹಾರಥನಾದ ದುರ್ಯೋಧನನು ಅವಸರದಿಂದ ರಥ-ಗಜಾಶ್ವ-ಪದಾತಿಗಳಿಂದ ಕೂಡಿರುವ ಸೈನ್ಯವನ್ನು ಭಗದತ್ತನೊಡನೆ ಸೇರಿ ಯುದ್ಧಮಾಡುವಂತೆ ಪ್ರೇರಿಸಿದನು. ವಿಶಾಲವಾದ ಕೌರವಸೇನೆಯು ತಮ್ಮ ಮೇಲೆ ಬೀಳಲು ಬರುತ್ತಿರುವುದನ್ನು ಕಂಡು ಶ್ವೇತವಾಹನನು ಬಹಳ ವೇಗದಿಂದ ಅದರ ಕಡೆಗೇ ಧಾವಿಸಿದನು. ಭಗದತ್ತನು ತನ್ನ ಆನೆಯಿಂದ

ಪಾಂಡವರ ಸೈನ್ಯವನ್ನು ತುಳಿಸಿ ಧ್ವಂಸಮಾಡಿ ಯುಧಿಷ್ಠಿರನ ಸಮೀಪಕ್ಕೆ ಹೋದನು. ಆ ಸಮಯದಲ್ಲಿ ಪ್ರಹರಣಗಳನ್ನು ಎತ್ತಿ ಹಿಡಿದಿದ್ದ ಪಾಂಚಾಲ-ಪಾಂಡವ-ಕೇಕಯರಿಗೂ ಮತ್ತು ಭಗದತ್ತನಿಗೂ ಭೀಕರಯುದ್ಧವಾಯಿತು. ಯುದ್ಧಸಮಯದಲ್ಲಿ ಭೀಮಸೇನನು ಕೃಷ್ಣಾರ್ಜುನರಿಗೆ ಇರಾವಂತನ ವಧೆಯ ವೃತ್ತಾಂತವನ್ನು ಯಥಾವತ್ತಾಗಿ ವಿವರಿಸಿ ಹೇಳಿದನು.”

೯೫ನೆಯ ಅಧ್ಯಾಯವು ಮುಗಿಯಿತು.

೯೬ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಇರಾವಂತನ ವಧೆಯನ್ನು ಕೇಳಿ ಅರ್ಜುನನು ದುಃಖಪಟ್ಟುದು : ಭೀಮಸೇನನು ಧೃತರಾಷ್ಟ್ರನ ಒಂಬತ್ತು ಮಂದಿ ಮಕ್ಕಳನ್ನು ಸಂಹರಿಸಿದುದು : ಅಭಿಮನ್ಯು ಮತ್ತು ಅಂಬಷ್ಠರ ಯುದ್ಧ: ಎಂಟನೆಯ ದಿವಸದ ಯುದ್ಧದ ಪರಿಸಮಾಪ್ತಿ

ಸಂಜಯನು ಧೃತರಾಷ್ಟ್ರನಿಗೆ ಇರಾವಂತನ ವಧೆಯಿಂದ ಅರ್ಜುನನಿಗುಂಟಾದ ಸಂಕಟವನ್ನು ವಿವರಿಸಿ ಹೇಳುತ್ತಾನೆ :

“ಮಹಾರಾಜ! ಇರಾವಂತನ ವಧೆಯ ವೃತ್ತಾಂತವನ್ನು ಕೇಳಿ ಅರ್ಜುನನು ಪರಮದುಃಖಿತನಾಗಿ ಹಾವಿನಂತೆಯೇ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಯುದ್ಧದ ಮಧ್ಯದಲ್ಲಿ ಸಾರಥಿಯ ಸ್ಥಾನದಲ್ಲಿ ಕುಳಿತಿದ್ದ ವಾಸುದೇವನನ್ನು ಕುರಿತು ಹೇಳಿದನು : “ಮಹಾಬಾಹುವೇ! ನಿಶ್ಚಯವಾಗಿಯೂ ಈ ಎಲ್ಲ ವಿಷಯಗಳನ್ನೂ ವಿದುರನು ಹಿಂದೆಯೇ ಕಂಡುಕೊಂಡಿದ್ದನು. ಕುರು-ಪಾಂಡವರ ಸಮೂಹದಲ್ಲಿ ಘೋರವಾದ ಕ್ಷಯವುಂಟಾಗುವುದೆಂಬುದನ್ನು ತಿಳಿದೇ ಅವನು ಜನೇಶ್ವರನಾದ ಧೃತರಾಷ್ಟ್ರನಿಗೆ ಯುದ್ಧದ ಹಾದಿಯನ್ನು ಹಿಡಿಯದಿರುವಂತೆ ಬಹಳವಾಗಿ ತಡೆದನು. ನಮ್ಮ ಕಡೆಯ ಇನ್ನೂ ಅನೇಕ ವೀರರು ಕೌರವರಿಂದ ವಧೆಮಾಡಲ್ಪಟ್ಟರು. ನಾವೂ ಸಹ ಅನೇಕ ಕೌರವಯೋಧರನ್ನು ಸಂಹಾರಮಾಡಿದ್ದೇವೆ.

**ಅರ್ಥಹೇತೋರ್ನರಶ್ರೇಷ್ಠ ಕ್ರಿಯತೇ ಕರ್ಮ ಕುತ್ಸಿತಮ್ ।**
**ಧಿಗರ್ಥಾನ್ಯತ್ಕೃತೇ ಹ್ಯೇವಂ ಕ್ರಿಯತೇ ಜ್ಞಾತಿಸಂಕ್ಷಯಃ ॥೫॥**

ನರಶ್ರೇಷ್ಠನೇ! ಧನದ ಕಾರಣದಿಂದಾಗಿ ಕುತ್ಸಿತವಾದ ಕರ್ಮಗಳು ಮಾಡಲ್ಪಡುತ್ತವೆ. ಯಾವ ಅರ್ಥದ (ರಾಜ್ಯ-ಕೋಶಾದಿಗಳ) ಕಾರಣದಿಂದ ಈ ರೀತಿಯಲ್ಲಿ ಜ್ಞಾತಿಗಳ ಕ್ಷಯವು ಮಾಡಲ್ಪಡುತ್ತದೆಯೋ ಅಂತಹ ಅರ್ಥಕ್ಕೆ ಧಿಕ್ಕಾರವಿರಲಿ.

**ಅಧನಸ್ಯ ಮೃತಂ ಶ್ರೇಯೋ ನ ಚ ಜ್ಞಾತಿವಧಾದ್ಧನಮ್ ।**
**ಕಿಂ ನು ಪ್ರಾಪ್ಸ್ಯಾಮಹೇ ಕೃಷ್ಣ ಹತ್ವಾ ಜ್ಞಾತೀನ್ಸಮಾಗತಾನ್ ॥೬॥**

ಜ್ಞಾತಿಗಳನ್ನಾದರೂ ವಧೆಮಾಡಿ ಧನವನ್ನು (ರಾಜ್ಯ-ಕೋಶಾದಿಗಳನ್ನು) ಪಡೆಯುವುದಕ್ಕಿಂತಲೂ ನಿರ್ಧನನಿಗೆ ಸಾವೇ ಶ್ರೇಯಸ್ಕರ. ಕೃಷ್ಣ! ಇಲ್ಲಿಗೆ ಬಂದಿರುವ ಜ್ಞಾತಿಗಳೆಲ್ಲರನ್ನೂ ಸಂಹರಿಸಿ ನಾವು ಪಡೆದುಕೊಳ್ಳುವುದಾದರೂ ಏನಿದೆ?

ದುರ್ಯೋಧನನ ಮತ್ತು ಶಕುನಿಯ ಅಪರಾಧದಿಂದಲೂ, ಕರ್ಣನ ದುರ್ಮಂತ್ರದಿಂದಲೂ (ಕೆಟ್ಟ ಸಲಹೆಗಳಿಂದಲೂ) ಇಂದು ಸರ್ವಕ್ಷತ್ರಿಯರೂ ನಿಧನಹೊಂದುತ್ತಿದ್ದಾರೆ. ಮಹಾಬಾಹುವೇ! ನಮ್ಮ ರಾಜನು ಸುಯೋಧನ ನನ್ನು ಅಂದು ಅತ್ಯಲ್ಪಪ್ರಯೋಜನಕ್ಕಾಗಿ ಯಾಚಿಸಿದನು. ಅದರ ಒಳ್ಳೆಯ ಫಲವೇನೆಂಬುದನ್ನು ನಾನು ಈಗಲೀಗ ಮನಗಾಣುತ್ತಿದ್ದೇನೆ. ಇಂತಹ ಕ್ಷತ್ರಿಯಕ್ಷಯವನ್ನು ಮುಂದಾಗಿ ಯೋಚಿಸಿಯೇ ಧರ್ಮಾತ್ಮನಾದ ಯುಧಿಷ್ಠಿರನು ರಾಜ್ಯದ ಅರ್ಧವನ್ನಾಗಲೀ ಅಥವಾ ಕೇವಲ ಐದು ಗ್ರಾಮ ಗಳನ್ನಾಗಲೀ ಕೊಡುವಂತೆ ದುರ್ಯೋಧನನನ್ನು ಯಾಚಿಸಿದನು. ಆದರೆ ದುರ್ಮತಿಯಾದ ದುರ್ಯೋಧನನು ಅದಕ್ಕೂ ಒಪ್ಪಲಿಲ್ಲ.

**ದೃಷ್ಟ್ವಾ ಹಿ ಕ್ಷತ್ರಿಯಾಞ್ಛೂರಾಞ್ಶಯಾನಾನ್ಧರಣೀತಲೇ ।**
**ನಿನ್ದಾಮಿ ಭೃಶಮಾತ್ಮಾನಂ ಧಿಗಸ್ತು ಕ್ಷತ್ರಜೀವಿಕಾಮ್ ॥೯॥**

ಕೃಷ್ಣ! ಕ್ಷತ್ರಿಯವೀರರು ಪ್ರಾಣಗಳನ್ನು ತೊರೆದು ಯುದ್ಧಭೂಮಿಯಲ್ಲಿ ಮಲಗಿರುವುದನ್ನು ನೋಡಿ ನಾನೇ ನನ್ನನ್ನು ಬಹಳವಾಗಿ ನಿಂದಿಸಿಕೊಳ್ಳುತ್ತೇನೆ. ಅತ್ಯಂತಕ್ರೌರ್ಯದಿಂದ ಕೂಡಿರುವ ಈ ಕ್ಷತ್ರಿಯಜೀವನಕ್ಕೆ ಧಿಕ್ಕಾರವಿರಲಿ, ವಾಸುದೇವ!

**ಅಶಕ್ತಮಿತಿ ಮಾಮೇತೇ ಜ್ಞಾಸ್ಯನ್ತೇ ಕ್ಷತ್ರಿಯಾ ರಣೇ ।**
**ಯುದ್ಧಂ ತು ಮೇ ನ ರುಚಿತಂ ಜ್ಞಾತಿಭಿರ್ಮಧುಸೂದನ ॥೧೦॥**

ಮಧುಸೂದನ! ಆದರೆ ನಾನು ಈ ಮಾತುಗಳನ್ನು ರಣಕ್ಷೇತ್ರದಲ್ಲಿ ಹೇಳಹೋದರೆ ನನ್ನನ್ನು ಕ್ಷತ್ರಿಯರು ಅಶಕ್ತನೆಂದು ಭಾವಿಸುತ್ತಾರೆ. (ಆದುದರಿಂದ ಈಗ ಅದನ್ನು ಪ್ರಸ್ತಾಪಿಸಿ ಪ್ರಯೋಜನವೇನೂ ಇಲ್ಲ) ಒಟ್ಟಿನಲ್ಲಿ ಹೇಳುವುದಾದರೆ ನನಗೆ ಜ್ಞಾತಿಗಳೊಡನೆ ಯುದ್ಧಮಾಡುವುದು ರುಚಿಸದು.

ಸಮುದ್ರಕ್ಕೆ ಬಿದ್ದಮೇಲೆ ಅದರ ಪಾರವನ್ನು ಕಾಣುವವರೆಗೂ ಪ್ರಯತ್ನಪಡುತ್ತಲೇ ಇರಬೇಕು. ಆದುದರಿಂದ ಕುದುರೆಗಳನ್ನು ಕೌರವರ ಸೈನ್ಯದ ಬಳಿಗೆ ಹೋಗುವಂತೆ ಪ್ರಚೋದಿಸು. ಈ ಎರಡು ಬಾಹುಗಳಿಂದಲೇ ಅಪಾರವಾದ ಈ ಸೈನ್ಯಸಾಗರವನ್ನು ದಾಟುತ್ತೇನೆ. ಮಾಧವ! ಈ ಸಮಯದಲ್ಲಿ ವ್ಯರ್ಥವಾಗಿ ಕಾಲಕಳೆಯಲು ಸ್ವಲ್ಪವೂ ಅವಕಾಶವೇ ಇಲ್ಲ."

ಪಾರ್ಥನ ಸಂತಾಪಯುಕ್ತವಾದ ಮಾತನ್ನು ಕೇಳಿ ಶತ್ರುವೀರಹಂತಕನಾದ ಶ್ರೀಕೃಷ್ಣನು ಬಿಳುಪಾಗಿದ್ದ, ವಾಯುವೇಗದಿಂದ ಕೂಡಿದ್ದ ಕುದುರೆಗಳನ್ನು ಮುನ್ನಡೆಸಿದನು.

ಮಹಾರಾಜ! ಹುಣ್ಣಿಮೆಯ ದಿನದಲ್ಲಿ ಗಾಳಿಯ ಬೀಸುವಿಕೆಯಿಂದ ವೇಗವಾಗಿ ಉಕ್ಕಿಬರುವ ಸಮುದ್ರವು ಭೋರ್ಗರೆಯುವಂತೆ–ಆ ಸಮಯದಲ್ಲಿ ನಿನ್ನ ಸೈನ್ಯದಲ್ಲಿ ದೊಡ್ಡ ಕೋಲಾಹಲಶಬ್ದವೆದ್ದಿತು. ಎಂಟನೆಯ ದಿವಸದ ಅಪರಾಹ್ಣದಲ್ಲಿ ಭೀಷ್ಮನಿಗೂ ಮತ್ತು ಪಾಂಡವರಿಗೂ ಮೇಘಗರ್ಜನೆಗೆ ಸಮಾನವಾದ ಸಿಂಹಗರ್ಜನೆಗಳೊಡನೆ ಪುನಃ ಯುದ್ಧವು ಪ್ರಾರಂಭವಾಯಿತು.

ವಸುಗಳು ಇಂದ್ರನನ್ನು ಸುತ್ತುವರಿದು ದೈತ್ಯರೊಡನೆ ಯುದ್ಧಕ್ಕೆ ಹೋದಂತೆ–ದ್ರೋಣರನ್ನು ಸುತ್ತುವರಿದುಕೊಂಡು ದುರ್ಯೋಧನಾದಿ ನಿನ್ನ ಮಕ್ಕಳು ಭೀಮನೊಡನೆ ಯುದ್ಧಕ್ಕೆ ಹೊರಟರು. ಅನಂತರ ಶಾಂತನುವಿನ ಮಗನಾದ ಭೀಷ್ಮ, ರಥಿಗಳಲ್ಲಿ ಶ್ರೇಷ್ಠರಾದ ಕೃಪರು, ಭಗದತ್ತ ಮತ್ತು ಸುಶರ್ಮಾ–ಇವರು ಧನಂಜಯನನ್ನು ಆಕ್ರಮಿಸಿದರು. ಹಾರ್ದಿಕ್ಯ-ಬಾಹ್ಲಿಕರು ಸಾತ್ಯಕಿಯನ್ನು ಎದುರಿಸಿದರು. ಅಂಬಷ್ಠರಾಜನು ಅಭಿಮನ್ಯುವನ್ನು ಎದು

ರಿಸಿ ಯುದ್ಧಮಾಡಲು ಉಪಕ್ರಮಿಸಿದನು. ಉಳಿದ ಕೌರವರ ಕಡೆಯ ರಾಜರು ಪಾಂಡವರ ಕಡೆಯ ಉಳಿದ ರಾಜರೊಡನೆ ಯುದ್ಧದಲ್ಲಿ ತೊಡಗಿದರು. ಅನಂತರ ಘೋರರೂಪವಾದ ಮತ್ತು ಭಯಾನಕವಾದ ಯುದ್ಧವು ಪ್ರಾರಂಭವಾಯಿತು. ಭೀಮಸೇನನು ತನ್ನ ಮೇಲೆ ದಾಳಿನಡೆಸುತ್ತಿರುವ ನಿನ್ನ ಮಕ್ಕಳನ್ನು ನೋಡಿ ಪರಮಕ್ರುದ್ಧನಾಗಿ ಹವಿಸ್ಸಿನಿಂದ ಯಜ್ಞೇಶ್ವರನು ಧಗಧಗಿಸುವಂತೆ–ಉರಿದುರಿದುಬಿದ್ದನು. ವರ್ಷಾಕಾಲದಲ್ಲಿ ಮೋಡಗಳು ಪರ್ವತವನ್ನು ಜಲಧಾರೆಗಳಿಂದ ಮುಚ್ಚಿಬಿಡುವಂತೆ–ನಿನ್ನ ಮಕ್ಕಳು ಕೌಂತೇಯನನ್ನು ಬಾಣಗಳಿಂದ ಮುಚ್ಚಿಬಿಟ್ಟರು. ನಿನ್ನ ಮಕ್ಕಳು ಬಿಟ್ಟ ಬಾಣ ಗಳಿಂದ ಮುಚ್ಚಲ್ಪಟ್ಟಿದ್ದ ವೀರನಾದ ಭೀಮಸೇನನು ಕಟವಾಯಿಗಳನ್ನು ನೆಕ್ಕುತ್ತಾ ಶಾರ್ದೂಲದಂತೆ ದರ್ಪಿತನಾಗಿ, ಸುತೀಕ್ಷ್ಣವಾದ ಕ್ಷುರಪ್ರವೆಂಬ ಬಾಣದಿಂದ ವ್ಯೂಢೋರಸ್ಕನನ್ನು ಕೆಳಕ್ಕೆ ಕೆಡವಿದನು. ಅವನು ಬಾಣದಿಂದ ಬಹಳವಾಗಿ ಗಾಯಗೊಂಡು ಒಡನೆಯೇ ಗತಪ್ರಾಣನಾದನು. ಮತ್ತೊಂದು ನಿಶಿತವಾಗಿದ್ದ ಹೊಂಬಣ್ಣದ ಭಲ್ಲವೆಂಬ ಬಾಣದಿಂದ ಸಿಂಹವು ಸಣ್ಣ ಪ್ರಾಣಿಯನ್ನು ಕೊಲ್ಲುವಂತೆ–ಕುಂಡಲಿಯನ್ನು ಸಂಹರಿಸಿದನು.

ಪುನಃ ಭೀಮಸೇನನು ನಿಶಿತವಾಗಿದ್ದ, ಹಳದೀಬಣ್ಣದ ಬಾಣಗಳನ್ನು ಬತ್ತಳಿಕೆಯಿಂದ ತೆಗೆದು ನಿನ್ನ ಮಕ್ಕಳನ್ನು ಅನುಲಕ್ಷಿಸಿ ತ್ವರೆಯಿಂದ ಪ್ರಯೋಗಿ ಸಿದನು. ಈ ರೀತಿಯಲ್ಲಿ ದೃಢಧನ್ವನಾದ ಭೀಮಸೇನನಿಂದ ಪ್ರಯುಕ್ತವಾದ ಬಾಣಗಳು ಮಹಾರಥರಾದ ಅನಾಧೃಷ್ಟಿ, ಕುಂಡಭೇದಿ, ವೈರಾಟ, ದೀರ್ಘ ಲೋಚನ, ದೀರ್ಘಬಾಹು, ಸುಬಾಹು ಮತ್ತು ಕನಕಧ್ವಜ ಎಂಬ ಈ ನಿನ್ನ ಏಳು ಮಕ್ಕಳನ್ನು ರಥಗಳಿಂದ ಕೆಳಕ್ಕೆ ಬೀಳಿಸಿದುವು. ವಸಂತಕಾಲದಲ್ಲಿ ಪುಷ್ಪಿತ ವಾದ ಮಾವಿನಮರಗಳು ಕತ್ತರಿಸಲ್ಪಟ್ಟು ಬೀಳುತ್ತಿರುವಂತೆ–ರಥದಿಂದ ಬೀಳುತ್ತಿದ್ದ ವೀರರಾದ ನಿನ್ನ ಮಕ್ಕಳು ಪ್ರಕಾಶಿಸುತ್ತಿದ್ದರು. ಒಂಬತ್ತು ಮಂದಿ ನಿನ್ನ ಮಕ್ಕಳು ಹತರಾದೊಡನೆಯೇ ಉಳಿದ ನಿನ್ನ ಮಕ್ಕಳು ಮಹಾಬಲನಾದ ಭೀಮಸೇನನನ್ನು ಸಾಕ್ಷಾತ್‌ಕಾಲನೆಂದೇ ಭಾವಿಸಿ ಪಲಾಯನಮಾಡಿದರು. ನಿನ್ನ ಮಕ್ಕಳನ್ನು ಬಾಣಾಗ್ನಿಯಿಂದ ದಹಿಸುತ್ತಿದ್ದ ವೀರನಾದ ಭೀಮನನ್ನು ದ್ರೋಣರು–ಮೋಡವು ಜಲಧಾರೆಗಳಿಂದ ಪರ್ವತವನ್ನು ಮುಚ್ಚಿಬಿಡು ವಂತೆ–ನಾಲ್ಕು ದಿಕ್ಕುಗಳಿಂದಲೂ ಬಾಣಗಳಿಂದ ಮುಚ್ಚಿಬಿಟ್ಟರು. ದ್ರೋಣರು

ಸತತವಾದ ಶರಪ್ರಯೋಗಗಳಿಂದ ಭೀಮನನ್ನು ತಡೆಯುತ್ತಿದ್ದರೂ ಅವನು ನಿನ್ನ ಮಕ್ಕಳನ್ನು ಪ್ರಹರಿಸುತ್ತಲೇ ಇದ್ದನು. ಕುಂತಿಯ ಮಗನ ಆ ಪೌರುಷವನ್ನು ಕಂಡು ಅವನದು ಅತ್ಯದ್ಭುತವಾದ ಸಾಹಸವೆಂದು ನಾವು ಭಾವಿಸಿದೆವು. ಯಾವ ರೀತಿಯಲ್ಲಿ ಗೂಳಿಯು ಆಕಾಶದಿಂದ ಬೀಳುವ ಮಳೆಯನ್ನು–ಮಳೆಯು ಬೀಳುತ್ತಿದೆಯೆಂಬ ಪರಿವೆಯೇ ಇಲ್ಲದೇ-ಶರೀರದ ಮೇಲೆ ಧರಿಸುತ್ತದೆಯೋ ಅದೇ ರೀತಿಯಲ್ಲಿ ದ್ರೋಣರು ಬಿಟ್ಟ ಬಾಣಗಳ ಮಳೆಯನ್ನು ಭೀಮಸೇನನು ಧರಿಸಿದನು. ಮಹಾರಾಜ! ವೃಕೋದರನು ಅಂದಿನ ಯುದ್ಧದಲ್ಲಿ ತನ್ನ ಅದ್ಭುತವಾದ ಪರಾಕ್ರಮವನ್ನು ತೋರಿಸಿದ ವಿಧಾನವೆಂದರೆ: ಅವನು ನಿನ್ನ ಮಕ್ಕಳನ್ನು ಸಂಹರಿಸಿದುದು ಮತ್ತು ದ್ರೋಣರನ್ನೂ ಮುಂದೆ ಬರದಂತೆ ತಡೆಯುತ್ತಿದ್ದುದು. ಬಲಿಷ್ಠವಾದ ವ್ಯಾಘ್ರವು ಮೃಗಗಳ ಹಿಂಡುಗಳ ಮಧ್ಯದಲ್ಲಿ ಸಂಚರಿಸುತ್ತಾ ಮೃಗಗಳನ್ನು ಬೇಟೆಯಾಡುವಂತೆ–ಅರ್ಜುನಪೂರ್ವಜನಾದ ಭೀಮನು ನಿನ್ನ ವೀರರಾದ ಮಕ್ಕಳ ಸಮೂಹವನ್ನು ಹೊಕ್ಕು ಬೇಟೆಯಾಟವನ್ನು ಆಡುತ್ತಿದ್ದನು. ಯಾವ ರೀತಿಯಲ್ಲಿ ಸಾಧುಪ್ರಾಣಿಗಳ ಸಮೂಹದಲ್ಲಿರುವ ತೋಳವು ಪ್ರಾಣಿಗಳನ್ನು ಹೆದರಿಸಿ ಓಡಿಸುತ್ತದೆಯೋ-ಅದೇ ರೀತಿಯಲ್ಲಿ ಭೀಮನೂ ಸಹ ನಿನ್ನ ಮಕ್ಕಳನ್ನು ಭಯಪಡಿಸಿ ಓಡಿಸುತ್ತಿದ್ದನು.

ಮತ್ತೊಂದು ವಿಭಾಗದಲ್ಲಿ ಮಹಾರಥರಾದ ಭೀಷ್ಮ, ಭಗದತ್ತ ಮತ್ತು ಕೃಪರು ರಭಸದಿಂದ ಮುನ್ನುಗ್ಗುತ್ತಿದ್ದ ಅರ್ಜುನನನ್ನು ತಡೆದು ನಿಲ್ಲಿಸಿದರು. ಅತಿರಥನಾದ ಅರ್ಜುನನು ಕೌರವಮಹಾವೀರರು ಬಿಟ್ಟ ಅಸ್ತ್ರಗಳನ್ನು ಪ್ರತ್ಯಸ್ತ್ರಗಳಿಂದಲೇ ನಿವಾರಣೆಮಾಡಿಕೊಳ್ಳುತ್ತಾ ಪುನಃ ಅವರ ಮೇಲೆ ಅಸ್ತ್ರಗಳನ್ನು ಪ್ರಯೋಗಿಸಿ ನಿನ್ನ ಸೈನ್ಯದ ಅನೇಕಪ್ರಮುಖವೀರರನ್ನು ಮೃತ್ಯುವಿಗೆ ಅತಿಥಿಗಳನ್ನಾಗಿ ಕಳುಹಿಸುತ್ತಿದ್ದನು.

ಮಹಾರಾಜ! ಅಭಿಮನ್ಯುವೂ ಅಂಬಷ್ಠನೂ ಯುದ್ಧದಲ್ಲಿ ತೊಡಗಿದ್ದರೆಂದು ಹಿಂದೆಯೇ ಹೇಳಿದ್ದೆನಲ್ಲವೇ? ಅಭಿಮನ್ಯುವು ಲೋಕವಿಖ್ಯಾತನಾದ ಅಂಬಷ್ಠರಾಜನ ಕುದುರೆಗಳನ್ನು ಕೊಂದು ಅವನನ್ನು ರಥಹೀನನ್ನಾಗಿ ಮಾಡಿ ಅವನು ಮುಂದೆ ಬಾರದಂತೆ ಬಾಣಗಳಿಂದ ತಡೆದುಬಿಟ್ಟನು. ಯಶಸ್ವಿಯಾದ ಅಭಿಮನ್ಯುವಿನಿಂದ ಪುನಃ ಪುನಃ ಪ್ರಹೃತನಾಗುತ್ತಿದ್ದ, ರಥಹೀನನಾಗಿದ್ದ ವಸು

ಧಾಧಿಪನಾದ ಅಂಬಷ್ಠನು ರಥದಿಂದ ಧುಮುಕಿ ಮಹಾತ್ಮನಾದ ಅಭಿಮನ್ಯುವಿನ ಮೇಲೆ ಕತ್ತಿಯನ್ನು ಬೀಸಿದನು. ಮರುಕ್ಷಣದಲ್ಲಿಯೇ ಅಂಬಷ್ಠನು ಮಹಾಬಲನಾದ ಹಾರ್ದಿಕ್ಯನ ರಥವನ್ನು ಹತ್ತಿದನು. ಯುದ್ಧಮಾರ್ಗದಲ್ಲಿ ವಿಶಾರದನಾದ ಶತ್ರುಪಕ್ಷದ ವೀರರನ್ನು ಸಂಹರಿಸುವ ಸಾಮರ್ಥ್ಯದಿಂದ ಕೂಡಿದ್ದ ಅಭಿಮನ್ಯುವು ತನ್ನ ಮೇಲೆ ಬೀಳುವುದರಲ್ಲಿದ್ದ ಕತ್ತಿಯನ್ನು ವೇಗದಿಂದ ಗುರಿತಪ್ಪುವಂತೆ ಮಾಡಿಬಿಟ್ಟನು. ಅಂಬಷ್ಠರಾಜನ ಕತ್ತಿಯು ಅಭಿಮನ್ಯುವಿನಿಂದ ವ್ಯರ್ಥೀಕೃತವಾದುದನ್ನು ಕಂಡು 'ಸಾಧು ಅಭಿಮನ್ಯೋ ಸಾಧು' ಎಂಬ ಸೈನಿಕರ ಪ್ರಶಂಸಾಶಬ್ದಗಳು ಸರ್ವತ್ರ ನಿನದಿತವಾಯಿತು. ಧೃಷ್ಟದ್ಯುಮ್ನ ಪ್ರಮುಖರಾದ ಇತರ ಸೈನಿಕರು ನಿನ್ನ ಸೈನ್ಯದೊಡನೆ ಯುದ್ಧಮಾಡಿದರು. ಅಂತೆಯೇ ನಿನ್ನ ಕಡೆಯ ಪ್ರಮುಖವೀರರು ಪಾಂಡವರ ಕಡೆಯ ಸೈನ್ಯದೊಡನೆ ಯುದ್ಧಮಾಡಿದರು. ಪರಸ್ಪರವಾಗಿ ಬಲವಾದ ಪೆಟ್ಟುಗಳನ್ನು ಕೊಡುತ್ತಿದ್ದ ದುಷ್ಕರವಾದ ಸಂಹಾರಕ್ರಿಯೆಯನ್ನು ಮಾಡುತ್ತಿದ್ದ ನಿನ್ನ ಮತ್ತು ಅವರ ಸೈನ್ಯದಲ್ಲಿ ದೊಡ್ಡದಾದ ಕೂಗು ಕೇಳಿಬರುತ್ತಿದ್ದಿತು. ಯುದ್ಧದಲ್ಲಿ ಶೂರರಾದ ಯೋಧರು ಪರಸ್ಪರವಾಗಿ ಜುಟ್ಟುಗಳನ್ನು ಹಿಡಿದು ಬಗ್ಗಿಸಿಕೊಂಡು ಉಗುರುಗಳಿಂದ ಪರಚುತ್ತಿದ್ದರು. ಹಲ್ಲುಗಳಿಂದ ಕಡಿದಾಡುತ್ತಿದ್ದರು. ಮುಷ್ಟಿಗಳಿಂದಲೂ, ಮಂಡಿಗಳಿಂದಲೂ ಗುದ್ದಾಡುತ್ತಿದ್ದರು. ಅಂಗೈಗಳ ಹೊಡೆತಗಳಿಂದಲೂ, ಕತ್ತಿಗಳಿಂದಲೂ, ಸುದೃಢವಾದ ಭುಜಗಳಿಂದಲೂ ಸಮಯನೋಡಿ ಒಬ್ಬರು ಮತ್ತೊಬ್ಬರನ್ನು ಯಮಾಲಯಕ್ಕೆ ಕಳುಹಿಸುತ್ತಿದ್ದರು.

ಮಹಾರಾಜ! ಆ ಸಮಯದಲ್ಲಿ, ಬಂಧುತ್ವ, ಮೈತ್ರೀ–ಮುಂತಾದ ಯಾವುದೊಂದನ್ನೂ ಗಣನೆಗೆ ತೆಗೆದುಕೊಳ್ಳದೆಯೇ ಅವರು ಯುದ್ಧಮಾಡುತ್ತಿದ್ದರು. ತಂದೆಯೇ ಮಗನನ್ನು ಕೊಲ್ಲುತ್ತಿದ್ದನು. ಮಗನು ತಂದೆಯನ್ನೂ ಕೊಲ್ಲುತ್ತಿದ್ದನು. ಅಂಗಾಂಗಗಳು ಕ್ಷತ-ವಿಕ್ಷತವಾಗಿದ್ದರೂ ಪ್ರಾಣವಿರುವವರೆಗೂ ಅವರು ಯುದ್ಧವನ್ನು ಮುಂದುವರಿಸುತ್ತಲೇ ಇರುತ್ತಿದ್ದರು. ಸತ್ತು ಹೋದ ಯೋಧರಿಂದ ಜಾರಿ ಕೆಳಗೆ ಬಿದ್ದಿದ್ದ ಸುವರ್ಣದ ಹಿಂಭಾಗವಿದ್ದ ಸುಂದರವಾಗಿದ್ದ ಧನುಸ್ಸುಗಳೂ, ಬಹುಮೂಲ್ಯವಾದ ಬತ್ತಳಿಕೆಗಳೂ ರಣರಂಗದ ಸುತ್ತಲೂ ಬಿದ್ದಿದ್ದುವು. ಸುವರ್ಣಮಯವಾದ ಮತ್ತು ರಜತಮಯವಾದ ರೆಕ್ಕೆಗಳಿಂದ ಕೂಡಿದ್ದ, ಎಣ್ಣೆಯಲ್ಲಿ ನೆನೆಸಿದ್ದ ನಿಶಿತವಾದ ಬಾಣಗಳು

ರಣಾಂಗಣದ ಸುತ್ತಲೂ ಬಿದ್ದಿದ್ದು ಪೊರೆಯನ್ನು ಬಿಟ್ಟ ಸರ್ಪಗಳಂತೆಯೇ ಪ್ರಕಾಶಿಸುತ್ತಿದ್ದುವು. ರಣಾಂಗಣದಲ್ಲಿ ಧನುಷ್ಮಂತರ ಅನೇಕ ಕತ್ತಿಗಳೂ, ಗುರಾಣಿಗಳೂ ಕಳಚಿ ಬಿದ್ದಿದ್ದುವು. ಕತ್ತಿಗಳಿಗೆ ದಂತದಿಂದ ಮಾಡಿದ್ದ ಹಿಡಿಗಳಿದ್ದು ಸುವರ್ಣಮಿಶ್ರವಾದ ಕೆತ್ತನೆಯ ಕೆಲಸದಿಂದ ಸಮಲಂಕೃತವಾಗಿ ದ್ದುವು. ಗುರಾಣಿಗಳು ಸುವರ್ಣಮಯವಾದ ಚಿತ್ರಗಳನ್ನೊಳಗೊಂಡಿದ್ದುವು. ಸುವರ್ಣಮಯವಾದ ಪ್ರಾಸಗಳನ್ನೂ, ಸುವರ್ಣಭೂಷಿತವಾದ ಪಟ್ಟಿಶಗಳನ್ನೂ, ಸುವರ್ಣಮಯವಾದ ಋಷ್ಟಿಗಳನ್ನೂ, ಚಿನ್ನದಿಂದಲೇ ಅಲಂಕರಿಸಲ್ಪಟ್ಟಿದ್ದು ಉಜ್ಜ್ವಲವಾಗಿ ಕಾಣುತ್ತಿದ್ದ ಶಕ್ತ್ಯಾಯುಧಗಳನ್ನೂ ನಾವು ಆ ರಣರಂಗದಲ್ಲಿ ನೋಡಿದೆವು. ಸುಂದರವಾದ ಕವಚಗಳು ಆ ರಣಾಂಗಣದಲ್ಲಿ ಬಿದ್ದಿದ್ದುವು. ಭಾರವಾದ ಮುಸಲಾಯುಧಗಳೂ, ಪರಿಘಾಯುಧಗಳೂ, ಪಟ್ಟಿಶಗಳೂ, ಭಿಂದಿಪಾಲಗಳೂ ಸಾವಿರಾರು ಸಂಖ್ಯೆಯಲ್ಲಿ ರಣಾಂಗಣದಲ್ಲಿ ಬಿದ್ದಿರುವುದನ್ನು ನಾವು ನೋಡಿದೆವು. ನಾನಾವಿಧವಾಗಿ ಚಿತ್ರಿತವಾಗಿದ್ದ ಮತ್ತು ಹೇಮಭೂಷಿತವಾಗಿದ್ದ ಧನುಸ್ಸುಗಳು ರಣಾಂಗಣದ ಸುತ್ತಲೂ ಬಿದ್ದಿದ್ದುವು. ನಾನಾವಿಧವಾದ ಅಳತೆಗಳಲ್ಲಿದ್ದ ಆನೆಯ ಮೇಲೆ ಹೊದಿಸುವ ಚಿತ್ರಗಂಬಳಿಗಳನ್ನೂ, ಚಾಮರಗಳನ್ನೂ ಮತ್ತು ವ್ಯಜನಗಳನ್ನೂ ನಾವು ಆ ರಣಾಂಗಣದಲ್ಲಿ ಕಂಡೆವು.

ನಾನಾವಿಧವಾದ ಶಸ್ತ್ರಗಳನ್ನು ಹಿಡಿದು ಕೆಳಕ್ಕೆ ಬಿದ್ದಿದ್ದ ಮಹಾರಥರು ಗತಾಸುಗಳಾಗಿದ್ದರೂ ಜೀವಂತರಾಗಿರುವಂತೆಯೇ ಕಾಣುತ್ತಿದ್ದರು. ಭೂಮಿಯ ಮೇಲೆ ಬಿದ್ದಿದ್ದ ಯೋಧರಲ್ಲಿ ಕೆಲವರು ಗದೆಯಿಂದ ಮಥಿಸಲ್ಪಟ್ಟವರಾಗಿದ್ದರು. ಮತ್ತೆ ಕೆಲವರಿಗೆ ಮುಸಲ ಪ್ರಹಾರದಿಂದ ತಲೆಯೇ ಒಡೆದುಹೋಗಿದ್ದಿತು. ಮತ್ತೆ ಕೆಲವರು ಆನೆಗಳಿಂದಲೂ, ಕುದುರೆಗಳಿಂದಲೂ ತುಳಿಯಲ್ಪಟ್ಟು ರಥದ ಚಕ್ರಗಳಿಗೆ ಸಿಕ್ಕಿ ಸತ್ತುಹೋಗಿದ್ದರು. ಅವರೆಲ್ಲರೂ ರಣಭೂಮಿಯಲ್ಲಿ ಪ್ರಾಣಹೀನರಾಗಿ ಮಲಗಿದ್ದರು. ಇದೇ ರೀತಿಯಲ್ಲಿ ಅಶ್ವ-ಪದಾತಿ-ಗಜಗಳ ಶರೀರಗಳಿಂದ ತುಂಬಿಹೋಗಿದ್ದ ರಣಾಂಗಣವು ಪರ್ವತಗಳಿಂದಲೇ ತುಂಬಿದೆಯೋ ಎಂಬಂತೆ ಕಾಣುತ್ತಿದ್ದಿತು. ಸಮರಾಂಗಣದಲ್ಲಿ ಬಿದ್ದಿದ್ದ ಶಕ್ತ್ಯಾಯುಧ, ಋಷ್ಟಿ, ಶರ, ತೋಮರ, ಕತ್ತಿ, ಪಟ್ಟಿಶ, ಪ್ರಾಸ, ಅಯಸ್ಕುಂತ (ಲೋಹದಂಡ), ಗಂಡುಗೊಡಲಿ, ಪರಿಘ, ಭಿಂದಿಪಾಲ, ಶತಘ್ನೀ–ಇವೇ ಮುಂತಾದ ಆಯುಧಗಳಿಂದಲೂ ಮತ್ತು ಆ ಆಯುಧಗಳಿಂದ ಹತರಾದ ಸೈನಿಕರಿಂದಲೂ ರಣಾಂಗಣವು ವ್ಯಾಪ್ತ

ವಾಗಿದ್ದಿತು. ರಣಾಂಗಣದಲ್ಲಿ ಬಿದ್ದಿದ್ದ ಕೆಲವು ಸೈನಿಕರು ನಿಶ್ಶಬ್ದರಾಗಿದ್ದರು. ಪ್ರಾಣಹೋಗಿರದಿದ್ದರೂ ಯಾವುದೊಂದು ಶಬ್ದವನ್ನೂ ಮಾಡುತ್ತಿರಲಿಲ್ಲ. ಕೆಲವರು ಅಲ್ಪಶಬ್ದವನ್ನು ಮಾಡುತ್ತಿದ್ದರು. ಪ್ರಾಣೋತ್ಕ್ರಮಣಕಾಲದಲ್ಲಿ ಸ್ವಲ್ಪ ನರಳಾಡುತ್ತಿದ್ದರು. ಎಲ್ಲರೂ ಸಾಮಾನ್ಯವಾಗಿ ತಮ್ಮ ಶರೀರಕ್ಷತಗಳಿಂದ ಹೊರಬಂದ ರಕ್ತದಿಂದ ತೋಯ್ದುಹೋಗಿದ್ದರು. ಬಹು ಮಂದಿ ಪ್ರಾಣಹೀನ ರಾಗಿಯೇ ಬಿದ್ದಿದ್ದರು. ಇಂತಹ ಸೈನಿಕರು ರಾಶಿರಾಶಿಯಾಗಿ ಬಿದ್ದಿದ್ದು ಅದ ರಿಂದ ಆ ರಣಾಂಗಣವು ಬಹುವಾಗಿ ಪ್ರಕಾಶಿಸಿತು. ಎತ್ತಿನಂತೆ ವಿಶಾಲವಾದ ಕಣ್ಣುಗಳನ್ನು ಹೊಂದಿದ್ದ, ವೇಗವಂತರಾದ ರಾಜರ ಕೈಚೀಲಗಳಿಂದಲೂ ಕೇಯೂರಗಳಿಂದ ಸಮಲಂಕೃತವಾಗಿಯೂ–ಚಂದನದಿಂದ ಲೇಪಿತ ವಾಗಿಯೂ ಇದ್ದ ತೋಳುಗಳಿಂದಲೂ, ಆನೆಯ ಸೊಂಡಿಲುಗಳಂತಿದ್ದ ಮುರಿದುಹೋಗಿದ್ದ ತೊಡೆಗಳಿಂದಲೂ, ಶ್ರೇಷ್ಠವಾದ ಚೂಡಾಮಣಿಗಳನ್ನು ಹೊಂದಿರುವ ಕಿರೀಟಗಳಿಂದಲೂ, ಕುಂಡಲಸಹಿತವಾದ ತಲೆಗಳಿಂದಲೂ ರಣರಂಗವು ಪ್ರಕಾಶಿಸಿತು. ಅಲ್ಲಲ್ಲಿ ಬಿದ್ದಿದ್ದ ಸುವರ್ಣಮಯವಾದ ಮತ್ತು ರಕ್ತದಿಂದ ನೆನೆದಿದ್ದ ವೀರಯೋಧರ ಕವಚಗಳಿಂದ ಆ ರಣರಂಗವು, ಜ್ವಾಲೆ ಯಿಂದ ರಹಿತವಾದ ಕೆಂಡಗಳೇ ಉಳಿದಿರುವ ಅಗ್ನಿಗಳಿಂದ–ಶೋಭಿಸುವಂತೆ ಪ್ರಕಾಶಿಸಿತು. ಸುತ್ತಲೂ ಒಗೆಯಲ್ಪಟ್ಟಿದ್ದ ಬತ್ತಳಿಕೆಗಳಿಂದಲೂ, ಅಲ್ಲಲ್ಲಿಯೇ ಬಿದ್ದಿದ್ದ ಧನುಸ್ಸುಗಳಿಂದಲೂ, ಸರ್ವತ್ರ ಹರಡಿಕೊಂಡಿದ್ದ ಸುವರ್ಣಮಯ ವಾದ ರೆಕ್ಕೆಗಳಿಂದ ಕೂಡಿದ್ದ ಬಾಣಗಳಿಂದಲೂ, ಎಲ್ಲ ಕಡೆಗಳಲ್ಲಿಯೂ ಮುರಿದುಬಿದ್ದಿದ್ದ ಸಣ್ಣ-ಸಣ್ಣಗಂಟೆಗಳ ಸಮೂಹದಿಂದ ಭೂಷಿತವಾಗಿದ್ದ ರಥ ಗಳಿಂದಲೂ, ಬಾಣಗಳಿಂದ ಹತವಾದ ರಕ್ತದಿಂದ ಲೇಪಿತವಾಗಿದ್ದ–ನಾಲಿಗೆ ಗಳನ್ನು ಹೊರಕ್ಕೆ ಚಾಚಿದ್ದ ಕುದುರೆಗಳಿಂದಲೂ, ರಥಗಳ ತೋಳುಮರ ಗಳಿಂದಲೂ, ಪತಾಕೆಗಳಿಂದಲೂ, ಬತ್ತಳಿಕೆಗಳಿಂದಲೂ, ಧ್ವಜಗಳಿಂದಲೂ, ಅಲ್ಲಲ್ಲಿ ಚದುರಿಬಿದ್ದಿರುವ ಮಹಾವೀರರ ಬಿಳುಪಾದ ಶ್ರೇಷ್ಠವಾದ ಶಂಖ ಗಳಿಂದಲೂ, ಅಲ್ಲಲ್ಲಿ ಮಲಗಿದ್ದ ಕತ್ತರಿಸಲ್ಪಟ್ಟ ಸೊಂಡಿಲುಗಳುಳ್ಳ ಆನೆ ಗಳಿಂದಲೂ ಆ ರಣಾಂಗಣವು ನಾನಾರೂಪವಾದ ಅಲಂಕಾರವಸ್ತುಗಳಿಂದ ಸಮಲಂಕೃತಳಾದ ಯುವತಿಯಂತೆ ಕಾಣುತ್ತಿದ್ದಿತು. ಮತ್ತೆ ಕೆಲವು ಆನೆಗಳ ಶರೀರಗಳಲ್ಲಿ ಪ್ರಾಸಾಯುಧಗಳು ಬಹಳ ಆಳದವರೆಗೂ ನೆಟ್ಟಿರುತ್ತಿದ್ದು ಅದರ ವೇದನೆಯನ್ನು ತಾಳಲಾರದೇ ಅವುಗಳು ಸೊಂಡಿಲುಗಳ ಮೂಲಕ

ಸತತವಾಗಿ ಘೀಳಿಡುತ್ತಿದ್ದುವು ಮತ್ತು ಸೊಂಡಿಲಿನ ಹೊಳ್ಳೆಯಿಂದ ನೀರಿನ ತುಂತುರುಗಳನ್ನು ಹೊರಕ್ಕೆ ಬಿಡುತ್ತಿದ್ದುವು. ಇಂತಹ ಆನೆಗಳಿಂದ ಆ ರಣಭೂಮಿಯು ನೀರನ್ನು ಸ್ರವಿಸುತ್ತಿರುವ ಪರ್ವತಗಳಿಂದ ಕೂಡಿರುವುದೋ ಎಂಬಂತೆ ಕಾಣುತ್ತಿದ್ದಿತು. ಆನೆಗಳ ಬೆನ್ನುಗಳ ಮೇಲೆ ಹಾಕುವ ನಾನಾಬಣ್ಣದ ಕಂಬಳಿಗಳಿಂದಲೂ, ಅಂಬಾರಿಗಳಿಂದಲೂ, ವೈಡೂರ್ಯಮಣಿಯುಕ್ತವಾದ ದಂಡಗಳಿಂದಲೂ ಮತ್ತು ಅಲ್ಲಲ್ಲಿಯೇ ಬಿದ್ದಿದ್ದ ಸುಂದರವಾದ ಅಂಕುಶಗಳಿಂದಲೂ, ಎಲ್ಲ ಕಡೆಯಲ್ಲಿಯೂ ಬಿದ್ದಿರುತ್ತಿದ್ದ ಆನೆಗಳ ಗಂಟೆಗಳಿಂದಲೂ, ಆನೆಯ ಬೆನ್ನುಮೇಲೆ ಹಾಸಿದ್ದು ಹರಿದು ಹೋಗಿ ಕೆಳಗೆ ಬಿದ್ದಿದ್ದ ವಿಚಿತ್ರವಾದ ಕಂಬಳಿಗಳಿಂದಲೂ, ವಿಚಿತ್ರವಾದ ಕಂಠಾಭರಣಗಳಿಂದಲೂ, ಸುವರ್ಣಮಯವಾದ ಹಗ್ಗಗಳಿಂದಲೂ, ಒಡೆದುಹೋಗಿದ್ದ ಯಂತ್ರಗಳಿಂದಲೂ, ಸುವರ್ಣಮಯವಾದ ತೋಮರ



ಗಳಿಂದಲೂ, ಧೂಳಿನಿಂದ ಕಪಿಲವರ್ಣದುವುಗಳಾಗಿ ಕಾಣುತ್ತಿದ್ದ ಕುದುರೆಗಳ ಎದೆಗೆ ತೊಡಿಸುವ ಸುವರ್ಣಮಯವಾದ ಕವಚಗಳಿಂದಲೂ, ಕತ್ತರಿಸಲ್ಪಟ್ಟ ಅಂಗದಾಭರಣಸಹಿತವಾದ ಭುಜಗಳಿಂದ ಕೆಳಕ್ಕೆ ಬಿದ್ದಿರುವ ವಿಮಲವಾದ ಮತ್ತು ತೀಕ್ಷ್ಣವಾದ ಪ್ರಾಸಾಯುಧಗಳಿಂದಲೂ ಋಷ್ಟ್ಯಾಯುಧಗಳಿಂದಲೂ ಅಲ್ಲಲ್ಲಿ ಬಿದ್ದಿದ್ದ ವಿಚಿತ್ರವಾದ ಶಿರಸ್ತ್ರಾಣಗಳಿಂದಲೂ, ಸುವರ್ಣದ ರೆಕ್ಕೆಗಳಿಂದ ಅಲಂಕೃತವಾಗಿದ್ದ ವಿಚಿತ್ರವಾದ ಬಾಣಗಳ ಸಮೂಹಗಳಿಂದಲೂ, ಕುದುರೆ

ಗಳ ಮೇಲೆ ಹಾಕುವ ಜೀನು ಮೊದಲಾದ ಹೊದ್ದಿಕೆಗಳಿಂದಲೂ, ಜೀನಿನ ಮೇಲೆ ಹಾಕಿದ್ದ ಮೃದುವಾಗಿ ಮಾಡಲ್ಪಟ್ಟಿದ್ದ ರಂಕುಚರ್ಮಗಳಿಂದಲೂ, ನರೇಂದ್ರರು ತಮ್ಮ ಕಿರೀಟಗಳಲ್ಲಿ ಧರಿಸಿದ್ದ ಬಹುಮೂಲ್ಯವಾದ ವಿಚಿತ್ರವಾದ ಚೂಡಾಮಣಿಗಳಿಂದಲೂ, ಅಲ್ಲಲ್ಲಿ ಬಿದ್ದಿದ್ದ ರಾಜರ ಛತ್ರ-ಚಾಮರ-ವ್ಯಜನ ಗಳಿಂದಲೂ, ಮನೋಹರವಾದ ಕುಂಡಲಗಳಿಂದ ಸಮಲಂಕೃತವಾದ, ನಿಗದಿ ಯಾಗಿರುವ ಗಡ್ಡ-ಮೀಸೆಗಳುಳ್ಳ ಚಂದ್ರ ಮತ್ತು ಕಮಲಗಳಿಗೆ ಸಮಾನವಾದ ಮುಖಗಳಿಂದಲೂ, ವೀರಯೋಧರ ಕಿವಿಗಳಿಂದ ಕಳಚಿ ಭೂಮಿಯ ಮೇಲೆ ಅಲ್ಲಲ್ಲಿ ಬಿದ್ದಿರುತ್ತಿದ್ದ ಸುವರ್ಣದಿಂದ ಜಾಜ್ವಲ್ಯಮಾನವಾಗಿ ಕಾಣುತ್ತಿದ್ದ ಕರ್ಣಕುಂಡಲಗಳಿಂದಲೂ ಆಚ್ಛಾದಿತವಾಗಿದ್ದ ರಣಭೂಮಿಯು ಗ್ರಹ-ನಕ್ಷತ್ರ ಗಳಿಂದ ಚಿತ್ರಿತವಾದ ಆಕಾಶದಂತೆಯೇ ಕಾಣುತ್ತಿದ್ದಿತು.

ಮಹಾರಾಜ! ಈ ರೀತಿಯಲ್ಲಿ ನಿನ್ನ ಮತ್ತು ಪಾಂಡವರ ವಿಶಾಲ ಸೇನೆಯು ಪರಸ್ಪರಸಂಘರ್ಷದಿಂದ ಸಮ್ಮರ್ದಿತವಾದುವು. ಹಲವಾರು ಸೈನ್ಯಗಳು ಬಹಳ ಆಯಾಸಗೊಂಡಿದ್ದುವು ; ಮತ್ತೆ ಕೆಲವು ಭಗ್ನವಾಗಿ ಹೋಗಿ ದ್ದುವು ; ಮತ್ತೆ ಕೆಲವು ಗಜ-ವಾಜಿ-ರಥಗಳಿಗೆ ಸಿಕ್ಕಿ ಸಮ್ಮರ್ದಿತವಾಗಿದ್ದುವು. ರಾತ್ರಿಯಾಯಿತು. ನಮ್ಮ ಅನುಯಾಯಿಗಳು ಯಾರೆಂಬುದನ್ನೇ ನಾವು ಕಾಣಲಾರದೇ ಹೋದೆವು. ಆ ಸಮಯದಲ್ಲಿ ಕುರು-ಪಾಂಡವರಿಬ್ಬರೂ ತಮ್ಮ-ತಮ್ಮ ಸೈನ್ಯಗಳನ್ನು ಹಿಂದಕ್ಕೆ ಕರೆಸಿಕೊಂಡರು. ಮಹಾಭಯಂಕರವೂ, ಮಹಾರೌದ್ರವೂ ಆದ ಪ್ರದೋಷಕಾಲವು ಪ್ರಾಪ್ತವಾಗಲಾಗಿ ಕುರು-ಪಾಂಡವರಿಬ್ಬರೂ ಸೈನ್ಯಗಳನ್ನು ಹಿಂದಕ್ಕೆ ತೆಗೆದುಕೊಂಡು ತಮ್ಮ-ತಮ್ಮ ಶಿಬಿರಗಳಿಗೆ ಹೋಗಿ ಕಾಲಾವಕಾಶವಿದ್ದಂತೆ ವಿಶ್ರಾಂತಿಯನ್ನು ಪಡೆದರು."

೯೬ನೆಯ ಅಧ್ಯಾಯವು ಮುಗಿಯಿತು.

## ಎಂಟನೆಯ ದಿವಸದ ಯುದ್ಧದ ವಿಶ್ಲೇಷಣೆ

ಎಂಟನೆಯ ದಿವಸ ಕೌರವರು ರಚಿಸಿದ ವ್ಯೂಹವನ್ನು ಮಹಾವ್ಯೂಹ ಎಂದು ಮಾತ್ರ ಕರೆದಿದ್ದಾರೆ. ಅದಕ್ಕೆ ಬೇರಾವ ಹೆಸರನ್ನು ಕೊಟ್ಟಿಲ್ಲ. ಪಾಂಡವರು ಅದಕ್ಕೆ ಪ್ರತಿಯಾಗಿ ಶೃಂಗಾಟಕ ಎಂಬ ವ್ಯೂಹವನ್ನು ರಚಿಸು ತ್ತಾರೆ. ಶೃಂಗಾಟಕವ್ಯೂಹದಲ್ಲಿಯೂ ಯಾವ-ಯಾವ ಸ್ಥಳದಲ್ಲಿ ಯಾರು

ಯಾರು ನಿಂತಿದ್ದರೆಂಬುದನ್ನು ಹೇಳಲಾಗಿದೆಯೇ ಹೊರತು ಏಳನೆಯ ದಿವಸದ ಮಂಡಲವ್ಯೂಹದಲ್ಲಿ ಹೇಳಿರುವಂತೆ ರಥ-ಗಜಾಶ್ವ-ಪದಾತಿಗಳ ಸಂಖ್ಯೆಯನ್ನು ಹೇಳಿಲ್ಲ.

ಎಂಟನೆಯ ದಿವಸದ ಯುದ್ಧದ ಪ್ರಾರಂಭದಲ್ಲಿಯೇ ಭೀಮಸೇನನು ಧೃತರಾಷ್ಟ್ರನ ಎಂಟು ಮಂದಿ ಮಕ್ಕಳನ್ನು ಸಂಹರಿಸುತ್ತಾನೆ. ಪುನಃ ಎಂಟನೆಯ ದಿವಸವೇ ಧೃತರಾಷ್ಟ್ರನ ಒಂಬತ್ತು ಮಂದಿ ಮಕ್ಕಳನ್ನು ಸಂಹಾರಮಾಡಿದ ವಿಷಯವು ೯೬ನೆಯ ಅಧ್ಯಾಯದಲ್ಲಿ ಬರುತ್ತದೆ. ಇದುವರೆಗೆ ಭೀಮಸೇನನು ನಾಲ್ಕನೆಯ ದಿವಸ ಎಂಟು ಮಂದಿ, ಎಂಟನೆಯ ದಿವಸ ಹದಿನೇಳು ಮಂದಿ–ಒಟ್ಟು ಇಪ್ಪತ್ತೈದು ಮಂದಿ ಧೃತರಾಷ್ಟ್ರನ ಮಕ್ಕಳನ್ನು ಸಂಹರಿಸುತ್ತಾನೆ.

ತನ್ನ ತಮ್ಮಂದಿರು ಮರಣಹೊಂದಿದುದಕ್ಕಾಗಿ ದುಃಖವನ್ನು ತೋಡಿಕೊಂಡ ದುರ್ಯೋಧನನಿಗೆ ಪಾಂಡವರನ್ನು ಗೆಲ್ಲಲು ಸಾಧ್ಯವಾಗುವುದಿಲ್ಲವೆಂಬುದನ್ನು ಭೀಷ್ಮನು ಸ್ಪಷ್ಟವಾಗಿ ಮತ್ತೊಮ್ಮೆಹೇಳುತ್ತಾನೆ. ೮೯ನೆಯ ಅಧ್ಯಾಯದ ಪ್ರಾರಂಭದಲ್ಲಿ ಧೃತರಾಷ್ಟ್ರನು ಪಾಂಡವರು ಗೆಲ್ಲುತ್ತಿರುವುದಕ್ಕೆ ತಮ್ಮ ಪಕ್ಷದ ದುರದೃಷ್ಟವೇ ಕಾರಣವೆಂದು ಹೇಳುತ್ತಾನೆ. ಅದಕ್ಕೆ ಉತ್ತರವಾಗಿ ಸಂಜಯನು "ಅಪಜಯಕ್ಕೆ ನಿನ್ನ ಅಪರಾಧವೇ ಕಾರಣ" ಎಂದು ಪ್ರತಿಪಾದಿಸುತ್ತಾನೆ. ಈ ಅಧ್ಯಾಯ ಪೂರ್ತಿಯಾಗಿ ಯುದ್ಧದ ವರ್ಣನೆಯಿದೆ. ೯೦ನೆಯ ಅಧ್ಯಾಯದಲ್ಲಿ ಒಂದು ಗಮನೀಯವಾದ ವಿಷಯವಿದೆ.

ಅರ್ಜುನನು ತೀರ್ಥಯಾತ್ರೆಗೆ ಹೋದಾಗ ಹರಿದ್ವಾರದಲ್ಲಿ ಗಂಗಾಸ್ನಾನ ಮಾಡಲು ಇಳಿದಾಗ ನಾಗಕನ್ಯೆಯು ಪಾತಾಳಲೋಕದಲ್ಲಿದ್ದ ತನ್ನ ತಂದೆ ಯಾದ ಕೌರವ್ಯನ ಮನೆಗೆ ಅರ್ಜುನನನ್ನು ಕರೆದೊಯ್ದು ಅಲ್ಲಿ ಅವನನ್ನು ಉಪಚರಿಸಿ ಅವನೊಡನೆ ಒಂದು ರಾತ್ರಿಯನ್ನು ಕಳೆದು ಅನಂತರ ಕಳುಹಿಸಿ ಕೊಟ್ಟಳೆಂಬ ವಿಷಯವು ಆದಿಪರ್ವದಲ್ಲಿ ಬರುತ್ತದೆ. (ಸಂ.೩, ಪುಟ ೧೩೦೮-ಅಧ್ಯಾಯ ೨೧೪) ಅರ್ಜುನ-ಉಲೂಪಿಯರ ಸಮಾಗಮದಿಂದಾಗಿ ಇರಾವಂತನು ಹುಟ್ಟುತ್ತಾನೆ. ಯುದ್ಧಪ್ರಕರಣದಲ್ಲಿ ಇರಾವಂತನು ಪಾಂಡ ವರ ಕಡೆಗೆ ಯಾವಾಗ ಬಂದು ಸೇರಿಕೊಂಡನೆಂಬ ವಿಷಯವಿಲ್ಲದಿದ್ದರೂ ಅವನು ಮೊದಲನೆಯ ದಿವಸವೇ ಯುದ್ಧದಲ್ಲಿ ಪಾಲ್ಗೊಂಡ ವಿಷಯ

ವಿದೆ. ಮೊದಲನೆಯ ದಿವಸ ಅವನು ಶ್ರುತಾಯುಷನೊಡನೆ ಯುದ್ಧಮಾಡು ತ್ತಾನೆ. ಪುನಃ ಏಳನೆಯ ದಿವಸದಲ್ಲಿ ಅವನ ಪ್ರಸ್ತಾಪ ಬಂದು ಅಂದಿನ ಯುದ್ಧ ದಲ್ಲಿ ಅವನು ವಿಂದಾನುವಿಂದರರನ್ನು ಪರಾಜಯಗೊಳಿಸುತ್ತಾನೆ. (ಅಧ್ಯಾಯ ೮೩) ಎಂಟನೆಯ ದಿವಸದ ಯುದ್ಧದಲ್ಲಿ ಅವನು ಪುನಃ ಪಾಲ್ಗೊಳ್ಳುತ್ತಾನೆ. ಶಕುನಿಯ ಐವರು ಸೋದರರನ್ನು ಸಂಹರಿಸಿ ಅಲಂಬುಷರಾಕ್ಷಸನಿಂದ ಸಂಹತನಾಗುತ್ತಾನೆ. ಹಿಂದಿನ ಎರಡು ದಿವಸಗಳಲ್ಲಿ ಸಂಜಯನು ಅವನ ಹುಟ್ಟಿನ ಬಗೆಗೆ ಪ್ರಸ್ತಾಪವನ್ನು ಮಾಡಿಲ್ಲ. ೯೦ನೆಯ ಅಧ್ಯಾಯದಲ್ಲಿ ಅವನ ಹುಟ್ಟಿನ ಪ್ರಸ್ತಾಪಮಾಡುತ್ತಾ ಸಂಜಯನು ಹೇಳುತ್ತಾನೆ. ಹೀಗೆ ಹೇಳುವಾಗ ಇರಾವಂತನು ಪರಕ್ಷೇತ್ರಜನೆಂಬ ಅಭಿಪ್ರಾಯಬರುವ ಶ್ಲೋಕವಿದೆ. **'ಏವಮೇಷ ಸಮುತ್ಪನ್ನಃ ಪರಕ್ಷೇತ್ರೇಽರ್ಜುನಾತ್ಮಜಃ ||೯||'** ಎಂದು ಸ್ಪಷ್ಟ ವಾಗಿಯೇ ಇದೆ. **ಪತೌ ಹತೇ ಸುಪರ್ಣೇನ ಕೃಪಣಾ ದೀನಚೇತನಾ | ಭಾರ್ಯಾರ್ಥಂ ತಾಂ ಚ ಜಗ್ರಾಹ ಪಾರ್ಥಃ ಕಾಮವಶಾನುಗಾಮ್ ||** **ಪತೌ** ಎಂಬ ಪಾಠವು ಗೋರಖಪುರದ ಪ್ರತಿಯಲ್ಲಿರುವುದೇ ಹೊರತು ಉಳಿದ ಪ್ರತಿಗಳಲ್ಲಿ **ಪತ್ಯೌ** ಎಂದೇ ಪಾಠವಿದೆ. ಆದರೆ ಇವರು **ಪತೌ** ಎಂಬುದೇ ಸರಿಯಾದ ಪಾಠವೆಂದು ಸಮರ್ಥಿಸಿ : 'ಬೇರೆಯ ನಾಗನೊಡನೆ ಉಲೂ ಪಿಯ ವಿವಾಹದ ನಿಶ್ಚಿತಾರ್ಥವು ಮಾತ್ರವೇ ಆಗಿತ್ತು. ಮದುವೆಯಾಗಿರಲಿಲ್ಲ. ಆದುದರಿಂದಲೇ **ಪತ್ಯೌ** ಎಂಬುದಕ್ಕೆ ಬದಲಾಗಿ **ಪತೌ** ಎಂದು ಪ್ರಯೋಗ ಮಾಡಿದ್ದಾರೆ' ಎನ್ನುತ್ತಾರೆ. **ಪತಿಸದೃಶಃ ; ಪತಿತುಲ್ಯಃ** ಎಂದು ಇವರು ಪತಿ ಶಬ್ದದ ನಿರ್ವಚನಮಾಡುತ್ತಾ **ಪತಿರಿವ ಆಚರತೀತಿ ಪತಿಃ (ನ ತು ಸಾಕ್ಷಾತ್ ಪತಿಃ)** ಈ ವ್ಯುತ್ಪತ್ತಿಗೆ ಅನುಸಾರವಾಗಿ ಆಚಾರಕ್ವಿಬಂತದ ಪತಿಶಬ್ದ ಪ್ರಯೋಗ ವನ್ನು ಇಲ್ಲಿ ಮಾಡಿದ್ದಾರೆಂದು ಹೇಳಿದ್ದಾರೆ. ಆದುದರಿಂದ ಉಲೂಪಿಯು ಅರ್ಜುನನಿಗೆ ಪರಕ್ಷೇತ್ರವಲ್ಲ ಎಂಬುದು ಇವರ ಅಭಿಪ್ರಾಯವಾಗಿದೆ. ೯ನೆಯ ಶ್ಲೋಕದಲ್ಲಿ ಬರುವ **ಪರಕ್ಷೇತ್ರೇ** ಎಂಬುದಕ್ಕೂ ಇವರ ಪಾಠವು **'ಪರಪಕ್ಷೇಽರ್ಜುನಾತ್ಮಜಃ'** ಎಂಬುದಾಗಿದೆ. **ಪರಪಕ್ಷೇ** ಎಂಬುದಕ್ಕೆ ಮಾತೃ ಕುಲ ಎಂದು ಅರ್ಥಮಾಡಿ 'ತಾಯಿಯ ಮನೆಯಲ್ಲಿಯೇ ಇದ್ದನು' ಎಂದೂ ಅರ್ಥಮಾಡಿದ್ದಾರೆ. ೧೦ನೆಯ ಶ್ಲೋಕದಲ್ಲಿ ಪಿತೃವ್ಯ ಎಂಬ ಶಬ್ದವಿದೆ. ಇರಾವಂತನ ಪಿತೃವ್ಯನು ಯಾರೆಂದು ಹೇಳಿಲ್ಲ. ಪಾರ್ಥನ ದ್ವೇಷೀ ಎಂದು

ಹೇಳಿರುವುದರಿಂದ ಖಾಂಡವದಾಹಸಮಯದಲ್ಲಿ ತಾಯಿಯ ಮೂಲಕ ತಪ್ಪಿಸಿಕೊಂಡ ಅಶ್ವಸೇನನೇ ಅರ್ಜುನನಿಗೆ ಶತ್ರು ಎಂದು ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ. ಅಶ್ವಸೇನನು ಚಿಕ್ಕಪ್ಪನಾದರೆ ಇರಾವಂತನಿಗೆ ನಾಗರೂಪಿ ಯಾದ ತಂದೆಯೊಬ್ಬನು ಇರಲೇಬೇಕಾಗುತ್ತದೆ. ಆದರೆ ಗೀತಾಪ್ರೆಸ್ಸಿನವರು ಪಿತೃವ್ಯ ಎಂಬುದಕ್ಕೂ ಚಿಕ್ಕಪ್ಪ ಎಂದು ಅರ್ಥಮಾಡದೇ 'ವಯೋವೃದ್ಧನಾದ ಸಂಬಂಧಿಯೊಬ್ಬ' ಎಂದು ಅರ್ಥಮಾಡಿರುತ್ತಾರೆ. ಆದರೆ ಇದೊಂದು ಪ್ರಕರಣವನ್ನು ಬಿಟ್ಟು ಯಾವ ಸ್ಥಳದಲ್ಲಿಯೂ ಇರಾವಂತನು 'ಪರಕ್ಷೇತ್ರಜ' ಎಂದು ಅರ್ಥಬರುವ ಪದಪ್ರಯೋಗವಿಲ್ಲ. ಮೇಲಾಗಿ ಇದೇ ಅಧ್ಯಾಯದ ೮೨ನೆಯ ಶ್ಲೋಕದಲ್ಲಿ ಅಜಾನನ್ನರ್ಜುನಶ್ಚಾಪಿ ನಿಹತಂ ಪುತ್ರಮೌರಸಮ್ ಎಂದು 'ಔರಸ' ಪದಪ್ರಯೋಗವಿದೆ. ಔರಸಪದದ ಅರ್ಥವನ್ನು ಮನುವು ಹೀಗೆ ವಿಶ್ಲೇಷಿಸಿದ್ದಾನೆ. **ಸ್ವಕ್ಷೇತ್ರೇ ಸಂಸ್ಕೃತಾಯಾಂ ತು ಸ್ವಯಮುತ್ಪಾದ ಯೇದ್ಧಿಯಮ್ । ತಮೌರಸಂ ವಿಜಾನೀಯಾತ್ಪುತ್ರಂ ಪ್ರಥಮಕಲ್ಪಿತಮ್** ॥೯-೧೬೬॥ ಸಂಸ್ಕೃತವಾಗಿರುವ ಸ್ವಕ್ಷೇತ್ರದಲ್ಲಿ ತಾನೇ ಮಗನನ್ನು ಪಡೆದು ಕೊಂಡರೆ ಅವನಿಗೆ ಔರಸನೆಂದು ಹೆಸರು. ದ್ವಾದಶವಿಧಪುತ್ರರಲ್ಲಿ ಇವನದು ಮೊದಲನೆಯ ಸ್ಥಾನವೆಂದು ತಿಳಿಯಬೇಕು. ಇರಾವಂತನು ಅರ್ಜುನನಿಗೆ ಎಲ್ಲ ಮಕ್ಕಳಿಗಿಂತಲೂ ಮೊದಲು ಹುಟ್ಟಿದವನೆಂಬುದರಲ್ಲಿ ಸಂಶಯವೇ ಇಲ್ಲ. ಇಲ್ಲಿ ಔರಸಪದಪ್ರಯೋಗವನ್ನು ಮಾಡಿರುವುದರಿಂದ ಪರಕ್ಷೇತ್ರವೆಂಬ ಸಂಶಯವೂ ಉಳಿಯುವುದಿಲ್ಲ. ಆದರೆ ೭ನೆಯ ಶ್ಲೋಕದಿಂದ ೧೭ನೆಯ ಶ್ಲೋಕದವರೆಗೆ ಇರಾವಂತನ ಜನ್ಮವೃತ್ತಾಂತವು ಬಂದಿದೆ. ಭಂಡಾರ್‌ಕರ್ ರಿಸರ್ಚ್ ಇನ್‌ಸ್ಟಿಟ್ಯೂಟಿನವರೇ ಆದಿಯಾಗಿ ಎಲ್ಲರೂ ಈ ಪಾಠವನ್ನೇ ಅಂಗೀಕರಿಸಿರುತ್ತಾರೆ. ಆದುದರಿಂದ ನಾವೂ ಪ್ರಕಟಿಸಿರುತ್ತೇವೆ. ೭ ರಿಂದ ೧೭ರವರೆಗಿನ ಶ್ಲೋಕಗಳನ್ನು ಬಿಟ್ಟರೂ ಕಥೆಯು ಸುಸಂಗತವಾಗಿಯೇ ಮುನ್ನಡೆಯುತ್ತದೆ.

**ಅಭ್ಯವರ್ತತ ತತ್ಸೈನ್ಯಂ ಹೃಷ್ಟರೂಪಃ ಪರಂತಪಃ ॥೬॥**

**ಕಾಮವರ್ಣಜವೈರಶ್ವೈರ್ಬಹುಭಿಃ ಸಂವೃತೋ ನೃಪ ।**
**ತೇ ಹಯಾಃ ಕಾಞ್ಚನಾಪೀಡಾ ನಾನಾವರ್ಣಾ ಮನೋಜವಾಃ ॥೧೮॥**

ಪ್ರಾಯಶ್ಚಿತ್ತರೂಪವಾಗಿ ಪವಿತ್ರತೀರ್ಥಯಾತ್ರೆಯನ್ನು ಮಾಡುತ್ತಿದ್ದ

ಅರ್ಜುನನು ಪರಸ್ತ್ರೀಗಮನಮಾಡಿದನೆಂಬುದು ಬಹಳ ಅಸಂಗತ. ಹೀಗಿರು ವುದರಿಂದ ಈ ಕಥೆಯನ್ನು ಪ್ರಕ್ಷಿಪ್ತವೆಂದೇ ಭಾವಿಸಬಹುದಾಗಿದೆ.

ಅಲಂಬುಷ–ಇರಾವಂತರ ಯುದ್ಧವರ್ಣನೆಯು ಈ ಅಧ್ಯಾಯದಲ್ಲಿ ವಿಪುಲವಾಗಿದೆ. ಈ ಅಧ್ಯಾಯದಲ್ಲಿ ಇರಾವಂತನು ಶಕುನಿಯ ಐವರು ತಮ್ಮಂದಿರನ್ನೂ ಸಂಹಾರಮಾಡುತ್ತಾನೆ. ಅನಂತರ ಅಲಂಬುಷನಿಗೂ ಇರಾ ವಂತನಿಗೂ ಘೋರವಾಗಿ ಯುದ್ಧವು ನಡೆದು ಕಡೆಯಲ್ಲಿ ಇರಾವಂತನನ್ನು ಅಲಂಬುಷನು ಸಂಹಾರಮಾಡುತ್ತಾನೆ. ಮುಂದೆ ೯೧-೯೨-೯೩-೯೪ನೆಯ ಅಧ್ಯಾಯಗಳು ಘಟೋತ್ಕಚನ ಯುದ್ಧವರ್ಣನೆಯಿಂದ ತುಂಬಿಹೋಗಿವೆ. ೯೫ನೆಯ ಅಧ್ಯಾಯದಲ್ಲಿ ದುರ್ಯೋಧನನು ತನ್ನ ಕಷ್ಟವನ್ನು ಭೀಷ್ಮನೊಡನೆ ಹೇಳಿಕೊಂಡಾಗ ಭೀಷ್ಮನು ಭಗದತ್ತನನ್ನು ಘಟೋತ್ಕಚನೊಡನೆ ಯುದ್ಧ ಮಾಡಲು ಕಳುಹಿಸುತ್ತಾನೆ. ಅಧ್ಯಾಯದ ಕಡೆಯವರೆಗೂ ಭಗದತ್ತನ ಪರಾಕ್ರಮದ ವರ್ಣನೆಯಿದೆ. ೯೬ನೆಯ ಅಧ್ಯಾಯದಲ್ಲಿ ಇರಾವಂತನು ಹತ ನಾದನೆಂಬ ವಿಷಯವು ಅರ್ಜುನನಿಗೆ ತಿಳಿಯುತ್ತದೆ. ಆಗಲೂ ಸಹ ಅವನು ತನ್ನ ಸ್ವಭಾವಜನ್ಯವಾದ ಗುಣದಿಂದ ಯುದ್ಧವನ್ನು ಧಿಕ್ಕರಿಸುತ್ತಾನೆ. ಆದರೆ ಯುದ್ಧವನ್ನು ನಿಲ್ಲಿಸುವುದಿಲ್ಲ. ಇದೇ ಅಧ್ಯಾಯದಲ್ಲಿ ಎಂಟನೆಯ ದಿವಸದ ಕಡೆಯಲ್ಲಿ ಭೀಮನು ಧೃತರಾಷ್ಟ್ರನ ಒಂಬತ್ತು ಮಂದಿ ಮಕ್ಕಳನ್ನು ಸಂಹರಿ ಸುತ್ತಾನೆ. ಇದುವರೆಗೆ ಸಂಹರಿಸಿರುವ ಇಪ್ಪತ್ತೈದು ಮಂದಿ ಧೃತರಾಷ್ಟ್ರನ ಮಕ್ಕಳಲ್ಲಿ ಇಪ್ಪತ್ತುನಾಮಧೇಯಗಳು ಆದಿಪರ್ವದ ೧೧೬ನೆಯ ಅಧ್ಯಾಯ ದಲ್ಲಿ ಬರುತ್ತವೆ. ಉಳಿದ ಭೀಮ, ವೈರಾಟ, ಅನಾಧೃಷ್ಟಿ, ಕುಂಡಲೀ, ಕುಂಡಧಾರ–ಎಂಬುವುಗಳಲ್ಲಿ ಭೀಮ ಎಂಬ ಹೆಸರು ೬೭ನೆಯ ಅಧ್ಯಾಯದಲ್ಲಿ ಬರುತ್ತದೆ. ೧೧೬ನೆಯ ಅಧ್ಯಾಯದಲ್ಲಿ ಇದು ೪೩ನೆಯ 'ಭೀಮಬಲ' ಆಗಿರಬಹುದು. ಉಳಿದ ನಾಲ್ಕು ಹೆಸರುಗಳು ಯಾವ ಪಟ್ಟಿಯಲ್ಲೂ ಕಂಡುಬರುವುದಿಲ್ಲ. ಈ ಹೆಸರುಗಳನ್ನು ವೈರಾಟ-ವಿರಾವಿ (೯೨) ಅನಾಧೃಷ್ಟಿ-ಅನಾಧೃಷ್ಯ (೯೦) ಕುಂಡಲೀ-ಚಿತ್ರಕುಂಡಲ (೪೧) ಕುಂಡ ಧಾರ-ದಂಡಧಾರ (೮೧) ಅಥವಾ ಕುಂಡೋದರ (೪೮) ಎಂದು ಇಟ್ಟುಕೊಳ್ಳ ಬಹುದಾಗಿದೆ. ಭಂ.ರಿ. ಇನ್‌ಸ್ಟಿಟ್ಯೂಟ್ ಪುಸ್ತಕದಲ್ಲಿಯೂ ಸಹ ಈ ವಿಧ ವಾದ ವ್ಯತ್ಯಾಸಗಳೇ ಕಂಡುಬರುತ್ತವೆ. ಈ ಬಗೆಗೆ ಅವರು ಬೆಳಕು ಚೆಲ್ಲಿಲ್ಲ.

೯೬ನೆಯ ಅಧ್ಯಾಯದ ಕಡೆಯಲ್ಲಿ ರಣರಂಗದ ಘೋರವರ್ಣನೆಯಿದೆ. ಎಂಟನೆಯ ದಿವಸದಲ್ಲಿ ಪಾಂಡವರ ಕಡೆಯ ಭಾರಿ ನಷ್ಟವೆಂದರೆ ಇರಾವಂತನ ವಧೆ. ಕೌರವರ ಪಕ್ಷದಲ್ಲಿ ೧೭ ಮಂದಿ ಧೃತರಾಷ್ಟ್ರನ ಮಕ್ಕಳೂ, ಶಕುನಿಯ ಐವರು ಸಹೋದರರೂ ಹತರಾಗುತ್ತಾರೆ. ಸೈನ್ಯಗಳ ನಷ್ಟವು ಎರಡು ಕಡೆಗಳಲ್ಲಿಯೂ ಸಮವೆಂದೇ ಭಾವಿಸಬಹುದಾಗಿದೆ.

೯೭ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ದುರ್ಯೋಧನನು ತನ್ನ ಮಂತ್ರಿಗಳೊಡನೆ ಸಮಾಲೋಚಿಸಿ ಪಾಂಡವರನ್ನು ಕೊಲ್ಲಬೇಕು ಅಥವಾ ಕರ್ಣನನ್ನು ಯುದ್ಧ ಮಾಡಲು ಬರುವಂತೆ ಆಜ್ಞಾಪಿಸಬೇಕು-ಎಂಬ ಸಲಹೆಯನ್ನು ಭೀಷ್ಮನ ಮುಂದಿಡುವುದು

ಸಂಜಯನು ಮುಂದುವರಿದು ಹೇಳುತ್ತಾನೆ :

“ಮಹಾರಾಜ! ಯುದ್ಧದಲ್ಲಿ ಹೆಚ್ಚು ನಷ್ಟವನ್ನೇ ಅನುಭವಿಸಿದ ದುರ್ಯೋಧನನು ಸುಬಲನ ಮಗನಾದ ಶಕುನಿ, ನಿನ್ನ ಎರಡನೆಯ ಮಗ



ನಾದ ದುಃಶಾಸನ ಮತ್ತು ದುರ್ಜಯನಾದ ಸೂತಪುತ್ರನಾದ ಕರ್ಣ–ಇವರೊಡನೆ ಮಂತ್ರಾಲೋಚನೆಯನ್ನು ನಡೆಸಿದನು. **ಕಥಂ ಪಾಣ್ಡುಸುತಾಃ**

**ಸಂಖ್ಯೇ ಜೇತವ್ಯಾ ಸಗಣಾಃ-ಇತಿ** ಅನುಯಾಯಿಗಳಿಂದೊಡಗೂಡಿದ ಪಾಂಡವರನ್ನು ಯಾವ ರೀತಿಯಲ್ಲಿ ಜಯಿಸಬೇಕು?–ಎಂಬುದೇ ಮಂತ್ರಾಲೋಚನೆಯ ಮುಖ್ಯವಿಷಯವಾಗಿದ್ದಿತು. ಅನಂತರ ದುರ್ಯೋಧನನು ಆ ಎಲ್ಲರನ್ನೂ ಅದರಲ್ಲಿಯೂ ಮುಖ್ಯವಾಗಿ ಸೂತಪುತ್ರನನ್ನೂ, ಮಹಾಬಲನಾದ ಶಕುನಿಯನ್ನೂ ಸಂಬೋಧಿಸಿ ಹೇಳಿದನು :

"ಸುಹೃದರೇ! ದ್ರೋಣರು, ಭೀಷ್ಮ, ಕೃಪರು, ಶಲ್ಯ, ಸೋಮದತ್ತನ ಮಗನಾದ ಭೂರಿಶ್ರವಸ–ಇವರಲ್ಲಿ ಯಾರೂ ಕುಂತಿಯ ಮಕ್ಕಳಿಗೆ ಯಾವ ವಿಧವಾದ ಬಾಧೆಯನ್ನೂ ಉಂಟುಮಾಡುತ್ತಿಲ್ಲ. ಇದಕ್ಕೆ ಕಾರಣವನ್ನು ನಾನು ತಿಳಿಯದವನಾಗಿದ್ದೇನೆ. ಯುದ್ಧವು ಪ್ರಾರಂಭವಾಗಿ ಎಂಟು ದಿವಸಗಳು ಕಳೆದು ಹೋದರೂ ಆ ಐವರಲ್ಲಿ ಒಬ್ಬರೂ ಹತರಾಗಿರುವುದಿಲ್ಲ. ಮೇಲಾಗಿ ಅವರು ತಮ್ಮ ಆತ್ಮರಕ್ಷಣೆಯನ್ನು ಮಾಡಿಕೊಳ್ಳುತ್ತಿರುವರಲ್ಲದೇ–ನನ್ನ ಸೈನ್ಯವನ್ನೂ ಅಪಾರಸಂಖ್ಯೆಯಲ್ಲಿ ವಿನಾಶಗೊಳಿಸುತ್ತಿದ್ದಾರೆ. ಆದುದರಿಂದ ನಾನೀಗ ಕ್ಷಯಿಸಿಹೋದ ಸೈನ್ಯವುಳ್ಳವನೂ, ನಷ್ಟವಾಗಿಹೋದ ಶಸ್ತ್ರಾಸ್ತ್ರವುಳ್ಳವನೂ ಆಗಿದ್ದೇನೆ. (ಸೈನ್ಯವು ವಿನಷ್ಟವಾಗಿ ಶಸ್ತ್ರಾಸ್ತ್ರಗಳೂ ಮುಗಿಯುತ್ತಾ ಬಂದಿವೆ.) ದೇವತೆಗಳಿಂದಲೂ ಅವಧ್ಯರಾದ, ಶೂರರಾದ ಪಾಂಡವರಿಂದ ಪರಾಜಿತನಾಗುತ್ತಿರುವ ನಾನು ಈ ಯುದ್ಧದಲ್ಲಿ ಅಳಿಯುವೆನೋ, ಉಳಿಯುವೆನೋ–ಎಂಬ ಸಂಶಯದಿಂದ ಕೂಡಿದ್ದೇನೆ. ಈ ಸಮಯದಲ್ಲಿ ನಾನು ಯಾವ ವಿಧಾನವನ್ನನುಸರಿಸಿ ಯುದ್ಧಮಾಡಲಿ–ಎಂಬುದು ನನ್ನ ಈಗಿನ ಸಮಸ್ಯೆಯಾಗಿದೆ."

ದುರ್ಯೋಧನನು ಮಂತ್ರಾಲೋಚನೆಯ ವಿಷಯವನ್ನು ಮಂತ್ರಿಗಳ ಮುಂದೆ ಮಂಡಿಸಿದನಂತರ ನರಾಧಿಪನಾದ ದುರ್ಯೋಧನನನ್ನು ಕುರಿತು ಸೂತಪುತ್ರನು ಹೇಳಿದನು :

"ಭರತಶ್ರೇಷ್ಠನೇ! ದುಃಖಿಸಬೇಡ. ನಾನು ನಿನಗೆ ಅತ್ಯಂತಪ್ರಿಯವಾದ ಕಾರ್ಯವನ್ನೇ ಮಾಡುತ್ತೇನೆ. ಶಾಂತನುವಿನ ಮಗನಾದ ಭೀಷ್ಮನು ಎಷ್ಟು ಬೇಗ ಎಂದರೆ ಅಷ್ಟು ಬೇಗ ಮಹಾಯುದ್ಧದಿಂದ ಹೊರಟುಹೋಗಲಿ. ಗಾಂಗೇಯನು ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟು ಯುದ್ಧದಿಂದ ನಿವೃತ್ತನಾಗಿಬಿಟ್ಟರೆ ಆ ಭೀಷ್ಮನ ಕಣ್ಣೆದುರಿನಲ್ಲಿಯೇ ನಾನು ಸರ್ವಸೋಮಕಸಹಿತರಾದ

ಪಾರ್ಥರನ್ನು ಸಂಹಾರಮಾಡುತ್ತೇನೆ. ಈ ಮಾತನ್ನು ನಾನು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ, ದುರ್ಯೋಧನ! ಪಾಂಡವರ ವಿಷಯದಲ್ಲಿ ಭೀಷ್ಮನು ಅನುದಿನವೂ ದಯೆಯನ್ನು ತೋರಿಸುತ್ತಲೇ ಇದ್ದಾನೆ. ಮಿಗಿಲಾಗಿ ಆ ಮಹಾರಥರನ್ನು ಜಯಿಸಲು ಅವನು ಅಸಮರ್ಥನೆಂಬುದೂ ನಿಜ. ಭೀಷ್ಮನು ಮಹಾಭಿಮಾನೀ. ಯುದ್ಧದಲ್ಲಿ ಅವನು ಹೆಚ್ಚಿನ ಆಸಕ್ತಿಯಿರುವವ ನೆಂಬುದೂ ನಿಜ. ಅವನಿಗೆ ಯುದ್ಧವೆಂದರೆ ಬಹಳ ಪ್ರೀತಿ. ಆದರೆ ಪಾಂಡವರ ವಿಷಯದಲ್ಲಿ ದಯಾವಂತನಾಗಿರುವುದರಿಂದ ಅವನು ಒಟ್ಟುಗೂಡಿಬರುವ ಪಾಂಡವರನ್ನು ಯುದ್ಧದಲ್ಲಿ ಹೇಗೆತಾನೇ ಜಯಿಸಿಯಾನು?

ಮಹಾರಾಜ! ಈ ಸಮಯದಲ್ಲಿ ನಿನಗೆ ಒಳ್ಳೆಯ ಒಂದು ಸಲಹೆಯನ್ನು ಕೊಡುತ್ತೇನೆ. ಅದರಂತೆ ಮಾಡು. ನೀನು ಈ ಕೂಡಲೇ ಭೀಷ್ಮನ ಶಿಬಿರಕ್ಕೆ ಹೋಗು. ಗುರುವೂ, ವೃದ್ಧನೂ ಆಗಿರುವ ಅವನನ್ನು ಯುಕ್ತಿಯುಕ್ತವಾದ ಮಾತುಗಳಿಂದ ಒಪ್ಪಿಸಿ ಅವನ ಕೈಯಿಂದ ಶಸ್ತ್ರಾಸ್ತ್ರಗಳನ್ನು ಕೆಳಗೆ ಇಡಿಸಿಬಿಡು. ಭೀಷ್ಮನು ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟು ಯುದ್ಧದಿಂದ ಪ್ರತಿನಿವೃತ್ತನಾದೊಡನೆಯೇ ಸುಹೃದರಿಂದಲೂ, ಬಾಂಧವರಿಂದಲೂ ಕೂಡಿರುವ ಪಾಂಡವರು ನನ್ನೊಬ್ಬನಿಂದಲೇ ಹತರಾಗುವುದನ್ನು ನೀನೇ ಕಾಣುವೆ."

ಮಹಾರಾಜ! ಕರ್ಣನು ಹೀಗೆಂದು ಹೇಳಿದೊಡನೆಯೇ ನಿನ್ನ ಮಗ ದುರ್ಯೋಧನನು ತಮ್ಮನಾದ ದುಃಶಾಸನನೊಡನೆ ಹೇಳಿದನು :

"ದುಃಶಾಸನ! ನಮ್ಮ ಎಲ್ಲ ಪರಿವಾರದವರೂ ಎಲ್ಲ ಪ್ರಕಾರಗಳಲ್ಲಿಯೂ ಅನುಯಾತ್ರೆಗೆ (ನನ್ನನ್ನು ಹಿಂಬಾಲಿಸಲು) ಸಜ್ಜಾಗುವಂತೆ ವ್ಯವಸ್ಥೆ ಮಾಡು. ಬಹಳ ಬೇಗ ನೀನು ಈ ಕಾರ್ಯವನ್ನು ಮಾಡಿ ಮುಗಿಸಬೇಕಾಗಿದೆ."

ದುರ್ಯೋಧನನು ದುಃಶಾಸನನಿಗೆ ಹೀಗೆ ಹೇಳಿ ಕರ್ಣನ ಕಡೆಗೆ ತಿರುಗಿ ಹೇಳಿದನು :

"ಅರಿಂದಮನೇ! ಮನುಷ್ಯರಲ್ಲಿ ಶ್ರೇಷ್ಠನಾದ ಭೀಷ್ಮನನ್ನು ನಾನೀಗಲೇ ಶಸ್ತ್ರಾಸ್ತ್ರಗಳನ್ನು ಕೆಳಗಿಡುವಂತೆ ಒಪ್ಪಿಸಿ ಬಹಳ ಬೇಗ ನಿನ್ನ ಬಳಿಗೆ ಬಂದುಬಿಡು ತ್ತೇನೆ. ಭೀಷ್ಮನು ಯುದ್ಧದಿಂದ ವಿರಮಿಸಿದನಂತರ ನೀನು ಶಪಥಮಾಡಿರು

ವಂತೆ ಯುದ್ಧದಲ್ಲಿ ಶತ್ರುಗಳನ್ನು ಪ್ರಹರಿಸುವೆಯಲ್ಲವೇ?" ಎಂದು ಕರ್ಣನೊಡನೆ ಹೇಳಿದ ದುರ್ಯೋಧನನು ಬಹಳ ಅವಸರದಿಂದ ತನ್ನ ತಮ್ಮಂದಿರಿಂದ ಕೂಡಿಕೊಂಡು ದೇವತೆಗಳಿಂದ ಕೂಡಿದ ಇಂದ್ರನೋಪಾದಿಯಲ್ಲಿ ತನ್ನ ಶಿಬಿರದಿಂದ ಹೊರಟನು. ನೃಪಸಿಂಹನಾದ, ಶಾರ್ದೂಲಸಮವಿಕ್ರಮನಾದ ದುರ್ಯೋಧನನನ್ನು ಅವನ ತಮ್ಮನಾದ ದುಃಶಾಸನನು ಆ ಸಮಯದಲ್ಲಿ ಬಹಳ ಶೀಘ್ರವಾಗಿ ಕುದುರೆಯ ಮೇಲೆ ಹತ್ತಿಸಿದನು. ಸುವರ್ಣಮಯವಾದ ಅಂಗದಗಳನ್ನು ಧರಿಸಿದ್ದ, ತಲೆಯಲ್ಲಿ ಕಿರೀಟವನ್ನು ಧರಿಸಿದ್ದ, ಉಂಗುರವೇ ಮೊದಲಾದ ಹಸ್ತಾಭರಣಗಳನ್ನು ಧರಿಸಿದ್ದ ದುರ್ಯೋಧನನು ಕುದುರೆಯ ಮೇಲೆ ಕುಳಿತು ಮಾರ್ಗದಲ್ಲಿ ಹೋಗುತ್ತಿದ್ದಾಗ ಬಹಳವಾಗಿ ಶೋಭಿಸಿದನು. ಶಿರೀಷಪುಷ್ಪಸದೃಶವಾಗಿದ್ದ, ಚಿನ್ನದಂತೆ ಹೊಂಬಣ್ಣವಾಗಿದ್ದ, ಸುಗಂಧಯುಕ್ತವಾಗಿದ್ದ ಮತ್ತು ಬಹುಮೌಲ್ಯವಾಗಿದ್ದ ಚಂದನವನ್ನು ದುರ್ಯೋಧನನು ಲೇಪಿಸಿಕೊಂಡಿದ್ದನು. ಸ್ವಲ್ಪವೂ ಧೂಳಿಲ್ಲದ ನಿರ್ಮಲವಾದ ಮತ್ತು ಅಮೂಲ್ಯವಾದ ವಸ್ತ್ರಗಳನ್ನು ಧರಿಸಿದ್ದನು. ಮದೋನ್ಮತ್ತವಾದ ಸಿಂಹದ ವಿಲಾಸದ ನಡಿಗೆಯಂತೆ ರಾಜನ ನಡಿಗೆಯಿದ್ದಿತು. ವಿಮಲವಾದ ಕಾಂತಿಯಿಂದ ಕೂಡಿದ್ದ ದುರ್ಯೋಧನನು ಆಕಾಶದಲ್ಲಿರುವ ಸೂರ್ಯನಂತೆಯೇ ಪ್ರಕಾಶಿಸಿದನು.

ಭೀಷ್ಮನ ಶಿಬಿರದ ಕಡೆಗೆ ಹೋಗುತ್ತಿದ್ದ ನರವ್ಯಾಘ್ರನಾದ ದುರ್ಯೋಧನನನ್ನು ಮಹಾಧನುಷ್ಮಂತರಾದ ಕೌರವಪಕ್ಷದ ಎಲ್ಲ ರಾಜರೂ ಮತ್ತು ಅವನ ಸಹೋದರರೂ–ದೇವತೆಗಳು ಇಂದ್ರನನ್ನು ಅನುಸರಿಸಿ ಹೋದಂತೆ–ಹಿಂಬಾಲಿಸಿದರು. ಕೆಲವರು ಕುದುರೆಗಳ ಮೇಲೂ, ಮತ್ತೆ ಕೆಲವರು ಆನೆಗಳ ಮೇಲೂ ಮತ್ತೆ ಕೆಲವು ರಾಜರು ರಥಗಳ ಮೇಲೂ ಕುಳಿತು ದುರ್ಯೋಧನನನ್ನು ತಮ್ಮ ಮಧ್ಯದಲ್ಲಿಟ್ಟುಕೊಂಡು ಭೀಷ್ಮನ ಶಿಬಿರದ ಕಡೆಗೆ ಹೋಗುತ್ತಿದ್ದರು. ಸ್ವರ್ಗಲೋಕದಲ್ಲಿ ಇಂದ್ರನ ರಕ್ಷಣಾರ್ಥವಾಗಿ ದೇವತೆಗಳೆಲ್ಲರೂ ಕೂಡಿಕೊಂಡು ಆಯುಧಪಾಣಿಗಳಾಗಿ ಅವನ ಮುಂದೆ ಹೋಗುವಂತೆ–ಸುಹೃದರು ರಾಜನ ರಕ್ಷಣಾರ್ಥವಾಗಿ ಶಸ್ತ್ರಗಳನ್ನು ಹಿಡಿದು ಮುಂದೆ-ಮುಂದೆ ಹೋಗುತ್ತಿದ್ದರು. ಕೌರವರಾಜನಾದ ಮಹಾಬಲನಾದ ದುರ್ಯೋಧನನು ಕುರುಗಳಿಂದ ಪೂಜಿಸಲ್ಪಡುತ್ತಾ, ತನ್ನ ಸಹೋದರರಿಂದ ಪರಿವೃತನಾಗಿ, ರಾಜರಿಂದ ಅನುಸೃತನಾಗಿ,

ಯಶೋವಂತನಾದ ಗಾಂಗೇಯನ ಶಿಬಿರಕ್ಕೆ ಹೋಗುತ್ತಿದ್ದನು. ಉದಾರ ಸ್ವಭಾವದವನಾದ ದುರ್ಯೋಧನನು ಆ ಸಮಯದಲ್ಲಿ ಎಲ್ಲ ಶತ್ರುಗಳನ್ನೂ ಸಂಹಾರಮಾಡಲು ಸಮರ್ಥವಾದ, ಆನೆಯ ಸೊಂಡಿಲಿನಂತಿದ್ದ, ಅಸ್ತ್ರ ಪ್ರಹರಣದಲ್ಲಿ ನೈಪುಣ್ಯವನ್ನು ಹೊಂದಿದ್ದ ತನ್ನ ಬಲಗೈಯ್ಯನ್ನು ಮೇಲೆತ್ತಿ ನಾನಾದೇಶನಿವಾಸಿಗಳಾದ ಯೋಧರು ಎರಡು ಕೈಗಳನ್ನೂ ಮೇಲೆತ್ತಿ ಅರ್ಪಿಸುತ್ತಿದ್ದ ಪ್ರಣಾಮಾಂಜಲಿಗಳನ್ನು ಎಲ್ಲ ದಿಕ್ಕುಗಳಿಂದಲೂ ಸ್ವೀಕರಿಸುತ್ತಾ ಅವರು ಹೇಳುತ್ತಿದ್ದ ಸುಮಧುರವಾದ ಮಾತುಗಳನ್ನು ಕೇಳುತ್ತಿದ್ದನು.*

ಯಶೋವಂತನಾದ, ಸರ್ವಲೋಕೇಶ್ವರೇಶ್ವರನಾದ ಸುಯೋಧನನು, ಸೂತ-ಮಾಗಧರಿಂದ ಸ್ತೋತ್ರಮಾಡಲ್ಪಟ್ಟವನಾಗಿ ಪ್ರತಿಯಾಗಿ ಅವರನ್ನೂ ಯಥೋಚಿತವಾಗಿ ಸಂಪೂಜಿಸುತ್ತಾ ಭೀಷ್ಮನ ಶಿಬಿರಕ್ಕೆ ಪ್ರಯಾಣಮಾಡುತ್ತಿದ್ದನು. ಆಗ ರಾತ್ರಿಯಾಗಿದ್ದುದರಿಂದ ಸುಗಂಧಯುಕ್ತವಾದ ಎಣ್ಣೆಯನ್ನು ಹಾಕಿ ಉರಿಸುತ್ತಿದ್ದ ಜಾಜ್ವಲ್ಯಮಾನವಾಗಿದ್ದ ಸ್ವರ್ಣಮಯವಾದ ದೀಪಸ್ತಂಭಗಳನ್ನು ಹಿಡಿದು ಸೇವಕರು ರಾಜನನ್ನು ಸುತ್ತುವರಿದುಕೊಂಡು ಹೋಗುತ್ತಿದ್ದರು. ಸ್ವರ್ಣಮಯವಾದ ದೀಪಸ್ತಂಭಗಳನ್ನು ಹಿಡಿದಿರುವವರಿಂದ ಪರಿವೃತನಾಗಿದ್ದ ತೇಜಸ್ವಿಯಾದ ರಾಜನು–ಪ್ರದೀಪ್ತವಾದ ಮಹಾಗ್ರಹಗಳಿಂದ ಪರಿವೃತನಾದ ಚಂದ್ರನಂತೆಯೇ–ಕಾಣುತ್ತಿದ್ದನು. ಸುವರ್ಣಮಯವಾದ ಜರಿಯ ಅಂಚುಗಳಿಂದ ಕೂಡಿದ್ದ ಉಷ್ಣೀಶಗಳನ್ನು ಧರಿಸಿದ್ದ, ಕೈಗಳಲ್ಲಿ ಚಾವಟಿಗಳನ್ನೂ ಮತ್ತು ಬೆತ್ತದ ದಂಡಗಳನ್ನೂ ಹಿಡಿದಿದ್ದ ಸಿಪಾಯಿಗಳು

---

* ಲೋಕನಾಯಕರು ದೊಡ್ಡ ಜನಸ್ತೋಮದ ಮಧ್ಯದಲ್ಲಿದ್ದಾಗ ಬಲಗೈಯನ್ನೆತ್ತಿ ಅಳ್ಳಾಡಿಸುವ ಪದ್ಧತಿ ಇಂದಿನದಲ್ಲ. ದುರ್ಯೋಧನನು ಭೀಷ್ಮನ ಶಿಬಿರಕ್ಕೆ ಹೋಗುತ್ತಿದ್ದಾಗ ರಾಜನನ್ನು ನೋಡುವ ಸಲುವಾಗಿಯೇ ಅಪಾರಯೋಧಜನಸ್ತೋಮವು ಸೇರಿದ್ದಿತು. ಎಲ್ಲ ದೇಶದವರೂ ಆ ಜನಸಮೂಹದಲ್ಲಿದ್ದರು. ಅವರೆಲ್ಲರೂ ಒಂದೇ ಸಮನಾಗಿ 'ದುರ್ಯೋಧನಮಹಾರಾಜನಿಗೆ ಜಯವಾಗಲಿ' 'ಕುರುಸಿಂಹಾಸನವು ಶಾಶ್ವತವಾಗಿ ಉಳಿಯಲಿ'–ಇವೇ ಮುಂತಾದ ದುರ್ಯೋಧನನ ಕಿವಿಗಳಿಗೆ ಇಂಪಾಗುವಂತಹ ಜಯಕಾರಗಳನ್ನು ಮಾಡುತ್ತಾ ತಮ್ಮೆರಡು ಕೈಗಳನ್ನೂ ಮೇಲೆತ್ತಿ ಕೈಮುಗಿಯುತ್ತಿದ್ದರು. ಅದಕ್ಕೆ ಪ್ರತಿಯಾಗಿ ದುರ್ಯೋಧನನೂ ತನ್ನ ಬಲಗೈಯನ್ನು ಮೇಲೆತ್ತಿ ಅವರ ಪ್ರಣಾಮಗಳನ್ನು ಸ್ವೀಕರಿಸಿದ ಸೂಚನೆಗಾಗಿ ಅಳ್ಳಾಡಿಸುತ್ತಿದ್ದನು. ಈ ಪದ್ಧತಿಯು ಬಹಳ ಹಿಂದಿನದೆಂದು ಇದರಿಂದ ನಾವು ತಿಳಿಯಬಹುದಾಗಿದೆ.

ರಾಜನನ್ನು ನೋಡುವ ಸಲುವಾಗಿ ಮುನ್ನುಗ್ಗಿ ಬರುತ್ತಿದ್ದ ಜನರನ್ನು ತಡೆಯುತ್ತಾ, ಮೃದುವಾದ ಮಾತುಗಳಿಂದ ಪಕ್ಕಕ್ಕೆ ನಿಲ್ಲುವಂತೆ ಸೂಚಿಸುತ್ತಾ, ರಾಜನಿಗೂ–ರಾಜನ ಪರಿವಾರದವರಿಗೂ ಹಾದಿಮಾಡಿಕೊಡುತ್ತಾ, ಮುಂಭಾಗದಲ್ಲಿ ಮೆಲ್ಲ-ಮೆಲ್ಲನೆ ಹೋಗುತ್ತಿದ್ದರು. ಆ ವೇಳೆಗೆ ರಾಜನು ಶುಭಾವಹವಾದ ಭೀಷ್ಮನ ಶಿಬಿರವನ್ನು ತಲುಪಿ ಕುದುರೆಯಿಂದಿಳಿದು, ಶಿಬಿರದೊಳಕ್ಕೆ ಹೋಗಿ ಭೀಷ್ಮನನ್ನು ಸಂಧಿಸಿ ಅವನಿಗೆ ಅಭಿವಾದನಪೂರ್ವಕವಾಗಿ ನಮಸ್ಕಾರಮಾಡಿ, ಬಹುಮೂಲ್ಯವಾದ ಮೆತ್ತೆಯಿಂದ ಕೂಡಿದ್ದ ಸುವರ್ಣಮಯವಾದ ಮತ್ತು ಶ್ರೇಷ್ಠವಾದ ಸರ್ವತೋಭದ್ರಾಸನದಲ್ಲಿ ಕುಳಿತುಕೊಂಡನು. ತನ್ನ ಪರಾಭವವನ್ನು ನೆನೆದ ದುರ್ಯೋಧನನ ಕಣ್ಣುಗಳು ಅಶ್ರುಪೂರ್ಣವಾಗಿದ್ದುವು. ಮಾತನಾಡಲೂ ಸಹ ಸಾಧ್ಯವಾಗಲಿಲ್ಲ. ಬದ್ಧಾಂಜಲಿಯಾಗಿ ಗದ್ಗದಸ್ವರದಿಂದಲೇ ಭೀಷ್ಮನೊಡನೆ ಈ ಮಾತುಗಳನ್ನು ಹೇಳಿದನು :

"ಶತ್ರುಸೂದನನೇ! ಪಿತಾಮಹ! ನಿನ್ನನ್ನೇ ನಾವು ಆಶ್ರಯಿಸಿ ಯುದ್ಧದಲ್ಲಿ ಇಂದ್ರಸಹಿತರಾದ ಸುರಾಸುರರನ್ನೂ ಜಯಿಸುವ ಉತ್ಸಾಹವನ್ನು ಹೊಂದಿದ್ದೇವೆ. (ನಿನ್ನ ಸಹಕಾರದಿಂದ ಇಂದ್ರಸಹಿತರಾದ ದೇವತೆಗಳನ್ನೂ ಜಯಿಸುವ ಭರವಸೆಯು ನಮಗಿದೆ.) ಹೀಗಿರುವಾಗ ಸುಹೃದರಿಂದಲೂ, ಬಂಧುಗಳಿಂದಲೂ ಕೂಡಿರುವ ವೀರರಾದ ಪಾಂಡವರನ್ನು ಜಯಿಸಲಾರೆವೆ? (ನೀನು ಮನಸ್ಸು ಮಾಡಿದರೆ ಜಯಿಸುತ್ತೇವೆ–ಎಂಬುದರಲ್ಲಿ ನನಗಾವ ಸಂಶಯವೂ ಇಲ್ಲ) ಆದುದರಿಂದ ಪ್ರಭೋ! ಗಾಂಗೇಯ! ಈ ಸಮಯದಲ್ಲಿ ನನ್ನ ಮೇಲೆ ಕೃಪೆತೋರುವುದು ಯುಕ್ತವಾಗಿದೆ. ಮಹೇಂದ್ರನು ದಾನವರನ್ನು ಸಂಹರಿಸಿದಂತೆ–ನೀನು ಪಾಂಡವರನ್ನು ಸಂಹರಿಸು. ನೀನು ಹಿಂದೆ ಹೇಳಿದ್ದ ಮಾತು ನಿನ್ನ ಸ್ಮರಣೆಯಲ್ಲಿರಬಹುದು. ನನಗೆ ಸಂಪೂರ್ಣವಾಗಿ ಆಶ್ವಾಸನೆಯನ್ನು ನೀಡುತ್ತಾ ನೀನು ಹಿಂದೆ ಹೇಳಿದುದನ್ನು ಪುನಃ ನಿನ್ನ ಸ್ಮರಣೆಗೆ ತರುತ್ತೇನೆ :

**ಅಹಂ ಸರ್ವಾನ್ಮಹಾರಾಜ ನಿಹನಿಷ್ಯಾಮಿ ಸೋಮಕಾನ್ ।**
**ಪಾಞ್ಚಾಲಾನ್ಕೇಕಯೈಃ ಸಾರ್ಧಂ ಕರೂಷಾಂಶ್ಚೇತಿ ಭಾರತ ॥**

'ಮಹಾರಾಜ! ಭಾರತ! ನಾನು ಸೋಮಕರನ್ನೂ, ಕೇಕಯರಿಂದೊಡಗೂಡಿರುವ ಪಾಂಚಾಲರನ್ನೂ ಮತ್ತು ಕರೂಷರನ್ನೂ ಸಂಹಾರಮಾಡುತ್ತೇನೆ,' ಎಂದು ನನ್ನೊಡನೆ ಹೇಳಿದ್ದೆ.

ಆ ನಿನ್ನ ಮಾತು ಈಗ ಸತ್ಯವಾಗಿ ಪರಿಣಮಿಸಲಿ. ಯುದ್ಧದಲ್ಲಿ ನಿನ್ನನ್ನೆದುರಿಸಲು ಬರುವ ಪಾರ್ಥರನ್ನು ಸಂಹರಿಸು. ಮಹಾಧನುಷ್ಮಂತರಾದ ಸೋಮಕರನ್ನೂ ಸಂಹರಿಸು. ನೀನು ಹೇಳಿದಂತೆ ನಡೆದು ಸತ್ಯವಚನನಾಗು.

**ದಯಯಾ ಯದಿ ವಾ ರಾಜನ್ದ್ವೇಷ್ಯಭಾವಾನ್ಮಮ ಪ್ರಭೋ ।**
**ಮನ್ದಭಾಗ್ಯತಯಾ ವಾಪಿ ಮಮ ರಕ್ಷಸಿ ಪಾಣ್ಡವಾನ್ ॥೪೧॥**

**ಅನುಜಾನೀಹಿ ಸಮರೇ ಕರ್ಣಮಾಹವಶೋಭಿನಮ್ ।**
**ಸ ಜೇಷ್ಯತಿ ರಣೇ ಪಾರ್ಥಾನ್ಸ ಸುಹೃದ್ಗಣಬಾನ್ಧವಾನ್ ॥೪೨॥**

ಪ್ರಭುವೇ! ಪಾಂಡವರ ಮೇಲಿನ ದಯೆಯಿಂದಲೋ, ನನ್ನ ಮೇಲಿನ ದ್ವೇಷದಿಂದಲೋ ಅಥವಾ ನನ್ನ ದೌರ್ಭಾಗ್ಯದಿಂದಲೋ–ನೀನು ಪಾಂಡವರನ್ನು ಸಂಹರಿಸದೇ ಇದುವರೆಗೂ ಸಂರಕ್ಷಿಸಿದಂತೆ ಮುಂದೆಯೂ ರಕ್ಷಿಸುತ್ತಲೇ ಇರುವೆಯಾದರೆ–ರಣರಂಗಕ್ಕೇ ಶೋಭಾಯಮಾನನಾಗಿ ಕಾಣುವ ಕರ್ಣನಿಗೆ ಯುದ್ಧದಲ್ಲಿ ಭಾಗವಹಿಸಲು ಅನುಮತಿಯನ್ನು ನೀಡು. ಅವನು ಯುದ್ಧದಲ್ಲಿ ಸುಹೃದ್ಬಾಂಧವಯುಕ್ತರಾದ ಪಾಂಡವರನ್ನು ಜಯಿಸುವನು. (ಕರ್ಣನಿಗೆ ಯುದ್ಧಮಾಡಲು ಅನುಮತಿಯನ್ನು ಕೊಡುವುದೆಂದರೆ 'ನೀನು ಶಸ್ತ್ರವನ್ನು ಕೆಳಗಿಡು' ಎಂದೇ ಅರ್ಥ. ಏಕೆಂದರೆ : ಭೀಷ್ಮನು ಶಸ್ತ್ರವನ್ನು ಕೆಳಗಿಟ್ಟು ಯುದ್ಧದಿಂದ ನಿವೃತ್ತನಾಗದಿದ್ದರೆ ಕರ್ಣನು ರಣರಂಗವನ್ನು ಪ್ರವೇಶಿಸುವಂತೆಯೇ ಇಲ್ಲ. ಇದು ಕರ್ಣನ ಪ್ರತಿಜ್ಞೆ. ದುರ್ಯೋಧನನಿಲ್ಲಿ 'ಅನುಮತಿಯನ್ನು ಕೊಡು'–ಎಂದು ಹೇಳಿರುವುದರ ಮಾತಿನ ಅಭಿಪ್ರಾಯವು 'ನೀನು ಯುದ್ಧದಿಂದ ವಿರಮಿಸು' ಎಂದೇ ಆಗುತ್ತದೆ.)

ಮಹಾರಾಜ! ನಿನ್ನ ಮಗನಾದ ದುರ್ಯೋಧನನು ಸತ್ಯಪರಾಕ್ರಮನಾದ ಭೀಷ್ಮನೊಡನೆ ಇಷ್ಟು ಮಾತ್ರ ಹೇಳಿ ಸುಮ್ಮನಾದನು."

೯೭ನೆಯ ಅಧ್ಯಾಯವು ಮುಗಿಯಿತು.

೯೮ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಷ್ಮನು ದುರ್ಯೋಧನನಿಗೆ ಅರ್ಜುನನ ಪರಾಕ್ರಮವನ್ನು ವಿವರಿಸಿದುದು : ಶಕ್ತಿಮೀರಿ ಯುದ್ಧಮಾಡಲು ಪ್ರತಿಜ್ಞೆ ಮಾಡಿದುದು : ದುರ್ಯೋಧನನು ಭೀಷ್ಮನ ರಕ್ಷಣೆಗೆ ವ್ಯವಸ್ಥೆಮಾಡಿದುದು

ಸಂಜಯನು ಮುಂದುವರಿದು ಹೇಳುತ್ತಾನೆ :

“ಮಹಾರಾಜ! ದುರ್ಯೋಧನನ ಮಾತೆಂಬ ಮುಳ್ಳುಗಳಿಂದ ಬಹಳ ಆಳದವರೆಗೂ ಚುಚ್ಚಲ್ಪಟ್ಟ ವಿಶಾಲಮನಸ್ಕನಾದ ಭೀಷ್ಮನು ಬಹಳ ದುಃಖ ದಿಂದ ಪೀಡಿತನಾಗಿ ಯಾವುದೊಂದು ಅಪ್ರಿಯವಾದ ಮಾತನ್ನೂ ಆಡಲಿಲ್ಲ. ಮಾತೆಂಬ ಅಂಕುಶದಿಂದ ಬಹಳ ಗಾಢವಾಗಿ ಇರಿಯಲ್ಪಟ್ಟಿದ್ದ ಭೀಷ್ಮನು ದುಃಖ-ರೋಷಸಮನ್ವಿತನಾಗಿ ಬಹಳ ಹೊತ್ತು ಯೋಚಿಸುತ್ತಾ ಕುಳಿತಿದ್ದು ಅಂಕುಶದಿಂದ ಚುಚ್ಚಲ್ಪಟ್ಟ ಆನೆಯಂತೆಯೇ ಬಾರಿ-ಬಾರಿಗೂ ಸುದೀರ್ಘ ವಾಗಿ ನಿಟ್ಟುಸಿರುಬಿಡುತ್ತಿದ್ದನು. ಲೋಕವ್ಯವಹಾರಗಳನ್ನು ತಿಳಿದವರಲ್ಲಿ ಶ್ರೇಷ್ಠನಾದ ಭೀಷ್ಮನು ದೇವಾಸುರ-ಗಂಧರ್ವಲೋಕಗಳಿಂದ ಸಹಿತವಾಗಿ ಎಲ್ಲ ಲೋಕಗಳನ್ನೂ ಕೋಪದಿಂದ ದಹಿಸಲು ನಿಶ್ಚಯಿಸಿರುವನೋ– ಎಂಬಂತೆ ತನ್ನೆರಡು ಕಣ್ಣುಗಳನ್ನೂ ಮೇಲಕ್ಕೆ ಮಾಡಿ ಕ್ಷಣಕಾಲ ದುರದುರನೆ ನೋಡುತ್ತಿದ್ದನು.

ಅನಂತರ ತನ್ನ ಕೋಪವನ್ನು ತನ್ನಲ್ಲಿಯೇ ಅಡಗಿಸಿಕೊಂಡು ಸೌಮ್ಯ ಭಾವದಿಂದಲೇ ನಿನ್ನ ಮಗನೊಡನೆ ಈ ಮಾತುಗಳನ್ನು ಹೇಳಿದನು :

“ದುರ್ಯೋಧನ! ಮಾತುಗಳೆಂಬ ಶಲ್ಯಗಳಿಂದ ನನ್ನನ್ನೇಕೆ ಹೀಗೆ ತಿವಿಯುತ್ತಿರುವೆ? ಶತ್ರುಗಳನ್ನು ಜಯಿಸಲು ನಾನೂ ಯಥಾಶಕ್ತಿ ಪ್ರಯತ್ನಿಸುತ್ತಿದ್ದೇನೆ. ನಿನಗೆ ಪ್ರಿಯವಾದ ಕಾರ್ಯವನ್ನೇ ಮಾಡುತ್ತಿದ್ದೇನೆ. ನಿನಗೆ ಪ್ರಿಯವನ್ನುಂಟುಮಾಡಬೇಕೆಂದೇ ನನ್ನ ಪ್ರಾಣಗಳನ್ನು ಸಮರಾಗ್ನಿಗೆ ಆಹುತಿಯನ್ನಾಗಿ ಅರ್ಪಿಸುತ್ತಿದ್ದೇನೆ. ಹೀಗೆಲ್ಲಾ ನಾನು ನಿನಗಾಗಿ ನಿನ್ನ ಪ್ರೀತಿಗಾಗಿ ಮಾಡುತ್ತಿದ್ದರೂ ನೀನು ನನ್ನನ್ನು ಮಾತುಗಳ ರೂಪವಾದ ಮುಳ್ಳಿನಿಂದ ಚುಚ್ಚುತ್ತಿರುವುದಕ್ಕೆ ಕಾರಣವನ್ನು ತಿಳಿಯದವನಾಗಿದ್ದೇನೆ.

ಪಾಂಡವರ ವಧೆಯು ಸಾಧ್ಯವಾಗಲಾರದೆಂಬುದಕ್ಕೆ ಸಾಕಷ್ಟು ನಿದರ್ಶನಗಳಿವೆ. ಅದು ನಿನ್ನ ಅನುಭವಕ್ಕೂ ಬಂದಿದೆ. ಅದನ್ನು ನೀನು ಈಗ ಸ್ಮರಣೆಗೆ ತಂದುಕೊಳ್ಳಬೇಕಾಗಿದೆ.

**ಯದಾ ತು ಪಾಣ್ಡವಃ ಶೂರಃ ಖಾಣ್ಡವೇಽಗ್ನಿಮತರ್ಪಯತ್ ।**
**ಪರಾಜಿತ್ಯ ರಣೇ ಶಕ್ರಂ ಪರ್ಯಾಪ್ತಂ ತನ್ನಿದರ್ಶನಮ್ ॥೬॥**

ಯಾವಾಗ ಶೂರನಾದ ಅರ್ಜುನನು ಇಂದ್ರನನ್ನು ಪರಾಜಯಗೊಳಿಸಿ ಖಾಂಡವದಾಹಕ್ಕೆ ರಕ್ಷಣೆಯನ್ನೊದಗಿಸಿ ಯಜ್ಞೇಶ್ವರನನ್ನು ತೃಪ್ತಿಗೊಳಿಸಿದನೋ ಆ ಒಂದು ನಿದರ್ಶನವೇ ಪಾಂಡವರು ಅಜಯ್ಯರೆಂಬುದನ್ನು ಸಮರ್ಥಿಸುವುದಕ್ಕೆ ಪರ್ಯಾಪ್ತವಾಗಿದೆ.

**ಯದಾ ಚ ತ್ವಾಂ ಮಹಾಬಾಹೋ ಗನ್ಧರ್ವೈರ್ಹೃತಮೋಜಸಾ ।**
**ಅಮೋಚಯತ್ಪಾಣ್ಡುಸುತಃ ಪರ್ಯಾಪ್ತಂ ತನ್ನಿದರ್ಶನಮ್ ॥೭॥**

ಮಹಾಬಾಹುವೇ! ಗಂಧರ್ವರಾಜನು ನಿನ್ನನ್ನು ಬಲಾತ್ಕಾರಪೂರ್ವಕವಾಗಿ ಅಪಹರಿಸಿಕೊಂಡು ಹೋದಾಗ ಪಾಂಡುಪುತ್ರನಾದ ಅರ್ಜುನನು ಮಹಾಬಲಿಷ್ಠರಾದ ಗಂಧರ್ವರೊಡನೆ ಯುದ್ಧಮಾಡಿ ನಿನ್ನನ್ನು ಬಿಡಿಸಿಕೊಂಡು ಬಂದನು. ಪಾಂಡವರು ಅಜಯ್ಯರೆಂಬುದಕ್ಕೆ ಆ ಒಂದು ನಿದರ್ಶನವೂ ಸಾಕಾಗಿದೆ.

**ದ್ರವಮಾಣೇಷು ಶೂರೇಷು ಸೋದರೇಷು ತವ ಪ್ರಭೋ ।**
**ಸೂತಪುತ್ರೇ ಚ ರಾಧೇಯೇ ಪರ್ಯಾಪ್ತಂ ತನ್ನಿದರ್ಶನಮ್ ॥೮॥**

ಆ ಸಮಯದಲ್ಲಿ ಶೂರರಾದ ನಿನ್ನ ಸಹೋದರರೂ, ಅಜಯ್ಯನೆಂದು ನೀನು ಭಾವಿಸಿರುವ ಸೂತಪುತ್ರನಾದ ರಾಧೇಯನೂ ಗಂಧರ್ವರಿಂದ ತಪ್ಪಿಸಿಕೊಳ್ಳಲು ನಿನ್ನೊಬ್ಬನನ್ನೇ ಬಿಟ್ಟು ಪಲಾಯನಮಾಡಿದರು. ನಿಮ್ಮ ಕಡೆಯ ಶೂರರ ಅದರಲ್ಲಿಯೂ ನಿನಗೆ ಅತ್ಯಂತಪ್ರಿಯನಾದ ರಾಧೇಯನ ಪರಾಕ್ರಮವೆಷ್ಟೆಂಬುದನ್ನು ಅಳೆಯಲು ಆ ಒಂದು ನಿದರ್ಶನವೇ ಸಾಕಾಗಿದೆಯಲ್ಲವೇ!

**ಯಚ್ಚ ನಃ ಸಹಿತಾನ್ಸರ್ವಾನ್ವಿರಾಟನಗರೇ ತದಾ ।**
**ಏಕ ಏವ ಸಮುದ್ಯಾತಃ ಪರ್ಯಾಪ್ತಂ ತನ್ನಿದರ್ಶನಮ್ ॥೯॥**

ನಾವೆಲ್ಲರೂ ವಿರಾಟನಗರಕ್ಕೆ ಗೋಗ್ರಹಣಕ್ಕಾಗಿ ಒಟ್ಟುಗೂಡಿಯೇ

ಹೋಗಿದ್ದೆವು. ಆ ಸಮಯದಲ್ಲಿ ಅರ್ಜುನನೊಬ್ಬನೇ ಎಲ್ಲರನ್ನೂ ಎದುರಿಸಿ ಯುದ್ಧಮಾಡಿದನು. ಅದೇ ಅರ್ಜುನನು ಯುದ್ಧದಲ್ಲಿ ಅಜಯ್ಯನೆಂಬುದಕ್ಕೆ ಪರ್ಯಾಪ್ತವಾದ ನಿದರ್ಶನವಾಗಿದೆ.

**ದ್ರೋಣಂ ಚ ಯುಧಿ ಸಂರಬ್ಧಂ ಮಾಂ ಚ ನಿರ್ಜಿತ್ಯ ಸಂಯುಗೇ ।**
**ವಾಸಾಂಸಿ ಚ ಸಮಾದತ್ತ ಪರ್ಯಾಪ್ತಂ ತನ್ನಿದರ್ಶನಮ್ ॥೧೦॥**

ಕ್ರುದ್ಧರಾಗಿದ್ದ ದ್ರೋಣರನ್ನೂ ಮತ್ತು ನನ್ನನ್ನೂ ಯುದ್ಧದಲ್ಲಿ ಪರಾಜಯಗೊಳಿಸಿ ಆ ಸಮಯದಲ್ಲಿ ನಮ್ಮ ಬಟ್ಟೆಗಳನ್ನೂ ಅವನು ಒಯ್ದನು. ಅದರಿಂದ ಕಿರೀಟಿಯು ಅಜಯ್ಯನೆಂಬುದಕ್ಕೆ ಆ ಒಂದು ನಿದರ್ಶನವೂ ಪರ್ಯಾಪ್ತವೆಂದು ನಾನು ಭಾವಿಸುತ್ತೇನೆ.

**ತಥಾ ದ್ರೌಣಿಂ ಮಹೇಷ್ವಾಸಂ ಶಾರದ್ವತಮಥಾಪಿ ಚ ।**
**ಗೋಗ್ರಹೇ ಜಿತವಾನ್ಪೂರ್ವಂ ಪರ್ಯಾಪ್ತಂ ತನ್ನಿದರ್ಶನಮ್ ॥೧೧॥**

ಈ ಹಿಂದೆ ಅದೇ ಗೋಗ್ರಹಣದ ಸಮಯದಲ್ಲಿ ಏಕಾಕಿಯಾದ ಪಾರ್ಥನು ಮಹಾಧನುಷ್ಮಂತನಾದ ಅಶ್ವತ್ಥಾಮನನ್ನೂ, ಕೃಪರನ್ನೂ ಜಯಿಸಿದನು. ಆ ಒಂದು ನಿದರ್ಶನವೂ ಕೃಷ್ಣಸಖನು ಅಜಯ್ಯನೆಂಬುದನ್ನು ಸ್ಪಷ್ಟಪಡಿಸುತ್ತದೆ.

**ವಿಜಿತ್ಯ ಚ ಯದಾ ಕರ್ಣಂ ಸದಾ ಪುರುಷಮಾನಿನಮ್ ।**
**ಉತ್ತರಾಯೈ ದದೌ ವಸ್ತ್ರಂ ಪರ್ಯಾಪ್ತಂ ತನ್ನಿದರ್ಶನಮ್ ॥೧೨॥**

ಗೋಗ್ರಹಣಸಮಯದಲ್ಲಿ ನಮ್ಮೊಡನೆ ಕರ್ಣನೂ ಇಲ್ಲದೇ ಇರಲಿಲ್ಲ. ಅವನೂ ನಮ್ಮೊಡನೆ ಬಂದಿದ್ದನು. ತಾನೊಬ್ಬನೇ ಪ್ರಪಂಚದಲ್ಲಿ ವೀರಪುರುಷನೆಂದು ಯಾವಾಗಲೂ ಭಾವಿಸಿರುವ ಕರ್ಣನನ್ನೂ ಅರ್ಜುನನು ಜಯಿಸಿ ಅವನ ವಸ್ತ್ರವನ್ನೂ ಉತ್ತರನ ಮೂಲಕವಾಗಿ ತೆಗೆಸಿ, ಆ ವಸ್ತ್ರವನ್ನು ಉತ್ತರೆಗೆ ಕೊಟ್ಟನು. ಅರ್ಜುನನು ಅಜಯ್ಯನೆಂಬುದಕ್ಕೆ ಆ ನಿದರ್ಶನವೂ ಪರ್ಯಾಪ್ತವೆಂದು ನಾನು ಭಾವಿಸುತ್ತೇನೆ.

**ನಿವಾತಕವಚಾನ್ಯುದ್ಧೇ ವಾಸವೇನಾಪಿ ದುರ್ಜಯಾನ್ ।**
**ಜಿತವಾನ್ಸಮರೇ ಪಾರ್ಥಃ ಪರ್ಯಾಪ್ತಂ ತನ್ನಿದರ್ಶನಮ್ ॥೧೩॥**

ಇಂದ್ರನಿಂದಲೂ ಜಯಿಸಲು ಅಸಾಧ್ಯರಾಗಿದ್ದ ನಿವಾತಕವಚರನ್ನು

ಏಕಾಕಿಯಾದ ಅರ್ಜುನನೊಬ್ಬನೇ ಜಯಿಸಿದನು. ಖಂಡಿತವಾಗಿಯೂ ಆ ಒಂದು ನಿದರ್ಶನವೇ ಪಾರ್ಥನು ಅಜಯ್ಯನೆಂಬುದಕ್ಕೆ ಸಾಕೆಂದು ನಾನು ಭಾವಿಸುತ್ತೇನೆ.

**ಕೋ ಹಿ ಶಕ್ತೋ ರಣೇ ಜೇತುಂ ಪಾಣ್ಡವಂ ರಭಸಂ ತದಾ ।**
**ಯಸ್ಯ ಗೋಪ್ತಾ ಜಗದ್ಗೋಪ್ತಾ ಶಙ್ಖಚಕ್ರಗದಾಧರಃ ॥೧೪॥**

**ವಾಸುದೇವೋಽನನ್ತಶಕ್ತಿಃ ಸೃಷ್ಟಿಸಂಹಾರಕಾರಕಃ ।**
**ಸರ್ವೇಶ್ವರೋ ದೇವದೇವಃ ಪರಮಾತ್ಮಾ ಸನಾತನಃ ॥೧೫॥**

ಜಗತ್ತನ್ನೇ ಸಂರಕ್ಷಿಸುವ, ಶಂಖ-ಚಕ್ರ-ಗದಾಧರನಾದ, ಅನಂತಶಕ್ತಿಯಾದ, ಸೃಷ್ಟಿ-ಸಂಹಾರಕನಾದ, ಸರ್ವೇಶ್ವರನಾದ, ದೇವದೇವನಾದ, ಸನಾತನನಾದ, ಪರಮಾತ್ಮನಾದ ವಾಸುದೇವನೇ ಯಾವನಿಗೆ ರಕ್ಷಕನಾಗಿದ್ದಾನೆಯೋ ಮತ್ತು ಯಾವನು ಮಹಾವೇಗದಿಂದ ಬಾಣಗಳ ಆದಾನ-ಸಂಧಾನ-ಪ್ರಯೋಗಗಳನ್ನು ಮಾಡುತ್ತಾನೆಯೋ ಅಂತಹ ವೀರನಾದ ಅರ್ಜುನನನ್ನು ಯುದ್ಧಕಾಲದಲ್ಲಿ ಜಯಿಸಬಲ್ಲವನು ಯಾವನಿದ್ದಾನೆ?

ಈ ವಿಷಯವು ನಿನಗೆ ತಿಳಿಯದೇ ಇಲ್ಲ. ನಾರದರೇ ಮೊದಲಾದ ಮಹರ್ಷಿಗಳೂ ನಿನಗೆ ಅನೇಕ ಬಾರಿ ಈ ವಿಷಯವನ್ನೇ ಒತ್ತಿಯೊತ್ತಿ ಹೇಳಿದ್ದಾರೆ. ಆದರೆ ನೀನು ಕೇವಲ ಭ್ರಾಂತಿಯ ಕಾರಣದಿಂದಾಗಿ ಯಾವ ಮಾತನ್ನು ಹೇಳಬಹುದು ; ಯಾವ ಮಾತನ್ನು ಹೇಳಬಾರದು–ಎಂಬುದನ್ನೂ ತಿಳಿಯದೇ ಮಾತನಾಡುತ್ತಿರುವೆ.

**ಮುಮೂರ್ಷುರ್ಹಿ ನರಃ ಸರ್ವಾನ್ವೃಕ್ಷಾನ್ಪಶ್ಯತಿ ಕಾಞ್ಚನಾನ್ ।**
**ತಥಾ ತ್ವಮಪಿ ಗಾನ್ಧಾರೇ ವಿಪರೀತಾನಿ ಪಶ್ಯಸಿ ॥೧೬॥**

ಗಾಂಧಾರೀನಂದನ! ಮರಣವು ಸನ್ನಿಹಿತವಾದಾಗ ಮನುಷ್ಯನು ಎಲ್ಲ ವೃಕ್ಷಗಳನ್ನೂ ಸ್ವರ್ಣಮಯವನ್ನಾಗಿಯೇ ಕಾಣುತ್ತಾನೆ. ಅದೇ ರೀತಿಯಲ್ಲಿ ನೀನೂ ಸಹ (ಮೃತ್ಯುಮುಖನಾಗಿರುವುದರಿಂದ) ಎಲ್ಲ ವಿಷಯಗಳನ್ನೂ ವಿಪರೀತವಾಗಿಯೇ ನೋಡುತ್ತಿರುವೆ. ಪಾಂಡವರೊಡನೆಯೂ, ಸೃಂಜಯರೊಡನೆಯೂ ನೀನೇ ವೈರವನ್ನು ಕಟ್ಟಿಕೊಂಡೆ. ಈಗ ಅವರೊಡನೆ ನೀನೇ ಯುದ್ಧ ಮಾಡು. ನಿನ್ನ ಪೌರುಷವನ್ನು ತೋರಿಸು ನೋಡೋಣ! ಸೋಮಕರನ್ನೂ,

ಪಾಂಚಾಲರನ್ನೂ, ಕೇಕಯರನ್ನೂ ಕರೂಷರನ್ನೂ ಸಂಹಾರಮಾಡುವೆನೆಂದು ನಾನು ಹೇಳಿರುವುದು ನಿಜ. ಅದರಂತೆ ಈಗಲೂ ನನ್ನನ್ನು ಎದುರಿಸಲು ಬರುವ ಸೋಮಕರನ್ನೂ, ಪಾಂಚಾಲರನ್ನೂ ಸಂಹಾರಮಾಡುತ್ತೇನೆ. ಆದರೆ ಶಿಖಂಡಿಯನ್ನು ಮಾತ್ರ ಸಂಹಾರಮಾಡಲು ಹೋಗುವುದಿಲ್ಲ.* ಯುದ್ಧದಲ್ಲಿ ಅವರಿಂದಲಾದರೂ ನಾನು ಹತನಾಗಿ ಯಮಾಲಯಕ್ಕೆ ಹೋಗುತ್ತೇನೆ. ಅವರನ್ನಾದರೂ ಸಂಹಾರಮಾಡಿ ನಿನಗೆ ಪ್ರೀತಿಯನ್ನುಂಟುಮಾಡುತ್ತೇನೆ. ದ್ರುಪದರಾಜಭವನದಲ್ಲಿ ಮೊದಲು ಶಿಖಂಡೀ ಎಂಬ ಹೆಣ್ಣುಮಗುವೇ ಹುಟ್ಟಿದ್ದಿತು. ಯುವತಿಯಾಗಿದ್ದ ಆ ಶಿಖಂಡಿನಿಯೇ (ಯಕ್ಷನ) ವರದಾನದಿಂದಾಗಿ ಯುವಕನಾದನು. ಪ್ರಾಣತ್ಯಾಗಮಾಡಬೇಕಾದ ಸಮಯವೇ ಒದಗಿದರೂ ನಾನು ಅವನನ್ನು ಸಂಹಾರಮಾಡುವುದಿಲ್ಲ. ಜನ್ಮದಲ್ಲಿಯೇ ಸ್ತ್ರೀಯಾಗಿ ಬ್ರಹ್ಮನಿಂದ ಸೃಷ್ಟಿಮಾಡಲ್ಪಟ್ಟಿದ್ದ ಅವಳು ಈಗಲೂ ಸಹ ಶಿಖಂಡಿನೀ ಎಂಬ ಸ್ತ್ರೀಯೇ ಆಗಿದ್ದಾಳೆಂದು ನಾನು ಭಾವಿಸುತ್ತೇನೆ. ಗಾಂಧಾರೇ! ಈಗ ನೀನು ಹೋಗಿ ಸುಖವಾಗಿ ಮಲಗು. ನಾನು ನಾಳೆ ಭಯಂಕರವಾದ ಯುದ್ಧವನ್ನೇ ಮಾಡುತ್ತೇನೆ. ಎಂದಿನವರೆಗೆ ಭೂಮಿಯಿರುತ್ತದೆಯೋ ಅಂದಿನವರೆಗೂ ನಾಳೆ ನಡೆಯುವ ಯುದ್ಧದ ಪ್ರಸ್ತಾಪವನ್ನು ಜನರು ಮಾಡುತ್ತಲೇ ಇರುತ್ತಾರೆ. ಅಂತಹ ಯುದ್ಧವನ್ನು ನಾಳೆ ನಾನು ಮಾಡುತ್ತೇನೆ."

ಮಹಾರಾಜ! ಈ ರೀತಿಯಲ್ಲಿ ಭೀಷ್ಮನಿಂದ ಭರವಸೆಯನ್ನು ಹೊಂದಿದ ನಿನ್ನ ಪುತ್ರನು ಭೀಷ್ಮನಿಗೆ ತಲೆಬಾಗಿ ನಮಸ್ಕರಿಸಿ ತನ್ನ ಬಿಡಾರಕ್ಕೆ

---

* ಹಿಂದಿನ ಅಧ್ಯಾಯದಲ್ಲಿಯೂ ಇಲ್ಲಿಯೂ ಒಂದು ವಿಶೇಷವನ್ನು ನಾವು ಗಮನಿಸಬಹುದಾಗಿದೆ. ದುರ್ಯೋಧನನು ಹೇಳುವಾಗಲೂ ನೀನು 'ಸೋಮಕರನ್ನೂ, ಪಾಂಚಾಲರನ್ನೂ ಕೇಕಯರನ್ನೂ, ಕರೂಷರನ್ನೂ ಸಂಹಾರಮಾಡುವುದಾಗಿ ಹೇಳಿದ್ದೆ. ಆ ಮಾತು ಸತ್ಯವಾಗಲಿ' ಎಂದು ಹೇಳುತ್ತಾನೆ. ಮುಂದಕ್ಕೆ 'ಪಾರ್ಥರನ್ನು ಸಂಹರಿಸು' ಎಂದು ಹೇಳುತ್ತಾನೆಯೇ ಹೊರತು 'ಪಾರ್ಥರನ್ನು ಸಂಹರಿಸುವೆನೆಂದು ನೀನು ಪ್ರತಿಜ್ಞೆಮಾಡಿದ್ದೆ' ಎಂಬುದಾಗಿ ಹೇಳುವುದಿಲ್ಲ. ಅರ್ಥಾತ್ ಪಾರ್ಥರನ್ನು ಸಂಹರಿಸುವೆನೆಂದು ಭೀಷ್ಮನು ಯಾವ ಸಂದರ್ಭದಲ್ಲಿಯೂ ಹೇಳಿಲ್ಲ. ಇಲ್ಲಿಯೂ ಸಹ ಪಾಂಡವರನ್ನು ಬಿಟ್ಟು ಎಂದು ಹೇಳದೇ ಇದ್ದರೂ ಸೋಮಕರನ್ನೂ, ಪಾಂಚಾಲರನ್ನೂ ಸಂಹರಿಸುತ್ತೇನೆ ಎಂದು ಮಾತ್ರವೇ ಹೇಳುತ್ತಾನೆ. ಭೀಷ್ಮನು ಯಾವುದೇ ಸಮಯದಲ್ಲಿಯೂ ಮಿಥ್ಯಾಪ್ರತಿಜ್ಞನಾಗುವುದಿಲ್ಲವೆಂಬುದಕ್ಕೆ ಇದೂ ಒಂದು ಸ್ಪಷ್ಟನಿದರ್ಶನವಾಗಿದೆ.

ಹೊರಟುಹೋದನು. ಶತ್ರುಭಯಂಕರನಾದ ದುರ್ಯೋಧನನು ಶಿಬಿರದ ಬಳಿಗೆ ಬಂದು ಸಂಗಡ ಬಂದಿದ್ದ ಮಹಾಜನರನ್ನು ಕಳುಹಿಸಿಕೊಟ್ಟು ಬಹಳ ಅವಸರದಿಂದ ತನ್ನ ಅರಮನೆಯನ್ನು ಪ್ರವೇಶಿಸಿದನು. ಶಯನಾಗಾರಕ್ಕೆ ಹೋಗಿ ಸುಖಸುಪ್ತನಾಗಿ ರಾತ್ರಿಯನ್ನು ಕಳೆದು ಬೆಳಗಾಗುತ್ತಲೇ ತನ್ನ ಕಡೆಯ ರಾಜರನ್ನು ಕರೆಯಿಸಿ ಆಜ್ಞಾಪಿಸಿದನು :

"ಭೂಪಾಲರೇ! ನಮ್ಮ ಸೈನ್ಯವನ್ನು ಯುದ್ಧಕ್ಕಾಗಿ ಈಗಲೇ ಸಜ್ಜುಗೊಳಿಸಿರಿ. ಇಂದು ಕ್ರುದ್ಧನಾದ ಭೀಷ್ಮನು ಯುದ್ಧದಲ್ಲಿ ಸೋಮಕರನ್ನು ಸಂಹಾರಮಾಡುತ್ತಾನೆ."

ಇತ್ತಲಾಗಿ ಬೆಳಗಾಗುತ್ತಲೇ ಭೀಷ್ಮನು ರಾತ್ರಿಯಲ್ಲಿ ದುರ್ಯೋಧನನು ಅಳುತ್ತಳುತ್ತಾ ಹೇಳಿದುದೆಲ್ಲವನ್ನೂ ಪುನಃ ಜ್ಞಾಪಿಸಿಕೊಂಡು, ಅದು ತನ್ನನ್ನು ಯುದ್ಧದಿಂದ ಪ್ರತಿನಿವೃತ್ತನನ್ನಾಗಿ ಮಾಡಲು ಹೇಳಿದ ಮಾತೆಂಬುದನ್ನು ಮನಗಂಡು ಬಹಳ ಖಿನ್ನನಾಗಿ ಪಾರವಶ್ಯವನ್ನು (ಪರಾಧೀನತೆಯನ್ನು) ನಿಂದಿಸುತ್ತಾ, ಅರ್ಜುನನೊಡನೆ ಯುದ್ಧಮಾಡುವ ವಿಷಯವಾಗಿ ಬಹಳ ಹೊತ್ತು ತನ್ನಲ್ಲಿ ತಾನೇ ಯೋಚಿಸುತ್ತಿದ್ದನು.

ಪ್ರಾತಃಕಾಲದಲ್ಲಿ ಭೀಷ್ಮನನ್ನು ಸಂದರ್ಶಿಸಿದ ದುರ್ಯೋಧನನು ಅವನ ಮುಖಭಾವದಿಂದಲೇ ಅವನ ಮನಸ್ಸಿನಲ್ಲಿರುವ ವಿಚಾರವನ್ನು ತಿಳಿದವನಾಗಿ ದುಃಶಾಸನನನ್ನು ಕರೆದು ಆಜ್ಞೆಮಾಡಿದನು :

"ದುಃಶಾಸನ! ಭೀಷ್ಮನನ್ನು ರಕ್ಷಿಸಲು ಸಮರ್ಥವಾದ ರಥಗಳನ್ನು ಈಗಲೇ ಸಿದ್ಧಗೊಳಿಸು. ನಮ್ಮ ಬಳಿಯಲ್ಲಿ ಈಗ ಇಪ್ಪತ್ತೆರಡು ಅನೀಕಗಳಿವೆ. ಆ ಎಲ್ಲ ಸೈನ್ಯಗಳನ್ನೂ ಇಂದು ಭೀಷ್ಮನ ರಕ್ಷಣೆಗಾಗಿಯೇ ಸಜ್ಜುಗೊಳಿಸು. ನಾವು ಬಹಳ ವರ್ಷಗಳಿಂದ ಚಿಂತಿಸುತ್ತಿದ್ದ ಕಾಲವು ಇದೀಗ ಸನ್ನಿಹಿತವಾಗಿದೆ. ಇಂದು ಸೈನ್ಯಸಮೇತರಾದ ಪಾಂಡವರ ವಿನಾಶ ಮತ್ತು ಅದರ ಜೊತೆಯಲ್ಲಿಯೇ ಅಖಂಡಸಾಮ್ರಾಜ್ಯದ ಪ್ರಾಪ್ತಿ–ಈ ಎರಡೂ ಸಿದ್ಧಿಸಲಿದೆ. ಇಂದು ನಾವು ಮಾಡಬೇಕಾಗಿರುವ ಮುಖ್ಯಕಾರ್ಯವೆಂದರೆ ಭೀಷ್ಮನ ರಕ್ಷಣೆ. ನಾವು ಅವನನ್ನು ರಕ್ಷಿಸಿದರೆ ಅವನು ನಮ್ಮ ಸಹಾಯಕನಾಗಿ ಕುಂತಿಯ ಮಕ್ಕಳನ್ನು ಸಂಹಾರಮಾಡಿಯಾನು. ಆದರೆ ಒಂದು ಮಾತನ್ನು ಮಾತ್ರ ವಿಶುದ್ಧಾತ್ಮನಾದ ಭೀಷ್ಮನು ನನ್ನೊಡನೆ ಹೇಳಿದ್ದಾನೆ. "ಮಹಾರಾಜ! ನಾನು ಶಿಖಂಡಿಯನ್ನು

ಮಾತ್ರ ಸಂಹರಿಸುವುದಿಲ್ಲ. ಅವನು ಹಿಂದೆ ಹೆಂಗಸಾಗಿದ್ದುದರಿಂದ ನಾನು ಅವನನ್ನು ವರ್ಜಿಸುತ್ತೇನೆ. ಅವನೊಡನೆ ಯುದ್ಧವನ್ನೂ ಮಾಡುವುದಿಲ್ಲ. ತಂದೆಗೆ ಪ್ರಿಯವನ್ನುಂಟುಮಾಡುವುದಕ್ಕಾಗಿ ನಾನು ಸಂಪತ್ಸಮೃದ್ಧವಾದ ರಾಜ್ಯವನ್ನೂ, ಸ್ತ್ರೀಯರನ್ನೂ ಪರಿತ್ಯಾಗಮಾಡಿದೆನು. ಈ ವಿಷಯವು ಪ್ರಪಂಚ ದಲ್ಲಿ ಎಲ್ಲರಿಗೂ ತಿಳಿದಿರುವ ವಿಷಯವೇ ಆಗಿದೆ. ಆದುದರಿಂದ ನಾನು ಯಾವ ಹೆಂಗಸನ್ನೇ ಆಗಲೀ, ಹಿಂದೆ ಹೆಂಗಸಾಗಿದ್ದವನನ್ನೇ ಆಗಲೀ ಸಂಹರಿಸು ವುದಿಲ್ಲ. ಈ ವಿಷಯವನ್ನು ನಾನು ಸತ್ಯವಾಗಿ ಹೇಳುತ್ತೇನೆ. ಶಿಖಂಡಿಯು ಹಿಂದೆ ಸ್ತ್ರೀಯಾಗಿದ್ದನೆಂಬ ವಿಷಯವು ನಿನಗೂ ತಿಳಿದಿರಬಹುದು. ಈ ವಿಷಯವನ್ನು ನಾನು ಯುದ್ಧಕ್ಕೆ ಪೂರ್ವಭಾವಿಯಾಗಿಯೇ ಹೇಳಿದ್ದೆನು. ಮೊದಲು ಕನ್ಯೆಯಾಗಿದ್ದವಳು ಅನಂತರ ಪುರುಷನಾದನು. ಅವನೂ ನನ್ನೊಡನೆ ಯುದ್ಧಮಾಡುತ್ತಾನೆ. ಆದರೆ ನಾನು ಮಾತ್ರ ಅವನು ನನ್ನನ್ನು ಎದುರಿಸಲು ಬಂದಾಗ ಅವನ ಮೇಲೆ ಬಾಣಗಳನ್ನು ಬಿಡುವುದಿಲ್ಲ. ಪಾಂಡವರಿಗೆ ವಿಜಯವನ್ನು ಕೋರಿ ಯಾವ-ಯಾವ ಕ್ಷತ್ರಿಯರು ನನ್ನೊಡನೆ ಯುದ್ಧಮಾಡಲು ಬರುತ್ತಾರೆಯೋ ಅವರೆಲ್ಲರನ್ನೂ ನಾನು ಯುದ್ಧದಲ್ಲಿ ಸಂಹಾರಮಾಡುತ್ತೇನೆ."*

ಹೀಗೆಂಬುದಾಗಿ ಶಸ್ತ್ರವಿದನಾದ ಗಾಂಗೇಯನು ನನ್ನೊಡನೆ ಹೇಳಿದನು. ಆದುದರಿಂದ ನಾವು ಇಂದು ಗಾಂಗೇಯನನ್ನೇ ಸರ್ವಪ್ರಕಾರದಿಂದಲೂ ರಕ್ಷಿಸಬೇಕಾಗಿದೆ.

**ಅರಕ್ಷ್ಯಮಾಣಂ ಹಿ ವೃಕೋ ಹನ್ಯಾತ್ಸಿಂಹಂ ಮಹಾವನೇ ।**
**ಮಾ ವೃಕೇಣೇವ ಗಾಙ್ಗೇಯಂ ಘಾತಯೇಮ ಶಿಖಣ್ಡಿನಾ ॥೪೧॥**

ಮಹಾವನದಲ್ಲಿ ಅರಕ್ಷಿತವಾಗಿರುವ ಸಿಂಹವನ್ನು ತೋಳವೇ ಸಂಹಾರ ಮಾಡಿಬಿಡಬಹುದು. ಅದರಂತೆ ನಾವಿಂದು ಭೀಷ್ಮನನ್ನು ರಕ್ಷಿಸದಿದ್ದರೆ ವೃಕ ರೂಪನಾಗಿರುವ ಶಿಖಂಡಿಯೇ ಅವನನ್ನು ಸಂಹರಿಸಿಬಿಡಬಹುದು. ಆದುದ

---

* ಇಲ್ಲಿಯೂ ಸಹ ಭೀಷ್ಮನ ಪ್ರತಿಜ್ಞಾವಚನದ ಪುನರುಕ್ತಿಯಲ್ಲಿ ಪಾಂಡವರನ್ನು ಸಂಹರಿಸುತ್ತೇನೆ–ಎಂಬ ವಾಕ್ಯವು ಸೇರಿಲ್ಲ. 'ಪಾಂಡವರ ವಿಜಯೈಷಿಗಳನ್ನು ಮಾತ್ರವೇ ಸಂಹರಿಸುತ್ತೇನೆ' ಎಂಬ ವಾಕ್ಯವನ್ನು ದುರ್ಯೋಧನನು ಪುನರುಚ್ಚರಿಸಿರುವುದನ್ನು ಕಾಣಬಹುದಾಗಿದೆ. ಭೀಷ್ಮನು ಪಾಂಡವರನ್ನು ಸಂಹರಿಸಬೇಕೆಂಬುದು ದುರ್ಯೋಧನನ ಆಶಯವಾಗಿದ್ದರೂ ಭೀಷ್ಮನು ಮಾತ್ರ ಒಮ್ಮೆಯಾದರೂ ಪಾಂಡವರನ್ನು ಸಂಹರಿಸುವೆನೆನ್ನುವ ಮಿಥ್ಯಾಪ್ರತಿಜ್ಞೆಯನ್ನು ಮಾಡಿರುವುದಿಲ್ಲ.

ರಿಂದ ನಾವು ಯಾವುದೇ ಕಾರಣದಿಂದಲೂ 'ಶಿಖಂಡೀ' ಎಂಬ ವೃಕವು ಸಿಂಹರೂಪನಾಗಿರುವ ಗಾಂಗೇಯನನ್ನು ಘಾಸಿಪಡಿಸದಂತೆ ನೋಡಿಕೊಳ್ಳ ಬೇಕಾಗಿದೆ. ನಮ್ಮ ಸೋದರಮಾವನಾದ ಶಕುನಿ ಮತ್ತು ಶಲ್ಯ-ಕೃಪ-ದ್ರೋಣ-ವಿವಿಂಶತಿಗಳು ಪ್ರಯತ್ನಪೂರ್ವಕವಾಗಿ ಭೀಷ್ಮನನ್ನು ರಕ್ಷಿಸಲಿ. ಭೀಷ್ಮನು ರಕ್ಷಿತನಾದರೆ ನಮ್ಮ ವಿಜಯವು ನಿಶ್ಚಯ."

ಮಹಾರಾಜ! ದುರ್ಯೋಧನನ ಮಾತನ್ನು ಕೇಳಿ ಕೌರವಮಹಾ ಯೋಧರು ದೊಡ್ಡ ರಥಸೈನ್ಯದೊಡನೆ ಭೀಷ್ಮನನ್ನು ಎಲ್ಲ ಕಡೆಗಳಿಂದಲೂ ಸುತ್ತುಗಟ್ಟಿದರು. ನಿನ್ನ ಮಕ್ಕಳೂ ಸಹ ಗಾಂಗೇಯನನ್ನು ಸುತ್ತುಗಟ್ಟಿಕೊಂಡು ಸಂತೋಷಭರಿತರಾಗಿ ಭೂಮಿಯನ್ನೂ ಮತ್ತು ಅಂತರಿಕ್ಷವನ್ನೂ ತಮ್ಮ ಜಯಘೋಷಗಳಿಂದ ನಡುಗಿಸುತ್ತಾ, ಪಾಂಡವರ ಮನಸ್ಸನ್ನು ಕಲಕುತ್ತಾ, ರಣರಂಗದ ಕಡೆಗೆ ಹೋಗುತ್ತಿದ್ದರು. ಕೌರವಮಹಾರಥರು ಯುದ್ಧೋಪ ಯೋಗಿಗಳಾದ ಸಾಮಗ್ರಿಗಳಿಂದ ತುಂಬಿದ ರಥಗಳಿಂದಲೂ, ಆನೆ ಗಳಿಂದಲೂ ಕೂಡಿಕೊಂಡು ಕವಚಗಳನ್ನು ಧರಿಸಿ ಭೀಷ್ಮನನ್ನು ಸುತ್ತುವರಿದು ಯುದ್ಧಕ್ಕೆ ಸಜ್ಜಾಗಿದ್ದರು. ದೇವಾಸುರಯುದ್ಧದಲ್ಲಿ ಯಾವ ರೀತಿಯಲ್ಲಿ ದೇವತೆಗಳು ವಜ್ರಧರನಾದ ಇಂದ್ರನನ್ನು ಸುತ್ತುವರಿದು ಅವನನ್ನು ರಕ್ಷಿಸು ತ್ತಿದ್ದರೋ–ಅದೇ ರೀತಿಯಲ್ಲಿ ಎಲ್ಲ ಕೌರವಯೋಧರೂ ಮಹಾರಥನಾದ ಭೀಷ್ಮನನ್ನು ರಕ್ಷಿಸುತ್ತಿದ್ದರು. ಅನಂತರ ದುರ್ಯೋಧನನು ಪುನಃ ತನ್ನ ತಮ್ಮನಿಗೆ ಹೇಳಿದನು :

"ದುಃಶಾಸನ! ನನ್ನ ಊಹೆಯಂತೆ ಅರ್ಜುನನ ರಥದ ಎಡಭಾಗದ ಚಕ್ರವನ್ನು ಯುಧಾಮನ್ಯುವು ರಕ್ಷಿಸುತ್ತಾನೆ. ಬಲಭಾಗದ ಚಕ್ರವನ್ನು ಉತ್ತಮೌಜಸನು ರಕ್ಷಿಸುತ್ತಾನೆ. ಈ ರೀತಿಯಲ್ಲಿ ಅರ್ಜುನನನ್ನು ಆ ಇಬ್ಬರೂ ರಕ್ಷಿಸುತ್ತಿರುತ್ತಾರೆ. ಅವರಿಂದ ರಕ್ಷಿತನಾದ ಅರ್ಜುನನು ಶಿಖಂಡಿಯನ್ನು ರಕ್ಷಿಸುತ್ತಾನೆ. ಈ ರೀತಿಯಲ್ಲಿ ಅರ್ಜುನನಿಂದ ಸಂರಕ್ಷಿತನಾದ, ನಮ್ಮಿಂದ ಉಪೇಕ್ಷಿತನಾದ ಶಿಖಂಡಿಯು ಭೀಷ್ಮನನ್ನು ಸಂಹಾರಮಾಡಿಬಿಡಕೂಡದು. ಆ ರೀತಿಯಲ್ಲಿ ನೀನು ಭೀಷ್ಮನ ರಕ್ಷಣೆ ಯಲ್ಲಿ ಜಾಗರೂಕನಾಗಿರುವುದು ಮಾತ್ರವಲ್ಲದೇ–ಅರ್ಜುನಗುಪ್ತನಾದ ಶಿಖಂಡಿಯು ಭೀಷ್ಮನ ಸಮೀಪಕ್ಕೆ ಬರದಂತೆ ಎಚ್ಚರಿಕೆಯನ್ನೂ ವಹಿಸಬೇಕಾಗಿದೆ." ಮಹಾರಾಜ! ಅಣ್ಣನ ಆ ಮಾತುಗಳನ್ನು ಕೇಳಿ ನಿನ್ನ

ಮಗ ದುಃಶಾಸನನು ಭೀಷ್ಮನನ್ನು ಮುಂದೆ ಮಾಡಿಕೊಂಡು ಸೇನೆಯೊಡನೆ ಹೊರಟನು.

ಭೀಷ್ಮನು ರಥಸೈನ್ಯದಿಂದ ಸಂವೃತನಾಗಿರುವುದನ್ನು ಕಂಡು ರಥಿಗಳಲ್ಲಿ ಶ್ರೇಷ್ಠನಾದ ಅರ್ಜುನನು ಧೃಷ್ಟದ್ಯುಮ್ನನೊಡನೆ ಹೇಳಿದನು :

"ಪಾಂಚಾಲ್ಯ! ನರವ್ಯಾಘ್ರನಾದ ಶಿಖಂಡಿಯನ್ನು ನೀನಿಂದು ಭೀಷ್ಮನ ಎದುರಿನಲ್ಲಿ ನಿಲ್ಲಿಸು. ನಾನು ಶಿಖಂಡಿಯ ರಕ್ಷಕನಾಗಿ ನಿಲ್ಲುತ್ತೇನೆ."

೯೮ನೆಯ ಅಧ್ಯಾಯವು ಮುಗಿಯಿತು.

೯೯ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಒಂಬತ್ತನೆಯ ದಿವಸದ ಯುದ್ಧಕ್ಕೆ ಎರಡು ಪಕ್ಷಗಳ ಸೇನೆಗಳೂ ವ್ಯೂಹಗಳನ್ನು ರಚಿಸಿಕೊಂಡುದು : ಭಯಂಕರವಾದ ಯುದ್ಧದ ಪ್ರಾರಂಭ : ವಿನಾಶಸೂಚಕವಾದ ಉತ್ಪಾತಗಳ ವರ್ಣನೆ

ಸಂಜಯನು ಒಂಬತ್ತನೆಯ ದಿವಸದ ಯುದ್ಧವನ್ನು ವರ್ಣಿಸಲು ಉಪಕ್ರಮಿಸುತ್ತಾನೆ :

"ಮಹಾರಾಜ! ಅನಂತರ ಶಾಂತನವನು ಸೇನೆಯೊಡನೆ ರಣರಂಗಕ್ಕೆ ಹೊರಟನು. ರಣಾಂಗಣಕ್ಕೆ ಹೋಗಿ ತನ್ನ ಸೈನ್ಯವನ್ನು ಮಹತ್ತರವಾದ ಸರ್ವತೋಭದ್ರವ್ಯೂಹಕ್ರಮದಲ್ಲಿ ನಿಲ್ಲಿಸಿದನು. ಕೃಪ, ಕೃತವರ್ಮಾ, ಮಹಾರಥರಾದ ಶೈಬ್ಯ, ಶಕುನಿ, ಸಿಂಧುರಾಜನಾದ ಜಯದ್ರಥ, ಕಾಂಬೋಜ ರಾಜನಾದ ಸುದಕ್ಷಿಣ ಮತ್ತು ನಿನ್ನ ಮಕ್ಕಳು–ಇವರೆಲ್ಲರೂ ಭೀಷ್ಮ ನೊಡನೆ ಸರ್ವತೋಭದ್ರವ್ಯೂಹದಲ್ಲಿ ಎಲ್ಲ ಸೈನ್ಯಗಳ ಅಗ್ರಭಾಗದಲ್ಲಿ ಉಪಸ್ಥಿತರಾದರು. ದ್ರೋಣರು, ಭೂರಿಶ್ರವಸ, ಶಲ್ಯ ಮತ್ತು ಭಗದತ್ತ ಇವರು ವ್ಯೂಹದ ದಕ್ಷಿಣಭಾಗವನ್ನು ಆಶ್ರಯಿಸಿ ಕವಚಧಾರಿಗಳಾಗಿ ನಿಂತಿದ್ದರು. ಅಶ್ವತ್ಥಾಮಾ, ಸೋಮದತ್ತ ಮತ್ತು ವಿಂದಾನುವಿಂದರು ಮತ್ತು ಇತರ ಮಹಾರಥರು ಮಹಾಸೇನೆಯಿಂದ ಕೂಡಿದವರಾಗಿ ವ್ಯೂಹದ ಎಡಭಾಗವನ್ನು ರಕ್ಷಿಸುತ್ತಿದ್ದರು. ದುರ್ಯೋಧನಮಹಾರಾಜನು ತ್ರಿಗರ್ತ ರಿಂದ ಪರಿವೃತನಾಗಿ ವ್ಯೂಹದ ಮಧ್ಯಭಾಗದಲ್ಲಿ ನಿಂತು ಪಾಂಡವರನ್ನು

ಎದುರಿಸುತ್ತಿದ್ದನು. ರಥಶ್ರೇಷ್ಠನಾದ ಅಲಂಬುಷನೂ ಮತ್ತು ಮಹಾರಥನಾದ ಶ್ರುತಾಯುಷನೂ ಕವಚಗಳನ್ನು ಧರಿಸಿ ಸಂಪೂರ್ಣಸೇನೆಯ ಅಥವಾ ವ್ಯೂಹದ ಹಿಂಭಾಗದಲ್ಲಿ ನಿಂತಿದ್ದರು. ಈ ರೀತಿಯಲ್ಲಿ ನಿನ್ನ ಕಡೆಯ ರಥಿಕರು ವ್ಯೂಹವನ್ನು ರಚಿಸಿಕೊಂಡು ಯುದ್ಧಸನ್ನದ್ಧರಾಗಿ, ಪ್ರಜ್ವಲಿಸುತ್ತಿರುವ ಅಗ್ನಿಗಳೋಪಾದಿಯಲ್ಲಿ ಕಾಣುತ್ತಿದ್ದರು. ಪಾಂಡವರ ಕಡೆಯ ವ್ಯೂಹದಲ್ಲಿ ರಾಜನಾದ ಯುಧಿಷ್ಠಿರ, ಭೀಮಸೇನ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರು–ಇವರೆಲ್ಲರೂ ಕವಚಗಳನ್ನು ಧರಿಸಿ ವ್ಯೂಹದ ಮುಂಭಾಗದಲ್ಲಿ ನಿಂತಿದ್ದರು. ಶತ್ರುಗಳ ಸೈನ್ಯಗಳನ್ನು ವಿನಾಶಮಾಡುವ ಮಹಾರಥರಾದ ಧೃಷ್ಟದ್ಯುಮ್ನ-ವಿರಾಟ-ಸಾತ್ಯಕಿಯರು ದೊಡ್ಡ ಸೈನ್ಯದೊಡನೆ ವ್ಯೂಹವನ್ನು ರಕ್ಷಿಸುತ್ತಿದ್ದರು. ಶಿಖಂಡೀ, ಅರ್ಜುನ, ಘಟೋತ್ಕಚರಾಕ್ಷಸ, ಮಹಾಬಾಹುವಾದ ಚೇಕಿತಾನ, ವೀರ್ಯವಂತನಾದ ಕುಂತಿಭೋಜ–ಇವರೆಲ್ಲರೂ ಮಹಾಸೇನೆಗಳಿಂದ ಪರಿವೃತರಾಗಿ ನಿರ್ದಿಷ್ಟಸ್ಥಾನಗಳಲ್ಲಿ ಉಪಸ್ಥಿತರಾಗಿದ್ದರು. ಮಹಾಧನುಷ್ಮಂತನಾದ ಅಭಿಮನ್ಯು, ಮಹಾಬಲನಾದ ದ್ರುಪದ, ವಿಶಾಲ ಧನುರ್ಧರನಾದ ಯುಯುಧಾನ, ವೀರ್ಯವಂತನಾದ ಯುಧಾಮನ್ಯು ಮತ್ತು ಐವರು ಕೇಕಯಸಹೋದರರು ಕವಚಗಳನ್ನು ಧರಿಸಿ ಯುದ್ಧಸನ್ನದ್ಧರಾಗಿ ನಿಂತಿದ್ದರು. ಮಹಾರಾಜ! ಈ ರೀತಿಯಲ್ಲಿ ಶೂರರಾದ ಪಾಂಡವರೂ ಸಹ ಸರ್ವತೋಭದ್ರವ್ಯೂಹಕ್ಕೆ ಪ್ರತಿಯಾದ ಸುದುರ್ಜಯವಾದ ಮಹಾವ್ಯೂಹವನ್ನು ರಚಿಸಿಕೊಂಡು ಕವಚಗಳನ್ನು ಧರಿಸಿ ಯುದ್ಧಕ್ಕೆ ಸಜ್ಜಾಗಿ ನಿಂತಿದ್ದರು. ನಿನ್ನ ಕಡೆಯ ರಾಜರು ತಮ್ಮ ಸೈನ್ಯಗಳೊಡನೆ ಭೀಷ್ಮನನ್ನು ಮುಂದೆ ಮಾಡಿಕೊಂಡು ಪಾಂಡವರ ಮೇಲೆ ಆಕ್ರಮಣ ಮಾಡಿದರು. ಅದೇ ರೀತಿಯಲ್ಲಿ ಪಾಂಡವರ ಕಡೆಯ ರಾಜರೂ ಭೀಮ ಸೇನನನ್ನು ಮುಂದೆ ಮಾಡಿಕೊಂಡು ಕೌರವರನ್ನು ಆಕ್ರಮಿಸಿದರು. ಭೀಷ್ಮನೊಡನೆ ಯುದ್ಧವನ್ನು ಅಭಿಲಷಿಸಿದ್ದ ವಿಜಯೈಷಿಗಳಾದ ಪಾಂಡವರು ಸಿಂಹ ನಾದಗಳಿಂದಲೂ, ಕಿಲ-ಕಿಲಾಶಬ್ದಗಳಿಂದಲೂ, ಶಂಖಧ್ವನಿಗಳಿಂದಲೂ, ಕ್ರಕಚ, ಗೋಶೃಂಗ, ಭೇರೀ, ಮೃದಂಗ, ಪಣವ, ಪುಷ್ಕರ–ಇತ್ಯಾದಿ ವಾದ್ಯಗಳ ಬಾರಿಸುವಿಕೆಯಿಂದಲೂ ಭಯಂಕರವಾಗಿ ಶಬ್ದ ಮಾಡುತ್ತಾ ಕೌರವರ ಸೈನ್ಯವನ್ನು ಆಕ್ರಮಿಸಿದರು. ನಾವೂ ಸಹ ಭೇರೀ-ಮೃದಂಗ-ದುಂದುಭಿನಿನಾದಗಳಿಂದಲೂ, ಉಚ್ಚಸ್ವರದ ಸಿಂಹನಾದಗಳಿಂದಲೂ,

ನಾನಾವಿಧವಾದ ಜಯಘೋಷಣೆಗಳಿಂದಲೂ–ಪಾಂಡವರು ಮಾಡಿದ ಭೈರವನಿನಾದಕ್ಕೆ ಪ್ರತಿಯಾಗಿ ಭೈರವನಿನಾದಮಾಡುತ್ತಾ ತ್ವರೆಯಿಂದ ಕೂಡಿದವರಾಗಿ ಪಾಂಡವಸೈನ್ಯವನ್ನು ಸಂಧಿಸಿದೆವು. ಎರಡೂ ಸೈನ್ಯಗಳ ಸಂಪರ್ಕವಾದೊಡನೆಯೇ ಎಲ್ಲರೂ ಕ್ರುದ್ಧರಾದರು. ಒಡನೆಯೇ ಮಹಾ ಯುದ್ಧವು ಪ್ರಾರಂಭವಾಯಿತು. ಉಭಯಪಕ್ಷಗಳ ಸೈನಿಕರೂ ಒಬ್ಬರ ಮೇಲೆ ಮತ್ತೊಬ್ಬರು ಬೀಳುತ್ತಾ ಅಸ್ತ್ರ-ಶಸ್ತ್ರಗಳ ಪ್ರಹಾರಗಳನ್ನು ಪ್ರಾರಂಭಿಸಿದರು. ಆ ಸಮಯದಲ್ಲಿ ಉಂಟಾದ ಮಹಾಶಬ್ದದಿಂದ ಭೂಮಿಯೇ ಕಂಪಿಸಿತು. ಪಕ್ಷಿಗಳು ಮಹಾಘೋರವಾಗಿ ಶಬ್ದಮಾಡುತ್ತಾ ಆಕಾಶದಲ್ಲಿ ಸುತ್ತುತ್ತಿದ್ದುವು. ಪ್ರಭೆಯೊಡನೆ ಹುಟ್ಟಿದ ಸೂರ್ಯನು ಸ್ವಲ್ಪ ಹೊತ್ತಿನಲ್ಲಿಯೇ ನಿಷ್ಪ್ರಭನಾಗಿ ಬಿಟ್ಟನು.

ಮುಂದೆ ಪ್ರಾಪ್ತವಾಗಲಿರುವ ಮಹಾಭಯವನ್ನು ಸೂಚಿಸುವುವೋ–ಎಂಬಂತೆ ಗಾಳಿಗಳು ಉಗ್ರವಾಗಿ ಬೀಸತೊಡಗಿದುವು. ಗುಳ್ಳೇನರಿಗಳು ವಿಕಾರವಾದ ಧ್ವನಿಗಳಲ್ಲಿ ಕೂಗಿಕೊಳ್ಳುತ್ತಿದ್ದುವು. ಮಹತ್ತಾದ ಸಂಹಾರ ಕ್ರಿಯೆಯು ಮುಂದೆ ಆಗಲಿದೆಯೆಂಬುದನ್ನು ಸೂಚಿಸುತ್ತಾ ನಾಲ್ಕು ದಿಕ್ಕುಗಳೂ ಪ್ರಜ್ವಲಿಸತೊಡಗಿದುವು. ಧೂಳಿನ ಮಳೆಗರೆಯಿತು. ರಕ್ತದಿಂದ ಮಿಶ್ರಿತವಾದ ಮೂಳೆಗಳ ಮಳೆಯಾಗತೊಡಗಿತು. ಕಾರಣವಿಲ್ಲದೆಯೇ ರೋದಿಸುತ್ತಿದ್ದ ಗಜಾಶ್ವಗಳ ಕಣ್ಣುಗಳಿಂದ ನೀರುಸುರಿಯತೊಡಗಿತು. ಗಜಾಶ್ವಗಳು ಚಿಂತೆಯಲ್ಲಿ ಮಗ್ನವಾಗಿ ಮಲ-ಮೂತ್ರಗಳನ್ನು ವಿಸರ್ಜನೆ ಮಾಡತೊಡಗಿದುವು. ಭಯಂಕರವಾಗಿ ಗರ್ಜನೆಮಾಡುತ್ತಿದ್ದ ಪುರುಷಾದ ರಾದ ರಾಕ್ಷಸರ ಮಹಾನಾದಗಳು ಕೇಳುತ್ತಿದ್ದುವೇ ಹೊರತು ರಾಕ್ಷಸರು ಕಾಣಿಸುತ್ತಿರಲಿಲ್ಲ. ನಾಲ್ಕು ದಿಕ್ಕುಗಳಿಂದಲೂ ನರಿಗಳು, ಬಲಿಷ್ಠವಾದ ಕಾಗೆ ಗಳು ರಣರಂಗಕ್ಕೆ ಬರುತ್ತಲಿದ್ದುವು. ನಾಯಿಗಳೂ ಸಹ ವಿಧ-ವಿಧವಾದ ಧ್ವನಿಗಳಿಂದ ಬೊಗಳುತ್ತಿದ್ದುವು. ಮುಂದೆ ಉಂಟಾಗುವ ಮಹಾಭಯವನ್ನು ಸೂಚಿಸುತ್ತಾ ಪ್ರಜ್ವಲಿಸುತ್ತಿದ್ದ ಮಹೋಲ್ಕೆಗಳು ಸೂರ್ಯನನ್ನು ಅಪ್ಪಳಿಸಿ ಒಡನೆಯೇ ಭೂಮಿಯ ಮೇಲೆ ಬೀಳುತ್ತಿದ್ದುವು.

ಆ ಮಹಾಸಂಗ್ರಾಮದಲ್ಲಿ ಪಾಂಡವ-ಧಾರ್ತರಾಷ್ಟ್ರರಿಂದ ನೀತವಾದ ಮಹಾಸೇನೆಗಳು, ಶಂಖ-ಮೃದಂಗಾದಿ ಶಬ್ದಗಳಿಂದ–ವಾಯುವಿನಿಂದ

ಪ್ರಕಂಪಿತವಾದ ಅರಣ್ಯಗಳಂತೆಯೇ–ಕಂಪಿಸತೊಡಗಿದುವು. ನರೇಂದ್ರ ರಿಂದಲೂ, ಗಜಾಶ್ವ-ರಥ-ಪದಾತಿಗಳಿಂದಲೂ ಸಮಾಕುಲವಾಗಿದ್ದ, ಅಶುಭ ವಾದ ಮುಹೂರ್ತದಲ್ಲಿ ಹೊರಟಿದ್ದ ಸೈನ್ಯಗಳ ಭಯಂಕರವಾದ ಶಬ್ದವು ಬಿರುಗಾಳಿಯಿಂದ ಅಲ್ಲೋಲ-ಕಲ್ಲೋಲವಾದ ಸಮುದ್ರಗಳ ಭೋರ್ಗರೆ ಯುವ ಶಬ್ದಕ್ಕೆ–ಸಮಾನವಾಗಿದ್ದಿತು.”

೯೯ನೆಯ ಅಧ್ಯಾಯವು ಮುಗಿಯಿತು.

೧೦೦ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಅಭಿಮನ್ಯು-ದ್ರೌಪದಿಯ ಐವರು ಮಕ್ಕಳಿಗೂ ಮತ್ತು ಅಲಂಬುಷನಿಗೂ ಆದ ಘೋರಯುದ್ಧದ ವರ್ಣನೆ : ಅಭಿಮನ್ಯುವಿನ ಭಯದಿಂದ ಕೌರವಸೇನೆಯ ಪಲಾಯನ

ಸಂಜಯನು ಯುದ್ಧದ ವಿವರಣೆಯನ್ನು ಮುಂದುವರಿಸುತ್ತಾ ಅಭಿ ಮನ್ಯು-ಅಲಂಬುಷರ ಯುದ್ಧದ ವರ್ಣನೆಯನ್ನು ಉಪಕ್ರಮಿಸುತ್ತಾನೆ :

“ಮಹಾರಾಜ! ರಥಿಗಳಲ್ಲಿ ಶ್ರೇಷ್ಠನಾದ, ತೇಜಸ್ವಿಯಾದ ಅಭಿಮನ್ಯುವು ಪಿಂಗಳವರ್ಣದ ಕುದುರೆಗಳಿಂದ ಕೂಡಿದ್ದ ರಥದಲ್ಲಿ ಕುಳಿತು ದುರ್ಯೋಧನನ ದೊಡ್ಡದಾದ ಸೈನ್ಯದ ಮೇಲೆ ದಾಳಿಮಾಡಿದನು. ಮೋಡಗಳು ಮಳೆಯನ್ನು ಸುರಿಸುವಂತೆ–ಬಾಣಗಳ ಮಳೆಯನ್ನೇ ಸುರಿಸುತ್ತಾ, ರಾಶಿ-ರಾಶಿಯಾದ ಶಸ್ತ್ರಾಸ್ತ್ರಗಳನ್ನು ಹೊಂದಿದ್ದ ಅಕ್ಷಯವಾದ ಸೇನಾಸಮುದ್ರವನ್ನು ಪ್ರವೇಶಿಸುತ್ತಿದ್ದ, ಕ್ರುದ್ಧನಾದ, ಅರಿಂದಮನಾದ ಸೌಭದ್ರನನ್ನು ತಡೆಯಲು ನಿನ್ನ ಕಡೆಯ ಸೈನಿಕರಿಗೆ ಸಾಧ್ಯವಾಗಲಿಲ್ಲ. ಅಭಿಮನ್ಯುವಿನಿಂದ ಬಿಡಲ್ಪಡುತ್ತಿದ್ದ ಪ್ರಾಣನಾಶಕಗಳಾದ ಬಾಣಗಳು ಶೂರರಾದ ಕ್ಷತ್ರಿಯರಾಜರನ್ನು ಪ್ರೇತರಾಜನ ಮನೆಗೆ ಒಯ್ಯುತ್ತಿದ್ದುವು. ಕ್ರುದ್ಧನಾದ ಅಭಿಮನ್ಯುವು ಯಮದಂಡಕ್ಕೆ ಸಮಾನವಾಗಿದ್ದ, ಪ್ರಜ್ವಲಿತವಾದ ಮುಖವುಳ್ಳ ಸರ್ಪಗಳಿಗೆ ಸಮಾನವಾಗಿದ್ದ, ಭಯಂಕರವಾದ ಬಾಣಗಳನ್ನು ಶತ್ರುಗಳ ಮೇಲೆ ಪ್ರಯೋಗಿಸುತ್ತಿದ್ದನು. ಅಭಿಮನ್ಯುವು ರಥಗಳೊಡನಿರುವ ರಥಿಕರನ್ನೂ, ಸವಾರರಿಂದ ಕೂಡಿದ ಕುದುರೆಗಳನ್ನೂ, ಮಾವಟಿಗರಿಂದ ಕೂಡಿದ ಆನೆಗಳನ್ನೂ ತನ್ನ ನಿಶಿತವಾದ ಬಾಣಗಳಿಂದ ಸೀಳಿಬಿಡುತ್ತಿದ್ದನು.

ಯುದ್ಧದಲ್ಲಿ ಸೌಭದ್ರನ ಆ ಮಹತ್ಕರ್ಮವನ್ನು ನೋಡಿದ ರಾಜರು ಹೃಷ್ಟರಾಗಿ ಅವನನ್ನು ಬಹಳವಾಗಿ ಹೊಗಳಿದರು ಮತ್ತು ಯಥೋಚಿತವಾಗಿ ಗೌರವಿಸಿದರು. ಬಿರುಗಾಳಿಯು ಹತ್ತಿಯ ರಾಶಿಗಳನ್ನು ಆಕಾಶದಲ್ಲಿ ಎಲ್ಲ ದಿಕ್ಕುಗಳಿಗೂ ಹಾರಿಸಿಬಿಡುವಂತೆ (ಕ್ಷಣಮಾತ್ರದಲ್ಲಿ ಹತ್ತಿಯ ರಾಶಿಯೇ ಇಲ್ಲದಂತೆ ಮಾಡಿಬಿಡುವಂತೆ)–ಅಭಿಮನ್ಯುವು ತನ್ನೆದುರಿನಲ್ಲಿದ್ದ ಅಪಾರ ಸೈನ್ಯಸಮೂಹವನ್ನು ಓಡಿಸಿಬಿಟ್ಟನು. ಆಳವಾದ ಕೆಸರಿನಲ್ಲಿ ಸಿಕ್ಕಿಹಾಕಿಕೊಂಡ ಆನೆಗಳಿಗೆ ರಕ್ಷಕರೇ ಇಲ್ಲದಿರುವಂತೆ-ಅಭಿಮನ್ಯುವಿನಿಂದ ಓಡಿಸಲ್ಪಡುತ್ತಿದ್ದ ಸೈನಿಕರಿಗೆ ರಕ್ಷಕರೇ ಯಾರೂ ಇಲ್ಲದಂತಾಯಿತು. ನರೋತ್ತಮ! ನಿನ್ನ ಸೈನ್ಯ ಗಳನ್ನು ಓಡಿಸಿ ಅಭಿಮನ್ಯುವು ಧೂಮರಹಿತವಾದ ಅಗ್ನಿಯು ಪ್ರಜ್ವಲಿಸು ವಂತೆ ತೇಜಸ್ಸಿನಿಂದ ಪ್ರಜ್ವಲಿಸುತ್ತಾ ಸುಸ್ಥಿರನಾಗಿ ನಿಂತಿದ್ದನು. ಕಾಲಚೋದಿತ ವಾದ ಪತಂಗದ ಹುಳುಗಳು ಪ್ರದೀಪ್ತವಾದ ಅಗ್ನಿಯನ್ನು ಸಹಿಸಿಕೊಳ್ಳದಂತೆ–(ಅಗ್ನಿಯಜ್ವಾಲೆಯನ್ನು ಸಹಿಸಿಕೊಳ್ಳಲು ಸಾಧ್ಯವಾಗದಂತೆ–ಅಗ್ನಿಯಲ್ಲೇ ಬಿದ್ದು ಪ್ರಾಣಬಿಡುವಂತೆ) ಅರಿಘಾತಿಯಾದ ಅಭಿಮನ್ಯುವಿನ ಬಾಣಪ್ರಹಾರ ಗಳ ರಭಸವನ್ನು ನಿನ್ನ ಕಡೆಯ ಸೈನಿಕರು ಸಹಿಸಿಕೊಳ್ಳಲಿಲ್ಲ. (ಬಾಣಾಘಾತಕ್ಕೆ ಸಿಕ್ಕಿ ಅನೇಕರು ಸತ್ತುಹೋದರು. ಉಳಿದವರು ಓಡಿಹೋದರು.) ಸರ್ವಶತ್ರು ಗಳನ್ನೂ ಏಕಪ್ರಕಾರವಾಗಿ ಪ್ರಹರಿಸುತ್ತಿದ್ದ ಪಾಂಡವಮಹಾರಥನಾದ, ಮಹಾ ಧನುಷ್ಮಂತನಾದ ಅಭಿಮನ್ಯುವು ವಜ್ರಪಾಣಿಯಾದ ಇಂದ್ರನಂತೆಯೇ ಪ್ರಕಾಶಿ ಸಿದನು. ಮೋಡಗಳಲ್ಲಿ ಕ್ಷಣ-ಕ್ಷಣಕ್ಕೂ ಕಾಣಿಸಿಕೊಳ್ಳುವ ಮಿಂಚಿನಂತೆ–ಸುವರ್ಣಮಯವಾದ ಬೆನ್ನುಭಾಗವನ್ನು ಹೊಂದಿದ್ದ ಅಭಿಮನ್ಯುವಿನ ಧನುಸ್ಸು ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸುವಂತೆ ಕಾಣುತ್ತಿದ್ದಿತು. ದುಂಬಿಗಳ ಸಮೂಹಗಳು ಕುಸುಮಿತವಾದ ವೃಕ್ಷದಿಂದ-ವೃಕ್ಷಕ್ಕೆ, ವನದಿಂದ-ವನಕ್ಕೆ ಹೋಗುತ್ತಿರುವಂತೆ–ಅಭಿಮನ್ಯುಪ್ರೇಷಿತವಾದ, ನಿಶಿತವಾದ, ಹೊಂಬಣ್ಣದ ಬಾಣಗಳು ರಣರಂಗದಲ್ಲಿ ಗುಂಪುಗುಂಪಾಗಿ ಸುಯ್ಯನೆ ಮುಂದೆ ಹೋಗುತ್ತಿದ್ದವು. ಸುವರ್ಣಮಯವಾದ ಅಂಗಗಳನ್ನು ಹೊಂದಿದ್ದ ರಥದಲ್ಲಿ ಕುಳಿತು ಸಂಚರಿಸುತ್ತಿದ್ದ ಮಹಾತ್ಮನಾದ ಅಭಿಮನ್ಯುವಿನ ಗತಿಯಲ್ಲಿಯೂ ಜನರು ಯಾವ ಅಂತರವನ್ನೂ ಕಾಣುತ್ತಿರಲಿಲ್ಲ (ಅಷ್ಟು ರಭಸದಿಂದ ಅಭಿಮನ್ಯುವು ರಣಾಂಗಣದ ಸುತ್ತಲೂ ಶತ್ರುಗಳನ್ನು ಸಂಹರಿಸುತ್ತಾ ಬುಗುರಿಯಂತೆ ಸಂಚರಿಸುತ್ತಿದ್ದನು.) ಕೃಪರನ್ನೂ, ದ್ರೋಣ

ರನ್ನೂ, ಅಶ್ವತ್ಥಾಮನನ್ನೂ, ಬೃಹದ್ಬಲನನ್ನೂ, ಸೈಂಧವನನ್ನೂ ತನ್ನ ಬಾಣ ಪ್ರಹಾರಗಳಿಂದ ವಿಮೋಹಗೊಳಿಸುತ್ತಾ, ಮಹಾಧನುಷ್ಮಂತನಾದ ಅಭಿ ಮನ್ಯುವು ಸುಷ್ಠುವಾಗಿ ಮತ್ತು ಶೀಘ್ರವಾಗಿ ರಣಾಂಗಣದಲ್ಲಿ ಸಂಚರಿಸು ತ್ತಿದ್ದನು. ನಿನ್ನ ಸೈನ್ಯವನ್ನು ಕ್ಷಣ-ಕ್ಷಣಕ್ಕೂ ಬಾಣಗಳೆಂಬ ಅಗ್ನಿಯಿಂದ ದಹಿಸು ತ್ತಿದ್ದ ಅಭಿಮನ್ಯುವಿನ ಧನುಸ್ಸು ಯಾವಾಗಲೂ ಸೂರ್ಯಮಂಡಲದಂತೆ ಮಂಡಲಾಕಾರವಾಗಿ ಇದ್ದುದನ್ನೇ ನಾವು ಕಾಣುತ್ತಿದ್ದೆವು. ವೇಗವಂತನಾದ ಶತ್ರುಸಂತಾಪಕನಾದ ಅಭಿಮನ್ಯುವನ್ನು ನೋಡಿದ ಕ್ಷತ್ರಿಯವೀರರೂ ಮತ್ತು ಯುದ್ಧಪ್ರೇಕ್ಷಕರೂ ಅವನ ಯುದ್ಧಕರ್ಮಗಳಿಂದ ಲೋಕದಲ್ಲಿ ಇಬ್ಬರು ಅರ್ಜುನರಿರುವರೆಂದು ಭಾವಿಸಿದರು. ಅಭಿಮನ್ಯುವಿನಿಂದ ಮರ್ದನಮಾಡ ಲ್ಪಟ್ಟ ಭರತವಂಶೀಯರ ವಿಶಾಲಸೇನೆಯು ಕಾಮಪರವಶಳಾದ ಹೆಂಗಸಿ ನಂತೆ ಮತಿಗೆಟ್ಟು ತೂರಾಡುತ್ತಿದ್ದಿತು. ಇಂದ್ರನು ಮಯಾಸುರರನ್ನು ಜಯಿಸಿ ದಂತೆ–ಅಭಿಮನ್ಯುವು ಕೌರವಮಹಾಸೈನ್ಯವನ್ನು ಜಯಿಸಿ ಓಡುವಂತೆ ಮಾಡಿ ಕೌರವಮಹಾರಥರನ್ನು ನಡುಗಿಸುತ್ತಾ ಸುಹೃದರಿಗೆ ಆನಂದವನ್ನುಂಟು ಮಾಡುತ್ತಿದ್ದನು. ಅಭಿಮನ್ಯುವಿನಿಂದ ಬಾರಿಬಾರಿಗೂ ಓಡಿಸಲ್ಪಡುತ್ತಿದ್ದ ನಿನ್ನ ಸೈನಿಕರು ಮೇಘದ ಘರ್ಜನೆಗಳಿಗೆ ಸಮಾನವಾದ ಬಹುಘೋರವಾದ ಆರ್ತ ನಾದಗಳನ್ನು ಮಾಡುತ್ತಿದ್ದರು. ಪರ್ವಕಾಲದಲ್ಲಿ (ಹುಣ್ಣಿಮೆಯ ದಿನ) ಬಿರು ಗಾಳಿಯ ಬೀಸುವಿಕೆಯಿಂದ ಉಕ್ಕಿಬರುವ ಸಮುದ್ರದ ಭೋರ್ಗರೆಯುವ ಶಬ್ದದಂತಿದ್ದ ನಿನ್ನ ಸೈನಿಕರ ಬಹುಘೋರವಾದ ಆರ್ತನಾದಗಳನ್ನು ಕೇಳಿ ದುರ್ಯೋಧನನು ಋಷ್ಯಶೃಂಗರಾಕ್ಷಸನ ಮಗನಾದ ಅಲಂಬುಷನನ್ನು ಕುರಿತು ಹೇಳಿದನು :

"ವೀರಶ್ರೇಷ್ಠನಾದ ಅಲಂಬುಷನೇ! ಅರ್ಜುನನ ಮಗನಾದ ಈ ಅಭಿ ಮನ್ಯುವು ಎರಡನೆಯ ಅರ್ಜುನನೋಪಾದಿಯಲ್ಲಿ ಪರಮಕ್ರುದ್ಧನಾಗಿ– ವೃತ್ರಾಸುರನು ದೇವತೆಗಳ ಸೈನ್ಯವನ್ನು ಭಯಪಡಿಸಿ ಓಡಿಸಿದಂತೆ–ನಮ್ಮ ಸೇನೆಯನ್ನು ದಿಕ್ಕಾಪಾಲಾಗಿ ಓಡಿಸುತ್ತಿದ್ದಾನೆ. ಸರ್ವವಿದ್ಯಾಪಾರಂಗತನಾದ ನಿನ್ನನ್ನು ಬಿಟ್ಟು ಅಭಿಮನ್ಯುವಿನ ಉಪಟಳವೆಂಬ ಮಹಾರೋಗಕ್ಕೆ ಬೇರೆ ಔಷಧವನ್ನು ನಾನು ಕಾಣುತ್ತಿಲ್ಲ. ನೀನೇ ಈ ಮಹಾರೋಗಕ್ಕೆ ಔಷಧಪ್ರಾಯ ನಾಗಿರುವೆ. ಅಂತಹವನಾದ ನೀನು ಈಗಲೇ ಶೀಘ್ರವಾಗಿ ಹೋಗಿ ಯುದ್ಧ ದಲ್ಲಿ ಸುಭದ್ರೆಯ ಮಗನಾದ ಅಭಿಮನ್ಯುವನ್ನು ಸಂಹರಿಸು. ಭೀಷ್ಮ-ದ್ರೋಣ

ರನ್ನು ಮುಂದಿಟ್ಟುಕೊಂಡು ಯುದ್ಧಮಾಡುತ್ತಿರುವ ನಾವು ಅಭಿಮನ್ಯುವಿನ ತಂದೆಯಾದ ಅರ್ಜುನನನ್ನು ಸಂಹರಿಸುತ್ತೇವೆ."

ಮಹಾರಾಜ! ದುರ್ಯೋಧನನು ಹೀಗೆಂದು ಹೇಳಿದನಂತರ ನಿನ್ನ ಮಗನ ಆಜ್ಞೆಯ ಮೇರೆಗೆ ಪ್ರತಾಪವಂತನಾದ, ಬಲಿಷ್ಠನಾದ, ರಾಕ್ಷಸೇಂದ್ರನಾದ ಅಲಂಬುಷನು ವರ್ಷಾಕಾಲದಲ್ಲಿ ಮೇಘವು ಗರ್ಜನೆಮಾಡುವಂತೆ–ಭಯಂಕರವಾಗಿ ಗರ್ಜನೆಮಾಡುತ್ತಾ ಅಭಿಮನ್ಯುವು ಯುದ್ಧಮಾಡುತ್ತಿದ್ದ ಸ್ಥಳಕ್ಕೆ ಶೀಘ್ರವಾಗಿ ಧಾವಿಸಿದನು. ಅಲಂಬುಷನು ಮಾಡಿದ ಘೋರಗರ್ಜನೆಯಿಂದಾಗಿ ಪಾಂಡವರ ದೊಡ್ಡ ಸೈನ್ಯವೂ ಸಹ–ವಾಯುವಿನಿಂದ ಕ್ಷುಭಿತವಾದ ಸಮುದ್ರದಂತೆ–ನಡುಗಿತು. ಅನೇಕಸೈನಿಕರು ಆ ಘೋರನಿನಾದವನ್ನು ಕೇಳಿ ಭಯಗೊಂಡವರಾಗಿ ತಮಗೆ ಅತ್ಯಂತಪ್ರಿಯವಾದ ಪ್ರಾಣಗಳನ್ನೇ ತ್ಯಜಿಸಿ ಭೂಮಿಯ ಮೇಲೆ ಬಿದ್ದರು. ಆದರೆ ಅಭಿಮನ್ಯುವು ಮಾತ್ರ ಸಂತೋಷಭರಿತನಾಗಿಯೇ ಇದ್ದನು. ಅಲಂಬುಷನು ವೇಗವಾಗಿ ಬರುತ್ತಿರುವುದನ್ನು ಕಂಡೊಡನೆಯೇ ಬಾಣದಿಂದ ಯುಕ್ತವಾಗಿದ್ದ ಧನುಸ್ಸನ್ನು ಹಿಡಿದುಕೊಂಡು ರಥದಲ್ಲಿ ಆಸನದ ಸಮೀಪದಲ್ಲಿಯೇ ನೃತ್ಯಮಾಡುತ್ತಿರುವನೋ ಎಂಬಂತೆ ಕಾಣುತ್ತಿದ್ದ ಅಭಿಮನ್ಯುವು ರಾಕ್ಷಸನ ಕಡೆಗೆ ಧಾವಿಸಿದನು. ಅದನ್ನು ನೋಡಿ ಕ್ರುದ್ಧನಾದ ರಾಕ್ಷಸನು ಅಭಿಮನ್ಯುವನ್ನು ಸಮೀಪಿಸಿದೊಡನೆಯೇ ಅವನ ಸಮೀಪದಲ್ಲಿಯೇ ಇದ್ದ ಪಾಂಡವಸೈನ್ಯವನ್ನು ಅನವರತವಾದ ಬಾಣಗಳ ಪ್ರಹಾರದಿಂದ ಓಡಿಸಲು ಪ್ರಾರಂಭಿಸಿದನು. ದೇವಸೇನೆಯನ್ನು ಬಲನೆಂಬ ರಾಕ್ಷಸನು ಯಾವ ರೀತಿಯಲ್ಲಿ ಆಕ್ರಮಣಮಾಡಿದ್ದನೋ–ಅದೇ ರೀತಿಯಲ್ಲಿ ಪಾಂಡವರ ಆ ಮಹಾಸೈನ್ಯದ ಮೇಲೆ ಅಲಂಬುಷನು ದಾಳಿಮಾಡಿದನು. ಘೋರರೂಪನಾದ ರಾಕ್ಷಸನಿಂದ ಬಾಧಿಸಲ್ಪಡುತ್ತಿದ್ದ ಪಾಂಡವರ ಆ ಮಹಾಸೈನ್ಯದಲ್ಲಿ ಅನೇಕ ಸಾವು-ನೋವುಗಳಾದವು. ಅನಂತರ ರಾಕ್ಷಸನು ತನ್ನ ಅತುಲಪರಾಕ್ರಮವನ್ನು ಪ್ರದರ್ಶಿಸುತ್ತಾ ಸಾವಿರಾರು ಬಾಣಗಳಿಂದ ಪಾಂಡವರ ಮಹಾಸೈನ್ಯವನ್ನು ಹಿಮ್ಮೆಟ್ಟಿಸಿದನು. ಘೋರರೂಪಿಯಾದ ರಾಕ್ಷಸನಿಂದ ಪರಿ-ಪರಿಯಾಗಿ ವಧಿಸಲ್ಪಡುತ್ತಿದ್ದ ಪಾಂಡವರ ಸೈನ್ಯವು ಭಯಗೊಂಡು ಓಡಲಾರಂಭಿಸಿತು. ಕಮಲಪುಷ್ಪಗಳಿಂದ ಅಲಂಕೃತವಾದ ಸರೋವರವನ್ನು ಮದಿಸಿದ ಆನೆಯು ಭಗ್ನಗೊಳಿಸುವಂತೆ–ಅಭಿಮನ್ಯುವಿನ ಸೇನೆಯನ್ನು

ಅಲಂಬುಷನು ಪೂರ್ಣವಾಗಿ ಭಗ್ನಗೊಳಿಸಿ ಬಳಿಕ ದ್ರೌಪದಿಯ ಮಕ್ಕಳ ಮೇಲೆ ದಾಳಿಮಾಡಲು ಹೋದನು. ಪ್ರಹಾರಕುಶಲರಾದ, ಕ್ರುದ್ಧರಾದ ಧನುಷ್ಮಂತರಾದ ದ್ರೌಪದೇಯರು–ಐದು ಗ್ರಹಗಳು ಸೂರ್ಯನನ್ನು ಆಕ್ರಮಿಸುವಂತೆ–ಅಲಂಬುಷನನ್ನು ಆಕ್ರಮಿಸಿದರು. ಘೋರವಾದ ಪ್ರಳಯಕಾಲ ದಲ್ಲಿ ಚಂದ್ರನು ಐದು ಗ್ರಹಗಳಿಂದ ಪೀಡಿಸಲ್ಪಡುವಂತೆ–ರಾಕ್ಷಸೋತ್ತಮನಾದ ಅಲಂಬುಷನು ವೀರ್ಯವಂತರಾದ ಪ್ರತಿವಿಂಧ್ಯಾದಿಗಳಿಂದ ಬಹಳವಾಗಿ ಪೀಡಿಸಲ್ಪಟ್ಟನು. ಮಹಾಬಲನಾದ ಪ್ರತಿವಿಂಧ್ಯನು ಉಕ್ಕಿನಿಂದ ಮಾಡಲ್ಪಟ್ಟಿದ್ದ, ನಿಶಿತವಾಗಿದ್ದ, ಶೀಘ್ರಗಾಮಿಗಳಾಗಿದ್ದ, ನೇರವಾದ ಅಗ್ರಭಾಗಗಳಿದ್ದ ಬಾಣಗಳಿಂದ ರಾಕ್ಷಸನನ್ನು ಗಾಯಗೊಳಿಸಿದನು. ಪ್ರತಿವಿಂಧ್ಯನ ಬಾಣಗಳಿಂದ ಭಿನ್ನವಾದ ಕವಚದಿಂದ ಕೂಡಿದ ರಾಕ್ಷಸನು–ಸೂರ್ಯನ ಕಿರಣಗಳಿಂದ ಸಮ್ಮಿಶ್ರವಾದ ಮೇಘದೋಪಾದಿಯಲ್ಲಿ ಪ್ರಕಾಶಿಸಿದನು. ಸುವರ್ಣದ ರೆಕ್ಕೆಗಳುಳ್ಳ ಬಾಣಗಳು ಆರ್ಷ್ಯಶೃಂಗಿಯ ಶರೀರದೊಳಕ್ಕೆ ನೆಟ್ಟುಕೊಂಡಿದ್ದು ಆಗ ಅವನು ಪ್ರದೀಪ್ತವಾದ ಶಿಖರಗಳುಳ್ಳ ಪರ್ವತದಂತೆಯೇ ಪ್ರಕಾಶಿಸಿದನು. ಅನಂತರ ಆ ಐವರು ಸೋದರರೂ ಸೇರಿಕೊಂಡು ಸುವರ್ಣಭೂಷಿತವಾದ ಮತ್ತು ನಿಶಿತವಾದ ಬಾಣಗಳಿಂದ ರಾಕ್ಷಸೇಂದ್ರನನ್ನು ಪ್ರಹರಿಸಿದರು. ಕೋಪಗೊಂಡ ಸರ್ಪಗಳೋಪಾದಿಯಲ್ಲಿದ್ದ ಘೋರವಾದ ಬಾಣಗಳಿಂದ ಪ್ರಹೃತನಾದ ಅಲಂಬುಷನು ಅಂಕುಶದಿಂದ ಚುಚ್ಚಲ್ಪಟ್ಟ ಮದಿಸಿದ ಆನೆಯಂತೆ–ಕ್ರುದ್ಧನಾದನು. ಆ ಮಹಾರಥರಿಂದ ಬಹಳವಾಗಿ ಪೀಡಿತನಾದ ಮತ್ತು ಬಹಳವಾಗಿ ಗಾಯಗೊಳಿಸಲ್ಪಟ್ಟ ಅಲಂಬುಷನು ಮುಹೂರ್ತಕಾಲ ಪ್ರಜ್ಞಾಶೂನ್ಯನಾಗಿ ಬಿದ್ದಿದ್ದನು. ಅನಂತರ ಎಚ್ಚರಗೊಂಡು ಇಮ್ಮಡಿಯಾದ ಕೋಪದಿಂದ ಕೂಡಿದವನಾಗಿ ದ್ರೌಪದೇಯರು ಬಿಡುತ್ತಿದ್ದ ಬಾಣಗಳನ್ನು ಕತ್ತರಿಸಿದನಲ್ಲದೇ–ಆ ಐವರು ಮಹಾರಥರ ಧನುಸ್ಸುಗಳನ್ನೂ ಮತ್ತು ಧ್ವಜ ಗಳನ್ನೂ ಕತ್ತರಿಸಿದನು. ನಗುತ್ತಿರುವನೋ ಎಂಬಂತೆ ಕಾಣುತ್ತಿದ್ದ ಮಹಾ ರಥನಾದ ಅಲಂಬುಷನು ರಥದಲ್ಲಿ ಧನುಸ್ಸನ್ನು ಹಿಡಿದು ನೃತ್ಯಮಾಡು ತ್ತಿರುವನೋ ಎಂಬಂತೆ ತನ್ನ ಅಸಾಧಾರಣವಾದ ಕೈಚಳಕದಿಂದ ದ್ರೌಪದೇಯ ರಲ್ಲಿ ಪ್ರತಿಯೊಬ್ಬನನ್ನೂ ಐದೈದು ಬಾಣಗಳಿಂದ ಪ್ರಹರಿಸಿದನು. ಅತ್ಯಂತ ಕೋಪಾವಿಷ್ಟನಾಗಿದ್ದ, ಮಹಾಬಲನಾದ ರಾಕ್ಷಸನು ಬಹಳ ವೇಗವಾಗಿ

ಮಹಾತ್ಮರಾದ ದ್ರೌಪದೇಯರ ರಥಗಳ ಕುದುರೆಗಳನ್ನೂ ಮತ್ತು ಸಾರಥಿಗಳನ್ನೂ ಸಂಹರಿಸಿದನು. ಅಷ್ಟರಿಂದಲೇ ತೃಪ್ತನಾಗದೇ ಪುನಃ ಕೋಪಗೊಂಡು ನಿರಾಶ್ರಯರಾಗಿದ್ದ ಅವರನ್ನು ಬಹುವಿಧವಾದ ಆಕಾರಗಳನ್ನು ಹೊಂದಿದ್ದ, ಸುನಿಶಿತವಾಗಿದ್ದ ಬಾಣಗಳಿಂದ ನೂರಾರು ಬಾರಿ-ಸಾವಿರಾರು ಬಾರಿ ಗಾಯಗೊಳಿಸಿದನು. ಮಹಾಧನುಷ್ಮಂತರಾದ ದ್ರೌಪದೇಯರನ್ನು ರಥಹೀನರನ್ನಾಗಿ ಮಾಡಿದ ರಾಕ್ಷಸನು ಅವರನ್ನು ಸಂಹಾರಮಾಡುವ ಇಚ್ಛೆಯಿಂದ ಅವರ ಬಳಿಗೆ ವೇಗವಾಗಿ ಓಡಿಹೋದನು. ದುರಾತ್ಮನಾದ ಅಲಂಬುಷನಿಂದ ತನ್ನ ಸಹೋದರರು ಪೀಡಿತರಾದುದನ್ನು ನೋಡಿ ಅರ್ಜುನನ ಮಗನಾದ ಅಭಿಮನ್ಯುವು ಅಲಂಬುಷನನ್ನು ಎದುರಿಸಿದನು. ಹಿಂದೆ ವೃತ್ರ-ವಾಸವರಿಗೆ ನಡೆದ ಯುದ್ಧದಂತೆ–ಆ ಸಮಯದಲ್ಲಿ ಅಲಂಬುಷ-ಅಭಿಮನ್ಯುಗಳಿಗೆ ಘೋರವಾದ ಯುದ್ಧವು ಪ್ರಾರಂಭವಾಯಿತು. ಆ ಮಹಾಯುದ್ಧವನ್ನು ನಿನ್ನ ಕಡೆಯ ಮಹಾರಥರೂ ಮತ್ತು ಪಾಂಡವರ ಕಡೆಯ ಮಹಾರಥರೂ ನೋಡುತ್ತಿದ್ದರು. ಯುದ್ಧದಲ್ಲಿ ತೊಡಗಿದ್ದ ಆ ಇಬ್ಬರೂ ಪರಸ್ಪರವಾಗಿ ಕ್ರೋಧದಿಂದ ಉದ್ದೀಪ್ತರಾಗಿದ್ದರು. ಮಹಾಬಲಿಷ್ಠರಾಗಿದ್ದರು. ಕ್ರೋಧದಿಂದ ಕೆಂಪುತಿರುಗಿದ ಕಣ್ಣುಗಳುಳ್ಳವರಾಗಿದ್ದರು. ಪ್ರಲಯಕಾಲದ ಅಗ್ನಿಗೆ ಸಮಾನರಾಗಿದ್ದ ಆ ಇಬ್ಬರೂ ಒಬ್ಬರನ್ನು ಮತ್ತೊಬ್ಬರು ದುರುದುರನೆ ನೋಡುತ್ತಿದ್ದರು. ಪೂರ್ವಕಾಲದಲ್ಲಿ ದೇವಾಸುರರ ಯುದ್ಧಸಮಯದಲ್ಲಿ ಇಂದ್ರ ಮತ್ತು ಶಂಬರರಿಗೆ ಯಾವ ವಿಧವಾದ ಘೋರಯುದ್ಧವು ನಡೆಯಿತೋ–ಅದೇ ವಿಧವಾದ ಘೋರವಾದ ಮತ್ತು ಹೆಚ್ಚು ಅಪ್ರಿಯಪರಿಣಾಮವನ್ನುಂಟುಮಾಡುವ ಘೋರಯುದ್ಧವು ಅಭಿಮನ್ಯು-ಅಲಂಬುಷರ ನಡುವೆ ಪ್ರಾರಂಭವಾಯಿತು."

೧೦೦ನೆಯ ಅಧ್ಯಾಯವು ಮುಗಿಯಿತು.

೧೦೧ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಅಭಿಮನ್ಯುವಿನಿಂದ ಅಲಂಬುಷನ ಪರಾಜಯ : ಅರ್ಜುನನೊಡನೆ ಭೀಷ್ಮ ಮತ್ತು ಕೃಪರ ಯುದ್ಧ: ಸಾತ್ಯಕಿಯೊಡನೆ ಅಶ್ವತ್ಥಾಮ ಮತ್ತು ದ್ರೋಣರ ಯುದ್ಧ

ಯುದ್ಧದ ವರ್ಣನೆಯನ್ನು ಸಾವಧಾನವಾಗಿ ಕೇಳುತ್ತಿದ್ದ ಧೃತರಾಷ್ಟ್ರನು

ಅಭಿಮನ್ಯು-ಅಲಂಬುಷರ ಯುದ್ಧದ ವಿಷಯವಾಗಿ ವಿವರಣೆಯನ್ನು ಕೇಳುತ್ತಾನೆ :

"ಸಂಜಯ! ಅರ್ಜುನನ ಮಗನಾದ ಅಭಿಮನ್ಯುವು ಮಹಾಶೂರ. ಮಹಾರಥರನ್ನೂ ಧ್ವಂಸಮಾಡುವ ಪರಾಕ್ರಮಿ. ಅಂತಹವನೊಡನೆ ಅಲಂಬುಷನು ಹೇಗೆ ಯುದ್ಧಮಾಡಿದನು? ಶತ್ರುವೀರಹಂತಕನಾದ ಸೌಭದ್ರನೂ ಸಹ ರಾಕ್ಷಸನಾದ ಅಲಂಬುಷನೊಡನೆ ಯಾವ ರೀತಿಯಲ್ಲಿ ಯುದ್ಧಮಾಡಿದನು?–ಈ ಎಲ್ಲ ವಿಷಯಗಳನ್ನೂ ಹೇಗೆ ನಡೆಯಿತೋ ಹಾಗೆಯೇ ನನಗೆ ಹೇಳು. ಆ ಸಮಯದಲ್ಲಿ ಧನಂಜಯನು ನನ್ನ ಸೈನಿಕರಲ್ಲಿ ಯಾರ ಮೇಲೆ ಯುದ್ಧಮಾಡುತ್ತಿದ್ದನು? ರಥಿಗಳಲ್ಲಿ ಶ್ರೇಷ್ಠನಾದ ಭೀಮ ಸೇನನು ಯಾರ ಮೇಲೆ ಯುದ್ಧಮಾಡುತ್ತಿದ್ದನು? ರಾಕ್ಷಸನಾದ ಘಟೋ ತ್ಕಚನು ಯಾರನ್ನು ಪೀಡಿಸುತ್ತಿದ್ದನು? ನಕುಲ-ಸಹದೇವರೂ ಮತ್ತು ಮಹಾರಥನಾದ ಸಾತ್ಯಕಿಯೂ ಏನು ಮಾಡುತ್ತಿದ್ದರು?–ಈ ಎಲ್ಲ ವಿಷಯ ಗಳನ್ನೂ ನನಗೆ ಯಥಾವತ್ತಾಗಿ ಹೇಳು. ಯುದ್ಧಪ್ರಕರಣಗಳನ್ನು ಯಥಾ ವತ್ತಾಗಿ ವರ್ಣಿಸುವುದರಲ್ಲಿ ನೀನು ಮಹಾಕುಶಲನಾಗಿರುವೆ."

"ಮಹಾರಾಜ! ನಿನಗೆ ರೋಮಾಂಚಕರವಾದ ಸಂಗ್ರಾಮವಾರ್ತೆ ಯನ್ನು ವಿವರಿಸಿ ಹೇಳುತ್ತೇನೆ. ರಾಕ್ಷಸೇಂದ್ರನಾದ ಅಲಂಬುಷನಿಗೂ-ಅಭಿಮನ್ಯುವಿಗೂ ಯುದ್ಧವು ಹೇಗೆ ನಡೆಯಿತು? ಅರ್ಜುನ-ಭೀಮ ಸೇನ-ನಕುಲ-ಸಹದೇವರು ಯುದ್ಧದಲ್ಲಿ ಯಾವ ರೀತಿಯಲ್ಲಿ ತಮ್ಮ ಪರಾಕ್ರಮವನ್ನು ತೋರಿಸಿದರು? ಯಾವ ರೀತಿಯಲ್ಲಿ ಭೀಷ್ಮ-ದ್ರೋಣ ಪುರಃಸರರಾದ ನಿನ್ನ ಕಡೆಯ ಮಹಾರಥರು ಸ್ವಲ್ಪವಾದರೂ ಭಯಗೊಳ್ಳದೇ ಅದ್ಭುತವಾದ ಮತ್ತು ವಿಚಿತ್ರವಾದ ಕರ್ಮಗಳನ್ನು ಮಾಡಿದರು?–ಈ ಎಲ್ಲ ವಿಷಯಗಳನ್ನು ಹೇಳುತ್ತೇನೆ. ಲಾಲಿಸು. ರಾಕ್ಷಸನಾದ ಅಲಂಬುಷನು ಯುದ್ಧಸಮಯದಲ್ಲಿ ಗಟ್ಟಿಯಾಗಿ ಗರ್ಜನೆಮಾಡುತ್ತಾ, ಆ ಗರ್ಜನೆ ಯಿಂದಲೇ ಶತ್ರುಪಕ್ಷದ ಸೈನ್ಯವನ್ನು ಬಾರಿ-ಬಾರಿಗೂ ಭಯಪಡಿಸುತ್ತಾ, 'ತಿಷ್ಠ, ತಿಷ್ಠ' 'ನಿಲ್ಲು, ನಿಲ್ಲು' ಎಂದು ಹೇಳುತ್ತಾ ವೇಗವಾಗಿ ಹೋಗಿ ಮಹಾರಥನಾದ ಅಭಿಮನ್ಯುವನ್ನು ಆಕ್ರಮಿಸಿದನು. ಅಭಿಮನ್ಯುವೂ ಸಹ ಸಿಂಹದಂತೆ ತಾರಸ್ವರದಲ್ಲಿ ಗರ್ಜನೆಮಾಡುತ್ತಾ ತನ್ನ ತಂದೆಯಾದ ಭೀಮಸೇನನಿಗೆ ನಿತ್ಯವೈರಿಯಾಗಿದ್ದ ಅಲಂಬುಷನನ್ನು ವೇಗವಾಗಿ ಎದುರಿಸಿ

ನಿಂತನು. ವೇಗವಂತರಾಗಿದ್ದ ಶ್ರೇಷ್ಠರಥಿಗಳಾಗಿದ್ದ ಆ ಇಬ್ಬರು ನರ-ರಾಕ್ಷಸರು ದೇವ-ದಾನವರೋಪಾದಿಯಲ್ಲಿ ಎರಡು ರಥಗಳಲ್ಲಿ ಕುಳಿತು ಯುದ್ಧಕ್ಕೆ ತೊಡಗಿದರು. ಇಬ್ಬರಲ್ಲಿಯೂ ಎರಡು ವಿಶೇಷವಾದ ಗುಣಗಳಿದ್ದುವು. ರಾಕ್ಷಸಶ್ರೇಷ್ಠನಾದ ಅಲಂಬುಷನು ಮಾಯಾವಿಯಾಗಿದ್ದನು. ಅರ್ಜುನನ ಮಗನಾದ ಅಭಿಮನ್ಯುವು ದಿವ್ಯಾಸ್ತ್ರಗಳನ್ನು ತಿಳಿದವನಾಗಿದ್ದನು. ಇಬ್ಬರೂ ಯುದ್ಧದಲ್ಲಿ ತೊಡಗಿದನಂತರ ಅಭಿಮನ್ಯುವು ಆರ್ಷ್ಯಶೃಂಗಿಯನ್ನು ಮೂರು ಬಾಣಗಳಿಂದ ಪ್ರಹರಿಸಿ ಪುನಃ ಐದು ಬಾಣಗಳಿಂದ ಪ್ರಹರಿಸಿದನು. ಅದರಿಂದ ಸಂಕ್ರುದ್ಧನಾದ ಅಲಂಬುಷನು-ಮಾವಟಿಗನು ಆನೆಯನ್ನು ಅಂಕುಶದಿಂದ ಬಾಧೆಪಡಿಸುವಂತೆ–ಒಂಬತ್ತು ಬಾಣಗಳಿಂದ ಅಭಿಮನ್ಯುವಿನ ವಕ್ಷಃಸ್ಥಲವನ್ನು ಭೇದಿಸಿದನು. ಅನಂತರ ಕ್ಷಿಪ್ರಕಾರಿಯಾದ ನಿಶಾಚರನು ಸಾವಿರ ಬಾಣ ಗಳಿಂದ ಅರ್ಜುನನ ಮಗನನ್ನು ಪೀಡಿಸಿದನು. ಅದರಿಂದ ಕ್ರುದ್ಧನಾದ ಅಭಿಮನ್ಯುವು ಬಗ್ಗಿದ ಗಿಣ್ಣುಗಳಿದ್ದ ನಿಶಿತವಾಗಿದ್ದ ಒಂಬತ್ತು ಬಾಣಗಳಿಂದ ರಾಕ್ಷಸೇಂದ್ರನನ್ನು ವಿಶಾಲವಾಗಿದ್ದ ವಕ್ಷಃಸ್ಥಲದಲ್ಲಿ ಪ್ರಹರಿಸಿದನು. ಆ ಬಾಣಗಳು ಅವನ ಶರೀರವನ್ನು ಹೊಕ್ಕು ಮರ್ಮಸ್ಥಳಗಳನ್ನು ಪ್ರವೇಶಿಸಿದುವು. ರಾಕ್ಷಸನು ಆ ಬಾಣಗಳಿಂದ ಭಿನ್ನವಾದ ಸರ್ವಾಂಗಗಳುಳ್ಳವ ನಾಗಿ–ಪುಷ್ಪಿತವಾದ ಮುತ್ತುಗದ ಮರಗಳಿಂದ ಪರಿವೃತವಾದ ಪರ್ವತ ದಂತೆಯೇ–ಪ್ರಕಾಶಿಸಿದನು. ಸುವರ್ಣದ ರೆಕ್ಕೆಗಳಿಂದ ಕೂಡಿದ್ದ ಬಾಣಗಳನ್ನು ಅಂಗಾಂಗಗಳಲ್ಲಿ ಧರಿಸಿದ್ದ ಮಹಾಬಲನಾದ ರಾಕ್ಷಸಶ್ರೇಷ್ಠನು ಜ್ವಾಲೆಗಳಿಂದ ಕೂಡಿದ್ದ ಅಗ್ನಿಪರ್ವತದಂತೆಯೇ ಪ್ರಕಾಶಿಸಿದನು. ಅಸಹನಶೀಲನಾದ ಮತ್ತು ಕ್ರುದ್ಧನಾದ ಆರ್ಷ್ಯಶೃಂಗಿಯು ಮಹೇಂದ್ರನಿಗೆ ಸಮಾನನಾದ ಅಭಿಮನ್ಯು ವನ್ನು ಬಾಣಗಳಿಂದಲೇ ಮುಚ್ಚಿಬಿಟ್ಟನು. ರಾಕ್ಷಸನಿಂದ ಬಿಡಲ್ಪಟ್ಟ, ಯಮದಂಡಕ್ಕೆ ಸಮಾನವಾಗಿದ್ದ ನಿಶಿತವಾದ ಆ ಬಾಣಗಳು ಅಭಿಮನ್ಯುವನ್ನು ಭೇದಿಸಿಕೊಂಡು ಪಾತಾಳಕ್ಕೆ ಹೋಗುತ್ತಿದ್ದುವು. ಅದೇ ರೀತಿಯಲ್ಲಿ ಅಭಿಮನ್ಯುವಿನಿಂದ ಪ್ರಮುಕ್ತವಾದ ಸುವರ್ಣಭೂಷಿತವಾಗಿದ್ದ ಬಾಣಗಳು ಅಲಂಬುಷನ ಶರೀರವನ್ನು ಭೇದಿಸಿಕೊಂಡು ಭೂಮಿಯ ತಲಭಾಗಕ್ಕೆ ಹೋಗುತ್ತಿದ್ದವು. ಕಟ್ಟಕಡೆಗೆ ಸೌಭದ್ರನು ಬಗ್ಗಿದ ಗಿಣ್ಣು ಗಳಿದ್ದ ಬಾಣಗಳಿಂದ–ಇಂದ್ರನು ಮಯಾಸುರನನ್ನು ವಜ್ರಾಯುಧದ ಮೂಲಕ ಯುದ್ಧದಿಂದ ಹಿಮ್ಮೆಟ್ಟಿಸಿದಂತೆ–ಅಲಂಬುಷನನ್ನು ಯುದ್ಧದಿಂದ

ವಿಮುಖನನ್ನಾಗಿ ಮಾಡಿದನು. ಶತ್ರುವಿನಿಂದ ಪ್ರಹೃತನಾದ ಅಲಂಬುಷರಾಕ್ಷಸನು ಯುದ್ಧದಿಂದ ಹಿಮ್ಮೆಟ್ಟಿದರೂ ಶತ್ರುಗಳಿಗೆ ತಾಪವನ್ನುಂಟುಮಾಡುವ ಅಂಧಕಾರಮಯವಾದ ಮಾಯೆಯನ್ನು ಸೃಷ್ಟಿಸಿದನು. ಮಹಾರಾಜ! ಒಡನೆಯೇ ಎಲ್ಲರೂ ಕತ್ತಲಿನಿಂದ ತಿರೋಹಿತರಾಗಿಬಿಟ್ಟರು. ಅವರು ಅಭಿಮನ್ಯುವನ್ನಾಗಲೀ, ತಮ್ಮ ಕಡೆಯ ಸೈನಿಕರನ್ನಾಗಲೀ, ಶತ್ರುಪಕ್ಷದವರನ್ನಾಗಲೀ ಕಾಣಲೇ ಇಲ್ಲ. ಘೋರರೂಪವಾದ ಗಾಢಾಂಧಕಾರವನ್ನು ನೋಡಿ ಅಭಿಮನ್ಯುವು ಅತ್ಯುಗ್ರವಾಗಿದ್ದ ಭಾಸ್ಕರವೆಂಬ ಅಸ್ತ್ರವನ್ನು ಪ್ರಕಟಪಡಿಸಿದನು. ಒಡನೆಯೇ ಜಗತ್ತಿನಲ್ಲಿ ಪ್ರಕಾಶವುಂಟಾಯಿತು.

ಈ ರೀತಿಯಲ್ಲಿ ದುರಾತ್ಮನಾದ ರಾಕ್ಷಸನ ಮಾಯೆಯನ್ನು ನಿರ್ಮೂಲಗೊಳಿಸಿ ಕ್ರುದ್ಧನಾದ, ಮಹಾವೀರ್ಯನಾದ, ನರೋತ್ತಮನಾದ ಅಭಿಮನ್ಯುವು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ರಾಕ್ಷಸನನ್ನು ಮುಚ್ಚಿಬಿಟ್ಟನು. ಅಲಂಬುಷರಾಕ್ಷಸನು ಪುನಃ ಅನೇಕವಿಧವಾದ ಮಾಯೆಗಳನ್ನು ಸೃಷ್ಟಿಸಿದನು. ಆ ಮಾಯೆಗಳೆಲ್ಲವನ್ನೂ ಸರ್ವಾಸ್ತ್ರಗಳನ್ನೂ ತಿಳಿದಿದ್ದ ಅಮೇಯಾತ್ಮನಾದ ಅಭಿಮನ್ಯುವು ನಿರಸನಗೊಳಿಸಿದನು. ತನ್ನ ಮಾಯೆಗಳೆಲ್ಲವೂ ನಿರಸನಗೊಳ್ಳಲು ರಾಕ್ಷಸನು ಭ್ರಾಂತನಾದನು. ಅಭಿಮನ್ಯುವು ತನ್ನ ಬಾಣಗಳಿಂದ ಅಲಂಬುಷನನ್ನು ಪ್ರಹರಿಸುತ್ತಲೇ ಇದ್ದನು. ನಿಶಿತವಾದ ಬಾಣಗಳಿಂದ ಸತತವಾಗಿ ಪ್ರಹೃತನಾಗುತ್ತಿದ್ದ ಅಲಂಬುಷನು ಬೇರೆ ಮಾರ್ಗವಿಲ್ಲದೇ ರಥವನ್ನು ಅಲ್ಲಿಯೇ ಬಿಟ್ಟು ಪ್ರಾಣಭಯದಿಂದ ಪಲಾಯನಮಾಡಿದನು. ಕೂಟ (ಮಾಯಾ) ಯೋಧಿಯಾದ ರಾಕ್ಷಸನು ಪರಾಜಿತನಾಗಿ ಪಲಾಯನಮಾಡಿದ ನಂತರ ಅಭಿಮನ್ಯುವು–ಮದದಿಂದ ಕೊಬ್ಬಿದ ಗಂಧನಾಗವು (ಆನೆಯು) ಕಮಲದಿಂದ ಕೂಡಿದ ಸರೋವರವನ್ನು ಧ್ವಂಸಮಾಡುವಂತೆ–ನಿನ್ನ ಸೈನ್ಯ ವನ್ನು ಮರ್ದನಮಾಡಿದನು. ಶಾಂತನುವಿನ ಮಗನಾದ ಭೀಷ್ಮನು ನಿನ್ನ ಸೈನ್ಯವು ದಿಕ್ಕಾಪಾಲಾಗಿ ಓಡುತ್ತಿರುವುದನ್ನು ಕಂಡು ಅಪಾರವಾದ ಬಾಣಗಳ ಸುರಿಸುವಿಕೆಯಿಂದ ಸೌಭದ್ರನನ್ನು ತಡೆದು ನಿಲ್ಲಿಸಿದನು. ಕೌರವಮಹಾರಥರೆಲ್ಲರೂ ಅಭಿಮನ್ಯುವಿನ ಸುತ್ತಲೂ ಕೋಟೆಯ ರೀತಿಯಲ್ಲಿ ನಿಂತುಕೊಂಡು ಒಬ್ಬನೇ ಒಬ್ಬ ವೀರನನ್ನು ಒಳಕ್ಕೆ ಸೇರಿಸಿಕೊಂಡು ಬಾಣಗಳಿಂದ ಸುದೃಢವಾಗಿ ಗಾಯಗೊಳಿಸುತ್ತಿದ್ದರು.

ರಥಿಗಳಲ್ಲಿ ಶ್ರೇಷ್ಠನಾದ, ಶಸ್ತ್ರಾಸ್ತ್ರಗಳನ್ನು ಬಲ್ಲವರಲ್ಲಿ ನಿಪುಣನಾದ ಅಭಿಮನ್ಯುವು ತಂದೆಯ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವುಳ್ಳವನಾಗಿದ್ದನು. ಬಲದಲ್ಲಿಯೂ, ವಿಕ್ರಮದಲ್ಲಿಯೂ, ಸೋದರಮಾವನಾದ ವಾಸುದೇವನಿಗೆ ಸಮಾನನೆನಿಸಿಕೊಂಡಿದ್ದನು. ಯುದ್ಧಸಮಯದಲ್ಲಿ ಅಭಿಮನ್ಯುವು ತಂದೆ ಮತ್ತು ಸೋದರಮಾವ ಇವರಿಬ್ಬರ ಪರಾಕ್ರಮಕ್ಕೂ ಅನುಗುಣವಾದ ಅನೇಕಪ್ರಕಾರವಾದ ಪರಾಕ್ರಮದ ಕಾರ್ಯಗಳನ್ನೇ ಮಾಡಿತೋರಿಸಿದನು. ಇಂತಹ ಅತುಲಪರಾಕ್ರಮಿಯಾದ ಅಭಿಮನ್ಯುವು ತನ್ನ ಸುತ್ತಲೂ ಮಹಾವೀರರು ನಿಂತು ತನ್ನೊಬ್ಬನ ಮೇಲೆ ಸತತವಾಗಿ ಬಾಣಪ್ರಯೋಗಮಾಡುತ್ತಿದ್ದರೂ ಸ್ವಲ್ಪವಾದರೂ ಎದೆಗುಂದದೇ ಅವರೆಲ್ಲರನ್ನೂ ಧೈರ್ಯದಿಂದ ಎದುರಿಸುತ್ತಿದ್ದನು. ನಿನ್ನ ಸೈನ್ಯವನ್ನು ಅಪಾರ ಸಂಖ್ಯೆಯಲ್ಲಿ ಸಂಹರಿಸುತ್ತಿದ್ದ, ವೀರನಾದ, ಅಸಹನಶೀಲನಾದ ಧನಂಜಯನು ತನ್ನ ಮಗನನ್ನು ರಕ್ಷಿಸುವ ಸಲುವಾಗಿ ಭೀಷ್ಮನ ಬಳಿಗೆ ಬಂದನು. ರಾಹುವು ಗ್ರಹಣಕಾಲದಲ್ಲಿ ಸೂರ್ಯನನ್ನು ಆಕ್ರಮಿಸುವಂತೆ–ನಿನ್ನ ತಂದೆಯಾದ ಭೀಷ್ಮನು ಅರ್ಜುನನನ್ನು ಆಕ್ರಮಿಸಿದನು. ಆ ವೇಳೆಗೆ ಸರಿಯಾಗಿ ರಥ-ಗಜಾಶ್ವ ಸೈನ್ಯಗಳಿಂದ ಕೂಡಿದ್ದ ನಿನ್ನ ಸೈನಿಕರು ಭೀಷ್ಮನನ್ನು ಸುತ್ತುವರಿದು ನಿಂತರು ಮತ್ತು ಎಲ್ಲ ಕಡೆಗಳಿಂದಲೂ ಅವನನ್ನು ರಕ್ಷಿಸುತ್ತಿದ್ದರು. ಅದೇ ರೀತಿಯಲ್ಲಿ ಪಾಂಡವರೂ ಸಹ ಕವಚಗಳನ್ನು ಧರಿಸಿ ಧನಂಜಯನನ್ನು ಸುತ್ತುವರಿದು ನಿಂತು ಮುಂದಿನ ಮಹಾಯುದ್ಧಕ್ಕೆ ಅಣಿಮಾಡಿಕೊಂಡರು. ಮರುಕ್ಷಣದಲ್ಲಿಯೇ ಭೀಷ್ಮನನ್ನು ಎದುರಿಸಿ ನಿಂತಿದ್ದ ಅರ್ಜುನನನ್ನು ಕೃಪರು ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದರು. ಪಾಂಡವರಿಗೆ ಪ್ರಿಯವನ್ನುಂಟುಮಾಡುವ ಅಭಿಲಾಷೆಯಿಂದ ಸಾತ್ಯಕಿಯು ಮುಂದೆ ಬಂದು–ಸಿಂಹವು ಆನೆಯನ್ನು ತನ್ನ ಪಂಜದಿಂದ ಪ್ರಹರಿಸುವಂತೆ–ಶಾರದ್ವತರನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಗೌತಮರೂ ಸಹ ಬಹಳ ಕ್ರುದ್ಧರಾಗಿ ಅತ್ಯವಸರದಿಂದ ಗೃಧ್ರದ ರೆಕ್ಕೆಗಳನ್ನು ಹೊಂದಿದ್ದ ಒಂಬತ್ತು ಬಾಣಗಳಿಂದ ಸಾತ್ಯಕಿಯನ್ನು ವಕ್ಷಃಸ್ಥಲದಲ್ಲಿ ಪ್ರಹರಿಸಿದರು. ಅನಂತರ ವೇಗವಂತನಾದ ಶೈನೇಯನು ಧನುಸ್ಸನ್ನು ಬಗ್ಗಿಸಿ ಬಹಳ ಶೀಘ್ರವಾಗಿ ಗೌತಮರ ಪ್ರಾಣ

ಹಾರಿಯಾದ ಬಾಣವೊಂದನ್ನು ಬತ್ತಳಿಕೆಯಿಂದ ತೆಗೆದು ಧನುಸ್ಸಿನಲ್ಲಿ ಅನುಸಂಧಾನಮಾಡಿ ಪ್ರಹರಿಸಿದನು.

ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಕಾಂತಿಯಿಂದ ಕೂಡಿದ್ದ ಮತ್ತು ವೇಗವಾಗಿ ಕೃಪರ ಮೇಲೆ ಬೀಳುವುದರಲ್ಲಿದ್ದ ಬಾಣವನ್ನು ಪರಮ ಕೋಪಿಷ್ಠನಾದ ಅಶ್ವತ್ಥಾಮನು ಎರಡಾಗಿ ಕತ್ತರಿಸಿಬಿಟ್ಟನು. ಅದನ್ನು ಕಂಡು ರಥಿಗಳಲ್ಲಿ ಶ್ರೇಷ್ಠನಾದ ಸಾತ್ಯಕಿಯು ಕೃಪರನ್ನು ಅಲ್ಲಿಯೇ ಬಿಟ್ಟು–ರಾಹುವು ಚಂದ್ರನನ್ನು ಅಟ್ಟಿಸಿಕೊಂಡು ಹೋಗುವಂತೆ–ಅಶ್ವತ್ಥಾಮನ ಬಳಿಗೆ ವೇಗದಿಂದ ಹೋಗಿ ದಾಳಿಮಾಡಿದನು. ಒಡನೆಯೇ ಅಶ್ವತ್ಥಾಮನು ಸಾತ್ಯಕಿಯ ಧನುಸ್ಸನ್ನು ಎರಡಾಗಿ ಕತ್ತರಿಸಿದನು. ಧನುಸ್ಸಿನಿಂದ ವಿಹೀನನಾಗಿದ್ದ ಸಾತ್ಯಕಿಯನ್ನು ಪುನಃ ಅಶ್ವತ್ಥಾಮನು ಬಾಣಗಳಿಂದ ಬಾಧೆಪಡಿಸಿದನು. ಸಾತ್ಯಕಿಯು ಮರುಕ್ಷಣದಲ್ಲಿಯೇ ಶತ್ರುವಿನಾಶಕವಾದ ಭಾರಸಹವಾದ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಅರುವತ್ತು ಬಾಣಗಳಿಂದ ಅಶ್ವತ್ಥಾಮನ ಭುಜ ಗಳನ್ನೂ, ವಕ್ಷಃಸ್ಥಳವನ್ನೂ ಪ್ರಹರಿಸಿದನು. ಆ ಬಾಣಗಳು ಅಶ್ವತ್ಥಾಮನ ಶರೀರದೊಳಕ್ಕೆ ಆಳವಾಗಿ ನಾಟಿ ಅದರಿಂದ ಅವನು ಬಹಳ ವ್ಯಥಿತನಾದನು. ಮುಹೂರ್ತಕಾಲ ಮೂರ್ಛಿತನಾಗಿ ರಥದ ಹಿಂಬದಿಯಲ್ಲಿದ್ದ ಧ್ವಜದಂಡಕ್ಕೆ ಒರಗಿ ಕುಳಿತನು. ಸ್ವಲ್ಪಹೊತ್ತು ಕಳೆದನಂತರ ಮೂರ್ಛೆಯನ್ನು ಕಳೆದು ಪ್ರಜ್ಞೆಯನ್ನು ಹೊಂದಿದವನಾಗಿ ಪ್ರತಾಪವಂತನಾದ ದ್ರೌಣಿಯು ಬಹುಕ್ರುದ್ಧ ನಾಗಿ ವಾರ್ಷ್ಣೇಯನನ್ನು ನಾರಾಚವೆಂಬ ಬಾಣದಿಂದ ಪ್ರಹರಿಸಿದನು. ಆ ಬಾಣವು ಶೈನೇಯನನ್ನು ಭೇದಿಸಿಕೊಂಡು–ವಸಂತಕಾಲದಲ್ಲಿ ಬಲಿಷ್ಠನಾದ ಸರ್ಪಶಿಶುವು ಬಿಲವನ್ನು ಪ್ರವೇಶಿಸುವಂತೆ–ಧರಣೀತಲವನ್ನು ಮುಟ್ಟಿತು. ಅನಂತರ ಅಶ್ವತ್ಥಾಮನು ಭಲ್ಲವೆಂಬ ಮತ್ತೊಂದು ಬಾಣದಿಂದ ಮಾಧವನ ಧ್ವಜವನ್ನು ಕತ್ತರಿಸಿ ಸಿಂಹನಾದಮಾಡಿದನು. ವರ್ಷರ್ತುವಿನಲ್ಲಿ ಮೇಘವು ಸೂರ್ಯನನ್ನು ಮುಚ್ಚಿಬಿಡುವಂತೆ–ಪುನಃ ಅಶ್ವತ್ಥಾಮನು ಸಾತ್ಯಕಿಯನ್ನು ಘೋರವಾದ ಬಾಣಗಳಿಂದ ಮುಚ್ಚಿದನು. ಸಾತ್ಯಕಿಯೂ ಸಹ ಮರುಕ್ಷಣ ದಲ್ಲಿಯೇ ತನ್ನನ್ನು ಆವರಿಸಿದ್ದ ಬಾಣಗಳ ಸಮೂಹವನ್ನು ನಿರಸನಗೊಳಿಸಿ ಅಶ್ವತ್ಥಾಮನನ್ನು ಅನೇಕಪ್ರಕಾರವಾದ ಬಾಣಗಳ ಸಮೂಹದಿಂದ ಮುಚ್ಚಿದನು. ಸಾತ್ಯಕಿಯು ಬಿಟ್ಟ ಬಾಣಗಳ ಸಮೂಹವನ್ನು ನಿರಸನಗೊಳಿಸಿ ಮೇಘಜಾಲದಿಂದ ವಿಮುಕ್ತನಾದ ಸೂರ್ಯನಂತೆಯೇ ಪ್ರಕಾಶಮಾನನಾಗಿ

ಕಾಣುತ್ತಿದ್ದ ದ್ರೌಣಿಯನ್ನು ಶೈನೇಯನು ಅನೇಕ ಬಾಣಗಳಿಂದ ಸಂತಾಪ ಗೊಳಿಸಲು ಉಪಕ್ರಮಿಸಿದನು. ಒಂದು ಸಾವಿರ ಬಾಣಗಳಿಂದ ಮಹಾಬಲ ನಾದ ಸಾತ್ಯಕಿಯು ಪುನಃ ಅಶ್ವತ್ಥಾಮನನ್ನು ಮುಚ್ಚಿ ಸಿಂಹನಾದವನ್ನು ಮಾಡಿ ದನು. ರಾಹುಗ್ರಸ್ತನಾದ ದಿವಾಕರನಂತೆ–ಸಾತ್ಯಕಿಯು ತಮ್ಮ ಮಗನನ್ನು ಬಾಣಗಳ ಸಮೂಹದಿಂದ ಮುಚ್ಚಿಬಿಟ್ಟಿರುವುದನ್ನು ಕಂಡು ಪ್ರತಾಪವಂತ ರಾದ ಭಾರದ್ವಾಜರು ಶೈನೇಯನನ್ನು ಆಕ್ರಮಿಸಿದರು. ವಾರ್ಷ್ಣೇಯನಿಂದ ಪೀಡಿತನಾಗಿದ್ದ ತನ್ನ ಮಗನನ್ನು ರಕ್ಷಿಸುವ ಇಚ್ಛೆಯಿಂದ ಸುತೀಕ್ಷ್ಣವಾದ ಬಾಣದಿಂದ ಸಾತ್ಯಕಿಯನ್ನು ಪ್ರಹರಿಸಿದರು. ಸಾತ್ಯಕಿಯು ಒಡನೆಯೇ ಗುರು ಪುತ್ರನಾದ ಅಶ್ವತ್ಥಾಮನನ್ನು ಬಿಟ್ಟು ಸಂಪೂರ್ಣವಾಗಿ ಲೋಹದಿಂದಲೇ ನಿರ್ಮಿತವಾಗಿದ್ದ ಇಪ್ಪತ್ತು ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ಆ ಸಮಯಕ್ಕೆ ಸರಿಯಾಗಿ ತನ್ನ ಮಿತ್ರನಾದ ಸಾತ್ಯಕಿಯು ದ್ರೋಣರೊಡನೆ ಯುದ್ಧದಲ್ಲಿ ತೊಡಗಿರುವುದನ್ನು ನೋಡಿ ಶತ್ರುತಾಪನನಾದ, ಮಹಾರಥ ನಾದ, ಮಹಾತ್ಮನಾದ ಅರ್ಜುನನು ಕ್ರುದ್ಧನಾಗಿ ದ್ರೋಣರನ್ನು ಆಕ್ರಮಿಸಿದನು. ಅಂತರಿಕ್ಷದಲ್ಲಿ ಬುಧನೂ ಮತ್ತು ಶುಕ್ರನೂ ಪರಸ್ಪರವಾಗಿ ಸಂಧಿಸು ವಂತೆ–ದ್ರೋಣ ಮತ್ತು ಪಾರ್ಥರು ಯುದ್ಧಮಾಡಲು ಉಪಕ್ರಮಿಸಿದರು."

೧೦೧ನೆಯ ಅಧ್ಯಾಯವು ಮುಗಿಯಿತು.

೧೦೨ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ದ್ರೋಣಾಚಾರ್ಯ ಮತ್ತು ಸುಶರ್ಮರೊಡನೆ ಅರ್ಜುನನ ಯುದ್ಧ : ಭೀಮಸೇನನಿಂದ ಕೌರವರ ಗಜಸೇನೆಯ ಸಂಹಾರ

ಧೃತರಾಷ್ಟ್ರನು ಸಂಜಯನನ್ನು ಕುರಿತು ದ್ರೋಣ-ಪಾರ್ಥರ ಯುದ್ಧದ ವಿವರಣೆಯನ್ನು ಕೇಳುತ್ತಾನೆ :

"ಸಂಜಯ! ಮಹಾಧನುಷ್ಮಂತರಾದ ದ್ರೋಣರು ಮತ್ತು ಪಾಂಡು ಪುತ್ರನಾದ ಧನಂಜಯ ಇವರಿಬ್ಬರೂ ಹೇಗೆ ಯುದ್ಧಮಾಡಿದರು? ಪುರುಷರ್ಷಭರಾದ ಆ ಇಬ್ಬರೂ ಪರಸ್ಪರವಾಗಿ ತಮ್ಮ-ತಮ್ಮ ಪಕ್ಷಗಳಿಗೆ ಜಯಗಳಿಸಿಕೊಡಲು ಸಂಪೂರ್ಣವಾಗಿ ಪ್ರಯತ್ನಿಸುತ್ತಿದ್ದರು. ಆದರೆ :

**ಪ್ರಿಯೋ ಹಿ ಪಾಣ್ಡವೋ ನಿತ್ಯಂ ಭಾರದ್ವಾಜಸ್ಯ ಧೀಮತಃ ।**
**ಆಚಾರ್ಯಶ್ಚ ರಣೇ ನಿತ್ಯಂ ಪ್ರಿಯಃ ಪಾರ್ಥಸ್ಯ ಸಂಜಯ ॥೨॥**

ಧೀಮಂತರಾದ ಭಾರದ್ವಾಜರಿಗೆ ಪಾಂಡವನು ಯಾವಾಗಲೂ ಪ್ರಿಯನಾಗಿರತಕ್ಕವನು. ಅಂತೆಯೇ ಆಚಾರ್ಯರೂ ಸಹ ಪಾರ್ಥನಿಗೆ ಸದಾ ಪ್ರಿಯರಾಗಿರತಕ್ಕವರು.

ಅವರಿಬ್ಬರೂ ಹೃಷ್ಟರಾಗಿರತಕ್ಕವರು. ಸಿಂಹಗಳಂತೆ ಸೊಕ್ಕಿನಿಂದ ಕೂಡಿರತಕ್ಕವರು. ಮಹಾರಥರಾದ ಭಾರದ್ವಾಜ-ಧನಂಜಯರು ಯಾವ ರೀತಿಯಲ್ಲಿ ಪ್ರಯತ್ನಪೂರ್ವಕವಾಗಿ ಪರಸ್ಪರ ಯುದ್ಧಮಾಡಿದರೆಂಬುದನ್ನು ವಿವರಿಸಿ ಹೇಳು, ಸಂಜಯ."

"ಮಹಾರಾಜ! ಗುರು-ಶಿಷ್ಯರು ಪರಸ್ಪರ ಪ್ರೀತಿಯುಳ್ಳವರೆಂಬುದು ನಿಜವಾದರೂ ಯುದ್ಧಸಮಯದಲ್ಲಿ ದ್ರೋಣರು ಅರ್ಜುನನನ್ನು ಪ್ರಿಯನೆಂದು ಭಾವಿಸುತ್ತಿರಲಿಲ್ಲ; ಕ್ಷಾತ್ರಧರ್ಮವನ್ನು ಪುರಸ್ಕರಿಸಿ ಪಾರ್ಥನೂ ಸಹ ಯುದ್ಧದಲ್ಲಿ ದ್ರೋಣರನ್ನು ಗುರುಗಳೆಂದೂ ಭಾವಿಸುತ್ತಿರಲಿಲ್ಲ. ಇದು ಕ್ಷತ್ರಿಯರೆಲ್ಲರ ಸ್ವಭಾವವೂ ಆಗಿದೆ.

**ನ ಕ್ಷತ್ರಿಯಾ ರಣೇ ರಾಜನ್ವರ್ಜಯನ್ತಿ ಪರಸ್ಪರಮ್ ।**
**ನಿರ್ಮರ್ಯಾದಂ ಹಿ ಯುಧ್ಯನ್ತೇ ಪಿತೃಭಿರ್ಭ್ರಾತೃಭಿಃ ಸಹ ॥೩॥**

ಮಹಾರಾಜ! ಯುದ್ಧಸಮಯದಲ್ಲಿ ಕ್ಷತ್ರಿಯರು ಪರಸ್ಪರವಾಗಿ ಯಾರನ್ನೂ ಬಿಡುವುದಿಲ್ಲ. ತಂದೆಗಳೊಡನೆಯೂ, ಸೋದರರೊಡನೆಯೂ ಮರ್ಯಾದೆಯನ್ನೂ ಮೀರಿ ಅವರು ಯುದ್ಧಮಾಡುತ್ತಾರೆ. ದ್ರೋಣ-ಪಾರ್ಥರಿಬ್ಬರೂ ಯುದ್ಧಕ್ಕೆ ತೊಡಗಿದೊಡನೆಯೇ ಪಾರ್ಥನು ಮೂರು ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ಆದರೆ ಪಾರ್ಥನ ಧನುಸ್ಸಿನಿಂದ ಚ್ಯುತವಾದ ಆ ಬಾಣಗಳ ಕಡೆಗೆ ದ್ರೋಣರು ಲಕ್ಷ್ಯವನ್ನೇ ಕೊಡಲಿಲ್ಲ. ಪುನಃ ಪಾರ್ಥನು ದ್ರೋಣರನ್ನು ಬಾಣಗಳ ಸುರಿಸುವಿಕೆಯಿಂದ ಮುಚ್ಚಿಬಿಟ್ಟನು. ಗಹನವಾದ ಅರಣ್ಯದಲ್ಲಿ ಹತ್ತಿಕೊಳ್ಳುವ ದಾವಾಗ್ನಿಯಂತೆ–ಅರ್ಜುನನ ಆ ಬಾಣಗಳ ಪ್ರಹಾರದಿಂದ ದ್ರೋಣರು ಕೋಪದಿಂದ ಕಿಡಿಕಿಡಿಯಾದರು. ಮರುಕ್ಷಣದಲ್ಲಿಯೇ ದ್ರೋಣರು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ

ಅರ್ಜುನನನ್ನು ಮುಚ್ಚಿಬಿಟ್ಟರು. ದ್ರೋಣ-ಪಾರ್ಥರು ಯುದ್ಧದಲ್ಲಿ ತೊಡಗಿರುವುದನ್ನು ನೋಡಿ ದುರ್ಯೋಧನನು ಸುಶರ್ಮನಿಗೆ ದ್ರೋಣರ ರಥದ ಹಿಂಭಾಗದ ರಕ್ಷಕನಾಗಿರುವಂತೆ ನಿರ್ದೇಶಿಸಿದನು. ಪಾರ್ಷ್ಣಿಭಾಗದ ರಕ್ಷಣಾಕಾರ್ಯವನ್ನು ವಹಿಸಿಕೊಂಡ ತ್ರಿಗರ್ತರಾಜನು ಬಹುಶೀಘ್ರವಾಗಿ ಧನುಸ್ಸನ್ನು ಬಗ್ಗಿಸಿ ಹೆದೆಯೇರಿಸಿ, ಬಾಣಗಳನ್ನು ಯೋಜಿಸಿ ಅಯೋಮುಖ ವಾಗಿದ್ದ ಆ ಬಾಣಗಳಿಂದ ಅರ್ಜುನನನ್ನು ಮುಚ್ಚಿಬಿಟ್ಟನು. ದ್ರೋಣ-ಸುಶರ್ಮರು ಬಿಟ್ಟ ಆ ಬಾಣಗಳು–ಶರತ್ಕಾಲದಲ್ಲಿ ಆಕಾಶದಲ್ಲಿ ಹಾರಾಡುವ ಹಂಸಪಕ್ಷಿಗಳಂತೆ–ಪ್ರಕಾಶಿಸಿದುವು. ರುಚಿಕರವಾದ ಹಣ್ಣುಗಳ ಭಾರದಿಂದ ಬಗ್ಗಿರುವ ವೃಕ್ಷಕ್ಕೆ ಹಕ್ಕಿಗಳು ಮುತ್ತಿಕೊಳ್ಳುವಂತೆ–ಆ ಇಬ್ಬರೂ ಬಿಟ್ಟ ಬಾಣಗಳು ಅರ್ಜುನನ ಶರೀರದ ಸುತ್ತಲೂ ಚುಚ್ಚಿಕೊಂಡುವು. ರಥಿಕರಲ್ಲಿ ಶ್ರೇಷ್ಠನಾದ ಅರ್ಜುನನು ಒಮ್ಮೆ ಸಿಂಹನಾದಮಾಡಿ ಪುತ್ರಸಹಿತನಾದ ತ್ರಿಗರ್ತರಾಜನನ್ನು ಬಾಣಗಳಿಂದ ಪೀಡಿಸಿದನು.

ಪ್ರಲಯಕಾಲದಲ್ಲಿ ಕಾಲಪುರುಷನಿಂದ ಪ್ರಹೃತರಾದವರಂತೆ–ಅರ್ಜುನ ನಿಂದ ಪ್ರಹೃತರಾಗಿದ್ದ ತ್ರಿಗರ್ತದೇಶದ ಯೋಧರು ಮರಣವನ್ನು ನಿಶ್ಚಯಿಸಿದರಾಗಿ (ಸಾಯಲು ಸಿದ್ಧರಾಗಿ) ಅರ್ಜುನನ ರಥದ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದರು. ಪರ್ವತವು ಅಚಲವಾಗಿದ್ದು ಜಲ ಧಾರೆಯನ್ನು ಗ್ರಹಿಸುವಂತೆ ತ್ರಿಗರ್ತಯೋಧರು ಸುರಿಸಿದ ಬಾಣಗಳ ವೃಷ್ಟಿಯನ್ನು ಅರ್ಜುನನು ಗ್ರಹಿಸಿದನು. ಬೀಭತ್ಸುವಿನ ಕೈಚಳಕದ ಅದ್ಭುತವನ್ನು ನಾವು ಆಗ ನೋಡಿದೆವು, ಮಹಾರಾಜ! ಅನೇಕ ಯೋಧ ರಿಂದ ಪ್ರಮುಕ್ತವಾದ ದುರಾಸದವಾದ ಬಾಣಗಳ ವೃಷ್ಟಿಯನ್ನು ಒಬ್ಬನೇ ಒಬ್ಬ ಅರ್ಜುನನು–ಬಿರುಗಾಳಿಯು ಮೋಡಗಳ ಸಮೂಹವನ್ನು ಚದುರಿಸಿ ಬಿಡುವಂತೆ–ನಿರಸನಗೊಳಿಸಿದನು. ಅರ್ಜುನನ ಆ ಅದ್ಭುತಪರಾಕ್ರಮ ವನ್ನು ನೋಡಿ ದೇವ-ದಾನವರೆಲ್ಲರೂ ಸಂತುಷ್ಟರಾದರು. ಅನಂತರ ಕ್ರುದ್ಧ ನಾದ ಪಾರ್ಥನು ತ್ರಿಗರ್ತಯೋಧರ ಮೇಲೆ ವಾಯವ್ಯಾಸ್ತ್ರವನ್ನು ಪ್ರಯೋಗಿ ಸಿದನು. ಆ ಅಸ್ತ್ರದ ಪ್ರಭಾವದಿಂದ ದೊಡ್ಡದಾದ ಬಿರುಗಾಳಿಯು ಹುಟ್ಟಿ ಆಕಾಶವನ್ನೇ ಅಲ್ಲೋಲ-ಕಲ್ಲೋಲಮಾಡಿಬಿಟ್ಟಿತು. ಅನೇಕಾನೇಕ ವೃಕ್ಷ ಗಳನ್ನು ಬುಡಮೇಲು ಮಾಡಿಬಿಟ್ಟಿತು. ಅನೇಕಸೈನಿಕರನ್ನೂ ಹಾರಿಸಿಕೊಂಡು

ಹೋಗಿ ಧ್ವಂಸಮಾಡಿತು. ಮಹಾರಥರಾದ ದ್ರೋಣರು ಸುದಾರುಣವಾದ ವಾಯವ್ಯಾಸ್ತ್ರದ ಆಘಾತವನ್ನು ನೋಡಿ ಅದಕ್ಕೆ ಪ್ರತಿಯಾಗಿ ಶೈಲವೆಂಬ ಮಹಾಘೋರವಾದ ಅಸ್ತ್ರವನ್ನು ಪ್ರಯೋಗಿಸಿದರು. ಮಹಾರಾಜ! ದ್ರೋಣರು ಶೈಲಮಹಾಸ್ತ್ರವನ್ನು ಅಭಿಮಂತ್ರಿಸಿ ಬಿಟ್ಟೊಡನೆಯೇ ವಾಯವ್ಯಾಸ್ತ್ರವು ಉಪಶಮನಗೊಂಡಿತು. ದಿಕ್ಕುಗಳೂ ಪ್ರಸನ್ನವಾದುವು. ಅನಂತರ ವೀರನಾದ ಅರ್ಜುನನು ತನ್ನ ಸತತವಾದ ಬಾಣಗಳ ಪ್ರಯೋಗದಿಂದ ತ್ರಿಗರ್ತರಾಜನ ರಥಿಗಳ ಸಮೂಹಗಳನ್ನು ಯುದ್ಧದಲ್ಲಿ ನಿರುತ್ಸಾಹಿಗಳನ್ನಾಗಿಯೂ, ಪರಾಕ್ರಮಹೀನರನ್ನಾಗಿಯೂ, ಯುದ್ಧದಿಂದ ವಿಮುಖರನ್ನಾಗಿಯೂ ಮಾಡಿದನು. ಅನಂತರ ದುರ್ಯೋಧನ, ರಥಿಗಳಲ್ಲಿ ಶ್ರೇಷ್ಠರಾದ ಕೃಪರು, ಅಶ್ವತ್ಥಾಮಾ, ಶಲ್ಯ, ಕಾಂಬೋಜರಾಜನಾದ ಸುದಕ್ಷಿಣ, ಅವಂತೀ ದೇಶದ ವಿಂದಾನುವಿಂದರು, ಬಾಹ್ಲಿಕಯೋಧರಿಂದೊಡಗೂಡಿದ ಬಾಹ್ಲಿಕ ರಾಜ–ಇವರೆಲ್ಲರೂ ರಥಸೈನ್ಯದಿಂದ ಕೂಡಿದವರಾಗಿ ಪಾರ್ಥನನ್ನು ಎಲ್ಲ ದಿಕ್ಕುಗಳಿಂದಲೂ ಸುತ್ತುಗಟ್ಟಿದರು. ಅದೇ ರೀತಿಯಲ್ಲಿ ಭಗದತ್ತ ಮತ್ತು ಮಹಾಬಲನಾದ ಶ್ರುತಾಯುಷ–ಇವರಿಬ್ಬರೂ ಗಜಸೈನ್ಯದೊಡನೆ ಭೀಮ ಸೇನನನ್ನು ಸುತ್ತುಗಟ್ಟಿದರು. ಭೂರಿಶ್ರವಸ-ಶಲ-ಸೌಬಲರು ವಿಮಲವಾದ ಮತ್ತು ತೀಕ್ಷ್ಣವಾದ ಬಾಣಗಳ ಸಮೂಹದಿಂದ ಮಾದ್ರಿಯ ಮಕ್ಕಳಾದ ನಕುಲ-ಸಹದೇವರನ್ನು ಸುತ್ತುಗಟ್ಟಿದರು. ಸೈನ್ಯಸಮೇತರಾದ ಧಾರ್ತರಾಷ್ಟ್ರ ರಿಂದ ಪರಿವೃತನಾದ ಭೀಷ್ಮನು ಯುಧಿಷ್ಠಿರನ ಬಳಿಗೆ ಬಂದು ಅವನನ್ನು ಸುತ್ತುಗಟ್ಟಿನಿಂತು ಯುದ್ಧಮಾಡಲು ಉಪಕ್ರಮಿಸಿದನು. ತನ್ನನ್ನು ಆಕ್ರಮಿ ಸಲು ಬರುತ್ತಿದ್ದ ಗಜಸೇನೆಯನ್ನು ನೋಡಿ ಪೃಥಾತನಯನಾದ ವೃಕೋದ ರನು–ಅರಣ್ಯದಲ್ಲಿರುವ ಮೃಗರಾಜನಾದ ಸಿಂಹದಂತೆ ರೋಷದಿಂದ ಕಟವಾಯಿಗಳನ್ನು ನೆಕ್ಕಿಕೊಳ್ಳುತ್ತಾ ಗದೆಯನ್ನು ತೆಗೆದುಕೊಂಡು ರಥದಿಂದ ಧುಮುಕಿ ನಿನ್ನ ಸೈನಿಕರನ್ನು ನಡುಗಿಸಿಬಿಟ್ಟನು. ಗದಾಪಾಣಿಯಾಗಿ ನಿಂತಿದ್ದ ಭೀಮಸೇನನನ್ನು ನೋಡಿ ಗಜಸೈನಿಕರು ಪ್ರಯತ್ನಪೂರ್ವಕವಾಗಿ ಅವನನ್ನು ಎಲ್ಲ ದಿಕ್ಕುಗಳಿಂದಲೂ ಮುತ್ತಿದರು. ದೊಡ್ಡದಾದ ಮೇಘಸಮೂಹದ ಮಧ್ಯಭಾಗದಲ್ಲಿ ಸೂರ್ಯನು ಪ್ರಕಾಶಿಸುವಂತೆ–ಗಜಸೈನ್ಯದ ಮಧ್ಯಭಾಗ ದಲ್ಲಿದ್ದ ಭೀಮಸೇನನು ಪ್ರಕಾಶಿಸಿದನು. ದೊಡ್ಡದಾದ ಸರ್ವತ್ರವ್ಯಾಪ್ತವಾದ ಕಾರ್ಮುಗಿಲನ್ನು ಬಿರುಗಾಳಿಯು ಕ್ಷಣಮಾತ್ರದಲ್ಲಿ ಚದುರಿಸಿಬಿಡುವಂತೆ–

ಪಾಂಡವರ್ಷಭನು ತನ್ನ ಗದೆಯ ಸತತಪ್ರಹಾರದಿಂದ ಗಜಸೈನ್ಯವನ್ನು ಧೂಳೀಪಟಲಮಾಡಿಬಿಟ್ಟನು. ಬಲಿಷ್ಠನಾದ ಭೀಮಸೇನನಿಂದ ಪ್ರಹೃತವಾದ ಆನೆಗಳು ಮೋಡಗಳು ಸಿಡಿಲು-ಗುಡುಗುಗಳು ಮೂಲಕವಾಗಿ ಗರ್ಜಿಸುವಂತೆ–ಆರ್ತನಾದಗಳನ್ನು ಮಾಡಿದುವು.

ಭೀಮಸೇನನು ಗದೆಯಿಂದ ಪ್ರಹರಿಸುವಾಗ ಅನೇಕ ಆನೆಗಳು ರೊಚ್ಚಿಗೆದ್ದು ದಂತಗಳಿಂದ ಭೀಮಸೇನನನ್ನು ತಿವಿದು ಶರೀರಾದ್ಯಂತವಾಗಿ ಗಾಯಗೊಳಿಸುತ್ತಿದ್ದುವು. ಆನೆಗಳ ದಂತಗಳಿಂದ ಕ್ಷತನಾಗಿದ್ದ ಭೀಮಸೇನನು ವಿಕಸಿತವಾದ ಅಶೋಕವೃಕ್ಷದಂತೆಯೇ ಪ್ರಕಾಶಿಸಿದನು. ಆದರೆ ಹಾಗೆ ತಿವಿಯಲು ಬಂದ ಆನೆಯನ್ನು ಭೀಮನು ಸುಮ್ಮನೆ ಬಿಟ್ಟುಬಿಡುತ್ತಿರಲಿಲ್ಲ. ಅದರ ದಂತವನ್ನೇ ಹಿಡಿದು ಜಗ್ಗಾಡಿ ಎರಡು ದಂತಗಳನ್ನೂ ಭೀಮಕರ್ಮನಾದ ಭೀಮನು ಕಿತ್ತೇಬಿಡುತ್ತಿದ್ದನು. ಅನಂತರ ಅದೇ ದಂತದಿಂದ ಆ ಆನೆಗಳ ಕುಂಭಸ್ಥಳಕ್ಕೆ ಪ್ರಹರಿಸಿ ದಂಡಹಸ್ತನಾದ ಅಂತಕನಂತೆ ಅವುಗಳನ್ನು ಸಂಹರಿಸುತ್ತಿದ್ದನು. ರಕ್ತದಿಂದ ನೆನೆದುಹೋದ ಗದೆಯನ್ನು ಧರಿಸಿದ್ದ, ಆನೆಗಳ ಮೇದಸ್ಸು ಮತ್ತು ಮಜ್ಜೆಯು ಹಾರಿ ವಿಶೇಷವಾದ ಶರೀರಕಾಂತಿಯಿಂದ ಕೂಡಿದ್ದ ರಕ್ತದಿಂದಲೇ ಅಭ್ಯಂಜನಸ್ನಾನಮಾಡಿದ್ದ ಭೀಮಸೇನನು ಸಾಕ್ಷಾತ್ ರುದ್ರದೇವನಂತೆಯೇ ಕಂಡನು. ಈ ರೀತಿಯಲ್ಲಿ ಬಹುಪಾಲು ಆನೆಗಳು ಭೀಮಸೇನನಿಂದ ಹತವಾದುವು. ಅಳಿದುಳಿದ ಮಹಾಗಜಗಳು ನಮ್ಮ ಕಡೆಯ ಸೈನ್ಯವನ್ನೇ ತುಳಿದು ಧ್ವಂಸಮಾಡುತ್ತಾ ದಿಕ್ಕಾಪಾಲಾಗಿ ಓಡಿ ಹೋದವು. ಎಲ್ಲ ಕಡೆಗಳಿಂದಲೂ ಗಜಸೈನ್ಯಗಳು ಪಲಾಯನಮಾಡುತ್ತಿದ್ದುದರಿಂದ ಉಳಿದ ದುರ್ಯೋಧನನ ರಥಾಶ್ವ-ಪದಾತಿಸೈನ್ಯಗಳೂ ಯುದ್ಧದಿಂದ ಪುನಃ ಹಿಮ್ಮೆಟ್ಟಿದುವು.”

೧೦೨ಿಯ ಅಧ್ಯಾಯವು ಮುಗಿಯಿತು

೧೦೩ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಎರಡೂ ಪಕ್ಷಗಳ ಸೈನ್ಯಗಳ ಭಯಂಕರಯುದ್ಧ: ರಕ್ತಮಯವಾದ ನದಿಯ ವರ್ಣನೆ

ಸಂಜಯನು ಯುದ್ಧದ ವರ್ಣನೆಯನ್ನು ಮುಂದುವರಿಸುತ್ತಾನೆ :

"ಮಹಾರಾಜ! ಮಧ್ಯಾಹ್ನದ ವೇಳೆಗೆ ಭೀಷ್ಮನಿಗೂ ಮತ್ತು ಸೋಮಕರಿಗೂ ಲೋಕಕ್ಷಯಕರವಾದ ಯುದ್ಧವು ನಡೆಯಲು ಪ್ರಾರಂಭವಾಯಿತು. ರಥಿಗಳಲ್ಲಿ ಶ್ರೇಷ್ಠನಾದ ಗಾಂಗೇಯನು ನೂರಾರು-ಸಾವಿರಾರು ಬಾಣಗಳಿಂದ ಪಾಂಡವಸೈನ್ಯವನ್ನು ಧ್ವಂಸಮಾಡಲು ತೊಡಗಿದನು. ಕಟಾವಾದ ಧಾನ್ಯವನ್ನು ಬೇರ್ಪಡಿಸಲು ಕಣಗಳಲ್ಲಿ ಹುಲ್ಲನ್ನು ಎತ್ತುಗಳು ತುಳಿದು ಸಮ್ಮರ್ದಿಸುವಂತೆ–ನಿನ್ನ ತಂದೆಯಾದ ದೇವವ್ರತನು ಪಾಂಡವಸೈನ್ಯವನ್ನು ಮರ್ದನ ಮಾಡಿದನು. ಧೃಷ್ಟದ್ಯುಮ್ನ, ಶಿಖಂಡಿ, ವಿರಾಟ, ದ್ರುಪದ–ಇವರೆಲ್ಲರೂ ಮಹಾರಥನಾದ ಭೀಷ್ಮನನ್ನು ಎದುರಿಸಿ ಬಾಣಗಳಿಂದ ಪ್ರಹರಿಸಿದರು. ಒಡನೆಯೇ ಭೀಷ್ಮನು ಧೃಷ್ಟದ್ಯುಮ್ನನನ್ನು ಪ್ರಹರಿಸಿ, ವಿರಾಟನನ್ನು ಮೂರು ಬಾಣಗಳಿಂದ ಪ್ರಹರಿಸಿದನು. ದ್ರುಪದನನ್ನು ನಾರಾಚದಿಂದ ಗಾಯಗೊಳಿಸಿದನು. ಶತ್ರುಸೂದನನಾದ ಭೀಷ್ಮನಿಂದ ಪ್ರಹೃತರಾದ, ಮಹಾಧನುಷ್ಮಂತ ರಾದ ಧೃಷ್ಟದ್ಯುಮ್ನ-ವಿರಾಟ-ದ್ರುಪದರು ಕಾಲಿನಿಂದ ತುಳಿದ ಸರ್ಪಗಳೋಪಾದಿಯಲ್ಲಿ ಪರಮಕ್ರುದ್ಧರಾದರು. ಶಿಖಂಡಿಯೂ ಸಹ ಭರತವಂಶದ ಪಿತಾಮಹನನ್ನು ಬಾಣಗಳಿಂದ ಪ್ರಹರಿಸಿದನು. ಸತ್ಯಪ್ರತಿಜ್ಞೆಯಿಂದ ಯಾವುದೇ ಕಾರಣದಿಂದಲೂ ಚ್ಯುತನಾಗದ (ಅಚ್ಯುತನಾದ) ಭೀಷ್ಮನು ಶಿಖಂಡಿಯು ಪೂರ್ವಸ್ತ್ರೀ ಎಂಬುದನ್ನು ಸ್ಮರಿಸಿದವನಾಗಿ ಅವನನ್ನು ಬಾಣಗಳಿಂದ ಪ್ರಹರಿಸಲಿಲ್ಲ. ಧೃಷ್ಟದ್ಯುಮ್ನನು ಕ್ರುದ್ಧನಾಗಿ ಯಜ್ಞೇಶ್ವರನಂತೆಯೇ ಪ್ರಜ್ವಲಿಸುತ್ತಾ, ಪಿತಾಮಹನನ್ನು ಮೂರು ಬಾಣಗಳಿಂದ ಅವನ ವಕ್ಷಃಸ್ಥಲದಲ್ಲಿಯೂ ಮತ್ತು ಅವನೆರಡು ತೋಳುಗಳಲ್ಲಿಯೂ ಪ್ರಹರಿಸಿದನು. ಅನಂತರ ದ್ರುಪದನು ಇಪ್ಪತ್ತೈದು ಬಾಣಗಳಿಂದಲೂ, ವಿರಾಟನು ಹತ್ತು ಬಾಣಗಳಿಂದಲೂ, ಶಿಖಂಡಿಯು ಇಪ್ಪತ್ತೈದು ಬಾಣಗಳಿಂದಲೂ ಭೀಷ್ಮನನ್ನು ಪ್ರಹರಿಸಿದರು. ಆ ಬಾಣಗಳ ಪ್ರಹಾರಗಳಿಂದ ಅತ್ಯಂತ ಗಾಯಗೊಂಡ ಭೀಷ್ಮನು ಗಾಯಗಳಿಂದ ಹೊರಟ ರಕ್ತಪ್ರವಾಹದಿಂದ ತೋಯ್ದವನಾಗಿ ವಸಂತಕಾಲದಲ್ಲಿನ ಪುಷ್ಪಭರಿತವಾದ ರಕ್ತಾಶೋಕವೃಕ್ಷದಂತೆ–ಪ್ರಕಾಶಿಸಿದನು. ಆ ಮೂವರು ವೀರರನ್ನೂ (ಧೃಷ್ಟದ್ಯುಮ್ನ-ವಿರಾಟ-ದ್ರುಪದರನ್ನು ) ನೇರವಾಗಿ ಹೋಗುವ ಮೂರು-ಮೂರು ಬಾಣಗಳಿಂದ ಪ್ರಹರಿಸಿದನು. ಅನಂತರ ಮತ್ತೊಂದು ಭಲ್ಲದಿಂದ ದ್ರುಪದನ ಧನುಸ್ಸನ್ನು ಕತ್ತರಿಸಿದನು. ದ್ರುಪದನು ಮರುಕ್ಷಣದಲ್ಲಿಯೇ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಸಜ್ಜುಗೊಳಿಸಿ

ಭೀಷ್ಮನನ್ನು ಐದು ಬಾಣಗಳಿಂದ ಪ್ರಹರಿಸಿ ಅವನ ಸಾರಥಿಯನ್ನು ಮೂರು ಬಾಣಗಳಿಂದ ಪ್ರಹರಿಸಿದನು.

ಆ ವೇಳೆಗೆ ದ್ರುಪದನನ್ನೂ ಮತ್ತು ಧೃಷ್ಟದ್ಯುಮ್ನಪುರಃಸರರಾದ ಸೈನಿಕರನ್ನೂ ರಕ್ಷಿಸುವ ಸಲುವಾಗಿ ಭೀಮ, ಪ್ರತಿವಿಂಧ್ಯನೇ ಮೊದಲಾದ ದ್ರೌಪದಿಯ ಐವರು ಮಕ್ಕಳು, ಐವರು ಕೇಕಯಸಹೋದರರು, ಸಾತ್ವತವಂಶೀಯನಾದ ಸಾತ್ಯಕಿ–ಇವರೆಲ್ಲರೂ ಯುಧಿಷ್ಠಿರಪುರಃಸರರಾಗಿ ಭೀಷ್ಮನ ಮೇಲೆ ದಾಳಿಮಾಡಿದರು. ಅದೇ ರೀತಿಯಲ್ಲಿ ನಿನ್ನ ಕಡೆಯ ಯೋಧರೂ ಸಹ ಭೀಷ್ಮನ ರಕ್ಷಣಾರ್ಥವಾಗಿ ತಮ್ಮ-ತಮ್ಮ ಸೈನ್ಯಗಳೊಡನೆ ಪಾಂಡವರನ್ನು ಆಕ್ರಮಿಸಿದರು. ಆ ಸಮಯದಲ್ಲಿ ನಿನ್ನ ಕಡೆಯ ಮತ್ತು ಅವರ ಕಡೆಯ ನರಾಶ್ವ-ರಥ-ಗಜಸೈನ್ಯಗಳ ನಡುವೆ ಯಮರಾಷ್ಟ್ರವಿವರ್ಧಕವಾದ ಅತ್ಯಂತ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ರಥಿಕನು ರಥಿಕನನ್ನೆದುರಿಸಿ ಯುದ್ಧಮಾಡಿ ಪ್ರತಿಸ್ಪರ್ಧಿಯನ್ನು ಯಮಾಲಯಕ್ಕೆ ಕಳುಹಿಸುತ್ತಿದ್ದನು. ಅದೇ ರೀತಿಯಲ್ಲಿ ಪದಾತಿಗಳು-ಪದಾತಿಗಳೊಡನೆಯೂ, ಗಜಸೈನಿಕರು-ಗಜಸೈನಿಕರೊಡನೆಯೂ, ಕುದುರೆಸವಾರರು-ಕುದುರೆಸವಾರರೊಡನೆಯೂ ಯುದ್ಧವನ್ನು ಉಪಕ್ರಮಿಸಿ ಬಗ್ಗಿದ ಗಿಣ್ಣುಗಳಿಂದ ಕೂಡಿದ ಬಾಣಗಳಿಂದಲೂ, ನಾನಾವಿಧವಾದ ಮತ್ತು ಘೋರವಾದ ಬಾಣಗಳಿಂದಲೂ ತಮ್ಮ ಪ್ರತಿಸ್ಪರ್ಧಿಗಳನ್ನು ಸಂಹರಿಸಿ ಪರಲೋಕಕ್ಕೆ ಕಳುಹಿಸುತ್ತಿದ್ದರು. ರಥಗಳು ರಥಿಗಳಿಂದಲೂ, ಸಾರಥಿಗಳಿಂದಲೂ ವಿಹೀನವಾದುವು. ಕಡಿವಾಣಗಳಿಲ್ಲದ ಕುದುರೆಗಳು ಶೂನ್ಯರಥವನ್ನು ಎಳೆದುಕೊಂಡು ಮನಬಂದಂತೆ ದಿಕ್ಕುದಿಕ್ಕಿಗೂ ಓಡಿಹೋಗುತ್ತಿದ್ದುವು. ಹಾಗೆ ಓಡಿಹೋಗುತ್ತಿದ್ದಾಗ ಅವುಗಳು ಎಳೆದುಕೊಂಡು ಹೋಗುತ್ತಿದ್ದ ರಥಗಳು ಹಾದಿಯಲ್ಲಿ ಸಿಕ್ಕಿದ ಅನೇಕ ಪದಾತಿಗಳನ್ನೂ ಮತ್ತು ಕುದುರೆಗಳನ್ನೂ ತುಳಿದು ಮರ್ದನ ಮಾಡುತ್ತಿದ್ದುವು. ವಾಯುವೇಗ-ಮನೋವೇಗಗಳಿಂದ ಓಡುತ್ತಿದ್ದ ಆ ರಥಗಳು ಆಕಾಶದಲ್ಲಿರುವ ಗಂಧರ್ವನಗರಗಳಂತೆಯೇ ಕಾಣುತ್ತಿದ್ದುವು.

ಮಹಾರಾಜ! ರಥಿಕರಾಗಲೀ-ಸಾರಥಿಗಳಾಗಲೀ ಇಲ್ಲದ ಅಶ್ವಯುಕ್ತವಾದ ರಥಗಳ ಬಗೆಗೆ ಹೇಳಿದೆನಲ್ಲವೇ! ಈಗ ರಥಗಳಿಂದ ವಿಹೀನರಾದ ರಥಿಗಳು ಆ ರಣರಂಗದಲ್ಲಿ ಹೇಗೆ ವರ್ತಿಸುತ್ತಿದ್ದರೆಂಬುದನ್ನು ಹೇಳುವೆನು ;

ಕೇಳು. ರಥಗಳಿಂದ ವಿಹೀನರಾದ ರಥಿಗಳು ಕವಚಗಳನ್ನು ಧರಿಸಿದ್ದರು. ತೇಜಸ್ವಿಗಳಾಗಿದ್ದರು. ಕರ್ಣಕುಂಡಲಗಳನ್ನೂ, ಶಿರಸ್ತ್ರಾಣಗಳನ್ನೂ ಧರಿಸಿದ್ದರು. ಸುವರ್ಣಮಯವಾದ ಅಂಗದ-ಕೇಯೂರಗಳಿಂದ ಅಲಂಕೃತರಾಗಿದ್ದರು. ಆ ಎಲ್ಲ ರಥಿಕರೂ ಪರಾಕ್ರಮದಲ್ಲಿ ದೇವಪುತ್ರರಿಗೆ ಸಮಾನರಾಗಿದ್ದರು. ಯುದ್ಧದಲ್ಲಿ ಇಂದ್ರನಿಗೆ ಸದೃಶರಾಗಿದ್ದರು. ಐಶ್ವರ್ಯದಿಂದ ಕುಬೇರನನ್ನೂ ನೀತಿಯಿಂದ ಬೃಹಸ್ಪತಿಯನ್ನೂ ಅವರು ಮೀರಿಸಿದ್ದರು. ಅಂತಹ ಸರ್ವಲೋಕೇಶ್ವರರಾದ ಮತ್ತು ಶೂರರಾದ ರಥಿಕರು ಹಳ್ಳಿಯ ಗಾಂಪರಂತೆ ಅತ್ತಲಿತ್ತ ಓಡಿಹೋಗುತ್ತಿದ್ದುದು ಕಂಡುಬಂದಿತು. ಯಾವ ಶಬ್ದವನ್ನೇ ಆದರೂ ಆ ಶಬ್ದವು ಇಂತಹುದಕ್ಕೇ ಸಂಬಂಧಿಸಿದುದೆಂದು ತಿಳಿದುಕೊಳ್ಳಲು ಸಮರ್ಥವಾದ ಮದಗಜಗಳು ನರಶ್ರೇಷ್ಠರಾದ ಮಾವಟಿಗರಿಂದ ಅಥವಾ ಯೋಧರಿಂದ ಹೀನವಾದುವುಗಳಾಗಿ ತಮ್ಮ ಕಡೆಯ ಸೈನ್ಯಗಳನ್ನೇ ಕಾಲುಗಳಿಂದ ತುಳಿದು ಮರ್ದನಮಾಡುತ್ತಾ ಓಡಿಹೋಗುತ್ತಿದ್ದುವು. ರಣಾಂಗಣದ ಸುತ್ತಲೂ ಮುರಿದುಬಿದ್ದಿರುವ ಗುರಾಣಿಗಳಿಂದಲೂ, ಚಿತ್ರಿತ ವಾದ ಚಾಮರಗಳಿಂದಲೂ, ಪತಾಕೆಗಳಿಂದಲೂ, ಶ್ವೇತಚ್ಛತ್ರಗಳಿಂದಲೂ, ಸುವರ್ಣದಂಡಭೂಷಿತವಾದ ಚಾಮರಗಳಿಂದಲೂ ವ್ಯಾಪ್ತವಾಗಿದ್ದ ಭಯಂಕರರಣರಂಗದಲ್ಲಿ ನೂತನ ಮೇಘದೋಪಾದಿಯಲ್ಲಿದ್ದ ಆನೆಗಳು ಮೇಘಗಳ ಗುಡುಗಿನ ಶಬ್ದಕ್ಕೆ ಸಮಾನವಾಗಿ ಶಬ್ದಮಾಡುತ್ತಾ ಹತ್ತು ದಿಕ್ಕು ಗಳಿಗೂ ಓಡುತ್ತಿದ್ದುದು ಅಲ್ಲಿ ಕಂಡುಬಂದಿತು. ಅದೇ ರೀತಿಯಲ್ಲಿ ಆನೆಗಳನ್ನು ಕಳೆದುಕೊಂಡ ಉಭಯಪಕ್ಷಗಳ ಗಜಸೈನಿಕರೂ ದಿಕ್ಕುಗಾಣದೇ ಓಡುತ್ತಿದ್ದುದು ಕಂಡುಬಂದಿತು. ನಾನಾದೇಶಗಳಲ್ಲಿ ಹುಟ್ಟಿದ್ದ ಸುವರ್ಣಭೂಷಿತವಾಗಿದ್ದ, ವಾಯುವಿಗೆ ಸಮಾನವಾದ ವೇಗದಿಂದ ಕೂಡಿದ್ದ, ನೂರಾರು-ಸಾವಿರಾರು ಕುದುರೆಗಳು ಓಡಿಹೋಗುತ್ತಿದ್ದುದನ್ನು ಆ ರಣರಂಗದಲ್ಲಿ ನಾವು ಕಂಡೆವು.

ಕುದುರೆಗಳನ್ನು ಕಳೆದುಕೊಂಡಿದ್ದ ಕೆಲವರು ಅಶ್ವಾರೋಹಿಗಳು ಕತ್ತಿ ಯನ್ನು ಹಿಡಿದು ಓಡಿಹೋಗುತ್ತಿದ್ದುದನ್ನೂ ಮತ್ತೆ ಕೆಲವರು ಶತ್ರುಗಳ ಮೇಲೆ ಬಿದ್ದು ಕತ್ತಿಯಿಂದಲೇ ಯುದ್ಧಮಾಡುತ್ತಾ ಅವರನ್ನು ಓಡಿಸುತ್ತಿದ್ದು ದನ್ನೂ ನಾವು ನೋಡಿದೆವು. ಮದಗಜವೊಂದು ಓಡಿಹೋಗುತ್ತಿದ್ದ

ಮತ್ತೊಂದು ಆನೆಯೊಡನೆ ಸೇರಿಕೊಂಡು ಪದಾತಿಗಳನ್ನೂ ಮತ್ತು ಕುದುರೆಗಳನ್ನೂ ಧ್ವಂಸಮಾಡಿ ಓಡಿಹೋಗುತ್ತಿದ್ದುದನ್ನು ನಾವು ಕಂಡೆವು. ಅದೇ ರೀತಿಯಲ್ಲಿ ಮಾವಟಿಗನಿಲ್ಲದ ಮದಗಜವು ಅನೇಕ ರಥಗಳನ್ನು ಧ್ವಂಸ ಮಾಡುತ್ತಿದ್ದಿತು. ರಥಿಕರಿಂದಲೂ, ಸಾರಥಿಗಳಿಂದಲೂ ವಿಹೀನವಾದ ರಥಗಳು ಕೆಳಗೆ ಬಿದ್ದಿದ್ದ ಕುದುರೆಗಳನ್ನು ಸಮ್ಮರ್ದಿಸುತ್ತಿದ್ದುವು. ಅದೇ ರೀತಿಯಲ್ಲಿ ಸವಾರರಿಲ್ಲದ ಕುದುರೆಗಳೂ ಸಹ ಪದಾತಿಗಳನ್ನು ತುಳಿದು ಧ್ವಂಸಮಾಡುತ್ತಿದ್ದುವು. ಈ ರೀತಿಯಲ್ಲಿ ಯುದ್ಧದಲ್ಲಿ ಭಾಗವಹಿಸಿದ್ದ ರಥಾಶ್ವ-ಗಜ-ಪದಾತಿಸೈನ್ಯಗಳು ಅನೇಕಪ್ರಕಾರವಾಗಿ, ಪರಸ್ಪರವಾಗಿ ಸಮ್ಮರ್ದಿಸುತ್ತಿದ್ದುವು. ಇಂತಹ ಮಹಾಭಯಂಕರವಾದ ಘೋರವಾದ ಯುದ್ಧವು ನಡೆಯುತ್ತಿರಲಾಗಿ ರಕ್ತ ಮತ್ತು ಕರುಳುಗಳೇ ತರಂಗವಾಗಿ ಉಳ್ಳ ಮಹಾಘೋರವಾದ ನದಿಯೊಂದು ಹುಟ್ಟಿತು. ಮೂಳೆಗಳ ರಾಶಿಗಳು ರಕ್ತನದಿಯ ಪ್ರವಾಹಕ್ಕೆ ತಡೆಯನ್ನುಂಟುಮಾಡುವ ಬಂಡೆಗಳಂತಿದ್ದುವು. ರಕ್ತನದಿಯಲ್ಲಿ ಕಾಣುತ್ತಿದ್ದ ತಲೆಗೂದಲುಗಳು ಪಾಚಿಹುಲ್ಲಿನಂತಿದ್ದುವು. ಅಲ್ಲಲ್ಲಿ ರಾಶಿ-ರಾಶಿಯಾಗಿ ಬಿದ್ದಿರುತ್ತಿದ್ದ ರಥಗಳೇ ರಕ್ತನದಿಯ ಮಡುವುಗಳಂತಿದ್ದುವು. ಬಾಣಗಳೇ ಆ ನದಿಯ ಸುಳಿಗಳಾಗಿದ್ದುವು. ಕುದುರೆಗಳು ಅದರ ಮೀನುಗಳಾಗಿದ್ದುವು. ಆ ರಕ್ತನದಿಯು ದುರಾಸದವಾಗಿದ್ದಿತು. ಕಲ್ಲುಗಳ ರೂಪವಾದ ತಲೆಬುರುಡೆಗಳಿಂದ ಆ ನದಿಯು ತುಂಬಿಹೋಗಿ ದ್ದಿತು. ಆನೆಗಳೇ ಆ ಮಹಾರಕ್ತನದಿಯ ಮೊಸಳೆಗಳಾಗಿದ್ದುವು. ಕವಚ ಮತ್ತು ಶಿರಸ್ತ್ರಾಣಗಳೇ ರಕ್ತನದಿಯ ನೊರೆಗಳಂತಿದ್ದುವು. ಧನುಸ್ಸುಗಳು ಆ ನದಿಯಲ್ಲಿನ ಪ್ರವಾಹಗಳಂತೆಯೂ, ಕತ್ತಿಗಳು ಆಮೆಗಳಂತೆಯೂ ಇದ್ದುವು. ಪತಾಕೆ ಮತ್ತು ಧ್ವಜಗಳೇ ರಕ್ತನದಿಯ ತೀರವೃಕ್ಷಗಳ ರೂಪದಲ್ಲಿದ್ದುವು. ಆ ನದಿಯು ಸತ್ತಪ್ರಾಣಿಗಳೆಂಬ ತೀರಗಳನ್ನು ಕೊಚ್ಚಿಕೊಂಡು ಹೋಗುತ್ತಿತ್ತು. ಮಾಂಸಾಹಾರಿಗಳಾದ ಪ್ರಾಣಿಗಳೇ ಆ ರಕ್ತನದಿಯ ಹಂಸಗಳಂತಿದ್ದುವು. ಆ ರಕ್ತನದಿಯು ಯಮರಾಷ್ಟ್ರವರ್ಧಿನಿಯಾಗಿದ್ದಿತು. ಅಂತಹ ಭಯಂಕರವಾದ ರಕ್ತನದಿಯನ್ನು ಶೂರರಾದ ಕ್ಷತ್ರಿಯರು ರಥ, ಆನೆ ಮತ್ತು ಕುದುರೆಗಳನ್ನೇ ದೋಣಿಯನ್ನಾಗಿ ಮಾಡಿಕೊಂಡು ಭಯವನ್ನು ಪೂರ್ಣವಾಗಿ ತ್ಯಜಿಸಿ ದಾಟುತ್ತಿದ್ದರು. ವೈತರಣೀನದಿಯು ಪ್ರೇತಗಳನ್ನು ಪ್ರೇತರಾಜನ ಪಟ್ಟಣಕ್ಕೆ ತಲುಪಿಸುವಂತೆ–ಭೀರುಗಳನ್ನೂ, ಮನಸ್ಸಿನಲ್ಲಿ ಕಳವಳಗೊಂಡವ

ರನ್ನೂ ಆ ರಕ್ತನದಿಯು ರಣಭೂಮಿಯಿಂದ ಬಹಳ ದೂರಕ್ಕೆ ಒಯ್ದುಬಿಡುತ್ತಿದ್ದಿತು. ಅತ್ಯಂತ ಭಯಂಕರವಾದ ಸಂಹಾರಕ್ರಿಯೆಯನ್ನು ಕಂಡು ಅಳಿದುಳಿದ ಕ್ಷತ್ರಿಯರೆಲ್ಲರೂ ಕೂಗಿಕೊಳ್ಳುತ್ತಿದ್ದರು. "ಅಯ್ಯೋ! ದುರ್ಯೋಧನನೊಬ್ಬನು ಮಾಡಿದ ಅಪರಾಧದಿಂದ ಪ್ರಪಂಚದ ಕ್ಷತ್ರಿಯರೆಲ್ಲರೂ ಕ್ಷಯಿಸುತ್ತಿರುವರಲ್ಲವೇ! ಬಹಳ ಗುಣವಂತರಾದ ಪಾಂಡುಪುತ್ರರಲ್ಲಿ ಜನೇಶ್ವರನಾದ ಧೃತರಾಷ್ಟ್ರನು ದ್ವೇಷವನ್ನು ಏಕೆ ಕಟ್ಟಿಕೊಂಡನು? ನಿಜ! ಅವನು ಪಾಪಾತ್ಮನೂ, ಲೋಭಮೋಹಿತನೂ ಆಗಿರುವುದರಿಂದಲೇ ಅವರಲ್ಲಿ ದ್ವೇಷ ಕಟ್ಟಿಕೊಂಡನು."–ಹೀಗೆ ಪರಸ್ಪರವಾಗಿ ಆಡಿಕೊಳ್ಳುತ್ತಿದ್ದ ಪಾಂಡವರ ಪ್ರಶಂಸಾಯುಕ್ತವಾದ, ನಿನ್ನ ಮಕ್ಕಳ ನಿಂದಾಯುಕ್ತವಾದ ಮತ್ತು ಕೇಳಲು ಸುದಾರುಣವಾದ ಮಾತುಗಳು ರಣರಂಗದಲ್ಲಿ ಕೇಳಿಬರುತ್ತಿದ್ದುವು.

ಎಲ್ಲ ಯೋಧರ ಮುಖಗಳಿಂದಲೂ ಹೊರಟ ಆ ಮಾತುಗಳನ್ನು ಕೇಳಿ ಸರ್ವರಿಗೂ ಅಪರಾಧಿಯಾದ ದುರ್ಯೋಧನನು ಭೀಷ್ಮನನ್ನೂ, ದ್ರೋಣರನ್ನೂ, ಕೃಪರನ್ನೂ, ಶಲ್ಯನನ್ನೂ ಕುರಿತು ಹೇಳಿದನು : "ವೀರರೇ! ಅಹಂಕಾರವನ್ನು (ದೇಹಾಭಿಮಾನವನ್ನು ) ತೊರೆದು ಯುದ್ಧಮಾಡಿರಿ. ವೃಥಾ ವಿಳಂಬವನ್ನೇಕೆ ಮಾಡುತ್ತಿರುವಿರಿ?"

ಮಹಾರಾಜ! ದುರ್ಯೋಧನನು ಹೀಗೆಂದು ಹೇಳಲಾಗಿ ಅಕ್ಷದ್ಯೂತದ ಕಾರಣದಿಂದ ಉಂಟಾದ ಬಹುಘೋರವಾದ, ಬಹುಜನ ಸಂಹಾರಕವಾದ ಕೌರವ-ಪಾಂಡವರ ಯುದ್ಧವು ಮತ್ತೆ ಪ್ರಾರಂಭವಾಯಿತು. ಅನೇಕ ಮಹಾತ್ಮರಿಂದ ನಿರೋಧಿಸಲ್ಪಟ್ಟರೂ ನೀನಾಗ ಅವರ ಮಾತನ್ನು ಕೇಳಲಿಲ್ಲ ಮತ್ತು ನಿನ್ನ ಮಗನನ್ನು ದುರ್ವ್ಯಾಪಾರದಿಂದ ಹಿಂದಿರುಗಿಸಲಿಲ್ಲ. ಅದಕ್ಕೆ ಸುದಾರುಣವಾದ ಫಲವನ್ನು ಈಗ ನೀನೇ ಕಾಣುತ್ತಿರುವೆ. ಈ ಯುದ್ಧವು ಎಷ್ಟು ಭಯಂಕರವಾಗಿರುವುದೆಂದರೆ : ಪಾಂಡುವಿನ ಮಕ್ಕಳಾಗಲೀ, ಅವರ ಸೈನಿಕರಾಗಲೀ, ಅವರ ಅನುಯಾಯಿಗಳಾದ ರಾಜರೇ ಆಗಲಿ–ತಮ್ಮ ಪ್ರಾಣಗಳ ರಕ್ಷಣೆಯ ಮೇಲೆ ಲಕ್ಷ್ಯವೇ ಇಲ್ಲದೇ ಯುದ್ಧಮಾಡುತ್ತಿದ್ದಾರೆ. ಅದೇ ರೀತಿಯಲ್ಲಿ ಕೌರವರೂ ಸಹ ತಮ್ಮ ಪ್ರಾಣಗಳನ್ನೇ ಒತ್ತೆಯಾಗಿಟ್ಟು ಯುದ್ಧಮಾಡುತ್ತಿದ್ದಾರೆ. ಈ ಕಾರಣದಿಂದಲೇ ಅತಿಘೋರವಾದ ಸ್ವಜನಕ್ಷಯವಾಗುತ್ತಿದೆ. ಮಹಾರಾಜ! ಹೀಗೆ ನಡೆಯುತ್ತಿರುವ ಜನಸಂಹಾರವು ದೈವದ ಪ್ರೇರಣೆಯಿಂದಲಾದರೂ

ಆಗಿರಬಹುದು ಅಥವಾ ನೀನು ಮಾಡಿದ ಅನ್ಯಾಯದ ಕಾರಣದಿಂದ ಲಾದರೂ ಆಗಿರಬಹುದು."

೧೦೩ನೆಯ ಅಧ್ಯಾಯವು ಮುಗಿಯಿತು.

೧೦೪ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಅರ್ಜುನನು ತ್ರಿಗರ್ತರಾಜರನ್ನು ಪರಾಜಯಗೊಳಿಸಿದುದು : ಕೌರವಸೈನಿಕರಿಗೂ-ಪಾಂಡವಸೈನಿಕರಿಗೂ ಘೋರವಾದ ಯುದ್ಧ: ಅಭಿಮನ್ಯುವಿನಿಂದ ಚಿತ್ರಸೇನನ ಪರಾಜಯ : ದ್ರೋಣರಿಂದ ದ್ರುಪದನ ಪರಾಜಯ : ಭೀಮಸೇನನಿಂದ ಬಾಹ್ಲೀಕನ ಪರಾಜಯ : ಸಾತ್ಯಕಿ ಮತ್ತು ಭೀಷ್ಮರ ಘೋರಯುದ್ಧ

ಪಾರ್ಥ-ತ್ರೈಗರ್ತರ ಯುದ್ಧದ ವರ್ಣನೆಯನ್ನು ಮುಂದುವರಿಸಿ ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ನರವ್ಯಾಘ್ರನಾದ ಅರ್ಜುನನು ತ್ರಿಗರ್ತಾಧಿಪತಿಯಾದ ಸುಶರ್ಮನ ಅನುಯಾಯಿಗಳನ್ನು ನಿಶಿತವಾದ ಬಾಣಗಳಿಂದ ಪ್ರೇತರಾಜನ ಪಟ್ಟಣಕ್ಕೆ ಕಳುಹಿಸಿಕೊಟ್ಟನು. ಅನಂತರ ಕ್ರುದ್ಧನಾದ ಸುಶರ್ಮನು ಅರ್ಜುನ ನನ್ನು ಒಂಬತ್ತು ಬಾಣಗಳಿಂದಲೂ, ಅರ್ಜುನನ ಸಾರಥಿಯಾದ ವಾಸುದೇವ ನನ್ನು ಎಪ್ಪತ್ತು ಬಾಣಗಳಿಂದಲೂ ಪ್ರಹರಿಸಿದನು. ಆ ಎಲ್ಲ ಬಾಣಗಳನ್ನೂ ಇಂದ್ರನ ಮಗನಾದ ಮಹಾರಥನಾದ ಅರ್ಜುನನು ನಿವಾರಣೆಮಾಡಿಕೊಂಡು ಸುಶರ್ಮನ ಪರವಾಗಿ ಯುದ್ಧಮಾಡುತ್ತಿದ್ದ ಯೋಧರೆಲ್ಲರನ್ನೂ ಯಮನ ಲೋಕಕ್ಕೆ ಕಳುಹಿಸಿಬಿಟ್ಟನು. ಪ್ರಳಯಕಾಲದಲ್ಲಿ ಕಾಲಪುರುಷನಿಂದ ವಧಿಸ ಲ್ಪಡುವಂತೆ–ವಧ್ಯರಾಗುತ್ತಿದ್ದ ಸುಶರ್ಮನ ಕಡೆಯ ಅಳಿದುಳಿದ ಮಹಾ ರಥರು ಭಯಗೊಂಡು ಪಲಾಯನಮಾಡಿದರು. ಹಾಗೆ ಓಡುತ್ತಿದ್ದವರಲ್ಲಿ ಕೆಲವರು ಕುದುರೆಗಳನ್ನೇ ಬಿಟ್ಟು ಓಡುತ್ತಿದ್ದರು. ಮತ್ತೆ ಕೆಲವರು ರಥಗಳನ್ನೇ ಬಿಟ್ಟು (ರಥದ ಹಿಂಬದಿಯಿಂದ ಧುಮುಕಿ) ಓಡುತ್ತಿದ್ದರು. ಮತ್ತೆ ಕೆಲವರು ಆನೆಗಳಿಂದ ಇಳಿದು ಅರ್ಜುನನ ಶರಪ್ರಹಾರವನ್ನು ತಪ್ಪಿಸಿಕೊಳ್ಳುವ ಸಲು ವಾಗಿ ಓಡಿಹೋಗುತ್ತಿದ್ದರು. ಮತ್ತೆ ಕೆಲವರು–ಗಾಬರಿಗೊಂಡು ಯೋಧರು

ಬಿಟ್ಟುಹೋಗಿದ್ದ ಅಶ್ವ-ಗಜ-ರಥಗಳನ್ನೇರಿ ಬಹಳ ಅವಸರದಿಂದ ಪಲಾಯನ ಮಾಡುತ್ತಿದ್ದರು. ಪದಾತಿಗಳೂ ಸಹ ತಮ್ಮಲ್ಲಿದ್ದ ಕತ್ತಿ-ಗುರಾಣಿ ಇವೇ ಮೊದಲಾದ ಆಯುಧಗಳನ್ನು ಬಿಸುಟು ಪ್ರಾಣವುಳಿಸಿಕೊಳ್ಳುವುದರ ಹೊರತಾಗಿ ಮತ್ತಾವ ಅಪೇಕ್ಷೆಯನ್ನೂ ಇಟ್ಟುಕೊಳ್ಳದೇ ಯಾವ-ಯಾವ ಜಾಗಗಳಲ್ಲಿ ಓಡಿಹೋಗಲು ಅವಕಾಶವು ಸಿಕ್ಕುತ್ತಿದ್ದಿತೋ ಆಯಾ ಹಾದಿಗಳ ಮೂಲಕವಾಗಿ ಓಡಿಹೋಗುತ್ತಿದ್ದರು.

"ವೀರಕ್ಷತ್ರಿಯರಾಗಿರುವ ನೀವು ಓಡಿಹೋಗುವುದು ಯುಕ್ತವಲ್ಲ. ಓಡಿಹೋಗಬೇಡಿರಿ. ಶತ್ರುವಿಗೆ ಬೆನ್ನುತೋರಿಸಬೇಡಿರಿ"–ಇವೇ ಮುಂತಾದ ಕ್ಷತ್ರಿಯಸಹಜವೀರ್ಯೋಕ್ತಿಗಳಿಂದ ತ್ರಿಗರ್ತರಾಜನಾದ ಸುಶರ್ಮನಿಂದಲೂ ಮತ್ತು ಅವನ ಕಡೆಯ ಇತರ ಶ್ರೇಷ್ಠರಾಜರಿಂದಲೂ ನಿರೋಧಿಸಲ್ಪಟ್ಟರೂ ಬಹಳ ಭಯಗೊಂಡಿದ್ದ ಸೈನಿಕರು ಹಿಂದಿರುಗಿಯೂ ನೋಡದೆಯೇ ಪಲಾಯನಮಾಡುತ್ತಿದ್ದರು.

ತ್ರಿಗರ್ತಾಧಿಪತಿಯ ಸೈನ್ಯವು ಪಲಾಯನಮಾಡಿದುದನ್ನು ಕಂಡು ನಿನ್ನ ಮಗನಾದ ದುರ್ಯೋಧನನು ಭೀಷ್ಮನನ್ನು ಮುಂದೆಮಾಡಿಕೊಂಡು ಎಲ್ಲ ಸೈನ್ಯಗಳಿಂದಲೂ ಕೂಡಿಕೊಂಡವನಾಗಿ ಧನಂಜಯನನ್ನು ಪರಾಭವ ಗೊಳಿಸುವ ಸಲುವಾಗಿ ಅವನ ಮೇಲೆ ಆಕ್ರಮಣನಡೆಸಿದನು. ಮಹಾರಾಜ! ಆ ಸಮಯದಲ್ಲಿ ಒಬ್ಬನೇ ಒಬ್ಬ ಸುಶರ್ಮನು ತನ್ನ ಸಹೋದರರಿಂದೊಡ ಗೂಡಿ ಶತ್ರುವಿನ ಮೇಲೆ ನಾನಾವಿಧವಾದ ಬಾಣಗಳನ್ನು ಸುರಿಸುತ್ತಿದ್ದನು. ಉಳಿದ ಅವನ ಕಡೆಯ ಯೋಧರೆಲ್ಲರೂ ಪಲಾಯನಮಾಡಿದ್ದರು. ದುರ್ಯೋಧನನು ತ್ರಿಗರ್ತನನ್ನು ರಕ್ಷಿಸಲು ಭೀಷ್ಮಪುರಃಸರನಾಗಿ ಹೋದಂತೆಯೇ ಪಾಂಡವರೂ ಸಹ ಮಹಾಯುದ್ಧಕ್ಕಾಗಿ ಸರ್ವ ಸಿದ್ಧತೆಗಳನ್ನೂ ಮಾಡಿಕೊಂಡು, ಕವಚಗಳನ್ನು ಧರಿಸಿ, ಅರ್ಜುನನಿಗೆ ರಕ್ಷಣೆಯನ್ನು ಕೊಡುವ ಸಲುವಾಗಿ ಭೀಷ್ಮನಿದ್ದೆಡೆಗೆ ಧಾವಿಸಿದರು. ಗಾಂಡೀವಧನ್ವನಾದ ಅರ್ಜುನನ ಘೋರಪರಾಕ್ರಮವನ್ನು ಅರಿತಿದ್ದ ಪಾಂಡವಯೋಧರು ಹಾಹಾಕಾರಗಳನ್ನೂ, ಸಿಂಹನಾದಗಳನ್ನೂ, ಜಯ ಕಾರಗಳನ್ನೂ ಮಾಡುತ್ತಾ ಭೀಷ್ಮನನ್ನು ಸುತ್ತುವರಿದರು. ಅನಂತರ ಶೂರನಾದ ತಾಲಧ್ವಜನಾದ ಭೀಷ್ಮನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಪಾಂಡವರ ಸೈನ್ಯವನ್ನು ಮುಚ್ಚಿಬಿಟ್ಟನು. ಸೂರ್ಯನು ನಡುನೆತ್ತಿಯ

ಮೇಲೆ ಬರಲಾಗಿ, ಕೌರವರೆಲ್ಲರೂ ಏಕೀಭೂತರಾಗಿ ಪಾಂಡವರೊಡನೆ ಯುದ್ಧವನ್ನು ಉಪಕ್ರಮಿಸಿದರು. ಸಾತ್ಯಕಿಯು ಕೃತವರ್ಮನನ್ನು ಶೀಘ್ರವಾಗಿ ಹೋಗುವ ಐದು ಬಾಣಗಳಿಂದ ಪ್ರಹರಿಸಿ ಪುನಃ ಕೌರವಯೋಧರ ಮೇಲೆ ಸಾವಿರಾರು ಬಾಣಗಳನ್ನು ಸುರಿಸುತ್ತಾ ಯುದ್ಧಭೂಮಿಯಲ್ಲಿ ಅಚಲನಾಗಿ ನಿಂತಿದ್ದನು. ಅದೇ ರೀತಿಯಲ್ಲಿ ದ್ರುಪದನು ದ್ರೋಣರನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿ ಪುನಃ ಎಪ್ಪತ್ತು ಬಾಣಗಳಿಂದ ಪ್ರಹರಿಸಿ, ಐದು ಬಾಣಗಳಿಂದ ಅವರ ಸಾರಥಿಯನ್ನು ಪ್ರಹರಿಸಿದನು. ಭೀಮಸೇನನು ರಾಜನಾದ ಮತ್ತು ಪ್ರಪಿತಾಮಹನಾದ ಬಾಹ್ಲೀಕನನ್ನು ಅನೇಕಬಾಣಗಳಿಂದ ಪ್ರಹರಿಸಿ ಅರಣ್ಯದಲ್ಲಿ ಸಿಂಹವು ಗರ್ಜನೆಮಾಡುವಂತೆ ಗಟ್ಟಿಯಾಗಿ ಗರ್ಜಿಸಿದನು. ಚಿತ್ರಸೇನನು ಅಭಿಮನ್ಯುವನ್ನು ಅನೇಕ ಬಾಣಗಳಿಂದ ಗಾಯಗೊಳಿಸಿದನು. ಅದಕ್ಕೆ ಪ್ರತಿಯಾಗಿ ಅಭಿಮನ್ಯುವು ಸಾವಿರಾರು ಬಾಣಗಳನ್ನು ಚಿತ್ರಸೇನನ ಮೇಲೆ ಸುರಿಸುತ್ತಾ ಯುದ್ಧದಲ್ಲಿ ಅಚಲನಾಗಿ ನಿಂತಿದ್ದನು. ಪುನಃ ಅಭಿಮನ್ಯುವು ಚಿತ್ರಸೇನನನ್ನು ಮೂರು ಬಾಣಗಳಿಂದ ಗಾಯಗೊಳಿಸಿದನು. ಯಾವ ರೀತಿಯಲ್ಲಿ ಆಕಾಶದಲ್ಲಿ ಮಹಾಘೋರ ಗ್ರಹಗಳಾದ ಬುಧ-ಶನಿಗಳು ಒಂದೆಡೆ ಸೇರಿ ಪ್ರಕಾಶಿಸುತ್ತವೆಯೋ–ಅದೇ ರೀತಿಯಲ್ಲಿ ಪರಸ್ಪರವಾಗಿ ಯುದ್ಧದಲ್ಲಿ ತೊಡಗಿದ್ದ ಯೋಧಪ್ರಮುಖರಾದ ಚಿತ್ರಸೇನಾಭಿಮನ್ಯುಗಳು ಪ್ರಕಾಶಿಸಿದರು. ಶತ್ರುವೀರಹಂತಕನಾದ ಅಭಿಮನ್ಯುವು ಒಂಬತ್ತು ಬಾಣಗಳಿಂದ ಚಿತ್ರಸೇನನ ನಾಲ್ಕು ಕುದುರೆಗಳನ್ನೂ ಮತ್ತು ಸೂತನನ್ನೂ ಸಂಹರಿಸಿ ಬಹಳ ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು.

ಮಹಾರಥನಾದ ಚಿತ್ರಸೇನನು ಅಶ್ವಗಳಿಂದಲೂ, ಸಾರಥಿಯಿಂದಲೂ ವಿಹೀನವಾಗಿದ್ದ ರಥದಿಂದ ಕೆಳಕ್ಕೆ ಇಳಿದು ಬಹಳ ಶೀಘ್ರವಾಗಿ ದುರ್ಮುಖನ ರಥಕ್ಕೆ ಹತ್ತಿಕೊಂಡನು. ದ್ರೋಣ-ದ್ರುಪದರ ಯುದ್ಧ ವಿಭಾಗದಲ್ಲಿ ಶೀಘ್ರಪರಾಕ್ರಮಿಗಳಾದ ದ್ರೋಣರು ದ್ರುಪದನನ್ನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಪ್ರಹರಿಸಿ ಅನಂತರ ಅವನ ಸಾರಥಿಯನ್ನೂ ನಿಶಿತವಾದ ಬಾಣಗಳಿಂದ ಪ್ರಹರಿಸಿದರು. ಈ ಪ್ರಕಾರವಾಗಿ ಯುದ್ಧಭೂಮಿಯಲ್ಲಿ ದ್ರೋಣರಿಂದ ಪೀಡಿತನಾದ ದ್ರುಪದನು ಹಿಂದೆ ತಮ್ಮಿಬ್ಬರಲ್ಲಿದ್ದ ವೈರವನ್ನು ಸ್ಮರಿಸಿಕೊಂಡು ಶೀಘ್ರಗಾಮಿಗಳಾದ ಕುದುರೆಗಳ ಸಹಾಯದಿಂದ

ಪಲಾಯನಮಾಡಿದನು. ಭೀಮಸೇನನಾದರೋ ರಾಜನಾದ ಬಾಹ್ಲೀಕನನ್ನು ಮುಹೂರ್ತಮಾತ್ರದಲ್ಲಿ ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಅಶ್ವ-ಸೂತ-ರಥಗಳಿಂದ ವಿಹೀನನನ್ನಾಗಿ ಮಾಡಿಬಿಟ್ಟನು. ಮುಂದಿನ ನಿಮಿಷದಲ್ಲಿ ತನ್ನ ಪ್ರಾಣವು ಉಳಿಯುವುದೋ ಇಲ್ಲವೋ ಎಂಬ ಮಹಾಸಂಶಯ ಗ್ರಸ್ತನಾದ ಪುರುಷೋತ್ತಮನಾದ ಬಾಹ್ಲೀಕನು ಅತ್ಯಂತ ಸಂಭ್ರಮದಿಂದ (ಅವಸರದಿಂದ) ತಾನಿದ್ದ ರಥದಿಂದ ಧುಮುಕಿ ಲಕ್ಷ್ಮಣನ ರಥವನ್ನು ಹತ್ತಿ ಕುಳಿತನು. ಸಾತ್ಯಕಿಯು, ತನ್ನನ್ನು ಮುಂದೆ ಹೋಗದಂತೆ ಅಡ್ಡಗಟ್ಟಿದ ಕೃತವರ್ಮನನ್ನು ಬಹುವಿಧವಾದ ಬಾಣಗಳಿಂದ ಪಕ್ಕಕ್ಕೆ ಸರಿಯುವಂತೆ ಮಾಡಿ ಭೀಷ್ಮನ ಬಳಿಗೆ ಸಾರಿದನು. ಪಿತಾಮಹನಾದ ಭೀಷ್ಮನ ಸಮೀಪಕ್ಕೆ ಹೋಗುತ್ತಲೇ ಅವನನ್ನು ರೆಕ್ಕೆಗಳನ್ನು ಹೊಂದಿದ್ದ ನಿಶಿತವಾದ ಅರುವತ್ತು ಬಾಣಗಳಿಂದ ಪ್ರಹರಿಸಿ ರಥದ ಆಸನದಲ್ಲಿಯೇ ಕುಳಿತು ನೃತ್ಯಮಾಡುತ್ತಿರುವನೋ ಎಂಬಂತೆ ತನ್ನ ದೊಡ್ಡ ಧನುಸ್ಸನ್ನು ಹಿಂದಕ್ಕೂ-ಮುಂದಕ್ಕೂ ಜಗ್ಗಿಸುತ್ತಾ ಟೇಂಕಾರಮಾಡುತ್ತಿದ್ದನು. ಕುಪಿತನಾದ ಭೀಷ್ಮನು ಲೋಹಮಯವಾದ, ಸುವರ್ಣದಿಂದ ಚಿತ್ರಿತವಾಗಿದ್ದ, ಮಹಾವೇಗಯುಕ್ತವಾಗಿದ್ದ, ಸರ್ಪಿಣಿಯಂತೆ ನೀಳವಾಗಿದ್ದ ದೊಡ್ಡದಾದ ಶಕ್ತ್ಯಾಯುಧವನ್ನು ಸಾತ್ಯಕಿಯ ಮೇಲೆ ರಭಸದಿಂದ ಎಸೆದನು. ಬಹಳ ವೇಗವಾಗಿ ತನ್ನ ಕಡೆಗೆ ಬರುತ್ತಿದ್ದ, ಮೃತ್ಯುಸದೃಶವಾಗಿದ್ದ, ಜಯಿಸಲು ಅಸಾಧ್ಯವಾಗಿದ್ದ ಶಕ್ತ್ಯಾಯುಧವನ್ನು ಯಶೋವಂತನಾದ ಸಾತ್ಯಕಿಯು ವೇಗದಿಂದ ತಪ್ಪುವಂತೆ ಮಾಡಿದನು. ಪರಮದಾರುಣವಾಗಿದ್ದ ಆ ಶಕ್ತ್ಯಾಯುಧವು ಸಾತ್ಯಕಿಯ ಸಮೀಪಕ್ಕೆ ಬಾರದೆಯೇ ಮಹಾಪ್ರಭೆಯಿಂದ ಕೂಡಿದ ದೊಡ್ಡ ಉಲ್ಕೆಯಂತೆ ಭೂಮಿಯ ಮೇಲೆ ಬಿದ್ದಿತು. ಅನಂತರ ವಾರ್ಷ್ಣೇಯನು ತನ್ನಲ್ಲಿದ್ದ ಸ್ವರ್ಣಪ್ರಭೆಯಿಂದ ಕೂಡಿದ್ದ ಶಕ್ತ್ಯಾಯುಧವನ್ನು ತೆಗೆದುಕೊಂಡು ಬಹಳ ವೇಗವಾಗಿ ಪಿತಾಮಹನ ರಥದ ಮೇಲೆ ಬೀಸಿ ಎಸೆದನು. ವಾರ್ಷ್ಣೇಯನ ಭುಜದ ವೇಗದಿಂದ ಪ್ರಹಿತವಾದ ಆ ಮಹಾಶಕ್ತ್ಯಾಯುಧವು–ಸಂಧ್ಯೆಯಾದೊಡನೆಯೇ ಕಾಳರಾತ್ರಿಯು ಪ್ರಪಂಚವನ್ನು ಬಹಳ ಬೇಗ ಆವರಿಸಿಬಿಡುವಂತೆ–ಭೀಷ್ಮನ ರಥದ ಕಡೆಗೆ ಬಹಳ ವೇಗದಿಂದ ಹೋಯಿತು. ಶೀಘ್ರಾತಿಶೀಘ್ರವಾಗಿ ತನ್ನ ಕಡೆಗೆ ಬರುತ್ತಿದ್ದ ಸಾತ್ಯಕಿಯಿಂದ ಪ್ರಮುಕ್ತವಾದ

ಶಕ್ತ್ಯಾಯುಧವನ್ನು ಭೀಷ್ಮನು ಸುತೀಕ್ಷ್ಣವಾಗಿದ್ದ ಕ್ಷುರಪ್ರಗಳೆಂಬ ಎರಡು ಬಾಣಗಳಿಂದ ಎರಡು ಪ್ರಕಾರವಾಗಿ ಕತ್ತರಿಸಿದನು. ಅದು ಛಿನ್ನ-ಭಿನ್ನವಾಗಿ ಒಡನೆಯೇ ಭೂಮಿಯ ಮೇಲೆ ಬಿದ್ದಿತು.

ಶತ್ರುಕರ್ಶನನಾದ, ಕ್ರುದ್ಧನಾದ ಗಾಂಗೇಯನು ಸಾತ್ಯಕಿಯು ಬಿಟ್ಟ ಶಕ್ತ್ಯಾಯುಧವನ್ನು ಕತ್ತರಿಸಿ, ಅಟ್ಟಹಾಸದಿಂದ ನಗುತ್ತಾ ಒಂಬತ್ತು ಬಾಣಗಳಿಂದ ಸಾತ್ಯಕಿಯ ವಕ್ಷಃಸ್ಥಲದಲ್ಲಿ ಪ್ರಹರಿಸಿದನು. ಅನಂತರ ರಥ-ಗಜಾಶ್ವ-ಸೇನೆಗಳಿಂದ ಕೂಡಿದ ಪಾಂಡವರು ಸಾತ್ಯಕಿಯನ್ನು ರಕ್ಷಿಸಲು ಭೀಷ್ಮನನ್ನು ಸುತ್ತುಗಟ್ಟಿದರು. ಕೂಡಲೇ ವಿಜಯೈಷಿಗಳಾದ ಪಾಂಡವರಿಗೂ ಮತ್ತು ಕೌರವರಿಗೂ ಭಯಂಕರವಾದ ಮತ್ತು ರೋಮಾಂಚಕರವಾದ ಯುದ್ಧವು ಪ್ರಾರಂಭವಾಯಿತು."

೧೦೪ನೆಯ ಅಧ್ಯಾಯವು ಮುಗಿಯಿತು.

೧೦೫ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಷ್ಮನ ರಕ್ಷಣೆಗೆ ಹೋಗುವಂತೆ ದುರ್ಯೋಧನನು ದುಃಶಾಸನನಿಗೆ ಆದೇಶನೀಡಿದುದು : ಯುಧಿಷ್ಠಿರ-ನಕುಲ-ಸಹದೇವರಿಂದ ಶಕುನಿಯ ಅಶ್ವಸೈನ್ಯದ ಪರಾಜಯ : ಶಲ್ಯನೊಡನೆ ಯುಧಿಷ್ಠಿರಾದಿಗಳ ಕದನ

ಸಂಜಯನು ಭೀಷ್ಮ-ಪಾಂಡವರ ಯುದ್ಧದ ವಿಷಯವನ್ನೇ ಮುಂದು ವರಿಸಿ ಹೇಳುತ್ತಾನೆ :

"ಮಹಾರಾಜ! ವರ್ಷಾಕಾಲದಲ್ಲಿ ಮೇಘಗಳಿಂದ ಆಚ್ಛಾದಿತನಾದ ಸೂರ್ಯನಂತೆ-ಪಾಂಡವರ ಸೈನ್ಯದಿಂದ ಸುತ್ತುಗಟ್ಟಲ್ಪಟ್ಟಿದ್ದ ಕ್ರುದ್ಧನಾದ ಭೀಷ್ಮನನ್ನು ನೋಡಿ ದುರ್ಯೋಧನನು ದುಃಶಾಸನನೊಡನೆ ಹೇಳಿದನು : "ಅನುಜ! ಶತ್ರುನಿಷೂದನನಾದ, ಮಹಾಧನುಷ್ಮಂತನಾದ, ಶೂರನಾದ ಭೀಷ್ಮನು ಪರಾಕ್ರಮಿಗಳಾದ ಪಾಂಡವರಿಂದ ಸುತ್ತುಗಟ್ಟಲ್ಪಟ್ಟಿದ್ದಾನೆ. ಈ ಸಮಯದಲ್ಲಿ ಮಹಾತ್ಮನಾದ ಭೀಷ್ಮನನ್ನು ರಕ್ಷಿಸುವ ಕಾರ್ಯವು ನಿನ್ನದಾಗಿದೆ. ಯುದ್ಧಸಮಯದಲ್ಲಿ ಪಿತಾಮಹನಾದ ಭೀಷ್ಮನನ್ನು ನಾವು ರಕ್ಷಿಸಿದರೆ ಅದಕ್ಕೆ

ಪ್ರತಿಯಾಗಿ ಅವನು ಪ್ರಯತ್ನಶೀಲರಾದ ಪಾಂಚಾಲರನ್ನು ಪಾಂಡವಸಮೇತ ವಾಗಿಯೇ ನಾಶಮಾಡಿಯಾನು. ಆದುದರಿಂದ ಈ ಸಮಯದಲ್ಲಿ ಭೀಷ್ಮನ ರಕ್ಷಣೆಯೇ ನಮ್ಮ ಅತಿಮುಖ್ಯವಾದ ಕರ್ತವ್ಯವೆಂದು ನಾನು ಭಾವಿಸುತ್ತೇನೆ. ನಾವು ಇವನನ್ನು ರಕ್ಷಿಸಿದೆವಾದರೆ ಮಹಾವ್ರತನಾದ, ಮಹಾಧನುಷ್ಮಂತನಾದ ಭೀಷ್ಮನು ನಮ್ಮನ್ನು ರಕ್ಷಿಸುತ್ತಾನೆ. ಆದುದರಿಂದ ನೀನೀಗಲೇ ಭೀಷ್ಮನನ್ನು ನಮ್ಮೆಲ್ಲ ಸೈನ್ಯಗಳಿಂದಲೂ ಸುತ್ತುಗಟ್ಟಿ ಯುದ್ಧದಲ್ಲಿ ದುಷ್ಕರವಾದ ಕರ್ಮವನ್ನು ಮಾಡುವ ಸತ್ಯವ್ರತನನ್ನು ರಕ್ಷಿಸು."

ಮಹಾರಾಜ! ದುರ್ಯೋಧನನಿಂದ ಹೀಗೆ ನಿರ್ದೇಶಿತನಾದ ದುಃಶಾಸನನು ದೊಡ್ಡ ಸೈನ್ಯದೊಡನೆ ಭೀಷ್ಮನನ್ನು ಸುತ್ತುವರಿದು ಯುದ್ಧ ಸನ್ನದ್ಧನಾಗಿ ನಿಂತನು.

ಅನಂತರ ಸುಬಲಾತ್ಮಜನಾದ ಶಕುನಿಯು ಒಂದು ಲಕ್ಷ ಅಶ್ವಸೈನ್ಯ ದೊಡನೆ ಪಾಂಡವರ ಸೈನ್ಯವನ್ನು ಆಕ್ರಮಿಸಿದನು. ಶಕುನಿಯ ಅಶ್ವಸೈನಿಕರು ಸ್ವಚ್ಛವಾದ ಪ್ರಾಸಾಯುಧಗಳನ್ನೂ ಋಷ್ಟಿ-ತೋಮರಗಳನ್ನೂ ಹೊಂದಿದ್ದರು. ಪರಾಕ್ರಮದಿಂದ ದರ್ಪಿಷ್ಠರಾಗಿದ್ದರು. ಒಳ್ಳೊಳ್ಳೆಯ ಪೋಷಾಕುಗಳನ್ನು ಹಾಕಿಕೊಂಡಿದ್ದರು. ಬಲಿಷ್ಠರಾಗಿದ್ದರು. ಎತ್ತರವಾದ ಪತಾಕೆಗಳನ್ನು ಹೊಂದಿದ್ದರು. ಅಶ್ವವಿದ್ಯೆಯಲ್ಲಿಯೂ ಧನುರ್ವಿದ್ಯೆಯಲ್ಲಿಯೂ ಸುಶಿಕ್ಷಿತ ರಾಗಿದ್ದು ಯುದ್ಧಕುಶಲರೂ ಆಗಿದ್ದರು. ಅಂತಹ ನರೋತ್ತಮರಿಂದ, ಶಕುನಿಯ ಅಶ್ವಸೈನ್ಯವು ಸಂಪನ್ನವಾಗಿದ್ದಿತು. ಶಕುನಿಯು ಅಪಾರವಾದ ಆ ಅಶ್ವಸೇನೆಯೊಡನೆ ನಕುಲ-ಸಹದೇವರನ್ನೂ, ಯುಧಿಷ್ಠಿರನನ್ನೂ ಎಲ್ಲ ಕಡೆ ಗಳಿಂದಲೂ ಆಕ್ರಮಿಸಿ ಅವರು ಮುಂದೆ ಹೋಗದಂತೆ ತಡೆದನು. ಶಕುನಿಯ ಒಂದು ಲಕ್ಷ ಅಶ್ವಸೇನೆಯ ಜೊತೆಗೆ ದುರ್ಯೋಧನರಾಜನೂ ಹತ್ತುಸಾವಿರ ಕುದುರೆಸವಾರರನ್ನು ಪಾಂಡವರು ಮುಂದೆ ಬಾರದಂತೆ ತಡೆಯುವ ಸಲುವಾಗಿ ಕಳುಹಿಸಿಕೊಟ್ಟನು.

ಗರುಡನಿಗೆ ಸಮಾನವಾದ ಮಹಾವೇಗವಿದ್ದ ಕುದುರೆಗಳು ಯುದ್ಧ ಭೂಮಿಯನ್ನು ಪ್ರವೇಶಿಸುತ್ತಿರಲಾಗಿ, ಅವುಗಳ ಗೊರಸುಗಳ ಸಂಘಟನೆ ಗಳಿಂದ ಉಂಟಾದ ಶಬ್ದದಿಂದ ಭೂಮಿಯು ನಡುಗಿತು ಮತ್ತು ಭೂಮಿ ಯಲ್ಲಿ ಘೋರವಾದ ಶಬ್ದವೂ ಉಂಟಾಯಿತು. ಆ ಸಮಯದಲ್ಲಿ ಕುದುರೆ ಗಳ ಗೊರಸುಗಳಿಂದ ಉಂಟಾದ ಮಹಾಶಬ್ದವು–ಪರ್ವತಪ್ರದೇಶದ ಅರಣ್ಯ

ಗಳಲ್ಲಿ ಬಿದಿರುಮೆಳೆಗಳು ಹತ್ತಿಕೊಂಡು ಉರಿಯುತ್ತಿರುವಾಗ ಚಟ್-ಚಟ್ ಎಂಬ ಶಬ್ದವಾಗುವಂತೆ ಕೇಳಿಬಂದಿತು. ನೆಗೆ-ನೆಗೆದುಕೊಂಡು ಬರುತ್ತಿದ್ದ ಆ ಕುದುರೆಗಳ ಗೊರಸುಗಳ ಸಂಘಟ್ಟನೆಯಿಂದಾಗಿ ದೊಡ್ಡದಾದ ಧೂಳೆದ್ದು ಆ ಧೂಳಿನ ಸಮೂಹವು ಅಂತರಿಕ್ಷವನ್ನು ವ್ಯಾಪಿಸಿ ಸೂರ್ಯನನ್ನೂ ಮುಚ್ಚಿ ಬಿಟ್ಟಿತು. ಬಹಳ ವೇಗವಾಗಿ ಸಂಚರಿಸುತ್ತಿರುವ ಹಂಸಗಳಿಂದ ಸರೋವರವು ಅಲ್ಲೋಲ-ಕಲ್ಲೋಲವಾಗುವಂತೆ–ವೇಗಯುಕ್ತವಾದ ಕುದುರೆಗಳ ಆಗಮನ ದಿಂದಾಗಿ ಪಾಂಡವರ ಅಪಾರಸೈನ್ಯವು ಮಹಾಕ್ಷೋಭೆಗೊಂಡಿತು. ಲಕ್ಷಾಂತರ ಕುದುರೆಗಳ ಹೇಷಾರವದಿಂದಾಗಿ ಎಲ್ಲಿ ಏನು ನಡೆಯುತ್ತಿದೆಯೆಂಬುದೇ ತಿಳಿಯುತ್ತಿರಲಿಲ್ಲ. ವರ್ಷಾಕಾಲದಲ್ಲಿ ನದಿಗಳ ಪ್ರವಾಹಗಳಿಂದ ಪರಿಪೂರ್ಣ ವಾಗಿ, ಹುಣ್ಣಿಮೆಗಳಲ್ಲಿ ಉಕ್ಕಿಬರುತ್ತಿರುವ ಸಮುದ್ರದ ವೇಗವನ್ನು ತೀರ ಪ್ರದೇಶವು ತಡೆಹಿಡಿಯುವಂತೆ ಯುಧಿಷ್ಠಿರ-ನಕುಲ-ಸಹದೇವರು ನಿಶಿತ ವಾದ ಬಾಣಪ್ರಯೋಗಗಳಿಂದ ಅಶ್ವಸೈನಿಕರ ವೇಗವನ್ನು ತಡೆಹಿಡಿದರು. ಅನಂತರ ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ರಥಿಗಳಾದ ಯುಧಿಷ್ಠಿರ-ನಕುಲ-ಸಹದೇವರು ಅಶ್ವಾರೋಹಿಗಳ ಶರೀರಗಳಿಂದ ಅವರ ಉತ್ತಮಾಂಗ ಗಳನ್ನು ಬೇರ್ಪಡಿಸಿದರು. ದೃಢಧನ್ವಿಗಳಾದ ಪಾಂಡವತ್ರಯರಿಂದ ಕತ್ತರಿಸ ಲ್ಪಟ್ಟ ಅಶ್ವಯೋಧರ ಶಿರಸ್ಸುಗಳು–ಕಾಡಾನೆಗಳಿಂದ ವಿಧ್ವಂಸಿತವಾದ ಮಹಾ ಗಜಗಳು ಪರ್ವತದ ಕಂದರಗಳಲ್ಲಿ ಬೀಳುವಂತೆ ತೊಪ-ತೊಪನೆ ಕೆಳಗೆ ಬಿದ್ದುವು. ಅಳಿದುಳಿದ ಅಶ್ವಯೋಧರು ಕ್ರುದ್ಧರಾಗಿ ಸಮರಾಂಗಣದ ನಾನಾ ದಿಕ್ಕುಗಳಲ್ಲಿ ಸಂಚರಿಸುತ್ತಾ ಪ್ರಾಸಾಯುಧಗಳಿಂದಲೂ, ಬಗ್ಗಿದ ಗಿಣ್ಣುಗಳಿಂದ ಕೂಡಿದ್ದ ನಿಶಿತವಾದ ಬಾಣಗಳಿಂದಲೂ ಶತ್ರುಪಕ್ಷದ ಯೋಧರ ತಲೆಗಳನ್ನು ಕತ್ತರಿಸುತ್ತಿದ್ದರು. ಋಷ್ಟ್ಯಾಯುಧಗಳಿಂದ ಪ್ರಹೃತರಾದ ಕುದುರೆಸವಾರರು–ಮಹಾವೃಕ್ಷಗಳು ಮಾಗಿದ ಹಣ್ಣುಗಳನ್ನು ಕೆಳಕ್ಕೆ ಬೀಳಿಸುವಂತೆ–ತಮ್ಮ ಶಿರಸ್ಸು ಗಳನ್ನು ಪರಿತ್ಯಜಿಸಿದರು. ಸವಾರರಿಂದ ಕೂಡಿದ ಅಶ್ವಗಳು ಅನೇಕ ಕಡೆಗಳಲ್ಲಿ ಸಂಹರಿಸಲ್ಪಟ್ಟಿದ್ದುವು. ಕೆಲವು ಕಡೆಗಳಲ್ಲಿ ಅಶ್ವಾರೋಹಿಗಳು ಕೆಳಕ್ಕೆ ಬಿದ್ದಿರುವ ಮತ್ತು ಬೀಳಿಸಲ್ಪಡುತ್ತಿರುವ ದೃಶ್ಯಗಳು ಕಂಡುಬಂದುವು. ಅಂತಹ ದೃಶ್ಯ ಗಳು ಅಲ್ಲಿ ಅನೇಕವಾಗಿ ಕಂಡುಬಂದುವು. ಪ್ರಾಣರಕ್ಷಣೆಯಲ್ಲಿ ನಿರತವಾದ ಮೃಗಗಳು ತಿಳಿಯದೇ ಸಿಂಹದ ಬಳಿಗೆ ಹೋಗಿ ಅದನ್ನು ಕಣ್ಣೆತ್ತಿನೋಡಿ

ದೊಡನೆಯೇ ಭಯಗೊಂಡು ಪ್ರಾಣಭಯದಿಂದ ಓಡಿಹೋಗುವಂತೆ–ವಧಿಸಲ್ಪಡುತ್ತಿದ್ದ ಅನೇಕ ಕುದುರೆಗಳು ಭಯಗೊಂಡವುಗಳಾಗಿ ಓಡಿ ಹೋದುವು. ಪಾಂಡವರು ಬಹಳ ದೊಡ್ಡದಾಗಿದ್ದ ಶಕುನಿಯ ಅಶ್ವಸೇನೆಯನ್ನು ಜಯಿಸಿ ಶಂಖಗಳನ್ನು ಊದುತ್ತಾ ಭೇರಿಗಳನ್ನು ತಾಡನಮಾಡಿದರು. ಅನಂತರ ಅಪಾರವಾಗಿದ್ದ ಅಶ್ವಸೇನೆಯು ಪರಾಜಿತವಾದುದನ್ನು ಕಂಡು ಬಹಳ ದೀನನಾಗಿದ್ದ ದುರ್ಯೋಧನನು ಮದ್ರರಾಜನಾದ ಶಲ್ಯನನ್ನು ಕುರಿತು ಹೇಳಿದನು : "ಪ್ರಭುವೇ! ಪಾಂಡವಜ್ಯೇಷ್ಠನಾದ ಯುಧಿಷ್ಠಿರನು ಯಮಳರಿಂದ ಕೂಡಿಕೊಂಡವನಾಗಿ ನಿಮ್ಮಂತಹ ಮಹಾರಥರ ಸಮಕ್ಷ ದಲ್ಲಿಯೇ ನಮ್ಮ ಸೈನ್ಯವನ್ನು ಓಡಿಸುತ್ತಿದ್ದಾನೆ. ತೀರವು ಸಮುದ್ರವನ್ನು ತಡೆಯುವಂತೆ–ಈ ಪಾಂಡವತ್ರಯರನ್ನು ನೀನೀಗಲೇ ನಿರೋಧಿಸು. ನೀನು ಯಾರಿಂದಲೂ ತಡೆದುಕೊಳ್ಳಲು ಸಾಧ್ಯವಾಗದಂತಹ ಬಲಪರಾಕ್ರಮವುಳ್ಳವ ನೆಂದು ಪ್ರಸಿದ್ಧನಾಗಿರುವೆ. ಈಗ ನಿನ್ನ ಆ ಪರಾಕ್ರಮವನ್ನು ಪ್ರದರ್ಶಿಸು."

ಮಹಾರಾಜ! ನಿನ್ನ ಮಗನು ಹೇಳಿದ ಮಾತುಗಳನ್ನು ಕೇಳಿ ಪ್ರತಾಪವಂತನಾದ ಶಲ್ಯನು ದೊಡ್ಡ ರಥಸೈನ್ಯದೊಡನೆ ಯುಧಿಷ್ಠಿರನು ಯುದ್ಧಮಾಡುತ್ತಿದ್ದಲ್ಲಿಗೆ ಧಾವಿಸಿದನು. ಆ ಸಮಯದಲ್ಲಿ ಮಹಾರಥನಾದ ಯುಧಿಷ್ಠಿರನು ಬಹಳ ವೇಗವಾಗಿ ತನ್ನ ಕಡೆಗೆ ಬರುತ್ತಿದ್ದ ಶಲ್ಯರಾಜನ ವಿಶಾಲವಾದ ರಥಸೇನೆಯನ್ನೂ ಮತ್ತು ಮದ್ರರಾಜನನ್ನೂ ದೊಡ್ಡ ಜಲಪ್ರವಾಹವನ್ನು ತೀರವು ತಡೆಯುವಂತೆ–ತಡೆದು ನಿಲ್ಲಿಸಿದನು. ಅನಂತರ ಹತ್ತು ಬಾಣಗಳಿಂದ ಮದ್ರರಾಜನ ವಕ್ಷಸ್ಥಳದಲ್ಲಿ ಪ್ರಹರಿಸಿದನು. ನಕುಲ-ಸಹದೇವರು ನೇರವಾಗಿ ಹೋಗುವ ಏಳೇಳು ಬಾಣಗಳಿಂದ ಶಲ್ಯನನ್ನು ಪ್ರಹರಿಸಿದರು. ಅದಕ್ಕೆ ಪ್ರತಿಯಾಗಿ ಮದ್ರರಾಜನೂ ಸಹ ಆ ಮೂವರು ಮಹಾರಥರನ್ನೂ ಮೂರು-ಮೂರು ಬಾಣಗಳಿಂದ ಪ್ರಹರಿಸಿ, ಮರುಕ್ಷಣದಲ್ಲಿಯೇ ಯುಧಿಷ್ಠಿರನನ್ನು ನಿಶಿತವಾದ ಅರುವತ್ತು ಬಾಣ ಗಳಿಂದ ಪುನಃ ಪ್ರಹರಿಸಿದನು. ಸಂಭ್ರಮಗೊಂಡಿದ್ದ ಮಾದ್ರಿಯ ಮಕ್ಕಳನ್ನೂ ಶಲ್ಯನು ಎರಡೆರಡು ಬಾಣಗಳಿಂದ ಪ್ರಹರಿಸಿದನು. ಆ ವೇಳೆಗೆ ಮಹಾಬಾಹುವಾದ, ಶತ್ರುಂಜಯನಾದ ಭೀಮಸೇನನು–ರಾಜನಾದ ಯುಧಿಷ್ಠಿರನು ಮೃತ್ಯುವಿನ ದವಡೆಯನ್ನು ಪ್ರವೇಶಿಸುವಂತೆ ಮದ್ರರಾಜ

ನೊಡನೆ ಯುದ್ಧಕ್ಕೆ ತೊಡಗಿರುವುದನ್ನು ನೋಡಿ ಅಣ್ಣನನ್ನು ರಕ್ಷಿಸುವ ಸಲುವಾಗಿ ಅತ್ತ ಕಡೆಗೆ ಧಾವಿಸಿದನು.

ಸೂರ್ಯನು ಪಶ್ಚಿಮದಿಕ್ಕನ್ನು ಆಶ್ರಯಿಸಿ ಅಸ್ತಾಚಲದಲ್ಲಿ ಬೀಳಲಿದ್ದಾಗ ( ಸಂಜೆಯು ಸಮೀಪಿಸುತ್ತಿರಲು ) ಪುನಃ ಮಹಾಘೋರವಾದ ಯುದ್ಧವು ಪ್ರಾರಂಭವಾಯಿತು."

೧೦೫ನೆಯ ಅಧ್ಯಾಯವು ಮುಗಿಯಿತು.

೧೦೬ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಷ್ಮನಿಂದ ಪರಾಜಿತವಾದ ಪಾಂಡವಸೇನೆಯ ಪಲಾಯನ: ಭೀಷ್ಮನನ್ನು ಸಂಹರಿಸಲು ಹೊರಟ ಶ್ರೀಕೃಷ್ಣನನ್ನು ಅರ್ಜುನನು ತಡೆದುದು

ಸಂಜಯನು ಭೀಷ್ಮನ ಯುದ್ಧವನ್ನು ಮುಂದುವರಿಸಿ ಹೇಳುತ್ತಾನೆ :

"ಮಹಾರಾಜ! ಕ್ರುದ್ಧನಾಗಿದ್ದ ನಿನ್ನ ತಂದೆಯು ನಿಶಿತವಾದ ಮತ್ತು ಉತ್ತಮೋತ್ತಮವಾದ ಬಾಣಗಳಿಂದ ಸೈನ್ಯಸಮೇತರಾದ ಪಾರ್ಥರನ್ನು ಎಲ್ಲ ಕಡೆಗಳಲ್ಲಿಯೂ ಪ್ರಹರಿಸತೊಡಗಿದನು. ಭೀಮನನ್ನು ಹನ್ನೆರಡು ಬಾಣಗಳಿಂದಲೂ, ಸಾತ್ಯಕಿಯನ್ನು ಒಂಬತ್ತು ಬಾಣಗಳಿಂದಲೂ, ನಕುಲನನ್ನು ಮೂರು ಬಾಣಗಳಿಂದಲೂ, ಸಹದೇವನನ್ನು ಏಳು ಬಾಣಗಳಿಂದಲೂ ಪ್ರಹರಿಸಿ, ಯುಧಿಷ್ಠಿರನನ್ನು ಹನ್ನೆರಡು ಬಾಣಗಳಿಂದ ಅವನ ವಕ್ಷಃಸ್ಥಲದಲ್ಲಿಯೂ, ಬಾಹುಗಳಲ್ಲಿಯೂ ಪ್ರಹರಿಸಿದನು. ಕಡೆಯದಾಗಿ ಪಾಂಡವರ ದಂಡನಾಯಕನಾದ ಧೃಷ್ಟದ್ಯುಮ್ನನನ್ನೂ ನಿಶಿತವಾದ ಬಾಣಗಳಿಂದ ಪ್ರಹರಿಸಿ ಮಹಾಬಲನಾದ ಭೀಷ್ಮನು ಗಟ್ಟಿಯಾಗಿ ಗರ್ಜಿಸಿದನು. ಅದಕ್ಕೆ ಪ್ರತಿಯಾಗಿ ನಕುಲನು ಹನ್ನೆರಡು ಬಾಣಗಳಿಂದಲೂ, ಸಾತ್ಯಕಿಯು ಮೂರು ಬಾಣಗಳಿಂದಲೂ, ಧೃಷ್ಟದ್ಯುಮ್ನನು ಎಪ್ಪತ್ತು ಬಾಣಗಳಿಂದಲೂ, ಭೀಮಸೇನನು ಏಳು ಬಾಣಗಳಿಂದಲೂ, ಯುಧಿಷ್ಠಿರನು ಹನ್ನೆರಡು ಬಾಣಗಳಿಂದಲೂ ಪಿತಾಮಹನನ್ನು ಪ್ರಹರಿಸಿದರು. ಭೀಷ್ಮನ ರಕ್ಷಕರಾಗಿದ್ದ ದ್ರೋಣರು, ಸಾತ್ಯಕಿ-ಭೀಮಸೇನ

ರನ್ನು ಯಮದಂಡೋಪಮವಾಗಿದ್ದ ಮತ್ತು ನಿಶಿತವಾಗಿದ್ದ ಐದೈದು ಬಾಣಗಳಿಂದ ಪ್ರಹರಿಸಿದರು. ಮಾವಟಿಗನು ಮಹಾಗಜವನ್ನು ಅಂಕುಶದಿಂದ ತಿವಿಯುವಂತೆ–ಬ್ರಾಹ್ಮಣಪುಂಗವರಾದ ದ್ರೋಣರನ್ನು ಸಾತ್ಯಕಿ-ಭೀಮಸೇನರು ನೇರವಾಗಿ ಹೋಗುವ ಮೂರು ಮೂರು ಬಾಣಗಳಿಂದ ಪ್ರಹರಿಸಿದರು. ಸೌವೀರರು, ಕಿತವರು, ಪೂರ್ವದೇಶೀಯರು, ಪಶ್ಚಿಮದೇಶೀಯರು, ಉತ್ತರದೇಶೀಯರು, ಮಾಲವರು, ಅಭೀಷಾಹರು, ಶೂರಸೇನರು, ಶಿಬಿಗಳು, ವಸಾತಿಗಳು–ಇವರೆಲ್ಲರೂ ಯುದ್ಧಸಮಯದಲ್ಲಿ ಶತ್ರುಗಳಿಂದ ನಿಶಿತವಾದ ಬಾಣಗಳ ಮೂಲಕವಾಗಿ ಪ್ರಹರಿತರಾದರೂ ಭೀಷ್ಮನನ್ನು ಬಿಟ್ಟು ಪಲಾಯನಮಾಡಲಿಲ್ಲ. ಆ ದೇಶಗಳ ಯೋಧರೆಲ್ಲರೂ ಭೀಷ್ಮನನ್ನು ರಕ್ಷಿಸುತ್ತಲೇ ಇದ್ದರು.

ಅದೇ ರೀತಿಯಲ್ಲಿ ನಾನಾದೇಶಗಳಿಂದ ಆಗಮಿಸಿದ್ದ ಮಹೀಪಾಲರು ವಿವಿಧಾಯುಧಪಾಣಿಗಳಾಗಿ ಪಾಂಡವರನ್ನು ಆಕ್ರಮಿಸಿದರು. ಪಾಂಡವರೂ ಸಹ ಸೈನ್ಯಸಮೇತರಾಗಿ ಭೀಷ್ಮನನ್ನು ಸುತ್ತುಗಟ್ಟಿದರು. ರಥಗಳ ಸಮೂಹ ದಿಂದ ಪರಿವೃತನಾಗಿದ್ದ, ಅಪರಾಜಿತನಾದ ಭೀಷ್ಮನು ಗಹನವಾದ ಅರಣ್ಯ ದಲ್ಲಿ ಹಬ್ಬಿದ ಬೆಂಕಿಯಂತೆ–ಶತ್ರುಗಳನ್ನು ಸುಡುತ್ತಾ ಪ್ರಜ್ವಲಿಸಿದನು. ಭೀಷ್ಮನ ರಥವೇ ಅಗ್ನಿಶಾಲೆಯಾಗಿದ್ದಿತು. ಧನುಸ್ಸೇ ಅಗ್ನಿಗೆ ಜ್ವಾಲೆಯ ರೂಪದಲ್ಲಿದ್ದಿತು. ಕತ್ತಿ, ಶಕ್ತ್ಯಾಯುಧ ಮತ್ತು ಗದೆಗಳೇ ಇಂಧನರೂಪದಲ್ಲಿದ್ದುವು. ಬಾಣಗಳೇ ಕಿಡಿಗಳಂತಿದ್ದುವು. ಇಂತಹ ಭೀಷ್ಮರೂಪನಾದ ಯಜ್ಞೇಶ್ವರನು ಕ್ಷತ್ರಿಯಪುಂಗವರನ್ನು ಸುಟ್ಟು ಭಸ್ಮಮಾಡಿದನು. ಸುವರ್ಣಭೂಷಿತವಾದ ಗೃಧ್ರಪಕ್ಷಿಯ ರೆಕ್ಕೆಗಳಿಂದ ಕೂಡಿದ್ದ ನಿಶಿತವಾಗಿ ಮಾಡಲ್ಪಟ್ಟಿದ್ದ ಬಾಣಗಳಿಂದಲೂ, ಕರ್ಣಿ-ನಾಲೀಕ-ನಾರಾಚಗಳಿಂದಲೂ ಪಾಂಡವರ ಅಪಾರಸೈನ್ಯವನ್ನು ಮುಚ್ಚಿಬಿಟ್ಟನು. ನಿಶಿತವಾದ ಬಾಣಗಳಿಂದ ಮಹಾರಥರ ಧ್ವಜಗಳನ್ನೂ ಕತ್ತರಿಸಿ ಕೆಡವಿದನು ಮತ್ತು ರಥಿಗಳನ್ನೂ ಸಂಹರಿಸಿದನು. ತನ್ನೆದುರಾಗಿ ನಿಂತು ಯುದ್ಧಮಾಡುತ್ತಿದ್ದ ರಥಿಕರ ಧ್ವಜಗಳೆಲ್ಲವನ್ನೂ ಕತ್ತರಿಸಿ ಆ ರಥಗಳ ಸಮೂಹವನ್ನು–ಗರಿಗಳನ್ನು ಕತ್ತರಿಸಿದ ತಾಳೇಮರಗಳ ಅರಣ್ಯದಂತೆ ಮಾಡಿಬಿಟ್ಟನು. (ಧ್ವಜಗಳಿಂದ ಹೀನವಾದ ರಥಗಳು ಗರಿಗಳಿಂದ ಹೀನವಾದ ಬೋಳುತಾಳೇಮರಗಳಂತೆ ಕಾಣುತ್ತಿದ್ದುವು.) ಮರುಕ್ಷಣದಲ್ಲಿಯೇ ಆ ರಥಗಳನ್ನು ನಿರ್ಮನುಷ್ಯಗಳನ್ನಾಗಿ (ರಥಿಕಹೀನಗಳನ್ನಾಗಿ) ಮಾಡಿ

ಬಿಟ್ಟನು. (ಧ್ವಜವನ್ನು ಕತ್ತರಿಸಿದನಂತರ ರಥದಲ್ಲಿದ್ದ ರಥಿಕರನ್ನು ಸಂಹರಿಸಿದನು.) ಮಹಾಬಾಹುವಾದ ಶಸ್ತ್ರಭೃತರಲ್ಲಿ ಶ್ರೇಷ್ಠನಾದ ಭೀಷ್ಮನು ಅಶ್ವಗಳನ್ನು ಅಶ್ವಯೋಧರಿಂದ ವಿಹೀನವನ್ನಾಗಿಯೂ, ಗಜಗಳನ್ನು ಗಜಯೋಧರಿಂದ ವಿಹೀನವನ್ನಾಗಿಯೂ ಮಾಡಿದನು. ಸಿಡಿಲಿನ ಗರ್ಜನೆಯಂತೆ ಕೇಳಿಬರುತ್ತಿದ್ದ ಭೀಷ್ಮನ ಧನುಸ್ಸಿನ ಟೇಂಕಾರಶಬ್ದವನ್ನು ಕೇಳಿ ಸರ್ವಪ್ರಾಣಿಗಳೂ ನಡುಗಿದುವು. ಮಹಾರಾಜ! ನಿನ್ನ ತಂದೆಯು ಬಿಡುತ್ತಿದ್ದ ಬಾಣಗಳು ಒಮ್ಮೆಯೂ ವ್ಯರ್ಥವಾಗುತ್ತಿರಲಿಲ್ಲ. ಭೀಷ್ಮನ ಧನುಸ್ಸಿನಿಂದ ಚ್ಯುತವಾದ ಬಾಣಗಳು ಯೋಧರ ಕವಚಗಳನ್ನು ಭೇದಿಸುತ್ತಿದ್ದುದು ಮಾತ್ರವಲ್ಲದೇ-ಅವರ ಶರೀರಗಳನ್ನೂ ಭೇದಿಸಿಕೊಂಡು ಹೊರಬರುತ್ತಿದ್ದುವು. ರಥಗಳಲ್ಲಿರುತ್ತಿದ್ದ ರಥಿಕರು ಮತ್ತು ಸಾರಥಿಗಳು ಹತರಾಗಿಬಿಡುತ್ತಿದ್ದರು. ಕುದುರೆಗಳು ಮಾತ್ರ ಕಡಿವಾಣಗಳನ್ನು ಹಿಡಿಯುವವರಿಲ್ಲದೇ ಭೀಷ್ಮನ ಬಾಣಪ್ರಹಾರವನ್ನು ತಪ್ಪಿಸಿಕೊಳ್ಳಲು ದಿಕ್ಕಾಪಾಲಾಗಿ ರಥಿಕರಿಂದಲೂ ಸಾರಥಿಗಳಿಂದಲೂ ಶೂನ್ಯವಾದ ರಥಗಳನ್ನು ಎಳೆದುಕೊಂಡು ತಿರುಗುತ್ತಿದ್ದುದನ್ನು ನಾವು ರಣಾಂಗಣದಲ್ಲಿ ನೋಡಿದೆವು. ಮಹಾರಾಜ! ಚೇದಿ, ಕಾಶಿ ಮತ್ತು ಕರೂಷದೇಶಗಳ ಹದಿನಾಲ್ಕು ಸಾವಿರ ವಿಖ್ಯಾತರಾದ ಮಹಾರಥರಿದ್ದರು. ಅವರೆಲ್ಲರೂ ಸತ್ಕುಲಪ್ರಸೂತರಾಗಿಯೂ ಪಾಂಡವರಿಗಾಗಿ ತಮ್ಮ ಪ್ರಾಣಗಳನ್ನೇ ಒಪ್ಪಿಸುವವರಾಗಿಯೂ ಇದ್ದರು. ಯುದ್ಧದಲ್ಲಿ ಹಿಮ್ಮೆಟ್ಟುವವರಾಗಿರಲಿಲ್ಲ. ಸುವರ್ಣಖಚಿತವಾದ ಧ್ವಜವುಳ್ಳವರಾಗಿದ್ದರು. ಅಂತಹ ಮಹಾರಥರು ಬಾಯ್ದೆರೆದ ಯಮರಾಜನಂತಿದ್ದ ಭೀಷ್ಮನೊಡನೆ ಯುದ್ಧಮಾಡಲು ಬಂದು ಯುದ್ಧದಲ್ಲಿ ತೊಡಗಿ ಯುದ್ಧವೆಂಬ ಸಮುದ್ರದಲ್ಲಿ ಮುಳುಗಿಹೋದರು. ಅಶ್ವ-ರಥ-ಗಜ-ಸೈನ್ಯಸಮೇತರಾಗಿದ್ದ ಆ ಎಲ್ಲ ಯೋಧರನ್ನೂ ಭೀಷ್ಮನು ಪರಲೋಕಕ್ಕೆ ಕಳುಹಿಸಿಕೊಟ್ಟನು. ಆ ಸಮಯದಲ್ಲಿ ನಾವು ಆ ರಣಾಂಗಣದಲ್ಲಿ ಭಗ್ನವಾಗಿ ಹೋಗಿದ್ದ ಧುರಿಗಳುಳ್ಳ ಸಾವಿರಾರು ರಥಗಳನ್ನೂ, ಯುದ್ಧೋಪಯೋಗಿ ಸಾಮಗ್ರಿಗಳನ್ನು ಹೊರಚೆಲ್ಲಿಕೊಂಡಿದ್ದ ರಥಗಳನ್ನೂ, ಮುರಿದು ಹೋದ ಚಕ್ರಗಳುಳ್ಳ ಸಾವಿರಾರು ರಥಗಳನ್ನೂ ನೋಡಿದೆವು. ಕಟಕಟೆಯಿಂದ ಕೂಡಿದ್ದ ಭಗ್ನವಾಗಿ ಹೋಗಿದ್ದ ರಥಗಳಿಂದಲೂ ರಥದಿಂದ ಕೆಳಕ್ಕೆ ಬೀಳಿಸಲ್ಪಟ್ಟ ರಥಿಕರಿಂದಲೂ, ಬಾಣಗಳಿಂದಲೂ, ಛಿನ್ನವಾಗಿ ಹೋಗಿದ್ದ ಸುಮನೋಹರವಾದ ಕವಚಗಳಿಂದಲೂ, ಪಟ್ಟಿಶಗಳಿಂದಲೂ, ಗದೆ

ಗಳಿಂದಲೂ, ಭಿಂದಿಪಾಲಗಳಿಂದಲೂ, ನಿಶಿತವಾದ ಶಿಲೀಮುಖಗಳಿಂದಲೂ, ರಥದ ತೋಳುಮರಗಳಿಂದಲೂ, ಬತ್ತಳಿಕೆಗಳಿಂದಲೂ, ಮುರಿದು ಹೋಗಿದ್ದ ಚಕ್ರಗಳಿಂದಲೂ, ಅನೇಕವಿಧವಾದ ಧನುಸ್ಸುಗಳಿಂದಲೂ, ಕತ್ತಿಗಳಿಂದಲೂ, ಕುಂಡಲಸಹಿತವಾದ ಶಿರಸ್ಸುಗಳಿಂದಲೂ, ಕೈಚೀಲಗಳಿಂದಲೂ, ಬೆರಳಿಗೆ ಹಾಕಿಕೊಳ್ಳುವ ಚರ್ಮದ ಸಾಧನಗಳಿಂದಲೂ, ಕೆಳಕ್ಕೆ ಬೀಳಿಸಲ್ಪಟ್ಟಿದ್ದ ಧ್ವಜಗಳಿಂದಲೂ, ಅನೇಕಪ್ರಕಾರವಾಗಿ ಛಿನ್ನ-ಭಿನ್ನವಾಗಿದ್ದ ಚಾಪಗಳಿಂದಲೂ ರಣಾಂಗಣವು ವ್ಯಾಪ್ತವಾಗಿದ್ದಿತು. ಮಾವಟಿಗರನ್ನು ಅಥವಾ ಗಜಾರೋಹಿಗಳನ್ನು ಕಳೆದುಕೊಂಡ ಸಾವಿರಾರು ಆನೆಗಳು ಮತ್ತು ಸವಾರರನ್ನು ಕಳೆದುಕೊಂಡ ಸಾವಿರಾರು ಕುದುರೆಗಳು ಪ್ರಾಣಗಳನ್ನು ಕಳೆದುಕೊಂಡು ಆ ರಣರಂಗದಲ್ಲಿ ಬಿದ್ದಿದ್ದುವು. ಭೀಷ್ಮನ ಬಾಣಗಳಿಂದ ಪೀಡಿತರಾದ ಅಳಿದುಳಿದ ಪಾಂಡವಯೋಧರು ಪಲಾಯನಮಾಡಲು ಪ್ರಾರಂಭಿಸಿದರು. ಪಾಂಡವರ ಕಡೆಯ ಪ್ರಮುಖವೀರರು ಓಡಿಹೋಗುತ್ತಿದ್ದ ಪಾಂಡವ ಮಹಾರಥರನ್ನು ಹಿಂದಕ್ಕೆ ಕರೆತರಲು ಎಷ್ಟೇ ಪ್ರಯತ್ನಿಸಿದರೂ ಭೀಷ್ಮಬಾಣ ಪೀಡಿತರಾದ ಅವರನ್ನು ತಡೆಯಲು ಸಾಧ್ಯವಾಗಲಿಲ್ಲ. ಮಹೇಂದ್ರನಿಗೆ ಸಮಾನವಾದ ಪರಾಕ್ರಮವಿದ್ದ ಭೀಷ್ಮನಿಂದ ವಧಿಸಲ್ಪಡುತ್ತಿದ್ದ ಪಾಂಡವರ ಮಹಾಸೈನ್ಯವು ಸಂಪೂರ್ಣವಾಗಿ ಭಗ್ನವಾಯಿತು. ಆ ಮಹಾಸೈನ್ಯವು ಎಷ್ಟರ ಮಟ್ಟಿಗೆ ಭಗ್ನವಾಯಿತೆಂದರೆ : ಇಬ್ಬರು ಯೋಧರು ಒಟ್ಟಾಗಿ ಸೇರಿ ಓಡಿ ಹೋಗಲೂ ಸಾಧ್ಯವಾಗುತ್ತಿರಲಿಲ್ಲ. ಭೀಷ್ಮನು ಆಯ್ದಾಯ್ದು ಸೈನಿಕರನ್ನು ಸಂಹರಿಸುತ್ತಿದ್ದನು. ಕ್ಷತ-ವಿಕ್ಷತವಾಗಿ ಹೋಗಿದ್ದ ಮತ್ತು ಸಂಪೂರ್ಣವಾಗಿ ಭಗ್ನವಾಗಿ ಹೋಗಿದ್ದ ರಥ-ಗಜಾಶ್ವಗಳಿಂದ ಕೂಡಿದ್ದ, ಬಿದ್ದುಹೋಗಿದ್ದ ಧ್ವಜ ಸಮೂಹವುಳ್ಳದಾಗಿದ್ದ ಪಾಂಡವರ ಮಹಾಸೈನ್ಯವು ಚೇತನಾಶೂನ್ಯವೂ, ಹಾಹಾಕಾರಯುಕ್ತವೂ ಆಯಿತು. ದೈವಬಲದಿಂದಲೇ ಪ್ರೇರಿತರಾದ ಆ ಯೋಧರು ಮಹಾಸಂಗ್ರಾಮದಲ್ಲಿ ತಂದೆಯು ಮಗನನ್ನೂ, ಮಗನು ತಂದೆಯನ್ನೂ ಸಂಹರಿಸಿದರು. ಪ್ರಿಯಮಿತ್ರರನ್ನೇ ಯುದ್ಧದಲ್ಲಿ ಸೆಣೆಸಲು ಆಹ್ವಾನಿಸಿ ಕಡಿದುಹಾಕುತ್ತಿದ್ದರು. ಪಾಂಡುಪುತ್ರನ ಸೈನಿಕರಲ್ಲಿ ಕೆಲವರು ಕವಚಗಳನ್ನು ಬಿಚ್ಚಿಹಾಕಿ ತಲೆಗಳನು ್ನ ಕೆದರಿಕೊಂಡು ಓಡಿಹೋಗುತ್ತಿದುದು ಎಲ್ಲ ಕಡೆಗಳಲ್ಲಿಯೂ ಕಾಣುತ್ತಿದ್ದಿತು. ಹುಲಿಯನ್ನು ಕಂಡ ಗೋವುಗಳ ಸಮೂಹದಂತೆ ಭ್ರಾಂತವಾಗಿದ್ದ, ತಲೆಕೆಳಗಾದ ಮೂಕಿಗಳುಳ್ಳ

ರಥಗಳಿಂದ ಕೂಡಿದ್ದ, (ಭ್ರಾಂತವಾಗಿದ್ದ ರಥಸೈನ್ಯಗಳಿಂದಲೂ, ಗಾಡಿಗಳಿಂದಲೂ ಕೂಡಿದ್ದ ) ಪಾಂಡವರ ಸೈನ್ಯವು ಆ ಸಮಯದಲ್ಲಿ ಆರ್ತನಾದಗಳನ್ನು ಮಾಡುತ್ತಿದ್ದಿತು. ಪಾಂಡವರ ಸೈನ್ಯವು ಪುಡಿ-ಪುಡಿಯಾದುದನ್ನು ಕಂಡು, ಯಾದವನಂದನನಾದ ಶ್ರೀಕೃಷ್ಣನು ಶ್ರೇಷ್ಠವಾದ ರಥವನ್ನು ನಿಲ್ಲಿಸಿ ಕುಂತೀಪುತ್ರನಾದ ಪಾರ್ಥನಿಗೆ ಹೇಳಿದನು : "ಯಾವ ಕಾಲವು ಬರಬೇಕೆಂದು ನಾವೆಲ್ಲರೂ ಆಕಾಂಕ್ಷೆಯಿಂದ ನಿರೀಕ್ಷಿಸಿದ್ದೆವೋ ಆ ಕಾಲವು ಇದೀಗ ಸನ್ನಿಹಿತವಾಗಿದೆ. ನೀನೀಗ ವ್ಯಾಮೋಹದಿಂದ ಮೋಹಿತನಾಗಿಲ್ಲದಿದ್ದರೆ ಈಗಲೇ ಭೀಷ್ಮನನ್ನು ಪ್ರಹರಿಸು. ವಿರಾಟನಗರದಲ್ಲಿ ನಡೆದ ರಾಜರ ಸಮ್ಮೇಳನದಲ್ಲಿ ಹಿಂದೆ ನೀನು ಏನು ಹೇಳಿದ್ದೆಯೋ ಮತ್ತು ಸಂಜಯನೊಡನೆ ಏನು ಹೇಳಿದ್ದೆಯೋ ಅದನ್ನು ಸ್ಮರಿಸು :

**ಭೀಷ್ಮದ್ರೋಣಮುಖಾನ್ಸರ್ವಾನ್ಧಾರ್ತರಾಷ್ಟ್ರಸ್ಯ ಸೈನಿಕಾನ್ ।**
**ಸಾನುಬನ್ಧಾನ್ಹನಿಷ್ಯಾಮಿ ಯೇ ಮಾಂ ಯೋತ್ಸ್ಯನ್ತಿ ಸಂಗರೇ ॥೩೫॥**

"ನನ್ನೊಡನೆ ಯುದ್ಧಕ್ಕೆ ಬರುವ ಭೀಷ್ಮ-ದ್ರೋಣಪ್ರಮುಖರಾದ ಧೃತರಾಷ್ಟ್ರಪುತ್ರನ ಎಲ್ಲ ಸೈನಿಕರನ್ನೂ ಅವರ ಅನುಯಾಯಿಗಳೊಡನೆ ಸಂಹಾರಮಾಡುತ್ತೇನೆ"–ಎಂಬುದಾಗಿ ನೀನು ರಾಜರ ಮಹಾಸಭೆಯಲ್ಲಿಯೂ ಸಂಜಯನೊಡನೆಯೂ ಹೇಳಿದ್ದೆ. ಅದನ್ನೇ ಈಗ ಮಾಡಿ ತೋರಿಸು. ಅರಿಂದಮನೇ! ನಿನ್ನ ಮಾತು ಸತ್ಯವಾದ ಮಾತಾಗಿ ಪರಿಣಮಿಸುವಂತೆ ಮಾಡು. ಕ್ಷತ್ರಧರ್ಮವನ್ನು ಸ್ಮರಿಸಿಕೊಂಡು ಮನಸ್ಸಿನ ಕಶ್ಮಲವನ್ನು ದೂರಮಾಡಿ (ವಿಗತಜ್ವರನಾಗಿ) ಯುದ್ಧಮಾಡು."

ಮಹಾರಾಜ! ವಾಸುದೇವನಿಂದ ಈ ಪ್ರಕಾರ ಪ್ರೋತ್ಸಾಹಿತನಾದ ಅರ್ಜುನನು ದೃಷ್ಟಿಯನ್ನು ಓರೆಮಾಡಿಕೊಂಡು ಅಧೋಮುಖನಾಗಿ, ಯುದ್ಧಮಾಡಲು ಇಚ್ಛೆಯೇ ಇಲ್ಲದವನಂತೆ ಶ್ರೀಕೃಷ್ಣನನ್ನು ಕುರಿತು ಹೇಳಿದನು:

**ಅವಧ್ಯಾನಾಂ ವಧಂ ಕೃತ್ವಾ ರಾಜ್ಯಂ ವಾ ನರಕೋತ್ತರಮ್ ।**
**ದುಃಖಾನಿ ವನವಾಸೇ ವಾ ಕಿಂ ನು ಮೇ ಸುಕೃತಂ ಭವೇತ್ ॥೩೬॥**

"ಅವಧ್ಯರಾದ ಮಹಾಪುರುಷರನ್ನು ವಧೆಮಾಡಿ ನರಕಕ್ಕಿಂತಲೂ

ಹೆಚ್ಚು ನಿಂದ್ಯವಾದ ರಾಜ್ಯವನ್ನು ಅನುಭವಿಸುವುದು ಉತ್ತಮವೇ? ವನವಾಸದಲ್ಲಿಯೇ ಇದ್ದು ದುಃಖಗಳನ್ನೇ ಅನುಭವಿಸುವುದು ಒಳ್ಳೆಯದೇ? ಈ ಎರಡರಲ್ಲಿ ಯಾವುದು ಶ್ರೇಯಸ್ಕರ? (ಈ ವಿಷಯದಲ್ಲಿ ನನ್ನ ಮನಸ್ಸು ಡೋಲಾಯಮಾನವಾಗಿಯೇ ಉಳಿದಿದೆ.)" (ಅರ್ಜುನನು ತನ್ನ ಸ್ವಭಾವಾನು ಗುಣವಾಗಿ ಈ ಮಾತನ್ನು ಹೇಳಿದರೂ ಯುದ್ಧಮಾಡುವುದಿಲ್ಲವೆಂದು ಶ್ರೀಕೃಷ್ಣನೊಡನೆ ಹೇಳುವ ಧೈರ್ಯವು ಅವನಿಗಿಲ್ಲ. ಮುಂದಿನ ಮಾತಿನಲ್ಲಿಯೇ ಭೀಷ್ಮನಲ್ಲಿಗೆ ರಥವನ್ನು ಒಯ್ಯಲು ಶ್ರೀಕೃಷ್ಣನಿಗೆ ಹೇಳುತ್ತಾನೆ.)

"ಮಾಧವ! ಭೀಷ್ಮನೆಲ್ಲಿರುವನೋ ಅಲ್ಲಿಗೇ ಅಶ್ವಗಳನ್ನು ಪ್ರಚೋದಿಸು. (ನನಗೆ ಇಷ್ಟವಿರಲಿ, ಇಲ್ಲದಿರಲಿ) ನಿನ್ನ ಮಾತಿನಂತೆ ನಾನು ನಡೆದು ಕೊಳ್ಳುತ್ತೇನೆ. ಕುರುಪಿತಾಮಹನಾದ ದುರ್ಧರ್ಷನಾದ ಭೀಷ್ಮನನ್ನು ನಾನು ಕೆಳಕ್ಕೆ ಕೆಡವುತ್ತೇನೆ."

ಅರ್ಜುನನ ಮಾತಿನಂತೆ ಶ್ರೀಕೃಷ್ಣನು, ಸೂರ್ಯನಂತೆಯೇ ದುಷ್ಪ್ರೇಕ್ಷ್ಯನಾಗಿದ್ದ ಭೀಷ್ಮನು ಯುದ್ಧಮಾಡುತ್ತಿದ್ದ ಸ್ಥಳಕ್ಕೆ ಬೆಳ್ಳಿಯ ಬಣ್ಣದಿಂದ ಕೂಡಿದ್ದ ಕುದುರೆಗಳನ್ನು ದೌಡಾಯಿಸಿದನು. ಕುಂತಿಯಮಗನಾದ ಅರ್ಜುನನು ಭೀಷ್ಮನೊಡನೆ ಯುದ್ಧಮಾಡಲು ಉದ್ಯತನಾದುದನ್ನು ಕಂಡು ಓಡಿಹೋಗುತ್ತಿದ್ದ ಯುಧಿಷ್ಠಿರನ ವಿಶಾಲಸೇನೆಯು ಹಿಂದಿರುಗಿತು. ಅನಂತರ ಕುರುಶ್ರೇಷ್ಠನಾದ ಭೀಷ್ಮನು ಸಿಂಹದಂತೆ ಪದೇ-ಪದೇ ಗರ್ಜಿಸುತ್ತಾ ಧನಂಜಯನ ರಥವನ್ನು ಬಹುಶೀಘ್ರವಾಗಿ ಬಾಣಗಳಿಂದ ಮುಚ್ಚಿಬಿಟ್ಟನು. ಒಂದೇ ಕ್ಷಣದ ಸಮಯದಲ್ಲಿ ರಥದಲ್ಲಿ ಕುಳಿತಿದ್ದ ಅರ್ಜುನನಾಗಲೀ ಅವನ ಸಾರಥಿಯಾಗಿದ್ದ ಶ್ರೀಕೃಷ್ಣನಾಗಲೀ, ಅವನ ಕುದುರೆಗಳಾಗಲೀ–ಕಾಣಲೇ ಇಲ್ಲ. ಭೀಷ್ಮನ ಅಸಂಖ್ಯಾತವಾದ ಬಾಣಗಳ ವೃಷ್ಟಿಯಿಂದಾಗಿ ಎಲ್ಲಿ ಏನು ನಡೆಯುತ್ತಿದೆಯೆಂಬುದು ಯಾರಿಗೂ ತಿಳಿಯುತ್ತಿರಲಿಲ್ಲ. ಪಾರ್ಥನ ಸಾರಥಿ ಯಾಗಿದ್ದ ವಾಸುದೇವನು ಸ್ವಲ್ಪವಾದರೂ ವಿಚಲಿತನಾಗದೇ ಧೈರ್ಯವನ್ನು ತೆಗೆದುಕೊಂಡು ಭೀಷ್ಮನ ಬಾಣಗಳಿಂದ ಕ್ಷತ-ವಿಕ್ಷತವಾದ ಕುದುರೆಗಳನ್ನು ಚಪ್ಪರಿಸಿ ಪ್ರೋತ್ಸಾಹಿಸಿದನು. ಅನಂತರ ಪಾರ್ಥನು ಮೇಘಕ್ಕೆ ಸಮಾನವಾದ ಶಬ್ದದಿಂದ ಕೂಡಿದ್ದ ದಿವ್ಯವಾದ ಗಾಂಡೀವಧನುಸ್ಸನ್ನು ತೆಗೆದುಕೊಂಡು ನಿಶಿತವಾದ ಬಾಣಗಳಿಂದ ಭೀಷ್ಮನ ಧನುಸ್ಸನ್ನು ಕತ್ತರಿಸಿ ಕೆಳಕ್ಕೆ ಬೀಳಿಸಿದನು.

ಧನುಸ್ಸಿನಿಂದ ವಿಹೀನನಾದ ಕೌರವ್ಯನು ಪುನಃ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ನಿಮೇಷಮಾತ್ರದಲ್ಲಿ ಶಿಂಜಿನಿಯನ್ನು ಬಿಗಿದು ಸಜ್ಜುಗೊಳಿಸಿ ಮೇಘಕ್ಕೆ ಸಮಾನವಾದ ಧ್ವನಿಯಿಂದ ಕೂಡಿದ್ದ ಧನುಸ್ಸನ್ನು ಎರಡು ಕೈಗಳಿಂದಲೂ ಸೆಳೆದನು. ಕ್ರುದ್ಧನಾದ ಅರ್ಜುನನು ನಿಮೇಷಾಂತರದಲ್ಲಿಯೇ ಭೀಷ್ಮನ ನೂತನ ಧನುಸ್ಸನ್ನೂ ಕತ್ತರಿಸಿಬಿಟ್ಟನು. ಶಾಂತನುವಿನ ಮಗನಾದ ಭೀಷ್ಮನು ಅರ್ಜುನನ ಆ ಹಸ್ತಲಾಘವವನ್ನು ಬಹಳವಾಗಿ ಪ್ರಶಂಸಿಸಿದನು. ಧನುಷ್ಮಂತರಲ್ಲಿ ಶ್ರೇಷ್ಠನಾದ ಅರ್ಜುನನನ್ನು ಕುರಿತು **"ಸಾಧು-ಸಾಧು ಮಹಾಬಾಹೋ! ಸಾಧು-ಸಾಧು ಕುಂತೀಪುತ್ರ!"**–ಹೀಗೆಂಬುದಾಗಿ ಹೇಳಿ ಮತ್ತೊಂದು ಸುಂದರವಾದ ಧನುಸ್ಸನ್ನು ತೆಗೆದುಕೊಂಡು ಪಾರ್ಥನ ರಥದ ಕಡೆಗೆ ನೂರಾರು ಬಾಣಗಳನ್ನು ಬಿಟ್ಟನು. ವಾಸುದೇವನು ಅನೇಕ ವಿಧವಾದ ಮಂಡಲಕ್ರಮದಲ್ಲಿ ಕುದುರೆಗಳನ್ನು ತಿರುಗಿಸುತ್ತಾ ಭೀಷ್ಮನು ಬಿಟ್ಟ ಬಾಣ ಗಳನ್ನು ವ್ಯರ್ಥಗೊಳಿಸುತ್ತಾ ಅಶ್ವನಯನದಲ್ಲಿ ತನಗಿದ್ದ ಅದ್ಭುತಶಕ್ತಿಯನ್ನು ಪ್ರದರ್ಶಿಸಿದನು.

ಆದರೂ ಸಹ ಭೀಷ್ಮನು ಶರಪ್ರಹಾರವನ್ನು ಮುಂದುವರಿಸುತ್ತಲೇ ಇದ್ದನು. ಎದುರಾದ ಗೂಳಿಯ ಕೊಂಬುಗಳ ತಿವಿತಗಳಿಂದ ಗಾಯಗೊಂಡ ರೋಷಯುಕ್ತವಾದ ಎರಡು ಎತ್ತುಗಳಂತೆ–ಭೀಷ್ಮನ ಬಾಣಗಳಿಂದ ಕ್ಷತ-ವಿಕ್ಷತರಾದ ಕೃಷ್ಣಾರ್ಜುನರು ಶೋಭಿಸಿದರು.

ಯದ್ಯಪಿ ಅರ್ಜುನನು ಕೃಷ್ಣನ ಮಾತಿನಂತೆ ಭೀಷ್ಮನೊಡನೆ ಯುದ್ಧ ದಲ್ಲಿ ತೊಡಗಿದ್ದರೂ ರಭಸದಿಂದ ಪ್ರಯತ್ನಪೂರ್ವಕವಾಗಿ ಯುದ್ಧಮಾಡು ತ್ತಿರಲಿಲ್ಲ. ಪಾರ್ಥನು ಮೃದುಪೂರ್ವವಾಗಿ ಯುದ್ಧಮಾಡುತ್ತಿರುವುದನ್ನೂ, ಅದಕ್ಕೆ ಪ್ರತಿಯಾಗಿ ಭೀಷ್ಮನು ಸತತವಾಗಿ ಬಾಣಗಳ ಮಳೆಯನ್ನೇ ಸೃಷ್ಟಿಸು ತ್ತಿರುವುದನ್ನೂ, ಎರಡು ಸೈನ್ಯಗಳ ಮಧ್ಯದಲ್ಲಿ ಸೂರ್ಯನಂತೆಯೇ ಪ್ರಜ್ವಲಿ ಸುತ್ತಿದ್ದ ಭೀಷ್ಮನು ಪಾಂಡವರ ಸೈನ್ಯದಲ್ಲಿ ಉತ್ತಮೋತ್ತಮರಾದ ವೀರರನ್ನು ಆಯ್ದಾಯ್ದು ಸಂಹರಿಸುತ್ತಿರುವುದನ್ನೂ, ಪ್ರಲಯವನ್ನೇ ಉಂಟುಮಾಡು ತ್ತಿರುವನೋ ಎಂಬಂತೆ ಯುಧಿಷ್ಠಿರನ ಸೈನ್ಯವನ್ನು ಧ್ವಂಸಮಾಡುತ್ತಿರುವು ದನ್ನೂ ನೋಡಿ ಮಹಾಬಾಹುವಾದ ಶತ್ರುವೀರಹಂತಕನಾದ ಮಾಧವನ ಸಹನೆಯು ಮಿತಿಮೀರಿತು. ಮಹಾಯೋಗಿಯಾದ ವಾಸುದೇವನು

ಅರ್ಜುನನ ಬೆಳ್ಳಿಯ ಬಣ್ಣದ ಕುದುರೆಗಳ ಕಡಿವಾಣಗಳನ್ನು ಕೆಳಕ್ಕೆ ಎಸೆದು ಮಹಾರಥದಿಂದ ಧುಮುಕಿದನು. ಭುಜಗಳನ್ನೇ ಆಯುಧಗಳನ್ನಾಗಿ ಮಾಡಿಕೊಂಡ, ಬಲಿಷ್ಠನಾದ, ತೇಜಸ್ವಿಯಾದ ಶ್ರೀಕೃಷ್ಣನು ಚಾವಟಿಯನ್ನೇ ಕೈಯಲ್ಲಿ ಹಿಡಿದು ಸಿಂಹದಂತೆ ಬಾರಿ-ಬಾರಿಗೂ ಗರ್ಜನೆಮಾಡುತ್ತಾ ಭೀಷ್ಮನ ಕಡೆಗೆ ಓಡಿದನು. ಕಾಲುಗಳ ಸಂಘಟ್ಟನೆಯಿಂದಲೇ ಜಗತ್ತನ್ನು ಸೀಳಿಬಿಡುವನೋ ಎಂಬಂತೆ ಕಾಣುತ್ತಿದ್ದ, ಜಗದೀಶ್ವರನಾದ, ಕ್ರೋಧದಿಂದ ಕೆಂಪಾದ ಕಣ್ಣುಗಳನ್ನು ಹೊಂದಿದ್ದ, ಅಪಾರಕಾಂತಿಮಂತನಾದ ಶ್ರೀಕೃಷ್ಣನು ಭೀಷ್ಮನನ್ನು ಸಂಹಾರಮಾಡುವ ಇಚ್ಛೆಯಿಂದ ಅವನ ಬಳಿಗೆ ಧಾವಿಸಿದನು. ಆ ಸಮಯದಲ್ಲಿ ಶ್ರೀಕೃಷ್ಣನು ನಿನ್ನ ಸೈನ್ಯಗಳ ಪ್ರಾಣಗಳನ್ನು ಅಪಹರಿಸುತ್ತಿರುವಂತೆಯೇ ಕಾಣುತ್ತಿದ್ದನು. ಆ ಯುದ್ಧಸಮಯದಲ್ಲಿ ಮಾಧವನು ಭೀಷ್ಮನ ಸಮೀಪಕ್ಕೆ ಬಂದುದನ್ನು ನೋಡಿ 'ಭೀಷ್ಮನು ಹತನಾದನು' 'ಹತೋ ಭೀಷ್ಮಃ-ಹತೋ ಭೀಷ್ಮಃ'–ಎಂಬ ಮಾತುಗಳು ರಣಾಂಗಣದ ಸುತ್ತಲೂ ಕೇಳಿಬರುತ್ತಿದ್ದಿತು. ಹೊಂಬಣ್ಣದ ರೇಷ್ಮೆಯ ವಸ್ತ್ರವನ್ನು (ಪೀತಾಂಬರವನ್ನು) ಧರಿಸಿದ್ದ, ಇಂದ್ರನೀಲಮಣಿಯಂತೆ ಶ್ಯಾಮಲವರ್ಣನಾಗಿದ್ದ ಜನಾರ್ದನನು ಭೀಷ್ಮನ ಸಮೀಪಕ್ಕೆ ಓಡಿಹೋಗುತ್ತಿದ್ದಾಗ ಮಿಂಚಿನ ಮಾಲೆಗಳಿಂದ ಕೂಡಿದ ನೀಲಮೇಘದಂತೆಯೇ ಪ್ರಕಾಶಿಸುತ್ತಿದ್ದನು. ಸಿಂಹವು ಮದಗಜವನ್ನು ಅಟ್ಟಿಸಿಕೊಂಡು ಹೋಗುವಂತೆ–ಪಡ್ಡೆಯಾದ ಹೋರಿಯು ಗೂಳಿಯನ್ನು ಅಟ್ಟಿಸಿಕೊಂಡು ಹೋಗುವಂತೆ–ಯಾದವರ್ಷಭನು ಸಿಂಹನಾದಮಾಡುತ್ತಾ ವೇಗವಾಗಿ ಭೀಷ್ಮನ ಕಡೆಗೆ ಓಡಿದನು. ಪುಂಡರೀಕಾಕ್ಷನು ತನ್ನ ಕಡೆಗೆ ರಭಸದಿಂದ ಬರುತ್ತಿರುವುದನ್ನು ಕಂಡು ಭೀಷ್ಮನು ಸ್ವಲ್ಪವೂ ಭಯಭೀತನಾಗದೇ ಧನುಸ್ಸಿನ ಶಿಂಜಿನಿಯನ್ನು ಸುದೀರ್ಘವಾಗಿ ಸೆಳೆದನು. ಅವ್ಯಗ್ರನಾದ, ಅಸಂಭ್ರಾಂತವಾದ ಬುದ್ಧಿಯಿಂದ ಕೂಡಿದ್ದ ಭೀಷ್ಮನು ಮಾಧವನನ್ನು ಕುರಿತು ಹೇಳಿದನು :

**ಏಹ್ಯೇಹಿ ಪುಂಡರೀಕಾಕ್ಷ ದೇವದೇವ ನಮೋಽಸ್ತು ತೇ ।**
**ಮಾಮದ್ಯ ಸಾತ್ವತಶ್ರೇಷ್ಠ ಪಾತಯಸ್ವ ಮಹಾಹವೇ ॥೬೪॥**

**ತ್ವಯಾ ಹಿ ದೇವ ಸಂಗ್ರಾಮೇ ಹತಸ್ಯಾಪಿ ಮಮಾನಘ ।**
**ಶ್ರೇಯ ಏವಂ ಪರಂ ಕೃಷ್ಣ ಲೋಕೇ ಭವತಿ ಸರ್ವತಃ ॥೬೫॥**

"ಬಾ, ಕೃಷ್ಣ! ಬಾ, ಪುಂಡರೀಕಾಕ್ಷ! ದೇವದೇವ! ನಿನಗೆ ನಮಸ್ಕಾರ ವಿರಲಿ. ಸಾತ್ವತಶ್ರೇಷ್ಠನೇ! ಈ ಮಹಾಯುದ್ಧದಲ್ಲಿ ಈಗಲೇ ನನ್ನನ್ನು ಸಂಹರಿಸು. ಪಾಪರಹಿತನೇ! ನಿನ್ನಿಂದ ನಾನು ಯುದ್ಧದಲ್ಲಿ ಹತನಾದರೂ ಲೋಕದಲ್ಲಿ ನನಗೆ ಸರ್ವಶ್ರೇಷ್ಠವಾದ ಕಲ್ಯಾಣವೇ ಲಭಿಸುತ್ತದೆ.

**ಸಮ್ಭಾವಿತೋಽಸ್ಮಿ ಗೋವಿನ್ದ ತ್ರೈಲೋಕ್ಯೇನಾದ್ಯ ಸಂಯುಗೇ ।**
**ಪ್ರಹರಸ್ವ ಯಥೇಷ್ಟಂ ವೈ ದಾಸೋಽಸ್ಮಿ ತವ ಚಾನಘ ॥೬೬॥**

ಗೋವಿಂದ! ನಾನೀಗ ಇಂದಿನ ಈ ಯುದ್ಧದಲ್ಲಿ ಮೂರು ಲೋಕ ದವರಿಂದಲೂ ಸಮ್ಮಾನಿತನಾಗಿದ್ದೇನೆ. ನಾನು ನಿನ್ನ ದಾಸನಾಗಿದ್ದೇನೆ. ಯಥೇಷ್ಟವಾಗಿ ಪ್ರಹರಿಸು, ಮಹಾನುಭಾವ!"

ಭೀಷ್ಮನು ಹೀಗೆ ಹೇಳುತ್ತಿರುವ ಸಮಯಕ್ಕೆ ಸರಿಯಾಗಿ ಮಹಾಬಾಹು ವಾದ ಅರ್ಜುನನೂ ಸಹ ಹಿಂದಿನಿಂದ ಓಡುತ್ತಲೇ ಬಂದು ಶ್ರೀಕೃಷ್ಣನನ್ನು ಎರಡು ಕೈಗಳಿಂದಲೂ ಹಿಡಿದುಕೊಂಡನು. ಪಾರ್ಥನು ಕೈಗಳಿಂದ ಬಲವಾಗಿ ಹಿಡಿದುಕೊಂಡರೂ ನಿಲ್ಲದೇ ರಾಜೀವಲೋಚನನಾದ, ಪುರುಷೋತ್ತಮ ನಾದ ಶ್ರೀಕೃಷ್ಣನು ಅರ್ಜುನನನ್ನೂ ಸೆಳೆದುಕೊಂಡೇ ವೇಗವಾಗಿ ಭೀಷ್ಮನ ಕಡೆಗೆ ಧಾವಿಸಿದನು. ಶತ್ರುವೀರಹಂತಕನಾದ ಅರ್ಜುನನು ಬಲವಾಗಿ ಶ್ರೀಕೃಷ್ಣನನ್ನು ಹಿಡಿದಿದ್ದರೂ ಶ್ರೀಕೃಷ್ಣನು ಹತ್ತು ಹೆಜ್ಜೆಗಳಷ್ಟು ಮುಂದೆ ಹೋದನು. ಹತ್ತನೆಯ ಹೆಜ್ಜೆಯಿಟ್ಟಾಗ ಅರ್ಜುನನು ಹೇಗೋ ಕಷ್ಟಪಟ್ಟು ಬಲಾತ್ಕಾರವಾಗಿ ಅವನೆರಡು ಕಾಲುಗಳನ್ನೂ ಹಿಡಿದುಬಿಟ್ಟನು. ಕ್ರೋಧಪೂರಿತವಾದ ಕಣ್ಣುಗಳನ್ನು ಹೊಂದಿದ್ದ, ನಾಗರಹಾವಿನಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದ, ಶ್ರೀಕೃಷ್ಣನನ್ನು ಕುರಿತು ಅವನ ಪಾದಗಳನ್ನು ಹಿಡಿದಿದ್ದ ಅರ್ಜುನನು ಪ್ರೇಮಪೂರ್ವಕವಾಗಿ ಈ ಮಾತುಗಳನ್ನು ಹೇಳಿದನು :

**ನಿವರ್ತಸ್ವ ಮಹಾಬಾಹೋ ನಾನೃತಂ ಕರ್ತುಮರ್ಹಸಿ ।**
**ಯತ್ತ್ವಯಾ ಕಥಿತಂ ಪೂರ್ವಂ ನ ಯೋತ್ಸ್ಯಾಮೀತಿ ಕೇಶವ ।**
**ಮಿಥ್ಯಾವಾದೀತಿ ಲೋಕಾಸ್ತ್ವಾಂ ಕಥಯಿಷ್ಯನ್ತಿ ಮಾಧವ ॥೭೨॥**

**ಮಮೈಷ ಭಾರಃ ಸರ್ವೋ ಹಿ ಹನಿಷ್ಯಾಮಿ ಪಿತಾಮಹಮ್ ।**
**ಶಪೇ ಕೇಶವ ಶಸ್ತ್ರೇಣ ಸತ್ಯೇನ ಸುಕೃತೇನ ಚ ॥೭೩॥**

“ಮಹಾಬಾಹುವೇ! ಕೇಶವ! ಹಿಂದಿರುಗುವವನಾಗು. ಮಿಥ್ಯಾಪ್ರತಿಜ್ಞ ನಾಗಬೇಡ. ನೀನು ಯುದ್ಧಮಾಡುವುದಿಲ್ಲವೆಂದು ಹಿಂದೆಯೇ ಹೇಳಿದ್ದೆ ಯಲ್ಲವೇ? ಹಾಗೆ ಹೇಳಿರುವ ನೀನು ಈಗೇನಾದರೂ ಭೀಷ್ಮನನ್ನು ವಧಿಸಿದರೆ ನಿನ್ನನ್ನು ‘ಮಿಥ್ಯಾವಾದೀ’ ಎಂದು ಜನರು ಹೇಳುತ್ತಾರೆ. ಯುದ್ಧಮಾಡುವ ಸಂಪೂರ್ಣಭಾರವು ನನ್ನದಾಗಿದೆ. ನಾನು ಪಿತಾಮಹನನ್ನು ವಧಿಸುತ್ತೇನೆ. ಕೇಶವ! ಈ ಮಾತನ್ನು ನಾನು ಶಸ್ತ್ರದ ಮೇಲೆ ಆಣೆಯಿಟ್ಟು, ಸತ್ಯದ ಮೇಲೆ ಆಣೆಯಿಟ್ಟು ಮತ್ತು ನಾನು ಮಾಡಿರುವ ಸುಕೃತದ ಮೇಲೆ ಆಣೆಯಿಟ್ಟು ಹೇಳುತ್ತೇನೆ.

ಶತ್ರುಸೂದನನೇ! ನಾನು ಎಲ್ಲ ಶತ್ರುಗಳನ್ನೂ ಕಡೆಗಾಣಿಸುತ್ತೇನೆ. ಪೂರ್ಣಚಂದ್ರನಂತಿರುವ, ದುರ್ಧರ್ಷನಾದ, ಮಹಾರಥನಾದ ಭೀಷ್ಮನನ್ನು ಅಂತ್ಯಕಾಲದಲ್ಲಿ ಅವನ ಇಚ್ಛಾನುಸಾರವಾಗಿಯೇ ಸಂಹಾರಮಾಡಲಿರುವು ದನ್ನು ನೀನು ಈಗಲೇ ಕಾಣುವೆ.”

ಮಾಧವನು ಮಹಾತ್ಮನಾದ ಫಾಲ್ಗುಣನ ಮಾತುಗಳನ್ನು ಕೇಳಿ ಅದಕ್ಕು ತ್ತರವಾಗಿ ಯಾವ ಮಾತನ್ನೂ ಆಡದೇ ಕ್ರೋಧಯುಕ್ತನಾಗಿಯೇ ರಥವನ್ನು ಪುನಃ ಹತ್ತಿದನು. ರಥಸ್ಥರಾಗಿದ್ದ ಆ ಇಬ್ಬರು ನರವ್ಯಾಘ್ರರ ಮೇಲೆ ಶಾಂತನು ವಿನ ಮಗನಾದ ಭೀಷ್ಮನು ಎರಡು ದೊಡ್ಡ ಪರ್ವತಗಳ ಮೇಲೆ ಮೇಘವು ಮಳೆಗರೆಯುವಂತೆ–ಪುನಃ ಬಾಣಗಳ ಮಳೆಗರೆದನು. ಗ್ರೀಷ್ಮರ್ತುವಿನಲ್ಲಿ ಸೂರ್ಯನು ಯಾವ ರೀತಿಯಲ್ಲಿ ತನ್ನ ಕಿರಣಗಳಿಂದ ಎಲ್ಲರ ತೇಜಸ್ಸನ್ನೂ ಅಪಹರಿಸುತ್ತಾನೆಯೋ–ಅದೇ ರೀತಿಯಲ್ಲಿ ನಿನ್ನ ತಂದೆಯಾದ ದೇವವ್ರತನೂ ತನ್ನ ಬಾಣಗಳಿಂದ ಯೋಧರ ಪ್ರಾಣಗಳನ್ನು ಅಪಹರಿಸಿಬಿಟ್ಟನು.

ಯಾವ ರೀತಿಯಲ್ಲಿ ಕೌರವರ ಸೈನ್ಯಗಳನ್ನು ಪಾಂಡವರು ಧ್ವಂಸಗೊಳಿಸಿ ದರೋ–ಅದೇ ರೀತಿಯಲ್ಲಿ ಪಾಂಡವರ ಸೈನ್ಯಗಳನ್ನೂ ನಿನ್ನ ತಂದೆಯಾದ ಭೀಷ್ಮನು ಭಗ್ನಗೊಳಿಸಿದನು. ಭೀಷ್ಮನ ಶರಗಳ ಪ್ರಹಾರದಿಂದಾಗಿ ಅನೇಕರು ಹತರಾದರು. ಅಳಿದುಳಿದವರು ಪಲಾಯನಮಾಡಿದರು. ಯಾರಿಗೂ ಯುದ್ಧ ಮಾಡುವುದರಲ್ಲಿ ಉತ್ಸಾಹವೇ ಇರಲಿಲ್ಲ. ಎಲ್ಲ ಸೈನಿಕರೂ ಚೈತನ್ಯರಹಿತರಾಗಿ ದ್ದರು. ತೇಜಸ್ಸಿನಿಂದ ಪ್ರಜ್ವಲಿಸುವ ಸೂರ್ಯನು ನಡುನೆತ್ತಿಯ ಮೇಲೆ ಬಂದಾಗ ಅವನನ್ನು ನೋಡಲಾಗದಂತೆ–ಅಪ್ರತಿಮತೇಜಸ್ವಿಯಾದ ಭೀಷ್ಮ

ನನ್ನು ನೋಡಲೂ ಕೂಡ ಪಾಂಡವರ ಕಡೆಯ ಯೋಧರು ಶಕ್ತರಾಗಿರಲಿಲ್ಲ. ನೂರಾರು-ಸಾವಿರಾರು ಸಂಖ್ಯೆಯಲ್ಲಿ ಪಾಂಡವರ ಕಡೆಯ ಸೈನಿಕರು ಭೀಷ್ಮ ನಿಂದ ಪ್ರತಿಕ್ಷಣದಲ್ಲಿಯೂ ವಧಿಸಲ್ಪಡುತ್ತಿದ್ದರು. ಅತಿಮಾನುಷವೂ, ಅತ್ಯಂತಪರಾಕ್ರಮಯುಕ್ತವೂ ಆಗಿದ್ದ ಭಯಂಕರಕರ್ಮಗಳನ್ನು ಮಾಡುತ್ತಿದ್ದ ಭೀಷ್ಮನನ್ನು ಭಯಪೀಡಿತರಾದ ಪಾಂಡವರು ಸುಮ್ಮನೇ ನಿಂತು ನೋಡುತ್ತಿ ದ್ದರು. ಪಲಾಯನಮಾಡುತ್ತಿದ್ದ ಪಾಂಡವಸೈನಿಕರು ಕೆಸರಿನಲ್ಲಿ ಸಿಕ್ಕಿಬಿದ್ದ ಹಸು ಗಳಂತೆ–ರಕ್ಷಕರಾರನ್ನೂ ಕಾಣದೇಹೋದರು. ಬಲಿಷ್ಠನಾದ ಭೀಷ್ಮನಿಂದ ದುರ್ಬಲರಾದ ಸೈನಿಕರು ಇರುವೆಗಳೋಪಾದಿಯಲ್ಲಿ ಹೊಸಕಿಹಾಕಲ್ಪಟ್ಟರು. ಮಹಾರಾಜ! ಮಹಾರಥಿಯಾದ ಭೀಷ್ಮನು ಅವಿಚಲನಾಗಿ ನಿಂತು ಬಾಣಗಳ ಮಳೆಗರೆಯುತ್ತಾ ಪಾಂಡವರ ಕಡೆಯ ರಾಜರನ್ನು ಸಂತಾಪಗೊಳಿಸುತ್ತಿದ್ದನು. ಬಾಣಗಳೆಂಬ ಕಿರಣಗಳಿಂದ ಸುಶೋಭಿಸುತ್ತಿದ್ದ ಮತ್ತು ಸೂರ್ಯನಂತೆಯೇ ಸಂತಾಪದಾಯಕನಾಗಿದ್ದ ಭೀಷ್ಮನನ್ನು ನೋಡಲೂ ಕೂಡ ಶತ್ರುಪಕ್ಷದವರಿಗೆ ಸಾಧ್ಯವಾಗಲಿಲ್ಲ. ಭೀಷ್ಮನು ಈ ರೀತಿಯಲ್ಲಿ ಪಾಂಡವರ ಸೈನ್ಯವನ್ನು ಧ್ವಂಸಮಾಡುತ್ತಿದ್ದಾಗ ಸಹಸ್ರರಶ್ಮಿಯಾದ ಸೂರ್ಯನು ಅಸ್ತಾಚಲಕ್ಕೆ ಹೊರಟುಹೋದನು. ಅನಂತರ ಯುದ್ಧಶ್ರಮದಿಂದ ಬಹಳವಾಗಿ ಕ್ಲೇಶ ಗೊಂಡಿದ್ದ ಸೈನಿಕರಿಗೆ ಯುದ್ಧದಿಂದ ಹಿಂದಿರುಗಬೇಕೆಂಬ ಮನಸ್ಸುಂಟಾ ಯಿತು."

೧೦೬ನೆಯ ಅಧ್ಯಾಯವು ಮುಗಿಯಿತು.

೧೦೭ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಒಂಬತ್ತನೆಯ ದಿವಸದ ಯುದ್ಧದ ಪರಿಸಮಾಪ್ತಿ : ರಾತ್ರಿಯಲ್ಲಿ ಪಾಂಡವರ ಗುಪ್ತಸಮಾಲೋಚನೆ : ಶ್ರೀಕೃಷ್ಣಸಹಿತರಾಗಿ ಪಾಂಡವರು ಭೀಷ್ಮನನ್ನು ಸಂಧಿಸಿದುದು : ಭೀಷ್ಮನ ವಧೋಪಾಯವನ್ನು ತಿಳಿದುಕೊಂಡುದು

ಸಂಜಯನು ಮುಂದುವರಿದು ಹೇಳುತ್ತಾನೆ :

"ಮಹಾರಾಜ! ಅವರಿನ್ನೂ ಯುದ್ಧಮಾಡುತ್ತಿರುವಾಗಲೇ ಸೂರ್ಯನು ಅಸ್ತಂಗತನಾಗಲಾಗಿ ಭಯಂಕರವಾದ ಸಂಧ್ಯಾಕಾಲವು ಪ್ರಾಪ್ತ

ವಾಯಿತು. ಆ ಸಮಯದಲ್ಲಿ ನಾವುಗಳಾರೂ ಯುದ್ಧವನ್ನು ನೋಡಲಾಗಲೇ ಇಲ್ಲ. ಅನಂತರ ಯುಧಿಷ್ಠಿರರಾಜನು–ಭೀಷ್ಮನಿಂದ ಅವ್ಯಾಹತವಾಗಿ ಸಂಹರಿಸಲ್ಪಡುತ್ತಿದ್ದ ಸೈನಿಕರು ಭಯಪಟ್ಟು ಅಸ್ತ್ರಗಳನ್ನು ಕೆಳಗಿಟ್ಟು ಹಿಮ್ಮೆಟ್ಟಿ ಪಲಾಯನಪರಾಯಣರಾಗುತ್ತಿದ್ದುದನ್ನೂ, ಮಹಾರಥನಾದ ಭೀಷ್ಮನು ಸಂಕ್ರುದ್ಧನಾಗಿ ತನ್ನ ಸೈನ್ಯವನ್ನು ಅನವರತವಾಗಿ ಪೀಡಿಸುತ್ತಿದ್ದುದನ್ನೂ, ಸೋಮಕರು ಪರಾಜಿತರಾದುದನ್ನೂ, ಯುದ್ಧದಲ್ಲಿ ಆಸಕ್ತಿಯಿಲ್ಲದ ಮಹಾ ರಥರನ್ನೂ, ಸಂಧ್ಯಾಕಾಲವು ಪ್ರಾಪ್ತವಾದುದನ್ನೂ ನೋಡಿ, ಸ್ವಲ್ಪಹೊತ್ತು ಯೋಚಿಸಿ, ತತ್ಕಾಲದಲ್ಲಿ ಸೇನೆಯನ್ನು ಹಿಂದಕ್ಕೆ ತೆಗೆದುಕೊಳ್ಳುವುದೇ ಸೂಕ್ತವೆಂದು ಭಾವಿಸಿದನು. ಹೀಗೆ ನಿಶ್ಚಯಿಸಿದ ಯುಧಿಷ್ಠಿರನು ತನ್ನ ಎಲ್ಲ ಸೈನ್ಯವನ್ನೂ ಹಿಂದಕ್ಕೆ ಕರೆಸಿಕೊಂಡನು. ಅದೇ ರೀತಿಯಲ್ಲಿ ನಿನ್ನ ಸೈನಿಕರೂ ಯುದ್ಧದಿಂದ ಪ್ರತಿನಿವೃತ್ತರಾದರು.

ಸೈನ್ಯವನ್ನು ಹಿಂದೆಗೆದುಕೊಂಡು ಶಿಬಿರಗಳಿಗೆ ಹೊರಟುಹೋದನಂತರ ಯುದ್ಧಸಮಯದಲ್ಲಿ ಕ್ಷತ-ವಿಕ್ಷತರಾಗಿದ್ದ ಮಹಾರಥರೆಲ್ಲರೂ ತಮ್ಮ-ತಮ್ಮ ಶಿಬಿರಗಳಲ್ಲಿ ವಿಶ್ರಾಂತಿಯನ್ನು ಪಡೆದುಕೊಂಡರು. ಅತ್ತ ಪಾಂಡವರ ಶಿಬಿರಗಳಲ್ಲಿ ಭೀಷ್ಮನ ಅಂದಿನ ಅದ್ಭುತಸಂಹಾರಕ್ರಿಯೆಯನ್ನು ಚಿಂತಿಸುತ್ತಿದ್ದ ಮತ್ತು ಬಾಣಗಳಿಂದ ಬಹಳವಾಗಿ ಪೀಡಿತರಾಗಿದ್ದ ಪಾಂಡವರ ಮನಸ್ಸಿಗೆ ಶಾಂತಿಯೆಂಬುದೇ ಇರಲಿಲ್ಲ.

ಇತ್ತ ನಮ್ಮ ಶಿಬಿರದಲ್ಲಿ ಪಾಂಡವರನ್ನೂ, ಸೃಂಜಯರನ್ನೂ ಪರಾಜಯ ಗೊಳಿಸಿ ವಿಜಯಿಯಾಗಿ ಬಂದಿದ್ದ ಭೀಷ್ಮನನ್ನು ನಿನ್ನ ಮಕ್ಕಳು ಅಭಿನಂದಿಸಿ, ಸತ್ಕರಿಸಿದರು. ಹೃಷ್ಟರಾಗಿದ್ದ ಕುರುಗಳೊಡನೆ ಭೀಷ್ಮನು ತನ್ನ ಶಿಬಿರದಲ್ಲಿ ವಿಶ್ರಾಂತಿಯನ್ನು ಪಡೆಯುತ್ತಿದ್ದನು.

ಸರ್ವಪ್ರಾಣಿಗಳನ್ನೂ ಪ್ರಮೋಹನಗೊಳಿಸುವ ರಾತ್ರಿಯು ಸನ್ನಿಹಿತ ವಾಯಿತು. ಘೋರವಾಗಿದ್ದ ಆ ರಾತ್ರಿಯ ಮೊದಲನೆಯ ಯಾಮದಲ್ಲಿ ಪಾಂಡವರೂ, ವೃಷ್ಣಿಗಳೂ, ದುರಾಧರ್ಷರಾದ ಸೃಂಜಯರೂ ಮಂತ್ರಾ ಲೋಚನೆಗಾಗಿ ಕುಳಿತುಕೊಂಡರು. ಮಹಾಬಲರಾದ, ಮಂತ್ರನಿಶ್ಚಯ ಕೋವಿದರಾದ ಅವರೆಲ್ಲರೂ ಸ್ವಸ್ಥಚಿತ್ತರಾಗಿ ಸಮಯಾನುಸಾರವಾಗಿ ತಮ್ಮ

ಮುಂದಿನ ನಿಃಶ್ರೇಯಸದ ವಿಷಯದಲ್ಲಿ ಸಮಾಲೋಚನೆಯನ್ನು ನಡೆಸಿದರು. ಬಹಳ ಹೊತ್ತಿನವರೆಗೂ ತನ್ನ ಬಂಧು-ಮಿತ್ರರೊಡನೆ ಸಮಾಲೋಚಿಸುತ್ತಿದ್ದು ಬಳಿಕ ಯುಧಿಷ್ಠಿರನು ವಾಸುದೇವನ ಕಡೆಗೆ ತಿರುಗಿ ಈ ಮಾತನ್ನು ಹೇಳಿದನು: "ಕೃಷ್ಣ! ನೋಡು ; ಮಹಾತ್ಮನಾದ ಭೀಮಪರಾಕ್ರಮನಾದ ಭೀಷ್ಮನು–ಆನೆಯೊಂದು ಲಾಳದ ಕಡ್ಡಿಗಳಿರುವ ಅರಣ್ಯವನ್ನು ಧ್ವಂಸಮಾಡುವಂತೆ–ನನ್ನ ಸೈನ್ಯವೆಲ್ಲವನ್ನೂ ವಿನಾಶಮಾಡುತ್ತಿದ್ದಾನೆ. ವೃದ್ಧಿಹೊಂದಿದ ಅಗ್ನಿಯಂತೆ–ನನ್ನ ಸೈನ್ಯಗಳಲ್ಲಿ ನುಗ್ಗಿ ಬಾಣಗಳೆಂಬ ಜ್ವಾಲೆಗಳಿಂದ ನನ್ನ ಸೈನಿಕರ ಪ್ರಾಣಗಳನ್ನು ಆಸ್ವಾದಿಸುವ ಮಹಾತ್ಮನಾದ ಭೀಷ್ಮನನ್ನು ನಾವು ನೋಡಲೂ ಸಹ ಉತ್ಸಾಹಿತರಾಗುತ್ತಿಲ್ಲ. ಯಾವ ರೀತಿಯಲ್ಲಿ ವಿಷದಿಂದ ಕೂಡಿದ ಮಹಾನಾಗನಾದ ತಕ್ಷಕನು ಘೋರನಾಗಿರುತ್ತಾನೆಯೋ–ಅದೇ ರೀತಿಯಲ್ಲಿ ಕ್ರುದ್ಧನಾದ, ತೀಕ್ಷ್ಣಾಸ್ತ್ರನಾದ, ಪ್ರತಾಪವಂತನಾದ, ಧನುರ್ಧರನಾದ ಭೀಷ್ಮನು ನಿಶಿತವಾದ ಬಾಣಗಳನ್ನು ಬಿಡುವ ಸಮಯದಲ್ಲಿ ಬಹುಘೋರರೂಪನಾಗಿ ಕಾಣುತ್ತಾನೆ.

**ಶಕ್ಯೋ ಜೇತುಂ ಯಮಃ ಕ್ರುದ್ಧೋ ವಜ್ರಪಾಣಿಶ್ಚ ದೇವರಾಟ್ ।**
**ವರುಣಃ ಪಾಶಭೃಚ್ಚಾಪಿ ಸಗದೋ ವಾ ಧನೇಶ್ವರಃ ।**
**ನ ತು ಭೀಷ್ಮಃ ಸುಸಂಕ್ರುದ್ಧಃ ಶಕ್ಯೋ ಜೇತುಂ ಮಹಾಹವೇ ॥೧೭॥**

ಕೃಷ್ಣ! ನನ್ನ ಅಭಿಪ್ರಾಯದಲ್ಲಿ ಕ್ರುದ್ಧನಾದ ಯಮಧರ್ಮನನ್ನು ಜಯಿಸಲು ಸಾಧ್ಯವಿದೆ. ವಜ್ರಪಾಣಿಯಾದ ದೇವರಾಜನನ್ನಾದರೂ ಜಯಿಸಬಹುದು. ಪಾಶಾಯುಧನಾದ ವರುಣನನ್ನೂ ಪರಾಜಯಗೊಳಿಸಬಹುದು. ಗದಾಪಾಣಿಯಾದ ಕುಬೇರನನ್ನಾದರೂ ಜಯಿಸಬಹುದು. ಆದರೆ ಸಂಕ್ರುದ್ಧನಾದ ಭೀಷ್ಮನನ್ನು ಯುದ್ಧದಲ್ಲಿ ಜಯಿಸುವ ಸಾಧ್ಯತೆಯೇ ಇಲ್ಲ.

ನಾನು ಇಂತಹ ಸ್ಥಿತಿಯಲ್ಲಿರುವಾಗ (ಭೀಷ್ಮನನ್ನು ಜಯಿಸಲಾಗದ ಸ್ಥಿತಿಯಲ್ಲಿರುವಾಗ) ನನ್ನ ಬುದ್ಧಿಯ ದೌರ್ಬಲ್ಯದಿಂದಲೇ ಕೌರವರೊಡನೆ ಯುದ್ಧದಲ್ಲಿ ತೊಡಗಿ ಈಗ ಭೀಷ್ಮನನ್ನು ಎದುರಿಸಬೇಕಾದ ಸಂದರ್ಭವು ಒದಗಿ ಬಂದಿರುವಾಗ (ಅವನನ್ನು ಜಯಿಸಲು ಯಾವ ಉಪಾಯವನ್ನೂ ಕಾಣದೇ) ಶೋಕಸಾಗರದಲ್ಲಿ ಮುಳುಗಿಬಿಟ್ಟಿದ್ದೇನೆ.

**ವನಂ ಯಾಸ್ಯಾಮಿ ದುರ್ಧರ್ಷ ಶ್ರೇಯೋ ವೈ ತತ್ರ ಮೇ ಗತಮ್ ।**
**ನ ಯುದ್ಧಂ ರೋಚತೇ ಕೃಷ್ಣ ಹನ್ತಿ ಭೀಷ್ಮೋ ಹಿ ನಃ ಸದಾ ॥೯॥**

ದುರ್ಧರ್ಷನೇ! ಕೃಷ್ಣ! ನಾನು ಕಾಡಿಗೆ ಹೊರಟುಹೋಗುತ್ತೇನೆ. ಕಾಡಿಗೆ ಹೋದರೇ ನನಗೆ ಶ್ರೇಯಸ್ಸುಂಟಾಗಬಹುದು. ಭೀಷ್ಮನು ಸತತವಾಗಿ ನಮ್ಮ ಸೈನ್ಯವನ್ನು ವಿನಾಶಮಾಡುತ್ತಲೇ ಇರುವುದರಿಂದ ನನಗೆ ಇನ್ನು ಮುಂದೆ ಯುದ್ಧಮಾಡಲು ರುಚಿಸುತ್ತಿಲ್ಲ. ಯಾವ ರೀತಿಯಲ್ಲಿ ಪತಂಗದ ಹುಳುವು ಪ್ರಜ್ವಲಿಸುತ್ತಿರುವ ಬೆಂಕಿಯ ಬಳಿಗೆ ಹೋಗಿ ಒಂದೇ ಬಾರಿಗೆ ಮೃತ್ಯುವನ್ನಪ್ಪುವುದೋ–ಅದೇ ರೀತಿಯಲ್ಲಿ ನಾನೂ ಸಹ ಭೀಷ್ಮನನ್ನು ಆಕ್ರಮಿಸಿ ಮೃತ್ಯುಪರವಶನಾಗಲಿದ್ದೇನೆ. (ಅವನೊಡನೆ ಯುದ್ಧಕ್ಕೆ ತೊಡಗಿದರೆ ಸಪ್ರಾಣನಾಗಿ ಹಿಂದಕ್ಕೆ ಬರುವ ಆಸೆಯೇ ಇಲ್ಲ.) ರಾಜ್ಯದ ಕಾರಣದಿಂದಾಗಿ ಪರಾಕ್ರಮವನ್ನು ತೋರಿಸಲು ಹೋಗಿ ನಾನು ಸೈನ್ಯಕ್ಷಯವನ್ನು ಹೊಂದಿಬಿಟ್ಟಿದ್ದೇನೆ. ನನ್ನ ಅಪಾರಸೈನಿಕರು ಈ ವೇಳೆಗಾಗಲೇ ಮರಣವನ್ನಪ್ಪಿದ್ದಾರೆ. ಶೂರರಾದ ನನ್ನ ಸಹೋದರರೂ ಸಹ ಬಾಣಗಳಿಂದ ಬಹಳವಾಗಿ ಪೀಡಿತರಾಗಿದ್ದಾರೆ. ಮಧುಸೂದನ! ನನ್ನ ಕಾರಣದಿಂದಲೇ ಈ ನನ್ನ ಸಹೋದರರು ರಾಜ್ಯಭ್ರಷ್ಟರಾಗಿ ಕೇವಲ ಸೌಹಾರ್ದದ ಕಾರಣದಿಂದ ನನ್ನೊಡನೆ ಅರಣ್ಯಕ್ಕೆ ಬಂದರು. ನನ್ನ ಕಾರಣದಿಂದಲೇ ಕೃಷ್ಣೆಯೂ ಸಹ ಬಹಳವಾಗಿ ಕ್ಲೇಶಪಟ್ಟಿದ್ದಾಳೆ. ನಾನು ಜೀವಿತವನ್ನು ಬಹುವಾಗಿ ಮಾನ್ಯ ಮಾಡುತ್ತಿದ್ದೇನೆ. ಆದರೆ ಈಗಿನ ಪರಿಸ್ಥಿತಿಯಲ್ಲಿ ಪ್ರಾಣದಿಂದ ಉಳಿಯುವುದೇ ಬಹಳ ಕಷ್ಟವಾಗಿದೆ. ಆದುದರಿಂದ (ನಾನು ಈಗಲೇ ಯುದ್ಧವನ್ನು ನಿಲ್ಲಿಸಿ ಕಾಡಿಗೆ ಹೋಗಿ) ನನ್ನ ಉಳಿದ ಜೀವಮಾನವನ್ನಾದರೂ ಧರ್ಮಾ ಚರಣೆಗಳಲ್ಲಿ ಕಳೆಯುತ್ತೇನೆ. ಕೇಶವ! ಭ್ರಾತೃಸಹಿತನಾಗಿರುವ ನಾನು ನಿನ್ನ ಅನುಗ್ರಹಕ್ಕೇನಾದರೂ ಪಾತ್ರನಾಗಿರುವುದಾದರೆ, ಸ್ವಧರ್ಮಕ್ಕೆ ವಿರೋಧವಿಲ್ಲದಂತೆ ಈ ಸಮಯದಲ್ಲಿ ಹಿತಕರವಾದ ಕಾರ್ಯವು ಯಾವುದಾದರೂ ಇರುವುದಾದರೆ ಅದನ್ನು ದಯಮಾಡಿ ಹೇಳು."

ತನ್ನ ಅನುಯಾಯಿಗಳ ಮೇಲಿನ ಕಾರುಣ್ಯದ ಕಾರಣದಿಂದ ಬಹು ವಿಸ್ತರವಾಗಿ ಹೇಳಿದ ಯುಧಿಷ್ಠಿರನ ಮಾತನ್ನು ಕೇಳಿ, ಯುಧಿಷ್ಠಿರನನ್ನು

ಸಂತೈಸುತ್ತಾ ಶ್ರೀಕೃಷ್ಣನು ಈ ಮಾತುಗಳನ್ನು ಹೇಳಿದನು : “ಸತ್ಯಸಂಗರ! ಧರ್ಮಪುತ್ರ! ವಿಷಾದಪಡಬೇಡ. ನಿನ್ನ ಸಹೋದರರು ಶೂರರಾಗಿಯೂ, ದುರ್ಜಯರಾಗಿಯೂ, ಶತ್ರುಸೂದನರಾಗಿಯೂ ಇರುವರು. ಧರ್ಮಜ! ಅರ್ಜುನ-ಭೀಮಸೇನರಿಬ್ಬರೂ ವಾಯುವಿಗೂ ಮತ್ತು ಅಗ್ನಿಗೂ ಸಮಾನ ವಾದ ತೇಜಸ್ಸುಳ್ಳವರಾಗಿದ್ದಾರೆ. ಮಹಾಪರಾಕ್ರಮಿಗಳಾದ ನಕುಲ-ಸಹ ದೇವರು ತ್ರಿದಶೇಶ್ವರನಾದ ಮಹೇಂದ್ರನಿಗೆ ಸಮಾನರಾಗಿದ್ದಾರೆ. ಸೌಹಾರ್ದ ದಿಂದ ನೀನು ನನಗಾದರೂ ಆಜ್ಞೆಮಾಡಬಹುದು. ನಿನ್ನಿಂದ ಆಜ್ಞಪ್ತನಾದರೆ ನಾನೇ ಭೀಷ್ಮನೊಡನೆ ಯುದ್ಧಮಾಡುತ್ತೇನೆ. ನಿನ್ನಿಂದ ಆಜ್ಞಪ್ತನಾದ ನಾನು ಯಾವ ಕಾರ್ಯವನ್ನು ತಾನೇ ಮಾಡಲಾರೆನು? (ನಿನ್ನ ಸಲುವಾಗಿ ಯಾವುದೇ ಕಾರ್ಯವನ್ನಾದರೂ ನಾನು ಮಾಡಲು ಸಿದ್ಧನಾಗಿದ್ದೇನೆ.) ಒಂದು ವೇಳೆ ಫಾಲ್ಗುನನು ಭೀಷ್ಮನೊಡನೆ ಯುದ್ಧಮಾಡಲು ಇಚ್ಛಿಸದಿದ್ದರೆ ಪುರುಷರ್ಷಭನಾದ ಭೀಷ್ಮನನ್ನು ನಾನೇ ಯುದ್ಧಕ್ಕೆ ಆಹ್ವಾನಿಸಿ ಧೃತರಾಷ್ಟ್ರನ ಮಕ್ಕಳ ಕಣ್ಣೆದುರಿನಲ್ಲಿಯೇ ಭೀಷ್ಮನನ್ನು ವಧೆಮಾಡುತ್ತೇನೆ. ವೀರನಾದ ಭೀಷ್ಮನ ಸಂಹಾರವಾದೊಡನೆಯೇ ಜಯವು ಲಭಿಸುವುದೆಂದು ನೀನು ಭಾವಿಸುವೆಯಾದರೆ ಒಂದೇ ಒಂದು ರಥದ ಸಹಾಯದಿಂದ (ರಥದಲ್ಲಿ ನಾನೊಬ್ಬನೇ ಹೋಗಿ) ಕುರುವೃದ್ಧನಾದ, ಪಿತಾಮಹನಾದ ಭೀಷ್ಮನನ್ನು ಸಂಹಾರಮಾಡಿಬಿಡುತ್ತೇನೆ. ಧರ್ಮಜ! ಮಹೇಂದ್ರನಿಗೆ ಸಮಾನವಾದ ಪರಾಕ್ರಮವಿರುವ ನನ್ನ ಪರಾಕ್ರಮವನ್ನಾದರೂ ನೋಡು. ಮಹಾಸ್ತ್ರಗಳನ್ನು ಸತತವಾಗಿ ಪ್ರಯೋಗಿಸುವ ಆ ಭೀಷ್ಮನನ್ನು ಕ್ಷಣಮಾತ್ರದಲ್ಲಿ ರಥದಿಂದ ಬೀಳಿಸಿಬಿಡುತ್ತೇನೆ.

**ಯಃ ಶತ್ರುಃ ಪಾಣ್ಡುಪುತ್ರಾಣಾಂ ಮಚ್ಛತ್ರುಃ ಸ ನ ಸಂಶಯಃ ।**
**ಮದರ್ಥಾ ಭವದೀಯಾ ಯೇ ಯೇ ಮದೀಯಾಸ್ತವೈವ ತೇ ॥೩೨॥**

ಯಾರು ಪಾಂಡುವಿನ ಮಕ್ಕಳಿಗೆ ಶತ್ರುವೋ ಅವನು ನನಗೂ ಶತ್ರು ವೆಂಬುದರಲ್ಲಿ ಸಂಶಯವೇ ಇಲ್ಲ. ಯಾರು ನಿನಗೆ ಸುಹೃದರೋ ಅವರು ನನಗೂ ಸುಹೃದರು ಮತ್ತು ಯಾರು ನನಗೆ ಸುಹೃದರೋ ಅವರು ನಿನಗೂ ಸುಹೃದರು.

**ತವ ಭ್ರಾತಾ ಮಮ ಸಖಾ ಸಮ್ಬನ್ಧೀ ಶಿಷ್ಯ ಏವ ಚ ।**
**ಮಾಂಸಾನ್ಯುತ್ಕೃತ್ಯ ದಾಸ್ಯಾಮಿ ಫಾಲ್ಗುನಾರ್ಥೇ ಮಹೀಪತೇ ॥೩೩॥**

ಮಹಾರಾಜ! ನಿನ್ನ ತಮ್ಮನಾದ ಅರ್ಜುನನು ನನ್ನ ಸಖನೂ–ಸಂಬಂಧಿಯೂ ಮತ್ತು ಶಿಷ್ಯನೂ ಆಗಿದ್ದಾನೆ. ಅರ್ಜುನನ ಸಲುವಾಗಿ ನಾನು ನನ್ನ ಮಾಂಸವನ್ನಾದರೂ ಕಿತ್ತುಕೊಡುತ್ತೇನೆ.

**ಏಷ ಚಾಪಿ ನರವ್ಯಾಘ್ರೋ ಮತ್ಕೃತೇ ಜೀವಿತಂ ತ್ಯಜೇತ್ ।**
**ಏಷ ನಃ ಸಮಯಸ್ತಾತ ತಾರಯೇಮ ಪರಸ್ಪರಮ್ ॥೩೪॥**

ನರವ್ಯಾಘ್ರನಾದ ಈ ಅರ್ಜುನನೂ ಸಹ ನನ್ನ ಸಲುವಾಗಿ ಪ್ರಾಣಗಳನ್ನಾದರೂ ತ್ಯಜಿಸುತ್ತಾನೆ. ಯಾವುದೇ ಸಂದರ್ಭದಲ್ಲಿಯೂ ಒಬ್ಬರು ಮತ್ತೊಬ್ಬರನ್ನು ರಕ್ಷಿಸಬೇಕೆಂಬುದೇ ನಮ್ಮ ಪ್ರತಿಜ್ಞೆಯಾಗಿದೆ. ನಿನ್ನ ಸಲುವಾಗಿ ಯುದ್ಧಮಾಡುವಂತೆ ನನ್ನನ್ನು ನಿಯೋಜಿಸು. ನಾನು ನಿನ್ನ ಕಡೆಯ ಯೋಧನಾಗಿ ಯುದ್ಧಮಾಡುತ್ತೇನೆ. ಹಿಂದೆ ಉಪಪ್ಲಾವ್ಯದಲ್ಲಿದ್ದಾಗ ಎಲ್ಲ ರಾಜರ ಸಮಕ್ಷದಲ್ಲಿ ಪಾರ್ಥನು 'ಘಾತಯಿಷ್ಯಾಮಿ ಗಾಙ್ಗೇಯಂ' 'ಗಾಂಗೇಯನನ್ನು ಸಂಹಾರಮಾಡುತ್ತೇನೆ'–ಎಂದು ಪ್ರತಿಜ್ಞೆಮಾಡಿದ್ದನು. ನಾವಿಬ್ಬರೂ ಆ ಮಾತನ್ನು ರಕ್ಷಿಸಬೇಕಾಗಿದೆ. ಧೀಮಂತನಾದ ಪಾರ್ಥನು ಮಾಡಿರುವ ಆ ಪ್ರತಿಜ್ಞಾವಚನವನ್ನು ಅವನ ಅನುಮತಿಯನ್ನು ಪಡೆದು ನಾನೀಗ ಪಾಲಿಸಬೇಕಾಗಿದೆ. ಅರ್ಜುನನು ಯಾವ ಪ್ರತಿಜ್ಞೆಯನ್ನು ಮಾಡಿದ್ದನೋ ಆ ಪ್ರತಿಜ್ಞೆಯನ್ನು ಪೂರ್ಣಗೊಳಿಸುವುದು ನನ್ನ ಕರ್ತವ್ಯವೂ ಆಗಿರುವುದೆಂಬುದರಲ್ಲಿ ಸಂಶಯವೇ ಇಲ್ಲ. ಅಥವಾ ಅರ್ಜುನನೇ ರಣರಂಗದಲ್ಲಿ ಪ್ರತಿಜ್ಞಾತವಾದ ಆ ಕಾರ್ಯವನ್ನು ಪೂರ್ಣಮಾಡಬೇಕೆಂದರೂ ಸಹ ಅವನಿಗೆ ಅದು ಅಂತಹ ಮಹತ್ತಾದ ಕಾರ್ಯವೇನೂ ಅಲ್ಲ. ಮಹಾಪರಾಕ್ರಮಿಯಾದ ಅರ್ಜುನನಿಗಿದು ಅತ್ಯಲ್ಪವಾದುದು. ಅವನೇ ಯುದ್ಧದಲ್ಲಿ ಪರಪುರಂಜಯನಾದ ಭೀಷ್ಮನನ್ನು ಸಂಹಾರಮಾಡುತ್ತಾನೆ. ಅವನು ಪ್ರಯತ್ನಿಸಿದ್ದೇ ಆದರೆ ಎಂತಹ ಅಶಕ್ಯವಾದ ಕಾರ್ಯವನ್ನಾದರೂ ಮಾಡಿ ಮುಗಿಸಬಲ್ಲನು. ದೈತ್ಯ-ದಾನವರಿಂದೊಡಗೂಡಿದ ಎಲ್ಲ ದೇವತೆಗಳನ್ನೂ ಅರ್ಜುನನು ಯುದ್ಧದಲ್ಲಿ

ಸಂಹಾರಮಾಡಬಲ್ಲನು. ಹೀಗಿರುವಾಗ ಭೀಷ್ಮನೊಬ್ಬನ ವಿಷಯದಲ್ಲಿ ಹೇಳ ತಕ್ಕದ್ದೇನಿದೆ? ಭೀಷ್ಮನ ವಿಷಯವಾಗಿ ಹೇಳುವುದಾದರೆ :



**ವಿಪರೀತೋ ಮಹಾವೀರ್ಯೋ ಗತಸತ್ತ್ವೋಽಲ್ಪಜೀವನಃ ।**
**ಭೀಷ್ಮಃ ಶಾನ್ತನವೋ ನೂನಂ ಕರ್ತವ್ಯಂ ನಾವಬುಧ್ಯತೇ ॥೪೦॥**

ಭೀಷ್ಮನು ಮಹಾವೀರ್ಯನಾಗಿದ್ದುದು ನಿಜ. ಆದರೆ ಈಗವನು ಅದಕ್ಕೆ ವಿಪರೀತವಾಗಿದ್ದಾನೆ. ಅರ್ಥಾತ್ ಅಲ್ಪಬಲನಾಗಿದ್ದಾನೆ. ಬುದ್ಧಿಗೆಟ್ಟವನಾಗಿ ದ್ದಾನೆ. ಅವನ ಆಯುಷ್ಯವು ಕೂಡ ಮುಗಿಯುತ್ತಾ ಬಂದಿದೆ. ನಿಶ್ಚಯ ವಾಗಿಯೂ ಶಾಂತನವನು ಈ ಸಮಯದಲ್ಲಿ ತನ್ನ ಕರ್ತವ್ಯವೇನೆಂಬುದನ್ನು ತಿಳಿದವನಾಗಿಲ್ಲ."

"ಕೇಶವ! ನೀನು ಏನು ಹೇಳಿದೆಯೋ ಅದು ಹಾಗೆಯೇ ಸರಿ. ಆ ಎಲ್ಲ ಕೌರವರೂ ಜೊತೆಯಾಗಿ ಬಂದರೂ ನಿನ್ನ ವೇಗವನ್ನು ತಡೆದು ಕೊಳ್ಳಲು ಅವರಿಗೆ ಸರ್ವಥಾ ಸಾಧ್ಯವಿಲ್ಲ. ಯಾರ ಪಕ್ಷದಲ್ಲಿ ಪುರುಷವ್ಯಾಘ್ರ ನಾದ ನೀನೇ ಇರುವೆಯೋ ಆ ಪಕ್ಷದವನೇ ಆದ ನಾನು ಅಭೀಷ್ಟವಾದ ಎಲ್ಲ ವನ್ನೂ ಸಹ ಪಡೆದುಕೊಂಡೇ ತೀರುತ್ತೇನೆ. ಇದು ನಿಶ್ಚಯ. ವಿಜಯಿಗಳಲ್ಲಿ ಶ್ರೇಷ್ಠನಾದವನೇ! ನಿನ್ನನ್ನು ನಾಥನನ್ನಾಗಿ ಪಡೆದಿರುವ ನಾನು ಇಂದ್ರಸಹಿತ

ರಾದ ದೇವತೆಗಳನ್ನೂ ಜಯಿಸಬಲ್ಲೆನು. ಇನ್ನು ಮಹಾರಥನಾದ ಭೀಷ್ಮನ ವಿಷಯವಾಗಿ ಹೇಳತಕ್ಕದ್ದೇನಿದೆ? (ಭೀಷ್ಮನನ್ನು ಜಯಿಸಿಯೇ ತೀರುತ್ತೇನೆ.)

**ನ ತು ತ್ವಾಮನೃತಂ ಕರ್ತುಮುತ್ಸಹೇ ಸ್ವಾತ್ಮಗೌರವಾತ್ ।**
**ಅಯುಧ್ಯಮಾನಃ ಸಾಹಾಯ್ಯಂ ಯಥೋಕ್ತಂ ಕುರು ಮಾಧವ ॥೪೪॥**

ಮಾಧವ! ನಿನ್ನ ಆತ್ಮಗೌರವವನ್ನು ಕಾಪಾಡಬೇಕಾದ ಕರ್ತವ್ಯವು ನನಗಿರುವುದರಿಂದ ನಿನ್ನನ್ನು ಅಸತ್ಯವಾದಿಯನ್ನಾಗಿಸಲು ನಾನು ಉತ್ಸಾಹಿತ ನಾಗಿಲ್ಲ. (ನೀನು ಅಸತ್ಯವಾದಿಯಾಗಬಾರದು. ಮಿಥ್ಯಾಪ್ರತಿಜ್ಞನೆಂದು ಜನಗಳು ನಿನ್ನನ್ನು ಕರೆಯಬಾರದು). ನೀನು ಯುದ್ಧಮಾಡದೆಯೇ ಹಿಂದೆ ಹೇಳಿರುವಂತೆ ಸಹಾಯವನ್ನು ಮಾಡು. ಭೀಷ್ಮನು ಯುದ್ಧಸಮಯದಲ್ಲಿ ನನಗೊಂದು ಪ್ರತಿಜ್ಞೆಮಾಡಿಕೊಟ್ಟಿದ್ದನು. ಅದು ಯಾವುದೆಂದರೆ :

**ಮನ್ತ್ರಯಿಷ್ಯೇ ತವಾರ್ಥಾಯ ನ ತು ಯೋತ್ಸ್ಯೇ ಕಥಞ್ಚನ ।**
**ದುರ್ಯೋಧನಾರ್ಥಂ ಯೋತ್ಸ್ಯಾಮಿ ಸತ್ಯಮೇತದಿತಿಪ್ರಭೋ ॥೪೫॥**

'ನಾನು ಯುದ್ಧಸಮಯದಲ್ಲಿ ನಿನ್ನ ಹಿತಕ್ಕಾಗಿ ಸಲಹೆಯನ್ನು ಕೊಡು ತ್ತೇನೆ. ಆದರೆ ನಿನ್ನ ಪರವಾಗಿ ಯುದ್ಧಮಾಡುವುದಿಲ್ಲ. ದುರ್ಯೋಧನನ ಸಲುವಾಗಿ ಯುದ್ಧಮಾಡುತ್ತೇನೆ. ಇದು ಸತ್ಯ'–ಎಂಬುದಾಗಿ ಭೀಷ್ಮನು ನನ್ನೊಡನೆ ಹೇಳಿದ್ದನು. ಪ್ರಭೋ! ಮಾಧವ! ಭೀಷ್ಮನು ನನಗೆ ರಾಜ್ಯವನ್ನು ಕೊಡುತ್ತಾನೆ ಮತ್ತು ರಾಜ್ಯವನ್ನು ಪಡೆದುಕೊಳ್ಳಲು ಯುಕ್ತವಾದ ಸಲಹೆ ಗಳನ್ನೂ ಕೊಡುತ್ತಾನೆ. ಆದುದರಿಂದ ನಿನ್ನಿಂದ ಕೂಡಿದ ನಾವೆಲ್ಲರೂ ದೇವವ್ರತನ ಬಳಿಗೆ, ಅವನ ವಧೋಪಾಯವನ್ನು ಅವನಿಂದಲೇ ತಿಳಿದು ಕೊಳ್ಳುವ ಸಲುವಾಗಿ ಹೋಗೋಣ. ವಾರ್ಷ್ಣೇಯ! ನಾವೆಲ್ಲರೂ ಒಟ್ಟಾಗಿ ಈಗಲೇ ಕುರುಶ್ರೇಷ್ಠನಾದ ಭೀಷ್ಮನ ಸಮೀಪಕ್ಕೆ ಹೋಗಿ ಅವನ ವಧೋಪಾಯವನ್ನು ಅವನಿಂದಲೇ ಕೇಳಿ ತಿಳಿಯೋಣ. ನಾವು ಈ ವಿಷಯ ವಾಗಿ ಅವನನ್ನು ಸಲಹೆ ಕೇಳಿದ್ದೇ ಆದರೆ ಅವನು ಸತ್ಯವೂ ಹಿತವೂ ಆದ ಮಾತನ್ನೇ ನಮಗೆ ಹೇಳುತ್ತಾನೆ. ಕೃಷ್ಣ! ಭೀಷ್ಮನು ಹೇಗೆ ಹೇಳುತ್ತಾನೆಯೋ ಯುದ್ಧದಲ್ಲಿ ನಾನು ಹಾಗೆಯೇ ಮಾಡುತ್ತೇನೆ.

**ಸ ನೋ ಜಯಸ್ಯ ದಾತಾ ಸ್ಯಾನ್ಮನ್ತ್ರಸ್ಯ ಚ ದೃಢವ್ರತಃ ।**
**ಬಾಲಾಃ ಪಿತ್ರಾ ವಿಹೀನಾಶ್ಚ ತೇನ ಸಂವರ್ಧಿತಾ ವಯಮ್ ॥೫೦॥**

ದೃಢವ್ರತನಾದ ಪಿತಾಮಹನು ನಮಗೆ ವಿಜಯವನ್ನೂ ಮತ್ತು ವಿಜಯಗಳಿಸಲು ಮಾಡಬೇಕಾದ ಕಾರ್ಯದ ಬಗೆಗೆ ಸಲಹೆಯನ್ನೂ ಕೊಡುತ್ತಾನೆ. ನಾವು ಬಾಲರೂ ಪಿತೃವಿಹೀನರೂ ಆಗಿದ್ದಾಗ ಆ ಮಹಾನುಭಾವನಿಂದಲೇ ಸಂವರ್ಧಿತರಾದೆವು. ಮಾಧವ! ಭೀಷ್ಮನು ನನ್ನ ತಂದೆಯ ತಂದೆ. ನಮ್ಮ ಪಿತಾಮಹ. ನಮ್ಮೆಲ್ಲರಿಗೂ ಬಹಳ ಇಷ್ಟನಾದವನು. ಹೀಗಿದ್ದರೂ ಸಹ ವೃದ್ಧನಾದ ಆ ನಮ್ಮ ಪಿತಾಮಹನನ್ನು (ವಿಜಯದ ಆಸೆಯಿಂದ) ಕೊಲ್ಲಲಿಚ್ಛಿಸಿದ್ದೇನೆ. ಇಂತಹ ಕ್ಷತ್ರಿಯಜೀವಿಕೆಗೇ ಧಿಕ್ಕಾರವಿರಲಿ."

ಧೃತರಾಷ್ಟ್ರ! ಯುಧಿಷ್ಠಿರನ ಸಮಯೋಚಿತವಾದ ಮಾತನ್ನು ಕೇಳಿ ಶ್ರೀಕೃಷ್ಣನು ಪ್ರತ್ಯುತ್ತರಿಸಿದನು : "ಮಹಾಪ್ರಾಜ್ಞ! ರಾಜೇಂದ್ರ! ನೀನು ಹೇಳಿದುದು ಸಮೀಚೀನವಾಗಿ ಕಾಣುತ್ತಿದೆ. ದೇವವ್ರತನು (ಭೀಷ್ಮನು) ಪುಣ್ಯವಂತನು. ಜ್ಞಾನಿಯು. ಅವನು ವೀಕ್ಷಣಮಾತ್ರದಿಂದಲೇ ಎಲ್ಲರನ್ನೂ ದಹಿಸುವ ಸಾಮರ್ಥ್ಯವಿರುವವನು. ಅವನ ವಧೋಪಾಯವನ್ನು ತಿಳಿಯುವ ಸಲುವಾಗಿ ನಾವೆಲ್ಲರೂ ಈಗಲೇ ಗಾಂಗೇಯನ ಬಳಿಗೇ ಹೋಗೋಣ. ಯುಧಿಷ್ಠಿರ! ನೀನೇ ಅವನನ್ನು ಈ ವಿಷಯವಾಗಿ ಕೇಳಿದರೆ ನಿಶ್ಚಯವಾಗಿಯೂ ಅವನು ಸತ್ಯವನ್ನೇ ಹೇಳುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ. ಆದುದರಿಂದ ನಾವೆಲ್ಲರೂ ಪಿತಾಮಹನನ್ನು ಈ ವಿಷಯವಾಗಿ ಪ್ರಶ್ನಿಸಲು ಹೋಗೋಣ. ಶಾಂತನವನ ಸಮೀಪಕ್ಕೆ ಹೋಗಿ ಅವನ ವಧೋಪಾಯವು ಯಾವುದೆಂಬುದರ ಬಗೆಗೆ ಅವನ ಸಲಹೆಯನ್ನೇ ಕೇಳೋಣ. ಅವನು ನಮಗೆ ಇದರ ಬಗೆಗೆ ಸಲಹೆಯನ್ನು ಕೊಟ್ಟೇ ಕೊಡುತ್ತಾನೆ. ಅವನು ಕೊಡುವ ಸಲಹೆಯಂತೆ ನಾವು ಶತ್ರುಗಳೊಡನೆ ಯುದ್ಧಮಾಡೋಣ."

ಈ ರೀತಿಯಲ್ಲಿ ಪಾಂಡವವೀರರು ಸಮಾಲೋಚಿಸಿ ಎಲ್ಲರೂ ಒಟ್ಟಾಗಿ ಪಾಂಡುಪೂರ್ವಜನಾದ ಭೀಷ್ಮನ ಬಳಿಗೆ ತೆರಳಿದರು. ವೀರ್ಯವಂತನಾದ ವಾಸುದೇವನೂ ಅವರ ಜೊತೆಯಲ್ಲೇ ಹೋದನು. ಭೀಷ್ಮನ ಶಿಬಿರಕ್ಕೆ ಹೋಗುವಾಗ ಎಲ್ಲರೂ ಶಸ್ತ್ರಾಸ್ತ್ರಗಳನ್ನೂ ಕವಚಗಳನ್ನೂ ಬಿಚ್ಚಿಟ್ಟು

ಹೋಗಿದ್ದರು. ಭೀಷ್ಮನ ಶಿಬಿರವನ್ನು ಪ್ರವೇಶಿಸಿದೊಡನೆಯೇ ಪಾಂಡವ ವೀರರೆಲ್ಲರೂ ಭೀಷ್ಮನಿಗೆ ತಲೆಬಾಗಿ ನಮಸ್ಕರಿಸಿದರು. ಭರತರ್ಷಭನಾದ ಭೀಷ್ಮನನ್ನು ಯಥಾಯೋಗ್ಯವಾಗಿ ಪೂಜಿಸಿ ಪುನಃ ನಮಸ್ಕರಿಸಿ ಅವನಿಗೆ ಶರಣುಹೋದರು. ಕುರುಪಿತಾಮಹನಾದ, ಮಹಾಬಾಹುವಾದ ಭೀಷ್ಮನು ಅವರೆಲ್ಲರನ್ನೂ ಹಾರ್ದಿಕವಾಗಿ ಸ್ವಾಗತಿಸುತ್ತಾ ಹೇಳಿದನು : "ವಾರ್ಷ್ಣೇಯ! ನಿನಗೆ ಸ್ವಾಗತವನ್ನು ಬಯಸುತ್ತೇನೆ. ಧನಂಜಯ! ನಿನ್ನನ್ನೂ ಸ್ವಾಗತಿಸುತ್ತೇನೆ. ಧರ್ಮಪುತ್ರ! ನಿನಗೂ ಇಲ್ಲಿ ಸ್ವಾಗತವಿದೆ. ಭೀಮ-ಯಮಳರನ್ನೂ ನಾನು ಆದರಪೂರ್ವಕವಾಗಿ ಸ್ವಾಗತಿಸುತ್ತೇನೆ. ನನ್ನ ಮೇಲೆ ನೀವಿಟ್ಟಿರುವ ಪ್ರೀತಿಯನ್ನು ಹೆಚ್ಚಿಸುವಂತಹ ಯಾವ ಕಾರ್ಯವನ್ನು ನಿಮಗೆ ಮಾಡಿಕೊಡಲಿ? ನಿಮ್ಮ ಅಪೇಕ್ಷೆಯು ಸುದುಷ್ಕರವೇ ಆಗಿದ್ದರೂ ಸರ್ವಾತ್ಮನಾ ಪೂರೈಸಿಕೊಡುತ್ತೇನೆ." ಪ್ರೀತಿಯುಕ್ತವಾದ ಈ ರೀತಿಯ ಮಾತುಗಳನ್ನು ಪುನಃ-ಪುನಃ ಹೇಳುತ್ತಿದ್ದ ಗಾಂಗೇಯನನ್ನು ಕುರಿತು, ದೀನಾತ್ಮನಾದ ರಾಜನು ಪ್ರೀತಿಯುಕ್ತವಾದ ಈ ಮಾತುಗಳನ್ನು ಹೇಳಿದನು :

**ಕಥಂ ಜಯೇಮ ಸರ್ವಜ್ಞ ಕಥಂ ರಾಜ್ಯಂ ಲಭೇಮಹಿ ॥೬೨॥**

"ಸರ್ವಜ್ಞನೇ! ನಾವು ಯುದ್ಧದಲ್ಲಿ ಜಯಗಳಿಸುವುದೆಂತು? ನಾವು ನಮ್ಮ ರಾಜ್ಯವನ್ನು ಹೇಗೆ ಪಡೆದೇವು? ಪ್ರಜೆಗಳು ನಾಶವಾಗದಿರುವುದು ಹೇಗೆ? ಎಲ್ಲವನ್ನೂ ದಯಮಾಡಿ ಹೇಳು. ನೀನೇ ನಿನ್ನ ವಧೋಪಾಯ ವನ್ನೂ ನಮಗೆ ತಿಳಿಸಿಕೊಡಬೇಕಾಗಿದೆ. ಯುದ್ಧದಲ್ಲಿ ನಿನ್ನ ವೇಗವನ್ನು ನಾವು ಹೇಗೆ ತಾನೇ ಸಹಿಸಿಯೇವು? ಕುರುಪಿತಾಮಹನೇ! ನೀನು ಯುದ್ಧಮಾಡು ತ್ತಿರುವಾಗ ಬಹುಸೂಕ್ಷ್ಮವಾದ ಛಿದ್ರವನ್ನೂ (ದೋಷವನ್ನೂ) ಸಹ ನಮಗೆ ಕಂಡುಹಿಡಿಯಲು ಸಾಧ್ಯವಾಗುವುದಿಲ್ಲ. ನೀನು ಯಾವಾಗಲೂ ಧನುಸ್ಸನ್ನು ಮಂಡಲಾಕಾರದಲ್ಲಿಯೇ ಹಿಡಿದಿರುವಂತೆ ಕಾಣಿಸುತ್ತಿರುವೆ. ಮಹಾ ಬಾಹುವೇ! ಬೇರೊಬ್ಬ ಸೂರ್ಯನಂತೆಯೇ ರಥದಲ್ಲಿ ಕುಳಿತಿರುವ ನೀನು ಬಾಣಗಳನ್ನು ಬತ್ತಳಿಕೆಯಿಂದ ತೆಗೆದುಕೊಳ್ಳುವುದನ್ನಾಗಲೀ, ಅದನ್ನು ಧನುಸ್ಸಿ ನಲ್ಲಿ ಅನುಸಂಧಾನಮಾಡುವುದನ್ನಾಗಲೀ, ಶಿಂಜಿನಿಯನ್ನು ಸೆಳೆದು ಬಿಡು ವುದನ್ನಾಗಲೀ–ನಾವು ನೋಡಲಾರೆವು. ಶತ್ರುವೀರಹಂತಕನೇ! ರಥಾಶ್ವ- ಗಜ-ಪದಾತಿ ಸೈನ್ಯಗಳ ಸಂಹಾರಕನಾದ ನಿನ್ನನ್ನು ಯಾವ ಮನುಷ್ಯನು ತಾನೇ

ಜಯಿಸಲು ಉತ್ಸಾಹಿತನಾಗುತ್ತಾನೆ? ಪುಂಖಾನುಪುಂಖವಾಗಿ ಬಾಣಗಳ ಮಳೆಗರೆಯುವ ನಿನ್ನಿಂದ ಅಸಂಖ್ಯಾತವಾದ ಪ್ರಾಣಿಗಳ ಸಂಹಾರವಾಯಿತು. ಇದರಿಂದಾಗಿ ನನ್ನ ಅಪಾರಸೈನ್ಯವು ಕ್ಷಯಿಸಿಹೋಯಿತು. ಆದುದರಿಂದ ಪಿತಾಮಹ! ನಾವು ಯುದ್ಧದಲ್ಲಿ ಜಯಗಳಿಸುವುದೆಂತು? ನಮ್ಮ ರಾಜ್ಯವನ್ನು ಪಡೆಯುವುದೆಂತು? ನನ್ನ ಸೈನ್ಯಕ್ಕೆ ಕ್ಷೇಮವಾಗುವುದೆಂತು? ಎಂಬುದನ್ನು ಹೇಳು."

ಮಹಾರಾಜ! ಅನಂತರ ಪಾಂಡುವಿಗೆ ಪಿತೃಸಮಾನನಾದ ಶಾಂತನವನು ಪಾಂಡವರನ್ನು ಕುರಿತು ಹೇಳಿದನು :

**ನ ಕಥಞ್ಚನ ಕೌನ್ತೇಯ ಮಯಿ ಜೀವತಿ ಸಂಯುಗೇ ।**
**ಜಯೋ ಭವತಿ ಸರ್ವಜ್ಞ ಸತ್ಯಮೇತದ್ಬ್ರವೀಮಿ ತೇ ॥೭೦॥**

"ಕೌಂತೇಯ! ನಾನು ಬದುಕಿರುವವರೆಗೆ ನೀನು ಜಯಗಳಿಸುವ ಸಾಧ್ಯತೆಯೇ ಇಲ್ಲ. ಸರ್ವಜ್ಞನೇ! ನಾನು ಈ ಸತ್ಯಸಂಗತಿಯನ್ನು ನಿನಗೆ ಹೇಳುತ್ತಿದ್ದೇನೆ. ನನ್ನನ್ನು ನೀವು ಜಯಿಸಿದ್ದೇ ಆದರೆ ಮುಂದೆ ಯುದ್ಧದಲ್ಲಿ ನೀವು ಜಯಗಳಿಸುವಿರಿ. ಆದುದರಿಂದ ನೀವೇನಾದರೂ ಜಯಾಪೇಕ್ಷಿಗಳಾಗಿದ್ದರೆ ಸಾಧ್ಯವಾದಷ್ಟು ಬೇಗ ನನ್ನನ್ನು ಸಂಹರಿಸಿರಿ. ನಿಮಗೆ ಹೇಗೆ ಅನುಕೂಲವೋ ಹಾಗೆ ನನ್ನನ್ನು ಪ್ರಹರಿಸಿರಿ. ಹೀಗೆ ಮಾಡಲು ನಾನು ನಿಮಗೆ ಅನುಮತಿಯನ್ನು ಕೊಡುತ್ತೇನೆ. ಹೀಗೆ ಮಾಡುವುದರಿಂದ ನಿಮಗೆ ಒಳ್ಳೆಯದಾಗುವುದೆಂದು ನಾನು ಭಾವಿಸಿದ್ದೇನೆ. ಏಕೆಂದರೆ ನನ್ನ ಪರಾಕ್ರಮದ ವಿಷಯವು ನಿಮಗೆ ಸಂಪೂರ್ಣವಾಗಿ ತಿಳಿದಿದೆ.

**ಹತೇ ಮಯಿ ಹತಂ ಸರ್ವಂ ತಸ್ಮಾದೇವಂ ವಿಧೀಯತಾಮ್ ॥೭೩॥**

ನಾನು ಹತನಾದೆನೆಂದರೆ ಕೌರವರ ಸೇನೆಯಲ್ಲಿ ಎಲ್ಲರೂ ಹತರಾದಂತೆಯೇ. ಆದುದರಿಂದ ನೀವು ಹೀಗೆ ಮಾಡಿರಿ. (ಮೊದಲು ನನ್ನನ್ನು ವಧಿಸಿರಿ.)"

"ಪಿತಾಮಹ! ಈ ಕಾರಣದಿಂದಲೇ ನಾವು ನಿನ್ನ ವಧೋಪಾಯವನ್ನು ಕೇಳುತ್ತಿದ್ದೇವೆ. ಕ್ರುದ್ಧನಾದ, ಯುದ್ಧಸಮಯದಲ್ಲಿ ದಂಡಪಾಣಿಯಾದ

ಯಮನಂತೆಯೇ ಕಾಣುವ ನಿನ್ನನ್ನು ನಾವು ಯಾವ ಉಪಾಯದಿಂದ ಜಯಿಸಬಹುದೆಂಬುದನ್ನು ದಯಮಾಡಿ ಹೇಳು. ಯುದ್ಧದಲ್ಲಿ ವಜ್ರಧರನನ್ನಾದರೂ ಜಯಿಸಬಹುದು. ಯಮ-ವರುಣರನ್ನಾದರೂ ಜಯಿಸಬಹುದು. ಆದರೆ ಇಂದ್ರಸಹಿತರಾದ ಸುರಾಸುರರಿಂದಲೂ ನಿನ್ನನ್ನು ಜಯಿಸುವ ಸಾಧ್ಯತೆಯಿಲ್ಲ."

"ಮಹಾಬಾಹುವೇ! ಯುಧಿಷ್ಠಿರ! ನೀನು ಏನು ಹೇಳಿದೆಯೋ ಅದು ಸತ್ಯವಾದ ಮಾತು. ನಾನು ಶ್ರೇಷ್ಠವಾದ ಧನುಸ್ಸನ್ನು ಹಿಡಿದಿರುವವರೆಗೆ, ಶಸ್ತ್ರಾಸ್ತ್ರಗಳು ನನ್ನ ಕೈಯಲ್ಲಿ ಇರುವವರೆಗೆ, ನಾನು ಪ್ರಯತ್ನಶೀಲನಾಗಿರುವವರೆಗೆ, ಇಂದ್ರಸಹಿತರಾದ ಸುರಾಸುರರಿಂದಲೂ ನನ್ನನ್ನು ಜಯಿಸಲು ಸಾಧ್ಯವಾಗುವುದಿಲ್ಲ. ಆದುದರಿಂದ ನಾವು ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟಾಗ ಮಾತ್ರವೇ ಈ ಮಹಾರಥರು ನನ್ನನ್ನು ಸಂಹಾರಮಾಡಬಲ್ಲರು. ನಾನು ಯಾರೊಡನೆ ಯುದ್ಧಮಾಡುವುದಿಲ್ಲವೆಂಬ ವಿಷಯವನ್ನು ಮೊದಲು ನಿನಗೆ ಹೇಳುತ್ತೇನೆ.

**ನಿಕ್ಷಿಪ್ತಶಸ್ತ್ರೇ ಪತಿತೇ ವಿಮುಕ್ತಕವಚಧ್ವಜೇ ।**
**ದ್ರವಮಾಣೇ ಚ ಭೀತೇ ಚ ತವಾಸ್ಮೀತಿ ಚ ವಾದಿನಿ ॥೭೭॥**

**ಸ್ತ್ರಿಯಾಂ ಸ್ತ್ರೀನಾಮಧೇಯೇ ಚ ವಿಕಲೇ ಚೈಕಪುತ್ರಕೇ ।**
**ಅಪ್ರಶಸ್ತೇ ನರೇ ಚೈವ ನ ಯುದ್ಧಂ ರೋಚತೇ ಮಮ ॥೭೮॥**

ಶಸ್ತ್ರವನ್ನು ಕೆಳಗಿಟ್ಟವನೊಡನೆ, ಕೆಳಕ್ಕೆ ಬಿದ್ದವನೊಡನೆ, ಕವಚವಿಲ್ಲದವನೊಡನೆ, ಧ್ವಜವಿಲ್ಲದವನೊಡನೆ, ಓಡುತ್ತಿರುವವನೊಡನೆ, ಭೀತಿಗೊಂಡಿರುವವನೊಡನೆ, 'ನಾನು ನಿನ್ನವನಾಗಿದ್ದೇನೆ' ಎಂದು ಹೇಳಿಕೊಂಡವನೊಡನೆ, ಸ್ತ್ರೀಯೊಡನೆ, ಹೆಂಗಸರ ಹೆಸರನ್ನು ಇಟ್ಟುಕೊಂಡಿರುವವನೊಡನೆ, ಅಂಗವಿಕಲನೊಡನೆ, ಏಕಮಾತ್ರಪುತ್ರನಾಗಿರುವವನೊಡನೆ, ಅಪ್ರಶಸ್ತನಾದ ಮನುಷ್ಯನೊಡನೆ (ನಿಹೀನನೊಡನೆ) ನಾನು ಯುದ್ಧಮಾಡುವುದಿಲ್ಲ.

ನಾನು ಹಿಂದೆ ಮಾಡಿದ್ದ ಮತ್ತೊಂದು ಸಂಕಲ್ಪವನ್ನೂ ಹೇಳುತ್ತೇನೆ ; ಕೇಳು :

**ಅಮಙ್ಗಲ್ಯಧ್ವಜಂ ದೃಷ್ಟ್ವಾ ನ ಯುಧ್ಯೇಯಂ ಕದಾಚನ ॥೭೯॥**

ಅಮಂಗಲಸೂಚಕವಾದ ಚಿಹ್ನೆಯಿರುವ ಧ್ವಜವನ್ನು ನೋಡಿದರೂ ಮತ್ತು ಆ ಧ್ವಜವನ್ನಿಟ್ಟುಕೊಂಡಿರುವವನೊಡನೆಯೂ ನಾನು ಖಂಡಿತ ವಾಗಿಯೂ ಯುದ್ಧಮಾಡುವುದಿಲ್ಲ. ಇದರ ರಹಸ್ಯವನ್ನೇ ನಿನಗೆ ಇನ್ನೂ ಸ್ಪಷ್ಟಪಡಿಸಿ ಹೇಳುತ್ತೇನೆ. ನಿನ್ನ ಸೈನ್ಯದಲ್ಲಿ ದ್ರುಪದನ ಮಗನಾದ ಮಹಾ ರಥನಾದ ಶಿಖಂಡಿಯಿದ್ದಾನೆ. ಯುದ್ಧದಲ್ಲವನು ಅಸಹನಶೀಲನು, ಶೂರ. ಯುದ್ಧದಲ್ಲಿ ವಿಜಯಗಳಿಸತಕ್ಕವನು. ಹಿಂದೆ ಸ್ತ್ರೀಯಾಗಿದ್ದು ಈಗ ಪುರುಷ ನಾಗಿರತಕ್ಕವನು. ಈ ಎಲ್ಲ ವಿಷಯಗಳನ್ನೂ ನೀವು ಯಥಾವತ್ತಾಗಿ ತಿಳಿದ ವರೇ ಆಗಿರುತ್ತೀರಿ. ಅರ್ಜುನನು ಯುದ್ಧಸಮಯದಲ್ಲಿ ಶಿಖಂಡಿಯನ್ನು ಮುಂದಿಟ್ಟುಕೊಂಡು ಕವಚವನ್ನು ಧರಿಸಿದವನಾಗಿ, ತೀಕ್ಷ್ಣವಾದ ಬಾಣ ಗಳಿಂದ ನನ್ನನ್ನೇ ಆಕ್ರಮಿಸಲಿ. ಶಿಖಂಡಿಯ ಧ್ವಜವು ಅಮಂಗಲಸೂಚಕವಾದ ಚಿಹ್ನೆಯಿಂದ ಕೂಡಿದೆ. ಮೇಲಾಗಿ ಅವನು ಮೊದಲು ಸ್ತ್ರೀಯಾಗಿದ್ದನು. ಆ ಸಮಯದಲ್ಲಿ ಧನುರ್ಬಾಣಗಳನ್ನು ಹಿಡಿದಿದ್ದರೂ ಯಾವುದೇ ಕಾರಣ ದಿಂದಲೂ ನಾನವನನ್ನು ಪ್ರಹರಿಸಲು ಇಚ್ಛಿಪಡುವುದಿಲ್ಲ. ಆ ಸಮಯದಲ್ಲಿ ಪಾಂಡುಪುತ್ರನಾದ ಧನಂಜಯನು ನಾಲ್ಕು ದಿಕ್ಕುಗಳಿಂದಲೂ ನನ್ನನ್ನು ಬಾಣ ಗಳಿಂದ ಪ್ರಹರಿಸಿ ಸಂಹರಿಸಲು ಪ್ರಯತ್ನಿಸಲಿ. ಯುದ್ಧದಲ್ಲಿ ಉದ್ಯುಕ್ತನಾಗಿ ರುವ ನನ್ನನ್ನು ಸಂಹರಿಸತಕ್ಕವರು ಮಹಾಭಾಗನಾದ ಶ್ರೀಕೃಷ್ಣ ಮತ್ತು ಪಾಂಡುಪುತ್ರನಾದ ಧನಂಜಯ–ಈ ಇಬ್ಬರನ್ನುಳಿದು ಬೇರೆಯವರನ್ನು ಈ ಮೂರು ಲೋಕಗಳಲ್ಲಿಯೂ ನಾನು ಕಾಣದವನಾಗಿದ್ದೇನೆ. ಆದುದರಿಂದ ಶಿಖಂಡಿಯನ್ನು ನನ್ನ ಮುಂದೆ ನಿಲ್ಲಿಸಿ ಅಥವಾ ನಾನು ಮೇಲೆ ಹೇಳಿದ ಲಕ್ಷಣಗಳಿಂದ ಕೂಡಿದ ಮತ್ತಾರನ್ನಾದರೂ ನನ್ನ ಮುಂದೆ ನಿಲ್ಲಿಸಿ ಧನು ರ್ಬಾಣಗಳನ್ನು ಹಿಡಿದು ಪ್ರಯತ್ನಶೀಲನಾಗಿ ನನ್ನನ್ನು ಸಂಹಾರಮಾಡಲಿ. ಹೀಗೆ ಮಾಡುವುದರಿಂದ ನಿನ್ನ ವಿಜಯವು ನಿಶ್ಚಿತ. ಸುವ್ರತನೇ! ನಾನು ಹೇಳಿದ ವಿಧಾನದಲ್ಲಿ ಈ ಕಾರ್ಯವನ್ನು ಮಾಡು. ಹೀಗೆ ಮಾಡಿ ನನ್ನನ್ನು ಸಂಹರಿಸಿದನಂತರ ನೀನು ಧೃತರಾಷ್ಟ್ರನ ಮಕ್ಕಳನ್ನೂ, ನಿನ್ನೊಡನೆ ಯುದ್ಧಕ್ಕೆ ಬರುವ ಸರ್ವಸೈನಿಕರನ್ನೂ ಸಂಹಾರಮಾಡಲು ಸಮರ್ಥನಾಗುವೆ."

ಮಹಾರಾಜ! ಭೀಷ್ಮನ ಮಾತುಗಳನ್ನು ಕೇಳಿದನಂತರ ಪಾರ್ಥರು ಕುರುಪಿತಾಮಹನಾದ, ಮಹಾತ್ಮನಾದ ಭೀಷ್ಮನನ್ನು ಅಭಿವಾದನಪೂರ್ವಕ

ವಾಗಿ ನಮಸ್ಕರಿಸಿ ತಮ್ಮ ಶಿಬಿರಕ್ಕೆ ತೆರಳಿದರು. ಪರಲೋಕಕ್ಕೆ ಹೋಗಲು ದೀಕ್ಷಾಬದ್ಧನಾಗಿದ್ದ ಗಾಂಗೇಯನ ಮರಣದ ರಹಸ್ಯವನ್ನು ಕೇಳಿದಾಗಿ ನಿಂದಲೂ ದುಃಖತಪ್ತನಾಗಿದ್ದ ಅರ್ಜುನನು ನಾಚಿಕೆಗೊಂಡು ಶ್ರೀಕೃಷ್ಣನೊಡನೆ ಈ ಮಾತುಗಳನ್ನು ಹೇಳಿದನು :

"ಮಾಧವ! ಕುರುಕುಲದಲ್ಲಿಯೇ ವೃದ್ಧನಾದ, ಗುರುವಾದ, ವಿಶುದ್ಧ ಬುದ್ಧಿಯವನಾದ , ಧೀಮಂತನಾದ ಪಿತಾಮಹನೊಡನೆ ನಾನು ಹೇಗೆತಾನೇ ಯುದ್ಧಮಾಡಲಿ? ವಾಸುದೇವ! ನಾನು ಬಾಲ್ಯದಲ್ಲಿ ಆಟವಾಡುತ್ತಿದ್ದಾಗ ಧೂಳಿನಿಂದ ಬೂದಿಬಣ್ಣಕ್ಕೆ ತಿರುಗಿದ್ದ ನನ್ನನ್ನೆತ್ತಿಕೊಂಡು ಮಹಾತ್ಮನಾದ, ವಿಶಾಲಬುದ್ಧಿಯವನಾದ ಭೀಷ್ಮನು ತನ್ನ ಶರೀರವನ್ನೆಲ್ಲಾ ಧೂಳೀಧೂಸರಿತ ವನ್ನಾಗಿ ಮಾಡಿಕೊಳ್ಳುತ್ತಿದ್ದನು.

ಗದಾಗ್ರಜ! ನಾನು ಅವನ ತೊಡೆಯ ಮೇಲೆ ಕುಳಿತು ಮಹಾತ್ಮನಾದ ಪಾಂಡುವಿನ ತಂದೆಯಾದ ಭೀಷ್ಮನನ್ನು 'ತಾತ! ತಾತ' ಎಂದು ಕರೆಯುತ್ತಿದ್ದೆನು. ಆಗ ಅವನು ನನ್ನ ಗಲ್ಲವನ್ನು ಹಿಡಿದು 'ಮಗು! ನಾನು ನಿನ್ನ ತಾತನಲ್ಲ ; ನಿಮ್ಮಪ್ಪನಿಗೆ ತಾತ'–ಎಂದೆನ್ನುತ್ತಿದ್ದನು. ಆ ನನ್ನ ಮುತ್ತಾತನನ್ನು ನಾನು ಹೇಗೆತಾನೇ ವಧಿಸಲಿ? ನನ್ನ ಸೈನ್ಯವನ್ನು ಅವನು ಸಂಪೂರ್ಣವಾಗಿ ಬೇಕಾದರೂ ಸಂಹರಿಸಲಿ. ಆದರೆ ಮಹಾತ್ಮನಾದ ಪೂಜ್ಯನಾದ ಭೀಷ್ಮನೊಡನೆ ಖಂಡಿತವಾಗಿಯೂ ಯುದ್ಧಮಾಡುವುದಿಲ್ಲ. ಜಯವಾದರೂ ಲಭಿಸಲಿ ; ಅಥವಾ ನನ್ನ ವಧೆಯಾದರೂ ಆಗಿಹೋಗಲಿ–ನನ್ನ ನಿಶ್ಚಯವೇ ಇದಾಗಿದೆ. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು? ಕೃಷ್ಣ! ಇದನ್ನು ನೀನು ಉಚಿತವೆನ್ನುವೆಯೋ? ಅನುಚಿತವೆನ್ನುವೆಯೋ?"

"ಅರ್ಜುನ! ಹಿಂದೆ ನೀನು ರಾಜರ ಸಮಕ್ಷದಲ್ಲಿ ಭೀಷ್ಮನನ್ನು ಯುದ್ಧ ದಲ್ಲಿ ವಧೆಮಾಡುವೆನೆಂದು ಪ್ರತಿಜ್ಞೆಮಾಡಿ, ಕ್ಷತ್ರಧರ್ಮದಲ್ಲಿರುವ ನೀನು ಈಗ ಏಕೆ ಸಂಹರಿಸುವುದಿಲ್ಲ? ಕ್ಷತ್ರಿಯನಾದ, ಯುದ್ಧದುರ್ಮದನಾದ ನೀನು ಭೀಷ್ಮನನ್ನು ಸಂಹರಿಸಿ ರಥದಿಂದ ಕೆಳಕ್ಕೆ ಬೀಳಿಸಲೇಬೇಕು. ಗಾಂಗೇಯನನ್ನು ಸಂಹರಿಸದೆ ನಿನಗೆ ವಿಜಯವು ಖಂಡಿತವಾಗಿಯೂ ಲಭಿಸು ವುದಿಲ್ಲ. ದೇವತೆಗಳು ಈ ವಿಷಯವನ್ನು ಹಿಂದೆಯೇ ತಿಳಿದುಕೊಂಡಿದ್ದರು.

(ಭೀಷ್ಮನ ಸಂಹಾರವು ಇದೇ ರೀತಿಯಲ್ಲಿ ಆಗಬೇಕೆಂದು ದೈವವೇ ನಿಶ್ಚಯಿಸಿ ಬಿಟ್ಟಿದೆ.) ಆದುದರಿಂದ ಭೀಷ್ಮನು ಇದೇ ಕ್ರಮದಲ್ಲಿಯೇ ಯಮನ ಪಟ್ಟಣಕ್ಕೆ ಹೋಗುತ್ತಾನೆ. ದೇವತೆಗಳು ಭೀಷ್ಮನ ಮರಣರಹಸ್ಯವನ್ನು ಹೇಗೆ ಕಂಡು ಕೊಂಡಿದ್ದರೋ ಅದು ಹಾಗೆಯೇ ನಡೆಯುತ್ತದೆ. ಬೇರೆಯ ವಿಧಾನದಲ್ಲಿ ಅದು ನಡೆಯುವ ಸಾಧ್ಯತೆಯೇ ಇಲ್ಲ. ಯುದ್ಧಸಮಯದಲ್ಲಿ ಬಾಯ್ದೆರೆದ ಅಂತಕನಂತೆಯೇ–ಕಾಣುವ ದುರಾಧರ್ಷನಾದ ಭೀಷ್ಮನೊಡನೆ ನಿನ್ನೊಬ್ಬನನ್ನು ಬಿಟ್ಟು ಬೇರೆಯವರಿಂದ ಯುದ್ಧಮಾಡಲು ಸಾಧ್ಯವೇ ಆಗುವುದಿಲ್ಲ. ಸಾಕ್ಷಾತ್ ವಜ್ರಪಾಣಿಯಾದ ದೇವೇಂದ್ರನೇ ಆದರೂ ಅವನೊಡನೆ ಯುದ್ಧ ಮಾಡಲಾರನು. ಆದುದರಿಂದ ಯುದ್ಧದಲ್ಲಿ ಸ್ಥಿರವಾಗಿ ನಿಂತು ಭೀಷ್ಮನನ್ನು ಸಂಹರಿಸು. ನನ್ನ ಈ ಮಾತನ್ನು ಕೇಳು. ಇದೇ ವಿಷಯವಾಗಿ ಶಕ್ರನನ್ನು ಕುರಿತು ದೇವಗುರುವಾದ, ಮಹಾಬುದ್ಧಿಯಾದ ಬೃಹಸ್ಪತಿಯು ಹೇಳಿದುದನ್ನು ನಿನಗೆ ಉದಾಹರಿಸಿ ಹೇಳುತ್ತೇನೆ :

**ಜ್ಯಾಯಾಂಸಮಪಿ ಚೇದ್ವೃದ್ಧಂ ಗುಣೈರಪಿ ಸಮನ್ವಿತಮ್ ।**
**ಆತತಾಯಿನಮಾಯಾಂತಂ ಹನ್ಯಾದ್ಘಾತಕಮಾತ್ಮನಃ ॥೧೦೧॥**

ಅತ್ಯಂತ ಹಿರಿಯನಾದರೂ, ವೃದ್ಧನಾದರೂ, ಸಕಲಸದ್ಗುಣಗಳಿಂದ ಸಂಪನ್ನನಾದರೂ–ಶಸ್ತ್ರಹಿಡಿದು ಕೊಲ್ಲಲು ಬಂದರೆ ಅಂತಹ ಆತತಾಯಿಯನ್ನು ಅವಶ್ಯವಾಗಿ ಸಂಹಾರಮಾಡಲೇಬೇಕು.

**ಶಾಶ್ವತೋಽಯಂ ಸ್ಥಿತೋ ಧರ್ಮಃ ಕ್ಷತ್ರಿಯಾಣಾಂ ಧನಂಜಯ ।**
**ಯೋದ್ಧವ್ಯಂ ರಕ್ಷಿತವ್ಯಂ ಚ ಯಷ್ಟವ್ಯಂ ಚಾನಸೂಯುಭಿಃ ॥೧೦೨॥**

ಧನಂಜಯ! ಕ್ಷತ್ರಿಯರಾದವರಿಗೆ ಇದು ಶಾಶ್ವತವಾದ ಮತ್ತು ಸ್ಥಿರವಾದ ಧರ್ಮವಾಗಿದೆ. ಅಸೂಯೆಯಿಲ್ಲದವರಾಗಿ ಶತ್ರುಗಳೊಡನೆ ಯುದ್ಧ ಮಾಡಬೇಕು. ಶಿಷ್ಟರನ್ನು ರಕ್ಷಿಸಬೇಕು ಮತ್ತು ಯಜ್ಞಮಾಡಬೇಕು. ಇವಿಷ್ಟೂ ಕ್ಷತ್ರಿಯರ ಮುಖ್ಯಧರ್ಮಗಳು.”

“ಕೃಷ್ಣ! ನಿಶ್ಚಯವಾಗಿಯೂ ಶಿಖಂಡಿಯೇ ಭೀಷ್ಮನ ಮರಣಕ್ಕೆ ಕಾರಣನಾಗುತ್ತಾನೆ. ಪಾಂಚಾಲ್ಯನನ್ನು ನೋಡಿದೊಡನೆಯೇ ಭೀಷ್ಮನು ಯುದ್ಧದಿಂದ ಹಿಮ್ಮೆಟ್ಟುತ್ತಾನೆ. ಆದುದರಿಂದ ನಾವೆಲ್ಲರೂ ಶಿಖಂಡಿಯನ್ನೇ ಮುಂದೆಮಾಡಿಕೊಂಡು ಗಾಂಗೇಯನನ್ನು ಉಪಾಯದಿಂದ ಸಂಹರಿಸೋಣ.

ಇದು ನನ್ನ ಅಭಿಪ್ರಾಯವಾಗಿದೆ. ನಾನು ಶಿಖಂಡಿಯ ರಕ್ಷಕನಾಗಿದ್ದುಕೊಂಡು ಬೇರೆಯ ಮಹಾಧನುಷ್ಮಂತರು ಮಧ್ಯದಲ್ಲಿ ಪ್ರವೇಶಿಸುವುದನ್ನು ಬಾಣಗಳಿಂದ ತಡೆಯುತ್ತಿರುತ್ತೇನೆ. ಶಿಖಂಡಿಯು ಯೋಧರಲ್ಲಿ ಶ್ರೇಷ್ಠನಾದ ಭೀಷ್ಮನೊಬ್ಬನನ್ನೇ ಎದುರಿಸಿ ಯುದ್ಧಮಾಡಲಿ. 'ಈ ಶಿಖಂಡಿಯು ಮೊದಲು ಕನ್ಯೆಯಾಗಿದ್ದು ಅನಂತರ ಪುರುಷನಾದನು. ಆದುದರಿಂದ ನಾನು ಶಿಖಂಡಿಯನ್ನು ಸಂಹರಿಸುವುದಿಲ್ಲ'–ಎಂದು ಕುರುಮುಖ್ಯನು ಹೇಳಿದ ಮಾತನ್ನು ನಾನೂ ಕೇಳಿದೆನು."

ಕೃಷ್ಣಸಹಿತರಾದ ಪಾಂಡವರು ಈ ರೀತಿಯಲ್ಲಿ ನಿಶ್ಚಯಿಸಿ, ಮಹಾತ್ಮನಾದ ಭೀಷ್ಮನ ಅನುಮತಿಯನ್ನು ಪಡೆದುಕೊಂಡು, ಹೃಷ್ಟವಾದ ಮನಸ್ಸಿನಿಂದ ತಮ್ಮ ಶಿಬಿರಗಳಿಗೆ ಹಿಂದಿರುಗಿದರು. ಪುರುಷರ್ಷಭರಾದ ಅವರು ನಿಶ್ಚಿಂತರಾಗಿ ತಮ್ಮ-ತಮ್ಮ ಶಯನಗಳಲ್ಲಿ ಪವಡಿಸಿ ವಿಶ್ರಾಂತಿಯನ್ನು ಪಡೆದರು."

೧೦೭ನೆಯ ಅಧ್ಯಾಯವು ಮುಗಿಯಿತು.

## ಒಂಬತ್ತನೆಯ ದಿವಸದ ಯುದ್ಧದ ವಿಶ್ಲೇಷಣೆ

ಮಿತ್ರರೊಡನೆ ದುರ್ಯೋಧನನ ಮಂತ್ರಾಲೋಚನೆಯ ಪೂರ್ವಾಂಗದೊಡನೆ ಒಂಬತ್ತನೆಯ ದಿವಸದ ಕಾರ್ಯಕ್ರಮಗಳು ಆರಂಭವಾಗುತ್ತವೆ. ದಂಡನಾಯಕನ ಸ್ಥಾನವನ್ನು ಭೀಷ್ಮನಿಂದ ಬೇರ್ಪಡಿಸಿ ಕರ್ಣನಿಗೆ ಕೊಡಬೇಕೆನ್ನುವ ನಿರ್ಣಯಕ್ಕೆ ಒಪ್ಪಿದ ದುರ್ಯೋಧನನು ಭೀಷ್ಮನ ಬಳಿಗೆ ಹೋಗಿ ಕರ್ಣನನ್ನು ಯುದ್ಧಮಾಡಲು ಆಹ್ವಾನಿಸಬೇಕೆಂದು ಪ್ರಾರ್ಥಿಸುತ್ತಾನೆ. ಅವನ ಇಂಗಿತವನ್ನರಿತ ಭೀಷ್ಮನು ಅರ್ಜುನನು ಅಜಯ್ಯನೆಂಬುದನ್ನು ನಿದರ್ಶನಗಳೊಡನೆ ಸಮರ್ಥಿಸುತ್ತಾನೆ. ಆದರೂ ಸಹ ತಾನು ತನ್ನ ಪ್ರಾಣಗಳನ್ನೇ ಒತ್ತೆಯಾಗಿಟ್ಟು ಯುದ್ಧಮಾಡುವುದಾಗಿ ಪ್ರತಿಜ್ಞೆಮಾಡುತ್ತಾನೆ. ಶಿಖಂಡಿಯನ್ನು ಮಾತ್ರ ಸಂಹರಿಸುವುದಿಲ್ಲವೆಂದು ಸ್ಪಷ್ಟಪಡಿಸುತ್ತಾನೆ. ದುರ್ಯೋಧನನು ಕರ್ಣನನ್ನು ಯುದ್ಧಕ್ಕೆ ಆಹ್ವಾನಿಸಲು ಪುನಃ ಒತ್ತಾಯಮಾಡುವುದಿಲ್ಲ. ದುರ್ಯೋಧನನ ಕಡೆ ಭೀಷ್ಮನು ಸರ್ವತೋಭದ್ರವ್ಯೂಹವನ್ನು ರಚಿಸುತ್ತಾನೆ. ಪಾಂಡವರೂ ಪ್ರತಿವ್ಯೂಹವನ್ನು ರಚಿಸುತ್ತಾರೆ. ವ್ಯೂಹದ ಹೆಸರು ನಿರ್ದೇಶಿತವಾಗಿಲ್ಲ. ಮಹಾವ್ಯೂಹವೆಂದು ಕರೆಯಲಾಗಿದೆ. ಭೀಷ್ಮನು

ಪಾಂಡವರ ಕಡೆಯ ಯೋಧರನ್ನು ಸಂಹರಿಸುವುದಾಗಿ ಪ್ರತಿಜ್ಞೆಮಾಡಿದ್ದರೂ ಮೊದಲು-ಮೊದಲು ಪಾಂಡವರದೇ ಮೇಲ್ಗೈ ಆಗಿರುವಂತೆ ಕಾಣುತ್ತದೆ. ಅಭಿಮನ್ಯುವು ಅತುಲವಾದ ಪರಾಕ್ರಮವನ್ನು ತೋರಿಸುತ್ತಾನೆ. ಕೌರವ ಸೇನೆಯು ಪರಾಜಯಗೊಳ್ಳುತ್ತದೆ. ೧೦೧ನೆಯ ಅಧ್ಯಾಯದಲ್ಲಿ ಅಭಿಮನ್ಯುವು ಭಾಸ್ಕರವೆಂಬ ಅಸ್ತ್ರವನ್ನು ಪ್ರಯೋಗಿಸುವ ಪ್ರಕರಣವು ಬರುತ್ತದೆ. ಆ ಮಹಾಸ್ತ್ರವು ಅಲಂಬುಷರಾಕ್ಷಸನು ಸೃಷ್ಟಿಸಿದ್ದ ಮಾಯಾಂಧಕಾರವನ್ನು ಹೋಗಲಾಡಿಸುತ್ತದೆ. ಅಲಂಬುಷನು, ಅಭಿಮನ್ಯುವಿನಿಂದ ಪರಾಜಿತನಾಗುತ್ತಾನೆ. ಅರ್ಜುನನಿಗೂ-ಭೀಷ್ಮ-ಕೃಪರಿಗೂ, ಸಾತ್ಯಕಿಗೂ-ಅಶ್ವತ್ಥಾಮ-ದ್ರೋಣರಿಗೂ ಯುದ್ಧವಾಗುತ್ತದೆ. ಅನಂತರ ಸಾತ್ಯಕಿಯ ಸಹಾಯಕ್ಕಾಗಿ ಬಂದ ಪಾರ್ಥನಿಗೂ-ದ್ರೋಣರಿಗೂ ಯುದ್ಧವು ಪ್ರಾರಂಭವಾಗುತ್ತದೆ. ೧೦೨ನೆಯ ಅಧ್ಯಾಯದಲ್ಲಿ ದ್ರೋಣ-ಪಾರ್ಥರಲ್ಲಿ ನಡೆಯುತ್ತಿದ್ದ ಯುದ್ಧವು ಪಾರ್ಥ-ಸುಶರ್ಮರ ಯುದ್ಧವಾಗಿ ಪರಿಣಮಿಸುತ್ತದೆ. ಆ ಸಮಯದಲ್ಲಿ ಕ್ರುದ್ಧನಾದ ಪಾರ್ಥನು ತ್ರಿಗರ್ತರೊಡನೆ ಯುದ್ಧಮಾಡುವಾಗ ವಾಯವ್ಯಾಸ್ತ್ರವನ್ನು ಪ್ರಯೋಗಿಸುತ್ತಾನೆ. ಅದನ್ನು ಉಪಶಮನಗೊಳಿಸಲು ದ್ರೋಣರು ಶೈಲವೆಂಬ ಮಹಾಸ್ತ್ರವನ್ನು ಪ್ರಯೋಗಿಸುತ್ತಾರೆ. ಹೀಗೆ ಈ ಅಧ್ಯಾಯದಲ್ಲಿ ಎರಡು ಮಹಾಸ್ತ್ರಗಳ ಪ್ರಯೋಗದ ಉಲ್ಲೇಖವಿದೆ.

ಅನಂತರ ಭಗದತ್ತನಿಗೂ-ಭೀಮನಿಗೂ ನಡೆಯುವ ಯುದ್ಧದಲ್ಲಿ ಭೀಮನು ಸಾವಿರಾರು ಆನೆಗಳನ್ನು ಸಂಹಾರಮಾಡುತ್ತಾನೆ. ಈ ಅಧ್ಯಾಯದ ಕಡೆಯಲ್ಲಿಯೂ ದುರ್ಯೋಧನನ ಸೈನ್ಯವು ಪರಾಙ್ಮುಖವಾದ ವಾರ್ತೆಯೇ ಇದೆ. ೧೦೩ನೆಯ ಅಧ್ಯಾಯದಲ್ಲಿ ಎರಡೂ ಪಕ್ಷಗಳ ಸೈನ್ಯಗಳ ಯುದ್ಧದ ವರ್ಣನೆಯಿದೆ. ಶಿಖಂಡಿಯು ಧೃಷ್ಟದ್ಯುಮ್ನಾದಿಗಳೊಡನೆ ಭೀಷ್ಮರನ್ನು ಎದುರಿಸಿ ಅವನನ್ನು ಬಾಣಗಳಿಂದ ಪ್ರಹರಿಸಿದರೂ ಭೀಷ್ಮನು ಶಿಖಂಡಿಯ ಮೇಲೆ ಬಾಣಪ್ರಯೋಗಮಾಡುವುದಿಲ್ಲ. ಈ ಪ್ರಕರಣದ ಉಲ್ಲೇಖವು ಈ ಅಧ್ಯಾಯದಲ್ಲಿ ಬರುತ್ತದೆ. ೧೦೪ನೆಯ ಅಧ್ಯಾಯದಲ್ಲಿ ಅರ್ಜುನನು ತ್ರಿಗರ್ತರನ್ನು ಪರಾಜಯಗೊಳಿಸುತ್ತಾನೆ. ದ್ರೋಣರು ದ್ರುಪದನನ್ನು ಪರಾಜಯಗೊಳಿಸುವ ಒಂದು ಪ್ರಕರಣವನ್ನು ಬಿಟ್ಟರೆ ಉಳಿದ ರಂಗಗಳಲ್ಲಿ ಪಾಂಡವರೇ ವಿಜಯಗಳಿಸುತ್ತಾರೆ. ಭೀಷ್ಮ-ಸಾತ್ಯಕಿಯರ ಯುದ್ಧದೊಂದಿಗೆ ಈ ಅಧ್ಯಾಯವು ಮುಗಿಯುತ್ತದೆ.

ಭೀಷ್ಮನ ರಕ್ಷಣೆಯ ವಿಷಯವಾಗಿ ದುರ್ಯೋಧನನು ವಿಶೇಷವಾಗಿ ಗಮನ ಕೊಡುತ್ತಿರುವುದು ೧೦೫ನೆಯ ಅಧ್ಯಾಯದ ಮೊದಲು ಪ್ರಸ್ತಾಪಿಸಲ್ಪಟ್ಟಿದೆ. ಶಕುನಿಯು ಕಳುಹಿಸುವ ಒಂದು ಲಕ್ಷ ಅಶ್ವಸೇನೆಯನ್ನೂ, ದುರ್ಯೋಧನನು ಕಳುಹಿಸುವ ಹತ್ತು ಸಾವಿರ ಅಶ್ವಸೇನೆಯನ್ನೂ ಯುಧಿಷ್ಠಿರ-ನಕುಲ-ಸಹದೇವರು ಮೂವರೇ ಧ್ವಂಸಮಾಡಿ ಪರಾಜಯಗೊಳಿಸಿದರೆಂಬ ವಿಷಯವು ಇಲ್ಲಿ ವರ್ಣಿಸಲ್ಪಟ್ಟಿದೆ. ಅನಂತರ ಶಲ್ಯನಿಗೂ, ಯುಧಿಷ್ಠಿರ-ನಕುಲ-ಸಹದೇವರಿಗೂ ಯುದ್ಧವು ಪ್ರಾರಂಭವಾಗುತ್ತದೆ. ಮಧ್ಯದಲ್ಲಿ ಭೀಷ್ಮನು ಪ್ರವೇಶಿಸಿ ಯುಧಿಷ್ಠಿರನೊಡನೆ ಯುದ್ಧದಲ್ಲಿ ತೊಡಗುತ್ತಾನೆ. ಇಲ್ಲಿಗೆ ಈ ಅಧ್ಯಾಯವು ಮುಗಿಯುತ್ತದೆ. ಭೀಷ್ಮನ ಅದ್ಭುತಪರಾಕ್ರಮದಿಂದಲೇ ಪ್ರಾರಂಭವಾಗುವ ೧೦೬ನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಭೀಷ್ಮನನ್ನು ಕೊಲ್ಲಲು ಹೋಗುವ ಸನ್ನಿವೇಶವು ಪುನಃ ಬರುತ್ತದೆ. ೫೯ನೆಯ ಅಧ್ಯಾಯದಲ್ಲಿ ೩೫ನೆಯ (ವರ್ತಮಾನಾಪಿ ತೇ ವೀರಾಃ) ಶ್ಲೋಕದಿಂದ, ೬೭ನೆಯ ಶ್ಲೋಕದವರೆಗಿರುವ (ಭೀಷ್ಮಂ ಯೌಧಿಷ್ಠಿರೇ ಬಲೇ) ಶ್ಲೋಕಗಳು ಈ ಅಧ್ಯಾಯದ ೨೬ನೆಯ ಶ್ಲೋಕದಿಂದ (ಯತಮಾನಾಶ್ಚ ತೇ ವೀರಾಃ) ೫೪ನೆಯ ಶ್ಲೋಕದವರೆಗೆ (ಭೀಷ್ಮಂ ಯೌಧಿಷ್ಠಿರೇ ಬಲೇ) ಪುನರಾವರ್ತಿತವಾಗಿವೆ. ಮಧ್ಯದಲ್ಲಿ ಒಂದೆರಡು ಕಡೆಗಳಲ್ಲಿ ಮಾತ್ರವೇ ಶ್ಲೋಕವ್ಯತ್ಯಾಸ ಮತ್ತು ಪದವ್ಯತ್ಯಾಸಗಳಾಗಿ ಅಲ್ಲಿಂದ ಮುಂದಕ್ಕೆ ೫೯ನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಚಕ್ರವನ್ನು ಹಿಡಿದುಕೊಂಡು ಭೀಷ್ಮನನ್ನು ಕೊಲ್ಲಲು ಹೋಗುವ ಪ್ರಕರಣವು ಬರುತ್ತದೆ. ಅರ್ಜುನನು ತಾನು ಭೀಷ್ಮನೊಡನೆ ಮನಃಪೂರ್ವಕವಾಗಿ ಯುದ್ಧಮಾಡುವೆನೆಂದು ಹೇಳಿ ಶ್ರೀಕೃಷ್ಣನನ್ನು ಕರೆತರುತ್ತಾನೆ. ತನ್ನ ಪ್ರತಿಜ್ಞೆಯಂತೆಯೇ ಮಹೇಂದ್ರಾಸ್ತ್ರಪ್ರಯೋಗದಿಂದ ಶತ್ರುಗಳನ್ನು ನಿರ್ಮೂಲಮಾಡಿಬಿಡುತ್ತಾನೆ. ಆದರೆ ಇಲ್ಲಿ ಆ ಪ್ರಕರಣವು ಸಂಪೂರ್ಣವಾಗಿ ವಿಕೃತವಾಗಿದೆ. ಈ ಅಧ್ಯಾಯದಲ್ಲಿ ಶ್ರೀಕೃಷ್ಣನು ಭೀಷ್ಮನನ್ನು ಕೊಲ್ಲಲು ಚಾವಟಿಯನ್ನು ಹಿಡಿದು ಹೋಗುತ್ತಾನೆ. ಚಕ್ರಾಯುಧವನ್ನು ತೆಗೆದುಕೊಂಡು ಹೋಗುವುದಿಲ್ಲ. ಹಿಂದಿನಂತೆಯೇ ಇಲ್ಲಿಯೂ ಸಹ ಶ್ರೀಕೃಷ್ಣನನ್ನು ಅರ್ಜುನನು ಸಮಾಧಾನಪಡಿಸಿ ಶಸ್ತ್ರದ ಮೇಲೆ, ಸತ್ಯದ ಮೇಲೆ ಮತ್ತು ತಾನು ಮಾಡಿದ ಸುಕೃತದ ಮೇಲೆ ಆಣೆಯಿಟ್ಟು ಪ್ರಮಾಣಮಾಡಿ ಭೀಷ್ಮನನ್ನು ಸಂಹಾರಮಾಡುವುದಾಗಿ ಹೇಳುತ್ತಾನೆ. ಕೃಷ್ಣನು ರಥದಲ್ಲಿ

ಕುಳಿತನಂತರವೂ ಭೀಷ್ಮನು ಇಬ್ಬರ ಮೇಲೂ ಬಾಣಪ್ರಯೋಗವನ್ನು ಮಾಡುತ್ತಲೇ ಇರುತ್ತಾನೆ. ಪಾಂಡವರ ಸೈನ್ಯವನ್ನು ಧ್ವಂಸಮಾಡುತ್ತಲೇ ಇರುತ್ತಾನೆ. ಈ ಅಧ್ಯಾಯದ ಕಡೆಯವರೆಗೂ ಪಾಂಡವಸೈನ್ಯದ ವಧೆಯು ನಿರಂತರವಾಗಿ ಸಾಗುತ್ತಲೇ ಇರುತ್ತದೆ. **'ಪಾಂಡವಸೈನ್ಯಾನಿ ದ್ರಾವ್ಯಮಾಣಾನಿ ತ್ರಾತಾರಂ ನಾಧ್ಯಗಚ್ಛನ್ತ'**–ಓಡುತ್ತಿರುವ ಪಾಂಡವರ ಸೈನ್ಯಕ್ಕೆ ರಕ್ಷಕರೇ ಸಿಕ್ಕಲಿಲ್ಲ–ಎಂಬುದೂ ಸಹ ಈ ಪ್ರಕರಣದಲ್ಲಿಯೇ ಬರುತ್ತದೆ. ಇಲ್ಲಿ ಉದ್ಭವಿಸುವ ಒಂದು ಪ್ರಶ್ನೆಯೆಂದರೆ ಭೀಷ್ಮನನ್ನು ಕೊಲ್ಲಲು ನಾನಾಪ್ರಕಾರ ವಾಗಿ ಆಣೆಯಿಟ್ಟು ಪ್ರಮಾಣಮಾಡಿದ ಅರ್ಜುನನು ರಥಕ್ಕೆ ಹಿಂದಿರುಗಿದ ನಂತರ ಭೀಷ್ಮನ ಮೇಲೆ ಒಂದು ಬಾಣವನ್ನೂ ಬಿಡಲೇ ಇಲ್ಲವೇ? ಬಿಡದಿರಲು ಕಾರಣವಾದರೂ ಏನು? ಅರ್ಜುನನು ಪ್ರತಿಜ್ಞೆಮಾಡಿದ್ದರೂ ಭೀಷ್ಮನ ಪರಾಕ್ರಮವನ್ನು ಕುಗ್ಗಿಸಲು ಆಗಲಿಲ್ಲವೆಂಬುದನ್ನು ತೋರಿಸುವುದಕ್ಕೋಸ್ಕರ ಈ ಪ್ರಕರಣವು ಸೇರಿರುವುದೇ?

ಈ ಅಧ್ಯಾಯದ ೨೪ನೆಯ ಶ್ಲೋಕದಿಂದ ೭೬ನೆಯ ಶ್ಲೋಕದವರೆಗೆ ಪುನರಾವರ್ತಿತವಾಗಿರುವ ಕಥಾಭಾಗವನ್ನು ಬಿಟ್ಟು ಮುಂದಕ್ಕೆ ಹೋದರೂ ಕಥೆಯ ಸ್ವಾರಸ್ಯವು ಯಾವ ವಿಧದಲ್ಲಿಯೂ ಸ್ವಲ್ಪವೂ ಕೆಡದಂತೆಯೇ ಮುಂದುವರಿಯುವುದನ್ನು ನಾವಿಲ್ಲಿ ಗಮನಿಸಬಹುದಾಗಿದೆ.

೨೫ನೆಯ ಶ್ಲೋಕದ ಆನುಪೂರ್ವಿಯು ಹೀಗಿದೆ :

**ಹತಾರೋಹಾ ಗಜಾ ರಾಜನ್ನಶ್ವಯಾಶ್ಚ ಹತಸಾದಿನಃ ।**
**ನ್ಯಪತನ್ತ ಗತಪ್ರಾಣಾಃ ಶತಶೋಽಥ ಸಹಸ್ರಶಃ ॥೨೫॥**

೭೭ನೆಯ ಶ್ಲೋಕದ ಆನುಪೂರ್ವಿಯು ಹೀಗಿದೆ :

**ಪ್ರಾಣಾನಾದತ್ತ ಯೋಧಾನಾಂ ಪಿತಾ ದೇವವ್ರತಸ್ತವ ।**
**ಗಭಸ್ತಿಭಿರಿವಾದಿತ್ಯಸ್ತೇಜಾಂಸಿ ಶಿಶಿರಾತ್ಯಯೇ ॥೭೭॥**

ಆದರೆ ಈ ಪಾಠವು ಭಂ. ರಿ. ಇನ್‌ಸ್ಟಿಟ್ಯೂಟ್‌ನವರ ಭಾರತದ ಪ್ರತಿ ಮೊದಲ್ಗೊಂಡು ಎಲ್ಲಾ ಅಚ್ಚಾದ ಪ್ರತಿಗಳಲ್ಲಿಯೂ ಇದೆ. ಆದುದರಿಂದ ನಾವೂ ಪ್ರಕಟಿಸಿದ್ದೇವೆ. ಇದು ಸ್ವಲ್ಪ ಜಿಜ್ಞಾಸೆಗೆ ಕಾರಣವಾದ ಪ್ರಕರಣವೆಂಬುದು ನಮ್ಮ ಅಭಿಪ್ರಾಯವಾಗಿದೆ.

ಒಂಬತ್ತನೆಯ ದಿವಸದ ಯುದ್ಧದ ಹಿಂದಿನ ರಾತ್ರಿ–ದುರ್ಯೋಧನನು ಜಯಗಳಿಸುವ ಆಶಯದಿಂದ ದುಃಶಾಸನ-ಶಕುನಿ-ಕರ್ಣರೊಡನೆ ಸಮಾಲೋಚನೆ ನಡೆಸುತ್ತಾನೆ. (ಅಧ್ಯಾಯ-೯೭) ಹತ್ತನೆಯ ದಿವಸದ ಯುದ್ಧದ ಹಿಂದಿನರಾತ್ರಿ–ಪಾಂಡವರು ಜಯಗಳಿಸುವ ಆಶಯದಿಂದ ಪ್ರತಿಪಕ್ಷದ ನಾಯಕನಾದ ಭೀಷ್ಮನೊಡನೆಯೇ ಸಮಾಲೋಚನೆ ನಡೆಸುತ್ತಾರೆ. (ಅಧ್ಯಾಯ-೧೦೭) ಈ ಪ್ರಕರಣದಲ್ಲಿ ನಾವು ಧರ್ಮರಾಜನ ರಾಜನೀತಿಯ ಕುಶಲತೆಯನ್ನೂ ಕಾಣಬಹುದಾಗಿದೆ. ಭೀಷ್ಮನ ಮರಣರಹಸ್ಯವನ್ನು ಅವನಿಂದಲೇ ತಿಳಿದು ತನ್ನನ್ನು ಸಂಹಾರಮಾಡಬಹುದೆಂಬ ಅನುಮತಿ ಯನ್ನೂ ಪಡೆದು ಪಾಂಡವರು ಶಿಬಿರಕ್ಕೆ ಹಿಂದಿರುಗುತ್ತಾರೆ.

೧೦೮ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಹತ್ತನೆಯ ದಿವಸದ ಯುದ್ಧಕ್ಕೆ ಎರಡೂ ಪಕ್ಷಗಳ ಸೈನ್ಯಗಳು ರಣರಂಗಕ್ಕೆ ಹೊರಟುದು : ಶಿಖಂಡೀ–ಭೀಷ್ಮರ ಸಮಾಗಮ : ಭೀಷ್ಮನನ್ನು ಕೊಲ್ಲುವಂತೆ ಅರ್ಜುನನು ಶಿಖಂಡಿಗೆ ಪ್ರೋತ್ಸಾಹನೀಡಿದುದು

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ಯುದ್ಧಸಮಯದಲ್ಲಿ ಶಿಖಂಡಿಯು ಗಾಂಗೇಯನನ್ನು ಹೇಗೆ ಆಕ್ರಮಿಸಿದನು? ಭೀಷ್ಮನು ಪಾಂಡವರ ಮೇಲೆ ಹೇಗೆ ದಾಳಿನಡೆಸಿದನು? ಈ ಎಲ್ಲ ವಿಷಯಗಳನ್ನೂ ನನಗೆ ವಿವರಿಸಿ ಹೇಳು."

"ಮಹಾರಾಜ! ಸೂರ್ಯೋದಯವಾಗುತ್ತಲೇ ಭೇರೀ, ಮೃದಂಗ, ಮತ್ತು ಡೋಲುಗಳನ್ನು ಬಾರಿಸುತ್ತಿರಲಾಗಿ, ಮೊಸರಿನಂತೆ ಬಿಳುಪಾಗಿದ್ದ ಶಂಖಗಳ ಧ್ವನಿಗಳು ಸುತ್ತಲೂ ತುಂಬುತ್ತಿರಲಾಗಿ, ಶಿಖಂಡಿಯನ್ನು ಮುಂದಿಟ್ಟುಕೊಂಡು ಪಾಂಡವರು ತಮ್ಮ ಶಿಬಿರಗಳಿಂದ ಹೊರಟರು. ಸರ್ವಶತ್ರುವಿನಾಶಕವಾದ ಮಹಾವ್ಯೂಹವನ್ನು ಪಾಂಡವರು ರಚಿಸಿದರು. ಅಂದು ಶಿಖಂಡಿಯು ಎಲ್ಲ ಸೈನ್ಯಗಳ ಅಗ್ರಭಾಗದಲ್ಲಿದ್ದನು. ಅವನ ರಥದ

ಎರಡೂ ಕಡೆಗಳ ಚಕ್ರಗಳನ್ನು ಭೀಮಸೇನ-ಧನಂಜಯರು ರಕ್ಷಿಸುತ್ತಿದ್ದರು. ಶಿಖಂಡಿಯ ರಥದ ಹಿಂಬದಿಯಲ್ಲಿ ದ್ರೌಪದಿಯ ಐವರು ಮಕ್ಕಳೂ, ವೀರ್ಯವಂತನಾದ ಅಭಿಮನ್ಯುವೂ ಇದ್ದರು. ಅವರ ರಕ್ಷಕರಾಗಿ ಸಾತ್ಯಕಿ ಮತ್ತು ಚೇಕಿತಾನರು ಇದ್ದರು. ಅವರ ಹಿಂದೆ ಪಾಂಚಾಲಸೈನಿಕರಿಂದ ಅಭಿರಕ್ಷಿತನಾದ ಮಹಾರಥನಾದ ಧೃಷ್ಟದ್ಯುಮ್ನನಿದ್ದನು. ಪಾರ್ಷತನ ಅನಂತರ ಯಮಳರಿಂದ ಸಮೇತನಾಗಿ ಯುಧಿಷ್ಠಿರರಾಜನು ಸಿಂಹನಾದದಿಂದ ಎಲ್ಲ ದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಾ ಯುದ್ಧಕ್ಕೆ ಹೋಗುತ್ತಿದ್ದನು. ಧರ್ಮಜನ ಹಿಂದೆ ವಿರಾಟನು ತನ್ನ ಸೈನ್ಯದಿಂದ ಪರಿವೃತನಾಗಿ ಹೋಗುತ್ತಿದ್ದನು. ಮಹಾಧನುಷ್ಮಂತನಾದ ದ್ರುಪದನು ವಿರಾಟನ ಹಿಂದೆ ವೇಗವಾಗಿ ಹೋಗುತ್ತಿದ್ದನು. ಐವರು ಕೇಕಯಸಹೋದರರೂ, ವೀರ್ಯವಂತನಾದ ಧೃಷ್ಟಕೇತುವೂ ಪಾಂಡವಸೈನ್ಯದ ಜಘನಪ್ರದೇಶದ ರಕ್ಷಕ ರಾಗಿದ್ದರು. ಈ ರೀತಿಯಲ್ಲಿ ಪಾಂಡವರು ತಮ್ಮ ಮಹಾಸೈನ್ಯವನ್ನು ವ್ಯೂಹಾ ಕಾರದಲ್ಲಿ ನಿಲ್ಲಿಸಿಕೊಂಡು ತಮ್ಮ ಪ್ರಾಣಗಳನ್ನೇ ಒತ್ತೆಯಾಗಿಟ್ಟು ನಿನ್ನ ಸೈನ್ಯವನ್ನು ಆಕ್ರಮಿಸಿದರು.

ಅದೇ ರೀತಿಯಲ್ಲಿ ಕುರುಗಳೂ ಕೂಡ ಮಹಾರಥನಾದ ಭೀಷ್ಮನನ್ನು ಎಲ್ಲ ಸೈನ್ಯಗಳಿಗೂ ಅಗ್ರಭಾಗದಲ್ಲಿ ನಿಲ್ಲಿಸಿಕೊಂಡು ಪಾಂಡವಸೈನ್ಯದ ಮೇಲೆ ದಾಳಿಮಾಡಲು ಉಪಕ್ರಮಿಸಿದರು. ಸರ್ವಸೈನ್ಯದ ಮುಂಭಾಗದಲ್ಲಿದ್ದ ದುರಾಧರ್ಷನಾದ ಭೀಷ್ಮನು ಸುಮಹಾಬಲರಾದ ನಿನ್ನ ಮಕ್ಕಳಿಂದ ರಕ್ಷಿಸ ಲ್ಪಡುತ್ತಿದ್ದನು. ನಿನ್ನ ಮಕ್ಕಳ ಹಿಂಭಾಗದಲ್ಲಿ ಮಹಾಧನುರ್ಧರರಾದ ದ್ರೋಣರೂ, ಮಹಾಬಲನಾದ ಅವರ ಮಗನೂ ಇದ್ದರು. ಅವರ ಹಿಂಭಾಗ ದಲ್ಲಿ ಗಜಸೈನ್ಯದಿಂದ ಪರಿವೃತನಾಗಿದ್ದ ಭಗದತ್ತನಿದ್ದನು. ಕೃಪ ಮತ್ತು ಕೃತವರ್ಮರು ಭಗದತ್ತನನ್ನು ಅನುಸರಿಸಿ ಹೋಗುತ್ತಿದ್ದರು. ಕೃಪ-ಕೃತ ವರ್ಮರ ಹಿಂಭಾಗದಲ್ಲಿ ಬಲಿಷ್ಠನಾದ ಕಾಂಬೋಜರಾಜನಾದ ಸುದಕ್ಷಿಣ, ಮಗಧದೇಶೀಯನಾದ ಜಯತ್ಸೇನ, ಸುಬಲನ ಮಗನಾದ ಶಕುನಿ, ಬೃಹ ದ್ಬಲ–ಇವರು ಹೋಗುತ್ತಿದ್ದರು. ಸುಶರ್ಮಪ್ರಮುಖರಾದ ಇತರ ಮಹಾ ಧನುಷ್ಮಂತರಾದ ರಾಜರು ನಿನ್ನ ಸೈನ್ಯದ ಕಟಿಪ್ರದೇಶವನ್ನು ರಕ್ಷಿಸುತ್ತಿದ್ದರು. ಶಾಂತನುವಿನ ಮಗನಾದ ಭೀಷ್ಮನು ದಿವಸಗಳು ಕಳೆದಂತೆಲ್ಲಾ ಆಸುರ, ಪೈಶಾಚ ಮತ್ತು ರಾಕ್ಷಸವ್ಯೂಹಗಳನ್ನು ರಚಿಸುತ್ತಿದ್ದನು. ಎರಡು ಪಕ್ಷಗಳೂ

ತಮ್ಮ ಕಡೆಯ ಸೈನಿಕರನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿದನಂತರ ನಿನ್ನ ಕಡೆಯ ವರಿಗೂ ಪಾಂಡವರ ಕಡೆಯವರಿಗೂ ಅನ್ಯೋನ್ಯಘಾತಕವಾದ, ಯಮರಾಷ್ಟ್ರ ವನ್ನು ವರ್ಧಿಸತಕ್ಕ ಘೋರಯುದ್ಧವು ಪ್ರಾರಂಭವಾಯಿತು. ಅರ್ಜುನ ಪ್ರಮುಖರಾದ ಪಾಂಡವರು ಶಿಖಂಡಿಯನ್ನು ಮುಂದಿಟ್ಟುಕೊಂಡು ವಿಧ-ವಿಧವಾದ ಬಾಣಗಳನ್ನು ಸುರಿಸುತ್ತಾ ಭೀಷ್ಮನನ್ನು ಆಕ್ರಮಿಸಿದರು. ಭೀಮನ ಬಾಣಗಳಿಂದ ಪ್ರಹೃತರಾದ ನಿನ್ನ ಕಡೆಯ ಯೋಧರು ರಕ್ತದಿಂದ ತೋಯ್ದವ ರಾಗಿ ಅಸುನೀಗಿ ಪರಲೋಕವನ್ನು ಸೇರಿದರು. ನಕುಲ-ಸಹದೇವರು, ಮಹಾ ರಥನಾದ ಸಾತ್ಯಕಿ ಇವರು ನಿನ್ನ ಸೈನ್ಯದ ಮೇಲೆ ಹಲ್ಲೆಮಾಡಿ ಯೋಧರನ್ನು ಬಹಳವಾಗಿ ಪೀಡಿಸುತ್ತಿದ್ದರು. ಪಾಂಡವಯೋಧರಿಂದ ಅನವರತವಾಗಿ ವಧಿಸಲ್ಪಡುತ್ತಿದ್ದ ನಿನ್ನ ಸೈನಿಕರೂ ಪಾಂಡವರ ಮಹಾಸೈನ್ಯವನ್ನು ತಡೆಯಲು ಶಕ್ತರಾಗಲಿಲ್ಲ. ಪಾಂಡವರ ಕಡೆಯ ಮಹಾರಥರಿಂದ ಸರ್ವತ್ರ ವಧಿಸಲ್ಪಡು ತ್ತಿದ್ದ ಮತ್ತು ಕಲಕಲ್ಪಡುತ್ತಿದ್ದ ನಿನ್ನ ಸೈನ್ಯಗಳು ಹತ್ತು ದಿಕ್ಕುಗಳನ್ನೂ ಆಶ್ರಯಿಸಿದುವು. (ಎಲ್ಲ ಕಡೆಗಳಿಗೂ ಓಡಿಹೋದುವು). ಪಾಂಡವ ರಿಂದಲೂ, ಸೃಂಜಯರಿಂದಲೂ ನಿಶಿತವಾದ ಬಾಣಗಳ ಮೂಲಕ ವಧಿಸಲ್ಪಡುತ್ತಿದ್ದ ನಿನ್ನ ಸೈನ್ಯವು ರಕ್ಷಕರನ್ನೇ ಕಾಣದೇ ಹೋಯಿತು."

ಹತ್ತನೆಯ ದಿವಸದ ಯುದ್ಧದ ಪ್ರಾರಂಭದಲ್ಲಿಯೇ ತನ್ನ ಸೈನಿಕರು ಸೋತುಹೋಗುತ್ತಿದ್ದಾರೆಂಬ ವಿಷಯವನ್ನು ಕೇಳಿ ಧೃತರಾಷ್ಟ್ರನಿಗೆ ಬಹಳ ಬೇಸರವಾಗಿರಬಹುದು. ಸಂಜಯನು ಕೌರವಸೇನೆಯ ದುರ್ದೆಸೆಯನ್ನು ವಿವರಿಸುತ್ತಿದ್ದಾಗ ಮಧ್ಯೆ ಬಾಯಿಹಾಕಿ ಪ್ರಶ್ನಿಸಿದನು :

"ಸಂಜಯ! ಪಾರ್ಥರಿಂದ ನನ್ನ ಸೈನ್ಯವು ಸತತವಾಗಿ ಪೀಡಿಸಲ್ಪಡು ತ್ತಿದ್ದುದನ್ನು ನೋಡಿ ಪರಾಕ್ರಮಿಯಾದ ಭೀಷ್ಮನೇನು ಮಾಡಿದನು? ಅದನ್ನು ನನಗೆ ಹೇಳು. ಪರಂತಪನಾದ ಮತ್ತು ವೀರನಾದ ಭೀಷ್ಮನು ಒಂದು ಕಡೆ ಯಲ್ಲಿ ಸೋಮಕರನ್ನು ಸಂಹರಿಸುತ್ತಾ, ಮತ್ತೊಂದು ಕಡೆಯಲ್ಲಿ ವೀರರಾದ ಪಾಂಡವರನ್ನು ಎದುರಿಸುತ್ತಾ ಹೇಗೆ ಯುದ್ಧಮಾಡುತ್ತಿದ್ದನೆಂಬುದನ್ನು ಹೇಳು."

"ಮಹಾರಾಜ! ಆ ವಿಷಯವನ್ನೂ ಹೇಳುತ್ತೇನೆ. ಪಾಂಡವ-ಸೃಂಜ ಯರು ನಿನ್ನ ಸೈನ್ಯವನ್ನು ಪೀಡಿಸುತ್ತಿದ್ದಾಗ ನಿನ್ನ ತಂದೆಯು ಏನು ಮಾಡಿದ ನೆಂಬುದನ್ನೂ ವಿಶದವಾಗಿ ಹೇಳುತ್ತೇನೆ ; ಕೇಳು :

ಪಾಂಡುಪೂರ್ವಜನೇ! ಪ್ರಹೃಷ್ಟವಾದ ಮನಸ್ಸಿನಿಂದ ಕೂಡಿದ್ದ ಶೂರರಾದ ಪಾಂಡವರು ನಿನ್ನ ಮಗನ ಸೈನ್ಯವನ್ನು ಧ್ವಂಸಗೊಳಿಸುತ್ತಾ ಮುಂದೆ ಮುಂದೆ ಬರುತ್ತಿದ್ದರು. ಗಜಾಶ್ವ-ಪದಾತಿಗಳ ವಿನಾಶವನ್ನೂ ಮತ್ತು ಶತ್ರುಗಳು ಅನವರತವಾಗಿ ಮಾಡುತ್ತಿದ್ದ ತನ್ನ ಸೈನ್ಯಗಳ ಸಂಹಾರವನ್ನೂ ಭೀಷ್ಮನು ಸಹಿಸಿಕೊಳ್ಳಲಿಲ್ಲ. (ಸಂಕ್ರುದ್ಧನಾದನು). ಮಹಾಧನುಷ್ಮಂತನಾದ, ದುರ್ಧರ್ಷನಾದ ಭೀಷ್ಮನು ತನ್ನ ಜೀವಿತದ ಹಂಗನ್ನೂ ತೊರೆದು ಪಾಂಡವರನ್ನೂ, ಪಾಂಚಾಲರನ್ನೂ, ಸೃಂಜಯರನ್ನೂ ನಾರಾಚ, ವತ್ಸದಂತ, ನಿಶಿತವಾದ ಅಂಜಲಿಕ–ಇವೇ ಮುಂತಾದ ಬಾಣಗಳ ವರ್ಷದಿಂದ ಮುಚ್ಚಿಬಿಟ್ಟನು. ಅನೇಕಶಸ್ತ್ರಗಳನ್ನು ಹೊಂದಿದ್ದ ಭೀಷ್ಮನು ಪಾಂಡವರ ಐವರು ಶ್ರೇಷ್ಠಮಹಾರಥರನ್ನು (ಪಾಂಡವರನ್ನು ) ವೀರ್ಯದಿಂದಲೂ, ಕೋಪದಿಂದಲೂ ಪ್ರೇರಿತವಾದ, ನಾನಾವಿಧವಾದ, ವೃಷ್ಟಿರೂಪವಾದ ಶಸ್ತ್ರಾಸ್ತ್ರಗಳಿಂದಲೂ ಬಾಣಗಳಿಂದಲೂ ಪ್ರಯತ್ನಪೂರ್ವಕವಾಗಿ ತಡೆದನು. ಕ್ರುದ್ಧನಾದ ಭೀಷ್ಮನು ಅಸಂಖ್ಯಾತವಾದ ಆನೆಗಳನ್ನೂ, ಕುದುರೆಗಳನ್ನೂ ಸಂಹರಿಸಿದನು. ಪುರುಷರ್ಷಭನಾದ ಭೀಷ್ಮನು ಶತ್ರುಗಳ ಜಯಕ್ಕೆ ಕಾರಣರಾದ ರಥಿಗಳನ್ನು ರಥಗಳಿಂದ ಹೊಡೆದು ಉರುಳಿಸಿದನು. ಕುದುರೆಸವಾರರನ್ನು ಕುದುರೆಗಳಿಂದ ಕೆಳಕ್ಕುರುಳಿಸಿದನು. ತನ್ನ ಎದುರಾಗಿ ಬಂದ ಪದಾತಿಗಳನ್ನು ಅಪಾರಸಂಖ್ಯೆಯಲ್ಲಿ ಸಂಹಾರಮಾಡಿದನು. ಗಜಯೋಧರನ್ನು ಆನೆಗಳಿಂದ ಕೆಳಗುರುಳಿಸಿದನು. ಮಹಾರಥನಾದ, ವೇಗಶಾಲಿಯಾದ, ಒಬ್ಬನೇ ಒಬ್ಬ ಭೀಷ್ಮನನ್ನು–ವಜ್ರಪಾಣಿಯಾದ ಇಂದ್ರನನ್ನು ಅಸುರರು ಆಕ್ರಮಿಸಿದಂತೆ–ಪಾಂಡವ ರೆಲ್ಲರೂ ಆಕ್ರಮಿಸಿದರು. ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಕಠಿನ ಸ್ಪರ್ಶವಿದ್ದ, ನಿಶಿತವಾದ ಬಾಣಗಳನ್ನು ಸತತವಾಗಿ ಬಿಡುತ್ತಾ ಭಯಂಕರವಾದ ರೂಪವನ್ನು ಧರಿಸಿ ಎಲ್ಲ ದಿಕ್ಕುಗಳಲ್ಲಿಯೂ ಭೀಷ್ಮನೇ ಕಾಣಿಸಿಕೊಳ್ಳುತ್ತಿದ್ದನು. ರಣಾಂಗಣದಲ್ಲಿ ಯುದ್ಧಮಾಡುತ್ತಿದ್ದಾಗ ಇಂದ್ರನ ಧನುಸ್ಸಿಗೆ ಸಮಾನವಾಗಿದ್ದ ಭೀಷ್ಮನ ಧನುಸ್ಸು ಯಾವಾಗಲೂ ಮಂಡಲಾಕಾರವಾಗಿಯೇ ಇರುವಂತೆ ಕಾಣುತ್ತಿದ್ದಿತು. ದುರ್ಯೋಧನನೇ ಮೊದಲಾದ ನಿನ್ನ ಮಕ್ಕಳು ಭೀಷ್ಮನ ಪರಮಾದ್ಭುತವಾದ ಆ ವಿಶಸನಕ್ರಿಯೆಯನ್ನು ನೋಡಿ ಬಹಳ ವಿಸ್ಮಯಗೊಂಡು ಪಿತಾಮಹನನ್ನು ಪ್ರಶಂಸಿಸಿದರು.

ವಿಪ್ರಚಿತ್ತಿರಾಕ್ಷಸನನ್ನು ದೇವತೆಗಳು ಎಷ್ಟು ಖಿನ್ನಚಿತ್ತರಾಗಿ ನೋಡುತ್ತಿದ್ದರೋ ಅದೇ ರೀತಿಯಲ್ಲಿ ಯುದ್ಧಮಾಡುತ್ತಿದ್ದ ನಿನ್ನ ತಂದೆಯನ್ನು ಪಾಂಡವರು ಖಿನ್ನಚಿತ್ತರಾಗಿ ನೋಡುತ್ತಿದ್ದರು. ಬಾಯ್ತೆರೆದ ಅಂತಕನಂತೆಯೇ ಇದ್ದ ಭೀಷ್ಮನನ್ನು ತಡೆಯಲು ಪಾಂಡವರು ಅಸಮರ್ಥರಾದರು. ಯುದ್ಧವು ಪ್ರಾರಂಭವಾಗಿ ಹತ್ತನೆಯ ದಿವಸವು ಪ್ರಾಪ್ತವಾಗಲಾಗಿ–ಅಗ್ನಿಯು ಅರಣ್ಯವನ್ನು ಭಸ್ಮಮಾಡಿಬಿಡುವಂತೆ–ಭೀಷ್ಮನು ತನ್ನ ನಿಶಿತವಾದ ಬಾಣಗಳಿಂದ ಶಿಖಂಡಿಯ ರಥಸೈನ್ಯವನ್ನು ಭಸ್ಮಮಾಡಿಬಿಟ್ಟನು. ಕಾಲಪುರುಷನಿಂದ ಸೃಷ್ಟಿಸಲ್ಪಟ್ಟ ಮೃತ್ಯುವಿನೋಪಾದಿಯಲ್ಲಿದ್ದ, ಕಾಲಿನಿಂದ ತುಳಿಯಲ್ಪಟ್ಟ ವಿಷಸರ್ಪದಂತೆ ಬಹಳ ಕ್ರುದ್ಧನಾಗಿದ್ದ ಭೀಷ್ಮನನ್ನು ಶಿಖಂಡಿಯು ಮೂರು ಬಾಣಗಳಿಂದ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಬಾಣಗಳು ಭೀಷ್ಮನ ಶರೀರದಲ್ಲಿ ಬಹಳ ಆಳದವರೆಗೂ ಪ್ರವೇಶಿಸಲು ಅದರಿಂದ ಬಹಳ ಪೀಡಿತನಾದ ಭೀಷ್ಮನು ಬಹುಕ್ರುದ್ಧನಾಗಿ ಶಿಖಂಡಿಯ ಕಡೆಗೆ ತಿರುಗಿ ನೋಡಿ ಅವನನ್ನು ನೋಡಲೂ ಸಹ ಇಚ್ಛೆಯಿಲ್ಲದವನಂತೆ ಅಟ್ಟಹಾಸದಿಂದ ನಗುತ್ತಾ ಶಿಖಂಡಿಯನ್ನು ಕುರಿತು ಹೇಳಿದನು : "ನೀನು ನನ್ನನ್ನು ಚೆನ್ನಾಗಿಯೇ ಪ್ರಹರಿಸು ಅಥವಾ ಪ್ರಹರಿಸದಿರು. ನಾನು ಮಾತ್ರ ನಿನ್ನೊಡನೆ ಯಾವುದೇ ಕಾರಣದಿಂದಲೂ ಯುದ್ಧಮಾಡುವುದಿಲ್ಲ. ಮೊದಲು ಬ್ರಹ್ಮನು ನಿನ್ನನ್ನು ಯಾವ ಹೆಣ್ಣಿನ ರೂಪದಲ್ಲಿ ಸೃಷ್ಟಿಸಿದನೋ ಈಗಲೂ ಸಹ ಶಿಖಂಡಿನೀ ನಾಮಕಳಾದ ಆ ಸ್ತ್ರೀಯೇ ನೀನೆಂದು ನಾನು ಭಾವಿಸುತ್ತೇನೆ."

ಭೀಷ್ಮನ ಆ ಮಾತನ್ನು ಕೇಳಿ ಕ್ರೋಧಮೂರ್ಛಿತನಾದ ಶಿಖಂಡಿಯು ತನ್ನೆರಡು ಕಟವಾಯಿಗಳನ್ನೂ ನಾಲಿಗೆಯಿಂದ ನೆಕ್ಕಿಕೊಳ್ಳುತ್ತಾ ಭೀಷ್ಮನನ್ನು ಕುರಿತು ಹೇಳಿದನು : "ಮಹಾಬಾಹುವೇ! ಕ್ಷತ್ರಿಯರನ್ನು ಕ್ಷಯಗೊಳಿಸುವವನೇ! ನೀನಾರೆಂಬುದನ್ನು ನಾನೂ ಚೆನ್ನಾಗಿ ತಿಳಿದಿರುತ್ತೇನೆ. ನೀನು ಜಮದಗ್ನಿಯ ಮಗನಾದ ಪರಶುರಾಮನೊಡನೆ ಯುದ್ಧಮಾಡಿದ ವಾರ್ತೆಯನ್ನೂ ಕೇಳಿದ್ದೇನೆ. ನಿನ್ನ ದಿವ್ಯವಾದ ಪ್ರಭಾವವನ್ನೂ ನಾನು ಅನೇಕಬಾರಿ ಅನೇಕರಿಂದ ಕೇಳಿ ತಿಳಿದುಕೊಂಡಿರುತ್ತೇನೆ. ಅಂತಹ ನಿನ್ನ ಅದ್ಭುತವಾದ ಮತ್ತು ದಿವ್ಯವಾದ ಪ್ರಭಾವವನ್ನು ತಿಳಿದೂ ನಾನೀಗ ನಿನ್ನೊಡನೆ ಯುದ್ಧಮಾಡುತ್ತೇನೆ. ನರೋತ್ತಮ! ಪುರುಷೋತ್ತಮ! ಪಾಂಡವರಿಗೂ ಪ್ರಿಯವನ್ನುಂಟುಮಾಡುತ್ತಾ, ನನ್ನ ಆತ್ಮಕ್ಕೂ ನೆಮ್ಮದಿಯನ್ನುಂಟುಮಾಡಿ

ಕೊಳ್ಳುತ್ತಾ, ಈಗ ನಾನು ನಿನ್ನೊಡನೆ ಯುದ್ಧಮಾಡುತ್ತೇನೆ. ನಿಶ್ಚಯವಾಗಿಯೂ ಈ ಯುದ್ಧದಲ್ಲಿ ನಾನು ನಿನ್ನನ್ನು ಸಂಹರಿಸುತ್ತೇನೆ. ನಿನ್ನ ಮುಂದೆ ಈ ಮಾತನ್ನು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ. ನನ್ನ ಈ ಮಾತನ್ನು ಕೇಳಿದನಂತರ ಯಾವುದಾದರೂ ಮಾಡುವ ಕಾರ್ಯವು ಉಳಿದಿ



ದ್ದರೆ ಅದನ್ನು ಮಾಡಿ ಮುಗಿಸಿಬಿಡು. ಸಮಿತಿಂಜಯನೇ! ಭೀಷ್ಮ! ನೀನು ನನ್ನನ್ನು ಬಾಣಗಳಿಂದ ಚೆನ್ನಾಗಿ ಪ್ರಹರಿಸು ಅಥವಾ ಪ್ರಹರಿಸದೆಯೇ ಇರು. ನಾನು ಮಾತ್ರ ಇಂದು ನಿನ್ನನ್ನು ಪ್ರಾಣಗಳಿಂದ ವಿಮುಕ್ತನನ್ನಾಗಿ ಮಾಡುತ್ತೇನೆ. ಪುನಃ ನೀನು ಈ ಲೋಕವನ್ನು ಮಾತ್ರ ನೋಡಲಾರೆ. ಈಗಲೇ ಒಮ್ಮೆ ಚೆನ್ನಾಗಿ ನೋಡಿಬಿಡು." ಮಹಾರಾಜ! ಶಿಖಂಡಿಯು ಈ ಪರಿಯಲ್ಲಿ ಬಾಣದಂತಹ ಮಾತುಗಳಿಂದ ಭೀಷ್ಮನನ್ನು ಪೀಡಿಸಿ ಬಳಿಕ ಬಗ್ಗಿದ ಗಿಣ್ಣುಗಳಿದ್ದ ಐದು ಬಾಣಗಳಿಂದ ಅವನನ್ನು ಪ್ರಹರಿಸಿದನು. ಶಿಖಂಡಿಯು ಹೇಳಿದ ಮಾತುಗಳನ್ನು ಕೇಳಿ ಮಹಾರಥನಾದ ಅರ್ಜುನನು ಭೀಷ್ಮನ ಸಂಹಾರಕ್ಕೆ ಅದು ಸಕಾಲವಾಗಿದೆಯೆಂದು ಭಾವಿಸಿ ಶಿಖಂಡಿಯನ್ನು ಪ್ರೋತ್ಸಾಹಿಸುತ್ತಾ ಹೇಳಿದನು: "ದ್ರುಪದಾತ್ಮಜ! ಶತ್ರುಗಳನ್ನು ಬಾಣಗಳ ಪ್ರಹಾರದಿಂದ ಪಲಾಯನಮಾಡಿಸುತ್ತಾ ನಾನು ನಿನ್ನನ್ನು ಅನುಸರಿಸಿ ಬರುತ್ತೇನೆ. ನೀನು ಭೀಮಪರಾಕ್ರಮನಾದ ಭೀಷ್ಮನನ್ನು ರೋಷಪೂರ್ವಕವಾಗಿ ಆಕ್ರಮಿಸು.

ಮಹಾಬಲನಾದ ಅವನು ಯುದ್ಧದಲ್ಲಿ ನಿನಗೆ ಪೀಡೆಯನ್ನುಂಟುಮಾಡಲು ಶಕ್ತನಲ್ಲ. (ಅವನು ಮಹಾಬಲನೇ ಆಗಿದ್ದರೂ ಯುದ್ಧದಲ್ಲಿ ನಿನಗೆ ಪೀಡೆ ಯನ್ನುಂಟುಮಾಡುವ ಶಕ್ತಿಯು ಅವನಿಗಿಲ್ಲ ). ತನ್ನ ಪ್ರತಿಜ್ಞೆಯಿಂದಾಗಿ ಅವನೇ ಆ ಶಕ್ತಿಯನ್ನು ಕಳೆದುಕೊಂಡುಬಿಟ್ಟಿದ್ದಾನೆ. ಆದುದರಿಂದ ನೀನು ಈಗಲೇ ಪ್ರಯತ್ನಪೂರ್ವಕವಾಗಿ ಭೀಷ್ಮನನ್ನು ಆಕ್ರಮಿಸು. ಭೀಷ್ಮನನ್ನು ಸಂಹರಿಸದೆಯೇ ನೀನೇನಾದರೂ ಹೊರಟುಹೋದೆಯಾದರೆ ಪ್ರಪಂಚದ ಅಪಹಾಸ್ಯಕ್ಕೆ ಗುರಿಯಾಗುವೆ. ನಾನೂ ಸಹ ಜನರ ಅಪಹಾಸ್ಯಕ್ಕೆ ಗುರಿಯಾಗುತ್ತೇನೆ.

ಜನರ ಅಪಹಾಸ್ಯಕ್ಕೆ ಗುರಿಯಾಗದಂತೆ ನಾವು ವರ್ತಿಸಬೇಕಾಗಿದೆ. ಆದುದರಿಂದ ನಾವಿಬ್ಬರೂ ಅಪಹಾಸ್ಯಕ್ಕೆ ಗುರಿಯಾಗದ ರೀತಿಯಲ್ಲಿ ನೀನು ಪ್ರಯತ್ನವನ್ನು ಮಾಡು. ಪಿತಾಮಹನನ್ನು ಸಂಹರಿಸು. ನಿಮ್ಮಿಬ್ಬರಿಗೂ ಯುದ್ಧವಾಗುತ್ತಿರುವಾಗ ಮಧ್ಯದಲ್ಲಿ ಬರುವ ರಥಿಗಳೆಲ್ಲರನ್ನೂ ನಾನು ನನ್ನ ಶರವರ್ಷದಿಂದ ತಡೆಯುತ್ತಾ ಯುದ್ಧದಲ್ಲಿ ನಿನಗೆ ಸಂಪೂರ್ಣವಾದ ರಕ್ಷಣೆ ಯನ್ನು ಕೊಡುತ್ತೇನೆ. ನನ್ನಿಂದ ರಕ್ಷಿತನಾದ ನೀನು ಪಿತಾಮಹನ ಸಂಹಾರವನ್ನು ಸಾಧಿಸು. (ಅವನ ಸಂಹಾರಮಾಡು.) ದ್ರೋಣರು, ಅವರ ಮಗ ಅಶ್ವತ್ಥಾಮಾ, ಕೃಪರು, ಸುಯೋಧನ, ಚಿತ್ರಸೇನ, ವಿಕರ್ಣ, ಸಿಂಧುರಾಜ ನಾದ ಜಯದ್ರಥ, ಅವಂತಿಯ ರಾಜಕುಮಾರರಾದ ವಿಂದಾನುವಿಂದರು, ಕಾಂಬೋಜರಾಜನಾದ ಸುದಕ್ಷಿಣ, ವೀರನಾದ ಭಗದತ್ತ, ಮಹಾಬಲಿಷ್ಠನಾದ ಮಗಧರಾಜ, ಸೋಮದತ್ತನ ಮಗ ಭೂರಿಶ್ರವಸ, ಅಲಂಬುಷರಾಕ್ಷಸ, ತ್ರಿಗರ್ತರಾಜನಾದ ಸುಶರ್ಮಾ–ಇವರನ್ನೂ ಮತ್ತು ಇವರೊಡನೆ ಬರುವ ಸರ್ವಮಹಾರಥರನ್ನೂ–ಸಮುದ್ರವನ್ನು ತೀರವು ತಡೆಹಿಡಿಯುವಂತೆ– ನಾನು ತಡೆಹಿಡಿಯುತ್ತೇನೆ. ಇವರಿಗೆ ಮುನ್ನುಗ್ಗಲು ಅವಕಾಶಕೊಡುವುದಿಲ್ಲ. ಯುದ್ಧದಲ್ಲಿ ತೊಡಗುವ ಮಹಾಬಲಿಷ್ಠರಾದ ಎಲ್ಲ ಕುರುಗಳನ್ನೂ ನಾನು ಹತ್ತಿರಕ್ಕೆ ಬಾರದಂತೆ ತಡೆದು ನಿಲ್ಲಿಸುತ್ತೇನೆ. ಈ ಸಂದರ್ಭದಲ್ಲಿ ನೀನು ಪ್ರಯತ್ನಪೂರ್ವಕವಾಗಿ ಭೀಷ್ಮನ ಸಂಹಾರವನ್ನು ಸಾಧಿಸು."

೧೦೮ನೆಯ ಅಧ್ಯಾಯವು ಮುಗಿಯಿತು.

೧೦೯ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಷ್ಮ-ದುರ್ಯೋಧನರ ಸಂವಾದ : ಭೀಷ್ಮನು ಲಕ್ಷೋಪಲಕ್ಷ ಸೈನಿಕರನ್ನು ಸಂಹರಿಸಿದುದು

ಧೃತರಾಷ್ಟ್ರನು ಸಂಜಯನನ್ನು ಪುನಃ ಪ್ರಶ್ನಿಸುತ್ತಾನೆ :

"ಸಂಜಯ! ಧರ್ಮಾತ್ಮನಾದ, ನಿಯತವ್ರತನಾದ, ಕೌರವಪಿತಾಮಹನಾದ ಗಾಂಗೇಯನನ್ನು ಕ್ರುದ್ಧನಾದ ದ್ರುಪದಪುತ್ರನಾದ ಶಿಖಂಡಿಯು ಯಾವ ರೀತಿಯಲ್ಲಿ ಆಕ್ರಮಿಸಿದನು? ಅವಸರದಿಂದ ಕಾರ್ಯವನ್ನು ಸಾಧಿಸಬೇಕಾಗಿರುವ ಸಮಯದಲ್ಲಿ ವೇಗದಿಂದ ಕಾರ್ಯಮಾಡಲು ಆಸಕ್ತರಾಗಿದ್ದ ಪಾಂಡವರ ಸೈನ್ಯದಲ್ಲಿನ ಯಾವ ಮಹಾರಥರು ಉದಾಯುಧರಾಗಿ ಶಿಖಂಡಿಯನ್ನು ರಕ್ಷಿಸುತ್ತಿದ್ದರು? ಹತ್ತನೆಯ ದಿವಸವಾದ ಅಂದು ಶಾಂತನುವಿನ ಮಗನಾದ ಭೀಷ್ಮನು ಮಹಾವೀರ್ಯರಾದ ಪಾಂಡವರೊಡನೆಯೂ, ಸೃಂಜಯರೊಡನೆಯೂ ಯಾವ ರೀತಿಯಲ್ಲಿ ಯುದ್ಧಮಾಡಿದನು? ಶಿಖಂಡಿಯು ಭೀಷ್ಮನನ್ನು ಆಕ್ರಮಣಮಾಡಿದನೆಂಬ ವಾರ್ತೆಯು ನನಗೆ ಬಹಳ ಅಸಹನೆಯನ್ನುಂಟುಮಾಡಿದೆ. (ಭೀಷ್ಮನ ಅದ್ಭುತಪರಾಕ್ರಮದ ವರ್ಣನೆಯನ್ನು ಕೇಳಿದ ನನಗೆ ಅತ್ಯಂತವಿಸ್ಮಯವುಂಟಾಗಿದೆ.) ನಾಲ್ಕು ದಿಕ್ಕುಗಳಲ್ಲಿಯೂ ಅಷ್ಟು ವೇಗವಾಗಿ ಸಂಚರಿಸುತ್ತಿದ್ದಾಗ ಅವನ ರಥವು ಒಡೆದು ಚೂರಾಗಲಿಲ್ಲವೇ? ಅವ್ಯಾಹತವಾಗಿ ಬಾಣಗಳನ್ನು ಬಿಡುತ್ತಿದ್ದುದರಿಂದ ಎಲ್ಲ ಸಮಯಗಳಲ್ಲಿಯೂ ಮಂಡಲಾಕಾರವಾಗಿಯೇ ಇದ್ದ ಅವನ ಧನುಸ್ಸು ಒಮ್ಮೆಯಾದರೂ ಮುರಿದುಹೋಗಲಿಲ್ಲವೇ?"

"ಮಹಾರಾಜ! ಯುದ್ಧದಲ್ಲಿ ಶತ್ರುಗಳನ್ನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಸಂಹಾರಮಾಡುತ್ತಿದ್ದ ಭೀಷ್ಮನ ಧನುಸ್ಸೂ ಮುರಿಯಲಿಲ್ಲ; ರಥವೂ ಒಡೆದು ಚೂರಾಗಲಿಲ್ಲ. ನಿನ್ನ ಕಡೆಯ ಅನೇಕಲಕ್ಷ ಮಹಾರಥರೂ, ಸುಸಜ್ಜಿತವಾಗಿದ್ದ ಆನೆಗಳ ಸಮೂಹಗಳೂ, ಕುದುರೆಗಳೂ ಪಿತಾಮಹನನ್ನು ಮುಂದೆಮಾಡಿಕೊಂಡು ಪಾಂಡವರೊಡನೆ ಯುದ್ಧಕ್ಕೆ ಹೊರಟವು. ಸಮಿತಿಂಜಯನಾದ ಭೀಷ್ಮನೂ ಸಹ ನಿನ್ನ ಮಗನಿಗೆ ಮಾತುಕೊಟ್ಟಿದ್ದಂತೆ ಪಾಂಡವರ ಸೈನ್ಯವನ್ನು ನಿರಂತರವಾಗಿ ಸಂಹರಿಸುತ್ತಲೇ ಇದ್ದನು. ಮಹಾಧನುಷ್ಮಂತ

ನಾದ, ಶತ್ರುಗಳನ್ನು ನಿಶಿತವಾದ ಬಾಣಗಳಿಂದ ಸಂಹರಿಸುತ್ತಾ ಯುದ್ಧದಲ್ಲಿ ನಿರತನಾಗಿದ್ದ ಭೀಷ್ಮನನ್ನು ತಡೆಯಲು ಪಾಂಡವರಿಗಾಗಲೀ, ಅವರೊಡನಿದ್ದ ಎಲ್ಲ ಪಾಂಚಾಲಯೋಧರಿಗಾಗಲೀ ಸಾಧ್ಯವಾಗಲೇ ಇಲ್ಲ. ಹತ್ತನೆಯ ದಿವಸದ ಯುದ್ಧವು ಪ್ರಾರಂಭವಾದನಂತರ ಶತ್ರುಸೈನ್ಯದ ಮೇಲೆ ನೂರಾರು-ಸಾವಿರಾರು ನಿಶಿತವಾದ ಬಾಣಗಳನ್ನು ಸುರಿಸುತ್ತಿದ್ದ ಭೀಷ್ಮನನ್ನು ತಡೆಯಲು ಪಾಂಡವರು ಅಸಮರ್ಥರಾದರು. ಪಾಶಹಸ್ತನಾದ ಯಮರಾಜನಂತೆಯೇ ಇದ್ದ, ಮಹಾಧನುಷ್ಮಂತನಾದ ಭೀಷ್ಮನನ್ನು ಯುದ್ಧದಲ್ಲಿ ಜಯಿಸಲು ಪಾಂಡವರು ಶಕ್ತರಾಗಿರಲಿಲ್ಲ. ಆ ಸಮಯದಲ್ಲಿ ಅಪರಾಜಿತನಾದ, ಸವ್ಯಸಾಚಿಯಾದ, ಬೀಭತ್ಸುವಾದ ಧನಂಜಯನು ನಿನ್ನ ಕಡೆಯ ಎಲ್ಲ ರಥಿಕರನ್ನೂ ಭಯಪಡಿಸುತ್ತಾ ಭೀಷ್ಮನ ಸಮೀಪಕ್ಕೆ ಬಂದನು. ಸಿಂಹದಂತೆ ಗಟ್ಟಿಯಾಗಿ ಗರ್ಜನೆಮಾಡುತ್ತಾ, ಧನುಸ್ಸಿನ ಶಿಂಜಿನಿಯನ್ನು ಬಾರಿ-ಬಾರಿಗೂ ಸೆಳೆದು ಬಿಡುತ್ತಾ, ಬಾಣಗಳ ಸಮೂಹವನ್ನೇ ಶತ್ರುಗಳ ಮೇಲೆ ಸುರಿಸುತ್ತಾ, ಪ್ರಳಯಕಾಲದ ಯಮನೋಪಾದಿಯಲ್ಲಿ ಅರ್ಜುನನು ರಣಾಂಗಣದಲ್ಲಿ ಸಂಚರಿಸುತ್ತಿದ್ದನು. ಅರ್ಜುನನ ಗರ್ಜನೆಯಿಂದ–ಸಿಂಹಕ್ಕೆ ಹೆದರಿ ಇತರ ಪ್ರಾಣಿಗಳು ಓಡಿಹೋಗುವಂತೆ–ನಿನ್ನ ಕಡೆಯ ಸೈನಿಕರು ಭಯದಿಂದ ಪಲಾಯನಮಾಡಲಾರಂಭಿಸಿದರು. ಅರ್ಜುನನು ವಿಜಯಗಳಿಸುತ್ತಿರುವುದನ್ನೂ ನಿನ್ನ ಸೈನ್ಯವು ಅರ್ಜುನನಿಂದ ಬಹಳವಾಗಿ ಪೀಡಿತವಾಗುತ್ತಿರುವುದನ್ನೂ ಕಂಡು ಬಹಳ ಭಯಗೊಂಡ ದುರ್ಯೋಧನನು ಭೀಷ್ಮನಿಗೆ ಹೇಳಿದನು : "ಪಿತಾಮಹ! ಶ್ರೀಕೃಷ್ಣಸಾರಥಿಯಾದ, ಶ್ವೇತಾಶ್ವನಾದ, ಪಾಂಡುವಿನ ಮಗನಾದ ಈ ಅರ್ಜುನನು–ಅಗ್ನಿಯು ಅರಣ್ಯವನ್ನು ದಹಿಸುವಂತೆ–ನನ್ನ ಕಡೆಯ ಸೈನಿಕರನ್ನು ತನ್ನ ಬಾಣಗಳಿಂದ ದಹಿಸಿಬಿಡುತ್ತಿದ್ದಾನೆ. ಯೋಧರಲ್ಲಿ ಶ್ರೇಷ್ಠನಾದವನೇ! ಗಾಂಗೇಯ! ಅರ್ಜುನನು ನನ್ನ ಸೈನ್ಯವನ್ನು ದಿಕ್ಕಾಪಾಲಾಗಿ ಓಡಿಸುತ್ತಿರುವುದನ್ನೂ ಮತ್ತು ಕಲಕುತ್ತಿರುವುದನ್ನೂ ನೀನೇ ನೋಡುತ್ತಿರುವೆ. ಅರಣ್ಯದಲ್ಲಿ ಪಶುಪಾಲನು ಯಾವ ರೀತಿಯಲ್ಲಿ ಹಸುಗಳ ಸಮೂಹವನ್ನು ಹೊಡೆದಟ್ಟಿಕೊಂಡು ಹೋಗುತ್ತಾನೆಯೋ–ಅದೇ ರೀತಿಯಲ್ಲಿ ಈ ನಮ್ಮ ಶತ್ರುವೂ ನನ್ನ ಸೈನ್ಯಗಳನ್ನು ಹೊಡೆದೋಡಿಸುತ್ತಿದ್ದಾನೆ. ಧನಂಜಯನ ಬಾಣಗಳಿಂದ ಭಗ್ನವಾಗಿ ಅತ್ತಿತ್ತ ಪಲಾಯನಮಾಡುತ್ತಿರುವ ನನ್ನ ಸೈನ್ಯವನ್ನು

ದುರಾಧರ್ಷನಾದ ಭೀಮನು ಪುನಃ ಭಯಪಡಿಸಿ ದಿಕ್ಕಾಪಾಲಾಗಿ ಓಡಿಸುತ್ತಿದ್ದಾನೆ. ಸಾತ್ಯಕಿ, ಚೇಕಿತಾನ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರು, ಮಹಾಪರಾಕ್ರಮಿಯಾದ ಅಭಿಮನ್ಯು–ಇವರೂ ಸಹ ನನ್ನ ಸೈನ್ಯವನ್ನು ಕಂಡ-ಕಂಡಲ್ಲಿ ಹೊಡೆದಟ್ಟುತ್ತಿದ್ದಾರೆ.

ಧೃಷ್ಟದ್ಯುಮ್ನನೂ ಮತ್ತು ಶೂರನಾದ ಘಟೋತ್ಕಚರಾಕ್ಷಸನೂ ನನ್ನ ಸೈನ್ಯವನ್ನು ಧೂಳೀಪಟಲಮಾಡುತ್ತಿದ್ದಾರೆ. ಈ ಎಲ್ಲ ಮಹಾರಥರಿಂದಲೂ ವಧಿಸಲ್ಪಡುತ್ತಿರುವ ನಮ್ಮ ಕಡೆಯ ಯೋಧರು ಪುನಃ ಬಂದು ಯುದ್ಧಮಾಡಲು ನಿಲ್ಲಬೇಕಾದರೆ ನಿನ್ನ ಆಶ್ರಯದಿಂದ ಮಾತ್ರವೇ ಸಾಧ್ಯವಾಗುತ್ತದೆ. ಬೇರೆ ಯಾರಿಂದಲೂ ಓಡಿಹೋಗುತ್ತಿರುವವರನ್ನು ಹಿಂದಿರುಗುವಂತೆ ಪ್ರೋತ್ಸಾಹಿಸಲು ಸಾಧ್ಯವಾಗುವುದಿಲ್ಲ. ದೇವತೆಗಳಿಗೆ ಸಮಾನವಾದ ಪರಾಕ್ರಮವುಳ್ಳವನೇ! ಪುರುಷವ್ಯಾಘ್ರನೇ! ನೀನೊಬ್ಬನೇ ನನ್ನ ಸೈನಿಕರಿಗೆ ಆಶ್ರಯಕೊಡಲು ಸಮರ್ಥನಾಗಿರುವೆ ಮತ್ತು ಅರ್ಜುನನನ್ನು ಎದುರಿಸಲೂ ಸಹ ನೀನೊಬ್ಬನೇ ಪರ್ಯಾಪ್ತನಾಗಿರುವೆ. ಆದುದರಿಂದ ನೀನು ಶೀಘ್ರವಾಗಿ ಪಾಂಡವಯೋಧರಿಂದ ಪೀಡಿಸಲ್ಪಡುತ್ತಿರುವವರಿಗೆ ಶರಣ್ಯನಾಗು.''

ಮಹಾರಾಜ! ದುರ್ಯೋಧನನು ಹೇಳಿದ ಈ ಮಾತನ್ನು ಕೇಳಿ ನಿನ್ನ ತಂದೆಯಾದ ದೇವವ್ರತನು ಮುಹೂರ್ತಕಾಲ ತನ್ನಲ್ಲಿಯೇ ತಾನು ಆಲೋಚಿಸುತ್ತಿದ್ದು ಒಂದು ನಿಶ್ಚಯಕ್ಕೆ ಬಂದವನಾಗಿ ನಿನ್ನ ಮಗನನ್ನು ಸಾಂತ್ವವಚನಗಳಿಂದ ಸಂತೈಸುತ್ತಾ ಹೇಳಿದನು : ``ದುರ್ಯೋಧನ! ಅವ್ಯಗ್ರನಾಗಿ ನಾನು ಹೇಳುವುದನ್ನು ಕೇಳು. ಮಹಾಬಲನೇ! ಈ ಹಿಂದೆ ಎಲ್ಲ ರಾಜರ ಸಮ್ಮುಖದಲ್ಲಿ ನಾನು ಮಾಡಿದ್ದ ಪ್ರತಿಜ್ಞೆಯೊಂದು ನಿನ್ನ ನೆನಪಿನಲ್ಲಿರಬಹುದು. 'ಪ್ರತಿನಿತ್ಯವೂ ಮಹಾತ್ಮರಾದ ಹತ್ತು ಸಾವಿರ ಕ್ಷತ್ರಿಯಯೋಧರನ್ನು ಸಂಹರಿಸಿದ ನಂತರವೇ ಯುದ್ಧದಿಂದ ಹಿಂದಿರುಗುವೆನು ; ಪ್ರತಿನಿತ್ಯದ ಸಂಧ್ಯಾಕಾರ್ಯಗಳನ್ನು ತಪ್ಪದೇ ಮಾಡುವಂತೆ ಇದನ್ನೂ ಸಹ ದೈನಂದಿನ ಮುಖ್ಯಕಾರ್ಯವೆಂದು ಭಾವಿಸಿ ಮಾಡುವೆನು.'–ಹೀಗೆ ಮಾಡಿದ್ದ ಪ್ರತಿಜ್ಞೆಯಂತೆ ನಾನು ಇದುವರೆಗೂ ನಡೆದುಕೊಂಡು ಬಂದಿರುತ್ತೇನೆ. ಅನುದಿನವೂ ಹತ್ತು ಸಾವಿರ ಮಹಾಯೋಧರನ್ನು ಸಂಹರಿಸಿದನಂತರವೇ ನಾನು ಶಿಬಿರಕ್ಕೆ ಹಿಂದಿರುಗುತ್ತಿದ್ದೇನೆ. ಈಗಲೂ ಸಹ (ಈ ದಿನವೂ ಸಹ)

ನಿನ್ನ ಸಲುವಾಗಿ ನಾನು ಆ ಮಹಾಕಾರ್ಯವನ್ನೇ ಮಾಡುತ್ತೇನೆ. ಈ ದಿವಸ ನಾನು ಪಾಂಡವರಿಂದ ವಧ್ಯನಾಗಿ ರಣಾಂಗಣದಲ್ಲಾದರೂ ಮಲಗುತ್ತೇನೆ ; ಅಥವಾ ಪಾಂಡವರನ್ನಾದರೂ ಸಂಹಾರಮಾಡುತ್ತೇನೆ–ಈ ಎರಡರಲ್ಲಿ ಯಾವುದಾದರೂ ಒಂದು ಕಾರ್ಯವು ಇಂದು ಆಗಿಯೇ ತೀರುತ್ತದೆ. ಪುರುಷವ್ಯಾಘ್ರನೇ! ಇಂದು ನಾನು ರಣರಂಗದಲ್ಲಿ ನಿನ್ನ ಸಲುವಾಗಿ ಯುದ್ಧ ಮಾಡುತ್ತಾ ಮಡಿದು ಸ್ವಾಮಿಯ ಅನ್ನಸೇವನೆಯಿಂದ ಪ್ರಾಪ್ತವಾದ ಋಣ ಭಾರದಿಂದ ಮುಕ್ತನಾಗುತ್ತೇನೆ."

ಮಹಾರಾಜ! ದುರಾಧರ್ಷನಾದ ಭೀಷ್ಮನು ದುರ್ಯೋಧನನೊಡನೆ ಹೀಗೆ ಹೇಳಿ ಕ್ಷತ್ರಿಯರ ಮೇಲೆ ಬಾಣಗಳ ಮಳೆಗರೆಯುತ್ತಾ ಪಾಂಡವರ ಸೈನ್ಯದೊಳಕ್ಕೆ ನುಗ್ಗಿದನು. ಸೈನ್ಯದ ಮಧ್ಯದಲ್ಲಿ ನಿಂತಿದ್ದ ವಿಷಸರ್ಪದಂತೆ ಮಹಾಕ್ರುದ್ಧನಾಗಿದ್ದ ಗಾಂಗೇಯನನ್ನು ಪಾಂಡವರೆಲ್ಲರೂ ತಡೆದರು. ಆದರೆ ಅವರ ಪ್ರತಿಭಟನೆಯಿಂದ ಯಾವ ಪ್ರಯೋಜನವೂ ಆಗಲಿಲ್ಲ. ಆ ಹತ್ತನೆಯ ದಿವಸ ಭೀಷ್ಮನು ತನ್ನ ಅದಮ್ಯಶಕ್ತಿಯನ್ನು ಪ್ರದರ್ಶಿಸುತ್ತಾ ಲಕ್ಷೋಪಲಕ್ಷ ಪಾಂಡವಸೈನಿಕರನ್ನು ಸಂಹರಿಸಿದನು.

ಪಾಂಚಾಲರಲ್ಲಿ ಯಾವ-ಯಾವ ಶ್ರೇಷ್ಠರಾದ, ಮಹಾರಥರಾದ ರಾಜಪುತ್ರರಿದ್ದರೋ ಅವರೆಲ್ಲರ ತೇಜಸ್ಸುಗಳನ್ನೂ (ಪ್ರಾಣಗಳನ್ನೂ) ಸೂರ್ಯನು ತನ್ನ ಕಿರಣಗಳಿಂದ ನೀರನ್ನು ಹೀರಿಕೊಳ್ಳುವಂತೆ–ತನ್ನ ಬಾಣ ಗಳ ಮೂಲಕವಾಗಿ ಹೀರಿಬಿಟ್ಟನು. ವೇಗಗತಿಯಿಂದ ಕೂಡಿದ್ದ ಹತ್ತುಸಾವಿರ ಅಶ್ವಸೈನಿಕರನ್ನೂ ಭೀಷ್ಮನು ಸಂಹರಿಸಿದನು. ಅನಂತರ ಎರಡು ಲಕ್ಷ ಪದಾತಿ ಗಳನ್ನೂ ನರೋತ್ತಮನಾದ ಭೀಷ್ಮನು ಸಂಹರಿಸಿ–ಧೂಮರಹಿತನಾದ ಯಜ್ಞೇಶ್ವರನಂತೆ–ರಣಾಂಗಣದಲ್ಲಿ ಪ್ರಜ್ವಲಿಸಿದನು. ಉತ್ತರಾಯಣವನ್ನು ಕುರಿತು ಹೋಗುತ್ತಿರುವ ಸೂರ್ಯನು ಬಹಳವಾಗಿ ತಪಿಸುವಂತೆ–ತೇಜಸ್ಸಿ ನಿಂದ ತಪಿಸುತ್ತಿದ್ದ ಭೀಷ್ಮನನ್ನು ನೋಡಲು ಪಾಂಡವರ ಸೈನ್ಯದಲ್ಲಿ ಯಾರಿಗೂ ಸಾಧ್ಯವಾಗಲಿಲ್ಲ. ಮಹಾಧನುಷ್ಮಂತನಾದ ಭೀಷ್ಮನಿಂದ ಪೀಡಿತ ರಾದ, ಅದರಿಂದಲೇ ಬಹುಕ್ರುದ್ಧರಾಗಿದ್ದ, ಪಾಂಡವ-ಸೃಂಜಯಮಹಾ ರಥರು ಭೀಷ್ಮನನ್ನು ವಧೆಮಾಡಿಬಿಡಬೇಕೆಂಬ ನಿರ್ಧಾರದಿಂದ ಅವನ ಮೇಲೆ ಬಿದ್ದರು. ಅನೇಕರೊಡನೆ ಯುದ್ಧಮಾಡುತ್ತಿದ್ದ ಏಕಾಕಿಯಾದ ಭೀಷ್ಮನು ಆ

ಸಮಯದಲ್ಲಿ ಅವರೆಲ್ಲರೂ ಬಿಟ್ಟ ಬಾಣಗಳಿಂದ ವ್ಯಾಪ್ತನಾಗಿ–ಮೇಘಗಳಿಂದ ಆಚ್ಛಾದಿತವಾದ ಮೇರುಪರ್ವತದಂತೆಯೇ ಪ್ರಕಾಶಿಸಿದನು. ಅದನ್ನು ನೋಡಿ ನಿನ್ನ ಮಕ್ಕಳೆಲ್ಲರೂ ದೊಡ್ಡದಾದ ಸೇನೆಯಿಂದ ಕೂಡಿಕೊಂಡು ಗಾಂಗೇಯ ನನ್ನು ಆವರಿಸಿಕೊಂಡರು. ಅನಂತರ ಮಹಾಯುದ್ಧವು ಪುನಃ ಪ್ರಾರಂಭ ವಾಯಿತು.”

೧೦೯ನೆಯ ಅಧ್ಯಾಯವು ಮುಗಿಯಿತು.

೧೧೦ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಅರ್ಜುನನ ಪ್ರೋತ್ಸಾಹದಿಂದ ಶಿಖಂಡಿಯು ಭೀಷ್ಮನನ್ನು ಆಕ್ರಮಿಸಿದುದು : ಉಭಯಪಕ್ಷಗಳ ಪ್ರಮುಖವೀರರ ಪರಸ್ಪರ ಯುದ್ಧ: ದುಃಶಾಸನನೊಡನೆ ಅರ್ಜುನನ ಘೋರಯುದ್ಧ

ಸಂಜಯನು ಯುದ್ಧವರ್ಣನೆಯನ್ನು ಮಾಡಲು ಉಪಕ್ರಮಿಸಿದನು :

“ಮಹಾರಾಜ! ಅರ್ಜುನನು ಯುದ್ಧದಲ್ಲಿ ಭೀಷ್ಮನ ಪರಾಕ್ರಮವನ್ನು ನೋಡಿ ಶಿಖಂಡಿಯನ್ನು ಕುರಿತು ಹೇಳಿದನು:

“ಶಿಖಂಡಿಯೇ! ನೀನೀಗಲೇ ಪಿತಾಮಹನನ್ನು ಆಕ್ರಮಿಸು. ಭೀಷ್ಮನಿ ಗಾಗಿ ನೀನು ಸ್ವಲ್ಪವಾದರೂ ಭಯಪಡುವ ಕಾರಣವಿಲ್ಲ. ನಾನೇ ಅವನನ್ನು ತೀಕ್ಷ್ಣವಾದ ಬಾಣಗಳಿಂದ ಸಂಹರಿಸುತ್ತೇನೆ.”

ಹೀಗೆಂದು ಪಾರ್ಥನು ಹೇಳುತ್ತಲೇ ಶಿಖಂಡಿಯು ಭೀಷ್ಮನ ಮೇಲೆ ಆಕ್ರಮಣಮಾಡಲು ಉಪಕ್ರಮಿಸಿದನು. ಅರ್ಜುನನು ಶಿಖಂಡಿಗೆ ಹೇಳಿದ ಮಾತನ್ನು ಕೇಳಿಸಿಕೊಂಡು ಮಹಾರಥನಾದ ಧೃಷ್ಟದ್ಯುಮ್ನ-ಅಭಿಮನ್ಯುಗಳೂ ಬಹಳ ಹೃಷ್ಟರಾಗಿ ಭೀಷ್ಮನ ಕಡೆಗೆ ತೆರಳಿದರು. ವೃದ್ಧರಾದ ವಿರಾಟ-ದ್ರುಪದರು, ಕವಚವನ್ನು ಧರಿಸಿದ್ದ ಕುಂತಿಭೋಜ–ಇವರುಗಳೂ ಸಹ ನಿನ್ನ ಮಗನು ನೋಡುತ್ತಿದ್ದಂತೆಯೇ ಗಾಂಗೇಯನ ಮೇಲೆ ಹಲ್ಲೆಮಾಡಲು ಧಾವಿಸಿದರು. ನಕುಲ-ಸಹದೇವರೂ, ವೀರ್ಯವಂತನಾದ ಧರ್ಮರಾಜನೂ ಅರ್ಜುನನು ಹೇಳಿದುದನ್ನು ಕೇಳಿ ಗಾಂಗೇಯನ ಮೇಲೆ ಯುದ್ಧಕ್ಕೆ

ಹೋದರು. ರಥ-ಗಜಾಶ್ವ-ಪದಾತಿಗಳಾದಿಯಾಗಿ ಎಲ್ಲ ಸೈನ್ಯಗಳೂ ಗಾಂಗೇಯನೊಡನೆ ಯುದ್ಧಮಾಡಲು ಹೋದುವು.

ಒಟ್ಟಾಗಿ ಸೇರಿ ಭೀಷ್ಮನನ್ನು ಆಕ್ರಮಿಸಲು ಬಂದ ಆ ಎಲ್ಲ ಮಹಾ ರಥರನ್ನೂ ನಿನ್ನ ಕಡೆಯ ಮಹಾರಥರೆಲ್ಲರೂ ಸೇರಿ ಉತ್ಸಾಹದಿಂದ ಕೂಡಿದ ವರಾಗಿ ಯಥಾಶಕ್ತಿ ಎದುರಿಸಿದರು. ಯಾವ ಮಹಾರಥರು ಯಾವ ಮಹಾ ರಥರನ್ನು ಎದುರಿಸಿ ಯುದ್ಧಮಾಡಿದರೆಂಬುದನ್ನು ವಿವರಿಸಿ ಹೇಳುತ್ತೇನೆ ; ಕೇಳು. ಮಹಾರಾಜ! ಗೂಳಿಯನ್ನು ವ್ಯಾಘ್ರದ ಮರಿಯೊಂದು ಕಚ್ಚಲು ಹೋಗುವಂತೆ–ಭೀಷ್ಮನನ್ನು ಆಕ್ರಮಿಸಲು ಬಂದ ಚೇಕಿತಾನನನ್ನು ಚಿತ್ರ ಸೇನನು ಎದುರಿಸಿದನು. ಬಹಳ ಅವಸರದಿಂದ ಪ್ರಯತ್ನಪೂರ್ವಕವಾಗಿ ಭೀಷ್ಮನ ಸಮೀಪಕ್ಕೆ ಬಂದ ಧೃಷ್ಟದ್ಯುಮ್ನನನ್ನು–ಕೃತವರ್ಮನು ತಡೆದನು. ಕ್ರುದ್ಧನಾಗಿದ್ದ ಭೀಷ್ಮನನ್ನು ವಧಿಸಲೆಂದೇ ವೇಗವಾಗಿ ಹೋಗುತ್ತಿದ್ದ ಭೀಮ ಸೇನನನ್ನು ಬಹಳ ಅವಸರದಿಂದ ಭೂರಿಶ್ರವಸನು ಎದುರಿಸಿದನು. ಬಾಣಗಳ ಮಳೆಯನ್ನೇ ಸುರಿಸುತ್ತಾ ಬರುತ್ತಿದ್ದ ನಕುಲನನ್ನು, ಭೀಷ್ಮನ ಜೀವವನ್ನು ರಕ್ಷಿ ಸುವ ಇಚ್ಛೆಯಿಂದ ವಿಕರ್ಣನು ಎದುರಿಸಿದನು. ಅದೇ ರೀತಿಯಲ್ಲಿ ಭೀಷ್ಮನ ರಥದ ಸಮೀಪಕ್ಕೆ ಬಹಳ ರಭಸದಿಂದ ಹೋಗುತ್ತಿದ್ದ ಸಹದೇವನನ್ನು, ಕ್ರುದ್ಧರಾದ ಶರದ್ವಂತರ ಮಕ್ಕಳಾದ ಕೃಪರು ಎದುರಿಸಿದರು. ಕ್ರೂರಕರ್ಮ ನಾದ, ಮಹಾಬಲಿಷ್ಠನಾದ ಭೀಷ್ಮನ ಮರಣವನ್ನು ಇಚ್ಛಿಸಿ ಮುನ್ನುಗ್ಗುತ್ತಿದ್ದ ಭೀಮಸೇನನ ಮಗನಾದ ಘಟೋತ್ಕಚನನ್ನು, ಬಲಶಾಲಿಯಾದ ದುರ್ಮು ಖನು ತಡೆದು ನಿಲ್ಲಿಸಿದನು. ಭೀಷ್ಮನ ಬಳಿಗೆ ರಭಸದಿಂದ ಹೋಗುತ್ತಿದ್ದ ಸಾತ್ಯಕಿಯನ್ನು, ನಿನ್ನ ಮಗ ದುರ್ಯೋಧನನೇ ತಡೆದನು. ಭೀಷ್ಮನ ರಥದ ಸಮೀಪಕ್ಕೆ ಹೋಗುತ್ತಿದ್ದ ಅಭಿಮನ್ಯುವನ್ನು-ಕಾಂಬೋಜರಾಜನಾದ ಸುದಕ್ಷಿಣನು ತಡೆದನು. ವೃದ್ಧರಾದ, ಅರಿಮರ್ದನರಾದ, ಜೊತೆಯಲ್ಲಿಯೇ ಕೂಡಿಕೊಂಡು ಭೀಷ್ಮನ ರಥದ ಸಮೀಪಕ್ಕೆ ಬರುತ್ತಿದ್ದ ವಿರಾಟ-ದ್ರುಪದ ರನ್ನು, ಕ್ರುದ್ಧನಾದ ಅಶ್ವತ್ಥಾಮನು ತಡೆದು ನಿಲ್ಲಿಸಿದನು. ಭೀಷ್ಮನನ್ನು ವಧಿಸುವ ಆಕಾಂಕ್ಷೆಯಿಂದ ಅವನ ರಥದ ಸಮೀಪಕ್ಕೆ ಧಾವಿಸಿ ಬರುತ್ತಿದ್ದ ಪಾಂಡುವಿನ ಹಿರಿಯಮಗನಾದ ಯುಧಿಷ್ಠಿರನನ್ನು, ದ್ರೋಣರು ಪ್ರಯತ್ನಪೂರ್ವಕವಾಗಿ ತಡೆದು ನಿಲ್ಲಿಸಿದರು. ಶಿಖಂಡಿಯನ್ನು ಮುಂದೆ ಮಾಡಿಕೊಂಡು ಎಲ್ಲ ದಿಕ್ಕುಗಳನ್ನೂ ತನ್ನ ಬಾಣಗಳ ಪ್ರಯೋಗದಿಂದ

ಪ್ರಕಾಶನಗೊಳಿಸುತ್ತಾ ಬರುತ್ತಿದ್ದ, ವೇಗವಂತನಾದ, ಭೀಷ್ಮನ ಮರಣವನ್ನು ಉದ್ದೇಶಿಸಿ ಮುನ್ನುಗ್ಗುತ್ತಿದ್ದ ಪಾರ್ಥನನ್ನು, ಮಹಾಧನುಷ್ಮಂತನಾದ ದುಃಶಾಸನನು ತಡೆದನು. ಭೀಷ್ಮನಿಗೆ ಅಭಿಮುಖರಾಗಿ ಹೋಗುತ್ತಿದ್ದ ಇತರ ಪಾಂಡವಮಹಾರಥರನ್ನು–ನಿನ್ನ ಸೈನ್ಯದ ಯೋಧರು ತಡೆದು ನಿಲ್ಲಿಸಿದರು. ಪಾಂಡವದಂಡನಾಯಕನಾದ ಧೃಷ್ಟದ್ಯುಮ್ನನು ತನ್ನ ಸೈನಿಕರಿಗೆ ಕೂಗಿ ಕೂಗಿ ಹೇಳುತ್ತಿದ್ದನು : "ನೀವು ಉತ್ಸಾಹಶೀಲರಾಗಿ ಮಹಾಬಲನಾದ ಭೀಷ್ಮನೊಬ್ಬ ನನ್ನೇ ಆಕ್ರಮಿಸಿರಿ. ಈ ನಮ್ಮ ಅರ್ಜುನನು ಈಗಲೇ ಭೀಷ್ಮನ ಮೇಲೆ ಯುದ್ಧ ಮಾಡಲು ಹೋಗುತ್ತಾನೆ. ನೀವೂ ಸಹ ಅರ್ಜುನನೊಡನೆ ಸೇರಿ ಭೀಷ್ಮನ ಮೇಲೆ ಆಕ್ರಮಣವನ್ನು ನಡೆಸಿರಿ. ನೀವು ಭಯಪಡುವ ಕಾರಣವಿಲ್ಲ. ಅರ್ಜುನನು ಮುಂದಿರುವಾಗ ಭೀಷ್ಮನು ನಮ್ಮ ಸಮೀಪಕ್ಕೂ ಬರಲಾರನು. ಅರ್ಜುನನೊಡನೆ ಯುದ್ಧಮಾಡಲು ದೇವಾಧಿಪತಿಯಾದ ಇಂದ್ರನಿಗೂ ಸಹ ಸಾಧ್ಯವಾಗುವುದಿಲ್ಲ. ಹೀಗಿರುವಾಗ ಭೀಷ್ಮನು ಅರ್ಜುನನನ್ನು ಎದುರಿಸಿ ಹೇಗೆತಾನೇ ಯುದ್ಧಮಾಡುತ್ತಾನೆ? ಮೇಲಾಗಿ ಇವನ ಸತ್ತ್ವವೂ ಕ್ಷೀಣಿಸಿದೆ ; ಆಯುಷ್ಯವೂ ಮುಗಿಯುತ್ತಾ ಬಂದಿದೆ." ತಮ್ಮ ಸೇನಾಪತಿಯು ಹೇಳಿದ ಮಾತುಗಳನ್ನು ಕೇಳಿ ಸಂಹೃಷ್ಟರಾದ ಪಾಂಡವರ ಕಡೆಯ ಮಹಾರಥರೆಲ್ಲರೂ ಏಕಮುಖದಿಂದ ಗಾಂಗೇಯನ ರಥದ ಕಡೆಗೆ ನುಗ್ಗಿದರು. ಪ್ರಲಯಕಾಲದ ಜಲಪ್ರವಾಹದಂತೆ–ಭೀಷ್ಮನ ರಥದ ಸಮೀಪಕ್ಕೆ ಮುನ್ನುಗ್ಗಿಬರುತ್ತಿದ್ದ ಪಾಂಡವಮಹಾರಥರನ್ನು ಸಂಹೃಷ್ಟರಾದ ಪುರುಷರ್ಷಭರಾದ ನಿನ್ನ ಕಡೆಯ ಮಹಾರಥರು ತಡೆದು ನಿಲ್ಲಿಸಿದರು.

ಭೀಷ್ಮನ ಪ್ರಾಣವನ್ನು ಉಳಿಸುವುದರಲ್ಲಿಯೇ ಹೆಚ್ಚು ಆಸಕ್ತನಾಗಿದ್ದ ಮಹಾರಥನಾದ ದುಃಶಾಸನನು ಭಯವೆಂಬುದನ್ನು ಸಂಪೂರ್ಣವಾಗಿ ತ್ಯಜಿಸಿ ಧನಂಜಯನ ಮೇಲೆ ದಾಳಿಮಾಡಿದನು. ಅದೇ ರೀತಿಯಲ್ಲಿ ಗಾಂಗೇಯನ ರಥದ ಸಮೀಪಕ್ಕೆ ಹೋಗುತ್ತಿದ್ದ ಶೂರರಾದ ಪಾಂಡವಮಹಾರಥರು ತಮ್ಮನ್ನು ತಡೆದು ನಿಲ್ಲಿಸಿದ ನಿನ್ನ ಮಕ್ಕಳನ್ನೇ ನಾಲ್ಕು ಕಡೆಗಳಿಂದಲೂ ಆಕ್ರಮಿಸಿದರು. ಮಹಾರಾಜ! ನಾವು ಅಲ್ಲಿ ವಿಚಿತ್ರವಾದ ಒಂದು ಅದ್ಭುತಸನ್ನಿವೇಶವನ್ನು ಕಂಡೆವು. ಭೀಷ್ಮನ ರಥದ ಸಮೀಪಕ್ಕೆ ಹೋಗುತ್ತಿದ್ದಾಗ ಮಧ್ಯದಲ್ಲಿ ದುಃಶಾಸನನ ರಥವನ್ನು ಎದುರಿಸಿ ಅವನನ್ನು ಹಿಮ್ಮೆಟ್ಟಿಸಿ ಮುಂದೆ ಹೋಗಲು

ಪಾರ್ಥನಿಗೆ ಸಾಧ್ಯವಾಗಲೇ ಇಲ್ಲ. ಅಲ್ಲೋಲ-ಕಲ್ಲೋಲವಾದ ನೀರಿನಿಂದ ಕೂಡಿರುವ ಸಮುದ್ರವನ್ನು ತೀರಪ್ರದೇಶವು ಯಾವ ರೀತಿಯಲ್ಲಿ ತಡೆದು ನಿಲ್ಲಿಸಿರುವುದೋ–ಅದೇ ರೀತಿಯಲ್ಲಿ ಕ್ರುದ್ಧನಾದ ಪಾರ್ಥನನ್ನು ನಿನ್ನ ಮಗನು ತಡೆದು ನಿಲ್ಲಿಸಿಬಿಟ್ಟನು. ಅರ್ಜುನ-ದುಃಶಾಸನರಿಬ್ಬರೂ ರಥಿಗಳಲ್ಲಿ ಶ್ರೇಷ್ಠರಾಗಿದ್ದರು. ದುರ್ಜಯರಾಗಿದ್ದರು. ಕಾಂತಿಯಿಂದಲೂ ಮತ್ತು ತೇಜಸ್ಸಿನಿಂದಲೂ ಇಬ್ಬರೂ ಚಂದ್ರ-ಸೂರ್ಯರಿಗೆ ಸಮಾನರಾಗಿದ್ದರು. ಇಬ್ಬರೂ ಸಹ ಕ್ರೋಧಾಭಿಭೂತರಾಗಿ ಒಬ್ಬರು ಮತ್ತೊಬ್ಬರನ್ನು ವಧೆಮಾಡುವ ಇಚ್ಛೆಯಿಂದಿದ್ದರು. ಹಿಂದೆ ಮಯರಾಕ್ಷಸ ಮತ್ತು ಇಂದ್ರರು ಯಾವ ರೀತಿಯಲ್ಲಿ ಯುದ್ಧದಲ್ಲಿ ತೊಡಗಿದ್ದರೋ–ಅದೇ ರೀತಿಯಲ್ಲಿ ದುಃಶಾಸನ-ಅರ್ಜುನರಿಬ್ಬರೂ ಯುದ್ಧದಲ್ಲಿ ತೊಡಗಿದ್ದರು. ದುಃಶಾಸನನು ಅರ್ಜುನನನ್ನು ಮೂರು ಬಾಣಗಳಿಂದಲೂ, ವಾಸುದೇವನನ್ನು ಇಪ್ಪತ್ತು ಬಾಣಗಳಿಂದಲೂ ಪ್ರಹರಿಸಿದನು. ತನ್ನ ಪ್ರಿಯಸಖನಾದ ಶ್ರೀಕೃಷ್ಣನನ್ನು ದುಃಶಾಸನನು ಬಾಣಗಳಿಂದ ಪ್ರಹರಿಸಿದುದನ್ನು ಕಂಡು ಕ್ರೋಧಾಭಿಭೂತನಾದ ಅರ್ಜುನನು ದುಃಶಾಸನನನ್ನು ನೂರು ಬಾಣಗಳಿಂದ ಪ್ರಹರಿಸಿದನು. ಅರ್ಜುನನು ಬಿಟ್ಟ ಆ ಬಾಣಗಳು–ಬಾಯಾರಿದ ಹಾವುಗಳು ಕೆರೆಯನ್ನು ಹೊಕ್ಕು ನೀರನ್ನು ಕುಡಿಯುವಂತೆ–ದುಃಶಾಸನನ ಕವಚವನ್ನು ಭೇದಿಸಿ, ಶರೀರದ ಒಳಹೊಕ್ಕು ಅವನ ರಕ್ತವನ್ನು ಹೀರಿದುವು. ಅನಂತರ ಕ್ರುದ್ಧನಾದ ದುಃಶಾಸನನು ಬಗ್ಗಿದ ಗಿಣ್ಣುಗಳಿದ್ದ ಮೂರು ಬಾಣಗಳಿಂದ ಅರ್ಜುನನ ಲಲಾಟಪ್ರದೇಶದಲ್ಲಿ ಪ್ರಹರಿಸಿದನು. ಹಣೆಗೆ ಚುಚ್ಚಿಕೊಂಡಿದ್ದ ಆ ಮೂರು ಬಾಣಗಳಿಂದ ಪಾಂಡವನು–ಮೂರು ಎತ್ತರವಾದ ಶಿಖರಗಳಿಂದ ಕೂಡಿದ ಮೇರುಪರ್ವತದಂತೆಯೇ ವಿರಾಜಿಸಿದನು. ನಿನ್ನ ಮಗನಿಂದ ಬಿಡಲ್ಪಟ್ಟ ಬಾಣಗಳಿಂದ ಹಣೆಯಲ್ಲಿ ಬಹಳ ಆಳದವರೆಗೂ ಪ್ರಹೃತನಾದ ಮಹಾಧನುಷ್ಮಂತನಾದ ಅರ್ಜುನನು ಹೂಗಳಿಂದ ಕೂಡಿದ ಮುತ್ತುಗದ ಮರದಂತೆಯೇ ಪ್ರಕಾಶಿಸಿದನು. ಪರ್ವಸಮಯದಲ್ಲಿ, (ಗ್ರಹಣದ ಹುಣ್ಣಿಮೆಗಳಲ್ಲಿ) ಕ್ರುದ್ಧನಾದ ರಾಹುವು ಪೂರ್ಣಚಂದ್ರನನ್ನು ಪೀಡಿಸುವಂತೆಯೇ ಅತ್ಯಂತಕ್ರುದ್ಧನಾದ ಪಾರ್ಥನು ದುಃಶಾಸನನನ್ನು ಪೀಡಿಸತೊಡಗಿದನು. ಬಲಿಷ್ಠನಾದ ಪಾರ್ಥನಿಂದ ಪ್ರಪೀಡಿತನಾದ ನಿನ್ನ ಮಗನು ಸಾಣೇಕಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟ, ಗೃಧ್ರದ ರೆಕ್ಕೆಗಳನ್ನು

ಹೊಂದಿದ್ದ ಬಾಣಗಳಿಂದ ಪಾರ್ಥನನ್ನು ಪ್ರಹರಿಸಿದನು. ಅನಂತರ ಪಾರ್ಥನು ಮೂರು ಬಾಣಗಳಿಂದ ದುಃಶಾಸನನ ಧನುಸ್ಸನ್ನೂ, ರಥವನ್ನೂ ಚೂರ್ಣೀ ಕರಿಸಿ ಬಳಿಕ ನಿನ್ನ ಮಗನನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಭೀಷ್ಮನ ರಕ್ಷಣೆಗಾಗಿ ಅವನ ಮುಂಭಾಗದಲ್ಲಿ ಯುದ್ಧಮಾಡುತ್ತಿದ್ದ ದುಃಶಾಸನನು ಒಡನೆಯೇ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಅರ್ಜುನನನ್ನು ಇಪ್ಪತ್ತೈದು ಬಾಣಗಳಿಂದ ಅವನ ವಕ್ಷಃಸ್ಥಲದಲ್ಲಿಯೂ ಮತ್ತು ಬಾಹುಗಳಲ್ಲಿಯೂ ಪ್ರಹರಿಸಿದನು. ಅದರಿಂದ ಕ್ರುದ್ಧನಾದ, ಶತ್ರುತಾಪನನಾದ ಪಾಂಡವನು ಯಮದಂಡೋಪಮವಾದ ಘೋರವಾದ ಬಾಣಗಳನ್ನು ದುಃಶಾಸನನ ಮೇಲೆ ಪ್ರಯೋಗಿಸಿದನು.

ದುಃಶಾಸನನನ್ನು ಪರಾಜಯಗೊಳಿಸಿ ಭೀಷ್ಮನ ಸಮೀಪಕ್ಕೆ ಹೋಗ ಬೇಕೆಂದು ಬಹಳವಾಗಿ ಪ್ರಯತ್ನಿಸುತ್ತಿದ್ದ ಪಾರ್ಥನ ಬಾಣಗಳನ್ನು ತನ್ನ ಸಮೀಪಕ್ಕೆ ಬರುವುದಕ್ಕೆ ಮೊದಲೇ ನಿನ್ನ ಮಗನು ಕತ್ತರಿಸಿಬಿಟ್ಟನು. ಅವನ ಕೈಚಳಕವು ಬಹಳ ಅದ್ಭುತವಾಗಿ ಕಂಡಿತು. ಪಾರ್ಥನು ಬಿಟ್ಟ ಬಾಣಗಳನ್ನು ಕತ್ತರಿಸಿದುದೂ ಅಲ್ಲದೇ–ಪಾರ್ಥನನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿ ದನು. ಅದರಿಂದ ಕ್ರುದ್ಧನಾದ ಪಾರ್ಥನು ಮಸೆಗಲ್ಲಿನಿಂದ ನಿಶಿತವಾಗಿ ಮಾಡಿದ್ದ ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿದ್ದ ಬಾಣಗಳನ್ನು ಧನುಸ್ಸಿನಲ್ಲಿ ಯೋಜಿಸಿ ದುಃಶಾಸನನ ಮೇಲೆ ಪ್ರಯೋಗಿಸಿದನು. ಸರೋ ವರಕ್ಕೆ ಬಂದ ಹಂಸಗಳು ನೀರಿನೊಳಗೆ ಮುಳುಗಿಕೊಳ್ಳುವಂತೆ–ಪಾರ್ಥನು ಬಿಟ್ಟ ಬಾಣಗಳು ಮಹಾತ್ಮನಾದ ದುಃಶಾಸನನ ಶರೀರದೊಳಕ್ಕೆ ಪ್ರವೇಶಿಸಿ ದುವು. ಈ ರೀತಿಯಲ್ಲಿ ಮಹಾತ್ಮನಾದ ಪಾರ್ಥನಿಂದ ಪೀಡಿತನಾದ ನಿನ್ನ ಮಗನು ಪಾರ್ಥನನ್ನು ಬಿಟ್ಟು ಭೀಷ್ಮನ ರಥದ ಮೇಲೆ ಹತ್ತಿ ಕುಳಿತನು. ಆಳ ವಾದ ಸಮುದ್ರದಲ್ಲಿ ಮುಳುಗುತ್ತಿದ್ದ ದುಃಶಾಸನನಿಗೆ ಆ ಸಮಯದಲ್ಲಿ ಭೀಷ್ಮ ನೊಂದು ದ್ವೀಪವಾಗಿ ಪರಿಣಮಿಸಿದನು. ಭೀಷ್ಮನ ರಥದಲ್ಲಿ ಸ್ವಲ್ಪ ಹೊತ್ತು ಕುಳಿತಿದ್ದು ಚೇತರಿಸಿಕೊಂಡ ಪರಾಕ್ರಮಿಯಾದ ನಿನ್ನ ಮಗನು ಪುನಃ ಅರ್ಜುನ ನನ್ನು ಎದುರಿಸಿದನು. ಪುರಂದರನು ವೃತ್ರಾಸುರನನ್ನು ಪ್ರಹರಿಸಿದಂತೆ ಮಹಾಕಾಯನಾದ ದುಃಶಾಸನನು ನಿಶಿತವಾಗಿ ಮಾಡಲ್ಪಟ್ಟಿದ್ದ ಬಾಣಗಳಿಂದ

ಅರ್ಜುನನನ್ನು ಕ್ಷತ-ವಿಕ್ಷತಗೊಳಿಸಿದನು. ಆದರೆ ಅದರಿಂದ ಅರ್ಜುನನು ಸ್ವಲ್ಪವಾದರೂ ಎದೆಗುಂದಲಿಲ್ಲ."

೧೧೦ನೆಯ ಅಧ್ಯಾಯವು ಮುಗಿಯಿತು.

೧೧೧ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಕೌರವ-ಪಾಂಡವರ ಪಕ್ಷಗಳಲ್ಲಿದ್ದ ಪ್ರಮುಖಮಹಾರಥರ ದ್ವಂದ್ವಯುದ್ಧಗಳ ವರ್ಣನೆ

ಸಂಜಯನು ಹತ್ತನೆಯ ದಿವಸದ ಯುದ್ಧದ ವಿವರಣೆಯನ್ನು ಮುಂದುವರಿಸಿ ಹೇಳುತ್ತಾನೆ :

"ಮಹಾರಾಜ! ಭೀಷ್ಮನೊಡನೆ ಯುದ್ಧಮಾಡಲು ಕವಚವನ್ನು ಧರಿಸಿ ಬರುತ್ತಿದ್ದ ಸಾತ್ಯಕಿಯನ್ನು ಮಹಾಧನುಷ್ಮಂತನಾದ ಅಲಂಬುಷರಾಕ್ಷಸನು ತಡೆದು ನಿಲ್ಲಿಸಿದನು. ಮಾಧವನು ಬಹಳ ಕ್ರುದ್ಧನಾಗಿದ್ದರೂ ನಗುತ್ತಿರುವನೋ ಎಂಬಂತೆ ತೋರ್ಪಡಿಸಿಕೊಳ್ಳುತ್ತಾ ಒಂಬತ್ತು ಬಾಣಗಳಿಂದ ಅಲಂಬುಷನನ್ನು ಪ್ರಹರಿಸಿದನು. ಅದೇ ರೀತಿಯಲ್ಲಿ ಸಂಕ್ರುದ್ಧನಾದ ರಾಕ್ಷಸನೂ ಸಹ ಶಿನಿಪುಂಗವನಾದ ಮಾಧವನನ್ನು ಒಂಬತ್ತು ಬಾಣಗಳಿಂದ ಪೀಡಿಸಿದನು. ಶತ್ರುವೀರಹಂತಕನಾದ ಮಾಧವನು ಪರಮಕ್ರುದ್ಧನಾಗಿ ರಾಕ್ಷಸನ ಮೇಲೆ ಬಾಣಗಳ ಸಮೂಹವನ್ನೇ ಸುರಿಸಿಬಿಟ್ಟನು. ಅನಂತರ ರಾಕ್ಷಸನು ಮಹಾಬಾಹುವಾದ ಸತ್ಯವಿಕ್ರಮನಾದ ಸಾತ್ಯಕಿಯನ್ನು ತೀಕ್ಷ್ಣವಾದ ಬಾಣಗಳಿಂದ ಪ್ರಹರಿಸಿ ಸಿಂಹನಾದವನ್ನು ಮಾಡಿದನು. ತೇಜಸ್ವಿಯಾದ ಮಾಧವನು ರಾಕ್ಷಸನಿಂದ ಬಹಳವಾಗಿ ಗಾಯಗೊಂಡರೂ ಮುಂದೆ ಹೋಗದಂತೆ ತಡೆಯಲ್ಪಟ್ಟರೂ ಗಹಗಹಿಸಿ ನಕ್ಕು ಗಟ್ಟಿಯಾಗಿ ಗರ್ಜಿಸಿದನು. ಸಾತ್ಯಕಿಯು ಮಾಡಿದ ಸಿಂಹನಾದವನ್ನು ಕೇಳಿ ಕುಪಿತನಾದ ಭಗದತ್ತನು, ಅಂಕುಶದಿಂದ ಮಹಾಗಜವನ್ನು ತಿವಿಯುವಂತೆ, ಸಾತ್ಯಕಿಯನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಆ ಸಮಯದಲ್ಲಿ ರಥಿಶ್ರೇಷ್ಠನಾದ ಸಾತ್ಯಕಿಯು ರಾಕ್ಷಸನನ್ನು ಬಿಟ್ಟು ಬಗ್ಗಿದ ಗಿಣ್ಣುಗಳಿದ್ದ ಅನೇಕಬಾಣಗಳನ್ನು ಭಗದತ್ತನ ಮೇಲೆ ಪ್ರಯೋಗಿಸಿದನು.

ಒಡನೆಯೇ ಭಗದತ್ತನು ಧನುಸ್ಸನ್ನು ಕತ್ತರಿಸುವುದರಲ್ಲಿ ಸಿದ್ಧಹಸ್ತನೋ ಎಂಬಂತೆ ನಿಶಿತವಾದ ಅಲುಗಿನಿಂದ ಕೂಡಿದ್ದ ಭಲ್ಲದಿಂದ ಸಾತ್ಯಕಿಯ ಮಹಾ ಧನುಸ್ಸನ್ನು ಕತ್ತರಿಸಿಬಿಟ್ಟನು.

ಶತ್ರುವೀರಹಂತಕನಾದ ಸಾತ್ಯಕಿಯು ವೇಗಯುಕ್ತವಾಗಿದ್ದ ಮತ್ತೊಂದು ಧನುಸ್ಸನ್ನು ಒಡನೆಯೇ ತೆಗೆದುಕೊಂಡು ಕ್ರುದ್ಧನಾಗಿದ್ದ ಭಗದತ್ತನನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಸಾತ್ಯಕಿಯ ಆ ಪ್ರಹಾರದಿಂದ ಬಹಳವಾಗಿ ಗಾಯಗೊಂಡ ಮಹಾಧನುಷ್ಮಂತನಾದ ಭಗ ದತ್ತನು ತನ್ನೆರಡು ಕಟವಾಯಿಗಳನ್ನೂ ನೆಕ್ಕಿಕೊಳ್ಳುತ್ತಾ ಸುದೃಢವಾಗಿದ್ದ, ಕನಕ-ವೈಡೂರ್ಯಗಳಿಂದ ಭೂಷಿತವಾಗಿದ್ದ, ಲೋಹಮಯವಾಗಿದ್ದ, ಯಮದಂಡಕ್ಕೆ ಸಮಾನವಾಗಿದ್ದ, ಬಹುಘೋರವಾಗಿದ್ದ ಶಕ್ತ್ಯಾಯುಧವನ್ನು ಸಾತ್ಯಕಿಯ ಮೇಲೆ ರಭಸದಿಂದ ಎಸೆದನು. ಭಗದತ್ತನ ಬಾಹುವಿನ ಬಲ ದಿಂದ ಎಸೆಯಲ್ಪಟ್ಟು ಬಹಳ ವೇಗವಾಗಿ ತನ್ನ ಕಡೆಗೆ ಬರುತ್ತಿದ್ದ ಶಕ್ತ್ಯಾಯುಧ ವನ್ನು ಸಾತ್ಯಕಿಯು ಬಾಣಗಳಿಂದ ಎರಡಾಗಿ ಕತ್ತರಿಸಿಬಿಟ್ಟನು. ಎರಡು ತುಂಡಾದ ಆ ಶಕ್ತ್ಯಾಯುಧವು ಪ್ರಭೆಯಿಂದ ಹೀನವಾದ ದೊಡ್ಡ ಉಲ್ಕೆಯೋ ಪಾದಿಯಲ್ಲಿ ನೆಲದ ಮೇಲೆ ಬಿದ್ದಿತು. ಭಗದತ್ತನು ಸಾತ್ಯಕಿಯ ಮೇಲೆ ಬಿಟ್ಟ ಶಕ್ತ್ಯಾಯುಧವೂ ನಷ್ಟವಾದುದನ್ನು ಕಂಡು ದುರ್ಯೋಧನನು ದೊಡ್ಡದಾದ ರಥಸೈನ್ಯದೊಡನೆ ಮಾಧವನನ್ನು ಆಕ್ರಮಿಸಿದನು. ವಾರ್ಷ್ಣೇಯರ ಮಹಾರಥ ನಾದ ಸಾತ್ಯಕಿಯು ದುರ್ಯೋಧನನ ರಥಸೈನ್ಯದಿಂದ ಆಕ್ರಾಂತನಾದನಂತರ ಕ್ರುದ್ಧನಾಗಿದ್ದ ನಿನ್ನ ಮಗನು ನಿನ್ನ ಉಳಿದ ಮಕ್ಕಳನ್ನು ಸಂಬೋಧಿಸಿ ಹೇಳಿದನು: "ಕೌರವ್ಯರೇ! ಈ ಸಾತ್ಯಕಿಯು ನಮ್ಮ ದೊಡ್ಡ ರಥಸೈನ್ಯದಿಂದ ಜೀವಂತನಾಗಿ ತಪ್ಪಿಸಿಕೊಂಡು ಹೋಗದ ರೀತಿಯಲ್ಲಿ ನೀವೆಲ್ಲರೂ ಒಮ್ಮುಖದಿಂದ ಇವನ ಮೇಲೆ ಯುದ್ಧಮಾಡಿರಿ. ಇವನೊಬ್ಬನು ಹತನಾದರೆ ಪಾಂಡವರ ಮಹಾಸೈನ್ಯವು ಹತವಾದಂತೆಯೇ–ಎಂದು ನಾನು ಭಾವಿಸುತ್ತೇನೆ."

ಹೀಗೆಂದು ಹೇಳಿದ ದುರ್ಯೋಧನನ ಮಾತಿಗೆ ಅವನ ಅನುಜರೆಲ್ಲರೂ ಸಮ್ಮತಿಸಿ ಭೀಷ್ಮನ ಕಡೆಗೆ ಹೋಗಲಿದ್ದ ಸಾತ್ಯಕಿಯನ್ನು ತಡೆದು ಅವನೊಡನೆ ಯುದ್ಧಮಾಡಲು ಉಪಕ್ರಮಿಸಿದರು. ಮಹಾರಾಜ! ನಾನು ಈ ಹಿಂದೆ ಹೇಳಿದಂತೆ ಭೀಷ್ಮನ ಬಳಿಗೆ ಹೋಗುತ್ತಿದ್ದ ಅಭಿಮನ್ಯುವನ್ನು ಕಾಂಬೋಜ

ರಿಗೆ ಅಧಿಪತಿಯಾದ ಸುದಕ್ಷಿಣನು ತಡೆದು ಯುದ್ಧಮಾಡುತ್ತಿದ್ದನು. ಕಾಂಬೋಜರಾಜನು ಅಭಿಮನ್ಯುವನ್ನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಪ್ರಹರಿಸಿ, ಪುನಃ ಅರುವತ್ತುನಾಲ್ಕು ಬಾಣಗಳಿಂದ ಆರ್ಜುನಿಯನ್ನು ಪ್ರಹರಿಸಿದನು. ಭೀಷ್ಮನು ಜೀವಿಸಿರಬೇಕೆಂದು ಇಚ್ಛಿಸುತ್ತಿದ್ದ ಸುದಕ್ಷಿಣನು ಅಭಿಮನ್ಯುವನ್ನು ಐದು ಬಾಣಗಳಿಂದ ಪ್ರಹರಿಸಿ, ಸಾರಥಿಯನ್ನು ಒಂಬತ್ತು ಬಾಣಗಳಿಂದ ಪ್ರಹರಿಸಿದನು. ಯಾವಾಗ ಶತ್ರುಕರ್ಶನನಾದ ಶಿಖಂಡಿಯು ಗಾಂಗೇಯನ ಬಳಿಗೆ ಧಾವಿಸಿದನೋ–ಆಗ ಅಭಿಮನ್ಯುವಿಗೂ ಮತ್ತು ಸುದಕ್ಷಿಣನಿಗೂ ಘೋರವಾದ ಯುದ್ಧವು ಪ್ರಾರಂಭವಾಯಿತು. ಇತ್ತಲಾಗಿ ವೃದ್ಧರಾಗಿದ್ದ, ಕ್ರುದ್ಧರಾಗಿದ್ದ, ಮಹಾರಥರಾದ ವಿರಾಟ-ದ್ರುಪದರೂ ಸಹ ದುರ್ಯೋಧನನ ಅಪಾರಸೈನ್ಯವನ್ನು ದೂರಕ್ಕೆ ಸರಿಸುತ್ತಾ ಭೀಷ್ಮನನ್ನು ಆಕ್ರಮಿಸಿದರು. ರಥಸತ್ತಮನಾದ ಅಶ್ವತ್ಥಾಮನು ಕ್ರುದ್ಧನಾಗಿ ರಣಭೂಮಿಗೆ ಆಗಮಿಸಿದನು. ಅನಂತರ ದ್ರೌಣಿಗೂ ವಿರಾಟ-ದ್ರುಪದರಿಗೂ ಮಹಾಯುದ್ಧವು ಪ್ರಾರಂಭವಾಯಿತು. ಪರಂತಪನೇ! ದ್ರುಪದ-ವಿರಾಟರನ್ನು ಭೀಷ್ಮನ ಬಳಿಗೆ ಬಿಡಕೂಡದೆಂದು ಪ್ರಯತ್ನಪೂರ್ವಕವಾಗಿ ಯುದ್ಧಮಾಡುತ್ತಿದ್ದ, ಮಹಾಧನುರ್ಧರನಾದ, ಆಹವಶೋಭಿಯಾದ ಅಶ್ವತ್ಥಾಮನನ್ನು ವಿರಾಟನು ಭಲ್ಲಗಳೆಂಬ ಹತ್ತು ಬಾಣಗಳಿಂದ ಪ್ರಹರಿಸಿದನು. ದ್ರುಪದನು ನಿಶಿತವಾದ ಮೂರು ಬಾಣಗಳಿಂದ ದ್ರೋಣಪುತ್ರನನ್ನು ಪ್ರಹರಿಸಿದನು. ಈ ರೀತಿಯಲ್ಲಿ ಮಹಾಬಲಿಷ್ಠರಾದ ವಿರಾಟ-ದ್ರುಪದರು ಗುರುಪುತ್ರನನ್ನೆದುರಿಸಿ ಅಶ್ವತ್ಥಾಮನನ್ನು ತೀಕ್ಷ್ಣವಾದ ಬಾಣಗಳಿಂದ ಪ್ರಹರಿಸುತ್ತಿದ್ದರು. ಭೀಷ್ಮನ ಸಮೀಪಕ್ಕೆ ಹೋಗಲು ಬಹಳವಾಗಿ ಪ್ರಯತ್ನಿಸುತ್ತಿದ್ದ ವಿರಾಟ-ದ್ರುಪದರನ್ನು ಅಶ್ವತ್ಥಾಮನು ನಿಶಿತವಾದ ಅನೇಕ ಬಾಣಗಳಿಂದ ಬಾಧೆಪಡಿಸಿದನು. ಆ ಸಮಯದಲ್ಲಿ ನಾವು ಆ ಇಬ್ಬರು ವೃದ್ಧರ ಆಶ್ಚರ್ಯಕರವಾದ ಸಾಹಸಕಾರ್ಯವನ್ನು ನೋಡಿದೆವು. ಅಶ್ವತ್ಥಾಮನು ಸತತವಾಗಿ ಘೋರವಾದ ಬಾಣಗಳ ಮಳೆಗರೆಯುತ್ತಿದ್ದರೂ ಆ ಬಾಣಗಳೆಲ್ಲವನ್ನೂ ವಿರಾಟ-ದ್ರುಪದರು ನಿರಸನಗೊಳಿಸಿಬಿಟ್ಟರು.

ಅರಣ್ಯದಲ್ಲಿ ಮದಿಸಿದ ಆನೆಯ ಮೇಲೆ ಮತ್ತೊಂದು ಮದಿಸಿದ ಆನೆಯು ದಾಳಿಮಾಡುವಂತೆ–ಭೀಷ್ಮನ ಸಮೀಪಕ್ಕೆ ಹೋಗುತ್ತಿದ್ದ ಸಹದೇವನನ್ನು ಕೃಪರು ಎದುರಿಸಿ ಅವನೊಡನೆ ಯುದ್ಧದಲ್ಲಿ ತೊಡಗಿದರು. ಶೂರ

ರಾದ ಕೃಪರು–ಮಹಾರಥನಾದ, ಮಾದ್ರಿಯ ಮಗನಾದ ಸಹದೇವನನ್ನು ಸ್ವರ್ಣಭೂಷಿತವಾದ ಶೀಘ್ರವಾಗಿ ಹೋಗುವ ಎಪ್ಪತ್ತು ಬಾಣಗಳಿಂದ ಪ್ರಹರಿಸಿದರು. ಒಡನೆಯೇ ಸಹದೇವನು ಬಾಣಗಳಿಂದ ಕೃಪರ ಧನುಸ್ಸನ್ನು ಎರಡಾಗಿ ಕತ್ತರಿಸಿಬಿಟ್ಟನು. ಅನಂತರ ಧನುಸ್ಸಿನಿಂದ ವಿಹೀನರಾಗಿದ್ದ ಕೃಪರನ್ನು ಒಂಬತ್ತು ಬಾಣಗಳಿಂದ ಪ್ರಹರಿಸಿದನು. ಭೀಷ್ಮನು ಜೀವಿಸಿರಬೇಕೆಂಬ ಆಕಾಂಕ್ಷೆಯಿಂದ ಕೃಪರು ಭಾರವನ್ನು (ಶಕ್ತಿಯನ್ನು ) ಸಹಿಸಲು ಸಮರ್ಥವಾದ ಮತ್ತೊಂದು ಧನುಸ್ಸನ್ನು ಒಡನೆಯೇ ತೆಗೆದುಕೊಂಡು ಹರ್ಷಯುಕ್ತರಾಗಿ ನಿಶಿತವಾದ ಹತ್ತು ಬಾಣಗಳಿಂದ ಸಹದೇವನನ್ನು ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದರು. ಅದೇ ರೀತಿಯಲ್ಲಿ ಪಾಂಡವಕನಿಷ್ಠನಾದ ಸಹದೇವನೂ ಸಹ ಭೀಷ್ಮನ ಸಂಹಾರವನ್ನು ಆಕಾಂಕ್ಷಿಸಿ ಅಸಹನಶೀಲರಾದ ಶಾರದ್ವತರನ್ನು ವಕ್ಷಃಸ್ಥಳದಲ್ಲಿ ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಅನಂತರ ಅವರ ಯುದ್ಧವು ಘೋರರೂಪವೂ, ಅದ್ಭುತವೂ ಆದ ಯುದ್ಧವಾಗಿ ಪರಿಣಮಿಸಿತು. ಭೀಷ್ಮರ ಸಮೀಪಕ್ಕೆ ಹೋಗದಂತೆ ನಕುಲನನ್ನು ತಡೆದಿದ್ದ ಶತ್ರುತಾಪನನಾದ ವಿಕರ್ಣನು ಮಹಾಬಲನಾದ ಭೀಷ್ಮನನ್ನು ರಕ್ಷಿಸುವ ಸಲುವಾಗಿ ಅರುವತ್ತು ಬಾಣಗಳಿಂದ ನಕುಲನನ್ನು ಪ್ರಹರಿಸಿದನು. ಧೀಮಂತನಾದ ನಿನ್ನ ಮಗನಿಂದ ಗಾಢವಾಗಿ ಪ್ರಹೃತನಾದ ನಕುಲನೂ ಸಹ ಎಪ್ಪತ್ತೇಳು ಬಾಣಗಳಿಂದ ವಿಕರ್ಣನನ್ನು ಕ್ಷತ-ವಿಕ್ಷತನನ್ನಾಗಿ ಮಾಡಿದನು. ಭೀಷ್ಮನ ಕಾರಣದಿಂದಾಗಿ ಪರಂತಪರಾದ ಆ ಇಬ್ಬರು ಪುರುಷಸಿಂಹರು–ಗೋಶಾಲೆಯಲ್ಲಿ ಎರಡು ಗೂಳಿಗಳು ಪರಸ್ಪರ ತಿವಿದಾಡುವಂತೆ–ಅನ್ಯೋನ್ಯವಾಗಿ ಪ್ರಹರಿಸುತ್ತಿದ್ದರು. ನಿನ್ನ ಸೈನ್ಯವನ್ನು ಧ್ವಂಸಮಾಡಿಕೊಂಡು ಭೀಷ್ಮನ ಕಡೆಗೆ ರಭಸದಿಂದ ಹೋಗುತ್ತಿದ್ದ ಘಟೋತ್ಕಚನನ್ನು–ಭೀಷ್ಮನನ್ನು ರಕ್ಷಿಸುವ ಆಶಯದಿಂದ, ಪರಾಕ್ರಮಿಯಾದ ದುರ್ಮುಖನನ್ನು ತಡೆದು ನಿಲ್ಲಿಸಿದನು. ಕ್ರುದ್ಧನಾದ ಹೈಡಿಂಬನು ಶತ್ರುತಾಪನನಾದ ದುರ್ಮುಖನನ್ನು ಬಗ್ಗಿದ ಗಿಣ್ಣುಗಳುಳ್ಳ ಬಾಣದಿಂದ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ದುರ್ಮುಖನೂ ಹೃಷ್ಟನಾಗಿಯೇ ಇದ್ದು ಗರ್ಜನೆಮಾಡುತ್ತಾ ಭೀಮಪುತ್ರನನ್ನು ತೀಕ್ಷ್ಣವಾದ ಅಗ್ರಭಾಗದಿಂದ ಕೂಡಿದ್ದ ಅರುವತ್ತು ಬಾಣಗಳಿಂದ ಪ್ರಹರಿಸಿದನು. ಮಹಾರಥನಾದ ಹಾರ್ದಿಕ್ಯನು ಭೀಷ್ಮನ ವಧಾಕಾಂಕ್ಷಿಯಾಗಿ ಹೋಗುತ್ತಿದ್ದ ರಥಶ್ರೇಷ್ಠನಾದ

ಧೃಷ್ಟದ್ಯುಮ್ನನನ್ನು ತಡೆದನು. ಮಹಾರಥನಾದ, ಮಹಾಬಾಹುವಾದ ಹಾರ್ದಿಕ್ಯನು ಪಾರ್ಷತನನ್ನು ಉಕ್ಕಿನಿಂದ ಮಾಡಲ್ಪಟ್ಟ ಐದು ಬಾಣಗಳಿಂದ ಪ್ರಹರಿಸಿ ಪುನಃ ಐವತ್ತು ಬಾಣಗಳನ್ನು ಧನುಸ್ಸಿನಲ್ಲಿ ಯೋಜಿಸಿ 'ನಿಲ್ಲು-ನಿಲ್ಲು' ಎಂದು ಹೇಳುತ್ತಾ ದ್ರುಪದಪುತ್ರನನ್ನು ಪ್ರಹರಿಸಿದನು. ಪಾರ್ಷತನೂ ಸಹ ಹಾರ್ದಿಕ್ಯನನ್ನು ಗೃಧ್ರದ ರೆಕ್ಕೆಗಳಿಂದ ಕೂಡಿದ್ದ, ನೇರವಾಗಿ ಹೋಗುವುದಾಗಿದ್ದ ತೀಕ್ಷ್ಣವಾಗಿದ್ದ ಮತ್ತು ನಿಶಿತವಾಗಿದ್ದ, ಒಂಬತ್ತು ಬಾಣಗಳಿಂದ ಪ್ರಹರಿಸಿದನು. ಆಗ ಭೀಷ್ಮನ ನಿಮಿತ್ತದಿಂದ–ವೃತ್ರನಿಗೂ, ವಾಸವನಿಗೂ ನಡೆದ ಯುದ್ಧದಂತೆ–ಅನ್ಯೋನ್ಯಾತಿಶಯಯುಕ್ತವಾದ (ನಾನು ಹೆಚ್ಚು- ತಾನು ಹೆಚ್ಚು ಎಂಬುದನ್ನು ತೋರಿಸುವ ಪ್ರಯತ್ನದಿಂದ ಕೂಡಿದ್ದ) ಯುದ್ಧವು ಧೃಷ್ಟದ್ಯುಮ್ನನಿಗೂ-ಹಾರ್ದಿಕ್ಯನಿಗೂ ನಡೆಯಿತು. ಭೀಷ್ಮನ ಸಮೀಪಕ್ಕೆ ರಭಸದಿಂದ ಬರುತ್ತಿದ್ದ ಮಹಾರಥನಾದ ಭೀಮಸೇನನನ್ನು ಭೂರಿಶ್ರವಸನು ನಿಲ್ಲು-ನಿಲ್ಲೆಂದು ಹೇಳುತ್ತಾ ತಡೆದನು. ಮರುಕ್ಷಣದಲ್ಲಿಯೇ ಸುತೀಕ್ಷ್ಣವಾದ ಚಿನ್ನದ ರೆಕ್ಕೆಗಳಿಂದ ಕೂಡಿದ್ದ ನಾರಾಚದಿಂದ ಸೌಮದತ್ತಿಯು ಭೀಮನನ್ನು ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಹಿಂದೆ ಕಾರ್ತಿಕೇಯನು ಬಿಟ್ಟ ಶಕ್ತ್ಯಾಯುಧದಿಂದ ಕ್ರೌಂಚಪರ್ವತವು ಶೋಭಾಯಮಾನವಾಗಿ ಕಂಡಂತೆ–ಎದೆಯಲ್ಲಿ ನಾಟಿಕೊಂಡಿದ್ದ ಬಾಣದಿಂದ ಪ್ರತಾಪವಂತನಾದ ಭೀಮನು ಪ್ರಕಾಶಿಸಿದನು.

ಅನಂತರ ಅವರಿಬ್ಬರೂ ಸೂರ್ಯನಂತೆ ಪ್ರಕಾಶಮಾನವಾಗಿದ್ದ, ಕಮ್ಮಾರರಿಂದ ಹದಗೊಳಿಸಲ್ಪಟ್ಟ ಬಾಣಗಳಿಂದ ಪರಸ್ಪರವಾಗಿ ಪ್ರಹರಿಸ ತೊಡಗಿದರು. ಭೀಷ್ಮನ ವಧಾಕಾಂಕ್ಷಿಯಾಗಿದ್ದ ಭೀಮನು ಭೂರಿಶ್ರವಸ ನನ್ನೂ, ಭೀಷ್ಮನಿಗೆ ವಿಜಯವನ್ನು ಆಶಿಸಿದ್ದ ಭೂರಿಶ್ರವಸನು ಭೀಮನನ್ನೂ ಅನ್ಯೋನ್ಯವಾಗಿ ಪ್ರಹರಿಸುತ್ತಿದ್ದರು. ಮಾಡಿದುದಕ್ಕೆ ಪ್ರತಿಮಾಡಲು ಸಾಮರ್ಥ್ಯವಿದ್ದ ಇಬ್ಬರು ಮಹಾಯೋಧರೂ ಒಬ್ಬರು ಮತ್ತೊಬ್ಬರನ್ನು ಪರಾಜಯಗೊಳಿಸಲು ಪ್ರಯತ್ನಪೂರ್ವಕವಾಗಿ ಯುದ್ಧಮಾಡುತ್ತಿದ್ದರು. ಬೃಹತ್ಸೈನ್ಯದೊಡನೆ ಭೀಷ್ಮನ ಬಳಿಗೆ ಹೋಗುತ್ತಿದ್ದ ಕುಂತಿಯ ಮಗನಾದ ಯುಧಿಷ್ಠಿರನನ್ನು ದ್ರೋಣರು ತಡೆದರು. ಮೇಘದ ಗರ್ಜನೆಗೆ ಸದೃಶವಾಗಿದ್ದ ದ್ರೋಣರ ರಥದ ನಿನಾದವನ್ನು ಕೇಳಿ ಪ್ರಭದ್ರಕ ವೀರರು ನಡುಗಿದರು. ಮಹಾರಾಜ! ಭೀಷ್ಮನನ್ನು ಆಕ್ರಮಿಸಲು ಬಂದಿದ್ದ

ಯುಧಿಷ್ಠಿರನ ಸೈನ್ಯವು ಬಹಳ ದೊಡ್ಡದಾಗಿದ್ದಿತು. ಯುಧಿಷ್ಠಿರನ ಸೈನ್ಯವು ದ್ರೋಣರಿಂದ ಪ್ರಯತ್ನಪೂರ್ವಕವಾಗಿ ಬಾಣಗಳ ವೃಷ್ಟಿಯಿಂದ ಬಾಧೆಪಡಿಸಲ್ಪಡುತ್ತಿದ್ದರೂ ಒಂದು ಹೆಜ್ಜೆಯಷ್ಟೂ ಹಿಮ್ಮೆಟ್ಟಲಿಲ್ಲ. (ಒಂದು ಹೆಜ್ಜೆಯಷ್ಟು ಹಿಮ್ಮೆಟ್ಟಿಸಲೂ ಕೂಡ ದ್ರೋಣರಿಗೆ ಸಾಧ್ಯವಾಗಲಿಲ್ಲ.) ಪ್ರಯತ್ನ ಪೂರ್ವಕವಾಗಿ ಭೀಷ್ಮನ ಕಡೆಗೆ ನುಗ್ಗುತ್ತಿದ್ದ ಕ್ರುದ್ಧನಾದ ಚೇಕಿತಾನನನ್ನು ನಿನ್ನ ಮಗನಾದ ಚಿತ್ರಸೇನನು ತಡೆದು ನಿಲ್ಲಿಸಿದನು. ಪರಾಕ್ರಮಿಯಾದ ಚಿತ್ರ ಸೇನನು ಭೀಷ್ಮನನ್ನು ರಕ್ಷಿಸುವ ಸಲುವಾಗಿ ತನ್ನ ಪರಾಕ್ರಮವೆಲ್ಲವನ್ನೂ ಕೇಂದ್ರೀಕರಿಸಿ ಚೇಕಿತಾನನೊಡನೆ ಅತ್ಯಂತಪ್ರಭಾವಯುತವಾಗಿ ಯುದ್ಧ ಮಾಡುತ್ತಿದ್ದನು. ಅದೇ ರೀತಿಯಲ್ಲಿ ಚೇಕಿತಾನನೂ ಸಹ ಚಿತ್ರಸೇನನನ್ನು ಹಿಮ್ಮೆಟ್ಟಿಸಿ ಭೀಷ್ಮನ ಸಮೀಪಕ್ಕೆ ಹೋಗಲು ಶ್ರಮಪೂರ್ವಕವಾಗಿ ಪ್ರಯತ್ನಿಸುತ್ತಿದ್ದನು. ಆ ಸಮಯದಲ್ಲಿ ಅವರಿಬ್ಬರ ನಡುವೆ ಮಹಾಯುದ್ಧವೇ ಪ್ರಾರಂಭವಾಯಿತು. ಅರ್ಜುನನಿಗೂ–ದುಃಶಾಸನನಿಗೂ ಯುದ್ಧವು ನಡೆಯುತ್ತಿದ್ದ ವಿಷಯವಾಗಿ ಈ ಹಿಂದೆಯೇ ಹೇಳಿದ್ದೇನಲ್ಲವೇ? ಮಹಾರಾಜ! ಅರ್ಜುನ ನನ್ನು ಹಿಮ್ಮೆಟ್ಟಿಸಲು ನಿನ್ನ ಮಗನು ಬಹಳವಾಗಿ ಪ್ರಯತ್ನಪಟ್ಟರೂ ಸಾಧ್ಯ ವಾಗಲಿಲ್ಲ. ಅರ್ಜುನನೇ ನಿನ್ನ ಮಗನಾದ ದುಃಶಾಸನನನ್ನು ಹಿಮ್ಮೆಟ್ಟಿಸಿ ಅವನೊಡನಿದ್ದ ಅಪಾರಸೇನೆಯನ್ನೂ ಮರ್ದನಮಾಡಿದನು. ಆದರೆ ನಿನ್ನ ಮಗನು ಪರಾಜಿತನಾಗಿ ಓಡಿಹೋಗದೇ ಪುನಃ ಚೇತರಿಸಿಕೊಂಡು–'ನಮ್ಮ ಭೀಷ್ಮನನ್ನು ಸಂಹರಿಸಲು ಯಾವುದೇ ಕಾರಣದಿಂದಲೂ ಶತ್ರುಗಳಿಗೆ ಅವಕಾಶಕೊಡಬಾರದು'–ಎಂಬ ದೃಢನಿಶ್ಚಯದಿಂದ ಪುನಃ ತನ್ನ ಅಪಾರಶಕ್ತಿಯನ್ನೂ ಕೇಂದ್ರೀಕರಿಸಿ ಪಾರ್ಥನನ್ನು ಆಕ್ರಮಿಸಿದನು. ಆದರೆ ಆ ಸಮಯದಲ್ಲಿ ಎಲ್ಲ ವಿಭಾಗಗಳಲ್ಲಿಯೂ ಪಾಂಡವರದೇ ಮೇಲುಗೈ ಆಗಿರುವಂತೆ ಕಾಣುತ್ತಿದ್ದಿತು. ಮೊದಲು-ಮೊದಲು ಬಾಣಗಳಿಂದ ಪ್ರಹೃತವಾಗುತ್ತಿದ್ದ ನಿನ್ನ ಮಗನ ಸೇನೆಯು ಕಡೆ-ಕಡೆಗೆ ಶ್ರೇಷ್ಠರಾದ ಪಾಂಡವಮಹಾರಥರಿಂದ ಮಥಿಸಲ್ಪಡುತ್ತಿದ್ದಿತು. (ಪಾಂಡವರ ಕಡೆಯ ಮಹಾರಥರು ನಿನ್ನ ಮಗನ ಸೈನ್ಯವನ್ನು ಅರೆದುಬಿಟ್ಟರು.)"

ಂ೧೧ನೆಯ ಅಧ್ಯಾಯವು ಮುಗಿಯಿತು.

## ದ್ರೋಣರು ಅಶ್ವತ್ಥಾಮನಿಗೆ ಅಶುಭಸೂಚಕಗಳಾದ ನಿಮಿತ್ತಗಳನ್ನು ವಿವರಿಸುತ್ತಾ ಭೀಷ್ಮನ ರಕ್ಷಣೆಗಾಗಿ ಧೃಷ್ಟದ್ಯುಮ್ನನೊಡನೆ ಯುದ್ಧಮಾಡುವಂತೆ ಆದೇಶವನ್ನು ನೀಡಿದುದು

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸುತ್ತಾನೆ :

"ಮಹಾರಾಜ! ಅನಂತರ ಮಹಾಧನುರ್ಧರರಾದ, ಮದಿಸಿದ ಆನೆಗೆ ಸಮಾನವಾದ ಪರಾಕ್ರಮವನ್ನು ಹೊಂದಿದ್ದ, ನರಶ್ರೇಷ್ಠರಾದ, ಮಹಾಬಲಿಷ್ಠರಾದ, ಶುಭಾಶುಭವನ್ನು ಸೂಚಿಸುವ ನಿಮಿತ್ತಗಳನ್ನು ತಿಳಿದವರಾಗಿದ್ದ, ಮಹಾಶಕ್ತಿಶಾಲಿಗಳಾಗಿದ್ದ ದ್ರೋಣಾಚಾರ್ಯರು ಮದಿಸಿದ ಆನೆಗಳನ್ನೂ ತಡೆಯಲು ಸಮರ್ಥವಾಗಿದ್ದ, ದೊಡ್ಡದಾದ ಧನುಸ್ಸನ್ನು ತೆಗೆದುಕೊಂಡು ಟೇಂಕರಿಸುತ್ತಾ ಪಾಂಡವರ ಮಹಾಸೇನೆಯ ಒಳಹೊಕ್ಕು ಸತತವಾದ ಬಾಣಗಳ ಪ್ರಯೋಗದಿಂದ ಆ ಸೈನ್ಯವನ್ನೆಲ್ಲಾ ಚೆದುರಿಸಿ ಓಡಿಸಿಬಿಟ್ಟರು. ಆ ಸಂದರ್ಭದಲ್ಲಿ ಸುತ್ತಲೂ ಕಾಣುತ್ತಿದ್ದ ಕೆಲವು ನಿಮಿತ್ತಗಳನ್ನು ದೃಷ್ಟಿಸಿ ನೋಡಿ, ಬಾಣಗಳ ಪ್ರಹಾರದಿಂದ ಶತ್ರುಗಳ ಸೈನ್ಯಕ್ಕೆ ಸತತವಾಗಿ ಸಂತಾಪವನ್ನುಂಟುಮಾಡುತ್ತಿದ್ದ ಅಶ್ವತ್ಥಾಮನನ್ನು ಕುರಿತು ಹೇಳಿದರು :

"ಮಗು! ಅಶ್ವತ್ಥಾಮ! ಈ ದಿವಸ ಮಹಾಬಲನಾದ ಪಾರ್ಥನು ಭೀಷ್ಮನನ್ನು ಸಂಹಾರಮಾಡುವ ನಿರ್ಧಾರದಿಂದ ವಿಶೇಷವಾದ ಪ್ರಯತ್ನವನ್ನೇ ಮಾಡುತ್ತಾನೆ.

**ಉತ್ಪತನ್ತಿ ಹಿ ಮೇ ಬಾಣಾಃ ಧನುಃ ಪ್ರಸ್ಫುರತೀವ ಚ ।**
**ಯೋಗಮಸ್ತ್ರಾಣಿ ಗಚ್ಛನ್ತಿ ಕ್ರೂರೇ ಮೇ ವರ್ತತೇ ಮತಿಃ ॥೫॥**

ನನ್ನ ಬಾಣಗಳು ಬತ್ತಳಿಕೆಯಿಂದ ತಾವೇ ತಾವಾಗಿ ಹೊರಬರುತ್ತಿವೆ. ಧನುಸ್ಸು ತಾನೇ ತಾನಾಗಿ ಸ್ಫುರಿಸುತ್ತಿದೆ. (ಎದ್ದೆದ್ದು ಕುಣಿಯುತ್ತಿದೆ.) ಪ್ರಯತ್ನವಿಲ್ಲದೆಯೇ ಅಸ್ತ್ರಗಳು ಧನುಸ್ಸಿನಲ್ಲಿ ಸೇರಿಕೊಳ್ಳುತ್ತಿವೆ. ನನ್ನ ಬುದ್ಧಿಯೂ ಕ್ರೂರವಾದ ಕರ್ಮದಲ್ಲಿ ಪ್ರವೃತ್ತವಾಗುತ್ತಿದೆ.

**ದಿಕ್ಷ್ವಶಾನ್ತಾನಿ ಘೋರಾಣಿ ವ್ಯಾಹರನ್ತಿ ಮೃಗದ್ವಿಜಾಃ ।**
**ನೀಚೈರ್ಗೃಧ್ರಾ ನಿಲೀಯನ್ತೇ ಭಾರತಾನಾಂ ಚಮೂಂ ಪ್ರತಿ ॥೬॥**

ಎಲ್ಲ ದಿಕ್ಕುಗಳಲ್ಲಿಯೂ ಮೃಗ-ಪಕ್ಷಿಗಳು ಅಶಾಂತವಾಗಿ ಘೋರವಾಗಿ ಕಿರುಚಿಕೊಳ್ಳುತ್ತಿವೆ. ಕೌರವರ ಸೈನ್ಯಗಳಿರುವ ಕಡೆಯಲ್ಲಿ ರಣಹದ್ದುಗಳು ಬಹಳ ಕೆಳಕ್ಕೆ ಇಳಿಯುತ್ತಿವೆ.

**ನಷ್ಟಪ್ರಭ ಇವಾದಿತ್ಯಃ ಸರ್ವತೋ ಲೋಹಿತಾ ದಿಶಃ ।**
**ರಸತೇ ವ್ಯಥತೇ ಭೂಮಿಃ ಕಮ್ಪತೀವ ಚ ಸರ್ವಶಃ ॥೭॥**

ಸೂರ್ಯನು ಪ್ರಭೆಯಿಂದ ಹೀನನಾಗಿರುವಂತೆ ಕಾಣುತ್ತಿದ್ದಾನೆ. ಎಲ್ಲ ದಿಕ್ಕುಗಳೂ ಕೆಂಪಗೆ ಕಾಣುತ್ತಿವೆ. ಭೂಮಿಯು ಸರ್ವತ್ರ ಕೋಲಾಹಲ ಪೂರ್ಣವಾಗಿಯೂ, (ಶಬ್ದಮಾಡುತ್ತಿರುವಂತೆಯೂ) ವ್ಯಥಿತವಾಗಿಯೂ, ಕಂಪಿಸುತ್ತಿರುವಂತೆಯೂ ಕಾಣುತ್ತಿದೆ.

**ಕಙ್ಕಾ ಗೃಧ್ರಾ ಬಲಾಕಾಶ್ಚ ವ್ಯಾಹರನ್ತಿ ಮುಹುರ್ಮುಹುಃ ।**
**ಶಿವಾಶ್ಚೈವಾಶಿವಾ ಘೋರಾ ವೇದಯನ್ತ್ಯೋ ಮಹದ್ಭಯಮ್ ॥೮॥**

ಹದ್ದುಗಳೂ, ರಣಹದ್ದುಗಳೂ, ಕೊಕ್ಕರೆಗಳೂ ಪದೇ-ಪದೇ ಕೂಗಿ ಕೊಳ್ಳುತ್ತಿವೆ. ಗುಳ್ಳೇನರಿಗಳು ಅಮಂಗಳಕರವಾದ ಮತ್ತು ಘೋರವಾದ ಶಬ್ದಗಳನ್ನು ಮಾಡುತ್ತಾ ಮುಂಬರುವ ಮಹದ್ಭಯವನ್ನು ಸೂಚಿಸುತ್ತಿವೆ.

**ಪಪಾತ ಮಹತೀ ಚೋಲ್ಕಾ ಮಧ್ಯೇನಾದಿತ್ಯಮಣ್ಡಲಾತ್ ।**
**ಸಕಬನ್ಧಶ್ಚ ಪರಿಘೋ ಭಾನುಮಾವೃತ್ಯ ತಿಷ್ಠತಿ ॥೯॥**

ಆದಿತ್ಯಮಂಡಲದ ಮಧ್ಯದಿಂದ ದೊಡ್ಡದಾದ ಬಾಲಚುಕ್ಕಿಯು ಕೆಳಕ್ಕೆ ಬಿದ್ದಿತು. ರಾಹುವು ಪರಿಘಾಯುಧದೊಡನೆ ಸೂರ್ಯನನ್ನು ನಾಲ್ಕು ಕಡೆಗಳಿಂದಲೂ ಆಕ್ರಮಿಸಿ ಕುಳಿತಿದ್ದಾನೆ.

**ಪರಿವೇಷಸ್ತಥಾ ಘೋರಶ್ಚನ್ದ್ರಭಾಸ್ಕರಯೋರಭೂತ್ ।**
**ವೇದಯಾನೋ ಭಯಂ ಘೋರಂ ರಾಜ್ಞಾಂ ದೇಹಾವಕರ್ತನಮ್ ॥೧೦॥**

ಚಂದ್ರ-ಸೂರ್ಯರ ಸುತ್ತಲೂ ಭಯಂಕರವಾದ ಪರಿವೇಷವು ಕಾಣಿಸಿ ಕೊಳ್ಳುತ್ತಿದೆ. ಇದು ಮುಂದಾಗಲಿರುವ ಕ್ಷತ್ರಿಯರ ವಿನಾಶರೂಪವಾದ ಘೋರಭಯವನ್ನು ಸೂಚಿಸುತ್ತದೆ.

**ದೇವತಾಯತನಸ್ಥಾಶ್ಚ ಕೌರವೇನ್ದ್ರಸ್ಯ ದೇವತಾಃ ।**
**ಕಮ್ಪನ್ತೇ ಚ ಹಸನ್ತೇ ಚ ನೃತ್ಯನ್ತಿ ಚ ರುದನ್ತಿ ಚ ॥೧೧॥**

**ಅಪಸವ್ಯಂ ಗ್ರಹಾಶ್ಚಕ್ರುರಲಕ್ಷ್ಮಾಣಂ ದಿವಾಕರಮ್ ।**
**ಅವಾಕ್ಶಿರಾಶ್ಚ ಭಗವಾನುಪಾತಿಷ್ಠತ ಚನ್ದ್ರಮಾಃ ॥೧೨॥**

ಕೌರವೇಂದ್ರನಾದ ಧೃತರಾಷ್ಟ್ರನ ದೇವಾಲಯಗಳಲ್ಲಿರುವ ದೇವತಾ ಮೂರ್ತಿಗಳು ನಡುಗುತ್ತಿವೆ ; ನಗುತ್ತಿವೆ ; ನೃತ್ಯಮಾಡುತ್ತಿವೆ ಮತ್ತು ಅಳು ತ್ತಲೂ ಇವೆ. ಗ್ರಹಗಳು ಸೂರ್ಯನನ್ನು ಅಪಸವ್ಯಕ್ರಮದಿಂದ ಸುತ್ತುತ್ತಿದ್ದು ವಿಪತ್ತನ್ನು ಸೂಚಿಸುತ್ತಿವೆ. ಭಗವಾನ್ ಚಂದ್ರನು ತಲೆಯನ್ನು ಕೆಳಗೆಮಾಡಿ ಕೊಂಡು ಹುಟ್ಟಿದ್ದಾನೆ.

**ವಪೂಂಷಿ ಚ ನರೇನ್ದ್ರಾಣಾಂ ವಿಗತಾಭಾನಿ ಲಕ್ಷಯೇ ।**
**ಧಾರ್ತರಾಷ್ಟ್ರಸ್ಯ ಸೈನ್ಯೇಷು ನ ಚ ಭ್ರಾಜನ್ತಿ ದಂಶಿತಾಃ ॥೧೩॥**

ನರೇಂದ್ರರ ಶರೀರಗಳು ಕಾಂತಿಹೀನವಾಗಿರುವುದನ್ನು ನಾನು ಲಕ್ಷಿಸು ತ್ತಿದ್ದೇನೆ. ಧೃತರಾಷ್ಟ್ರಪುತ್ರನ ಸೈನ್ಯದಲ್ಲಿ ಕವಚಧಾರಿಗಳಾದ ಯೋಧರು ವರ್ಚಸ್ಸಿನಿಂದ ಕೂಡಿದವರಾಗಿಲ್ಲ.

ಎರಡೂ ಸೈನ್ಯಗಳ ಸುತ್ತಲೂ ಪಾಂಚಜನ್ಯಶಂಖದ ಘೋಷವೂ ಮತ್ತು ಗಾಂಡೀವಧನುಸ್ಸಿನ ಟೇಂಕಾರಶಬ್ದವೂ ಮಾತ್ರವೇ ಕೇಳಿಸುತ್ತಿದೆ. ಯುದ್ಧದಲ್ಲಿ ಬೀಭತ್ಸುವು ಉತ್ತಮೋತ್ತಮವಾದ ಅಸ್ತ್ರಗಳನ್ನು ಧಾರಣೆ ಮಾಡಿಕೊಂಡು ಇತರ ಕೌರವಯೋಧರೆಲ್ಲರನ್ನೂ ದೂರೀಕರಿಸಿ ಪಿತಾಮಹ ನನ್ನೇ ಆಕ್ರಮಿಸುವನೆಂಬುದು ನಿಶ್ಚಯ. ಮಹಾಬಾಹೋ! ಅಶ್ವತ್ಥಾಮನೇ! ಭೀಷ್ಮಾರ್ಜುನರ ಸಮಾಗಮದ ವಿಷಯವನ್ನು ನೆನೆಸಿಕೊಂಡೊಡನೆಯೇ ನನ್ನ ರೋಮಕೋಟಿಗಳು ನಿಮಿರಿನಿಲ್ಲುತ್ತವೆ. ನನ್ನ ಮನಸ್ಸು ಶಿಥಿಲಗೊಳ್ಳು ತ್ತದೆ. ಕಪಟಬುದ್ಧಿಯುವನಾದ, ಪಾಪಚೇತನನಾದ ಪಾಂಚಾಲ್ಯನನ್ನು (ಶಿಖಂಡಿಯನ್ನು ) ಮುಂದೆಮಾಡಿಕೊಂಡು ಅರ್ಜುನನು ಭೀಷ್ಮನೊಡನೆ ಯುದ್ಧಮಾಡಲು ಹೋಗಿರುವನು. ಈ ಹಿಂದೆ ಭೀಷ್ಮನು ಶಿಖಂಡಿಯ ವಿಷಯವಾಗಿ–"ಬ್ರಹ್ಮನು ಇವನನ್ನು ಮೊದಲು ಸ್ತ್ರೀರೂಪದಲ್ಲಿಯೇ ಸೃಷ್ಟಿಸಿದ್ದನು. ದೈವವಶಾತ್ ಇವನು ಈಗ ಪುರುಷನಾಗಿದ್ದಾನೆ. ಇವನು

ಹಿಂದೆ ಸ್ತ್ರೀಯಾಗಿ ಹುಟ್ಟಿರುವ ಕಾರಣ ನಾನು ಇವನನ್ನು ಸಂಹಾರಮಾಡುವುದಿಲ್ಲ"–ಎಂದು ಹೇಳಿದ್ದನು. ಕುಮಾರ! ಮೇಲಾಗಿ ಮಹಾಬಲನಾದ ಯಾಜ್ಞಸೇನಿಯು ಅಮಂಗಲ್ಯಧ್ವಜನಾಗಿದ್ದಾನೆ. ಅವನ ಧ್ವಜದಲ್ಲಿ ಅಮಂಗಲಸೂಚಕವಾದ ಹರಳುಗಿಡದ ಚಿಹ್ನೆಯಿದೆ. ಅಮಂಗಲದ ಚಿಹ್ನೆಯುಳ್ಳ ಧ್ವಜವನ್ನು ಹೊಂದಿರುವ ಕಾರಣದಿಂದಲೂ ಶಿಖಂಡಿಯನ್ನು ಭೀಷ್ಮನು ಪ್ರಹರಿಸುವುದಿಲ್ಲ. ಈ ವಿಷಯಗಳನ್ನೆಲ್ಲಾ ಚಿಂತಿಸುತ್ತಾ ನನ್ನ ಬುದ್ಧಿಯು ಬಹಳವಾಗಿ ಶಿಥಿಲಗೊಳ್ಳುತ್ತಿದೆ. ಸಕಲಸನ್ನಾಹಗಳನ್ನೂ ಮಾಡಿಕೊಂಡೇ ಪಾರ್ಥನಿಂದು ಭೀಷ್ಮನನ್ನು ಆಕ್ರಮಿಸಿದ್ದಾನೆ.

**ಯುಧಿಷ್ಠಿರಸ್ಯ ಚ ಕ್ರೋಧೋ ಭೀಷ್ಮಶ್ಚಾರ್ಜುನಸಙ್ಗತಃ ।**
**ಮಮ ಚಾಸ್ತ್ರಸಮಾರಮ್ಭಃ ಪ್ರಜಾನಾಮಶಿವಂ ಧ್ರುವಮ್ ॥೨೧॥**

ಯುಧಿಷ್ಠಿರನು ಕ್ರೋಧಾಭಿಭೂತನಾಗಿರುವುದು, ಭೀಷ್ಮಾರ್ಜುನರು ಯುದ್ಧದಲ್ಲಿ ತೊಡಗಿರುವುದು ಮತ್ತು ನಾನು ಅಸ್ತ್ರಗಳನ್ನು ಉಪಯೋಗಿಸಲು ಪ್ರಾರಂಭಿಸಿರುವುದು-ಇವುಗಳಿಂದ ಪ್ರಜೆಗಳಿಗೆ ಅಮಂಗಲವು ನಿಶ್ಚಯ.

**ಮನಸ್ವೀ ಬಲವಾಞ್ಶೂರಃ ಕೃತಾಸ್ತ್ರೋ ಲಘುವಿಕ್ರಮಃ ।**
**ದೂರಪಾತೀ ದೃಢೇಷುಶ್ಚ ನಿಮಿತ್ತಜ್ಞಶ್ಚ ಪಾಣ್ಡವಃ ॥೨೨॥**

**ಅಜೇಯಃ ಸಮರೇ ಚಾಪಿ ದೇವೈರಪಿ ಸವಾಸವೈಃ ।**
**ಬಲವಾನ್ಬುದ್ಧಿಮಾಂಶ್ಚೈವ ಜಿತಕ್ಲೇಶೋ ಯುಧಾಂ ವರಃ ॥೨೩॥**

**ವಿಜಯೀ ಚ ರಣೇ ನಿತ್ಯಂ ಭೈರವಾಸ್ತ್ರಶ್ಚ ಪಾಣ್ಡವಃ ।**
**ತಸ್ಯ ಮಾರ್ಗಂ ಪರಿಹರನ್ದ್ರುತಂ ಗಚ್ಛ ಯತವ್ರತ ॥೨೪॥**

ಪಾಂಡುನಂದನನಾದ ಅರ್ಜುನನು ಮನನಶೀಲನು, ಬಲಿಷ್ಠನು, ಶೂರನು, ಅಸ್ತ್ರವಿದ್ಯೆಯಲ್ಲಿ ನಿಪುಣನು, ಬಹಳ ಶೀಘ್ರವಾಗಿ ಪರಾಕ್ರಮವನ್ನು ಪ್ರಕಟಿಸುವವನು, ಬಹಳ ದೂರದಲ್ಲಿರುವ ಲಕ್ಷ್ಯವನ್ನಾದರೂ ಭೇದಿಸತಕ್ಕವನು, ಬಾಣಗಳನ್ನು ಬಹಳ ದೃಢವಾಗಿ ಹಿಡಿದಿರುವವನು, ಶುಭಾಶುಭ ನಿಮಿತ್ತಗಳನ್ನು ತಿಳಿದಿರತಕ್ಕವನು, ಯುದ್ಧದಲ್ಲಿ ಇಂದ್ರಸಹಿತರಾದ ದೇವತೆಗಳಿಂದಲೂ ಪರಾಜಿತನಾಗದೇ ಇರತಕ್ಕವನು, ಮಹಾಬಲಿಷ್ಠನು, ಬುದ್ಧಿ

ವಂತನು, ಕ್ಲೇಶವೆಂಬುದನ್ನೇ ಸಂಪೂರ್ಣವಾಗಿ ಜಯಿಸಿರತಕ್ಕವನು, ಯೋಧಶ್ರೇಷ್ಠನು, ಯುದ್ಧದಲ್ಲಿ ನಿತ್ಯವೂ ಜಯಗಳಿಸುತ್ತಲೇ ಇರುವವನು, ಭಯಂಕರವಾದ ಅಸ್ತ್ರಗಳನ್ನು ಹೊಂದಿರುವವನು. ಇವನು ಹೋಗುತ್ತಿರುವ ಮಾರ್ಗವನ್ನು ಬಿಟ್ಟು ನೀನು ಬಹಳ ಶೀಘ್ರವಾಗಿ ಭೀಷ್ಮನ ರಕ್ಷಣೆಗಾಗಿ ಹೋಗು. ಯತವ್ರತನೇ! ಘೋರವಾದ ಈ ಮಹಾಸಂಗ್ರಾಮದಲ್ಲಾಗುವ ಶೂರರ ವಿಶಸನಕ್ರಿಯೆಯನ್ನಾದರೂ ನೋಡು. ದೊಡ್ಡದಾಗಿಯೂ ಶುಭಾವಹವಾಗಿಯೂ ಇರುವ ಸುವರ್ಣಮಯವಾದ ಮತ್ತು ಚಿತ್ರಿತವಾದ ಕವಚಗಳು ಬಗ್ಗಿದ ಗಿಣ್ಣುಗಳುಳ್ಳ ಅರ್ಜುನನ ಬಾಣಗಳಿಂದ ಸೀಳಲ್ಪಡುತ್ತಿವೆ. ಧ್ವಜಗಳ ಅಗ್ರಭಾಗಗಳೂ, ತೋಮರಗಳೂ, ಧನುಸ್ಸುಗಳೂ ಕತ್ತರಿಸ ಲ್ಪಡುತ್ತಿವೆ. ಸಂಕ್ರುದ್ಧನಾದ ಕಿರೀಟಿಯು ಸ್ವಚ್ಛವಾಗಿಯೂ, ತೀಕ್ಷ್ಣವಾಗಿಯೂ ಇರುವ ಪ್ರಾಸಾಯುಧಗಳನ್ನೂ, ಸುವರ್ಣಮಯವಾಗಿರುವುದರಿಂದ ಉಜ್ಜ್ವಲವಾಗಿ ಕಾಣುವ ಶಕ್ತ್ಯಾಯುಧಗಳನ್ನೂ, ಆನೆಗಳ ಮೇಲಿರುವ ವೈಜಯಂತಿ (ಪತಾಕೆ)ಗಳನ್ನೂ ಛಿನ್ನ-ಭಿನ್ನವಾಗಿ ಮಾಡಿಬಿಡುತ್ತಾನೆ.

ಪುತ್ರ! ಒಬ್ಬರ ಆಶ್ರಯದಿಂದ ಜೀವನವನ್ನು ನಡೆಸುತ್ತಿರುವ ನಮ್ಮಂತಹವರಿಗೆ ಪ್ರಾಣಗಳನ್ನು ಸಂರಕ್ಷಣೆಮಾಡಿಕೊಳ್ಳುವ ಕಾಲವು ಇದಲ್ಲ. ಆದುದರಿಂದ ನೀನು ಸ್ವರ್ಗವನ್ನೇ ಮುಂದಿಟ್ಟುಕೊಂಡು ಯಶಸ್ಸಿನ ಪ್ರಾಪ್ತಿ ಗಾಗಿ ಮತ್ತು ವಿಜಯದ ಪ್ರಾಪ್ತಿಗಾಗಿ ಈಗಲೇ ಭೀಷ್ಮನ ರಕ್ಷಣೆಗಾಗಿ ಹೋಗು. ರಥ, ಆನೆ ಮತ್ತು ಕುದುರೆಗಳೇ ಸುಳಿಯಾಗಿ ಉಳ್ಳ, ಮಹಾಘೋರವಾದ, ಸುದುರ್ಗಮವಾದ ಸಂಗ್ರಾಮನದಿಯನ್ನು ಕಪಿಧ್ವಜನಾದ ಪಾರ್ಥನು ರಥದಿಂದಲೇ ದಾಟುತ್ತಾನೆ.

**ಬ್ರಹ್ಮಣ್ಯತಾ ದಮೋ ದಾನಂ ತಪಶ್ಚ ಚರಿತಂ ಮಹತ್ ।**
**ಇಹೈವ ದೃಶ್ಯತೇ ಪಾರ್ಥೇ ಭ್ರಾತಾ ಯಸ್ಯ ಧನಂಜಯಃ ॥೩೦॥**

**ಭೀಮಸೇನಶ್ಚ ಬಲವಾನ್ ಮಾದ್ರೀಪುತ್ರೌ ಚ ಪಾಣ್ಡವೌ ।**
**ವಾಸುದೇವಶ್ಚ ವಾರ್ಷ್ಣೇಯೋ ಯಸ್ಯ ನಾಥೋ ವ್ಯವಸ್ಥಿತಃ ॥೩೧॥**

ಬ್ರಾಹ್ಮಣರ ವಿಷಯದಲ್ಲಿ ಪ್ರೀತಿ ಮತ್ತು ಭಕ್ತಿ ; ಇಂದ್ರಿಯಗಳ ಸಂಯಮನ, ದಾನ, ತಪಸ್ಸು ಮತ್ತು ಸದಾಚಾರಗಳನ್ನು ನಾವು

ಯುಧಿಷ್ಠಿರನಲ್ಲಿ ಮಾತ್ರವೇ ಕಾಣಬಹುದಾಗಿದೆ. ಧನಂಜಯ, ಬಲಿಷ್ಠನಾದ ಭೀಮಸೇನ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರೇ ಇವನ ಅನುಜರಾಗಿದ್ದಾರೆ. ವೃಷ್ಣಿಕುಲಸಂಭೂತನಾದ ವಾಸುದೇವನೇ ಇವನ ನಾಥನಾಗಿದ್ದಾನೆ. (ಇವನ ಹಿತರಕ್ಷಕನಾಗಿದ್ದಾನೆ.) ಇಂತಹವನ ತಪಸ್ಸಿನಿಂದಲೇ ದಗ್ಧವಾಗಿಹೋಗಿರುವ ಶರೀರವುಳ್ಳ ದುರ್ಮತಿಯಾದ ದುರ್ಯೋಧನನ ಸೇನೆಯನ್ನು ಯುಧಿಷ್ಠಿರನ ಕೋಪದಿಂದ ಹುಟ್ಟಿದ ಕೋಪಾಗ್ನಿಯು ಸುಟ್ಟುಹಾಕುತ್ತದೆ. ವಾಸುದೇವನನ್ನೇ ಸಂಪೂರ್ಣವಾಗಿ ಆಶ್ರಯಿಸಿರತಕ್ಕ ಈ ಪಾರ್ಥನು (ಅರ್ಜುನನು) ಕೌರವರ ಸರ್ವಸೈನ್ಯಗಳನ್ನೂ ಎಲ್ಲ ಕಡೆಗಳಿಂದಲೂ ಸೀಳಿಕೊಂಡು ಬರುತ್ತಿರುವುದು ಈಗಾಗಲೇ ಕಾಣುತ್ತಿದೆ.

ದೊಡ್ಡದಾದ ತಿಮಿಯು (ಜಲಚರಪ್ರಾಣಿ) ಯಾವ ರೀತಿಯಲ್ಲಿ ದೊಡ್ಡ-ದೊಡ್ಡ ಅಲೆಗಳಿಂದ ಕೂಡಿರುವ ಸಮುದ್ರವನ್ನೂ ಸಹ ಅಲ್ಲೋಲ-ಕಲ್ಲೋಲಮಾಡಿಬಿಡುತ್ತದೆಯೋ–ಅದೇ ರೀತಿಯಲ್ಲಿ ಕೌರವನ ಅಪಾರವಾದ ಸೇನಾಸಮುದ್ರವನ್ನು ಕಿರೀಟಿಯು ಕ್ಷುಬ್ಧಗೊಳಿಸುತ್ತಿರುವುದು ಸ್ಪಷ್ಟವಾಗಿ ಕಾಣುತ್ತಿದೆ. ನಮ್ಮ ಸೇನೆಯ ಮುಖ್ಯ-ಮುಖ್ಯವಿಭಾಗಗಳಲ್ಲಿ ಹಾಹಾಕಾರ ಶಬ್ದಗಳೂ ಸಹ ಕೇಳಿಬರುತ್ತಿವೆ. ಅಶ್ವತ್ಥಾಮನೇ! ನೀನೀಗಲೇ ಪಾಂಚಾಲನ ಮಗನಾದ ಧೃಷ್ಟದ್ಯುಮ್ನನೊಡನೆ ಯುದ್ಧಮಾಡಲು ಹೋಗು. ನಾನು ಯುಧಿಷ್ಠಿರನೊಡನೆ ಯುದ್ಧಮಾಡುತ್ತೇನೆ. ಅಮಿತತೇಜಸ್ವಿಯಾದ ಯುಧಿಷ್ಠಿರನ ವ್ಯೂಹದ ಒಳಭಾಗವು ಸಮುದ್ರದ ಮಧ್ಯದಂತೆ ಪ್ರವೇಶಕ್ಕೆ ದುರ್ಗಮವೇ ಆಗಿದೆ. ಸಾತ್ಯಕಿ, ಅಭಿಮನ್ಯು, ಧೃಷ್ಟದ್ಯುಮ್ನ, ವೃಕೋದರ, ನಕುಲ-ಸಹದೇವರು–ಇವರೆಲ್ಲರೂ ಮನುಜೇಶ್ವರನಾದ ರಾಜನನ್ನು ರಕ್ಷಣೆಮಾಡುತ್ತಿದ್ದಾರೆ. ಇಲ್ಲಿ ನೋಡು, ಮಗು! ವಿಷ್ಣುವಿನಂತೆ ಶ್ಯಾಮಲ ವರ್ಣದವನಾಗಿಯೂ ಮಹಾಶಾಲವೃಕ್ಷದಂತೆ ಉನ್ನತನಾಗಿಯೂ ಇರುವ, ಎರಡನೆಯ ಅರ್ಜುನನಂತೆಯೇ ಇರುವ ಅಭಿಮನ್ಯುವು ಸೇನೆಯ ಅಗ್ರಭಾಗದಲ್ಲಿ ಹೋಗುತ್ತಿದ್ದಾನೆ. ಇನ್ನು ತಡಮಾಡಬೇಡ. ಉತ್ತಮವಾದ ಅಸ್ತ್ರಗಳನ್ನೂ, ದೊಡ್ಡದಾದ ಧನುಸ್ಸನ್ನೂ ತೆಗೆದುಕೊಂಡು ಧೃಷ್ಟದ್ಯುಮನೊಡನೆಯೂ, ವೃಕೋದರನೊಡನೆಯೂ ಯುದ್ಧಮಾಡು. ತನ್ನ ಪ್ರಿಯಪುತ್ರನು ದೀರ್ಘಾಯುಷ್ಮಂತನಾಗಿರಬೇಕೆಂದು ಪ್ರಪಂಚದಲ್ಲಿ ಯಾವನು ತಾನೇ

ಅಪೇಕ್ಷಿಸುವುದಿಲ್ಲ? ಆದರೆ ನಾವೀಗ ಕ್ಷತ್ರಧರ್ಮವನ್ನು ಅನುಸರಿಸುತ್ತಿದ್ದೇವೆ. ಕ್ಷತ್ರಧರ್ಮಾನುಸಾರವಾಗಿ ನಾನು ನಿನ್ನನ್ನು ಪ್ರಾಣಘಾತಕವಾದ ಯುದ್ಧಕ್ಕೆ ನಿಯೋಜಿಸುತ್ತಿದ್ದೇನೆ. ಭೀಷ್ಮನೂ ಸಹ ಯುದ್ಧದಲ್ಲಿ ಅಪಾರಸೈನ್ಯವನ್ನು ದಹಿಸಿಬಿಡುತ್ತಾನೆ. ಯುದ್ಧದಲ್ಲವನು ಯಮ ಮತ್ತು ವರುಣರಿಗೆ ಸದೃಶನಾಗಿದ್ದಾನೆ."

"ಮಹಾರಾಜ! ದ್ರೋಣರು ಮಗನೊಡನೆ ಹೀಗೆಂದು ಹೇಳಿ ತಾವು ಯುಧಿಷ್ಠಿರನೊಡನೆ ಯುದ್ಧಮಾಡಲು ಹೊರಟುಹೋದರು."

೧೧೨ನೆಯ ಅಧ್ಯಾಯವು ಮುಗಿಯಿತು.

೧೧೩ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಏಕಾಕಿಯಾದ ಭೀಮಸೇನನು ಹತ್ತುಮಂದಿ ಕೌರವಯೋಧರೊಡನೆ ಯುದ್ಧಮಾಡಿದುದು

ಸಂಜಯನು ಭೀಮಸೇನನ ಪರಾಕ್ರಮವನ್ನು ವರ್ಣಿಸುತ್ತಾನೆ :

"ಮಹಾರಾಜ! ನಿನ್ನ ಕಡೆಯ ಮಹಾರಥರಾದ ಭಗದತ್ತ, ಕೃಪರು, ಶಲ್ಯ, ಕೃತವರ್ಮಾ, ಅವಂತಿಯ ರಾಜಕುಮಾರರಾದ ವಿಂದಾನುವಿಂದರು, ಸಿಂಧುದೇಶದ ರಾಜನಾದ ಜಯದ್ರಥ, ಚಿತ್ರಸೇನ, ವಿಕರ್ಣ, ದುರ್ಮರ್ಷಣ–ಈ ಹತ್ತು ಯೋಧರು ಭೀಮಸೇನನನ್ನು ಆಕ್ರಮಿಸಿದರು. ನಾನಾದೇಶಗಳಿಂದ ಬಂದಿದ್ದ–ದೊಡ್ಡ ದೊಡ್ಡ ಸೈನ್ಯಗಳೊಡನೆ ಆ ಮಹಾರಥರೆಲ್ಲರೂ ಭೀಷ್ಮನಿಗೆ ಸಮರದಲ್ಲಿ ಹೆಚ್ಚಾದ ಯಶಸ್ಸನ್ನು ಬಯಸುತ್ತಾ ಭೀಮನನ್ನು ಆಕ್ರಮಿಸಿದರು. ಶಲ್ಯನು ಒಂಬತ್ತು ಬಾಣಗಳಿಂದ ಭೀಮಸೇನನನ್ನು ಪ್ರಹರಿಸಿದನು. ಕೃತವರ್ಮನು ಮೂರು ಬಾಣಗಳಿಂದಲೂ, ಕೃಪರು ಒಂಬತ್ತು ಬಾಣಗಳಿಂದಲೂ ಪ್ರಹರಿಸಿದರು. ಚಿತ್ರಸೇನ-ವಿಕರ್ಣ-ಭಗದತ್ತರೂ ಸಹ ಭೀಮಸೇನನನ್ನು ಹತ್ತು-ಹತ್ತು ಬಾಣಗಳಿಂದ ಪ್ರಹರಿಸಿದರು. ಜಯದ್ರಥನು ಮೂರು ಬಾಣಗಳಿಂದಲೂ, ಅವಂತೀದೇಶದ ವಿಂದಾನುವಿಂದರು ಐದೈದು ಬಾಣಗಳಿಂದಲೂ, ದುರ್ಮರ್ಷಣನು ಇಪ್ಪತ್ತು ಬಾಣಗಳಿಂದಲೂ ಭೀಮಸೇನನನ್ನು ಪ್ರಹರಿಸಿದರು. ಮಹಾರಾಜ! ಸರ್ವಲೋಕಗಳಲ್ಲಿಯೂ ಪ್ರವೀರ

ರೆಂದು ವಿಶ್ರುತರಾಗಿ (ಪ್ರಸಿದ್ಧರಾಗಿ) ವಿರಾಜಮಾನರಾಗಿದ್ದ ದುರ್ಯೋಧನನ ಕಡೆಯ ಮಹಾರಥರನ್ನು ಶತ್ರುವೀರಸಂಹಾರಕನಾದ ಪಾಂಡವನು ಪ್ರತ್ಯೇಕ-ಪ್ರತ್ಯೇಕವಾಗಿ ಬಾಣಗಳಿಂದ ಪ್ರಹರಿಸಿ ಗಾಯಗೊಳಿಸಿದನು. ಏಳು ಬಾಣ ಗಳಿಂದ ಶಲ್ಯನನ್ನೂ, ಎಂಟು ಬಾಣಗಳಿಂದ ಕೃತವರ್ಮನನ್ನೂ ಪ್ರಹರಿಸಿ, ಕೃಪರ ಬಾಣಸಹಿತವಾದ ಧನುಸ್ಸನ್ನು ಮಧ್ಯಕ್ಕೆ ಸರಿಯಾಗಿ ಕತ್ತರಿಸಿಬಿಟ್ಟನು. ಧನುಸ್ಸಿನಿಂದ ವಿಹೀನರಾಗಿದ್ದ ಕೃಪರನ್ನು ಪುನಃ ಏಳು ಬಾಣಗಳಿಂದ ಪ್ರಹರಿಸಿ, ವಿಂದಾನುವಿಂದರನ್ನು ಮೂರು-ಮೂರು ಬಾಣಗಳಿಂದ ಪ್ರಹರಿಸಿದನು. ದುರ್ಮರ್ಷಣನನ್ನು–ಇಪ್ಪತ್ತು ಬಾಣಗಳಿಂದಲೂ, ಚಿತ್ರಸೇನನನ್ನು ಐದು ಬಾಣಗಳಿಂದಲೂ, ವಿಕರ್ಣನನ್ನು ಹತ್ತು ಬಾಣಗಳಿಂದಲೂ, ಜಯದ್ರಥ ನನ್ನು ಐದು ಬಾಣಗಳಿಂದಲೂ ಪ್ರಹರಿಸಿ, ಹೃಷ್ಟನಾಗಿ ಸಿಂಹನಾದಮಾಡಿ ಪುನಃ ಸೈಂಧವನನ್ನು ಮೂರು ಬಾಣಗಳಿಂದ ಪ್ರಹರಿಸಿದನು. ರಥಿಗಳಲ್ಲಿ ಶ್ರೇಷ್ಠರಾದ ಕೃಪರು ಪುನಃ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಕ್ರುದ್ಧ ರಾಗಿ ಭೀಮಸೇನನನ್ನು ನಿಶಿತವಾದ ಹತ್ತುಬಾಣಗಳಿಂದ ಪ್ರಹರಿಸಿದರು. ಅಂಕುಶಗಳಿಂದ ಚುಚ್ಚಲ್ಪಟ್ಟ ಆನೆಯಂತೆ–ಹತ್ತು ಬಾಣಗಳಿಂದ ಪ್ರಹೃತನಾದ ಪ್ರತಾಪವಂತನಾದ ಭೀಮಸೇನನು ಅತ್ಯಂತ ರೋಷಸಮಾವಿಷ್ಟನಾಗಿ ಅನೇಕ ಬಾಣಗಳಿಂದ ಕೃಪರನ್ನು ಪ್ರಹರಿಸಿದನು. ಅನಂತರ ಪ್ರಳಯಕಾಲದ ಯಮಧರ್ಮನಿಗೆ ಸಮಾನವಾದ ಉಗ್ರಕಾಂತಿಯಿಂದ ಕೂಡಿದ್ದ ಭೀಮಸೇನನು ಮೂರು ಬಾಣಗಳಿಂದ ಜಯದ್ರಥನ ಕುದುರೆಗಳನ್ನೂ, ಸಾರಥಿಯನ್ನೂ ಪ್ರಹರಿಸಿ ಯಮಲೋಕಕ್ಕೆ ಕಳುಹಿಸಿಕೊಟ್ಟನು. ಮಹಾರಥನಾದ ಜಯದ್ರಥನು ಒಡನೆಯೇ ಅಶ್ವ-ಸಾರಥಿಗಳಿಂದ ವಿಹೀನವಾಗಿದ್ದ ರಥದಿಂದ ಧುಮುಕಿ ಭೀಮಸೇನನ ಮೇಲೆ ನಿಶಿತವಾದ ಬಾಣಗಳನ್ನು ಪ್ರಯೋಗಿಸಿದನು. ಮಹಾತ್ಮನಾದ ಸೈಂಧವನ ಧನುಸ್ಸನ್ನು ಭೀಮಸೇನನು ಅದರ ಮಧ್ಯಕ್ಕೆ ಸರಿಯಾಗಿ ಕತ್ತರಿಸಿ ಎರಡು ಭಾಗಗಳನ್ನಾಗಿ ಮಾಡಿಬಿಟ್ಟನು. ಅನಂತರ ರಥಾಶ್ವ-ಸಾರಥಿ-ಧನುಸ್ಸುಗಳಿಂದ ವಿಹೀನನಾದ ಜಯದ್ರಥನು ಬಹಳ ಅವಸರದಿಂದ ಚಿತ್ರಸೇನನ ರಥಕ್ಕೆ ಹತ್ತಿಕುಳಿತನು. ಆ ಸಮಯದಲ್ಲಿ ಪಾಂಡವನು ನಿಶ್ಚಯವಾಗಿಯೂ ಅತ್ಯದ್ಭುತವಾದ ಕರ್ಮವನ್ನು ಮಾಡಿ ತೋರಿಸಿದನು. ಆರ್ಯನೇ! ತನ್ನನ್ನು ಆಕ್ರಮಿಸಿದ ಮಹಾರಥರೆಲ್ಲರನ್ನೂ ಬಾಣಗಳಿಂದ ಪ್ರಹರಿಸಿ ಹಿಮ್ಮೆಟ್ಟಿಸಿ, ಎಲ್ಲರೂ ನೋಡುತ್ತಿರುವಾಗಲೇ ಸಿಂಧುರಾಜನನ್ನು ರಥಹೀನನನ್ನಾಗಿ ಮಾಡಿದನು.

ಭೀಮಸೇನನ ಆ ಅದ್ಭುತಪರಾಕ್ರಮವನ್ನು ಶಲ್ಯನು ಸಹಿಸಿಕೊಳ್ಳಲಿಲ್ಲ. ಕಮ್ಮಾರರಿಂದ ಹದಗೊಳಿಸಲ್ಪಟ್ಟ ತೀಕ್ಷ್ಣವಾದ ಬಾಣಗಳನ್ನು ಧನುಸ್ಸಿಗೆ ಅನುಸಂಧಾನಮಾಡಿ 'ನಿಲ್ಲು ಭೀಮ! ನಿಲ್ಲು'–ಎಂದು ಹೇಳುತ್ತಾ, ಪ್ರಯೋಗಿಸಿದನು. ಶಲ್ಯನನ್ನು ರಕ್ಷಿಸುವ ಕಾರಣದಿಂದ ಕೃಪರು, ಕೃತವರ್ಮಾ, ವೀರ್ಯವಂತನಾದ ಭಗದತ್ತ, ಅವಂತೀದೇಶದ ವಿಂದಾನುವಿಂದರು, ಚಿತ್ರಸೇನ, ದುರ್ಮರ್ಷಣ, ವಿಕರ್ಣ, ವೀರ್ಯವಂತನಾದ ಜಯದ್ರಥ–ಇವರೆಲ್ಲರೂ ಒಟ್ಟಾಗಿ ಸೇರಿಕೊಂಡು ಭೀಮಸೇನನನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿದರು. ಭೀಮಸೇನನು ಕೃಪರೇ ಮೊದಲಾದ ಒಂಬತ್ತು ಯೋಧರನ್ನೂ ಐದೈದು ಬಾಣಗಳಿಂದ ಪ್ರಹರಿಸಿ, ಶಲ್ಯನನ್ನು ಎಪ್ಪತ್ತು ಬಾಣಗಳಿಂದಲೂ ಪುನಃ ಹತ್ತು ಬಾಣಗಳಿಂದಲೂ ಪ್ರಹರಿಸಿದನು. ಶಲ್ಯನು ಭೀಮಸೇನನನ್ನು ಒಟ್ಟು ಹದಿನಾಲ್ಕು ಬಾಣಗಳಿಂದ ಪ್ರಹರಿಸಿ ಭೀಮಸೇನನ ಸಾರಥಿಯನ್ನು ಭಲ್ಲವೆಂಬ ಬಾಣದಿಂದ ಗಾಢವಾಗಿ ಪ್ರಹರಿಸಿದನು.

ಸಾರಥಿಯಾದ ವಿಶೋಕನು ಭಲ್ಲದಿಂದ ಕ್ಷತನಾದುದನ್ನು ಕಂಡು, ಪ್ರತಾಪವಂತನಾದ ಭೀಮಸೇನನು ಮದ್ರರಾಜನನ್ನು ಮೂರು ಬಾಣಗಳಿಂದ ತೋಳುಗಳಲ್ಲಿಯೂ ಮತ್ತು ವಕ್ಷಃಸ್ಥಳದಲ್ಲಿಯೂ ಪ್ರಹರಿಸಿದನು. ಪುನಃ ಭೀಮಸೇನನು ಉಳಿದ ಮಹಾಧನುರ್ಧರರನ್ನೂ ನೇರವಾಗಿ ಹೋಗುವ ಮೂರು-ಮೂರು ಬಾಣಗಳಿಂದ ಪ್ರಹರಿಸಿ ಸಿಂಹದಂತೆ ಗರ್ಜನೆಮಾಡಿದನು. ಪ್ರಯತ್ನಶೀಲರಾದ ಆ ಮಹಾಧನುಷ್ಮಂತರೂ ಬಗ್ಗಿರದೇ ಇರುವ ಅಗ್ರಭಾಗಗಳುಳ್ಳ ಮೂರು-ಮೂರು ಬಾಣಗಳಿಂದ ಯುದ್ಧಕೋವಿದನಾದ ಭೀಮಸೇನನನ್ನು ಮರ್ಮಸ್ಥಳಗಳಲ್ಲಿ ಪ್ರಹರಿಸಿದರು. ಹತ್ತು ಮಂದಿ ಮಹಾರಥರಿಂದ ಶರೀರದೊಳಕ್ಕೆ ನಾಟುವಂತೆ ಬಾಣಗಳಿಂದ ಪ್ರಹೃತನಾದರೂ ಮಹಾಧನುಷ್ಮಂತನಾದ ಭೀಮಸೇನನು–ಮೋಡಗಳಿಂದ ಸುರಿಸಲ್ಪಡುವ ಜಲಧಾರೆಗಳಿಂದ ಪರ್ವತವು ವಿಚಲಿತವಾಗದಂತೆ–ಸ್ವಲ್ಪವಾದರೂ ವ್ಯಥೆಪಡದೇ ವಿಚಲಿತನಾಗದೇ ಇದ್ದನು. ಕ್ರುದ್ಧನಾದ ಪಾಂಡವರ ಮಹಾರಥನಾದ, ಮಹಾಯಶನಾದ ಭೀಮಸೇನನು ಮದ್ರೇಶ್ವರನಾದ ಶಲ್ಯನನ್ನು ಮೂರು ಬಾಣಗಳಿಂದಲೂ, ಕೃಪರನ್ನು ಒಂಬತ್ತು ಬಾಣಗಳಿಂದಲೂ, ಭಗದತ್ತನನ್ನು ನೂರು ಬಾಣಗಳಿಂದಲೂ ಪ್ರಹರಿಸಿದನು. ಅನಂತರ ಬಾಣಪ್ರಯೋಗದಲ್ಲಿ ಸಿದ್ಧಹಸ್ತನಾಗಿರುವನೋ ಎಂಬಂತೆ

ಭೀಮಸೇನನು ಮಹಾತ್ಮನಾದ ಕೃತವರ್ಮನ ಶರಸಹಿತವಾದ ಧನುಸ್ಸನ್ನು ಸುತೀಕ್ಷ್ಣವಾದ ಕ್ಷುರಪ್ರವೆಂಬ ಬಾಣದಿಂದ ಕತ್ತರಿಸಿದನು. ನಿಮೇಷಮಾತ್ರ ಸಮಯದಲ್ಲಿ ಕೃತವರ್ಮನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ನಾರಾಚದಿಂದ ವೃಕೋದರನನ್ನು ನಡುಹುಬ್ಬಿನಲ್ಲಿ ಪ್ರಹರಿಸಿದನು. ಪುನಃ ಭೀಮನು ಶಲ್ಯನನ್ನು ಒಂಬತ್ತು ಬಾಣಗಳಿಂದಲೂ, ಭಗದತ್ತನನ್ನು ಮೂರು ಬಾಣಗಳಿಂದಲೂ, ಕೃತವರ್ಮನನ್ನು ಎಂಟು ಬಾಣಗಳಿಂದಲೂ ಗೌತಮರೇ ಮೊದಲಾದ ಉಳಿದ ಮಹಾರಥರನ್ನು ಎರಡೆರಡು ಬಾಣಗಳಿಂದಲೂ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಶಲ್ಯಪ್ರಮುಖರಾದ ಮಹಾರಥರೂ ಸಹ ಭೀಮನನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿದರು. ದುರ್ಯೋಧನನ ಕಡೆಯ ಮಹಾರಥರಿಂದ ಎಲ್ಲ ಬಗೆಯ ಅಸ್ತ್ರ-ಶಸ್ತ್ರಗಳಿಂದಲೂ ಭೀಮನು ಪೀಡಿಸಲ್ಪಟ್ಟರೂ ಅವನು ಅವರನ್ನು ಹುಲ್ಲಿಗೆ ಸಮಾನರನ್ನಾಗಿ ಕಾಣುತ್ತಾ ಸ್ವಲ್ಪವಾದರೂ ವ್ಯಥೆಯೇ ಇಲ್ಲದೇ ರಣಾಂಗಣದ ಸುತ್ತಲೂ ಸಂಚರಿಸುತ್ತಿದ್ದನು. ರಥಿಗಳಲ್ಲಿ ಶ್ರೇಷ್ಠರಾದ ಅವರೂ ಸಹ ಸ್ಥಿರಚಿತ್ತರಾಗಿದ್ದುಕೊಂಡು ನೂರಾರು ಸಾವಿರಾರು ಸಂಖ್ಯೆಯಲ್ಲಿ ಭೀಮನ ಮೇಲೆ ಬಾಣಗಳನ್ನು ಬಿಟ್ಟರು. ಅನಂತರ ಮಹಾರಥನಾದ ಭಗದತ್ತನು ಸ್ವರ್ಣದಂಡದಿಂದ ಕೂಡಿದ್ದ ಮಹಾ ವೇಗಯುಕ್ತವಾಗಿದ್ದ ಶಕ್ತ್ಯಾಯುಧವನ್ನು ಭೀಮನ ಮೇಲೆ ರಭಸದಿಂದ ಎಸೆದನು. ಮಹಾಭುಜನಾದ ಸೈಂಧವನು ತೋಮರ-ಪಟ್ಟಿಶಗಳಿಂದಲೂ, ಕೃಪರು ಶತಘ್ನಿಯಿಂದಲೂ, ಶಲ್ಯನು ಬಾಣದಿಂದಲೂ ಭೀಮಸೇನನನ್ನು ಏಕಕಾಲದಲ್ಲಿ ಪ್ರಹರಿಸಿದರು. ಇತರ ಮಹಾಧನುಷ್ಮಂತರೂ ಐದೈದು ಬಾಣಗಳಿಂದ ಭೀಮಸೇನನನ್ನು ಅನುಲಕ್ಷಿಸಿ ಬಲಪೂರ್ವಕವಾಗಿ ಪ್ರಯೋಗಿಸಿದರು. ವಾಯುಪುತ್ರನಾದ ಭೀಮನು ಸೈಂಧವನು ಪ್ರಯೋಗಿಸಿದ ತೋಮರವನ್ನು ಕ್ಷುರಪ್ರದಿಂದ ಎರಡಾಗಿ ಕತ್ತರಿಸಿದನು. ಪಟ್ಟಿಶವನ್ನು ಮೂರು ಬಾಣಗಳಿಂದ ಪ್ರಹರಿಸಿ ಎಳ್ಳಿನ ಗಿಡದ ಕಾಂಡದಂತೆ ಚೂರುಚೂರು ಮಾಡಿಬಿಟ್ಟನು. ಕೃಪರು ಪ್ರಯೋಗಿಸಿದ್ದ ಶತಘ್ನಿಯನ್ನು ಗೃಧ್ರದ ರೆಕ್ಕೆಗಳಿದ್ದ ಒಂಬತ್ತು ಬಾಣಗಳಿಂದ ಭೇದಿಸಿಬಿಟ್ಟನು. ಶಲ್ಯನು ಬಿಟ್ಟ ಬಾಣವನ್ನು ಕತ್ತರಿಸಿ ಮಹಾರಥನಾದ ಭಗದತ್ತನು ಬಿಟ್ಟ ಶಕ್ತ್ಯಾಯುಧವನ್ನೂ ಭೀಮಸೇನನು ಕತ್ತರಿಸಿದನು. ಅದೇ ರೀತಿಯಲ್ಲಿ ಇತರ ಮಹಾರಥರು ಬಿಟ್ಟ ಘೋರವಾದ ಪ್ರತಿಯೊಂದು ಬಾಣವನ್ನೂ ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ

ರಣಶ್ಲಾಘಿಯಾದ ಭೀಮಸೇನನು ಮೂರು-ಮೂರು ತುಂಡುಗಳಾಗಿ ಕತ್ತರಿಸಿದನು. ಅವರು ಬಿಟ್ಟ ಎಲ್ಲ ಬಾಣಗಳನ್ನೂ ಕತ್ತರಿಸಿದನಂತರ ಆ ಎಲ್ಲ ಧನುಷ್ಮಂತರನ್ನೂ ಮೂರು-ಮೂರು ಬಾಣಗಳಿಂದ ಪ್ರಹರಿಸಿದನು.

ಧನುರ್ಬಾಣಗಳಿಂದ ಯುದ್ಧಮಾಡುತ್ತಾ ಯುದ್ಧದಲ್ಲಿ ಶತ್ರುಯೋಧರನ್ನು ಧ್ವಂಸಮಾಡುತ್ತಿದ್ದ ಮಹಾರಥನಾದ ಭೀಮಸೇನನನ್ನು ನೋಡಿ ಧನಂಜಯನೂ ಅಲ್ಲಿಗೆ ಆಗಮಿಸಿದನು. ಮಹಾತ್ಮರಾದ ಆ ಇಬ್ಬರು ಪಾಂಡವರೂ ಒಟ್ಟಾಗಿ ಯುದ್ಧಕ್ಕೆ ನಿಂತುದನ್ನು ನೋಡಿ ಪುರುಷರ್ಷಭರಾದ ನಿನ್ನ ಕಡೆಯ ಯೋಧರು ವಿಜಯದ ಆಸೆಯನ್ನೇ ತ್ಯಜಿಸಿದರು. ಭೀಷ್ಮನ ನಿಧನಾಕಾಂಕ್ಷಿಯಾಗಿದ್ದ ಅರ್ಜುನನು ಶಿಖಂಡಿಯನ್ನು ಮುಂದೆಮಾಡಿಕೊಂಡು ನಿನ್ನ ಕಡೆಯ ಹತ್ತುಮಂದಿ ಮಹಾರಥರೊಡನೆ ಯುದ್ಧಮಾಡುತ್ತಿದ್ದ ಭೀಮಸೇನನೊಡನೆ ತಾನೂ ಸೇರಿ ಆ ಹತ್ತು ಮಂದಿ ಮಹಾರಥರನ್ನೂ ಎದುರಿಸಿದನು. ಭೀಮನೊಡನೆ ಯಾವ ಹತ್ತು ಮಂದಿ ಮಹಾರಥರು ಯುದ್ಧಮಾಡುತ್ತಿದ್ದರೋ ಆ ಹತ್ತು ಮಂದಿ ಮಹಾರಥರನ್ನೂ ಸಹ ಭೀಮಸೇನನಿಗೆ ಪ್ರಿಯವನ್ನುಂಟುಮಾಡುವ ಅಭಿಲಾಷೆಯಿಂದ ಅರ್ಜುನನು ಬಾಣಗಳಿಂದ ಪ್ರಹರಿಸಿದನು. ಅದನ್ನು ನೋಡಿದ ದುರ್ಯೋಧನನು ಭೀಮಾರ್ಜುನರಿಬ್ಬರ ವಧೆಯನ್ನು ಉದ್ದೇಶಿಸಿ ಸುಶರ್ಮನೊಡನೆ ಹೇಳಿದನು. "ಸುಶರ್ಮನ್! ನೀನೀಗಲೇ ವಿಶಾಲಸೇನೆಯೊಡನೆ ಸಮಾವೃತನಾಗಿ ನಮ್ಮ ಹತ್ತು ಮಂದಿ ಮಹಾರಥರೊಡನೆ ಭೀಮಾರ್ಜುನರು ಯುದ್ಧಮಾಡುತ್ತಿರುವ ಸ್ಥಳಕ್ಕೆ ಹೋಗು. ಪಾಂಡುವಿನ ಮಕ್ಕಳಾದ ಧನಂಜಯ-ವೃಕೋದರರರನ್ನು ಈಗಲೇ ಸಂಹರಿಸು."

ಮಹಾರಾಜ! ದುರ್ಯೋಧನನು ಹೇಳಿದ ಮಾತನ್ನು ಕೇಳಿ ಪ್ರಸ್ಥಲಾಧಿಪತಿಯಾದ ತ್ರಿಗರ್ತರಾಜನು ಅನೇಕಸಾವಿರ ರಥಸೈನ್ಯದಿಂದ ಪರಿವೃತನಾಗಿ ಮಹಾಧನುಷ್ಮಂತರಾದ ಭೀಮಾರ್ಜುನರನ್ನು ನಾಲ್ಕು ದಿಕ್ಕುಗಳಿಂದಲೂ ಮುತ್ತಿಗೆ ಹಾಕಿದನು. ಅನಂತರ ಶತ್ರುಸೈನ್ಯದೊಡನೆ ಅರ್ಜುನನ ಘೋರ ಯುದ್ಧವು ಪ್ರಾರಂಭವಾಯಿತು."

೧೧೩ನೆಯ ಅಧ್ಯಾಯವು ಮುಗಿಯಿತು.

೧೧೪ನೆ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಕೌರವಮಹಾರಥರೊಡನೆ ಭೀಮಾರ್ಜುನರ ಮಹಾಯುದ್ಧ

ಸಂಜಯನು ಅರ್ಜುನನ ಯುದ್ಧವನ್ನು ವರ್ಣಿಸುತ್ತಾನೆ :

“ಮಹಾರಾಜ! ವಿಜಯಕ್ಕಾಗಿ ಪ್ರಯತ್ನಿಸುತ್ತಿದ್ದ ಮಹಾರಥನಾದ ಶಲ್ಯನನ್ನು ಅರ್ಜುನನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಮುಚ್ಚಿಬಿಟ್ಟನು. ಸುಶರ್ಮನನ್ನೂ, ಕೃಪರನ್ನೂ, ಭಗದತ್ತನನ್ನೂ, ಸಿಂಧುರಾಜನಾದ ಜಯ ದ್ರಥನನ್ನೂ, ಚಿತ್ರಸೇನನನ್ನೂ, ವಿಕರ್ಣನನ್ನೂ, ಕೃತವರ್ಮನನ್ನೂ, ದುರ್ಮರ್ಷಣನನ್ನೂ, ಅವಂತಿಯ ರಾಜಕುಮಾರರಾದ ವಿಂದಾನುವಿಂದ ರನ್ನೂ ಗೃಧ್ರದ ರೆಕ್ಕೆಗಳಿದ್ದ ಮೂರು-ಮೂರು ಬಾಣಗಳಿಂದ ಪ್ರತ್ಯೇಕವಾಗಿ ಪ್ರಹರಿಸಿದನು. ಅನಂತರ ಅತಿರಥನಾದ ಅರ್ಜುನನು ಬಾಣಗಳಿಂದ ನಿನ್ನ ಸೈನ್ಯವನ್ನೂ ಪೀಡಿಸಿದನು. ಚಿತ್ರಸೇನನ ರಥದಲ್ಲಿದ್ದ ಜಯದ್ರಥನು ಪಾರ್ಥನನ್ನು ಬಾಣಗಳಿಂದ ಪ್ರಹರಿಸಿ, ಭೀಮನನ್ನೂ ಅನೇಕ ಬಾಣಗಳಿಂದ ಗಾಯಗೊಳಿಸಿದನು. ಶಲ್ಯನೂ ಮತ್ತು ರಥಿಗಳಲ್ಲಿ ಶ್ರೇಷ್ಠರಾದ ಕೃಪರೂ ಮರ್ಮಭೇದಿಗಳಾದ ಅನೇಕಬಾಣಗಳಿಂದ ಅರ್ಜುನನನ್ನು ಪ್ರಹರಿಸಿದರು. ಚಿತ್ರಸೇನನೇ ಮೊದಲಾದ ನಿನ್ನ ಮಕ್ಕಳೂ ಸಹ ನಿಶಿತವಾದ ಐದೈದು ಬಾಣಗಳಿಂದ ಅರ್ಜುನನನ್ನೂ ಮತ್ತು ಭೀಮಸೇನನನ್ನೂ ಪ್ರಹರಿಸಿದರು. ಭರತರ್ಷಭರಾದ, ರಥಿಗಳಲ್ಲಿ ಶ್ರೇಷ್ಠರಾದ, ಕುಂತಿಯ ಮಕ್ಕಳಾದ ಭೀಮಾರ್ಜುನರು ತ್ರಿಗರ್ತರ ಮಹಾಸೇನೆಯನ್ನು ಬಹುವಾಗಿ ಪೀಡಿಸಿದರು. ಸುಶರ್ಮನೂ ಸಹ ವೇಗವಾಗಿ ಹೋಗುವ ಒಂಬತ್ತು ಬಾಣಗಳಿಂದ ಪಾರ್ಥನನ್ನು ಪ್ರಹರಿಸಿ ಪಾಂಡವರ ಸೈನ್ಯವನ್ನು ಭಯಗೊಳಿಸುತ್ತಾ ಗಟ್ಟಿಯಾಗಿ ಗರ್ಜಿಸಿದನು. ಹಾಗೆಯೇ ಇತರ ಮಹಾರಥರೂ ಸಹ ಭೀಮಸೇನ-ಧನಂಜಯರನ್ನು ಚಿನ್ನದ ರೆಕ್ಕೆಗಳನ್ನು ಹೊಂದಿದ್ದ ನೇರವಾಗಿ ಹೋಗುವ ನಿಶಿತವಾದ ಬಾಣಗಳಿಂದ ಪ್ರಹರಿಸಿದರು. ಆ ರಥಿಗಳ ಮಧ್ಯದಲ್ಲಿ ಭರತರ್ಷಭರಾದ, ಬಾಣಗಳಿಂದ ಆಟವಾಡುತ್ತಿರುವಂತೆ ಕಾಣುತ್ತಿದ್ದ, ಉದಾರರಾದ, ಮಹಾರಥರಾದ ಕೌಂತೇಯರು ವಿಚಿತ್ರರೂಪವನ್ನು ಧರಿಸಿದವರಂತೆ ಕಾಣುತ್ತಿದ್ದರು. ಗೋವುಗಳ ಮಧ್ಯ ದಲ್ಲಿ ಮಾಂಸಾಪೇಕ್ಷಿಯಾಗಿ ನಿಂತಿರುವ, ಮದೋನ್ಮತ್ತವಾದ ಎರಡು

ಸಿಂಹಗಳಂತೆಯೇ ಭೀಮಾರ್ಜುನರು ಕಾಣುತ್ತಿದ್ದರು. ಶೂರರ ಧನುಸ್ಸುಗಳನ್ನು ಕತ್ತರಿಸುತ್ತಾ ತಮ್ಮೆದುರಾಗಿ ಬರುತ್ತಿದ್ದ ಬಾಣಗಳನ್ನು ಛಿದ್ರ- ವಿಚ್ಛಿದ್ರಮಾಡುತ್ತಾ ಭೀಮಾರ್ಜುನರು ಶತ್ರುಪಕ್ಷದ ರಾಜರ ನೂರಾರು ತಲೆಗಳನ್ನು ಕೆಳಕ್ಕೆ ಕೆಡವಿದರು. ಅನೇಕ ಸಹಸ್ರ ರಥಗಳು ಭಗ್ನವಾಗಿಹೋದುವು. ನೂರಾರು ಕುದುರೆಗಳು ಸತ್ತುಹೋದುವು. ಗಜಾರೋಹಿಗಳನ್ನೊಳಗೊಂಡ ಆನೆಗಳೂ ನೂರಾರು ಸಂಖ್ಯೆಯಲ್ಲಿ ಹತವಾಗಿ ಭೂಮಿಯ ಮೇಲೆ ಬಿದ್ದುವು. ಅನೇಕ ರಥಿಗಳೂ ಮತ್ತು ಕುದುರೆಸವಾರರೂ ರಣಾಂಗಣದ ಸುತ್ತಲೂ ಸತ್ತುಬಿದ್ದುದು ಕಂಡುಬರುತ್ತಿದ್ದಿತು. ಅನೇಕ ಸೈನಿಕರು ರಣರಂಗದಲ್ಲಿ ಭಯದಿಂದ ನಡುಗುತ್ತಾ ಓಡಿಹೋಗುತ್ತಿದ್ದರು. ಸತ್ತುಹೋಗಿದ್ದ ಆನೆ ಮತ್ತು ಕಾಲಾಳುಗಳ ಸಮೂಹಗಳಿಂದಲೂ, ಸಂಹತವಾಗಿದ್ದ ಕುದುರೆಗಳಿಂದಲೂ, ಭಗ್ನವಾಗಿ ಹೋಗಿದ್ದ ರಥಗಳಿಂದಲೂ ಭೂಮಿಯು ಆಚ್ಛಾದಿತವಾಗಿದ್ದಿತು. ಅನೇಕ ಕಡೆಗಳಲ್ಲಿ ಹರಿದು ಹೋಗಿದ್ದ ಛತ್ರಗಳಿಂದಲೂ, ಕತ್ತರಿಸಿ ಭೂಮಿಯ ಮೇಲೆ ಬೀಳಿಸಿದ್ದ ಧ್ವಜಗಳಿಂದಲೂ, ಕೆಳಗೆ ಬಿದ್ದಿದ್ದ ಅಂಕುಶಗಳಿಂದಲೂ ಮತ್ತು ಚಾವಟಿಗಳಿಂದಲೂ ರಣರಂಗವು ಆವೃತವಾಗಿದ್ದಿತು. ಕೇಯೂರಗಳಿಂದಲೂ, ಅಂಗದಗಳಿಂದಲೂ, ಹಾರಗಳಿಂದಲೂ, ರಂಕುಮೃಗಗಳ ಮೃದುವಾದ ಚರ್ಮಗಳಿಂದಲೂ, ಉಷ್ಣೀಶಗಳಿಂದಲೂ, ಋಷ್ಟಿಗಳಿಂದಲೂ, ಚಾಮರಗಳಿಂದಲೂ ಮತ್ತು ವ್ಯಜನಗಳಿಂದಲೂ ರಣರಂಗವು ಆವೃತವಾಗಿದ್ದಿತು. ಅಲ್ಲಲ್ಲಿ ರಾಶಿ-ರಾಶಿಯಾಗಿ ಬಿದ್ದಿದ್ದ ಚಂದನಚರ್ಚಿತವಾದ ರಾಜರ ಬಾಹುಗಳಿಂದಲೂ ಮತ್ತು ತೊಡೆಗಳಿಂದಲೂ ರಣಾಂಗಣವು ತುಂಬಿ ಹೋಗಿದ್ದಿತು.

ಮಹಾರಾಜ! ನಾವಂದು ಪಾರ್ಥನ ಅದ್ಭುತವಾದ ಪರಾಕ್ರಮವನ್ನು ಕಂಡೆವು. ತನ್ನನ್ನು ಎದುರಿಸುತ್ತಿದ್ದ ಹತ್ತು ಮಂದಿ ಮಹಾರಥಿಗಳೆಲ್ಲರನ್ನೂ ಬಾಣಗಳಿಂದ ತಡೆದು ಹಿಮ್ಮೆಟ್ಟಿಸುತ್ತಾ ಮಹಾಬಲನಾದ ಅರ್ಜುನನು ಅನೇಕ ಶೂರರನ್ನು ಸಂಹರಿಸುತ್ತಿದ್ದನು. ಮಹಾಬಲನಾದ ನಿನ್ನ ಮಗನು ಭೀಮಾ ರ್ಜುನರ ಆ ಅದ್ಭುತವಾದ ಪರಾಕ್ರಮವನ್ನು ಕಂಡು ಗಾಂಗೇಯನ ರಥದ ಸಮೀಪಕ್ಕೆ ಹೋದನು. ಆ ಸಮಯದಲ್ಲಿ ಕೃಪರು, ಕೃತವರ್ಮಾ, ಸಿಂಧು ರಾಜನಾದ ಜಯದ್ರಥ, ಅವಂತಿಯ ರಾಜಕುಮಾರರಾದ ವಿಂದಾನುವಿಂದರು ಮುಂತಾದವರು ಭೀಮಾರ್ಜುನರೊಡನೆ ತಮ್ಮ ಯುದ್ಧವನ್ನು ಮುಂದುವರಿ

ಸುತ್ತಲೇ ಇದ್ದರು. ಮಹಾಧನುಷ್ಮಂತನಾದ ಭೀಮನೂ, ಮಹಾರಥನಾದ ಅರ್ಜುನನೂ ಕೌರವರ ಭಯಂಕರವಾದ ಸೇನಾಸಮೂಹವನ್ನು ಸತತವಾದ ಬಾಣಗಳ ಪ್ರಯೋಗಗಳಿಂದ ಓಡಿಸಲಾರಂಭಿಸಿದರು. ಕೌರವಪಕ್ಷದ ಅನೇಕ ರಾಜರು ರೆಕ್ಕೆಗಳನ್ನೊಳಗೊಂಡ ಹತ್ತುಸಾವಿರ ದಶಕೋಟಿ ಬಾಣಗಳನ್ನು (ಅಪರಿಮಿತಬಾಣಗಳನ್ನು) ಧನಂಜಯನ ರಥದ ಮೇಲೆ ಸುರಿಸುತ್ತಿದ್ದರು. ಪಾರ್ಥನು ತನ್ನೆದುರಾಗಿ ಬಂದ ಆ ಎಲ್ಲ ಬಾಣಗಳನ್ನೂ ಕತ್ತರಿಸಿ ಅನಂತರ ಬಾಣಗಳ ಸಮೂಹದಿಂದ ಮಹಾರಥರನ್ನು ದೂರಕ್ಕೆ ಸರಿಸಿ ಅನೇಕಯೋಧರನ್ನು ಮೃತ್ಯುಲೋಕಕ್ಕೆ ಕಳುಹಿಸುತ್ತಿದ್ದನು. ಮಹಾರಥನಾದ, ಕ್ರುದ್ಧನಾದ ಶಲ್ಯನು ಧನುರ್ಬಾಣಗಳಿಂದ ಆಟವಾಡುತ್ತಿರುವನೋ ಎಂಬಂತೆ ತನ್ನ ಪ್ರಯೋಗದ ಕೌಶಲ್ಯವನ್ನು ಪ್ರದರ್ಶಿಸುತ್ತಾ ಸನ್ನತಪರ್ವಗಳಿದ್ದ ಭಲ್ಲಗಳಿಂದ ಅರ್ಜುನನನ್ನು ಅವನ ವಕ್ಷಃಸ್ಥಲದಲ್ಲಿ ಪ್ರಹರಿಸಿದನು. ಅರ್ಜುನನು ಐದು ಬಾಣಗಳಿಂದ ಶಲ್ಯನ ಧನುಸ್ಸನ್ನು ಕತ್ತರಿಸಿ ಪುನಃ ಅವನ ಕೈಚೀಲವನ್ನೂ ಕತ್ತರಿಸಿ, ಅನಂತರ ತೀಕ್ಷ್ಣವಾದ ಬಾಣಗಳಿಂದ ಶಲ್ಯನನ್ನು ಮರ್ಮಸ್ಥಾನಗಳಲ್ಲಿ ಪ್ರಹರಿಸಿದನು. ಒಡನೆಯೇ ಮದ್ರೇಶ್ವರನು ಮತ್ತೊಂದು ಭಾರಸಹವಾದ (ಭಾರವನ್ನು ಸಹಿಸಿಕೊಳ್ಳುವ) ಧನುಸ್ಸನ್ನು ತೆಗೆದುಕೊಂಡು ಬಹುಕ್ರುದ್ಧನಾಗಿ ಜಿಷ್ಣುವನ್ನು ಪ್ರಹರಿಸಿದನು. ಅರ್ಜುನನನ್ನು–ಮೂರು ಬಾಣಗಳಿಂದಲೂ, ಸಾರಥಿಯಾದ ಶ್ರೀಕೃಷ್ಣನನ್ನು–ಐದು ಬಾಣಗಳಿಂದಲೂ ಪ್ರಹರಿಸಿದನು. ಭೀಮಸೇನನನ್ನು ಒಂಬತ್ತುಬಾಣಗಳಿಂದ ಅವನ ವಕ್ಷಃಸ್ಥಲದಲ್ಲಿಯೂ ಮತ್ತು ತೋಳುಗಳಲ್ಲಿಯೂ ಪ್ರಹರಿಸಿದನು. ಆ ವೇಳೆಗೆ ದುರ್ಯೋಧನನಿಂದ ಪ್ರೇಷಿತರಾದ ದ್ರೋಣರೂ, ಮಹಾರಥನಾದ ಮಗಧರಾಜನೂ ಕೌರವ್ಯನ ಮಹಾಸೇನೆಯನ್ನು ಸಂಹಾರಮಾಡುತ್ತಿದ್ದ ಮಹಾರಥರಾದ ಭೀಮಾರ್ಜುನರಿದ್ದ ಸ್ಥಳಕ್ಕೆ ಬಂದರು. ಮಗಧರಾಜನಾದ ಜಯ ತ್ಸೇನನು ಭಯಂಕರವಾದ ಶಸ್ತ್ರಾಸ್ತ್ರಗಳನ್ನು ಹೊಂದಿದ್ದ ಭೀಮಸೇನನನ್ನು ನಿಶಿತವಾದ ಎಂಟು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಭೀಮನು ಜಯತ್ಸೇನನನ್ನು ಹದಿನೈದು ಬಾಣಗಳಿಂದ ಪ್ರಹರಿಸಿ, ಅವನ ಸಾರಥಿಯನ್ನೂ ಭಲ್ಲದಿಂದ ಸಂಹರಿಸಿ ರಥದ ಮೂಕಿಯ ಪ್ರದೇಶದಿಂದ ಕೆಳಕ್ಕೆ ಕೆಡವಿದನು. ಸಾರಥಿಯಿಲ್ಲದೇ ಅನಿಯಂತ್ರಿತವಾದ ಕುದುರೆಗಳು

ಗಾಬರಿಗೊಂಡು ರಣಾಂಗಣದ ಸುತ್ತಲೂ ಸುತ್ತುತ್ತಾ, ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಜಯತ್ಸೇನನನ್ನು ಸಮರಾಂಗಣದಿಂದ ಹೊರಕ್ಕೆ ಒಯ್ದುವು. ದ್ರೋಣರು ಸಮಯವನ್ನು ನೋಡಿ, ಲೋಹಮಯವಾಗಿದ್ದ, ನಿಶಿತವಾಗಿದ್ದ ಅರುವತ್ತೈದು ಬಾಣಗಳಿಂದ ಭೀಮನನ್ನು ಪ್ರಹರಿಸಿದರು. ಸಮರಶ್ಲಾಘಿಯಾದ ಭೀಮನು ಪಿತೃಸಮರಾಗಿಯೂ, ಗುರುಗಳಾಗಿಯೂ ಇದ್ದ ದ್ರೋಣರನ್ನು ಅರುವತ್ತೈದು ಭಲ್ಲಗಳಿಂದ ಪ್ರಹರಿಸಿದನು. ಅರ್ಜುನನು ಸುಶರ್ಮನನ್ನು ಲೋಹಮಯವಾದ ಅನೇಕ ಬಾಣಗಳಿಂದ ಪ್ರಹರಿಸಿ ಅವನ ಸೈನ್ಯವನ್ನು–ಸುಂಟರಗಾಳಿಯು ದೊಡ್ಡ-ದೊಡ್ಡ ಮೇಘಗಳನ್ನು ಚೆಲ್ಲಾಪಿಲ್ಲಿ ಯಾಗಿ ಮಾಡಿಬಿಡುವಂತೆ–ಧ್ವಂಸಮಾಡಿಬಿಟ್ಟನು. ಅನಂತರ ಭೀಷ್ಮನೂ, ರಾಜನಾದ ದುರ್ಯೋಧನನೂ ಮತ್ತು ಕೋಸಲದ ಅರಸನಾದ ಬೃಹದ್ಬಲನೂ ಕ್ರುದ್ಧರಾಗಿ ಭೀಮಸೇನ–ಧನಂಜಯರನ್ನು ಆಕ್ರಮಿಸಿದರು. ಅದೇ ರೀತಿಯಲ್ಲಿ ಶೂರರಾದ ಪಾಂಡವರೂ, ದ್ರುಪದನ ಮಗನಾದ ಧೃಷ್ಟದ್ಯುಮ್ನನೂ ಬಾಯ್ದೆರೆದ ಯಮನಂತೆಯೇ ಇದ್ದ ಭೀಷ್ಮನನ್ನು ಆಕ್ರಮಿಸಿದರು. ಶಿಖಂಡಿಯು ಭರತಕುಲಪಿತಾಮಹನಾದ ಭೀಷ್ಮನ ಸಮೀಪಕ್ಕೆ ಹೋಗಿ, ಮಹಾರಥನಾದ ಭೀಷ್ಮನ ಸಂಬಂಧವಾದ ಭಯವನ್ನು ಸಂಪೂರ್ಣವಾಗಿ ತೊರೆದು, ಪರಮಹೃಷ್ಟನಾಗಿ ಭೀಷ್ಮನ ಮೇಲೆ ದಾಳಿಮಾಡಿದನು. ಯುಧಿಷ್ಠಿರಪ್ರಮುಖರಾದ ಪಾರ್ಥರು ಸರ್ವಸೃಂಜಯರಿಂದಲೂ ಕೂಡಿ ಕೊಂಡು ಶಿಖಂಡಿಯನ್ನು ಮುಂದೆ ಮಾಡಿಕೊಂಡು ಭೀಷ್ಮನೊಡನೆ ಯುದ್ಧ ವನ್ನು ಉಪಕ್ರಮಿಸಿದರು. ಅದೇ ರೀತಿಯಲ್ಲಿ ನಿನ್ನ ಕಡೆಯವರೂ ಸಹ ಯಶೋವ್ರತನಾದ ಭೀಷ್ಮನನ್ನು ಮುಂದೆ ಮಾಡಿಕೊಂಡು ಶಿಖಂಡಿಪ್ರಮುಖ ರಾದ ಪಾರ್ಥರೊಡನೆ ಯುದ್ಧಮಾಡಲು ಉಪಕ್ರಮಿಸಿದರು. ಅನಂತರ ಭೀಷ್ಮನ ವಿಜಯದ ಉದ್ದೇಶದಿಂದ ಪಾಂಡವರೊಡನೆ ಕೌರವರ ಭಯಾ ನಕವಾದ ಯುದ್ಧವು ಪ್ರಾರಂಭವಾಯಿತು. ಯುದ್ಧರೂಪವಾದ ಜೂಜಿನಲ್ಲಿ ನಿನ್ನ ಪುತ್ರರ ವಿಜಯದ ವಿಷಯವಾಗಿ ಭೀಷ್ಮನು ಪಣದ ರೂಪದಲ್ಲಿದ್ದನು. ವಿಜಯಕ್ಕಾಗಿ ಅಥವಾ ಪರಾಜಯಕ್ಕಾಗಿ ರಣದ್ಯೂತವು ಪ್ರಾರಂಭ ವಾಯಿತು. ಪಾಂಡವರ ದಂಡನಾಯಕನಾದ ಧೃಷ್ಟದ್ಯುಮ್ನನು ಸೈನ್ಯಕ್ಕೆ ಆಜ್ಞೆಯನ್ನು ನೀಡುತ್ತಾ–“ರಥಸತ್ತಮರೇ! ಗಾಂಗೇಯನನ್ನು ಆಕ್ರಮಿಸಿರಿ. ಹೆದರಬೇಡಿರಿ”–ಎಂದು ಹೇಳಿದನು. ಸೇನಾಪತಿಯ ಆ ಮಾತನ್ನು ಕೇಳಿ

ಪಾಂಡವವರೂಥಿನಿಯು ಪ್ರಾಣಗಳನ್ನೇ ಒತ್ತೆಯಾಗಿಟ್ಟು ಬಹಳ ಶೀಘ್ರವಾಗಿ ಭೀಷ್ಮನನ್ನು ಆಕ್ರಮಿಸಿತು. ಭೀಷ್ಮನೂ ಸಹ ಮಹಾಪ್ರವಾಹದೋಪಾದಿಯಲ್ಲಿ ಮುನ್ನುಗ್ಗಿ ಬರುತ್ತಿದ್ದ ಪಾಂಡವರ ಮಹಾಸೈನ್ಯವನ್ನು ತೀರಪ್ರದೇಶವು ಉಕ್ಕಿಬರುವ ಸಮುದ್ರವನ್ನು ತಡೆದುಬಿಡುವಂತೆ–ತಡೆದು ನಿಲ್ಲಿಸಿದನು."

೧೧೪ನೆಯ ಅಧ್ಯಾಯವು ಮುಗಿಯಿತು.

೧೧೫ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಷ್ಮನ ಆದೇಶದಂತೆ ಯುಧಿಷ್ಠಿರನು ಭೀಷ್ಮನೊಡನೆ ಯುದ್ಧ ಮಾಡಿದುದು : ಕೌರವ–ಪಾಂಡವರ ಸೇನೆಗಳ ನಡುವೆ ಭಯಂಕರಯುದ್ಧದ ವರ್ಣನೆ

ಹತ್ತನೆಯ ದಿವಸದ ಯುದ್ಧದಲ್ಲಿ ಭೀಷ್ಮನು ವಧ್ಯನಾಗುವನೆಂಬುದನ್ನು ಮೊದಲೇ ಧೃತರಾಷ್ಟ್ರನು ತಿಳಿದಿದ್ದನು. ಹತ್ತನೆಯ ದಿವಸದ ಯುದ್ಧದ ವಿವರಣೆಯನ್ನು ಸಂಜಯನು ಹೇಳುತ್ತಿದ್ದಾಗ ಭೀಷ್ಮನು ಮಾಡಿದ ಯುದ್ಧದ ವಿಷಯದಲ್ಲಿಯೇ ಅತ್ಯಾಸಕ್ತನಾಗಿದ್ದ ಧೃತರಾಷ್ಟ್ರನು ಕುತೂಹಲಾವಿಷ್ಟನಾಗಿ ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ಶಾಂತನುವಿನ ಮಗನಾದ ಭೀಷ್ಮನು ಹತ್ತನೆಯ ದಿವಸ ಸೃಂಜಯರಿಂದ ಕೂಡಿದ ಮಹಾವೀರ್ಯರಾದ ಪಾಂಡವರೊಡನೆ ಹೇಗೆ ಯುದ್ಧಮಾಡಿದನು? ಕೌರವರೂ ಸಹ ಯುದ್ಧದಲ್ಲಿ ಪಾಂಡವರನ್ನು ಹೇಗೆ ದೂರಸರಿಸಿದರು? ಆಹವಶೋಭಿಯಾದ ಭೀಷ್ಮನ ಮಹಾಯುದ್ಧದ ವೃತ್ತಾಂತವನ್ನು ವಿಸ್ತರವಾಗಿಯೇ ತಿಳಿಸು."

"ಮಹಾರಾಜ! ನಿನ್ನ ಆಶಯದಂತೆಯೇ ಕೌರವರು ಪಾಂಡವರೊಡನೆ ಹೇಗೆ ಯುದ್ಧಮಾಡಿದರು? ಯುದ್ಧವು ಹೇಗೆ ನಡೆಯಿತು?–ಎಂಬುದನ್ನೀಗ ಹೇಳುತ್ತೇನೆ. ಕೇಳು.

ಕಿರೀಟಿಯು ಶ್ರೇಷ್ಠವಾದ ಅಸ್ತ್ರಗಳಿಂದ ಕ್ರುದ್ಧರಾಗಿದ್ದ ನಿನ್ನ ಕಡೆಯ ಮಹಾರಥರನ್ನು ಅನುದಿನವೂ ಪರಲೋಕಕ್ಕೆ ಕಳುಹಿಸುತ್ತಿದ್ದನು. ಕೌರವ್ಯನಾದ, ಸಮಿತಿಂಜಯನಾದ ಭೀಷ್ಮನೂ ಸಹ ತಾನು ಪ್ರತಿಜ್ಞೆ

ಮಾಡಿದ ರೀತಿಯಲ್ಲಿಯೇ ಪಾಂಡವರ ಸೈನ್ಯವನ್ನು ಕ್ಷಯಿಸಿದನು. ಪಾಂಚಾಲ್ಯ ರೊಡನೆ ಭೀಷ್ಮನು ಯುದ್ಧಮಾಡುತ್ತಿರುವುದನ್ನೂ–ಕೌರವರೊಡನೆ ಅರ್ಜು ನನು ಯುದ್ಧಮಾಡುತ್ತಿರುವುದನ್ನೂ ನೋಡುತ್ತಿದ್ದವರಿಗೆ ಯಾವ ಪಕ್ಷಕ್ಕೆ ವಿಜಯವು ಲಭಿಸುವುದೆಂಬುದನ್ನು ಹೇಳಲು ಸಂಶಯವುಂಟಾಯಿತು. ಆ ಹತ್ತನೆಯ ದಿವಸದಲ್ಲಿ ಭೀಷ್ಮಾರ್ಜುನರ ಮಹಾಯುದ್ಧದಲ್ಲಿ ಮಹಾರೌದ್ರ ವಾದ ಜನಸಂಹಾರಕ್ರಿಯೆಯು ನಿರಂತರವಾಗಿ ನಡೆಯತೊಡಗಿತು. ಆ ಯುದ್ಧದಲ್ಲಿ ಪರಮಾಸ್ತ್ರವಿದನಾದ, ಶತ್ರುಗಳನ್ನು ತಾಪಗೊಳಿಸುವ ಭೀಷ್ಮನು ಹತ್ತುಸಾವಿರಕ್ಕಿಂತಲೂ ಹೆಚ್ಚಾದ ಯೋಧರನ್ನೇ ಸಂಹರಿಸಿದನು. ಯಾವ ಯೋಧರ ನಾಮ-ಗೋತ್ರಗಳು ಅಜ್ಞಾತವಾಗಿಯೇ ಉಳಿದಿದ್ದುವೋ ಮತ್ತು ಯಾರು ಯುದ್ಧದಿಂದ ಹಿಂದಿರುಗದೇ ಕಡೆಯವರೆಗೂ ಹೋರಾಡುತ್ತಲೇ ಇದ್ದರೋ–ಅಂತಹ ಹತ್ತಾರು ಸಾವಿರ ಶೂರರು ಭೀಷ್ಮನಿಂದ ಹತರಾದರು. ಪರಂತಪನೇ! ಹತ್ತು ದಿವಸಗಳ ಕಾಲ ಧರ್ಮಾತ್ಮನಾದ ಭೀಷ್ಮನು ಪಾಂಡ ವರ ಸೈನ್ಯವನ್ನು ಸಂತಪ್ತವನ್ನಾಗಿ ಮಾಡಿ ಕಡೆಗೆ ತನ್ನ ಜೀವಿತದಿಂದಲೇ ನಿರ್ವೇದಹೊಂದಿದನು. ಆ ಹತ್ತನೆಯ ದಿವಸ ಭೀಷ್ಮನು ಸಾಧ್ಯವಾದಷ್ಟು ಬೇಗ ತನ್ನ ವಧೆಯಾಗಿಬಿಡಬೇಕೆಂದು ಇಚ್ಛಿಸಿದವನಾಗಿ, ತಾನಂದು ಹೆಚ್ಚು ಸಂಖ್ಯೆಯಲ್ಲಿ ಮಾನವಶ್ರೇಷ್ಠರನ್ನು ವಧಿಸುವುದಿಲ್ಲವೆಂದು ನಿಶ್ಚಯಿಸಿದವನಾಗಿ ಮಹಾಬಾಹುವಾದ ನಿನ್ನ ತಂದೆಯಾದ ದೇವವ್ರತನು ತನ್ನ ಸಮೀಪದಲ್ಲಿಯೇ ಇದ್ದ ಯುಧಿಷ್ಠಿರನನ್ನು ಕುರಿತು ಈ ಮಾತುಗಳನ್ನು ಹೇಳಿದನು : "ಮಹಾ ಪ್ರಾಜ್ಞನೇ! ಸರ್ವಶಾಸ್ತ್ರವಿಶಾರದನೇ! ಯುಧಿಷ್ಠಿರ! ಧರ್ಮಾನುಕೂಲ ವಾಗಿಯೂ, ಸ್ವರ್ಗಪ್ರಾಪಕವಾಗಿಯೂ ಇರುವ ನನ್ನ ಮಾತುಗಳನ್ನು ಕೇಳು. ಭಾರತ! ಈ ದೇಹದಿಂದ ನಾನು ವಿರಕ್ತನಾಗಿದ್ದೇನೆ. (ಈ ದೇಹವು ನನಗೆ ಇನ್ನು ಬೇಡವಾಗಿದೆ.) ಅನೇಕಾನೇಕ ಪ್ರಾಣಿಗಳನ್ನು ಸಂಹಾರಮಾಡುವುದರ ಲ್ಲಿಯೇ ನನ್ನ ಕಾಲವೆಲ್ಲವೂ ಕಳೆದುಹೋಯಿತು. ಆದುದರಿಂದ ಈ ಸಮಯ ದಲ್ಲಿ ನನಗೆ ಪ್ರಿಯವಾಗುವ ಕಾರ್ಯವನ್ನು ಮಾಡುವ ಇಚ್ಛೆಯಿರುವುದಾದರೆ ಪಾರ್ಥನನ್ನೂ, ಪಾಂಚಾಲ-ಸೃಂಜಯರನ್ನು ನನ್ನೊಡನೆ ಯುದ್ಧಮಾಡಲು ಕಳುಹಿಸು. ನನ್ನ ವಧೆಗೆ ಪ್ರಯತ್ನಿಸು." ಭೀಷ್ಮನ ಈ ಅಭಿಪ್ರಾಯವನ್ನು ತಿಳಿದು ಸತ್ಯದರ್ಶನನಾದ ಯುಧಿಷ್ಠಿರನು ಸೃಂಜಯರೊಡನೆ ಸೇರಿ ಕೊಂಡು ಭೀಷ್ಮನೊಡನೆ ಯುದ್ಧಮಾಡಲು ಹೋದನು. ಭೀಷ್ಮನು ಹೇಳಿದ

ಮಾತನ್ನು ಕೇಳಿ ಧೃಷ್ಟದ್ಯುಮ್ನ-ಯುಧಿಷ್ಠಿರರು ಭೀಷ್ಮನನ್ನು ಆಕ್ರಮಿಸುವಂತೆ ತಮ್ಮ ಸೈನ್ಯಕ್ಕೆ ಆದೇಶ ನೀಡಿದರು : "ಭೀಷ್ಮನ ಮುಂದೆ ಹೋಗಿರಿ! ಭೀಷ್ಮನೊಡನೆ ಯುದ್ಧಮಾಡಿರಿ! ಸತ್ಯಸಂಧನಾದ ಶತ್ರುಂಜಯನಾದ ಜಿಷ್ಣುವಿನಿಂದ ರಕ್ಷಿತರಾದ ನೀವು ಭೀಷ್ಮನೊಡನೆ ಮಾಡುವ ಯುದ್ಧದಲ್ಲಿ ಜಯಗಳಿಸಿರಿ. ಮಹಾಧನುಷ್ಮಂತನಾದ ನಮ್ಮ ದಂಡನಾಯಕನಾದ ಧೃಷ್ಟದ್ಯುಮ್ನನೂ, ಭೀಮಸೇನನೂ ನಿಮ್ಮನ್ನು ಯುದ್ಧಸಮಯದಲ್ಲಿ ನಿಶ್ಚಯವಾಗಿಯೂ ರಕ್ಷಿಸುತ್ತಾರೆ. ಸೃಂಜಯರೇ! ಇಂದಿನ ಯುದ್ಧದಲ್ಲಿ ಭೀಷ್ಮನಿಂದ ನಿಮಗೆ ಸ್ವಲ್ಪವಾದರೂ ಭಯವೆಂಬುದಿಲ್ಲ. ಶಿಖಂಡಿಯನ್ನು ಮುಂದೆಮಾಡಿಕೊಂಡು ಇಂದು ನಿಶ್ಚಯವಾಗಿ ಭೀಷ್ಮನನ್ನು ಜಯಿಸುತ್ತೇವೆ."

ಮಹಾರಾಜ! ಪಾಂಡವರು ಹತ್ತನೆಯ ದಿವಸ ಆ ರೀತಿಯಲ್ಲಿ ನಿರ್ಣಯಿಸಿ ಬ್ರಹ್ಮಲೋಕವನ್ನೇ ಲಕ್ಷ್ಯವನ್ನಾಗಿಟ್ಟುಕೊಂಡು, ಕ್ರೋಧಮೂರ್ಛಿತರಾಗಿ ಶಿಖಂಡಿಯನ್ನೂ ಮತ್ತು ಅರ್ಜುನನನ್ನೂ ಮುಂದೆಮಾಡಿಕೊಂಡು ಭೀಷ್ಮನೊಡನೆ ಯುದ್ಧಕ್ಕೆ ಹೋದರು. ಭೀಷ್ಮನನ್ನು ಸಂಹರಿಸುವುದರಲ್ಲಿ ಅವರೆಲ್ಲರೂ ಹೆಚ್ಚು ಪ್ರಯತ್ನಶೀಲರಾದರು. ಅನಂತರ ನಿನ್ನ ಮಗನಿಂದ ನಿರ್ದೇಶಿತರಾದ ಮಹಾಬಲರಾದ ನಾನಾದೇಶಗಳ ರಾಜರೂ ತಮ್ಮ-ತಮ್ಮ ಸೈನ್ಯಗಳೊಡನೆ ದ್ರೋಣರಿಂದಲೂ ಮತ್ತು ಅವರ ಮಗನಾದ ಅಶ್ವತ್ಥಾಮನಿಂದಲೂ ಕೂಡಿಕೊಂಡವರಾಗಿ ಯುದ್ಧಕ್ಕೆ ಸಿದ್ಧರಾದರು. ಬಲಿಷ್ಠನಾದ ದುಃಶಾಸನನು ತನ್ನ ಎಲ್ಲ ಅನುಜರಿಂದ ಸಮೇತನಾಗಿ ಸಮರಾಂಗಣದ ಮಧ್ಯದಲ್ಲಿದ್ದ ಭೀಷ್ಮನನ್ನು ರಕ್ಷಿಸುತ್ತಿದ್ದನು. ಅನಂತರ ನಿನ್ನ ಕಡೆಯ ಯೋಧರೆಲ್ಲರೂ ಮಹಾರಥನಾದ ಭೀಷ್ಮನನ್ನು ಮುಂದೆ ಮಾಡಿಕೊಂಡು ಶಿಖಂಡಿಪ್ರಮುಖರಾದ ಪಾರ್ಥರೊಡನೆ ಯುದ್ಧಮಾಡುತ್ತಿದ್ದರು. ಚೇದಿಗಳಿಂದಲೂ, ಪಾಂಚಾಲರಿಂದಲೂ ಸಹಿತನಾದ ವಾನರಧ್ವಜನು ಶಿಖಂಡಿಯನ್ನು ಮುಂದೆ ಮಾಡಿಕೊಂಡು ಭೀಷ್ಮನ ಬಳಿಗೆ ಹೋದನು. ದ್ರೋಣಪುತ್ರನಾದ ಅಶ್ವತ್ಥಾಮನನ್ನು–ಸಾತ್ಯಕಿಯೂ, ಪೌರವನನ್ನು–ಧೃಷ್ಟಕೇತುವೂ, ಮಂತ್ರಿಗಳಿಂದ ಸಹಿತನಾದ ದುರ್ಯೋಧನನನ್ನು ಅಭಿಮನ್ಯುವೂ ಎದುರಿಸಿ ಯುದ್ಧಮಾಡಿದರು. ಸೇನಾಸಮೇತನಾದ ವಿರಾಟನು ಸೇನಾಸಮೇತನಾದ ವೃದ್ಧಕ್ಷತ್ರನ ಮಗನಾದ ಜಯದ್ರಥನನ್ನು ಎದುರಿಸಿ ಯುದ್ಧಮಾಡಿದನು. ಮಹಾಧನುಷ್ಮಂತನಾದ ಸೈನ್ಯಸಮೇತನಾದ ಮದ್ರರಾಜನನ್ನು–

ಯುಧಿಷ್ಠಿರನು ಎದುರಿಸಿದನು. ಸುರಕ್ಷಿತನಾಗಿದ್ದ ಭೀಮಸೇನನು ಆನೆಗಳ ಸೈನ್ಯವನ್ನು ಆಕ್ರಮಿಸಿದನು. ಎದುರಿಸಲು ಮತ್ತು ದೂರಸರಿಸಲು ಅಸಾಧ್ಯನಾದ, ಸರ್ವಶಸ್ತ್ರವಿದರಲ್ಲಿಯೂ ಶ್ರೇಷ್ಠನಾದ ಅಶ್ವತ್ಥಾಮನನ್ನು–ಧೃಷ್ಟದ್ಯುಮ್ನನು ತನ್ನ ಅನುಜರೊಡನೆ ಪ್ರಯತ್ನಪೂರ್ವಕವಾಗಿ ಎದುರಿಸಿದನು. ಕರ್ಣಿಕಾರ (ಶಿಲ್ಪಕಣಿಗಲೆ ಗಿಡ) ಚಿಹ್ನೆಯಿಂದ ಯುಕ್ತವಾಗಿದ್ದ ಧ್ವಜವನ್ನು ಹೊಂದಿದ್ದ ಅಭಿಮನ್ಯುವನ್ನು ಸಿಂಹಕೇತುವಾದ, ಅರಿಂದಮನಾದ ರಾಜಪುತ್ರನಾದ ಬೃಹದ್ಬಲನು ಎದುರಿಸಿದನು. ಶಿಖಂಡಿಯನ್ನೂ ಮತ್ತು ಪಾರ್ಥನನ್ನೂ ಸಂಹಾರಮಾಡುವ ಇಚ್ಛೆಯಿಂದ ನಿನ್ನ ಮಗನು ಇತರ ರಾಜರೊಡನೆ ಸೇರಿಕೊಂಡು ಆ ಇಬ್ಬರನ್ನೂ ಯುದ್ಧದಲ್ಲಿ ಎದುರಿಸಿದನು. ಮಹಾಭಯಂಕರವಾದ ಆ ಯುದ್ಧದಲ್ಲಿ ಎರಡು ಪಕ್ಷಗಳ ಸೈನಿಕರೂ ತಮ್ಮ ಅತುಲವಾದ ಪರಾಕ್ರಮಗಳನ್ನು ತೋರಿಸುತ್ತಿದ್ದರು. ಸೈನಿಕರು ಒಬ್ಬರ ಮೇಲೆ ಮತ್ತೊಬ್ಬರು ದಾಳಿಮಾಡಲು ಒಂದು ಕಡೆಯಿಂದ ಮತ್ತೊಂದು ಕಡೆಗೆ ಶೀಘ್ರವಾಗಿ ಧಾವಿಸುತ್ತಿದ್ದ ಆ ಸಮಯದಲ್ಲಿ ಭೂಮಿಯೇ ನಡುಗಿತು. ಶಾಂತನವನು ಯುದ್ಧದಲ್ಲಿ ತೊಡಗಿರುವುದನ್ನು ಕಂಡು ನಿನ್ನ ಕಡೆಯ ಸೈನಿಕರೂ ಪಾಂಡವರ ಕಡೆಯ ಸೈನಿಕರೂ ಮಹಾಯುದ್ಧದಲ್ಲಿ ತೊಡಗಿದರು. ಕೋಪದಿಂದ ತಪ್ತರಾಗಿ ಪರಸ್ಪರವಾಗಿ ಯುದ್ಧಮಾಡುತ್ತಿದ್ದ ಸೈನಿಕರ ಸಮೂಹದಿಂದ ಹೊರಟ ಮಹಾಶಬ್ದವು ಎಲ್ಲ ದಿಕ್ಕುಗಳಲ್ಲಿಯೂ ಪ್ರತಿಧ್ವನಿಸಿತು. ಶಂಖ-ದುಂದುಭಿಘೋಷಗಳಿಂದಲೂ, ಆನೆಗಳ ಘೀಂಕಾರದಿಂದಲೂ ಮತ್ತು ಸೈನಿಕರ ಸಿಂಹನಾದಗಳಿಂದಲೂ ಯುದ್ಧವು ಬಹಳ ಭಯಂಕರವಾಗಿ ಪರಿಣಮಿಸಿತು. ಎಲ್ಲ ರಾಜರ ಕೇಯೂರಾಂಗದ–ಕಿರೀಟಗಳಲ್ಲಿದ್ದ, ಸೂರ್ಯ-ಚಂದ್ರರಿಗೆ ಸಮಾನವಾದ ಪ್ರಭೆಯು ಮಸುಕಾಯಿತು. ಯುದ್ಧಭೂಮಿಯಲ್ಲಿ ಸೈನಿಕರ ಪದಸಂಘಟ್ಟನೆಗಳಿಂದ ಹೊರಟ ಧೂಳಿಯು ಶಸ್ತ್ರಗಳೆಂಬ ವಿದ್ಯುತ್ತುಗಳಿಂದ ಆವೃತವಾಗಿ ಮೇಘಗಳಂತೆಯೇ ಕಾಣುತ್ತಿದ್ದುವು. ಧನುಸ್ಸುಗಳ ಟೇಂಕಾರಶಬ್ದಗಳು ಬಹಳ ದಾರುಣವಾಗಿ ಕೇಳಿಬರುತ್ತಿದ್ದುವು. ಬಾಣಗಳ 'ಸೊಯ್' ಎಂಬ ಶಬ್ದಗಳೂ, ಶಂಖಗಳ ನಿನಾದಗಳೂ, ಭೇರಿಗಳ ಧ್ವನಿಗಳೂ, ರಥಗಳ ನಿರ್ಘೋಷಗಳೂ ಎರಡೂ ಪಕ್ಷಗಳ ಸೈನ್ಯಗಳಲ್ಲಿಯೂ ಕೇಳಿಬರುತ್ತಿದ್ದಿತು. ಉಭಯಪಕ್ಷಗಳ ಸೈನಿಕರಿಂದಲೂ ಬಿಡಲ್ಪಡುತ್ತಿದ್ದ ಪ್ರಾಸ, ಶಕ್ತ್ಯಾಯುಧ ಋಷ್ಟಿ–ಮುಂತಾದುವುಗಳ ಸಮೂಹ

ಗಳಿಂದಲೂ, ಬಾಣಗಳ ಸಮೂಹಗಳಿಂದಲೂ ಸಮಾಕುಲವಾಗಿದ್ದ ಆಕಾಶವು ಪ್ರಭೆಯಿಂದ ಹೀನವಾಗಿರುವಂತೆ ಕಂಡುಬಂದಿತು. ಆ ಮಹಾ ಸಮರದಲ್ಲಿ ರಥಿಕರು–ರಥಿಕರೊಡನೆ ಯುದ್ಧಮಾಡುತ್ತಿದ್ದರು. ಅಶ್ವಸೈನ್ಯ ಗಳು–ಅಶ್ವಸೈನ್ಯಗಳೊಡನೆ ಯುದ್ಧಮಾಡುತ್ತಿದ್ದುವು. ಆನೆಗಳು–ಆನೆಗಳನ್ನೇ ಸಂಹರಿಸುತ್ತಿದ್ದುವು. ಅಂತೆಯೇ ಪದಾತಿಗಳು ಪದಾತಿಗಳನ್ನೇ ಸಂಹಾರ ಮಾಡುತ್ತಿದ್ದರು. ನರವ್ಯಾಘ್ರನೇ! ಮಾಂಸದ ತುಂಡಿಗಾಗಿ ಎರಡು ಗಿಡಗ ಪಕ್ಷಿಗಳು ವ್ಯಾಜ್ಯವಾಡುವಂತೆ ಭೀಷ್ಮನ ಸಲುವಾಗಿ ಕೌರವರಿಗೂ ಮತ್ತು ಪಾಂಡವರಿಗೂ ಮಹಾಯುದ್ಧವೇ ನಡೆಯಿತು. ಪರಸ್ಪರವಾಗಿ ವಧೆಮಾಡಲು ಮತ್ತು ಒಬ್ಬರು ಮತ್ತೊಬ್ಬರನ್ನು ಜಯಿಸಲು ಎರಡು ಪಕ್ಷಗಳ ಸೈನಿಕರಿಗೂ ಭಯಂಕರವಾದ ಯುದ್ಧವು ಮುಂದುವರಿಯುತ್ತಿದ್ದಿತು.”

೧೧೫ನೆಯ ಅಧ್ಯಾಯವು ಮುಗಿಯಿತು.

೧೧೬ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಕೌರವ-ಪಾಂಡವಮಹಾರಥರ ದ್ವಂದ್ವಯುದ್ಧದ ವರ್ಣನೆ : ಭೀಷ್ಮನ ಪರಾಕ್ರಮ

ಸಂಜಯನು ಯುದ್ಧದ ವರ್ಣನೆಯನ್ನೇ ಮುಂದುವರಿಸಿ ಹೇಳುತ್ತಾನೆ :

“ಮಹಾರಾಜ! ಪರಾಕ್ರಮಿಯಾದ ಅಭಿಮನ್ಯುವು ಭೀಷ್ಮನನ್ನು ಪರಾಜಯಗೊಳಿಸಲು ನಿಶ್ಚಯಿಸಿ–ಭೀಷ್ಮನನ್ನು ರಕ್ಷಿಸಲು ವಿಶಾಲಸೇನಾ ಸಮೇತನಾಗಿ ಬಂದ ನಿನ್ನ ಮಗನನ್ನು ಎದುರಿಸಿ ಯುದ್ಧಮಾಡುತ್ತಿದ್ದನು. ಕ್ರುದ್ಧನಾದ ದುರ್ಯೋಧನನು ಅಭಿಮನ್ಯುವನ್ನು ಬಗ್ಗಿದ ಗಿಣ್ಣುಗಳಿದ್ದ ಒಂಬತ್ತು ಬಾಣಗಳಿಂದ ವಕ್ಷಃಸ್ಥಲದಲ್ಲಿ ಪ್ರಹರಿಸಿ, ಪುನಃ ಮೂರು ಬಾಣಗಳಿಂದ ಪ್ರಹರಿಸಿದನು. ಅದರಿಂದ ಕ್ರುದ್ಧನಾದ ಆರ್ಜುನಿಯು ಮೃತ್ಯುಪುರುಷನ ಸೋದರಿಯಂತಿದ್ದ ಘೋರವಾದ ಶಕ್ತ್ಯಾಯುಧವನ್ನು ದುರ್ಯೋಧನನ ರಥದ ಕಡೆಗೆ ರಭಸದಿಂದ ಎಸೆದನು. ಮಹಾರಥನಾದ ದುರ್ಯೋಧನನು ತನ್ನ ಮೇಲೆ ಬೀಳುವುದರಲ್ಲಿದ್ದ ಘೋರರೂಪಿನಿಂದ ಕೂಡಿದ್ದ ಆ ಶಕ್ತ್ಯಾಯುಧವನ್ನು ಕ್ಷುರಪ್ರವೆಂಬ ಬಾಣದಿಂದ ಎರಡಾಗಿ ಕತ್ತರಿಸಿಬಿಟ್ಟನು. ತಾನು ಬಿಟ್ಟ ಶಕ್ತ್ಯಾಯುಧವು ವ್ಯರ್ಥವಾದುದನ್ನು ಕಂಡು

ಪರಮಕುಪಿತನಾದ ಅಭಿಮನ್ಯುವು ಮೂರು ಬಾಣಗಳಿಂದ ದುರ್ಯೋಧನನನ್ನು ಅವನ ವಕ್ಷಃಸ್ಥಲದಲ್ಲಿಯೂ ಮತ್ತು ಬಾಹುಗಳಲ್ಲಿಯೂ ಪ್ರಹರಿಸಿದನು. ಪುನಃ ಭರತಕುಲಮಹಾರಥನಾದ ಅಭಿಮನ್ಯುವು ಘೋರವಾದ ಹತ್ತು ಬಾಣಗಳಿಂದ ದುರ್ಯೋಧನನನ್ನು ವಕ್ಷಃಸ್ಥಲದಲ್ಲಿ ಪ್ರಹರಿಸಿದನು. ದುರ್ಯೋಧನಾಭಿಮನ್ಯುಗಳ ಆ ಭಯಂಕರಯುದ್ಧವು ವಿಚಿತ್ರರೀತಿಯಲ್ಲಿ ನಡೆಯುತ್ತಿದ್ದು ಪ್ರೇಕ್ಷಕರ ಇಂದ್ರಿಯಗಳಿಗೆ ಆಹ್ಲಾದವನ್ನುಂಟುಮಾಡುವುದಾಗಿದ್ದಿತು. ಸಮಸ್ತಭೂಪಾಲರೂ ಆ ಯುದ್ಧವನ್ನು ಪ್ರಶಂಸೆಮಾಡುತ್ತಿದ್ದರು. ಭೀಷ್ಮನ ವಧೆಗಾಗಿಯೂ ಪಾರ್ಥನ ವಿಜಯಕ್ಕಾಗಿಯೂ ಅಥವಾ ಭೀಷ್ಮನ ವಿಜಯಕ್ಕಾಗಿಯೂ ಪಾರ್ಥನ ಅಪಜಯಕ್ಕಾಗಿಯೂ ವೀರರಾದ ಸೌಭದ್ರ-ಕುರುಪುಂಗವರು ಪರಸ್ಪರವಾಗಿ ಯುದ್ಧಮಾಡುತ್ತಿದ್ದರು. ಮತ್ತೊಂದು ವಿಭಾಗದಲ್ಲಿ ಶತ್ರುತಾಪನನಾದ ಬ್ರಾಹ್ಮಣಪುಂಗವನಾದ ಅಶ್ವತ್ಥಾಮನು ವೇಗಶಾಲಿಯಾದ ಸಾತ್ಯಕಿಯನ್ನು ಬಾಣದಿಂದ ಅವನ ವಕ್ಷಃಸ್ಥಲದಲ್ಲಿ ಪ್ರಹರಿಸಿದನು. ಮಹಾತ್ಮನಾದ ಸಾತ್ಯಕಿಯೂ ಸಹ ಗುರುಪುತ್ರನನ್ನು ಗೃಧ್ರಗಳ ರೆಕ್ಕೆಗಳಿಂದ ಕೂಡಿದ ಒಂಬತ್ತು ಬಾಣಗಳಿಂದ ಮರ್ಮಸ್ಥಾನದಲ್ಲಿ ಪ್ರಹರಿಸಿದನು. ಕ್ರುದ್ಧನಾದ ಅಶ್ವತ್ಥಾಮನು ಸಾತ್ಯಕಿಯನ್ನು ಒಂಬತ್ತು ಬಾಣಗಳಿಂದ ಪ್ರಹರಿಸಿ ಪುನಃ ಮೂವತ್ತು ಬಾಣಗಳಿಂದ ವಕ್ಷಃಸ್ಥಲದಲ್ಲಿಯೂ ಮತ್ತು ತೋಳುಗಳಲ್ಲಿಯೂ ಪ್ರಹರಿಸಿದನು. ದ್ರೋಣಪುತ್ರನ ಬಾಣಗಳ ಪ್ರಹಾರದಿಂದ ಬಹಳ ಗಾಯಗೊಂಡ ಮಹಾಧನುಷ್ಮಂತನಾದ ಮತ್ತು ಯಶೋವಂತನಾದ ಸಾತ್ಯಕಿಯು ಅಶ್ವತ್ಥಾಮನನ್ನು ಮೂರು ಬಾಣಗಳಿಂದ ಪ್ರಹರಿಸಿದನು. ಮತ್ತೊಂದು ವಿಭಾಗದಲ್ಲಿ ಮಹಾರಥನಾದ ಪೌರವನು ಧೃಷ್ಟಕೇತುವನ್ನು ಬಾಣಗಳ ಜಾಲದಿಂದಲೇ ಮುಚ್ಚಿ ಮಹಾಧನುಷ್ಮಂತನಾದ ಅವನನ್ನು ಬಹಳವಾಗಿ ಗಾಯಗೊಳಿಸಿದನು. ಅದೇ ರೀತಿಯಲ್ಲಿ ಮಹಾರಥನಾದ, ಮಹಾಭುಜನಾದ ಧೃಷ್ಟಕೇತುವೂ ಸಹ ಪೌರವನನ್ನು ನಿಶಿತವಾದ ಮೂವತ್ತು ಬಾಣಗಳಿಂದ ಪ್ರಹರಿಸಿದನು.

ಒಡನೆಯೇ ಮಹಾರಥನಾದ ಪೌರವನು ಧೃಷ್ಟಕೇತುವಿನ ಧನುಸ್ಸನ್ನು ಕತ್ತರಿಸಿ ಗಟ್ಟಿಯಾಗಿ ಗರ್ಜಿಸಿ ಪುನಃ ಧೃಷ್ಟಕೇತುವನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಧೃಷ್ಟಕೇತುವು ಮರುಕ್ಷಣದಲ್ಲಿಯೇ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಪೌರವನನ್ನು ಶಿಲೀಮುಖಗಳೆಂಬ ಹೆಸರಿನ ನಿಶಿತವಾದ

ಎಪ್ಪತ್ಮೂರು ಬಾಣಗಳಿಂದ ಪ್ರಹರಿಸಿದನು. ಆ ಸಮಯದಲ್ಲಿ ಮಹಾ ಧನುರ್ಧರರಾದ, ಮಹಾಬಲಿಷ್ಠರಾದ, ಮಹಾರಥಿಗಳಾದ ಆ ಇಬ್ಬರು ಪೌರವ-ಧೃಷ್ಟಕೇತುಗಳು ಅಪಾರವಾದ ಬಾಣಗಳ ವೃಷ್ಟಿಯಿಂದ ಪರಸ್ಪರವಾಗಿ ಕಾದಾಡುತ್ತಿದ್ದರು. ಪರಸ್ಪರವಾಗಿ ಒಬ್ಬರು ಮತ್ತೊಬ್ಬರ ಧನುಸ್ಸನ್ನು ಕತ್ತರಿಸಿ ಇಬ್ಬರ ರಥಗಳಲ್ಲಿಯೂ ಇದ್ದ ಕುದುರೆಗಳನ್ನು ಪರಸ್ಪರವಾಗಿ ಸಂಹರಿಸಿ ವಿರಥರಾಗಿ, ಅಸಹನಶೀಲರಾಗಿ ಖಡ್ಗಯುದ್ಧಕ್ಕೆ ಸಜ್ಜಾಗಿ ನಿಂತರು. ಆ ಇಬ್ಬರು ಮಹಾವೀರರೂ ನೂರು-ನೂರು ಚಂದ್ರರ ಮತ್ತು ನಕ್ಷತ್ರಗಳ ಚಿಹ್ನೆಗಳಿಂದ ಕೂಡಿದ್ದ, ಎತ್ತಿನ ಚರ್ಮದಿಂದ ನಿರ್ಮಿತವಾಗಿದ್ದ ಗುರಾಣಿಗಳನ್ನೂ–ಮಹಾಪ್ರಭೆಯಿಂದ ಯುಕ್ತವಾಗಿದ್ದ ಕತ್ತಿಗಳನ್ನೂ ಹಿಡಿದು ನಿಂತಿದ್ದರು. ಮಹಾರಣ್ಯದಲ್ಲಿ ಸಿಂಹಿಯೊಡನೆ ಸಂಗಮಕ್ಕಾಗಿ ಕಾದಾಡುವ ಎರಡು ಸಿಂಹಗಳಂತೆ, ತಮ್ಮ-ತಮ್ಮ ಕಡೆಯ ವಿಜಯಕ್ಕಾಗಿ ಇಬ್ಬರು ಮಹಾರಥರೂ ಕತ್ತಿಗಳನ್ನು ಹಿಡಿದು ಪರಸ್ಪರವಾಗಿ ಪ್ರಹರಿಸಲು ಉಪಕ್ರಮಿಸಿದರು. ಮುಂದಕ್ಕೆ ಹೋಗುವುದು, ಹಿಂದಕ್ಕೆ ಬರುವುದು ಮತ್ತು ಮಂಡಲಾಕಾರದಲ್ಲಿ ಸುತ್ತುವುದು–ಇವೇ ಮೊದಲಾದ ನಡಿಗೆಗಳಿಂದ ತಮ್ಮ ಖಡ್ಗಯುದ್ಧಕೌಶಲವನ್ನು ಪ್ರಕಟಿಸುತ್ತಾ, ಒಬ್ಬರು ಮತ್ತೊಬ್ಬರನ್ನು ಪರಿಹಾಸಪೂರ್ವಕವಾಗಿ ಯುದ್ಧಕ್ಕೆ ಆಹ್ವಾನಿಸುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದರು. ಕ್ರುದ್ಧನಾದ ಪೌರವನು ತನ್ನ ದೊಡ್ಡದಾದ ಕತ್ತಿಯಿಂದ ಧೃಷ್ಟಕೇತುವನ್ನು ಕಿವಿಯ ಪ್ರದೇಶದಲ್ಲಿ ಪ್ರಹರಿಸಿ 'ನಿಲ್ಲು-ನಿಲ್ಲು' ಎಂಬುದಾಗಿ ಹೇಳಿಕೊಂಡು ಗರ್ಜನೆಮಾಡಿದನು. ಚೇದಿರಾಜನೂ ಸಹ ಪುರುಷರ್ಷಭನಾದ ಪೌರವನನ್ನು ನಿಶಿತವಾದ ಅಗ್ರಭಾಗವುಳ್ಳ ದೊಡ್ಡ ಕತ್ತಿಯಿಂದ ಅವನ ಜತ್ರುಪ್ರದೇಶದಲ್ಲಿ (ಕುತ್ತಿಗೆಯ ಎಲುಬುಪ್ರದೇಶ) ಪ್ರಹರಿಸಿದನು. ಹೀಗೆ ಪರಸ್ಪರವಾಗಿ ಕತ್ತಿಗಳಿಂದ ಯುದ್ಧಮಾಡುತ್ತಿದ್ದಾಗ ಅರಿಂದಮರಾದ ಪೌರವ-ಧೃಷ್ಟಕೇತುಗಳು ಪರಸ್ಪರ ಪ್ರಹೃತರಾಗಿ ಇಬ್ಬರೂ ಎಚ್ಚರತಪ್ಪಿ ಕೆಳಕ್ಕೆ ಬಿದ್ದರು. ಆ ಸಮಯದಲ್ಲಿ ನಿನ್ನ ಮಗನಾದ ಜಯತ್ಸೇನನು ಗಾಯಗೊಂಡು ಭೂಮಿಯ ಮೇಲೆ ಬಿದ್ದಿದ್ದ ಪೌರವನನ್ನೆತ್ತಿ ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ರಣಾಂಗಣದಿಂದ ಹೊರಟು ಹೋದನು. ಮಾದ್ರಿಯ ಮಗನಾದ, ಕ್ರುದ್ಧನಾದ, ಪ್ರತಾಪವಂತನಾದ

ಪರಾಕ್ರಮಿಯಾದ ಸಹದೇವನು–ಧೃಷ್ಟಕೇತುವನ್ನು ರಥದಲ್ಲಿ ಹತ್ತಿಸಿಕೊಂಡು ಸಮರಭೂಮಿಯನ್ನು ಬಿಟ್ಟು ಹೊರಟುಹೋದನು. ರಣಾಂಗಣದ ಮತ್ತೊಂದು ವಿಭಾಗದಲ್ಲಿ ಚಿತ್ರಸೇನನು ಪಾಂಡವಯೋಧನಾದ ಸುಶರ್ಮ ನನ್ನು ಲೋಹಮಯವಾದ ಅನೇಕಬಾಣಗಳಿಂದ ಪ್ರಹರಿಸಿ ಪುನಃ ಅರುವತ್ತು ಬಾಣಗಳಿಂದಲೂ, ಮತ್ತೊಮ್ಮೆ ನಿಶಿತವಾದ ಒಂಬತ್ತು ಬಾಣಗಳಿಂದಲೂ ಪ್ರಹರಿಸಿದನು. ಕ್ರುದ್ಧನಾದ ಸುಶರ್ಮನು ನಿನ್ನ ಮಗನನ್ನು ಹತ್ತು-ಹತ್ತು (ಇಪ್ಪತ್ತು) ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಚಿತ್ರಸೇನನೂ ಕ್ರುದ್ಧನಾಗಿ ಸುಶರ್ಮನನ್ನು ಮೂವತ್ತು ಬಾಣಗಳಿಂದ ಪ್ರಹರಿಸಿದನು. ಭೀಷ್ಮನೊಡನೆ ನಡೆಯುತ್ತಿದ್ದ ಯುದ್ಧದಲ್ಲಿ ಪಾಂಡವರಿಗೆ ಯಶಸ್ಸನ್ನೂ, ಮರ್ಯಾದೆಯನ್ನೂ ಗಳಿಸಿಕೊಡುವವನಾಗಿದ್ದ ಸುಶರ್ಮನು ಪುನಃ ನಿಶಿತವಾದ ಬಾಣಗಳಿಂದ ಚಿತ್ರಸೇನನನ್ನು ಪ್ರಹರಿಸಿದನು.

ಮತ್ತೊಂದು ವಿಭಾಗದಲ್ಲಿ ಭೀಷ್ಮನೊಡನೆ ಯುದ್ಧಮಾಡುತ್ತಿದ್ದ ಪಾರ್ಥನ ಸಹಾಯಾರ್ಥವಾಗಿ ಬಂದ ಅಭಿಮನ್ಯುವು ರಾಜಪುತ್ರನಾದ ಬೃಹದ್ಬಲನನ್ನು ಆಕ್ರಮಿಸಿ ಯುದ್ಧಮಾಡುತ್ತಿದ್ದನು. ಕೋಸಲೇಂದ್ರನಾದ ಬೃಹದ್ಬಲನು ಆರ್ಜುನಿಯನ್ನು ಲೋಹಮಯವಾದ ಐದು ಬಾಣಗಳಿಂದ ಪ್ರಹರಿಸಿ ಪುನಃ ಸನ್ನತಪರ್ವಗಳಾದ ಇಪ್ಪತ್ತು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಸೌಭದ್ರನು ಬೃಹದ್ಬಲನನ್ನು ಲೋಹಮಯವಾದ ಎಂಟು ಬಾಣಗಳಿಂದ ಪ್ರಹರಿಸಿದನು. ಆದರೂ ಯುದ್ಧದಲ್ಲಿ ಅವನು ವಿಚಲಿತನಾಗ ಲಿಲ್ಲ. ಪುನಃ ಅಭಿಮನ್ಯುವು ನಿಶಿತವಾದ ಬಾಣಗಳಿಂದ ಕೋಸಲೇಂದ್ರನನ್ನು ಪ್ರಹರಿಸಿದನು. ಮತ್ತೊಂದು ನಿಶಿತವಾದ ಬಾಣದಿಂದ ಅಭಿಮನ್ಯುವು ಕೌಸಲನ ಧನುಸ್ಸನ್ನು ಕತ್ತರಿಸಿ, ಗೃಧ್ರದ ರೆಕ್ಕೆಗಳಿದ್ದ ಮೂವತ್ತು ಬಾಣಗಳಿಂದ ಬೃಹದ್ಬಲನನ್ನೂ ಪ್ರಹರಿಸಿದನು. ರಾಜಪುತ್ರನಾದ ಬೃಹದ್ಬಲನು ಪರಮಕ್ರುದ್ಧ ನಾಗಿ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಫಾಲ್ಗುನಿಯನ್ನು ಅನೇಕ ಬಾಣಗಳಿಂದ ಗಾಯಗೊಳಿಸಿದನು. ಮಹಾರಾಜ! ಭೀಷ್ಮನ ಕಾರಣದಿಂದಾಗಿ ಕುಪಿತರಾಗಿದ್ದ, ಚಿತ್ರಯೋಧಿಗಳಾಗಿದ್ದ ಬೃಹದ್ಬಲಾಭಿಮನ್ಯುಗಳ ದ್ವಂದ್ವ ಯುದ್ಧವು ಹಿಂದೆ ದೇವಾಸುರರ ಯುದ್ಧಸಮಯದಲ್ಲಿ ಬಲ-ವಾಸವರಿಗೆ ನಡೆದ ದ್ವಂದ್ವಯುದ್ಧದಂತೆಯೇ ನಡೆಯುತ್ತಿದ್ದಿತು.

ಮತ್ತೊಂದು ವಿಭಾಗದಲ್ಲಿ ಭೀಮನು ಗಜಸೇನೆಯೊಡನೆ ಯುದ್ಧ

ಮಾಡುತ್ತಿದ್ದನು. ದೊಡ್ಡ-ದೊಡ್ಡ ಪರ್ವತಗಳನ್ನು ಸೀಳಿಹಾಕುತ್ತಿದ್ದ ವಜ್ರ ಪಾಣಿಯಾದ ಇಂದ್ರನಂತೆ–ಭೀಮಸೇನನು ಗಜಸೈನ್ಯದೊಡನೆ ಮಾಡುತ್ತಿದ್ದ ಯುದ್ಧವು ಬಹಳ ಶೋಭಾಯಮಾನವಾಗಿ ಕಾಣುತ್ತಿದ್ದಿತು. ಭೀಮನಿಂದ ವಧಿಸಲ್ಪಡುತ್ತಿದ್ದ ಪರ್ವತಸದೃಶವಾದ ಆನೆಗಳು ಚೀತ್ಕಾರಗಳಿಂದ ಭೂಮಿ ಯಲ್ಲಿ ಪ್ರತಿಧ್ವನಿಯನ್ನುಂಟುಮಾಡುತ್ತಾ ಕೆಳಗೆ ಬೀಳುತ್ತಿದ್ದುವು. ದೊಡ್ಡದಾದ ಇದ್ದಲಿನ (ಕಾಡಿಗೆಯ) ರಾಶಿಯಂತೆಯೇ ಕಾಣುತ್ತಿದ್ದ, ಪರ್ವತಾಕಾರವಾಗಿದ್ದ ಆ ಆನೆಗಳು ಭೂಮಿಯ ಮೇಲೆ ಬಿದ್ದು ರಣರಂಗವು ಪರ್ವತಗಳಿಂದ ವ್ಯಾಪ್ತವಾಗಿರುವುದೋ ಎಂಬಂತೆ ಕಾಣುತ್ತಿದ್ದಿತು. ಮತ್ತೊಂದು ವಿಭಾಗದಲ್ಲಿ ಮಹಾಧನುಷ್ಮಂತನಾದ ಯುಧಿಷ್ಠಿರನು ದೊಡ್ಡ ಸೈನ್ಯದಿಂದ ರಕ್ಷಿತನಾಗಿದ್ದ ಮದ್ರರಾಜನನ್ನು ನಿಶಿತವಾದ ಬಾಣಗಳಿಂದ ಪೀಡಿಸಿದನು. ಅದರಿಂದ ಕ್ರುದ್ಧ ನಾದ ಮದ್ರೇಶ್ವರನು ಭೀಷ್ಮನ ಸಲುವಾಗಿ ಮಹಾರಥನಾದ ಧರ್ಮಪುತ್ರ ನನ್ನು ನಿಶಿತವಾದ ಬಾಣಗಳಿಂದ ಬಾಧೆಪಡಿಸಿದನು. ಮತ್ತೊಂದು ಕಡೆ ಜಯ ದ್ರಥನು ವಿರಾಟನನ್ನು ಸನ್ನತಪರ್ವಗಳಿದ್ದ ಒಂಬತ್ತು ಬಾಣಗಳಿಂದ ಪ್ರಹರಿಸಿ ಪುನಃ ತೀಕ್ಷ್ಣವಾದ ಮೂವತ್ತು ಬಾಣಗಳಿಂದ ಪ್ರಹರಿಸಿದನು. ವಾಹಿನೀಪತಿ ಯಾದ ವಿರಾಟನೂ ಸಹ ಸೈಂಧವನನ್ನು ನಿಶಿತವಾದ ಮೂವತ್ತು ಬಾಣ ಗಳಿಂದ ವಕ್ಷಃಸ್ಥಲದಲ್ಲಿ ಪ್ರಹರಿಸಿದನು. ಚಿತ್ರಿತವಾದ ಧನುಸ್ಸುಗಳನ್ನೂ, ಚಿತ್ರಿತ ವಾದ ಕತ್ತಿಗಳನ್ನೂ ಚಿತ್ರಿತವಾದ ಕವಚಗಳನ್ನೂ, ಆಯುಧಗಳನ್ನೂ ಮತ್ತು ಧ್ವಜಗಳನ್ನೂ ಹೊಂದಿದ್ದ ಮತ್ಸ್ಯ–ಸೈಂಧವರು ಯುದ್ಧವು ನಡೆಯುತ್ತಿದ್ದ ಆ ಸಮಯದಲ್ಲಿ ಬಹಳವಾಗಿ ಶೋಭಿಸಿದರು. ಮತ್ತೊಂದು ಕಡೆಯಲ್ಲಿ ದ್ರೋಣರು ಧೃಷ್ಟದ್ಯುಮ್ನನ ಜೊತೆಯಲ್ಲಿ ಯುದ್ಧಕ್ಕೆ ತೊಡಗಿ ಸನ್ನತಪರ್ವ ಗಳಾದ ಬಾಣಗಳಿಂದ ಭೀಕರಯುದ್ಧವನ್ನು ಮಾಡಿದರು. ಅನಂತರ ದ್ರೋಣರು ಪಾರ್ಷತನ ದೊಡ್ಡದಾಗಿದ್ದ ಧನುಸ್ಸನ್ನು ಕತ್ತರಿಸಿ, ಐವತ್ತು ಬಾಣಗಳಿಂದ ಅವನನ್ನು ಪ್ರಹರಿಸಿದರು. ಶತ್ರುವೀರರನ್ನು ಸಂಹರಿಸುವ ಪಾರ್ಷತನು ಒಡನೆಯೇ ಬೇರೊಂದು ಧನುಸ್ಸನ್ನು ತೆಗೆದುಕೊಂಡು ದ್ರೋಣರು ನೋಡುತ್ತಿದ್ದಂತೆಯೇ ಅನೇಕಬಾಣಗಳನ್ನು ಅವರ ಮೇಲೆ ಪ್ರಯೋಗಿಸಿದನು. ಧೃಷ್ಟದ್ಯುಮ್ನನು ಬಿಟ್ಟ ಬಾಣಗಳೆಲ್ಲವನ್ನೂ ಮಹಾರಥ ರಾದ ದ್ರೋಣರು ಪ್ರತಿಬಾಣಗಳಿಂದ ಕತ್ತರಿಸಿ ಪುನಃ ಧೃಷ್ಟದ್ಯುಮ್ನ ನನ್ನು ಐದು ಬಾಣಗಳಿಂದ ಪ್ರಹರಿಸಿದರು. ಅದರಿಂದ ಕ್ರುದ್ಧನಾದ ಪರ

ವೀರಹಂತೃವಾದ ಪಾರ್ಷತನು ಯಮದಂಡೋಪಮವಾದ ಗದೆಯನ್ನು ದ್ರೋಣರ ಮೇಲೆ ರಭಸದಿಂದ ಬೀಸಿ ಎಸೆದನು. ತಮ್ಮ ಮೇಲೆ ಬೀಳುವುದರಲ್ಲಿದ್ದ ಚಿನ್ನದ ಪಟ್ಟಿಯಿಂದ ಸುಶೋಭಿತವಾಗಿದ್ದ ಆ ಗದೆಯನ್ನು ದ್ರೋಣರು ಐವತ್ತು ಬಾಣಗಳಿಂದ ನಿರಸನಗೊಳಿಸಿದರು. ದ್ರೋಣರ ಚಾಪದಿಂದ ಮುಕ್ತವಾದ ಐವತ್ತು ಬಾಣಗಳಿಂದ ಕತ್ತರಿಸಲ್ಪಟ್ಟ ಆ ಗದೆಯು ಅನೇಕ ಚೂರುಗಳಾಗಿ ರಣಾಂಗಣದ ಸುತ್ತಲೂ ಬಿದ್ದಿತು. ಶತ್ರುತಾಪನನಾದ ಪಾರ್ಷತನು ತನ್ನ ಗದೆಯು ಚೂರ್ಣೀಕೃತವಾದುದನ್ನು ಕಂಡು ಸಂಪೂರ್ಣವಾಗಿ ಲೋಹದಿಂದಲೇ ಮಾಡಿದ್ದ ಶಕ್ತ್ಯಾಯುಧವನ್ನು ದ್ರೋಣರ ಮೇಲೆ ರಭಸದಿಂದ ಎಸೆದನು. ದ್ರೋಣರು ಒಂಬತ್ತು ಬಾಣಗಳಿಂದ ಆ ಶಕ್ತ್ಯಾಯುಧವನ್ನೂ ಕತ್ತರಿಸಿ ಪುನಃ ಮಹಾಧನುಷ್ಮಂತನಾದ ಧೃಷ್ಟದ್ಯುಮ್ನನನ್ನು ಹಲವಾರು ಬಾಣಗಳಿಂದ ಪೀಡಿಸಿದರು. ಈ ರೀತಿಯಲ್ಲಿ ಭೀಷ್ಮನ ಸಲುವಾಗಿ ದ್ರೋಣ-ಪಾರ್ಷತರಿಗೆ ಘೋರರೂಪವೂ, ಭಯಂಕರವೂ ಆದ ಯುದ್ಧವು ನಡೆಯುತ್ತಿದ್ದಿತು. ಅರ್ಜುನನು, ಭೀಷ್ಮನು ಯುದ್ಧಮಾಡುತ್ತಿದ್ದ ಸ್ಥಳವನ್ನು ತಲುಪಿ ಸ್ವಲ್ಪ ದೂರದಲ್ಲಿದ್ದಾಗಲೇ ಭೀಷ್ಮನನ್ನು ನಿಶಿತವಾದ ಬಾಣಗಳಿಂದ ಪೀಡಿಸುತ್ತಾ–ಅರಣ್ಯದಲ್ಲಿ ಒಂದು ಸಲಗವು ಮತ್ತೊಂದು ಸಲಗವನ್ನು ಕಂಡೊಡನೆಯೇ ರಭಸದಿಂದ ಮೇಲೆ ಬೀಳಲು ಬರುವಂತೆ–ಭೀಷ್ಮನ ಸಮೀಪಕ್ಕೆ ಧಾವಿಸಿದನು. ಆ ಸಮಯಕ್ಕೆ ಸರಿಯಾಗಿ ಗಂಡಸ್ಥಳದ ಮೂರು ಕಡೆಗಳಿಂದ ಮದೋದಕವನ್ನು ಸುರಿಸುತ್ತಿದ್ದ ಮದದಿಂದ ಕೊಬ್ಬಿದ ಆನೆಯ ಮೇಲೆ ಕುಳಿತು ಮಹಾಬಲನಾದ, ಪ್ರತಾಪವಂತನಾದ ಭಗದತ್ತನು ಭೀಷ್ಮನ ಕಡೆಗೆ ನುಗ್ಗುತ್ತಿದ್ದ ಅರ್ಜುನನನ್ನು ಆಕ್ರಮಿಸಿದನು. ಮಹೇಂದ್ರನ ಆನೆಯಾದ ಐರಾವತಕ್ಕೆ ಸದೃಶವಾಗಿದ್ದ ಭಗದತ್ತನ ಆನೆಯು ತನ್ನ ಮೇಲೆ ಬೀಳಲಿರುವುದನ್ನು ಕಂಡು ಬೀಭತ್ಸುವು ವಿಶೇಷಪ್ರಯತ್ನದಿಂದ ಅದನ್ನು ಎದುರಿಸಿ ನಿಂತನು. ಬಳಿಕ ಮಹಾಗಜದ ಮೇಲಿದ್ದ ಪ್ರತಾಪವಂತನಾದ ಭಗದತ್ತನು ಅರ್ಜುನನನ್ನು ಬಾಣಗಳ ಮಳೆಗರೆಯುವಿಕೆಯಿಂದ ತಡೆದನು. ಅರ್ಜುನನು ತನ್ನ ಸಮೀಪಕ್ಕೇ ಬರುತ್ತಿದ್ದ ಆನೆಯನ್ನು ಬೆಳ್ಳಿಯಂತೆ ಬಿಳುಪಾಗಿಯೂ, ವಿಮಲವಾಗಿಯೂ, ಲೋಹಮಯವಾಗಿಯೂ, ತೀಕ್ಷ್ಣವಾಗಿಯೂ ಇದ್ದ ಬಾಣಗಳಿಂದ ಪ್ರಹರಿಸಿದನು. ಆನೆಯ ರಭಸವು ಸ್ವಲ್ಪ ಕುಂಠಿತವಾಗಲಾಗಿ ಅರ್ಜುನನು ಸ್ವಲ್ಪ ದೂರದಲ್ಲಿದ್ದ ಶಿಖಂಡಿಯನ್ನು ಕುರಿತು

ಹೇಳಿದನು : “ದ್ರುಪದಪುತ್ರ! ಬೇಗ ಬಾ. ಭೀಷ್ಮನ ಸಮೀಪಕ್ಕೆ ಹೋಗು. ಅವನನ್ನು ಕೂಡಲೇ ಸಂಹರಿಸು.”

ಆ ವೇಳೆಗೆ ಭಗದತ್ತನೂ ಅರ್ಜುನನನ್ನು ಬಿಟ್ಟು ಅವಸರದಿಂದ ದ್ರುಪದನ ರಥವಿದ್ದ ಕಡೆಗೆ ಹೊರಟುಹೋದನು. ಅನಂತರ ಅರ್ಜುನನು ಶಿಖಂಡಿಯನ್ನು ಮುಂದೆಮಾಡಿಕೊಂಡು ಭೀಷ್ಮನ ರಥದ ಸಮೀಪಕ್ಕೆ ಬಹಳ ಶೀಘ್ರವಾಗಿ ಹೊರಟುಹೋದನು. ಪುನಃ ಘೋರವಾದ ಯುದ್ಧವು ಪ್ರಾರಂಭವಾಯಿತು. ಅನಂತರ ನಿನ್ನ ಕಡೆಯ ಯೋಧರೆಲ್ಲರೂ ‘ವೇಗಯುಕ್ತನಾದ ಪಾಂಡವನನ್ನು ಪಾರ್ಥನನ್ನು ತಡೆಯಿರಿ ; ಪ್ರಹರಿಸಿರಿ’ ಮುಂತಾಗಿ ಕೂಗಿಕೊಳ್ಳುತ್ತಾ ಆಕ್ರಮಿಸಿದರು. ಅದು ಅದ್ಭುತವಾಗಿ ಕಂಡಿತು. ಆಕಾಶದಲ್ಲಿರುವ ಮೋಡಗಳನ್ನು ಗಾಳಿಯು ಚದುರಿಸಿಬಿಡುವಂತೆ–ಅರ್ಜುನನು ನಿನ್ನ ಕಡೆಯ ವಿವಿಧ ಸೈನ್ಯಗಳನ್ನು ವಿನಾಶಗೊಳಿಸಿದನು. ಶಿಖಂಡಿಯು ಭರತರ ಪಿತಾಮಹ ನಾದ ಭೀಷ್ಮನನ್ನು ಎದುರಿಸಿ ನಿಂತು ಏಕಾಗ್ರಚಿತ್ತನಾಗಿ ಅನೇಕ ಬಾಣಗಳಿಂದ ಅವನನ್ನು ಮುಚ್ಚಿಬಿಟ್ಟನು. ಪಾರ್ಥನನ್ನು ಅನುಸರಿಸಿ ಬಂದಿದ್ದ ಸೋಮಕರೆಲ್ಲರನ್ನೂ ಭೀಷ್ಮನು ಯುದ್ಧದಲ್ಲಿ ಸಂಹರಿಸಿದನು. ಮಹಾರಥನಾದ ಭೀಷ್ಮನು ಹೀಗೆ ಪಾಂಡವರ ಸೈನ್ಯವನ್ನೇ ಹಿಂದಕ್ಕಟ್ಟಿಬಿಟ್ಟನು. ಭೀಷ್ಮನ ರಥವೇ ಅಗ್ನಿಶಾಲೆಯಾಗಿದ್ದಿತು. ಧನುಸ್ಸೇ ಅಗ್ನಿಯ ಜ್ವಾಲೆಯಾಗಿದ್ದಿತು. ಖಡ್ಗ, ಶಕ್ತಿ ಮತ್ತು ಗದೆಗಳೇ ಇಂಧನಪ್ರಾಯಗಳಾಗಿದ್ದುವು. ಬಾಣಗಳ ಸಮೂಹಗಳೇ ಯಜ್ಞೇಶ್ವರನ ಮಹಾಜ್ವಾಲೆಗಳಂತಿದ್ದುವು. ಅಂತಹ ಸಮರಾಗ್ನಿಯಲ್ಲಿ ಭೀಷ್ಮನು ಕ್ಷತ್ರಿಯರೆಲ್ಲರನ್ನೂ ದಹಿಸಿಬಿಟ್ಟನು.

ಯಾವ ರೀತಿಯಲ್ಲಿ ಬೆಂಕಿಯು ಗಾಳಿಯ ಸಹಯೋಗದಿಂದ ಹುಲ್ಲಿನ ಮೆದೆಯಲ್ಲಿ ಮತ್ತು ಅರಣ್ಯದಲ್ಲಿ ಪ್ರಜ್ವಲಿಸಿ ಜಾಜ್ವಲ್ಯಮಾನವಾಗಿ ಉರಿಯು ತ್ತದೆಯೋ–ಅದೇ ರೀತಿಯಲ್ಲಿ ಭೀಷ್ಮನು ವೀರಕ್ಷತ್ರಿಯಯೋಧರ ಮೇಲೆ ದಿವ್ಯಾಸ್ತ್ರಗಳನ್ನು ಪ್ರಯೋಗಮಾಡುತ್ತಾ ಪ್ರಜ್ವಲಿಸಿದನು. ಸನ್ನತಪರ್ವಗಳಾದ, ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿದ್ದ ನಿಶಿತವಾದ ಬಾಣಗಳ ಸತತಪ್ರಹಾರದಿಂದ ಉದ್ಭೂತವಾದ ಶಬ್ದದಿಂದ, ದಿಕ್ಕುಗಳನ್ನೂ ಮತ್ತು ಉಪದಿಕ್ಕುಗಳನ್ನೂ ತುಂಬಿಬಿಟ್ಟನು. ಭೀಷ್ಮನು ರಥಿಗಳನ್ನು ಹೊಡೆದುರುಳಿ ಸುತ್ತಾ ಕುದುರೆಗಳೊಡನೆ ಸವಾರರನ್ನು (ಸಾರಥಿಗಳನ್ನು ) ಸಂಹರಿಸಿ ಕೆಳಕ್ಕೆ

ಕೆಡುವುತ್ತಾ , ರಥಗಳ ಸಮೂಹವನ್ನು ಬೋಳಾದ ತಾಳೆಯ ಮರಗಳುಳ್ಳ ಅರಣ್ಯದಂತೆ ಮಾಡಿಬಿಟ್ಟನು. ಸರ್ವಶಸ್ತ್ರಗಳನ್ನು ಹೊಂದಿರುವವರಲ್ಲಿ ಶ್ರೇಷ್ಠನಾದ ಭೀಷ್ಮನು ರಥ-ಗಜಾಶ್ವಗಳನ್ನು ಮನುಷ್ಯರಿಂದ ವಿಹೀನವನ್ನಾಗಿ ಮಾಡಿಬಿಟ್ಟನು. ಸಿಡಿಲಿನ ಛಟ-ಛಟಾರ್ ಶಬ್ದದಂತೆ ಬಹುಭಯಂಕರವಾಗಿರುತ್ತಿದ್ದ ಅವನ ಧನುಸ್ಸಿನ ಶಿಂಜಿನಿಯ ಟೇಂಕಾರಶಬ್ದವನ್ನು ಕೇಳಿ ಎಲ್ಲ ಕಡೆಗಳಲ್ಲಿಯೂ ಇದ್ದ ಸೈನಿಕರು ಭಯದಿಂದ ನಡುಗಿದರು. ಮನುಜೇಶ್ವರ! ನಿನ್ನ ತಂದೆಯಾದ ಭೀಷ್ಮನು ಬಿಡುತ್ತಿದ್ದ ಬಾಣಗಳು ಯಾವಾಗಲೂ ವ್ಯರ್ಥವಾಗುತ್ತಿರಲಿಲ್ಲ. ಭೀಷ್ಮನ ಧನುಸ್ಸಿನಿಂದ ಚ್ಯುತವಾದ ಬಾಣಗಳು ಶತ್ರುಗಳ ಶರೀರಗಳಲ್ಲಿ ನಾಟಿಕೊಳ್ಳದೇ ಇರುತ್ತಿರಲಿಲ್ಲ. ರಥಿಕರಿಂದಲೂ, ಸಾರಥಿಗಳಿಂದಲೂ ಹೀನವಾಗಿದ್ದ, ವೇಗವಾಗಿ ಹೋಗತಕ್ಕ ಕುದುರೆಗಳಿಂದ ಯುಕ್ತವಾಗಿದ್ದ ರಥಗಳನ್ನು ಅಲ್ಲಿ ನಾನು ಕಂಡೆನು. ನಿಯಂತ್ರಕರೇ ಇಲ್ಲದಿದ್ದ ಆ ಕುದುರೆಗಳು ರಥವನ್ನು ಎಳೆದುಕೊಂಡು ಗೊತ್ತುಗುರಿಯಿಲ್ಲದೇ ವಾಯುವೇಗದಿಂದ ಹೋಗುತ್ತಿದ್ದುದನ್ನು ನೋಡಿದೆನು. ಮಹಾರಥರೆಂದು ಪ್ರಸಿದ್ಧರಾಗಿದ್ದ, ಸತ್ಕುಲಪ್ರಸೂತರಾದ, ಪ್ರಾಣಗಳನ್ನೇ ಒತ್ತೆಯಾಗಿಟ್ಟು ಯುದ್ಧಮಾಡುತ್ತಿದ್ದ, ಯುದ್ಧದಲ್ಲಿ ಹಿಂದಿರುಗದೇ ಇದ್ದ, ಸುವರ್ಣಮಯವಾದ ಧ್ವಜಗಳನ್ನು ಹೊಂದಿದ್ದ, ಶೂರರಾದ ಹದಿನಾಲ್ಕು ಸಾವಿರ ಚೇದಿ-ಕಾಶಿ-ಕರೂಷ ಯೋಧರು, ಅಶ್ವ-ರಥ-ಗಜಸೈನ್ಯಗಳೊಡನೆ ಬಾಯ್ದೆರೆದ ಕಾಲಪುರುಷನಂತೆಯೇ ಇದ್ದ ಭೀಷ್ಮನನ್ನು ಎದುರಿಸಿ ಅವನಿಂದ ಹತರಾಗಿ ಪರಲೋಕವನ್ನೈದಿದರು. ಯುದ್ಧದಲ್ಲಿ ಭೀಷ್ಮನನ್ನು ಎದುರಿಸಿದನಂತರವೂ ತನ್ನ ಜೀವಿತದ ರಕ್ಷಣೆಯಲ್ಲಿ ಮನಸ್ಸನ್ನು ಹೊಂದಿದ್ದ ಯಾವನೊಬ್ಬ ಸೋಮಕಮಹಾರಥನೂ ಅಲ್ಲಿರಲಿಲ್ಲ. (ಭೀಷ್ಮನನ್ನು ಎದುರಿಸಿದನಂತರ ಪರಲೋಕಪ್ರಯಾಣದ ಹೊರತಾಗಿ ಯಾವ ಮಹಾರಥನಿಗೂ ಜೀವಸಹಿತವಾಗಿ ಹೊರಬರುವ ಅವಕಾಶವೇ ಇರುತ್ತಿರಲಿಲ್ಲ.) ಭೀಷ್ಮನ ಆ ಭೀಮಪರಾಕ್ರಮವನ್ನು ನೋಡಿದ ಜನರು ಅವನನ್ನೆದುರಿಸುತ್ತಿದ್ದ ಸರ್ವ ಸೈನಿಕರನ್ನೂ ಪ್ರೇತರಾಜನ ಪಟ್ಟಣಕ್ಕೆ ಭೀಷ್ಮನು ಕಳುಹಿಸಿಬಿಟ್ಟನೆಂದೇ ಭಾವಿಸಿದರು. ಆ ಸಮಯದಲ್ಲಿ ಕೃಷ್ಣಸಾರಥಿಯಾದ ಶ್ವೇತಾಶ್ವನಾದ ವೀರನಾದ ಅರ್ಜುನನ ಹೊರತಾಗಿ, ಅರ್ಜುನನ ಬೆಂಬಲವನ್ನು ಸಂಪೂರ್ಣವಾಗಿ ಪಡೆದುಕೊಂಡಿದ್ದ ಅಮಿತೌಜಸ್ಕನಾದ ಪಾಂಚಾಲ್ಯನಾದ

ಶಿಖಂಡಿಯ ಹೊರತಾಗಿ ಮತ್ತಾವ ಮಹಾರಥರೂ ಭೀಷ್ಮನನ್ನು ಎದುರಿಸುವ ಸಾಹಸವನ್ನು ಮಾಡಲಿಲ್ಲ."

೧೧೬ನೆಯ ಅಧ್ಯಾಯವು ಮುಗಿಯಿತು.

೧೧೭ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಎರಡೂ ಪಕ್ಷಗಳ ಸೇನೆಗಳ ಯುದ್ಧ: ದುಃಶಾಸನನ ಪರಾಕ್ರಮ : ಅರ್ಜುನನಿಂದ ಭೀಷ್ಮನು ಭ್ರಾಂತನಾದುದು

ಸಂಜಯನು ಭೀಷ್ಮನ ಯುದ್ಧದ ಪ್ರಕರಣವನ್ನು ಮುಂದುವರಿಸಿ ಹೇಳುತ್ತಾನೆ :

"ಮಹಾರಾಜ! ಶಿಖಂಡಿಯು ಪುರುಷರ್ಷಭನಾದ ಭೀಷ್ಮನನ್ನು ಎದುರಿಸಿ ನಿಶಿತವಾದ ಹತ್ತು ಭಲ್ಲಗಳಿಂದ ಭೀಷ್ಮನ ವಕ್ಷಃಸ್ಥಲವನ್ನು ಪ್ರಹರಿಸಿದನು. ಕೇವಲ ಕಟಾಕ್ಷವೀಕ್ಷಣದಿಂದಲೇ ಭಸ್ಮಮಾಡಿಬಿಡುವನೋ ಎಂಬಂತೆ ಗಾಂಗೇಯನು ಶಿಖಂಡಿಯನ್ನು ಕ್ರೋಧದಿಂದ ಉದ್ದೀಪ್ತವಾದ ಕಣ್ಣುಗಳಿಂದ ದಿಟ್ಟಿಸಿ ನೋಡಿದನು. ಶಿಖಂಡಿಯು ಹಿಂದೆ ಹೆಂಗಸಾಗಿದ್ದುದನ್ನು ಸ್ಮರಿಸಿ ಭೀಷ್ಮನು ಶಿಖಂಡಿಯು ಪ್ರಹರಿಸಿದುದಕ್ಕೆ ಪ್ರತಿಯಾಗಿ ಪ್ರಹರಿಸಲಿಲ್ಲ. ಇದು ಎಲ್ಲರಿಗೂ ತಿಳಿದ ವಿಷಯವೇ ಆಗಿದ್ದಿತು. ಆದರೆ ಶಿಖಂಡಿಯು ಮಾತ್ರ ಆ ವಿಷಯವನ್ನು ತಿಳಿದುಕೊಳ್ಳಲಿಲ್ಲ. (ತಾನು ಬಾಣಪ್ರಯೋಗಮಾಡಿದರೂ ಭೀಷ್ಮನು ತನ್ನನ್ನು ಪ್ರಹರಿಸದೇ ಇದ್ದುದು ಅವನಿಗೆ ಒಂದು ಸಮಸ್ಯೆಯೇ ಆಗಿತ್ತು.) ಅದೇ ಸಮಯದಲ್ಲಿ ಅರ್ಜುನನು ಶಿಖಂಡಿಯನ್ನು 'ಬೇಗ ಮುಂದೆ ಹೋಗು, ಪಿತಾಮಹನನ್ನು ಸಂಹರಿಸು' ಎಂದು ಪ್ರಚೋದಿಸುತ್ತಲೇ ಇದ್ದನು.

**ಕಿಂ ತೇ ವಿವಕ್ಷಯಾ ವೀರ ಜಹಿ ಭೀಷ್ಮಂ ಮಹಾರಥಮ್ ।**
**ನ ಹ್ಯನ್ಯಮನುಪಶ್ಯಾಮಿ ಕಂಚಿದ್ಯೌಧಿಷ್ಠಿರೇ ಬಲೇ ॥೫॥**

**ಯಃ ಶಕ್ತಃ ಸಮರೇ ಭೀಷ್ಮಂ ಪ್ರತಿಯೋದ್ಧುಮಿಹಾಹವೇ ।**
**ಋತೇ ತ್ವಾಂ ಪುರುಷವ್ಯಾಘ್ರ ಸತ್ಯಮೇತದ್ಬ್ರವೀಮಿ ತೇ ॥೬॥**

"ಭೀಷ್ಮನು ನೀನು ಬಿಟ್ಟ ಬಾಣಕ್ಕೆ ಪ್ರತಿಯಾಗಿ ಬಾಣವನ್ನು ಬಿಡದೇ ಇರುವುದನ್ನು ಕುರಿತು ವಿವೇಚಿಸಬೇಕಾದ ಕಾರಣವಿಲ್ಲ. ಅವನು ನಿನ್ನನ್ನು

ಪ್ರಹರಿಸಲಿ–ಅಥವಾ ಬಿಡಲಿ–ಅದರಿಂದ ನಿನಗೇನಾಗಬೇಕಾಗಿದೆ? ಮಹಾರಥನಾದ ಭೀಷ್ಮನನ್ನು ಕೂಡಲೇ ಸಂಹರಿಸು. ಪುರುಷವ್ಯಾಘ್ರನೇ! ಯುಧಿಷ್ಠಿರನ ಸೈನ್ಯದಲ್ಲಿ ನಿನ್ನೊಬ್ಬನನ್ನು ಬಿಟ್ಟು ಭೀಷ್ಮನನ್ನೆದುರಿಸಿ ಯುದ್ಧಮಾಡಲು ಸಮರ್ಥನಾದ ಯೋಧನನ್ನು ನಾನು ಕಂಡಿಲ್ಲ. ಸತ್ಯವಾದ ವಿಷಯವನ್ನೇ ನಿನಗೆ ಹೇಳುತ್ತಿದ್ದೇನೆ.” ಪಾರ್ಥನು ಹೀಗೆ ಹೇಳಿದೊಡನೆಯೇ ಶಿಖಂಡಿಯು ನಾನಾವಿಧವಾದ ಬಾಣಗಳಿಂದ ಪಿತಾಮಹನನ್ನು ಮುಚ್ಚಿಬಿಟ್ಟನು.



ಮಹಾರಾಜ! ನಿನ್ನ ತಂದೆಯಾದ ದೇವವ್ರತನು ಶಿಖಂಡಿಯು ಬಿಟ್ಟ ಬಾಣ ಗಳನ್ನು ಪರಿಗಣಿಸದೆಯೇ ಕುಪಿತನಾಗಿದ್ದ ಅರ್ಜುನನನ್ನು ನಿಶಿತವಾದ ಬಾಣ ಗಳಿಂದ ತಡೆಹಿಡಿದನು. ಅದೇ ರೀತಿಯಲ್ಲಿ ಮಹಾರಥನಾದ ಭೀಷ್ಮನು ಪಾಂಡವರ ಸೈನಿಕರನ್ನು ತೀಕ್ಷ್ಣವಾದ ಬಾಣಗಳಿಂದ ಪರಲೋಕಕ್ಕೆ ಕಳುಹಿಸಿದನು. ಪಾಂಡವರೂ ಸಹ ದೊಡ್ಡದಾದ ಸೈನ್ಯದಿಂದ ಪರಿವೃತರಾಗಿ ಮೇಘಗಳು ಸೂರ್ಯನನ್ನು ಮುಚ್ಚಿಬಿಡುವಂತೆ–ತಮ್ಮ ಅಪಾರವಾದ ಬಾಣಗಳಿಂದ ಭೀಷ್ಮನನ್ನು ಮುಚ್ಚಿಬಿಟ್ಟರು. ಶತ್ರುಸೈನ್ಯದಿಂದ ಆಕ್ರಮಿತನಾಗಿದ್ದ ಭೀಷ್ಮನು ಅರಣ್ಯದಲ್ಲಿನ ದಾವಾಗ್ನಿಯಂತೆ ಪ್ರಜ್ವಲಿಸುತ್ತಾ ಶತ್ರುಪಕ್ಷದ ಶೂರಯೋಧರನ್ನು ಭಸ್ಮಮಾಡಿದನು. ಆ ಸಂದರ್ಭದಲ್ಲಿ ನಿನ್ನ ಮಗನಾದ ದುಃಶಾಸನನ ಅದ್ಭುತಪರಾಕ್ರಮವನ್ನು ನಾವು ಕಂಡೆವು. ಅವನು ಪಾರ್ಥನೊಡನೆಯೂ

ಯುದ್ಧಮಾಡುತ್ತಿದ್ದನು. ಪಿತಾಮಹನನ್ನೂ ರಕ್ಷಿಸುತ್ತಿದ್ದನು. ಧನ್ವಿಯಾದ ನಿನ್ನ ಮಗನ ಆ ಅದ್ಭುತಕರ್ಮದಿಂದ ಎಲ್ಲ ಜನರೂ ಸಂತೋಷಗೊಂಡರು. ಒಬ್ಬನೇ ಒಬ್ಬ ದುಃಶಾಸನನು ಅರ್ಜುನಸಹಿತರಾದ ಪಾಂಡವರನ್ನು ಎದುರಿಸಿ ಯುದ್ಧಮಾಡುತ್ತಿದ್ದನು. ಪ್ರಚಂಡಪರಾಕ್ರಮಿಯಾಗಿದ್ದ ದುಃಶಾಸನನನ್ನು ಪಾಂಡವರೂ ಕೂಡ ತಡೆಯಲು ಸಮರ್ಥರಾಗಲಿಲ್ಲ. ದುಃಶಾಸನನಿಂದ ಶತ್ರುಪಕ್ಷದ ರಥಿಕರು ರಥಹೀನರಾಗಿ ಮಾಡಲ್ಪಟ್ಟರು. ಅವನ ತೀಕ್ಷ್ಣವಾದ ಬಾಣಗಳ ಸತತಪ್ರಹಾರದಿಂದ ಮಹಾಧನುಷ್ಮಂತರಾದ ಕುದುರೆಸವಾರರೂ, ಮಹಾಬಲಿಷ್ಠರಾದ ಗಜಯೋಧರೂ ವಿದೀರ್ಣರಾಗಿ ಭೂಮಿಯ ಮೇಲೆ ಬಿದ್ದರು.

ಬಾಣಗಳ ಆಘಾತಗಳಿಂದ ವೇದನೆಯನ್ನನುಭವಿಸುತ್ತಿದ್ದ ಮತ್ತೆ ಕೆಲವು ಆನೆಗಳು ದಿಕ್ಕು-ದಿಕ್ಕಿಗೆ ಓಡಿಹೋದುವು. ಯಾವ ರೀತಿಯಲ್ಲಿ ಕಟ್ಟಿಗೆಯಲ್ಲಿ ವ್ಯಾಪಿಸಿದ ಅಗ್ನಿಯು ಕ್ರಮೇಣ ವೃದ್ಧಿಹೊಂದಿ ಪ್ರದೀಪ್ತವಾದ ಜ್ವಾಲೆಗಳಿಂದ ಪ್ರಜ್ವಲಿಸುತ್ತದೆಯೋ–ಅದೇ ರೀತಿಯಲ್ಲಿ ಪಾಂಡವರ ಸೈನ್ಯವನ್ನು ಸುಟ್ಟು ಹಾಕುತ್ತಿದ್ದ ನಿನ್ನ ಮಗನು ಪ್ರಜ್ವಲಿಸಿದನು. ಮಹೇಂದ್ರನ ಮಗನಾದ ಶ್ವೇತಾಶ್ವನಾದ, ಕೃಷ್ಣಸಾರಥಿಯಾದ ಅರ್ಜುನನನ್ನು ಬಿಟ್ಟು ಪಾಂಡವರ ಸೈನ್ಯದಲ್ಲಿ ಬೇರೆ ಯಾವ ಮಹಾರಥನೂ ಭರತವಂಶೀಯನಾದ, ಮಹಾಬಲಿಷ್ಠನಾದ, ದುಃಶಾಸನನನ್ನು ಜಯಿಸುವುದಕ್ಕಾಗಲೀ ಅಥವಾ ಅವನನ್ನು ಎದುರಿಸಿ ಯುದ್ಧಮಾಡುವುದಕ್ಕಾಗಲೀ ಉತ್ಸುಕರಾಗಿರಲಿಲ್ಲ. ಅಷ್ಟು ಪ್ರಬಲನಾದ ದುಃಶಾಸನನನ್ನೂ ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ವಿಜಯನಾಮಕನಾದ ಅರ್ಜುನನು ಪರಾಜಯಗೊಳಿಸಿ ಒಡನೆಯೇ ಭೀಷ್ಮನನ್ನು ಆಕ್ರಮಿಸಿದನು. ಮದೋನ್ಮತ್ತನಾದ ನಿನ್ನ ಮಗನು ಅರ್ಜುನನಿಂದ ನಿರ್ಜಿತನಾದರೂ ದಣಿವಾರಿಸಿಕೊಂಡು ಭೀಷ್ಮನ ಬಾಹುಗಳ ಆಶ್ರಯವನ್ನು ಪಡೆದು ಪುನಃ-ಪುನಃ ಪಾಂಡವರೊಡನೆ ಯುದ್ಧಮಾಡುತ್ತಲೇ ಇದ್ದನು. ಅರ್ಜುನನಾದರೋ ಶತ್ರುಪಕ್ಷದ ಯೋಧರೊಡನೆ ಯುದ್ಧಮಾಡುತ್ತಾ ಬಹುವಾಗಿ ಶೋಭಿಸಿದನು. ಸರ್ಪವಿಷಕ್ಕೆ ಸಮಾನವಾಗಿದ್ದ, ಸಿಡಿಲಿನ ಸ್ಪರ್ಶಕ್ಕೆ ಸಮಾನವಾದ ಘೋರ ಸ್ಪರ್ಶವಿದ್ದ ಬಾಣಗಳಿಂದ ಶಿಖಂಡಿಯು ಪಿತಾಮಹನನ್ನು ಪ್ರಹರಿಸುತ್ತಲೇ

ಇದ್ದನು. ಜನೇಶ್ವರ! ಆದರೆ ಶಿಖಂಡಿಯು ಬಿಡುತ್ತಿದ್ದ ಕ್ರೂರಬಾಣಗಳು ನಿನ್ನ ತಂದೆಗೆ ನೋವನ್ನು ಉಂಟುಮಾಡುತ್ತಿರಲಿಲ್ಲ. ನಸುನಗುತ್ತಲೇ ಗಾಂಗೇಯನು ಅವನ ಬಾಣಗಳನ್ನು ಪ್ರತಿಗ್ರಹಿಸುತ್ತಿದ್ದನು. ಸೆಕೆಯಿಂದ ಪೀಡಿತನಾದ ಮನುಷ್ಯನು ಜಲಧಾರೆಯನ್ನು ಆಶಿಸುವಂತೆ–ಶಿಖಂಡಿಯ ಬಾಣಗಳ ಧಾರೆಯನ್ನು ಭೀಷ್ಮನು ಪರಿಗ್ರಹಿಸಿದನು. ಘೋರರೂಪನಾದ ಭೀಷ್ಮನು ಮಹಾತ್ಮರಾದ ಪಾಂಡವರ ಸೈನ್ಯಗಳನ್ನು ಅವ್ಯಾಹತವಾಗಿ ದಹಿಸುತ್ತಿದ್ದುದನ್ನು ಎಲ್ಲ ಕ್ಷತ್ರಿಯರೂ ನೋಡುತ್ತಿದ್ದರು. ಅನಂತರ ನಿನ್ನ ಮಗನು ಎಲ್ಲ ಸೈನಿಕರನ್ನೂ ಸಂಬೋಧಿಸಿ ಹೇಳಿದನು : "ಯೋಧಸತ್ತಮರೇ! ನೀವು ಸಮರಾಂಗಣದಲ್ಲಿ ಅರ್ಜುನನನ್ನು ಎಲ್ಲ ಕಡೆಗಳಿಂದಲೂ ಆಕ್ರಮಿಸಿರಿ. ಧರ್ಮವಿದನಾದ ಭೀಷ್ಮನು ನಿಮ್ಮನ್ನು ರಕ್ಷಿಸುತ್ತಾನೆ. ಆದುದರಿಂದ ನೀವೆಲ್ಲರೂ ಭಯವನ್ನು ಪೂರ್ಣವಾಗಿ ತ್ಯಜಿಸಿ ಪಾಂಡವರೊಡನೆ ಯುದ್ಧಮಾಡಿರಿ. ಸುವರ್ಣಮಯವಾದ ತಾಲಧ್ವಜದಿಂದ ಕೂಡಿರುವ ಭೀಷ್ಮನು ಧೃತರಾಷ್ಟ್ರನ ಮಕ್ಕಳೆಲ್ಲರಿಗೂ ಸುಖದಾಯಕನೂ, ಕವಚಪ್ರಾಯನೂ, ರಕ್ಷಕನೂ ಆಗಿರುತ್ತಾನೆ. ಮರಣಧರ್ಮವಿಲ್ಲದ ದೇವತೆಗಳೂ ಸಹ ಪ್ರಯತ್ನಪೂರ್ವಕವಾಗಿ ಭೀಷ್ಮನನ್ನೆದುರಿಸಿ ಯುದ್ಧಮಾಡಲು ಸಮರ್ಥರಲ್ಲ. ಹೀಗಿರುವಾಗ ಮಹಾಬಲಿಷ್ಠರಾದರೂ ಮರಣಧರ್ಮವಿರುವ ಪಾಂಡವರು ಭೀಷ್ಮನನ್ನು ಹೇಗೆ ತಾನೇ ಎದುರಿಸಿ ಯುದ್ಧಮಾಡಬಲ್ಲರು? ಆದುದರಿಂದ ಅರ್ಜುನನೊಡನೆ ಯುದ್ಧವು ಸನ್ನಿಹಿತವಾದಾಗ ಪಲಾಯನಮಾಡಬೇಡಿರಿ. ನಾನೀಗ ವಸುಧಾಧಿಪತಿಗಳಾದ, ಪ್ರಯತ್ನಶೀಲರಾದ ನಿಮ್ಮೊಡನೆ ಸೇರಿಕೊಂಡು ಪಾಂಡವನೊಡನೆ ಅವಧಾನಪೂರ್ವಕವಾಗಿ ಯುದ್ಧಮಾಡುತ್ತೇನೆ."

ಮಹಾರಾಜ! ಧೀಮಂತನಾದ ನಿನ್ನ ಮಗನು ಹೇಳಿದ ಮಾತುಗಳನ್ನು ಕೇಳಿ ಧನುಷ್ಮಂತರಾದ ಮತ್ತು ಬಲಿಷ್ಠರಾದ ಎಲ್ಲ ಯೋಧರೂ ಕ್ರೋಧಾಭಿಭೂತರಾದರು. ವಿದೇಹರು, ಕಲಿಂಗರು, ದಾಸೇರಕರು, ನಿಷಾದರು, ಸೌವೀರರು, ಬಾಹ್ಲೀಕರು, ದರದರು, ಪಾಶ್ಚಾತ್ಯರು, ಔತ್ತರೇಯರು, ಮಾಲವರು, ಅಭೀಷಾಹರು, ಶೂರಸೇನರು, ಶಿಬಿಗಳು, ವಸಾತಿಗಳು, ಶಾಲ್ವರು, ಶಕರು, ತ್ರಿಗರ್ತರು, ಅಂಬಷ್ಠರು, ಕೇಕಯರು–ಇವರೆಲ್ಲರೂ ಪತಂಗದ ಹುಳುಗಳು

ಬೆಂಕಿಯನ್ನು ಮುತ್ತಿಕೊಳ್ಳುವಂತೆ–ಅರ್ಜುನನನ್ನು ಆಕ್ರಮಿಸಿದರು. ಅಪ್ರತಿಮಸಾಹಸಿಯಾದ ಪಾರ್ಥನನ್ನು ಶಲಭಗಳಂತೆ ಆಕ್ರಮಿಸಿದ ಸೇನಾ ಸಮೇತರಾದ ಮಹಾರಥರನ್ನು, ಮಹಾಬಲನಾದ ಧನಂಜಯನು ದಿವ್ಯಾಸ್ತ್ರ ಗಳನ್ನು ಸ್ಮರಿಸಿ ಧನುಸ್ಸಿನಲ್ಲಿ ಅನುಸಂಧಾನಮಾಡಿ ಮಹಾವೇಗಯುಕ್ತವಾಗಿದ್ದ ಆ ಮಹಾಸ್ತ್ರಗಳಿಂದಲೂ ಮತ್ತು ಬಾಣಗಳೆಂಬ ಜ್ವಾಲೆಗಳಿಂದಲೂ–ಅಗ್ನಿಯು ಪತಂಗದ ಹುಳುಗಳನ್ನು ನಾಶಪಡಿಸುವಂತೆ–ನಾಶಪಡಿಸಿದನು. ಸಾವಿರಾರು ಬಾಣಗಳನ್ನು ಸೃಷ್ಟಿಸುತ್ತಿದ್ದ ದೃಢಧನ್ವನಾದ ಅರ್ಜುನನ ಗಾಂಡೀವವು ಆಕಾಶ ದಲ್ಲಿ ದೇದೀಪ್ಯಮಾನವಾಗಿರುವಂತೆ ಕಾಣುತ್ತಿದ್ದಿತು. ಅರ್ಜುನನೊಡನೆ ಯುದ್ಧಮಾಡುತ್ತಿದ್ದ ರಾಜರು ಅವನ ಬಾಣಗಳಿಂದ ಬಹಳ ಪೀಡಿತರಾಗಿ ದ್ದರು. ಅವರ ರಥದ ಧ್ವಜಗಳೆಲ್ಲವೂ ಹರಿದು ಚೂರಾಗಿ ರಣಾಂಗಣದ ಸುತ್ತಲೂ ಬಿದ್ದಿದ್ದುವು. ಅವರೆಲ್ಲರೂ ಒಟ್ಟಾಗಿ ಸೇರಿದರೂ ಸಹ ಅವರಿಂದ ಅರ್ಜುನನನ್ನು ಎದುರಿಸಿ ಯುದ್ಧಮಾಡಲು ಸಾಧ್ಯವಾಗಲಿಲ್ಲ. ಕಿರೀಟಿಯ ಬಾಣಗಳಿಂದ ಪೀಡಿತರಾದ ರಥಿಗಳು ತಮ್ಮ ರಥಗಳ ಧ್ವಜಗಳೊಡನೆ ಕೆಳಕ್ಕೆ ಬೀಳುತ್ತಿದ್ದರು. ಅಶ್ವಾರೋಹಿಗಳು ತಾವು ಕುಳಿತಿದ್ದ ಕುದುರೆಗಳೊಡನೆ ಕೆಳಕ್ಕೆ ಬೀಳುತ್ತಿದ್ದರು. ಗಜಾರೋಹಿಗಳು ತಾವು ಕುಳಿತಿದ್ದ ಆನೆಗಳೊಡನೆ ಕೆಳಕ್ಕೆ ಬೀಳುತ್ತಿದ್ದರು. ಅರ್ಜುನನ ಭುಜಗಳಿಂದ ಪ್ರಮುಕ್ತವಾದ (ಉತ್ಸೃಷ್ಟವಾದ) ಬಾಣಗಳಿಂದಲೂ, ಪಲಾಯನಮಾಡುತ್ತಿದ್ದ ರಾಜರ ಸೈನ್ಯಗಳಿಂದಲೂ ರಣಾಂಗಣವು ವ್ಯಾಪ್ತವಾಯಿತು. ಈ ರೀತಿಯಲ್ಲಿ ಪಾರ್ಥನು ಅಪಾರವಾದ ಸೇನಾಸಮೂಹವನ್ನು ಓಡಿಸಿ ದುಃಶಾಸನನ ಮೇಲೂ ಅಪಾರವಾದ ಬಾಣಗಳನ್ನು ಪ್ರಯೋಗಿಸಿದನು. ಲೋಹಾಗ್ರಭಾಗಗಳಿದ್ದ ಆ ಬಾಣಗಳು ನಿನ್ನ ಮಗನನ್ನು ಭೇದಿಸಿಕೊಂಡು ಹೊರಬಂದು–ಹಾವುಗಳು ಬಿಲದೊಳಕ್ಕೆ ಸೇರಿಕೊಳ್ಳುವಂತೆ–ಭೂಮಿಯಲ್ಲಿ ಸೇರಿಕೊಂಡುವು. ಅನಂತರ ಅರ್ಜುನನು ದುಃಶಾಸನನ ರಥದ ಕುದುರೆಗಳನ್ನು ಸಂಹರಿಸಿ, ಸಾರಥಿಯನ್ನೂ ಸಂಹರಿಸಿ ಕೆಳಕ್ಕೆ ಬೀಳಿಸಿದನು. ವಿವಿಂಶತಿಯನ್ನು ಇಪ್ಪತ್ತು ಬಾಣಗಳಿಂದ ಪ್ರಹರಿಸಿ ರಥಹೀನನನ್ನಾಗಿ ಮಾಡಿದನು. ಅನಂತರವೂ ಅರ್ಜುನನು ನತಪರ್ವ ಗಳಾಗಿದ್ದ ಐದು ಬಾಣಗಳಿಂದ ವಿವಿಂಶತಿಯನ್ನು ಬಹುವಾಗಿ ಪೀಡಿಸಿದನು. ಶ್ವೇತವಾಹನನಾದ ಅರ್ಜುನನು ಕೃಪ-ವಿಕರ್ಣ-ಶಲ್ಯರನ್ನೂ ಅಯೋ ಮಯವಾದ ಅನೇಕಬಾಣಗಳಿಂದ ಗಾಯಗೊಳಿಸಿ ವಿರಥರನ್ನಾಗಿಯೂ

ಮಾಡಿದನು. ವಿರಥರಾದ ಕೃಪ-ಶಲ್ಯ-ದುಃಶಾಸನ-ವಿಕರ್ಣ-ವಿವಿಂಶತಿಗಳು ಸವ್ಯಸಾಚಿಯಿಂದ ಪರಾಜಿತರಾಗಿ ಪಲಾಯನಮಾಡಿದರು. ಪೂರ್ವಾಹ್ಣದಲ್ಲಿ ಪಾರ್ಥನು ಮಹಾರಥರೆಲ್ಲರನ್ನೂ ಪರಾಜಯಗೊಳಿಸಿ ಧೂಮರಹಿತನಾದ ಯಜ್ಞೇಶ್ವರನಂತೆಯೇ–ಪ್ರಕಾಶಿಸಿದನು. ಅದೇ ರೀತಿಯಲ್ಲಿ ರಶ್ಮಿಮಂತನಾದ ಸೂರ್ಯನಂತೆ ಅರ್ಜುನನು ಬಾಣಗಳ ವೃಷ್ಟಿಯಿಂದ ಇತರ ರಾಜರನ್ನೂ ಪರಿತಾಪಗೊಳಿಸಿದನು. ಶರವೃಷ್ಟಿಯಿಂದ ಶತ್ರುಪಕ್ಷದ ಮಹಾರಥರೆಲ್ಲರನ್ನೂ ಪರಾಙ್ಮುಖಗೊಳಿಸಿ ಕುರುಸೈನಿಕರಿಗೂ–ಪಾಂಡವಸೈನಿಕರಿಗೂ ಮಧ್ಯದಲ್ಲಿ ರಕ್ತವೇ ನೀರಾಗಿ ಉಳ್ಳ ದೊಡ್ಡ ನದಿಯನ್ನೇ ನಿರ್ಮಿಸಿದನು. ರಥಿಗಳು ಆನೆ ಗಳನ್ನೂ, ರಥಸಮೂಹಗಳನ್ನೂ ಧ್ವಂಸಮಾಡಿದ್ದರು. ಆನೆಗಳು ರಥಗಳನ್ನು ಧ್ವಂಸಮಾಡಿದ್ದುವು. ಪದಾತಿಗಳು ಕುದುರೆಗಳನ್ನು ಧ್ವಂಸಮಾಡಿದ್ದರು. ಗಜಾಶ್ವ-ರಥಯೋಧಿಗಳ ಶರೀರಗಳು ಮತ್ತು ಶಿರಸ್ಸುಗಳು ಬಾಣ ಗಳಿಂದಲೂ, ಕತ್ತಿಗಳಿಂದಲೂ ಕತ್ತರಿಸಲ್ಪಟ್ಟವುಗಳಾಗಿ ರಣಾಂಗಣದ ಎಲ್ಲ ದಿಕ್ಕುಗಳಲ್ಲಿಯೂ ವಿಸ್ತೃತವಾಗಿ ಬಿದ್ದಿದ್ದುವು. ಕೆಳಕ್ಕೆ ಬಿದ್ದುಹೋಗಿದ್ದ ಮತ್ತು ಬೀಳಿಸಲ್ಪಡುವುದರಲ್ಲಿದ್ದ ಮಹಾರಥರಾದ ಕುಂಡಲಾಂಗದಧಾರಿಗಳಾದ ರಾಜಪುತ್ರರಿಂದ ಯುದ್ಧಭೂಮಿಯು ಮುಚ್ಚಿಹೋಗಿದ್ದಿತು. ಕೆಲವರು ರಥ ಚಕ್ರಗಳ ಕೆಳಗೆ ಸಿಕ್ಕಿ ನುಜ್ಜುಗುಜ್ಜಾಗಿದ್ದರು. ಮತ್ತೆ ಕೆಲವರನ್ನು ಮದಿಸಿದ ಆನೆಗಳು ಸೊಂಡಿಲುಗಳಿಂದ ಹಿಡಿದು ಭೂಮಿಗೆ ಅಪ್ಪಳಿಸಿದ್ದುವು. ಅಂತಹ ಅನೇಕ ಮಹಾರಥರಿಂದ ರಣರಂಗವು ವ್ಯಾಪ್ತವಾಗಿದ್ದಿತು. ಕುದುರೆಗಳೊಡನೆ ಸವಾರರೂ ಮತ್ತು ಪದಾತಿಗಳೂ ಸುತ್ತಲೂ ಓಡಿಹೋಗುತ್ತಿದ್ದರು. ಆನೆ ಗಳೂ ರಥಯೋಧರೂ ಅಸುಗಳನ್ನು ತೊರೆದು ರಣಾಂಗಣದ ಸುತ್ತಲೂ ಬಿದ್ದಿದ್ದರು. ಮುರಿದುಹೋದ ಚಕ್ರಗಳಿಂದಲೂ, ನೊಗಗಳಿಂದಲೂ, ಧ್ವಜಗಳಿಂದಲೂ ಕೂಡಿದ್ದ ಬಹುಸಂಖ್ಯಾತವಾದ ರಥಗಳು ರಣಾಂಗಣದ ಸುತ್ತಲೂ ಬಿದ್ದಿದ್ದುವು. ಗಜಾಶ್ವ-ರಥಯೋಧರ ರಕ್ತದಿಂದ ಚೆನ್ನಾಗಿ ತೋಯ್ದುಹೋಗಿದ್ದ ಯುದ್ಧಭೂಮಿಯು ಶರದೃತುವಿನ ಸಂಧ್ಯಾಕಾಲದ ಕೆಂಪಾದ ಮೋಡದಂತೆ–ಪ್ರಕಾಶಿಸುತ್ತಿದ್ದಿತು. ನಾಯಿಗಳು, ಕಾಗೆಗಳು, ಹದ್ದುಗಳು, ತೋಳಗಳು, ಗುಳ್ಳೇನರಿಗಳು–ಇವೇ ಮುಂತಾದ ವಿಕಾರಸ್ವರವುಳ್ಳ ಮೃಗ-ಪಕ್ಷಿಗಳು ತಮಗೆ ಪ್ರಿಯವಾಗಿದ್ದ ಆಹಾರವನ್ನು ಸಮೃದ್ಧಿಯಾಗಿ ಪಡೆದುಕೊಂಡು ಹರ್ಷದಿಂದ ನಿನಾದಮಾಡಿದುವು.

ಅಲ್ಲಲ್ಲಿ ಪಿಶಿತಾಶನರಾದ ರಾಕ್ಷಸರು ಕಾಣಿಸಿಕೊಳ್ಳುತ್ತಿರಲಾಗಿ, ಭೂತಗಣಗಳು ಗರ್ಜನೆಮಾಡುತ್ತಿರಲಾಗಿ, ಎಲ್ಲ ದಿಕ್ಕುಗಳಲ್ಲಿಯೂ ಅನೇಕಪ್ರಕಾರವಾಗಿ ಗಾಳಿಯು ಬೀಸತೊಡಗಿತು. ಸ್ವರ್ಣಮಯವಾದ ಮಾಲೆಗಳೂ, ಬಹು ಮೂಲ್ಯವಾದ ಪತಾಕೆಗಳೂ ಬಿರುಗಾಳಿಗಳಿಂದ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹಾರಾಡುತ್ತಿದ್ದುದು ಆ ರಣರಂಗದಲ್ಲಿ ಕಾಣುತ್ತಿದ್ದಿತು. ಸಾವಿರಾರು ಶ್ವೇತಚ್ಛತ್ರಗಳೂ, ನೂರಾರು-ಸಾವಿರಾರು ಸಂಖ್ಯೆಯಲ್ಲಿ ಧ್ವಜ ಯುಕ್ತವಾದ ಮಹಾರಥಗಳೂ ಆ ರಣಾಂಗಣದ ಸುತ್ತಲೂ ಹರಡಿಕೊಂಡು ಬಿದ್ದಿರುವುದು ಕಾಣುತ್ತಿದ್ದಿತು. ಬಾಣಗಳ ಪ್ರಹಾರದಿಂದ ನೋಯಿಸಲ್ಪಟ್ಟ ಆನೆಗಳು ಪತಾಕೆಗಳ ಸಮೇತವಾಗಿ ದಿಕ್ಕು-ದಿಕ್ಕಿಗೂ ಓಡಿಹೋಗುತ್ತಿದ್ದುವು. ಗದಾ-ಶಕ್ತಿ-ಧನುಸ್ಸುಗಳನ್ನು ಧರಿಸಿದ್ದ ಕ್ಷತ್ರಿಯರು ರಣಾಂಗಣದ ಸುತ್ತಲೂ ಪ್ರಾಣಗಳನ್ನು ತೊರೆದು ಬಿದ್ದಿದ್ದುದು ಕಾಣುತ್ತಿದ್ದಿತು. ಅನಂತರ ಭೀಷ್ಮನು ದಿವ್ಯಾಸ್ತ್ರಗಳನ್ನು ಪ್ರಕಟಪಡಿಸುತ್ತಾ, ಎಲ್ಲ ಧನುಷ್ಮಂತರೂ ನೋಡುತ್ತಿದ್ದಂತೆಯೇ ಅರ್ಜುನನನ್ನು ಆಕ್ರಮಿಸಿದನು. ಆದರೆ ಆ ಸಮಯದಲ್ಲಿ ಅರ್ಜುನನ ಮೇಲೆ ಬೀಳುವುದರಲ್ಲಿದ್ದ ಭೀಷ್ಮನನ್ನು ಕವಚಧಾರಿಯಾದ ಶಿಖಂಡಿಯು ಎದುರಿಸಿದನು. ಭೀಷ್ಮನು ಈ ಕಾರಣದಿಂದಾಗಿ ಯಜ್ಞೇಶ್ವರನಂತೆಯೇ ಇದ್ದ ಆ ಮಹಾಸ್ತ್ರವನ್ನು ಉಪಸಂಹಾರಗೊಳಿಸಿದನು. ಪಾಂಡವ ಮಧ್ಯಮನಾದ ಶ್ವೇತವಾಹನನು ಅತ್ಯಂತವೇಗವಾಗಿ ಪಿತಾಮಹನನ್ನು ದಿಗ್ಭ್ರಮೆಗೊಳಿಸುತ್ತಾ ನಿನ್ನ ಅನೇಕಸೈನಿಕರನ್ನು ಸಂಹರಿಸಿದನು."

೧೧೭ನೆಯ ಅಧ್ಯಾಯವು ಮುಗಿಯಿತು.

೧೧೮ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಷ್ಮನು ತನ್ನ ಅದ್ಭುತಪರಾಕ್ರಮವನ್ನು ತೋರಿಸುತ್ತಾ ಪಾಂಡವರ ಸೈನ್ಯವನ್ನು ಸಂಹರಿಸಿದುದು

ಸಂಜಯನು ಸಂಕುಲಯುದ್ಧದ ವಿಷಯವನ್ನು ಪ್ರಸ್ತಾಪಿಸಿ ಹೇಳುತ್ತಾನೆ:

"ಮಹಾರಾಜ! ಅನೇಕವಾದ ಅನೀಕಗಳು ವ್ಯೂಹಕ್ರಮದಲ್ಲಿ ನಿಂತಿರಲಾಗಿ, ಆ ವ್ಯೂಹಗಳಲ್ಲಿದ್ದ ಎಲ್ಲ ಸೈನಿಕರೂ ಯುದ್ಧದಿಂದ ಹಿಂದಿರುಗದೇ

ಇರತಕ್ಕವರೂ ಬ್ರಹ್ಮಲೋಕವನ್ನೇ ತಮ್ಮ ಪರಮಲಕ್ಷ್ಯವನ್ನಾಗಿಟ್ಟುಕೊಂಡಿರುವವರೂ ಆಗಿದ್ದರು. ಅನಂತರ ಸಂಕುಲ (ಗುಂಪು) ಯುದ್ಧವು ಪ್ರಾರಂಭವಾಯಿತು. ಯಾರು ಯಾರೊಡನೆ ಯುದ್ಧಮಾಡಬೇಕೆಂದಿದ್ದ ನಿಯಮಗಳೆಲ್ಲವೂ ಮುರಿದುಬಿದ್ದವು. ಸೈನ್ಯವು ತನಗೆ ಸಮಾನವಾದ ಮತ್ತೊಂದು ಸೈನ್ಯದೊಡನೆ ಯುದ್ಧಮಾಡುತ್ತಿರಲಿಲ್ಲ. ರಥಿಗಳು ರಥಿಗಳೊಡನೆ ಯುದ್ಧಮಾಡುತ್ತಿರಲಿಲ್ಲ. ಪದಾತಿಗಳು ಪದಾತಿಗಳೊಡನೆ ಯುದ್ಧಮಾಡುತ್ತಿರಲಿಲ್ಲ. ಅಶ್ವಸೈನ್ಯವು ಅಶ್ವಸೈನ್ಯದೊಡನಾಗಲೀ–ಗಜಸೈನ್ಯವು ಗಜಸೈನ್ಯದೊಡನಾಗಲೀ ಯುದ್ಧಮಾಡುತ್ತಿರಲಿಲ್ಲ.

ಎಲ್ಲ ಸೈನಿಕರೂ ಉನ್ಮತ್ತರಾದವರಂತೆ ಸಿಕ್ಕಿ-ಸಿಕ್ಕಿದವರೊಡನೆ ಯುದ್ಧಮಾಡುತ್ತಿದ್ದರು. (ಎರಡು ಕಡೆಗಳ ಸೈನ್ಯಗಳಲ್ಲಿಯೂ ಭಯಂಕರವಾದ ಸಮ್ಮಿಶ್ರಣವಾಗಿಬಿಟ್ಟಿತು.) ನರ-ರಥಾಶ್ವ-ಗಜಸೈನ್ಯಗಳು ಸರ್ವತ್ರ ಹರಡಿಕೊಂಡಿರಲಾಗಿ ಮಹಾಭಯಂಕರವಾದ ಮತ್ತು ಸರ್ವಕ್ಷಯಕರವಾದ ಆ ಯುದ್ಧದಲ್ಲಿ ಒಂದು ಸೈನ್ಯಕ್ಕೂ ಮತ್ತೊಂದು ಸೈನ್ಯಕ್ಕೂ ಯಾವ ವಿಧವಾದ ಅಂತರವೂ ಇಲ್ಲದ ಸನ್ನಿವೇಶವು ಹುಟ್ಟಿಕೊಂಡಿತು. ಅನಂತರ ಶೂರರಾದ ಶಲ್ಯ-ಕೃಪ-ಚಿತ್ರಸೇನ-ದುಃಶಾಸನ-ವಿಕರ್ಣರು ಕಾಂತಿಯುಕ್ತವಾದ ರಥಗಳಲ್ಲಿ ಕುಳಿತು ಪಾಂಡವರ ಸೈನ್ಯವನ್ನು ನಡುಗಿಸಿಬಿಟ್ಟರು. ಚಂಡಮಾರುತವು ನೀರಿನಲ್ಲಿರುವ ನೌಕೆಯನ್ನು ಎಲ್ಲೆಲ್ಲಿಗೋ ಸೆಳೆದೊಯ್ಯುವಂತೆ–ಮಹಾತ್ಮರಾದ ಶಲ್ಯನೇ ಮೊದಲಾದವರಿಂದ ವಧಿಸಲ್ಪಡುತ್ತಿದ್ದ ಪಾಂಡವರ ಸೈನ್ಯವು ದಿಕ್ಕಾಪಾಲಾಗಿ ಓಡಿಹೋಯಿತು. ಯಾವ ರೀತಿಯಲ್ಲಿ ಶಿಶಿರಋತುವಿನ ಶೀತವು ಹಸುಗಳ ಮರ್ಮಸ್ಥಳಗಳನ್ನು ಕತ್ತರಿಸುತ್ತದೆಯೋ–ಅದೇ ರೀತಿಯಲ್ಲಿ ಭೀಷ್ಮನು ಪಾಂಡುವಿನ ಮಕ್ಕಳ ಮರ್ಮಸ್ಥಳಗಳನ್ನು ಬಾಣಗಳಿಂದ ಕತ್ತರಿಸುತ್ತಿದ್ದನು. ಅದಕ್ಕೆ ಪ್ರತಿಯಾಗಿ ಅರ್ಜುನನೂ ಸಹ ನಿನ್ನ ಗಜಸೈನ್ಯದಲ್ಲಿದ್ದ, ನೂತನ ಮೇಘಗಳಿಗೆ ಸಮಾನವಾಗಿದ್ದ ಅನೇಕ ಆನೆಗಳನ್ನು ಸಂಹರಿಸಿದನು. ಪಾರ್ಥನು ಅನೇಕ ಯೋಧನಾಯಕರನ್ನು ಮಣ್ಣುಮುಕ್ಕಿಸಿಬಿಟ್ಟನು. ಅರ್ಜುನನ ಬಾಣಗಳಿಂದ ಪ್ರಹೃತವಾದ ಅನೇಕ ಸಾವಿರ ದೊಡ್ಡ-ದೊಡ್ಡ ಆನೆಗಳು ಘೋರವಾಗಿ ಆರ್ತಧ್ವನಿಮಾಡುತ್ತಾ ಕೆಳಗೆ ಬಿದ್ದುವು. ಅರ್ಜುನನ ಬಾಣಗಳಿಂದ ಹತರಾದ, ಮಹಾತ್ಮರಾದ ರಥಿಕರ ಆಭರಣಗಳಿಂದ ಕೂಡಿದ

ಶರೀರಗಳಿಂದಲೂ, ಕರ್ಣಕುಂಡಲಗಳಿಂದ ಕೂಡಿದ ಶಿರಸ್ಸುಗಳಿಂದಲೂ ರಣಾಂಗಣವು ತುಂಬಿಹೋಗಿದ್ದಿತು. ಮಹಾವೀರಶ್ರೇಷ್ಠರ ಕ್ಷಯಕರವಾದ ಆ ಯುದ್ಧದಲ್ಲಿ ಮಹಾಪರಾಕ್ರಮಿಯಾದ ಭೀಷ್ಮನೂ ಪಾಂಡುಪುತ್ರನಾದ ಧನಂಜಯನೂ ತೊಡಗಿರಲಾಗಿ, ಪಿತಾಮಹನು ಆಗಿನ ಯುದ್ಧದಲ್ಲಿ ವಿಶೇಷವಾದ ಪರಾಕ್ರಮವನ್ನು ತೋರಿಸುತ್ತಿರುವುದನ್ನು ಕಂಡು ನಿನ್ನ ಮಕ್ಕಳು ಸೈನ್ಯಸಮೇತರಾಗಿ ಯುದ್ಧದಲ್ಲಿ ಮರಣವನ್ನು ಇಚ್ಛಿಸುತ್ತಾ ಸ್ವರ್ಗವನ್ನೇ ಪರಮಲಕ್ಷ್ಯವನ್ನಾಗಿಟ್ಟುಕೊಂಡು ಪಾಂಡವರನ್ನು ಆಕ್ರಮಿಸಿದರು. ಪಾಂಡವರೂ ಸಹ ಹಿಂದೆ ಸಪುತ್ರನಾದ ನಿನ್ನಿಂದ ಕೊಡಲ್ಪಟ್ಟ ಅನೇಕವಿಧವಾದ ಕ್ಲೇಶಗಳನ್ನು ಸ್ಮರಿಸುತ್ತಾ, ಭಯವನ್ನು ಸಂಪೂರ್ಣವಾಗಿ ತ್ಯಜಿಸಿ, ಬ್ರಹ್ಮಲೋಕವನ್ನೇ ಪರಮಲಕ್ಷ್ಯವನ್ನಾಗಿಟ್ಟುಕೊಂಡು ಪ್ರಸನ್ನತಾಪೂರ್ವಕವಾಗಿ ನಿನ್ನ ಮಕ್ಕಳನ್ನೂ, ನಿನ್ನ ಕಡೆಯ ರಾಜರನ್ನೂ ಎದುರಿಸಿ ಯುದ್ಧಮಾಡುತ್ತಿದ್ದರು. ಸೇನಾಪತಿಯಾದ ಮಹಾರಥನಾದ ಧೃಷ್ಟದ್ಯುಮ್ನನು ಆ ಸಮಯದಲ್ಲಿ ತನ್ನ ಸೈನ್ಯಕ್ಕೆ–'ಎಲ್ಲ ಸೋಮಕರೂ ಸೃಂಜಯರೊಡನೆ ಕೂಡಿಕೊಂಡು ಗಾಂಗೇಯನನ್ನು ಆಕ್ರಮಿಸಿರಿ'–ಎಂದು ಆಜ್ಞೆಮಾಡಿದನು. ಸೇನಾಪತಿಯು ಹೇಳಿದ ಮಾತನ್ನು ಕೇಳಿ ಸೋಮಕರೂ ಮತ್ತು ಸೃಂಜಯರೂ ಭೀಷ್ಮನನ್ನು ಆಕ್ರಮಿಸಿದರು. ಸೋಮಕ-ಸೃಂಜಯಯೋಧರು ಬಿಡುತ್ತಿದ್ದ ಬಾಣಗಳ ವೃಷ್ಟಿಯಿಂದ ಹಿಂಸಿತನಾದ ಮಹಾತ್ಮನಾದ ಶಾಂತನವನು ಕ್ರೋಧಾಭಿಭೂತನಾಗಿ ಸೃಂಜಯರೊಡನೆ ಯುದ್ಧಮಾಡಲು ಉಪಕ್ರಮಿಸಿದನು. ಮಹಾರಾಜ! ಕೀರ್ತಿಮಂತನಾದ ಭೀಷ್ಮನು ಹಿಂದೆ ಪರಶುರಾಮನಲ್ಲಿ 'ಪರಾನೀಕವಿನಾಶಿನೀ' ಎಂಬ ಅಸ್ತ್ರವಿದ್ಯೆಯನ್ನು ಅಭ್ಯಸಿಸಿದ್ದನು. ಆ ಅಸ್ತ್ರವಿದ್ಯೆಯನ್ನೇ ಅವಲಂಬಿಸಿ ಅದರಿಂದ ಶತ್ರುಪಕ್ಷದ ಸೈನ್ಯಗಳನ್ನು ಕ್ಷಯಗೊಳಿಸುತ್ತಾ ಕುರುಕುಲಪಿತಾಮಹನಾದ, ವೃದ್ಧನಾದ ಪರವೀರನಾಶಕನಾದ ಭೀಷ್ಮನು ಅನುದಿನವೂ ಹತ್ತುಸಾವಿರ ಪಾಂಡವಯೋಧರನ್ನು ಸಂಹರಿಸುತ್ತಿದ್ದನು.

ಯುದ್ಧವು ಪ್ರಾರಂಭವಾದನಂತರ ಹತ್ತನೆಯ ದಿವಸವು ಪ್ರಾಪ್ತವಾಗಲಾಗಿ ಆ ಹತ್ತನೆಯ ದಿವಸದಲ್ಲಿ ಮತ್ಸ್ಯ-ಪಾಂಚಾಲಯೋಧರಲ್ಲಿ ಅಸಂಖ್ಯಾತರಾದ ಗಜಾಶ್ವ-ಸೈನಿಕರನ್ನು ಸಂಹರಿಸಿ, ಏಳು ಮಂದಿ ಮಹಾರಥರನ್ನು

ಕೊಂದು, ಐದು ಸಾವಿರ ರಥಿಗಳನ್ನೂ ಸಂಹರಿಸಿದನು. ನಿನ್ನ ತಂದೆಯಾದ ಭೀಷ್ಮನು ಪರಾನೀಕವಿನಾಶಿನೀವಿದ್ಯೆಯ ಬಲದಿಂದಲೇ ಆ ಮಹಾಯುದ್ಧ ದಲ್ಲಿ ಹದಿನಾಲ್ಕು ಸಾವಿರ ಪದಾತಿಗಳನ್ನೂ, ಸಾವಿರ ಆನೆಗಳನ್ನೂ, ಹತ್ತು ಸಾವಿರ ಅಶ್ವಸೈನಿಕರನ್ನೂ ಸಂಹರಿಸಿದನು. ಅನಂತರ ಎಲ್ಲ ಮಹೀಪಾಲರ ಸೈನ್ಯಗಳನ್ನೂ ಧ್ವಂಸಗೊಳಿಸಿ ವಿರಾಟನ ಪ್ರೀತಿಯ ತಮ್ಮನಾದ ಶತಾನೀಕನನ್ನು ಸಂಹರಿಸಿ ಅನಂತರ ಅನೇಕಸಹಸ್ರ ರಾಜರನ್ನು ಭಲ್ಲಗಳೆಂಬ ಬಾಣಗಳಿಂದ ಸಂಹರಿಸಿದನು. ಭೀಷ್ಮನ ಭಯಂಕರವಾದ ಸಂಹಾರಕಾರ್ಯದಿಂದ ಉದ್ವಿಗ್ನ ರಾದ ಯೋಧರು ಜೀವರಕ್ಷಣೆಗಾಗಿ ಧನಂಜಯನನ್ನು ಪ್ರಾರ್ಥಿಸುತ್ತಿದ್ದರು. ಯಾವ ರಾಜರು ಪಾರ್ಥನನ್ನು ಸುತ್ತುವರಿದು ಭೀಷ್ಮನನ್ನು ಎದುರಿಸಿದರೋ ಆ ರಾಜರೂ ಹತರಾಗಿಹೋದರು. ಈ ರೀತಿಯಾಗಿ ಭೀಷ್ಮನು ಎಲ್ಲ ದಿಕ್ಕುಗಳನ್ನೂ ಬಾಣಗಳ ಸಮೂಹಗಳಿಂದ ತುಂಬುತ್ತಾ ಪಾಂಡವರ ಸೈನ್ಯ ವನ್ನು ಪರಾಸ್ತಗೊಳಿಸಿ ತನ್ನ ಸೈನ್ಯದ ಅಗ್ರಭಾಗದಲ್ಲಿ ನಿಂತಿದ್ದನು. ಆ ಹತ್ತ ನೆಯ ದಿವಸದಲ್ಲಿ ಮಹಾಸಂಹಾರಕರ್ಮವನ್ನು ಮಾಡಿ ಭೀಷ್ಮನು ಎರಡೂ ಸೈನ್ಯಗಳ ಮಧ್ಯದಲ್ಲಿ ಧನುಷ್ಪಾಣಿಯಾಗಿ ನಿಂತಿದ್ದನು. ಗ್ರೀಷ್ಮರ್ತುವಿನಲ್ಲಿ ನಡುನೆತ್ತಿಗೆ ಬಂದ ಸೂರ್ಯನನ್ನು ನೋಡಲು ಸಾಧ್ಯವಾಗದಂತೆ–ಎರಡೂ ಸೈನ್ಯಗಳ ಮಧ್ಯದಲ್ಲಿ ಧನುಷ್ಪಾಣಿಯಾಗಿ ನಿಂತಿದ್ದ ಭೀಷ್ಮನನ್ನು ಪಾಂಡವ ಸೈನಿಕರು ನೋಡಲೂ ಕೂಡ ಶಕ್ತರಾಗಿರಲಿಲ್ಲ. ಯಾವ ರೀತಿಯಲ್ಲಿ ಇಂದ್ರನು ಹಿಂದೆ ದೈತ್ಯಸೈನ್ಯವನ್ನು ವಜ್ರಾಯುಧಪ್ರಹಾರಗಳಿಂದ ತಾಪನಗೊಳಿಸಿ ದ್ದನೋ–ಅದೇ ರೀತಿಯಲ್ಲಿ ಭೀಷ್ಮನು ಪಾಂಡವೇಯರನ್ನು ತನ್ನ ಬಾಣಗಳ ಪ್ರಹಾರಗಳಿಂದ ಪರಿತಾಪಗೊಳಿಸಿದ್ದನು. ಈ ರೀತಿಯಲ್ಲಿ ತನ್ನ ಪರಾಕ್ರಮ ವನ್ನು ಪ್ರದರ್ಶಿಸುತ್ತಾ ನಿಂತಿದ್ದ ಭೀಷ್ಮನನ್ನು ನೋಡಿ ದೇವಕೀಪುತ್ರನಾದ ಮಧುಸೂದನನು ಧನಂಜಯನನ್ನು ಪ್ರಸನ್ನಗೊಳಿಸುತ್ತಾ ಈ ಮಾತುಗಳನ್ನು ಹೇಳಿದನು : "ಶಾಂತನುವಿನ ಮಗನಾದ ಭೀಷ್ಮನು ಎರಡು ಸೇನೆಗಳ ಮಧ್ಯದಲ್ಲಿ ನಿಂತಿದ್ದಾನೆ. ಇವನನ್ನು ಬಲಪೂರ್ವಕವಾಗಿ ಸಂಹಾರಮಾಡಿದ್ದೇ ಆದರೆ ನಿನಗೆ ವಿಜಯವು ಲಭಿಸುತ್ತದೆ. ಯಾವ ಸ್ಥಳದಲ್ಲಿ ಈ ನಮ್ಮ ಸೈನ್ಯವು ಭೀಷ್ಮನಿಂದ ಭೇದಿಸಲ್ಪಡುತ್ತಿದೆಯೋ–ಅದೇ ಸ್ಥಳದಲ್ಲಿಯೇ ನೀನು ಭೀಷ್ಮ ನನ್ನು ಬಲಪೂರ್ವಕವಾಗಿ ಹಿಂದೆ-ಮುಂದೆ ಹೋಗದಂತೆ ನಿರ್ಬಂಧಿಸು.

ನೀನಲ್ಲದೇ ಬೇರೆ ಯಾರೂ ಭೀಷ್ಮನ ಬಾಣಗಳ ಪ್ರಹಾರವನ್ನು ಸಹಿಸಿ ಕೊಳ್ಳಲು ಸಮರ್ಥರಾಗಿಲ್ಲ.”

ಶ್ರೀಕೃಷ್ಣನು ಹೀಗೆಂದು ಹೇಳಿದ ಕೂಡಲೇ ವಾನರಧ್ವಜನಾದ ಅರ್ಜುನನು ಧ್ವಜ-ರಥಾಶ್ವಗಳ ಸಮೇತನಾದ ಭೀಷ್ಮನನ್ನು ಬಾಣಗಳಿಂದ ಮುಚ್ಚಿಬಿಟ್ಟನು. ಕೌರವರ್ಷಭನಾದ ಭೀಷ್ಮನೂ ಕೂಡ ಅರ್ಜುನನು ಬಿಟ್ಟ ಬಾಣಗಳ ಸಮೂಹವನ್ನು ಬಾಣಗಳ ಸಮೂಹದಿಂದಲೇ ಕತ್ತರಿಸಿ ಚೂರು-ಚೂರುಗಳನ್ನಾಗಿ ಮಾಡಿಬಿಟ್ಟನು. ಆ ಸಮಯದಲ್ಲಿ ಪಾಂಚಾಲರಾಜನಾದ ದ್ರುಪದ, ವೀರ್ಯವಂತನಾದ ಧೃಷ್ಟಕೇತು, ಭೀಮಸೇನ, ಧೃಷ್ಟದ್ಯುಮ್ನ, ನಕುಲ-ಸಹದೇವರು, ಚೇಕಿತಾನ, ಐವರು ಕೇಕಯಸಹೋದರರು, ಮಹಾಬಾಹುವಾದ ಸಾತ್ಯಕಿ, ಅಭಿಮನ್ಯು, ಘಟೋತ್ಕಚ, ದ್ರೌಪದಿಯ ಐವರು ಮಕ್ಕಳು, ಶಿಖಂಡಿ, ವೀರ್ಯವಂತನಾದ ಕುಂತಿಭೋಜ, ಸುಶರ್ಮಾ, ವಿರಾಟ, ಇವರಲ್ಲದೇ ಇನ್ನೂ ಪಾಂಡವರ ಕಡೆಯ ಅನೇಕ ಯೋಧರು ಭೀಷ್ಮನ ಬಾಣಗಳಿಂದ ಪೀಡಿತರಾದರು. ಆದರೆ ಭೀಷ್ಮನ ಬಾಣಗಳಿಂದ ಪ್ರಪೀಡಿತರಾಗಿ ಶೋಕಸಾಗರದಲ್ಲಿ ಮುಳುಗಿದ್ದ ಅವರೆಲ್ಲರೂ ಫಾಲ್ಗುನನಿಂದ ಉದ್ಧೃತರಾದರು. ಬಳಿಕ ಕಿರೀಟಿಯಿಂದ ರಕ್ಷಿಸಲ್ಪಡುತ್ತಿದ್ದ ಶಿಖಂಡಿಯು ಶ್ರೇಷ್ಠವಾದ ಧನುಸ್ಸನ್ನು ಕೈಯಲ್ಲಿ ಹಿಡಿದು ವೇಗವಾಗಿ ಭೀಷ್ಮನ ಕಡೆಗೆ ಧಾವಿಸಿದನು.

ಅನಂತರ ಯುದ್ಧದ ಎಲ್ಲ ವಿಭಾಗಗಳನ್ನೂ ಚೆನ್ನಾಗಿ ತಿಳಿದುಕೊಂಡಿದ್ದ ಅಪರಾಜಿತನಾದ ಅರ್ಜುನನು ಭೀಷ್ಮನ ಅನುಚರರೆಲ್ಲರನ್ನೂ (ರಕ್ಷಕರೆಲ್ಲರನ್ನೂ) ಸಂಹರಿಸಿ ಭೀಷ್ಮನನ್ನು ತಾನೇ ಆಕ್ರಮಿಸಿದನು. ದೃಢಧನ್ವನಾದ ಅರ್ಜುನನಿಂದ ರಕ್ಷಿತರಾಗಿದ್ದ ಸಾತ್ಯಕಿ-ಚೇಕಿತಾನ, ಧೃಷ್ಟದ್ಯುಮ್ನ, ವಿರಾಟ, ದ್ರುಪದ, ನಕುಲ-ಸಹದೇವರು—ಇವರೆಲ್ಲರೂ ಭೀಷ್ಮನನ್ನೇ ಆಕ್ರಮಿಸಿದರು. ಅಭಿಮನ್ಯುವೂ ಮತ್ತು ದ್ರೌಪದಿಯ ಐವರು ಮಕ್ಕಳೂ ತಮ್ಮ-ತಮ್ಮ ಆಯುಧಗಳನ್ನೆತ್ತಿಕೊಂಡು ಭೀಷ್ಮನ ಕಡೆಗೆ ಧಾವಿಸಿದರು. ದೃಢಧನ್ವಿಗಳಾದ ಮತ್ತು ಯುದ್ಧದಲ್ಲಿ ಪಲಾಯನಮಾಡದಿರುವ ಅವರೆಲ್ಲರೂ ಶತ್ರುಪಕ್ಷದ ಬಾಣಗಳನ್ನು ವಿನಷ್ಟಗೊಳಿಸುವ ಶ್ರೇಷ್ಠವಾದ ಬಾಣಗಳಿಂದ ಭೀಷ್ಮನನ್ನು ಸತತವಾಗಿ ಪೀಡಿಸತೊಡಗಿದರು. ಪಿತಾಮಹನು ಧನುರ್ಬಾಣಗಳಿಂದ

ಆಟವಾಡುತ್ತಿರುವನೋ ಎಂಬಂತೆ ತನ್ನೆದುರಾಗಿ ಬರುತ್ತಿದ್ದ ಪಾಂಡವಮಹಾ ಯೋಧರ ಬಾಣಗಳೆಲ್ಲವನ್ನೂ ವಿನಾಶಗೊಳಿಸಿದನು. ಆದರೆ ಶಿಖಂಡಿಯ ಸ್ತ್ರೀತ್ವವನ್ನು ಸ್ಮರಿಸಿ ಬಾರಿ-ಬಾರಿಗೂ ನಗುತ್ತಿದ್ದ ಭೀಷ್ಮನು ಪಾಂಚಾಲ್ಯನ ಮೇಲೆ ಬಾಣಪ್ರಯೋಗವನ್ನು ಮಾಡಲಿಲ್ಲ. ಮಹಾರಥನಾದ ಭೀಷ್ಮನು ದ್ರುಪದನ ಸೈನ್ಯದಲ್ಲಿದ್ದ ಏಳು ಮಂದಿ ರಥಿಗಳನ್ನು ಸಂಹರಿಸಿದನು. ಭೀಷ್ಮನೊಬ್ಬನ ಮೇಲೆಯೇ ದಾಳಿನಡೆಸುತ್ತಿದ್ದ ಮತ್ಸ್ಯ-ಪಾಂಚಾಲ-ಚೇದಿಸೈನ್ಯಗಳ ಸಮೂಹದಲ್ಲಿ ಒಡನೆಯೇ ದೊಡ್ಡ ಕೋಲಾಹಲವುಂಟಾಯಿತು. ಆ ಮಹಾ ರಥರು ಮೇಘಗಳು ಸೂರ್ಯನನ್ನು ಮುಚ್ಚಿಬಿಡುವಂತೆ–ನರಾಶ್ವ-ರಥ ಸಮೂಹಗಳಿಂದಲೂ ಮತ್ತು ಬಹುಸಂಖ್ಯಾತವಾದ ಬಾಣಗಳಿಂದಲೂ ಶತ್ರುಗಳಿಗೆ ಪರಿತಾಪವನ್ನುಂಟುಮಾಡುತ್ತಿದ್ದ, ಒಬ್ಬನೇ ಒಬ್ಬ ಭಾಗೀರಥೀ ಪುತ್ರನಾದ ಭೀಷ್ಮನನ್ನು ಮುಚ್ಚಿಬಿಟ್ಟರು. ಭೀಷ್ಮನ ಮತ್ತು ಪಾಂಡವೇಯರ ಯುದ್ಧವು ದೇವಾಸುರರ ಯುದ್ಧಕ್ಕೆ ಸಮಾನವಾಗಿ ನಡೆಯುತ್ತಿರಲಾಗಿ ಪುನಃ ಪಾರ್ಥನು ಶಿಖಂಡಿಯನ್ನು ಮುಂದೆಮಾಡಿಕೊಂಡು ಭೀಷ್ಮನನ್ನು ಎದುರಿ ಸಿದನು.”

೧೧೮ನೆಯ ಅಧ್ಯಾಯವು ಮುಗಿಯಿತು.

೧೧೯ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಕೌರವಪಕ್ಷದ ಮಹಾರಥರು ರಕ್ಷಿಸುತ್ತಿದ್ದರೂ ಅರ್ಜುನನು ಭೀಷ್ಮನನ್ನು ಕೆಳಗುರುಳಿಸಿದುದು : ಶರಶಯ್ಯೆಯ ಮೇಲೆ ಮಲಗಿದ್ದ ಭೀಷ್ಮನ ಸಮೀಪಕ್ಕೆ ಹಂಸಗಳ ರೂಪವನ್ನು ಧರಿಸಿ ಋಷಿಗಳು ಬಂದುದು : ಭೀಷ್ಮನು ಉತ್ತರಾಯಣದವರೆಗೂ ಪ್ರಾಣವನ್ನು ಧರಿಸಿರಲು ನಿಶ್ಚಯಿಸಿದುದು

ಸಂಜಯನು ಭೀಷ್ಮನ ಯುದ್ಧದ ವರ್ಣನೆಯನ್ನು ಮುಂದು ವರಿಸುತ್ತಾನೆ:

“ಮಹಾರಾಜ! ಈ ರೀತಿಯಲ್ಲಿ ಎಲ್ಲ ಪಾಂಡವರೂ ಶಿಖಂಡಿಯನ್ನು ಮುಂದಿಟ್ಟುಕೊಂಡು ಭೀಷ್ಮನನ್ನು ಎಲ್ಲ ಕಡೆಗಳಿಂದಲೂ ಸುತ್ತುಗಟ್ಟಿ ಬಾಣ ಗಳಿಂದ ಪ್ರಹರಿಸತೊಡಗಿದರು. ಸುಘೋರವಾಗಿದ್ದ ಶತಘ್ನಿಗಳಿಂದಲೂ,

ಪರಿಘಾಯುಧಗಳಿಂದಲೂ, ಗಂಡುಗೊಡಲಿಗಳಿಂದಲೂ, ಮುದ್ಗರಗಳಿಂದಲೂ, ಮುಸಲಾಯುಧಗಳಿಂದಲೂ, ಪ್ರಾಸಗಳಿಂದಲೂ, ಕ್ಷೇಪಣೀಯಗಳಿಂದಲೂ, ಚಿನ್ನದ ರೆಕ್ಕೆಗಳನ್ನು ಹೊಂದಿದ್ದ ಬಾಣಗಳಿಂದಲೂ, ಶಕ್ತ್ಯಾಯುಧಗಳಿಂದಲೂ, ತೋಮರಗಳಿಂದಲೂ, ಕಂಪನಗಳಿಂದಲೂ, ನಾರಾಚಗಳಿಂದಲೂ, ವತ್ಸದಂತಗಳಿಂದಲೂ, ಭುಶುಂಡಿಗಳಿಂದಲೂ ಪಾಂಡವ-ಸೃಂಜಯ-ಸೋಮಕಯೋಧರು ಭೀಷ್ಮನನ್ನು ಎಲ್ಲ ಕಡೆಗಳಿಂದಲೂ ಏಕಮುಖವಾಗಿ ಪ್ರಹರಿಸಿದರು. ಬಹುಜನರ ಬಹುವಿಧವಾದ ಆಯುಧಗಳಿಂದ ಪೀಡಿತನಾದ ಭೀಷ್ಮನ ಕವಚವು ಚೂರು-ಚೂರಾಗಿ ಹೋಯಿತು. ಮರ್ಮಸ್ಥಳಗಳು ಭೇದಿಸಲ್ಪಡುತ್ತಿದ್ದರೂ ಭೀಷ್ಮನು ವ್ಯಥಿತನಾಗಿಲಿಲ್ಲ.

ಆ ಸಮಯದಲ್ಲಿ ಭೀಷ್ಮನು ಶತ್ರುಗಳ ವಿಷಯದಲ್ಲಿ ಪ್ರಳಯಕಾಲದ ಅಗ್ನಿಯಂತೆಯೇ ಅದ್ಭುತವಾದ ತೇಜಸ್ಸಿನಿಂದ ಪ್ರಜ್ವಲಿಸಿದನು. ಅವನ ಪ್ರದೀಪ್ತವಾದ ಧನುರ್ಬಾಣಗಳೇ ಉರಿಯಾಯಿತು–(ಅಗ್ನಿಯಾಯಿತು.) ಅಸ್ತ್ರಗಳ ಪ್ರಸಾರವೇ ಅಗ್ನಿಯ ಸಖನಾದ ವಾಯುವಾಗಿ ಪರಿಣಮಿಸಿತು. ರಥನೇಮಿಗಳ ಗರ-ಗರಾಶಬ್ದವೇ ಅಗ್ನಿಯಿಂದ ಹೊರಡುವ ಚಟ-ಚಟಾಶಬ್ದವಾಗಿದ್ದಿತು. ಮಹಾಸ್ತ್ರಗಳ ಉದಯದಿಂದಲೇ ಪ್ರಳಯಾಗ್ನಿಗೆ ಸಮಾನವಾದ ಅಗ್ನಿಯು ಹುಟ್ಟಿತು. ಭೀಷ್ಮನ ಚಿತ್ರಿತಧನುಸ್ಸೇ ಮಹಾಜ್ವಾಲೆಯಾಗಿದ್ದಿತು. ವೀರಕ್ಷತ್ರಿಯರ ಕ್ಷಯವೆಂಬುದೇ ಅಗ್ನಿಗೆ ಇಂಧನವಾಗಿದ್ದಿತು. ಭೀಷ್ಮನು ಶತ್ರುಗಳಿಗೆ ಇಂತಹ ಪ್ರಳಯಾಗ್ನಿಯಾಗಿ ಪರಿಣಮಿಸಿದನು. ಅನಂತರ ಭೀಷ್ಮನು ರಥಸಮೂಹಗಳ ಮಧ್ಯಭಾಗದಿಂದ ಬಿಡಿಸಿಕೊಂಡು ಹೊರಬಂದು ಪುನಃ ಮಧ್ಯಕ್ಕೆ ನುಗ್ಗಿ ಸಂಚರಿಸುತ್ತಿದ್ದುದು ಕಾಣುತ್ತಿದ್ದಿತು. ಅಲ್ಲಿದ್ದ ಪಾಂಚಾಲರಾಜನಾದ ದ್ರುಪದನನ್ನೂ ಧೃಷ್ಟಕೇತುವನ್ನೂ ಲೆಕ್ಕಿಸದೇ ಭೀಷ್ಮನು ಪಾಂಡವರ ಸೈನ್ಯದ ಮಧ್ಯಭಾಗವನ್ನು ಸೇರಿದನು. ಅಲ್ಲಿ ಸಾತ್ಯಕಿಯನ್ನೂ, ಭೀಮನನ್ನೂ, ಧನಂಜಯನನ್ನೂ, ದ್ರುಪದನನ್ನೂ, ವಿರಾಟನನ್ನೂ ಮತ್ತು ಧೃಷ್ಟದ್ಯುಮ್ನನನ್ನೂ–ಭಯಂಕರವಾದ ಶಬ್ದವನ್ನುಂಟುಮಾಡುತ್ತಿದ್ದ, ಮಹಾವೇಗಯುಕ್ತವಾಗಿದ್ದ, ಮರ್ಮಸ್ಥಾನಗಳನ್ನೂ ಮತ್ತು ಕವಚಗಳನ್ನೂ ಭೇದಿಸುವುದಾಗಿದ್ದ, ನಿಶಿತವಾಗಿದ್ದ, ಉತ್ತಮೋತ್ತಮವಾದ ಬಾಣಗಳಿಂದ ಪ್ರಹರಿಸಿದನು. ಭೀಷ್ಮನು ಬಿಟ್ಟ ನಿಶಿತವಾದ ಬಾಣಗಳನ್ನು ಮಹಾರಥ

ರಾದ ಸಾತ್ಯಕಿಯೇ ಮೊದಲಾದವರು ನಿವಾರಣೆಮಾಡಿಕೊಂಡು ಅನಂತರ ಬಲಪೂರ್ವಕವಾಗಿ ಪ್ರತಿಯೊಬ್ಬರೂ ಹತ್ತು-ಹತ್ತು ಬಾಣಗಳಿಂದ ಭೀಷ್ಮ ನನ್ನು ಪ್ರಹರಿಸಿದರು. ಮಹಾರಥನಾದ ಶಿಖಂಡಿಯು ಬಿಟ್ಟ ಚಿನ್ನದ ರೆಕ್ಕೆಗಳಿಂದ ಕೂಡಿದ್ದ ಬಾಣಗಳು ಭೀಷ್ಮನ ಶರೀರದ ಮೇಲೆ ಯಾವ ವಿಧವಾದ ನೋವನ್ನೂ ಉಂಟುಮಾಡುತ್ತಿರಲಿಲ್ಲ. ಕಿರೀಟಿಯು ಬಹುಕುಪಿತ ನಾಗಿ ಶಿಖಂಡಿಯನ್ನು ಮುಂದೆಮಾಡಿಕೊಂಡು ಭೀಷ್ಮನೊಬ್ಬನ ಮೇಲೆಯೇ ಆಕ್ರಮಣವನ್ನು ನಡೆಸಿದನು ಮತ್ತು ಭೀಷ್ಮನ ಧನುಸ್ಸನ್ನೂ ಕತ್ತರಿಸಿದನು. ದುರ್ಯೋಧನನ ಕಡೆಯ ಮಹಾರಥರು–ಅರ್ಜುನನು ಭೀಷ್ಮನ ಧನುಸ್ಸನ್ನು ಕತ್ತರಿಸಿದುದನ್ನು ಸಹಿಸಿಕೊಳ್ಳಲಿಲ್ಲ. ದ್ರೋಣರು, ಕೃತವರ್ಮಾ, ಸಿಂಧುರಾಜ ನಾದ ಜಯದ್ರಥ, ಭೂರಿಶ್ರವಸ, ಶಲ, ಶಲ್ಯ, ಭಗದತ್ತ–ಈ ಏಳುಮಂದಿ ಮಹಾರಥರೂ ಪರಮಕ್ರುದ್ಧರಾಗಿ ತಮ್ಮ ದಿವ್ಯವಾದ ಶಸ್ತ್ರಗಳನ್ನು ಪ್ರದರ್ಶಿ ಸುತ್ತಾ ಅರ್ಜುನನನ್ನು ಬಾಣಗಳಿಂದ ಮುಚ್ಚುತ್ತಾ ಆಕ್ರಮಿಸಿದರು. ಪ್ರಳಯ ಕಾಲದಲ್ಲಿ ತೀರವನ್ನತಿಕ್ರಮಿಸಿದ ಸಮುದ್ರಗಳ ಶಬ್ದದಂತೆಯೇ–ಫಾಲ್ಗುನನ ಮೇಲೆ ಬೀಳುತ್ತಿದ್ದ ಮಹಾರಥರ ಗರ್ಜನೆಯ ಶಬ್ದವಿದ್ದಿತು. ಅರ್ಜುನನ ರಥದ ಸಮೀಪದಲ್ಲಿ–"ಸಂಹಾರಮಾಡಿರಿ! (ಸೈನ್ಯವನ್ನು) ಕರೆತನ್ನಿರಿ ಹಿಡಿಯಿರಿ! ಹೊಡೆಯಿರಿ! ಚೂರು-ಚೂರಾಗಿ ಕತ್ತರಿಸಿರಿ!"–ಇವೇ ಮುಂತಾದ ಭಯಂಕರಶಬ್ದಗಳು ಕೇಳಿಬರುತ್ತಿದ್ದುವು. ಅಂತಹ ಭಯಂಕರ ಗರ್ಜನೆಗಳನ್ನು ಕೇಳಿ ಪಾಂಡವಮಹಾರಥರು ಫಾಲ್ಗುನನನ್ನು ರಕ್ಷಿಸುವ ಸಲುವಾಗಿ ಅವನ ರಥದ ಬಳಿಗೆ ಧಾವಿಸಿದರು. ಸಾತ್ಯಕಿ, ಭೀಮಸೇನ, ಧೃಷ್ಟದ್ಯುಮ್ನ, ವಿರಾಟ, ದ್ರುಪದ, ಘಟೋತ್ಕಚರಾಕ್ಷಸ, ಅಭಿಮನ್ಯು–ಈ ಏಳುಮಂದಿ ಮಹಾರಥರು ಪರಮಕ್ರುದ್ಧರಾಗಿ ಚಿತ್ರಿತವಾಗಿದ್ದ ಧನುಸ್ಸು ಗಳನ್ನು ಧರಿಸಿ ಶೀಘ್ರವಾಗಿ ಅರ್ಜುನನ ಬಳಿಗೆ ಹೋದರು. ಕೌರವರ ಕಡೆಯ ಯೋಧರಿಗೂ ಮತ್ತು ಪಾಂಡವರ ಕಡೆಯ ಯೋಧರಿಗೂ ಭಯಂಕರವೂ, ರೋಮಾಂಚಕಾರಕವೂ ಆದ ಮಹಾಯುದ್ಧವು ದೇವತೆ ಗಳಿಗೂ–ದಾನವರಿಗೂ ನಡೆದ ಯುದ್ಧದಂತೆಯೇ ನಡೆಯಿತು. ಕಿರೀಟಿ ಯಿಂದ ರಕ್ಷಿಸಲ್ಪಡುತ್ತಿದ್ದ ವೀರಶ್ರೇಷ್ಠನಾದ ಶಿಖಂಡಿಯು ಧನುಸ್ಸಿನಿಂದ ವಿಹೀನನಾಗಿದ್ದ ಭೀಷ್ಮನನ್ನು ಹತ್ತು ಬಾಣಗಳಿಂದಲೂ, ಸಾರಥಿ ಯನ್ನು ಹತ್ತು ಬಾಣಗಳಿಂದಲೂ ಪ್ರಹರಿಸಿ, ಮತ್ತೊಂದು ಬಾಣದಿಂದ

ಭೀಷ್ಮನ ಧ್ವಜವನ್ನೂ ಕತ್ತರಿಸಿದನು. ಗಾಂಗೇಯನು ಮತ್ತೊಂದು ವೇಗ ವತ್ತರವಾದ ಧನುಸ್ಸನ್ನು ತೆಗೆದುಕೊಂಡು ಶಿಂಜಿನಿಯನ್ನು ಬಿಗಿದು ಸಿದ್ಧ ಮಾಡುವುದರಲ್ಲಿದ್ದಾಗ ಆ ಧನುಸ್ಸನ್ನೂ ಸಹ ಅರ್ಜುನನು ನಿಶಿತವಾದ ಮೂರು ಬಾಣಗಳಿಂದ ಕತ್ತರಿಸಿಬಿಟ್ಟನು. ಈ ರೀತಿಯಲ್ಲಿ ಕ್ರುದ್ಧನಾದ ಪಾಂಡವನು ಗಾಂಗೇಯನು ಹೊಸ-ಹೊಸ ಧನುಸ್ಸನ್ನು ತೆಗೆದುಕೊಳ್ಳುತ್ತಿದ್ದಂತೆಯೇ ಅದನ್ನು ಕತ್ತರಿಸುತ್ತಲೇ ಇದ್ದನು.

ಧನುಸ್ಸಿನಿಂದ ವಿಹೀನನಾಗಿದ್ದ ಭೀಷ್ಮನು ಪರಮಕ್ರುದ್ಧನಾಗಿ ತನ್ನ ಕಟವಾಯಿಗಳನ್ನು ನಾಲಿಗೆಯಿಂದ ನೆಕ್ಕುತ್ತಾ ಪರ್ವತವನ್ನೂ ಸಹ ಸೀಳುವ ಸಾಮರ್ಥ್ಯದಿಂದ ಕೂಡಿದ್ದ ಶಕ್ತ್ಯಾಯುಧವನ್ನು ಒಡನೆಯೇ ಕೈಗೆತ್ತಿಕೊಂಡನು. ಕ್ರುದ್ಧನಾದ ಭೀಷ್ಮನು ಆ ಶಕ್ತ್ಯಾಯುಧವನ್ನು ಅರ್ಜುನನ ರಥದ ಕಡೆಗೆ ಎಸೆದನು. ವಜ್ರಾಯುಧದಂತೆ ಪ್ರಜ್ವಲಿಸುತ್ತಿದ್ದ ಶಕ್ತ್ಯಾಯುಧವು ತನ್ನ ಮೇಲೆ ಬೀಳಲಿರುವುದನ್ನು ಕಂಡು ಅರ್ಜುನನು ನಿಶಿತವಾದ ಭಲ್ಲಗಳೆಂಬ ಐದು ಬಾಣಗಳನ್ನು ಬತ್ತಳಿಕೆಯಿಂದ ತೆಗೆದುಕೊಂಡು ಭೀಷ್ಮನ ಬಾಹುಗಳಿಂದ ಪ್ರಚೋದಿತವಾದ ಶಕ್ತ್ಯಾಯುಧವನ್ನು ಐದು ಬಾಣಗಳಿಂದ ಐದು ಪ್ರಕಾರವಾಗಿ ಕತ್ತರಿಸಿಬಿಟ್ಟನು. ಸಂಕ್ರುದ್ಧನಾದ ಕಿರೀಟಿಯಿಂದ ಕತ್ತರಿಸಲ್ಪಟ್ಟ ಆ ಶಕ್ತ್ಯಾಯುಧವು ಮೇಘಮಂಡಲದಿಂದ ಚ್ಯುತವಾದ ಮತ್ತು ತುಣುಕು ತುಣುಕಾದ ಮಿಂಚಿನಂತೆ–ಕೆಳಕ್ಕೆ ಬಿದ್ದಿತು. ತನ್ನ ಶಕ್ತ್ಯಾಯುಧವೂ ಪಾರ್ಥನ ಬಾಣಗಳಿಂದ ಛಿನ್ನವಾದುದನ್ನು ಕಂಡ ಭೀಷ್ಮನು ಕ್ರೋಧಮೂರ್ಛಿತನಾಗಿ ತನ್ನ ಬುದ್ಧಿಯಿಂದ ಈ ರೀತಿಯಲ್ಲಿ ಚಿಂತಿಸತೊಡಗಿದನು :

**ಶಕ್ತೋಽಹಂ ಧನುಷೈಕೇನ ನಿಹನ್ತುಂ ಸರ್ವಪಾಣ್ಡವಾನ್ ।**
**ಯದ್ಯೇಷಾಂ ನ ಭವೇದ್ಗೋಪ್ತಾ ವಿಷ್ವಕ್ಸೇನೋ ಮಹಾಬಲಃ ॥೩೨॥**

"ಒಂದು ವೇಳೆ ಈ ಪಾಂಡವರ ರಕ್ಷಕನು ಮಹಾಬಲನಾದ ವಿಷ್ವ ಕ್ಸೇನನೇ (ಶ್ರೀಕೃಷ್ಣನೇ) ಆಗಿರದಿದ್ದರೆ ಒಂದೇ ಒಂದು ಧನುಸ್ಸಿನಿಂದ ನಾನು ಈ ಎಲ್ಲ ಪಾಂಡವರನ್ನೂ ಸಂಹರಿಸುವುದಕ್ಕೆ ಶಕ್ತನಾಗಿರುತ್ತೇನೆ. ಪಾಂಡವರು (ವಿಷ್ವಕ್ಸೇನನ ರಕ್ಷಣೆಯಿಂದಾಗಿ) ಅವಧ್ಯರಾಗಿರುವುದು ಮತ್ತು ಶಿಖಂಡಿಗೆ ಸ್ತ್ರೀಭಾವವಿರುವುದು–ಈ ಎರಡೂ ಕಾರಣಗಳಿಂದ ನಾನು ಪಾಂಡವರೊಡನೆ

ಯುದ್ಧಮಾಡಲು ಇಷ್ಟಪಡುವುದಿಲ್ಲ. ನನ್ನ ತಂದೆಯಾದ ಶಾಂತನುವಿಗೆ ಸತ್ಯವತಿಯನ್ನು ತಂದು ಮದುವೆಮಾಡಿದಾಗ ಸಂತುಷ್ಟನಾದ ನನ್ನ ತಂದೆಯು ನನಗೆ ಎರಡು ವರಗಳನ್ನು ದಯಪಾಲಿಸಿದ್ದನು. ಯುದ್ಧದಲ್ಲಿ ಅವಧ್ಯತ್ವ ಮತ್ತು ಸ್ವಚ್ಛಂದಮರಣ–ಇವುಗಳೇ ಆ ಎರಡು ವರಗಳು. ಈಗ ನನಗೆ ಮೃತ್ಯುಕಾಲವು (ನಾನೇ ಮರಣವನ್ನು ಇಚ್ಛಿಸುವ ಕಾಲವು) ಪ್ರಾಪ್ತವಾಗಿರುವುದೆಂದು ಭಾವಿಸುತ್ತೇನೆ."

ಅಮಿತತೇಜಸ್ವಿಯಾದ ಭೀಷ್ಮನ ನಿಶ್ಚಯವನ್ನು ತಿಳಿದ ಆಕಾಶದಲ್ಲಿದ್ದ ಋಷಿಗಳೂ ಮತ್ತು ವಸುಗಳೂ ಭೀಷ್ಮನನ್ನು ಕುರಿತು ಹೇಳಿದರು : "ನೀನು ಯಾವ ರೀತಿಯಲ್ಲಿ ನಿಶ್ಚಯಮಾಡಿರುವೆಯೋ ಅದು ನಮಗೂ ಪ್ರಿಯವಾಗಿದೆ. ಭೀಷ್ಮ! ಯುದ್ಧದಿಂದ ನಿನ್ನ ಚಿತ್ತವೃತ್ತಿಯನ್ನು ಪ್ರತಿವರ್ತಿಸು. (ಯುದ್ಧವನ್ನು ಮುಂದುವರಿಸಲು ಪುನಃ ನಿಶ್ಚಯಮಾಡಬೇಡ.)"

ಮಹಾರಾಜ! ಋಷಿಗಳ ಮತ್ತು ವಸುಗಳ ಮಾತು ಮುಗಿದೊಡನೆಯೇ ಮಂಗಳಕರವಾದ, ಅನುಕೂಲವಾದ, ಸುಗಂಧಯುಕ್ತವಾದ ಗಾಳಿಯು ಸಣ್ಣ-ಸಣ್ಣ ತುಂತುರುಹನಿಗಳೊಡನೆ ಬೀಸತೊಡಗಿತು. ದೇವ ದುಂದುಭಿಗಳೂ ಗಟ್ಟಿಯಾಗಿ ಮೊಳಗಿದುವು. ಭೀಷ್ಮನ ಮೇಲೆ ಪುಷ್ಪವೃಷ್ಟಿಯಾಯಿತು. ಋಷಿಗಳೂ ಮತ್ತು ವಸುಗಳೂ ಹೇಳುತ್ತಿದ್ದ ಮಾತುಗಳನ್ನು ಅಲ್ಲಿ ಬೇರೆ ಯಾರೂ ಕೇಳಿಸಿಕೊಳ್ಳಲಿಲ್ಲ. ಭೀಷ್ಮನು ಮತ್ತು ವ್ಯಾಸರ ಅನುಗ್ರಹದ ಪ್ರಭಾವದಿಂದ ನಾನು–ಇಬ್ಬರೇ ಆ ಮಾತನ್ನು ಕೇಳಿಸಿಕೊಂಡೆವು. ಸರ್ವಲೋಕಪ್ರಿಯನಾದ ಭೀಷ್ಮನು ರಥದಿಂದ ಬೀಳಲು ನಿಶ್ಚಯಿಸಿರುವುದನ್ನು ಕೇಳಿ ದೇವತೆಗಳಿಗೂ ಬಹಳ ಆಶ್ಚರ್ಯವಾಯಿತು. ದೇವಗಣಗಳ ಮಾತನ್ನು ಕೇಳಿದ ಮಹಾತಪಸ್ವಿಯಾದ ಭೀಷ್ಮನು ಸರ್ವಾವರಣಗಳನ್ನೂ ಭೇದಿಸುವಂತಹ ನಿಶಿತವಾದ ಬಾಣಗಳಿಂದ ಪ್ರಹೃತನಾದರೂ ಅರ್ಜುನನನ್ನು ಜಯಿಸಲು ಪ್ರಯತ್ನಿಸಲಿಲ್ಲ. ಆ ಸಮಯದಲ್ಲಿ ಶಿಖಂಡಿಯು ಕ್ರುದ್ಧನಾಗಿ ಪಿತಾಮಹನನ್ನು ಒಂಬತ್ತು ಬಾಣಗಳಿಂದ ವಕ್ಷಸ್ಥಳದಲ್ಲಿ ಪ್ರಹರಿಸಿದನು. ಭೂಕಂಪವಾದರೂ ಪರ್ವತವು ವಿಚಲಿತವಾಗದಂತೆ–ಶಿಖಂಡಿಯಿಂದ ಪ್ರಹೃತನಾದ ಪಿತಾಮಹನು ವಿಚಲಿತನಾಗಲಿಲ್ಲ. ಅದನ್ನು ಕಂಡು ಗಾಂಡೀವಿಯು ನಸುನಗುತ್ತಾ ತನ್ನ ಧನುಸ್ಸನ್ನು ಟೇಂಕರಿಸಿ ಇಪ್ಪತ್ತೈದು ಕ್ಷುದ್ರಕ ಬಾಣಗಳಿಂದ ಭೀಷ್ಮನನ್ನು ಪ್ರಹರಿಸಿದನು.

ಪುನಃ ಸಂಕ್ರುದ್ಧನಾದ ಅರ್ಜುನನು ಬಹಳ ಶೀಘ್ರವಾಗಿ ನೂರು ಬಾಣಗಳನ್ನು ಪ್ರಯೋಗಿಸಿ ಭೀಷ್ಮನ ಶರೀರದ ಎಲ್ಲ ಭಾಗಗಳಲ್ಲಿಯೂ ಮತ್ತು ಮರ್ಮಸ್ಥಳಗಳಲ್ಲಿಯೂ ಗಾಯಗೊಳಿಸಿದನು. ಅದೇ ರೀತಿಯಲ್ಲಿ ಇತರ ಯೋಧರೂ ಪ್ರಹರಿಸಿದರು. ಹೀಗೆ ಅವರೆಲ್ಲರೂ ಪ್ರಹರಿಸಿದ ಸಾವಿರಾರು ಬಾಣಗಳನ್ನೂ ಭೀಷ್ಮನು ನಿರಸನಗೊಳಿಸಿ ಎಲ್ಲರನ್ನೂ ತೀಕ್ಷ್ಣವಾದ ಬಾಣಗಳಿಂದ ಬಾಧೆಪಡಿಸಿದನು. ಪುನಃ ಅವರು ಪ್ರಹರಿಸಿದ ಬಾಣಗಳೆಲ್ಲವನ್ನೂ ಸತ್ಯಪರಾಕ್ರಮನಾದ ಭೀಷ್ಮನು ಸನ್ನತಪರ್ವಗಳಿದ್ದ ತನ್ನ ಬಾಣಗಳಿಂದ ನಿರಸನಗೊಳಿಸಿದನು. ಮಹಾರಥನಾದ ಶಿಖಂಡಿಯೂ ಸಹ ಭೀಷ್ಮನ ಮೇಲೆ ಸತತವಾಗಿ ಬಾಣಗಳನ್ನು ಪ್ರಯೋಗಿಸುತ್ತಲೇ ಇದ್ದನು. ಆದರೆ ಅವನು ಬಿಡುತ್ತಿದ್ದ ಚಿನ್ನದ ಗರಿಗಳನ್ನು ಹೊಂದಿದ್ದ ಬಾಣಗಳು ಭೀಷ್ಮನಿಗೆ ಯಾವ ವಿಧವಾದ ಗಾಯವನ್ನೂ ಉಂಟುಮಾಡುತ್ತಿರಲಿಲ್ಲ. ಅದರಿಂದ ಕ್ರುದ್ಧನಾದ ಕಿರೀಟಿಯು ಶಿಖಂಡಿಯನ್ನು ಮುಂದೆ ಮಾಡಿಕೊಂಡು ಭೀಷ್ಮನನ್ನು ಆಕ್ರಮಿಸಿ ಯುದ್ಧಮಾಡುತ್ತಾ ಅವನ ಧನುಸ್ಸನ್ನು ಕತ್ತರಿಸಿದನು. ಅನಂತರ ಭೀಷ್ಮನನ್ನು ಒಂಬತ್ತು ಬಾಣಗಳಿಂದ ಪ್ರಹರಿಸಿ, ಒಂದು ಬಾಣದಿಂದ ಭೀಷ್ಮನ ರಥದ ಧ್ವಜವನ್ನು ಕತ್ತರಿಸಿ, ಹತ್ತು ಬಾಣಗಳಿಂದ ಅವನ ಸಾರಥಿಯನ್ನು ಭಯಕಂಪಿತನನ್ನಾಗಿ ಮಾಡಿದನು. ಅನಂತರ ಭೀಷ್ಮನು ಬಲವತ್ತರವಾದ ಮತ್ತೊಂದು ಧನುಸ್ಸನ್ನು ತೆಗೆದುಕೊಂಡನು. ಅದನ್ನೂ ಸಹ ಅರ್ಜುನನು ನಿಶಿತವಾದ ಮೂರು ಭಲ್ಲಗಳಿಂದ ಮೂರು ಕಡೆಗಳಲ್ಲಿ ಕತ್ತರಿಸಿದನು. ಹೀಗೆ ಭೀಷ್ಮನು ತೆಗೆದುಕೊಂಡ ಒಂದೊಂದು ಹೊಸ-ಹೊಸ ಧನುಸ್ಸನ್ನೂ ಅರ್ಜುನನು ನಿಮೇಷಾರ್ಧದಲ್ಲಿ ಕತ್ತರಿಸಿಬಿಡುತ್ತಿದ್ದನು. ಈ ರೀತಿಯಲ್ಲಿ ಅರ್ಜುನನು ಭೀಷ್ಮನ ಅನೇಕ ಧನುಸ್ಸುಗಳನ್ನು ಕತ್ತರಿಸಿದನು. ಮುಂದೆ ಭೀಷ್ಮನು ಅರ್ಜುನನ ಮೇಲೆ ಯಾವ ಪ್ರತಿಕ್ರಿಯೆಯನ್ನೂ ಮಾಡದೆಯೇ ಕುಳಿತುಬಿಟ್ಟನು. (ಪುನಃ ಧನುಸ್ಸನ್ನು ತೆಗೆದುಕೊಳ್ಳುವ ಪ್ರಯತ್ನವನ್ನು ಮಾಡಲೇ ಇಲ್ಲ.) ಆ ಸಮಯದಲ್ಲಿಯೂ ಅರ್ಜುನನು ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದನು. ಅರ್ಜುನನ ಆ ಪ್ರಹಾರದಿಂದ ಬಹಳವಾಗಿ ಗಾಯಗೊಂಡ ಭೀಷ್ಮನು ದುಃಶಾಸನನಿಗೆ ಹೇಳಿದನು : “ದುಃಶಾಸನ! ಕ್ರುದ್ಧನಾದ ಮಹಾರಥನಾದ ಈ ಪಾರ್ಥನು ಅನೇಕ ಸಾವಿರ ಬಾಣಗಳಿಂದ ನನ್ನನ್ನೇ

ಗಾಯಗೊಳಿಸಿಬಿಟ್ಟನು. ಇವನನ್ನು ಯುದ್ಧದಲ್ಲಿ ಜಯಿಸಲು ವಜ್ರಪಾಣಿಯಾದ ಇಂದ್ರನಿಂದಲೂ ಸಾಧ್ಯವಾಗುವುದಿಲ್ಲ. ಹಾಗೆಯೇ ನನ್ನನ್ನೂ ಕೂಡ ದೇವ-ದಾನವ-ರಾಕ್ಷಸರೆಲ್ಲರೂ ಒಟ್ಟಾಗಿ ಸೇರಿ ಯುದ್ಧಮಾಡಲು ಬಂದರೂ ಜಯಿಸಲಾರರು. ಹೀಗಿರುವಾಗ ಮಾನವಮಹಾರಥರ ವಿಷಯವಾಗಿ ಹೇಳ ತಕ್ಕದ್ದೇನಿದೆ? (ಮನುಷ್ಯರಿವನನ್ನು ಜಯಿಸುವ ಸಾಧ್ಯತೆಯೇ ಇಲ್ಲ.)" ಭೀಷ್ಮ-ದುಃಶಾಸನರಿಬ್ಬರೂ ಈ ರೀತಿಯಲ್ಲಿ ಸಂಭಾಷಣೆಯನ್ನು ಮಾಡುತ್ತಿದ್ದಾಗಲೇ ಶಿಖಂಡಿಯನ್ನು ಮುಂದೆ ಮಾಡಿಕೊಂಡು ಅರ್ಜುನನು ಭೀಷ್ಮನನ್ನು ನಿಶಿತವಾದ ಬಾಣಗಳಿಂದ ಪುನಃ ಪ್ರಹರಿಸಿದನು. ನಸುನಗುತ್ತಿರುವ ಮುಖಭಾವವನ್ನೇ ತೋರ್ಪಡಿಸಿಕೊಳ್ಳುತ್ತಾ ಭೀಷ್ಮನು ದುಃಶಾಸನನೊಡನೆ ಪುನಃ ಈ ಮಾತುಗಳನ್ನು ಹೇಳಿದನು : "ಗಾಂಡೀವಧನ್ವನಾದ ಅರ್ಜುನನ ನಿಶಿತವಾದ ಬಾಣಗಳಿಂದ ನಾನು ಬಹಳವಾಗಿ ಗಾಯಗೊಂಡಿದ್ದೇನೆ. ಅರ್ಜುನನ ಬಾಣಗಳು ವಜ್ರಾಯುಧದ ಸ್ಪರ್ಶಕ್ಕೆ ಸಮಾನವಾದ ದುಃಖವನ್ನುಂಟುಮಾಡುತ್ತವೆ. ಯಾರಿಂದ ಈ ಬಾಣಗಳು ಬರುತ್ತಿವೆಯೆಂಬುದನ್ನು ಮರೆಮಾಚಿಸಿ ಧನುಸ್ಸಿನಿಂದ ಅವಿಚ್ಛಿನ್ನವಾಗಿ ಪ್ರಮುಕ್ತವಾದ ಈ ಬಾಣಗಳೆಲ್ಲವೂ ಶಿಖಂಡಿಯು ಬಿಟ್ಟುದಲ್ಲ. ಶಿಖಂಡಿಯ ಕಡೆಯಿಂದ ಬರುತ್ತಿರುವಂತೆ ಕಾಣುತ್ತಿವೆ.* ದುಃಶಾಸನ! ಸುದೃಢವಾದ ಕವಚವನ್ನು ಭೇದಿಸಿ ಈ ಬಾಣಗಳು ನನ್ನ ಮರ್ಮಸ್ಥಾನಗಳನ್ನು ಕತ್ತರಿಸುತ್ತಿವೆ. ವಜ್ರಾಯುಧದಂತೆ ಮತ್ತು ಯಮದಂಡದಂತೆ ಕಠಿನಸ್ಪರ್ಶವಿರುವ, ವಜ್ರಾಯುಧದಂತೆ ವೇಗವಿರುವ ಮತ್ತು ಎದುರಿಸಲು ಅಸಾಧ್ಯವಾದ ಈ ಬಾಣಗಳು ಮುಸಲಾಯುಧಗಳಂತೆಯೇ (ಒನಕೆ) ನನ್ನನ್ನು ಪ್ರಹರಿಸುತ್ತಿವೆ. ಆದುದರಿಂದ

---

* ಇಲ್ಲಿಯೂ ಒಂದು ವಿಶೇಷವೆಂದರೆ : ಶಿಖಂಡಿಯನ್ನು ಮುಂದೆ ಮಾಡಿಕೊಂಡು ಶಿಖಂಡಿಯ ರಕ್ಷಕನಾಗಿ ಅರ್ಜುನನು ಭೀಷ್ಮನೊಡನೆ ಯುದ್ಧಮಾಡುತ್ತಿದ್ದನು. ಅರ್ಜುನನು ಬಿಡುತ್ತಿದ್ದ ಅನೇಕಬಾಣಗಳು ಶಿಖಂಡಿಯ ಕಡೆಯಿಂದ ಬರುತ್ತಿರುವಂತೆ ಇತರರಿಗೆ ತಿಳಿಯುತ್ತಿದ್ದಿತು. ಅಥವಾ ಬಾಣಗಳು ಭೀಷ್ಮನ ಕಡೆಗೆ ಯಾವ ಕಡೆಯಿಂದ ಬರುತ್ತಿವೆಯೆಂಬುದೇ ತಿಳಿಯುತ್ತಿರಲಿಲ್ಲ. ಈ ಮಧ್ಯದಲ್ಲಿ ಒಮ್ಮೊಮ್ಮೆ ಶಿಖಂಡಿಯೂ ಭೀಷ್ಮನ ಮೇಲೆ ಬಾಣಪ್ರಯೋಗಮಾಡುತ್ತಿದ್ದನು. ಶಿಖಂಡಿಯು ಬಿಟ್ಟ ಬಾಣಗಳು ಭೀಷ್ಮನ ಮೇಲೆ ಯಾವ ವಿಧವಾದ ಗಾಯಗಳನ್ನೂ ಉಂಟುಮಾಡುತ್ತಿರಲಿಲ್ಲ. ಆದರೆ ಅರ್ಜುನನು ಬಿಡುತ್ತಿದ್ದ ಬಾಣಗಳು ಬಹಳವಾಗಿ ಗಾಯಗಳನ್ನು ಉಂಟುಮಾಡುತ್ತಿದ್ದುವು. ಇದರಿಂದ ಭೀಷ್ಮನು ಬಾಣಗಳನ್ನು ಬಿಟ್ಟವರು ಯಾರೆಂಬುದನ್ನು ತಿಳಿದುಕೊಳ್ಳುತ್ತಿದ್ದನು.

ಇವುಗಳು ಶಿಖಂಡಿಯ ಬಾಣಗಳಲ್ಲ. ಈ ಬಾಣಗಳು ನನ್ನ ಪ್ರಾಣಗಳಿಗೆ ವೇದನೆಯನ್ನುಂಟುಮಾಡುತ್ತಿವೆ. ಅಹಿತವನ್ನುಂಟುಮಾಡುವ (ಸಮೀಪಸ್ಥ ರಾದ) ಯಮದೂತರಂತೆ–ಈ ಬಾಣಗಳು ನನ್ನ ಪ್ರಾಣಗಳನ್ನೇ ವಿನಾಶಗೊಳಿ ಸುತ್ತಿವೆ. ಆದುದರಿಂದ ಈ ಬಾಣಗಳೆಂದಿಗೂ ಶಿಖಂಡಿಯ ಬಾಣಗಳಲ್ಲ. ಈ ಬಾಣಗಳು ಗದಾ-ಪರಿಘಪ್ರಹಾರಗಳಿಂದ ಉಂಟಾಗುವ ವೇದನೆಯನ್ನೇ ಉಂಟುಮಾಡುತ್ತಿವೆ. ಕ್ರೋಧಾಭಿಭೂತಗಳಾದ ಪ್ರಚಂಡವಿಷಸರ್ಪಗಳಂತೆ– ಈ ಬಾಣಗಳು ತೀಕ್ಷ್ಣವಾದ ಅಗ್ರಭಾಗಗಳೆಂಬ ನಾಲಿಗೆಯಿಂದ ನನ್ನ ರಕ್ತವನ್ನು ನೆಕ್ಕುತ್ತಿವೆ. ಆದುದರಿಂದ ಇವುಗಳು ಶಿಖಂಡಿಯು ಬಿಟ್ಟ ಬಾಣಗಳಲ್ಲ. ಈ ಬಾಣಗಳು ನನ್ನ ಶರೀರದಲ್ಲಿ ಬಹಳ ಆಳದವರೆಗೂ ನಾಟಿಕೊಂಡಿವೆ. ಆದುದರಿಂದ ಇವುಗಳು ಶಿಖಂಡಿಯ ಬಾಣಗಳಲ್ಲ. ಅರ್ಜುನನ ಬಾಣಗಳೇ ಆಗಿರುತ್ತವೆ. ಏಡಿಮರಿಗಳು ತಾಯಿಯ ಹೊಟ್ಟೆಯಿಂದ ಹೊರಬರುವಾಗ ಹೊಟ್ಟೆಯನ್ನು ಎಲ್ಲ ಕಡೆಗಳಿಂದಲೂ ಸೀಳುವಂತೆ–ಅರ್ಜುನನು ಬಿಡುತ್ತಿರುವ ಬಾಣಗಳು ನನ್ನ ಎಲ್ಲ ಅವಯವಗಳನ್ನೂ ಸೀಳುತ್ತಿವೆ. ಗಾಂಡೀವಧನ್ವನಾದ, ಕಪಿಧ್ವಜನಾದ ಜಿಷ್ಣುವೊಬ್ಬನನ್ನು ಬಿಟ್ಟು ಬೇರೆ ಯಾವ ರಾಜರೂ ನನಗೆ ದುಃಖವನ್ನುಂಟುಮಾಡಲಾರರು. (ಅವರು ಪ್ರಹರಿಸುವ ಬಾಣಗಳಿಂದ ನನಗೆ ಬಾಧೆಯಾಗುವುದಿಲ್ಲ.)" ಹೀಗೆಂದು ದುಃಶಾಸನನೊಡನೆ ಹೇಳುತ್ತಾ ಭೀಷ್ಮನು ಪಾಂಡವರನ್ನು ಸುಟ್ಟೇಬಿಡುತ್ತಾನೆಯೋ ಎಂಬಂತೆ ಪರಮಕ್ರುದ್ಧನಾಗಿ ಶಕ್ತ್ಯಾಯುಧವನ್ನು ತೆಗೆದುಕೊಂಡು ರಭಸದಿಂದ ಪಾರ್ಥನ ಮೇಲೆ ಎಸೆದನು. ಪಾರ್ಥನು ಆ ಶಕ್ತ್ಯಾಯುಧವನ್ನೂ ಮೂರು ಬಾಣಗಳಿಂದ ಮೂರು ಕಡೆಗಳಲ್ಲಿ ಕತ್ತರಿಸಿದನು. ಅನಂತರ ಭೀಷ್ಮನು ಎಲ್ಲ ಕೌರವ ವೀರರೂ ನೋಡುತ್ತಿದ್ದಂತೆಯೇ ಕಡೆಯದಾಗಿ ಮೃತ್ಯುವನ್ನಪ್ಪಲು ಅಥವಾ ಜಯವನ್ನು ಗಳಿಸಲು ಸುವರ್ಣಭೂಷಿತವಾದ ಗುರಾಣಿಯನ್ನೂ ಮತ್ತು ಕತ್ತಿಯನ್ನೂ ಕೈಗೆ ತೆಗೆದುಕೊಂಡನು. ಖಡ್ಗಯುದ್ಧಕ್ಕಾಗಿ ಭೀಷ್ಮನು ರಥದಿಂದ ಇಳಿಯುವುದರೊಳಗಾಗಿಯೇ ಪಾರ್ಥನು ನೂರಾರು ಬಾಣಗಳಿಂದ ಅವನು ಹಿಡಿದಿದ್ದ ಗುರಾಣಿಯನ್ನು ನೂರಾರು ಚೂರುಗಳನ್ನಾಗಿ ಮಾಡಿಬಿಟ್ಟನು. ಅರ್ಜುನನ ಆ ಬಾಣಪ್ರಹಾರದ ಕೌಶಲವು ಪರಮಾದ್ಭುತವಾಗಿ ಕಂಡಿತು.

ಆ ಸಮಯದಲ್ಲಿ ಯುಧಿಷ್ಠಿರನು ತನ್ನ ಸೈನಿಕರನ್ನು ಕುರಿತು : 'ಸೈನಿಕರೇ! ಗಾಂಗೆಯನ ಬಳಿಗೆ ಧಾವಿಸಿರಿ. ಅಣುಮಾತ್ರವೂ ನೀವು ಭೀಷ್ಮನಿಗಾಗಿ ಭಯ ಪಡುವ ಕಾರಣವಿಲ್ಲ'–ಎಂದು ಹೇಳಿ ಪ್ರೋತ್ಸಾಹಿಸಿದನು. ಯುಧಿಷ್ಠಿರನ ಮಾತನ್ನು ಕೇಳಿ ಯೋಧರೆಲ್ಲರೂ ತೋಮರ, ಪ್ರಾಸ, ಬಾಣಗಳು, ಪಟ್ಟಿಶ, ಖಡ್ಗ, ನಿಶಿತವಾಗಿದ್ದ ನಾರಾಚ, ವತ್ಸದಂತ, ಭಲ್ಲ–ಇವೇ ಮೊದಲಾದ ಶಸ್ತ್ರ ಗಳನ್ನು ಹಿಡಿದು ಭೀಷ್ಮನೊಬ್ಬನನ್ನೇ ಆಕ್ರಮಿಸಿದರು. ಆಗ ಪಾಂಡವರ ಸೈನ್ಯದಲ್ಲಿ ಘೋರವಾದ ಸಿಂಹನಾದವು ಕೇಳಿಬಂದಿತು. ಭೀಷ್ಮನ ವಿಜಯವನ್ನೆ ಇಚ್ಛಿಸಿದ್ದ ನಿನ್ನ ಮಕ್ಕಳೂ ಸಹ ಘೋರಗರ್ಜನೆಗಳನ್ನು ಮಾಡಿದರು. ಭೀಷ್ಮನೊಬ್ಬನನ್ನೇ ಅವರೂ ರಕ್ಷಿಸುತ್ತಿದ್ದು ಸಿಂಹನಾದಗಳನ್ನು ಮಾಡಿದರು. ಅನಂತರ ನಿಮ್ಮ ಕಡೆಯವರಿಗೂ–ಶತ್ರುಗಳ ಕಡೆಯವರಿಗೂ ಘೋರವಾದ ಯುದ್ಧವು ಪುನಃ ಪ್ರಾರಂಭವಾಯಿತು.

ರಾಜೇಂದ್ರ! ಗಂಗೆಯು ಸಮುದ್ರವನ್ನು ಸೇರುವ ಸಮಯದಲ್ಲಿ ದೊಡ್ಡದಾದ ಸುಳಿಯು ಹುಟ್ಟುವಂತೆ–ಆ ಹತ್ತನೆಯ ದಿವಸದಲ್ಲಿ ಮುಹೂರ್ತಕಾಲದವರೆಗೆ ಭೀಷ್ಮಾರ್ಜುನರಿಗೆ ಘರ್ಷಣೆಯುಂಟಾಯಿತು. ಯುದ್ಧಮಾಡುತ್ತಿದ್ದ ಸೈನಿಕರು ಪರಸ್ಪರವಾಗಿ ಸಂಹಾರಕಾರ್ಯವನ್ನು ನಡೆಸು ತ್ತಿರಲಾಗಿ, ರಕ್ತದಿಂದ ತೋಯ್ದುಹೋಗಿದ್ದ ಭೂಮಿಯು ಬಹಳ ಭಯಂಕರ ರೂಪವುಳ್ಳದ್ದಾಗಿ ಕಾಣುತ್ತಿದ್ದಿತು. ಭೂಮಿಯಲ್ಲಿ ಸಮವಾದ ಸ್ಥಳವು ಯಾವುದು? ಹಳ್ಳವೆಲ್ಲಿದೆ? ತಿಟ್ಟೆಲ್ಲಿದೆ?–ಎಂಬುದೇ ಆ ಸಮಯದಲ್ಲಿ ತಿಳಿಯುತ್ತಿರಲಿಲ್ಲ. ಆ ಹತ್ತನೆಯ ದಿವಸ ಭೀಷ್ಮನು ಮರ್ಮಸ್ಥಳಗಳಲ್ಲಿ ಪ್ರಹೃತನಾಗಿದ್ದರೂ ಸಹ ಹತ್ತು ಸಾವಿರ ಯೋಧರನ್ನು ಸಂಹರಿಸಿ ಅಚಲನಾಗಿ ನಿಂತಿದ್ದನು. ಅನಂತರ ಸೇನೆಯ ಅಗ್ರಭಾಗದಲ್ಲಿ ನಿಂತಿದ್ದ ಧನುರ್ಧರನಾದ ಪಾರ್ಥನು ಕೌರವಸೈನ್ಯಸಮೂಹದ (ವ್ಯೂಹದ) ಒಳಕ್ಕೆ ನುಗ್ಗಿ ಬಾಣಪ್ರಹಾರ ಗಳಿಂದ ಸೈನಿಕರನ್ನು ಚದುರುವಂತೆ ಮಾಡತೊಡಗಿದನು.

ಮಹಾರಾಜ! ಆ ಸಮಯದಲ್ಲಿ ನಾವೆಲ್ಲರೂ ಶ್ವೇತವಾಹನನಾದ ಕುಂತಿಯ ಮಗನಾದ ಧನಂಜಯನಿಂದ ಭಯಗೊಂಡೆವು. ನಿಶಿತವಾದ ಶಸ್ತ್ರ ಗಳಿಂದ ಸತತವಾಗಿ ಪೀಡಿಸಲ್ಪಟ್ಟ ನಾವು ಯುದ್ಧದಿಂದ ಪಲಾಯನಮಾಡಿ ದೆವು. ಸೌವೀರರು, ಕಿತವರು, ಪ್ರಾಚ್ಯರು, ಪ್ರತೀಚ್ಯರು, ಔತ್ತರೇಯರು,

ಮಾಲವರು, ಅಭೀಷಾಹರು, ಶೂರಸೇನರು, ಶಿಬಿಗಳು, ವಸಾತಿಗಳು, ಶಾಲ್ವಾಶ್ರಯರು, ತ್ರಿಗರ್ತರು, ಅಂಬಷ್ಠರು ಮತ್ತು ಕೇಕಯರು–ಈ ಎಲ್ಲರೂ ಅರ್ಜುನನ ಬಾಣಗಳಿಂದ ಸತತವಾಗಿ ಪೀಡಿತರಾಗಿ ಅದರಿಂದ ಉಂಟಾದ ಗಾಯಗಳಿಂದ ಬಾಧೆಪಡುತ್ತಿದ್ದರೂ ಕೂಡ ಅರ್ಜುನನೊಡನೆ ಯುದ್ಧ ಮಾಡುತ್ತಿದ್ದ ಭೀಷ್ಮನೊಬ್ಬನನ್ನೇ ಬಿಟ್ಟು ಪಲಾಯನಮಾಡಲಿಲ್ಲ. ಅನಂತರ ಪಾಂಡವರು ಭೀಷ್ಮನೊಬ್ಬನನ್ನೇ ನಾಲ್ಕು ಕಡೆಗಳಿಂದಲೂ ಆಕ್ರಮಿಸಿದರು. ಕುರುಸೈನಿಕರನ್ನೂ ಚದುರಿಸಿ ಭೀಷ್ಮನನ್ನೂ ಬಾಣಗಳ ವೃಷ್ಟಿಯಿಂದ ಮುಚ್ಚಿ ಬಿಟ್ಟರು. ಆ ಸಮಯದಲ್ಲಿ ಭೀಷ್ಮನ ರಥದ ಸಮೀಪದಲ್ಲಿ–"ಬೀಳಿಸಿರಿ! ಬಂಧಿಸಿರಿ! ಯುದ್ಧಮಾಡಿರಿ! ಚೂರು-ಚೂರುಗಳಾಗಿ ಕತ್ತರಿಸಿಬಿಡಿರಿ"– ಇವೇ ಮುಂತಾದ ಗರ್ಜನೆಗಳು ಕೇಳಿಬರುತ್ತಿದ್ದುವು. ಮಹಾರಾಜ! ಸಮರಾಂಗಣದಲ್ಲಿ ಭೀಷ್ಮನು ನೂರಾರು-ಸಾವಿರಾರು ಯೋಧರನ್ನು ಸಂಹರಿಸಿದನು.

ಆದರೆ ಅವನ ಶರೀರದಲ್ಲಿ ಬಾಣಗಳಿಂದ ಕ್ಷತವಾಗದೇ ಇದ್ದ ಜಾಗವು ಎರಡು ಅಂಗುಲದಷ್ಟು ಪ್ರದೇಶವೂ ಇರಲಿಲ್ಲ. (ಭೀಷ್ಮನಿಗೂ ಶರೀರಾದ್ಯಂತ ವಾಗಿ ಗಾಯವಾಗಿದ್ದಿತು.) ಈ ರೀತಿಯಾಗಿ ನಿನ್ನ ತಂದೆಯು ನಿಶಿತವಾದ ಅಗ್ರಭಾಗಗಳಿದ್ದ ಅರ್ಜುನನ ಬಾಣಗಳಿಂದ ಚೂರ್ಣೀಕೃತನಾಗಿ ಸೂರ್ಯನು ಮುಳುಗುವುದಕ್ಕೆ ಸ್ವಲ್ಪಹೊತ್ತು ಮುಂಚೆ ನಿನ್ನ ಮಕ್ಕಳೆಲ್ಲರೂ ನೋಡು ತ್ತಿದ್ದಂತೆಯೇ ತಲೆ ಮುಂದಾಗಿ ರಥದಿಂದ ಬಿದ್ದುಬಿಟ್ಟನು. ಭೀಷ್ಮನು ರಥ ದಿಂದ ಬೀಳುತ್ತಿರಲಾಗಿ ಅಂತರಿಕ್ಷದಲ್ಲಿದ್ದ ದೇವತೆಗಳ ಮಧ್ಯದಲ್ಲಿಯೂ, ಭೂಮಿಯಲ್ಲಿದ್ದ ರಾಜರ ಮಧ್ಯದಲ್ಲಿಯೂ ದೊಡ್ಡ ಹಾಹಾಕಾರಗಳ ಧ್ವನಿ ಯೆದ್ದಿತು. ಮಹಾತ್ಮನಾದ ಪಿತಾಮಹನು ರಥದಿಂದ ಬೀಳುತ್ತಿರುವುದನ್ನು ನೋಡಿ ಅವನೊಡನೆಯೇ ನಮ್ಮೆಲ್ಲರ ಹೃದಯಗಳೂ ಕುಸಿದುಬಿದ್ದುವು. ಎಲ್ಲ ಧನುಷ್ಮಂತರಿಗೂ ಕೇತುಪ್ರಾಯನಾಗಿದ್ದ ಭೀಷ್ಮನು, ಛಿನ್ನವಾದ ಇಂದ್ರಧ್ವಜವು ಕೆಳಕ್ಕೆ ಬೀಳುವಂತೆ–ಶಬ್ದಮಾಡುತ್ತಾ ಕೆಳಗೆ ಬಿದ್ದನು. ಆದರೆ ಶರಗಳ ಸಮೂಹದಿಂದ ಸಮಾವೃತನಾಗಿದ್ದ ಅವನು ಭೂಸ್ಪರ್ಶವನ್ನು ಮಾಡಲಿಲ್ಲ. (ಅವನ ಶರೀರದಲ್ಲಿ ಆಳವಾಗಿ ಚುಚ್ಚಿಕೊಂಡಿದ್ದ ಬಾಣಗಳೇ ಅವನಿಗೆ ಹಾಸಿಗೆಯಾಗಿ ಪರಿಣಮಿಸಿದವು.) ರಥದಿಂದ ಕೆಳಕ್ಕೆ ಬಿದ್ದು ಶರೀರಾದ್ಯಂತ ಚುಚ್ಚಿಕೊಂಡಿದ್ದ ಬಾಣಗಳನ್ನೇ ಹಾಸಿಗೆಯಂತೆ ಪರಿವರ್ತಿಸಿ

ಕೊಂಡ ಪುರುಷರ್ಷಭನಾದ ಭೀಷ್ಮನಿಗೆ ದಿವ್ಯವಾದ ಭಾವವೊಂದು ಸ್ಫುರಿಸಿತು. ಆ ಸಮಯದಲ್ಲಿ ಪರ್ಜನ್ಯನು ಮಳೆಗರೆದನು. ಭೂಮಿಯು ನಡುಗಿತು. ರಥದಿಂದ ಕೆಳಕ್ಕೆ ಬೀಳುತ್ತಾ ಭೀಷ್ಮನು ಸೂರ್ಯನು ದಕ್ಷಿಣದ ಕಡೆಗೆ ವಾಲಿಕೊಂಡಿರುವುದನ್ನು ಕಂಡನು. ಕಾಲದ ವಿಷಯವಾಗಿ ಯೋಚಿಸುತ್ತಿದ್ದ ಭೀಷ್ಮನಿಗೆ ಪ್ರಜ್ಞೆಯೂ ಚೆನ್ನಾಗಿಯೇ ಇದ್ದಿತು. ಅಂತರಿಕ್ಷದಲ್ಲಿ ಹೇಳುತ್ತಿದ್ದ ದಿವ್ಯವಾದ ಈ ಮಾತುಗಳನ್ನು ಭೀಷ್ಮನು ಕೇಳಿದನು.

**ಕಥಂ ಮಹಾತ್ಮಾ ಗಾಙ್ಗೇಯಃ ಸರ್ವಶಸ್ತ್ರಭೃತಾಂ ವರಃ ।**
**ಕಾಲಕರ್ತಾ ನರವ್ಯಾಘ್ರಃ ಸಮ್ಪ್ರಾಪ್ತೇ ದಕ್ಷಿಣಾಯನೇ ॥೯೫॥**

"ಸಕಲಶಸ್ತ್ರಗಳನ್ನೂ ಹೊಂದಿರುವವರಲ್ಲಿ ಶ್ರೇಷ್ಠನಾದ, ಮಹಾತ್ಮನಾದ, ಕಾಲದ ಮೇಲೂ ಪ್ರಭುತ್ವವಿರುವ, ನರವ್ಯಾಘ್ರನಾದ ಗಾಂಗೇಯನು ದಕ್ಷಿಣಾಯನವು ಪ್ರಾಪ್ತವಾಗಿರುವಾಗ ಹೇಗೆ ಪ್ರಾಣಬಿಡುತ್ತಾನೆ?" ದೇವತೆಗಳ ಆ ಮಾತನ್ನು ಕೇಳಿದ ಗಾಂಗೇಯನು 'ಸ್ಥಿತೋಽಸ್ಮಿ' 'ನಾವಿನ್ನೂ ಜೀವಿಸಿದ್ದೇನೆ (ಪ್ರಾಣಗಳನ್ನು ತ್ಯಜಿಸಿರುವುದಿಲ್ಲ.)' ಹೀಗೆಂಬುದಾಗಿ ಹೇಳಿ ರಥದಿಂದ ಭೂಮಿಯಲ್ಲಿ ಬಿದ್ದರೂ ಸಹ ಕುರುಪಿತಾಮಹನಾದ ಭೀಷ್ಮನು ಉತ್ತರಾಯಣವನ್ನು ಪ್ರತೀಕ್ಷಿಸುತ್ತಾ ಪ್ರಾಣಗಳನ್ನು ಧಾರಣೆಮಾಡಿಕೊಂಡೇ ಇದ್ದನು.

ಭೀಷ್ಮನ ಆ ಅಭಿಪ್ರಾಯವನ್ನು ತಿಳಿದು ಅವನ ತಾಯಿಯಾದ ಮತ್ತು ಹಿಮವಂತನ ಮಗಳಾದ ಗಂಗಾದೇವಿಯು ಮಹರ್ಷಿಗಳನ್ನು ಹಂಸರೂಪದಿಂದ ಭೀಷ್ಮನ ಬಳಿಗೆ ಕಳುಹಿಸಿದಳು. ಮಾನಸಸರೋವರದ ಸಮೀಪದಲ್ಲಿ ನಿವಾಸಮಾಡಿಕೊಂಡಿದ್ದ ಹಂಸರೂಪಿಗಳಾದ ಮಹರ್ಷಿಗಳು ಅತ್ಯವಸರದಿಂದ ಹಾರಿಕೊಂಡು ನರಶ್ರೇಷ್ಠನಾದ ಕುರುಪಿತಾಮಹನು ಶರತಲ್ಪದಲ್ಲಿ ಮಲಗಿದ್ದ ಸ್ಥಳಕ್ಕೆ ಅವನನ್ನು ನೋಡುವ ಸಲುವಾಗಿ ಬಂದರು. ಹಂಸರೂಪಿಗಳಾದ ಋಷಿಗಳು ಭೀಷ್ಮನ ಸಮೀಪಕ್ಕೆ ಬಂದು ಶರತಲ್ಪದಲ್ಲಿದ್ದ ಕುರುಕುಲಪಿತಾಮಹನಾದ ಭೀಷ್ಮನನ್ನು ನೋಡಿದರು. ಅವರು ಮಹಾತ್ಮನಾದ ಭೀಷ್ಮನ ಬಳಿಗೆ ಬಂದು ಪ್ರದಕ್ಷಿಣೆಯನ್ನು ಮಾಡಿ ದಕ್ಷಿಣಾಯನದ ವಿಷಯವಾಗಿ ತಮ್ಮತಮ್ಮಲ್ಲಿಯೇ ಪರಸ್ಪರವಾಗಿ ಸಮಾಲೋಚಿಸಿ ಹೇಳಿದರು :

**ಭೀಷ್ಮಃ ಕಥಂ ಮಹಾತ್ಮಾಸನ್ ಸಂಸ್ಥಾತಾ ದಕ್ಷಿಣಾಯನೇ ॥೧೦೨॥**



"ಭೀಷ್ಮನು ಮಹಾತ್ಮನಾಗಿದ್ದುಕೊಂಡು ದಕ್ಷಿಣಾಯನದಲ್ಲಿ ಹೇಗೆತಾನೇ ಮೃತ್ಯುವಶನಾಗುತ್ತಾನೆ?"-ಹೀಗೆಂಬುದಾಗಿ ಹೇಳಿ ಹಂಸರೂಪಿಗಳಾದ ಋಷಿಗಳು ದಕ್ಷಿಣದಿಕ್ಕಿನ ಕಡೆಗೆ ಹೊರಟರು. ದಕ್ಷಿಣದಿಕ್ಕಿಗೆ ಪ್ರಯಾಣಹೊರಡ ಲಿದ್ದ ಋಷಿಗಳನ್ನು ನೋಡಿ ಸ್ವಲ್ಪಹೊತ್ತು ಚಿಂತಿಸಿ ಅನಂತರ ಶಾಂತನವನು ಅವರೊಡನೆ ಹೇಳಿದನು : "ಸೂರ್ಯನು ದಕ್ಷಿಣಾಯನದಲ್ಲಿರುವಾಗ ನಾನು ಯಾವುದೇ ಕಾರಣದಿಂದಲೂ ದೇಹವನ್ನು ಬಿಟ್ಟುಹೋಗುವುದಿಲ್ಲ. ಈ ವಿಷಯವು ನನ್ನ ಮನಸ್ಸಿನಲ್ಲಿ ಮೊದಲೇ ಇದ್ದಿತು. ಸೂರ್ಯನು ಉತ್ತರಾಯಣದ ಗತಿಯನ್ನು ಆರಂಭಿಸಿದನಂತರವೇ ನಾನು ನನ್ನ ಹಿಂದಿನ

ಸ್ಥಾನವು ಯಾವುದಿದ್ದಿತೋ ಅಲ್ಲಿಗೇ ಹೊರಟುಹೋಗುತ್ತೇನೆ. ಹಂಸಗಳೇ! ನಾನು ಸತ್ಯವಚನವನ್ನೇ ಹೇಳುತ್ತಿದ್ದೇನೆ. ಉತ್ತರಾಯಣದ ಪ್ರತೀಕ್ಷೆಯಿಂದ ನಾನು ಪ್ರಾಣಗಳನ್ನು ಧಾರಣೆಮಾಡಿಕೊಂಡಿರುತ್ತೇನೆ. ಹೇಗೆಂದರೆ : ನಾನು ಇಚ್ಛಿಸಿದಾಗ ಪ್ರಾಣಗಳನ್ನು ಬಿಡುವ ಶಕ್ತಿಯು ನನಗೆ ಪ್ರಾಪ್ತವಾಗಿದೆ. ಉತ್ತರಾಯಣದಲ್ಲಿ ಮರಣಹೊಂದುವ ಆಸೆಯಿಂದಲೇ ನಾನು ಪ್ರಾಣಗಳನ್ನು ಧರಿಸಿರುತ್ತೇನೆ. 'ಇಚ್ಛಿಸಿದಾಗ ನಿನಗೆ ಮರಣವು ಪ್ರಾಪ್ತವಾಗುತ್ತದೆ' ಎಂಬ ಈ ವರವನ್ನೇ ಮಹಾತ್ಮನಾದ ನನ್ನ ತಂದೆಯು ನನಗೆ ದಯಪಾಲಿಸಿದ್ದನು. ಅವನ ವರದಾನವೀಗ ಸಫಲವಾಗಲಿ. ನನ್ನ ಪ್ರಾಣೋತ್ಸರ್ಗಕ್ಕೆ ನಿಯತವಾದ ಕಾಲವು ಪ್ರಾಪ್ತವಾಗುವವರೆಗೂ ನಾನು ಪ್ರಾಣಗಳನ್ನು ಧಾರಣೆಮಾಡಿಕೊಂಡೇ ಇರುತ್ತೇನೆ." ಹೀಗೆಂಬುದಾಗಿ ಹಂಸಗಳಿಗೆ ಹೇಳಿ ಭೀಷ್ಮನು ಶರತಲ್ಪದಲ್ಲಿಯೇ ಯಥಾಪೂರ್ವವಾಗಿ ಮಲಗಿದ್ದನು. ಮಹಾತೇಜಸ್ವಿಯಾದ, ಕುರುಗಳಿಗೆ ಶೃಂಗಪ್ರಾಯನಾಗಿದ್ದ ಭೀಷ್ಮನು ಬಿದ್ದುಹೋಗಲಾಗಿ ಪಾಂಡವ-ಸೃಂಜಯ-ಸೋಮಕರು ಸಿಂಹನಾದಗಳನ್ನು ಮಾಡಿದರು. ಮಹಾಸತ್ತ್ವನಾದ, ಭರತವಂಶೀಯರಿಗೆ ಪಿತಾಮಹನಾದ ಭೀಷ್ಮನು ಹತನಾಗಲಾಗಿ ನಿನ್ನ ಮಕ್ಕಳಿಗೆ ಮುಂದೇನು ಮಾಡಬೇಕೆಂಬುದೇ ತಿಳಿಯಲಿಲ್ಲ. ಕುರುಗಳಿಗೆ ಆ ಸಮಯದಲ್ಲಿ ಭಯಂಕರವಾದ ಸಮ್ಮೋಹವುಂಟಾಯಿತು. ಕೃಪ-ದುರ್ಯೋಧನರೇ ಆದಿಯಾಗಿ ಎಲ್ಲರೂ ನಿಟ್ಟುಸಿರುಬಿಡುತ್ತಾ ಅಳತೊಡಗಿದರು. ಭೀಷ್ಮನು ಹತನಾದ ವಿಷಾದದಿಂದಾಗಿ ಅವರು ಬಹಳ ಹೊತ್ತಿನವರೆಗೆ ಇಂದ್ರಿಯಗಳಿಂದ ಹೀನರಾಗಿದ್ದರು. (ಅವರ ಯಾವ ಇಂದ್ರಿಯಗಳೂ ಯಾವ ಕಾರ್ಯಗಳನ್ನೂ ಮಾಡುತ್ತಿರಲಿಲ್ಲ.) ಅವರಿಗೆ ಯುದ್ಧಮಾಡಲೂ ಕೂಡ ಮನಸ್ಸು ಬರಲಿಲ್ಲ. *ಸಂಧಿವಾತಹಿಡಿದವರಂತೆ ಸ್ತಬ್ಧರಾಗಿ ನಿಂತಿದ್ದರೇ ಹೊರತು ಪಾಂಡವರನ್ನು ಆಕ್ರಮಿಸಲು ಸಹ ಹೋಗಲಿಲ್ಲ.

ಮಹಾತೇಜಸ್ಸಿನಿಂದ ಕೂಡಿದ್ದ ಅವಧ್ಯನಾಗಿದ್ದ ಭೀಷ್ಮನೂ ಸಹ ವಧಿಸಲ್ಪಡಲಾಗಿ ಕುರುರಾಜನ ವಿನಾಶವು ಬಹಳ ಶೀಘ್ರವಾಗಿ ಸಂಭವಿಸುವುದೆಂದು ಎಲ್ಲರೂ ತರ್ಕಿಸಿದರು. ನಾವು ವೀರಶ್ರೇಷ್ಠನಾದ ಭೀಷ್ಮನನ್ನು ಕಳೆದುಕೊಂಡಿದ್ದೆವು. ಸವ್ಯಸಾಚಿಯ ನಿಶಿತವಾದ ಬಾಣಗಳಿಂದ ಕ್ಷತ-ವಿಕ್ಷತ

* ಊರುಗ್ರಾಹ = ಸಂಧಿವಾತ, ಮಂಡಿಯು ಚಲಿಸದಂತೆ ಮಾಡುವ ಒಂದು ರೋಗ.

ರಾಗಿ ಮಾಡಲ್ಪಟ್ಟಿದ್ದೆವು. ಮೇಲಾಗಿ ಅವನಿಂದ ಪರಾಜಿತರಾಗಿದ್ದೆವು. ಅಂತಹ ಅವಸ್ಥೆಯಲ್ಲಿದ್ದ ನಾವು ಆಗಿನ ಸಂದರ್ಭದಲ್ಲಿ ನಮ್ಮ ಕರ್ತವ್ಯವೇನೆಂಬುದನ್ನು ನಿಶ್ಚಯಿಸಲೂ ಅಸಮರ್ಥರಾದೆವು. ಪಾಂಡವರಾದರೋ ಜಯವನ್ನು ಗಳಿಸಿ ಪರಲೋಕಗಳಲ್ಲಿಯೂ ಉತ್ತಮಗತಿಯನ್ನು ಸಂಪಾದಿಸಿಕೊಂಡರು. ಪರಿಘಾಯುಧಕ್ಕೆ ಸಮಾನವಾದ ತೋಳುಗಳನ್ನು ಹೊಂದಿದ್ದ ಆ ಶೂರ ರೆಲ್ಲರೂ ದೊಡ್ಡ-ದೊಡ್ಡ ಶಂಖಗಳನ್ನು ಗಟ್ಟಿಯಾಗಿ ಊದಿದರು. ಪಾಂಚಾಲ ರೊಡನೆ ಸೋಮಕರೂ ಸೇರಿಕೊಂಡು ಅಮಿತಾನಂದವನ್ನು ಪಡೆದರು. ಆನಂದೋತ್ಸವವನ್ನು ಆಚರಿಸಿದರು. ಸಾವಿರಾರು ರಣವಾದ್ಯಗಳ ಮೂಲಕ ಜಯಘೋಷಣೆಯಾಗುತ್ತಿರಲಾಗಿ, ಮಹಾಬಲನಾದ ಭೀಮಸೇನನು ತೋಳುಗಳನ್ನು ಗಟ್ಟಿಯಾಗಿ ತಟ್ಟುತ್ತಾ ದೀರ್ಘವಾಗಿ ಗರ್ಜನೆಯನ್ನು ಮಾಡಿದನು. ವಿಭುವಾದ ಗಾಂಗೇಯನು ಹತನಾಗಲಾಗಿ ರಣಾಂಗಣದ ಸುತ್ತಲೂ ಇದ್ದ ಎರಡೂ ಸೈನ್ಯಗಳ ವೀರರು ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟು ಗಾಢವಾದ ಚಿಂತೆಯಲ್ಲಿ ಮಗ್ನರಾದರು. ಕೆಲವರು ಬಿಕ್ಕಿ-ಬಿಕ್ಕಿ ಅಳುತ್ತಿದ್ದರು. ಕೆಲವರು ದಿಕ್ಕುಗಾಣದೇ ಓಡಿಹೋಗುತ್ತಿದ್ದರು. ಮತ್ತೆ ಕೆಲವು ಯೋಧರು ಮೂರ್ಛಿತರಾಗಿ ಕೆಳಗೆ ಬೀಳುತ್ತಿದ್ದರು. ಕೆಲವರು ಕ್ಷತ್ರಿಯಧರ್ಮವನ್ನೇ ಧಿಕ್ಕರಿಸುತ್ತಿದ್ದರು. ಮತ್ತೆ ಕೆಲವರು ಭೀಷ್ಮನನ್ನು ಅಭಿನಂದಿಸುತ್ತಿದ್ದರು. ಋಷಿ ಗಳೂ ಮತ್ತು ಪಿತೃದೇವತೆಗಳೂ ಮಹಾವ್ರತನಾದ ಭೀಷ್ಮನನ್ನು ಮುಕ್ತಕಂಠ ದಿಂದ ಪ್ರಶಂಸೆಮಾಡುತ್ತಿದ್ದರು. ಭರತವಂಶದ ಪೂರ್ವಜರಾದ ರಾಜರೂ ಕೂಡ ಭೀಷ್ಮನನ್ನು (ಅವರಿದ್ದ ಲೋಕಗಳಲ್ಲಿ) ಬಹುವಾಗಿ ಪ್ರಶಂಸಿಸಿದರು. ವೀರ್ಯವಂತನಾದ ಮತ್ತು ಧೀಮಂತನಾದ ಭೀಷ್ಮನು ಉಪನಿಷತ್ತಿನ ಸಾರಭೂತವಾದ ಯೋಗದ ಆಶ್ರಯವನ್ನು ಹೊಂದಿ ಚಿತ್ತವನ್ನು ಏಕಾಗ್ರ ದಲ್ಲಿರಿಸಿ (ಏಕಾಗ್ರಚಿತ್ತದಿಂದ) ಪ್ರಣವಜಪಮಾಡುತ್ತಾ ಉತ್ತರಾಯಣವನ್ನು ಪ್ರತೀಕ್ಷಿಸುತ್ತಾ ಶರತಲ್ಪದಲ್ಲಿ ಮಲಗಿದ್ದನು.”

೧೧೯ನೆಯ ಅಧ್ಯಾಯವು ಮುಗಿಯಿತು.

## ಭೀಷ್ಮನ ಮಹತ್ತ್ವ: ಅರ್ಜುನನು ಭೀಷ್ಮನಿಗೆ ಬಾಣಗಳಿಂದಲೇ ತಲೆದಿಂಬನ್ನು ಮಾಡಿಕೊಟ್ಟುದು : ಎರಡು ಪಕ್ಷಗಳ ಸೈನ್ಯಗಳೂ ತಮ್ಮ-ತಮ್ಮ ಶಿಬಿರಗಳಿಗೆ ಹಿಂದಿರುಗಿದುದು : ಶ್ರೀಕೃಷ್ಣ-ಯುಧಿಷ್ಠಿರರ ಸಂವಾದ

ಬಹಳ ದುಃಖಿತನಾದ ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ಬಲಿಷ್ಠನಾದ, ದೇವಸದೃಶನಾದ, ತಂದೆಯ ಸಲುವಾಗಿ ಆಜೀವಪರ್ಯಂತವಾಗಿ ಬ್ರಹ್ಮಚರ್ಯವ್ರತವನ್ನೇ ಪರಿಪಾಲಿಸುತ್ತಿದ್ದ ಭೀಷ್ಮನಿಂದ ವಿಹೀನರಾಗಿದ್ದ ನನ್ನ ಯೋಧರು ಯಾವ ರೀತಿಯಲ್ಲಿದ್ದರು? (ಯಾವ ರೀತಿಯಲ್ಲಿ ಭೀಷ್ಮನ ವಿಯೋಗದುಃಖವನ್ನು ಸಹಿಸಿಕೊಂಡರು? ) ಯಾವಾಗ ಭೀಷ್ಮನು ದಯಾಪರನಾಗಿ ದ್ರುಪದಾತ್ಮಜನಾದ ಶಿಖಂಡಿಯನ್ನು ಸಂಹರಿಸಲಿಲ್ಲವೋ ಆಗಲೇ ನಾನು ಪಾಂಡವರಿಂದ ಕುರುಗಳೆಲ್ಲರೂ ಹತರಾದರೆಂದೇ ಭಾವಿಸಿದೆನು. ಸುದುರ್ಮತಿಯಾದ ನನಗೆ "ನಿನ್ನ ತಂದೆಯಾದ ಭೀಷ್ಮನು ಯುದ್ಧದಲ್ಲಿ ಹತನಾದನು"–ಎಂಬ ಈ ವಾರ್ತೆಯನ್ನು ಕೇಳಿದುದಕ್ಕಿಂತಲೂ ಅಧಿಕವಾದ ದುಃಖವಾರ್ತೆಯು ಬೇರೆ ಯಾವುದು ತಾನೇ ಮುಂದೆ ಬಂದೀತು? (ಅದಕ್ಕಿಂತಲೂ ಅಧಿಕವಾದ ದುಃಖವಾರ್ತೆಯು ಯಾವುದೂ ಇಲ್ಲವೆಂದೇ ಭಾವಿಸುತ್ತೇನೆ.) ನನ್ನ ತಂದೆಯಾದ ಭೀಷ್ಮನ ಸಂಹಾರವಾರ್ತೆಯನ್ನು ಕೇಳಿಯೂ ಸಹ ನನ್ನ ಹೃದಯವು ನೂರು ಚೂರುಗಳಾಗಿ ಸೀಳಿಹೋಗಲಿಲ್ಲವಲ್ಲವೇ? ಈ ಕಾರಣದಿಂದ ನನ್ನ ಹೃದಯವು ನಿಶ್ಚಯವಾಗಿಯೂ ಉಕ್ಕಿನಿಂದಲೇ ಮಾಡಿದ್ದಾಗಿರಬೇಕು, ಸಂಜಯ!

ಸುವ್ರತನೇ! ವಿಜಯಗಳಿಸಲು ಇಚ್ಛೆಯಿದ್ದ ಭೀಷ್ಮನು ಹತನಾಗುವ ಮೊದಲು ಯಾವ-ಯಾವ ಕಾರ್ಯಗಳನ್ನು ಮಾಡಿದನೆಂಬುದನ್ನು ನನಗೆ ಹೇಳು. ದೇವವ್ರತನು ಯುದ್ಧದಲ್ಲಿ ಹತನಾದುದನ್ನು ಕೇಳಿ ನಾನು ಪುನಃ-ಪುನಃ ಸಹನೆಯನ್ನು ಕಳೆದುಕೊಳ್ಳುತ್ತಿದ್ದೇನೆ. ಆ ನನ್ನ ತಂದೆಯು ಹಿಂದೆ ಪರಶುರಾಮನೊಡನೆ ಮಾಡಿದ ಯುದ್ಧದಲ್ಲಿ ಅವನು ಬಿಟ್ಟ ದಿವ್ಯಾಸ್ತ್ರಗಳಿಂದಲೂ ಸಾಯಲಿಲ್ಲ. ಅಂತಹವನೀಗ ದ್ರುಪದನ ಮಗನಾದ, ಪಾಂಚಾಲದೇಶೀಯ

ನಾದ ಶಿಖಂಡಿಯಿಂದ ಹತನಾದನೆಂದರೆ ಅದನ್ನು ನಾನು ಹೇಗೆತಾನೇ ಸಹಿಸಿಕೊಳ್ಳಲಿ?"

"ಮಹಾರಾಜ! ಕುರುಕುಲಪಿತಾಮಹನು ಹತ್ತನೆಯ ದಿವಸ ಸಾಯಂಕಾಲದಲ್ಲಿ ನಿನ್ನ ಮಕ್ಕಳಿಗೆ ವಿಷಾದವನ್ನುಂಟುಮಾಡುತ್ತಾ ರಣಾಂಗಣ ದಲ್ಲಿ ಹತನಾಗಿ ಪಾಂಚಾಲರಿಗೆ ಹೆಚ್ಚಿನ ಸಂತೋಷವನ್ನು ಉಂಟುಮಾಡಿ ದನು. ಭೂಮಿಯನ್ನು ಮುಟ್ಟದೆಯೇ ಭೀಷ್ಮನು ಶರತಲ್ಪಸ್ಥನಾಗಿ ಮಲಗಿದ್ದನು. ಭೀಷ್ಮನು ರಥದಿಂದ ಜಾರಿ ಭೂಮಿಯ ಕಡೆಗೆ ತಲೆ ಮುಂದಾಗಿ ಬೀಳುತ್ತಿದ್ದಾಗ ಎಲ್ಲ ಪ್ರಾಣಿಗಳೂ ಬಹಳ ಭಯಂಕರವಾದ ರೀತಿಯಲ್ಲಿ ಹಾಹಾಕಾರಗಳನ್ನು ಮಾಡಿದುವು. ಯುದ್ಧದಲ್ಲಿ ಕೌರವರ ಕಡೆಗೆ ಜಯಗಳಿಸಿಕೊಡುವವನಾಗಿದ್ದ, ಎರಡು ಪಕ್ಷಗಳಿಗೂ *ಎಲ್ಲೆಯ ವೃಕ್ಷ ದಂತಿದ್ದ ಭೀಷ್ಮನು ಬಿದ್ದುಹೋಗಲಾಗಿ ಎರಡು ಸೈನ್ಯಗಳಲ್ಲಿಯೂ ಇದ್ದ ಕ್ಷತ್ರಿಯಯೋಧರನ್ನು ಭಯವು ಆವರಿಸಿತು. ಹರಿದುಹೋಗಿದ್ದ ಕವಚ ದಿಂದಲೂ ಮತ್ತು ಧ್ವಜದಿಂದಲೂ ಕೂಡಿದ್ದ ಶಾಂತನುವಿನ ಮಗನಾದ ಭೀಷ್ಮನನ್ನು ಆ ಅವಸ್ಥೆಯಲ್ಲಿ ನೋಡಿ (ಶರಗಳನ್ನೇ ತಲ್ಪವನ್ನಾಗಿ ಮಾಡಿ ಕೊಂಡು ಬಿದ್ದುದನ್ನು ನೋಡಿ) ಕೌರವರೂ ಮತ್ತು ಪಾಂಡವರೂ ಅವನನ್ನು ಸುತ್ತುವರಿದು ನಿಂತರು. ಆ ಸಮಯದಲ್ಲಿ ಆಕಾಶದಲ್ಲಿ ಅಂಧಕಾರವು ಕವಿಯಿತು. ಸೂರ್ಯನು ಪ್ರಭಾಹೀನನಾದನು. ಭೀಷ್ಮನು ಹತನಾಗಲಾಗಿ ಭೂಮಿಯೂ ಸಹ ಭಯಂಕರವಾಗಿ ಶಬ್ದಮಾಡತೊಡಗಿತು. ಬಾಣಗಳ ಮೇಲೆ ಮಲಗಿದ್ದ ಪುರುಷರ್ಷಭನಾದ ಭೀಷ್ಮನನ್ನು ನೋಡಿ ಎಲ್ಲ ಪ್ರಾಣಿ ಗಳೂ 'ಅಯಂ ಬ್ರಹ್ಮವಿದಾಂ ಶ್ರೇಷ್ಠೋ ಹ್ಯಯಂ ಬ್ರಹ್ಮವಿದಾಂ ವರಃ' "ಇವನು ಬ್ರಹ್ಮವಿದರಲ್ಲಿ ಶ್ರೇಷ್ಠನು. ಇವನು ಬ್ರಹ್ಮವಿದರೆಲ್ಲರ ಶಿರೋ ಮಣಿಯೂ ಆಗಿದ್ದಾನೆ" ಎಂಬುದಾಗಿ ಹೇಳುತ್ತಿದ್ದುವು. "ತನ್ನ ತಂದೆಯು

---

* ಸೀಮಾವೃಕ್ಷ-ಒಂದು ರಾಜ್ಯಕ್ಕೂ–ಮತ್ತೊಂದು ರಾಜ್ಯಕ್ಕೂ ಮಧ್ಯೆ ಇರುವ ವೃಕ್ಷ. ಗಡಿಯನ್ನು ಗುರುತಿಸುವ ಮರ. ಆ ವೃಕ್ಷದ ಪ್ರಯೋಜನ ಎರಡು ರಾಜ್ಯಗಳಿಗೂ ಸಮಾನ. ಗಡಿಯನ್ನು ತಿಳಿಯಲು ಎರಡು ರಾಜ್ಯದವರೂ ಆ ವೃಕ್ಷವನ್ನೇ ಅವಲಂಬಿಸಬೇಕು. ಅಂತೆಯೇ ಭೀಷ್ಮನು ಎರಡು ಪಕ್ಷದವರಿಗೂ ಬೇಕಾದ ಮಹಾಪುರುಷನಾಗಿದ್ದನು. ಎರಡು ಪಕ್ಷದವರೂ ಒಂದೇ ಸಮನಾದ ಗೌರವವನ್ನು ಅವನಿಗೆ ಸಲ್ಲಿಸುತ್ತಿದ್ದರು. ಸೀಮಾವೃಕ್ಷದ ಉಪಮಾನವು ಬಹಳ ಹೃದಯಂಗಮವಾಗಿದೆ.

ಕಾಮಾರ್ತನಾಗಿರುವುದನ್ನು ತಿಳಿದು ಅವನಿಗಾಗಿ ಪುರುಷರ್ಷಭನಾದ ಭೀಷ್ಮನು ಊರ್ಧ್ವರೇತಸ್ಕನಾದನು (ನೈಷ್ಠಿಕಬ್ರಹ್ಮಚಾರಿಯಾದನು.)" ಈ ಪ್ರಕಾರವಾಗಿ ಸಿದ್ಧ-ಚಾರಣರಿಂದೊಡಗೂಡಿದ ಋಷಿಗಳು ಭರತಕುಲದ ಮಹಾಪುರುಷನಾದ, ಶರತಲ್ಪದಲ್ಲಿದ್ದ ಭೀಷ್ಮನ ವಿಷಯವಾಗಿ ಮಾತನಾಡಿ ಕೊಳ್ಳುತ್ತಿದ್ದರು. ಭರತವಂಶೀಯರ ಪಿತಾಮಹನಾದ ಶಾಂತನವನು ಹತ ನಾಗಲಾಗಿ ನಿನ್ನ ಮಕ್ಕಳು ಏನು ಮಾಡಲೂ ಕೂಡ ತಿಳಿಯದಂತಾದರು. ವಿಷಣ್ಣವಾದ ಮುಖವುಳ್ಳವರಾದರು. ಅವರ ಮುಖಗಳಲ್ಲಿ ಕಾಂತಿ ಯೆಂಬುದೇ ಇರಲಿಲ್ಲ. ಲಜ್ಜಿತರಾಗಿದ್ದರು. ನಾಚಿಕೆಯಿಂದ ತಲೆಯನ್ನು ತಗ್ಗಿಸಿ ಕೊಂಡು ಕುಳಿತಿದ್ದರು. ಪಾಂಡವರಾದರೋ ಜಯವನ್ನು ಗಳಿಸಿ ಸಂಗ್ರಾಮದ ಅಗ್ರಭಾಗದಲ್ಲಿ ನಿಂತು ಸುವರ್ಣಮಯವಾದ ಬಲೆಗಳಿಂದ ಸಮಲಂಕೃತ ವಾಗಿದ್ದ ದೊಡ್ಡಶಂಖಗಳನ್ನು ಊದಿದರು. ಹರ್ಷಾತಿರೇಕದಿಂದ ಪಾಂಡವರ ಕಡೆಯಲ್ಲಿ ಸಾವಿರಾರು ಜಯಘೋಷಸೂಚಕವಾದ ವಾದ್ಯಗಳು ಮೊಳಗುತ್ತಿ ದ್ದುವು. ಆ ಸಮಯದಲ್ಲಿ ಅಜೇಯಶತ್ರುವನ್ನೂ ಬಹಳ ಬೇಗ ವಿನಾಶಗೊಳಿಸಿ ಅಮಿತವಾದ ಹರ್ಷದಿಂದ ಯುಕ್ತನಾಗಿದ್ದ, ಮಹಾಬಲಸಮನ್ವಿತನಾಗಿದ್ದ, ಆನಂದೋತ್ಸಾಹಗಳಿಂದ ಕುಣಿದಾಡುತ್ತಿದ್ದ ಭೀಮಸೇನನನ್ನು ನಾವು ಕಂಡೆವು. ಆ ಸಮಯದಲ್ಲಿ ಕುರುವೀರರಲ್ಲಿ ಭಯಂಕರವಾದ ಸಮ್ಮೋಹವೂ (ಭ್ರಾಂತಿಯೂ) ಉಂಟಾಯಿತು. ಕರ್ಣ-ದುರ್ಯೋಧನರೂ ಸಹ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದರು. ಕೌರವಪಿತಾಮಹನು ಆ ಅವಸ್ಥೆಯಲ್ಲಿ ಬಿದ್ದಿರಲಾಗಿ ಸರ್ವತ್ರ ಹಾಹಾಕಾರವೆದ್ದಿತು. ಲೋಕಮರ್ಯಾದೆ ಯನ್ನೂ ಮೀರಿ ಎಲ್ಲವೂ ನಡೆಯತೊಡಗಿತು. (ಎಲ್ಲೂ ಯಾವ ಕಟ್ಟುಪಾಡೂ ಉಳಿಯಲಿಲ್ಲ.)

ಭೀಷ್ಮನು ಹತನಾಗಿ ಬಿದ್ದುದನ್ನು ನೋಡಿ ನಿನ್ನ ಮಗನಾದ ಪುರುಷ ವ್ಯಾಘ್ರನಾದ, ವೀರನಾದ ದುಃಶಾಸನನು ಅಣ್ಣನಾದ ದುರ್ಯೋಧನನಿಂದ ಕಳುಹಿಸಲ್ಪಟ್ಟವನಾಗಿ, ಕವಚವನ್ನು ಧರಿಸಿ, ತನ್ನ ಸೈನ್ಯದೊಡನೆ ಬಹಳ ವೇಗ ದಿಂದ ಹೋಗುತ್ತಾ ತನ್ನೊಡನಿದ್ದ ಸೈನಿಕರಿಗೆ ವಿಷಾದವನ್ನುಂಟುಮಾಡುತ್ತಾ ದ್ರೋಣರ ಸೈನ್ಯವಿದ್ದೆಡೆಗೆ ಧಾವಿಸಿದನು. ದುಃಶಾಸನನು ಬಂದೊಡನೆಯೇ ದ್ರೋಣರ ಬಳಿಯಲ್ಲಿದ್ದ ಕುರುಯೋಧರೆಲ್ಲರೂ ದುಃಶಾಸನನು ಏನು ಹೇಳುವನೆಂಬುದನ್ನು ಕೇಳುವ ಆಕಾಂಕ್ಷೆಯಿಂದ ಅವನನ್ನು ಸುತ್ತುವರಿದು

ನಿಂತರು. ಅನಂತರ ದುಃಶಾಸನನು ದ್ರೋಣರಿಗೆ ಭೀಷ್ಮನ ಮರಣದ ವಾರ್ತೆಯನ್ನರುಹಿದನು. ಪರಮಾಪ್ರಿಯವಾದ ಆ ಮಾತನ್ನು ಕೇಳಿದೊಡನೆಯೇ ದ್ರೋಣರು ಮೂರ್ಛೆಹೋದರು. ಪ್ರತಾಪವಂತರಾದ ದ್ರೋಣರು ಬಹಳ ಬೇಗ ಸಂಜ್ಞೆಯನ್ನು ಪಡೆದು ಒಡನೆಯೇ ತಮ್ಮ ಸೈನ್ಯಗಳನ್ನು ಯುದ್ಧದಿಂದ ವಿರತರನ್ನಾಗಿ ಮಾಡಿದರು. ಕುರುಗಳು ಯುದ್ಧದಿಂದ ವಿನಿವೃತ್ತರಾದುದನ್ನು ಕಂಡು ಪಾಂಡವರೂ ಕೂಡ ಶೀಘ್ರಗತಿಯಿದ್ದ ಕುದುರೆಗಳ ಮೂಲಕವಾಗಿ ದೂತರನ್ನು ಕಳುಹಿಸಿ ಎಲ್ಲ ವಲಯಗಳಲ್ಲಿಯೂ ಯುದ್ಧವನ್ನು ನಿಲ್ಲಿಸುವಂತೆ ಸೈನಿಕರಿಗೆ ಸಂದೇಶಗಳನ್ನು ಕಳುಹಿಸಿದರು. ಪರಸ್ಪರವಾಗಿ ಎರಡು ಪಕ್ಷಗಳ ಸೈನ್ಯಗಳೂ ಯುದ್ಧದಿಂದ ಹಿಮ್ಮೆಟ್ಟಿದನಂತರ ಎಲ್ಲ ರಾಜರೂ ಯುದ್ಧಕವಚಗಳನ್ನು ಬಿಚ್ಚಿಟ್ಟು ಭೀಷ್ಮನ ಬಳಿಗೆ ಬಂದರು. ದೇವತೆಗಳು ಪ್ರಜಾಪತಿಯ ಬಳಿಗೆ ಹೋಗುವಂತೆ–ಲಕ್ಷೋಪಲಕ್ಷ ಕೌರವಸೈನ್ಯದೊಡನೆ ಸೇರಿಕೊಂಡಿದ್ದ ಪಾಂಡವಸೈನಿಕರು ಯುದ್ಧದಿಂದ ವಿರತರಾಗಿ ಶರತಲ್ಪದಲ್ಲಿ ಮಲಗಿದ್ದ ಮಹಾತ್ಮನಾದ ಭೀಷ್ಮನ ಸಮೀಪಕ್ಕೆ ಬಂದು ಅವನಿಗೆ ಅಭಿವಾದನಮಾಡಿ ನಮಸ್ಕರಿಸಿ ನಿಂತಿದ್ದರು. ಅಭಿವಾದನಮಾಡಿ ನಮಸ್ಕರಿಸಿ ಅಗ್ರಭಾಗದಲ್ಲಿ ನಿಂತಿದ್ದ ಪಾಂಡವರನ್ನೂ ಮತ್ತು ಕುರುಗಳನ್ನೂ ಕುರಿತು ಧರ್ಮಾತ್ಮನಾದ ಶಾಂತನುವಿನ ಮಗನಾದ ಭೀಷ್ಮನು ಹೇಳಿದನು : "ಮಹಾಭಾಗರೇ! ನಿಮ್ಮನ್ನು ಸ್ವಾಗತಿಸುತ್ತೇನೆ. ಮಹಾರಥರೇ! ನಿಮಗೂ ಸುಸ್ವಾಗತವನ್ನು ಬಯಸುತ್ತೇನೆ. ಅಮರೋಪಮರಾದ ನಿಮ್ಮನ್ನು ನೋಡಿ ನಾನು ಬಹಳ ಹೃಷ್ಟನಾಗಿರುತ್ತೇನೆ." ಈ ರೀತಿಯಾಗಿ ಅಲ್ಲಿಗೆ ಬಂದಿದ್ದ ಪಾಂಡವ-ಕೌರವಯೋಧರನ್ನೂ ಸ್ವಾಗತಿಸಿ ಜೋಲಾಡುತ್ತಿದ್ದ ಕತ್ತಿನಿಂದ ಕೂಡಿದ್ದ ಭೀಷ್ಮನು ಹೇಳಿದನು. "ನನ್ನ ಕುತ್ತಿಗೆಯು ಅವಲಂಬನವಿಲ್ಲದೇ ಜೋಲಾಡುತ್ತಿದೆ. ಆದುದರಿಂದ ಒಂದು ತಲೆದಿಂಬನ್ನು *ಒದಗಿಸಿರಿ."

ಒಡನೆಯೇ ರಾಜರು ಕೋಮಲವಾಗಿಯೂ, ಮೃದುವಾಗಿಯೂ ಇದ್ದ

---

* ಭೀಷ್ಮನ ಶರೀರಾದ್ಯಂತವಾಗಿ ಬಾಣಗಳು ನೆಟ್ಟುಕೊಂಡಿದ್ದುವು. ಅವನು ರಥದಿಂದ ಕೆಳಕ್ಕೆ ಬಿದ್ದನಂತರ ಅದೇ ಬಾಣಗಳ ಅವಲಂಬನೆಯು ಅವನ ಶರೀರಕ್ಕೆ ಸಿಕ್ಕಿತು. ಆದರೆ ತಲೆಗೆ ಬಾಣಗಳು ಚುಚ್ಚಿಕೊಂಡಿರಲಿಲ್ಲವಾದುದರಿಂದ ತಲೆಗೆ ಯಾವ ಆಸರೆಯೂ ಇಲ್ಲದೇ ಜೋಲಾಡುತ್ತಲೇ ಇದ್ದಿತು. ಆ ಸನ್ನಿವೇಶದಲ್ಲಿ ಅವನು ತಲೆಯನ್ನು ಇಟ್ಟುಕೊಳ್ಳಲು ತಲೆದಿಂಬನ್ನು ಅಪೇಕ್ಷಿಸಿದನು.

ಹಲವು ತಲೆದಿಂಬುಗಳನ್ನು ತಂದರು. ಆದರೆ ಭೀಷ್ಮನು ಮಾತ್ರ ಅವುಗಳಲ್ಲಿ ಯಾವುದನ್ನೂ ಸ್ವೀಕರಿಸಲಿಲ್ಲ. ಅನಂತರ ನರವ್ಯಾಘ್ರನಾದ ಭೀಷ್ಮನು ರಾಜರ ಆ ಕಾರ್ಯವನ್ನು ನೋಡಿ ನಗುತ್ತಿರುವನೋ ಎಂಬಂತೆ ಹೇಳಿದನು : '**ನೈತಾನಿ ವೀರಶಯ್ಯಾಸು ಯುಕ್ತರೂಪಾಣಿ ಪಾರ್ಥಿವಾಃ**' "ರಾಜರೇ! ಇವು ಯಾವುವೂ ವೀರರ ಶಯ್ಯೆಗೆ ಯೋಗ್ಯವಾದ ತಲೆದಿಂಬುಗಳಾಗಿಲ್ಲ."

ಅನಂತರ ಭೀಷ್ಮನು ನರಶ್ರೇಷ್ಠನಾದ, ದೀರ್ಘಬಾಹುವಾದ, ಸರ್ವ ಲೋಕಮಹಾರಥನಾದ, ಪಾಂಡುನಂದನನಾದ ಧನಂಜಯನನ್ನು ನೋಡಿ ಹೇಳಿದನು :

**ಧನಂಜಯ ಮಹಾಬಾಹೋ ಶಿರೋ ಮೇ ತಾತ ಲಮ್ಬತೇ ।**
**ದೀಯತಾಮುಪಧಾನಂ ವೈ ಯದ್ಯುಕ್ತಮಿಹ ಮನ್ಯಸೇ ॥೩೮॥**

"ಧನಂಜಯ! ಮಹಾಬಾಹೋ! ಯಾವ ಅವಲಂಬನೆಯೂ ಇಲ್ಲದೇ ಇರುವುದರಿಂದ ನನ್ನ ತಲೆಯು ಜೋಲಾಡುತ್ತಿದೆ. ಯಾವ ವಿಧವಾದ ತಲೆದಿಂಬು ವೀರಶಯ್ಯೆಗೆ ಯೋಗ್ಯವೆಂದು ನೀನು ಭಾವಿಸುವೆಯೋ– ಅಂತಹ ತಲೆದಿಂಬನ್ನು ನನಗೆ ಕೊಡು."

ಮಹಾರಾಜ! ಒಡನೆಯೇ ಅರ್ಜುನನು ಪಿತಾಮಹನಾದ ಭೀಷ್ಮನಿಗೆ ಪ್ರಣಾಮಮಾಡಿ ತನ್ನ ದೊಡ್ಡದಾದ ಧನುಸ್ಸನ್ನು ಹೆದೆಯೇರಿಸಿ ಕಂಬನಿ ದುಂಬಿದ ಕಣ್ಣುಗಳುಳ್ಳವನಾಗಿ ಈ ಮಾತನ್ನು ಹೇಳಿದನು : "ಕುರು ಶ್ರೇಷ್ಠನೇ! ಸರ್ವಶಸ್ತ್ರಭೃತರಿಗೂ ಶ್ರೇಷ್ಠನಾದವನೇ! ಪಿತಾಮಹ! ದುರ್ಧರ್ಷನೇ! ನಾನು ನಿನ್ನ ಸೇವಕನಾಗಿದ್ದೇನೆ. ನಾನು ನಿನಗೆ ಯಾವ ಕಾರ್ಯವನ್ನು ಮಾಡಿಕೊಡಬೇಕೆಂಬುದನ್ನು ಆಜ್ಞಾಪಿಸು."

"ಮಗು! ಕುತ್ತಿಗೆಗೆ ಅವಲಂಬನೆಯಿಲ್ಲದೇ ಇರುವುದರಿಂದ ಅದು ಜೋಲಾಡುತ್ತಿದೆ. ಕುರುಶ್ರೇಷ್ಠನೇ! ಅದು ಜೋಲಾಡದಂತೆ ಒಂದು ತಲೆದಿಂಬನ್ನು ನನಗೆ ಒದಗಿಸಿಕೊಡು. ನೀನು ಕೊಡಲಿರುವ ತಲೆದಿಂಬು ವೀರಶಯ್ಯೆಗೆ ಅನುರೂಪವಾಗಿರಬೇಕು. ನೀನದನ್ನು ಬಹಳ ಶೀಘ್ರವಾಗಿಯೇ ಒದಗಿಸಿಕೊಡಬೇಕಾಗಿದೆ. ಸರ್ವಧನುಷ್ಮಂತರಲ್ಲೂ ಶ್ರೇಷ್ಠನಾದ, ಬುದ್ಧಿ

ಸತ್ತ್ವಗುಣಾನ್ವಿತನಾದ, ಕ್ಷತ್ರಧರ್ಮವನ್ನು ತಿಳಿದಿರುವ ನೀನು ಅಂತಹ ತಲೆದಿಂಬನ್ನು ಒದಗಿಸಿಕೊಡಲು ಸಮರ್ಥನೂ ಆಗಿರುವೆ."

ಅರ್ಜುನನೂ ಕೂಡ ಹಾಗೆಯೇ ಆಗಲೆಂದು ಹೇಳಿ ಭೀಷ್ಮನ ಅಪೇಕ್ಷೆಯನ್ನು ಪೂರೈಸಿಕೊಡಲು ಸಂತೋಷದಿಂದ ಒಪ್ಪಿದನು. ಗಾಂಡೀವಧನುಸ್ಸನ್ನು ತೆಗೆದುಕೊಂಡು ಅಭಿಮಂತ್ರಿಸಿ ಸನ್ನತಪರ್ವಗಳಾದ ಮೂರು ಬಾಣಗಳನ್ನು ಯೋಜಿಸಿ ಭರತವಂಶೀಯರಲ್ಲಿ ಮಹಾರಥನಾದ, ಮಹಾತ್ಮನಾದ ಭೀಷ್ಮನ ಅನುಮತಿಯನ್ನು ಪಡೆದು ಮಹಾವೇಗಯುಕ್ತವಾದ ತೀಕ್ಷ್ಣವಾಗಿದ್ದ ಆ ಮೂರು ಬಾಣಗಳಿಂದ ಭೀಷ್ಮನ ಶಿರಸ್ಸನ್ನು ಮೇಲಕ್ಕೆತ್ತಿಸಿದನು. (ಬಾಣಗಳ ಮೇಲೆ ತಲೆಯು ಸ್ಥಿರವಾಗಿ ನಿಲ್ಲುವಂತೆ ಮಾಡಿದನು.) ತನ್ನ ಮನಸ್ಸಿನ ಅಭಿಪ್ರಾಯವೇನೆಂಬುದನ್ನು ತಿಳಿದು ಧರ್ಮಾತ್ಮನಾದ ಸವ್ಯಸಾಚಿಯು ಕಾರ್ಯಮಾಡಿದುದಕ್ಕಾಗಿ ಧರ್ಮಾರ್ಥತತ್ತ್ವವಿದನಾದ, ಭರತಶ್ರೇಷ್ಠನಾದ ಭೀಷ್ಮನು ಬಹಳ ಸಂತೋಷಪಟ್ಟನು. ತನಗೆ ಬೇಕಾಗಿದ್ದ ತಲೆದಿಂಬನ್ನೇ ಒದಗಿಸಿಕೊಟ್ಟುದಕ್ಕಾಗಿ ಭೀಷ್ಮನು ಧನಂಜಯನನ್ನು ಪ್ರಶಂಸಿಸಿದನು. ಅಲ್ಲಿ ನೆರೆದಿದ್ದ ಭಾರತರೆಲ್ಲರನ್ನೂ ನೋಡಿ ಸುಹೃದರ ಪ್ರೀತಿವರ್ಧನನಾದ, ಯೋಧರಲ್ಲಿ ಶ್ರೇಷ್ಠನಾದ ಕುಂತೀಪುತ್ರನಾದ ಧನಂಜಯನನ್ನು ಕುರಿತು ಹೇಳಿದನು :

**ಶಯಾನಸ್ಯಾನುರೂಪಂ ಮೇ ಪಾಣ್ಡವೋಪಹಿತಂ ತ್ವಯಾ ।**
**ಯದ್ಯನ್ಯಥಾ ಪ್ರಪದ್ಯೇಥಾಃ ಶಪೇಯಂ ತ್ವಾಮಹಂ ರುಷಾ ॥೪೮॥**

"ಪಾಂಡುನಂದನ! ಶರತಲ್ಪದಲ್ಲಿ ಮಲಗಿರುವ ನನಗೆ ಅನುರೂಪವಾದ ತಲೆದಿಂಬನ್ನೇ ನೀನು ಒದಗಿಸಿಕೊಟ್ಟಿರುವೆ. ನೀನು ಈ ತಲೆದಿಂಬನ್ನು ಕೊಡದೆ ಬೇರೆ ಯಾವುದನ್ನಾದರೂ ಕೊಟ್ಟಿದ್ದರೆ ನಿನ್ನನ್ನು ನಾನು ಕೋಪದಿಂದ ಶಪಿಸಿಬಿಡುತ್ತಿದ್ದೆನು.

ಮಹಾಬಾಹುವೇ! ಧರ್ಮದಲ್ಲಿಯೇ ನಿಷ್ಠೆಯಿರುವ ಕ್ಷತ್ರಿಯನು ರಣರಂಗದಲ್ಲಿ ಇದೇ ರೀತಿಯಲ್ಲಿ ಶರತಲ್ಪದ ಮೇಲೆ ಮಲಗಬೇಕು."

ಮಹಾರಾಜ! ಭೀಷ್ಮನು ಅರ್ಜುನನಿಗೆ ಹೀಗೆ ಹೇಳಿದ ಬಳಿಕ ಪಾಂಡವರ ಹತ್ತಿರದಲ್ಲಿ ನಿಂತಿದ್ದ ಎಲ್ಲ ರಾಜರನ್ನೂ, ರಾಜಪುತ್ರರನ್ನೂ ಸಂಬೋಧಿಸಿ ಈ ಮಾತನ್ನು ಹೇಳಿದನು :

“ರಾಜಪುತ್ರರೇ! ಪಾಂಡವನು ನನಗೆ ಒದಗಿಸಿಕೊಟ್ಟಿರುವ ಈ ತಲೆ ದಿಂಬನ್ನು ನೋಡಿರಿ. ಈ ಶರತಲ್ಪದಲ್ಲಿಯೇ ನಾನು ಸೂರ್ಯನು ಉತ್ತರ ಗತಿಯನ್ನು ಆರಂಭಿಸುವವರೆಗೂ ಮಲಗಿರುತ್ತೇನೆ. ಏಳು ಕುದುರೆಗಳಿಂದ ಯುಕ್ತವಾದ, ಉತ್ತಮವಾದ ತೇಜಸ್ಸಿನಿಂದ ಕೂಡಿದ ರಥದಲ್ಲಿ ಸೂರ್ಯನು ಯಾವಾಗ ಯಮನ ದಿಕ್ಕಾದ ದಕ್ಷಿಣದಿಂದ ಕುಬೇರನಿಂದ ಆಕ್ರಾಂತವಾದ ಉತ್ತರದಿಕ್ಕಿಗೆ ಬರುತ್ತಾನೆಯೋ–ಆ ಸಮಯದಲ್ಲಿ ನನ್ನ ಬಳಿ ಇರುವ ರಾಜರು ನನ್ನ ಊರ್ಧ್ವಗತಿಯನ್ನು ಕಾಣುತ್ತಾರೆ. ಆ ಸಮಯದಲ್ಲಿ ನಾನು ಸುಹೃದರು ತಮಗೆ ಪ್ರಿಯರಾದ ಸುಹೃದರನ್ನು ಕಳುಹಿಸಿಕೊಡುವಂತೆ–ನನಗೆ ಅತ್ಯಂತಪ್ರಿಯವೆನಿಸಿರುವ ಪ್ರಾಣಗಳನ್ನು ಈ ದೇಹದಿಂದ ವಿಮೋಚನೆಗೊಳಿಸುತ್ತೇನೆ. ನಾನಿರುವ ಈ ಸ್ಥಳದಲ್ಲಿ ಸುತ್ತಲೂ ನಾಲ್ಕು ಕಡೆಗಳಲ್ಲಿಯೂ ಕಂದಕಗಳನ್ನು ತೋಡಿರಿ. ನೂರಾರು ಬಾಣಗಳಿಂದ ವ್ಯಾಪ್ತವಾಗಿರುವ ಶರೀರವುಳ್ಳ ನಾನು ಇದೇ ಅವಸ್ಥೆಯಲ್ಲಿಯೇ ಸೂರ್ಯನನ್ನು ಉಪಾಸನೆಮಾಡುತ್ತೇನೆ. ಇನ್ನಾದರೂ ನೀವು ಪರಸ್ಪರವಾಗಿ ವೈರವನ್ನು ತ್ಯಜಿಸಿ ಯುದ್ಧದಿಂದ ವಿರತರಾಗಿರಿ.”

ಮಹಾರಾಜ! ಅನಂತರ ಶರೀರದಲ್ಲಿ ನೆಟ್ಟುಕೊಂಡಿರುವ ಬಾಣಗಳ ಚೂರುಗಳನ್ನು ತೆಗೆಯುವುದರಲ್ಲಿ ಕುಶಲರಾದ ಸಕಲವಿಧವಾದ ಉಪಕರಣಗಳಿಂದಲೂ ಸಂಪನ್ನರಾಗಿದ್ದ, ಕುಶಲರಾದ ವೈದ್ಯರಲ್ಲಿ ಶಿಕ್ಷಣವನ್ನು ಪಡೆದಿದ್ದ ವೈದ್ಯರು ಭೀಷ್ಮನ ಸೇವೆಗೆ ಸಿದ್ಧರಾದರು. ಶಲ್ಯೋದ್ಧರಣಕೋವಿದರಾದ ಆ ವೈದ್ಯರನ್ನು ನೋಡಿ ಗಂಗಾಪುತ್ರನಾದ ಭೀಷ್ಮನು ನಿನ್ನ ಮಗನಿಗೆ ಹೇಳಿದನು: “ವತ್ಸ! ದುರ್ಯೋಧನ! ಈ ಚಿಕಿತ್ಸಕರಿಗೆ ಯಥೇಷ್ಟವಾದ ಧನವನ್ನು ಕೊಟ್ಟು ಗೌರವಿಸಿ ಕಳುಹಿಸಿಬಿಡು. ನಾನು ಈ ಅವಸ್ಥೆಯಲ್ಲಿರುವಾಗ ವೈದ್ಯರು ಮಾಡಬೇಕಾದ ಕಾರ್ಯವೇನಿದೆ? ಕ್ಷತ್ರಧರ್ಮದಲ್ಲಿ ಯಾವುದನ್ನು ಹೆಚ್ಚು ಪ್ರಶಂಸೆಮಾಡುತ್ತಾರೆಯೋ ಅಂತಹ ಉತ್ತಮಗತಿಯನ್ನು ನಾನು ಹೊಂದಿದ್ದೇನೆ. ಶರೀರದಲ್ಲಿ ಚುಚ್ಚಿಕೊಂಡಿರುವ ಬಾಣಗಳನ್ನೇ ಹಾಸಿಗೆಯನ್ನಾಗಿ ಮಾಡಿಕೊಂಡಿರುವ ನನಗೆ ಈ ಬಾಣಗಳನ್ನು ತೆಗೆಸಿಕೊಳ್ಳುವುದು ಧರ್ಮವಾಗುವುದಿಲ್ಲ. ಮಹೀಪಾಲರೇ! ನರಾಧಿಪರೇ! ಈ ಬಾಣಗಳೊಡನೆಯೇ ದಗ್ಧನಾಗಬೇಕೆಂದಿದ್ದೇನೆ.”

ಮಹಾರಾಜ! ನಿನ್ನ ಮಗನಾದ ದುರ್ಯೋಧನನು, ಭೀಷ್ಮನು ಹೇಳಿದ ಮಾತನ್ನು ಕೇಳಿ ವೈದ್ಯರನ್ನು ಯಥಾಯೋಗ್ಯವಾಗಿ ಸಮ್ಮಾನಿಸಿ ಕಳುಹಿಸಿ ಕೊಟ್ಟನು. ಅಮಿತತೇಜಸ್ವಿಯಾದ ಭೀಷ್ಮನ ಧರ್ಮನಿಷ್ಠೆಯನ್ನು ನೋಡಿ ನಾನಾದೇಶಗಳಿಂದ ಆಗಮಿಸಿದ್ದ ರಾಜರು ಬಹಳವಾಗಿ ವಿಸ್ಮಯಗೊಂಡರು. ಅರ್ಜುನನು ನಿನ್ನ ತಂದೆಗೆ ನಾನು ವಿವರಿಸಿದ ರೀತಿಯಲ್ಲಿ ತಲೆದಿಂಬನ್ನು ಒದಗಿಸಿಕೊಟ್ಟನು. ಮಹಾರಥರಾದ ಕೌರವರೂ ಮತ್ತು ಪಾಂಡವರೂ ಒಟ್ಟಾಗಿ, ಶುಭಾವಹವಾದ ಶರತಲ್ಪದಲ್ಲಿ ಮಲಗಿದ್ದ ಮಹಾತ್ಮನಾದ ಭೀಷ್ಮನ ಸಮೀಪಕ್ಕೆ ಬಂದು ಅವನಿಗೆ ಅಭಿವಾದನಪೂರ್ವಕವಾಗಿ ಮೂರು ಪ್ರದಕ್ಷಿಣೆ ಗಳನ್ನು ಮಾಡಿ ಅವನ ಸುತ್ತಲೂ ಯಥೋಕ್ತವಾದ ರಕ್ಷಣೆಯ ವ್ಯವಸ್ಥೆಯನ್ನು ಮಾಡಿದರು. ಬಳಿಕ ಬಹಳವಾಗಿ ಗಾಯಗೊಂಡು ರಕ್ತದಿಂದ ತೋಯ್ದ ಶರೀರವುಳ್ಳವರಾಗಿದ್ದ ವೀರರು ಶಿಬಿರಗಳನ್ನು ಸ್ಮರಿಸಿಕೊಳ್ಳುತ್ತಾ ತಮ್ಮ-ತಮ್ಮ ಬಿಡಾರಗಳ ಕಡೆಗೆ ತೆರಳಿದರು.

ಶ್ರೀಕೃಷ್ಣನು ಭೀಷ್ಮನ ಪತನದಿಂದಾಗಿ ಹೃಷ್ಟರಾಗಿದ್ದ, ಪರಮಪ್ರೀತ ರಾಗಿದ್ದ, ವಿಶ್ರಮಿಸಿಕೊಳ್ಳುತ್ತಿದ್ದ ಪಾಂಡವಮಹಾರಥರ ಬಳಿಗೆ ಬಂದು ಅಲ್ಲಿಯೇ ಇದ್ದ ಧರ್ಮಪುತ್ರನನ್ನು ಕುರಿತು ಹೇಳಿದನು : "ಕೌರವ್ಯ! ನೀನಿಂದು ಅದೃಷ್ಟವಶಾತ್ ವಿಜಯವನ್ನು ಗಳಿಸಿರುವೆ. ದೈವಯೋಗದಿಂದಲೇ ಭೀಷ್ಮನೂ ಸಹ ರಥದಿಂದ ಬೀಳಿಸಲ್ಪಟ್ಟನು. ಸತ್ಯಸಂಧನಾದ, ಮಹಾರಥನಾದ, ಸರ್ವಶಾಸ್ತ್ರಪಾರಂಗತನಾದ ಭೀಷ್ಮನು ಮನುಷ್ಯರಿಂದಲೂ ಅವಧ್ಯನು ಮತ್ತು ಅವನು ದೇವತೆಗಳೊಡನೆ ಯುದ್ಧಮಾಡಿದರೂ ಅವರಿಂದಲೂ ಅವಧ್ಯನೇ ಸರಿ. ಕೇವಲ ದೃಷ್ಟಿಪಾತದಿಂದಲೇ ಇತರರನ್ನು ಧ್ವಂಸಮಾಡಲು ಸಾಮರ್ಥ್ಯವಿರುವ ನಿನ್ನನ್ನು ಸಮೀಪಿಸಿದ ಅವನು ನಿನ್ನ ಘೋರವಾದ ದೃಷ್ಟಿಯಿಂದಲೇ ಭಸ್ಮೀಭೂತನಾಗಿ ಹೋದನು."

ಶ್ರೀಕೃಷ್ಣನಿಂದ ಹೀಗೆ ಹೇಳಲ್ಪಟ್ಟ ಯುಧಿಷ್ಠಿರನು ಪ್ರತ್ಯುತ್ತರಿಸಿದನು :

**ತವ ಪ್ರಸಾದಾದ್ವಿಜಯಃ ಕ್ರೋಧಾತ್ತವ ಪರಾಜಯಃ ।**
**ತ್ವಂ ಹಿ ನಃ ಶರಣಂ ಕೃಷ್ಣ ಭಕ್ತಾನಾಮಭಯಂಕರಃ ॥೬॥**

"ಕೃಷ್ಣ! ನೀನು ನನಗೆ ಶರಣ್ಯನಾಗಿರುವೆ. ನೀನು ಭಕ್ತರಿಗೆ ಅಭಯ

ದಾಯಕನೂ ಆಗಿರುವೆ. ನಿನ್ನ ಅನುಗ್ರಹದಿಂದ ವಿಜಯವು ಲಭಿಸುತ್ತದೆ. ನೀನು ಕೋಪಗೊಂಡರೆ ಪರಾಜಯವಾಗುತ್ತದೆ. (ಜಯಾಪಜಯಗಳು ಸಕಲಜಗತ್ತಿಗೂ ಕಾರಣನಾದ ನಿನ್ನನ್ನು ಅವಲಂಬಿಸಿವೆಯೇ ಹೊರತು ಇಲ್ಲಿ ನಮ್ಮದೇನೂ ಪಾತ್ರವಿಲ್ಲ.)

**ಅನಾಶ್ಚರ್ಯೋ ಜಯಸ್ತೇಷಾಂ ಯೇಷಾಂ ತ್ವಮಸಿ ಕೇಶವ ।**
**ರಕ್ಷಿತಾ ಸಮರೇ ನಿತ್ಯಂ ನಿತ್ಯಂ ಚಾಪಿ ಹಿತೇ ರತಃ ।**
**ಸರ್ವಥಾ ತ್ವಾಂ ಸಮಾಸಾದ್ಯ ನಾಶ್ಚರ್ಯಮಿತಿ ಮೇ ಮತಿಃ ॥೭೦॥**

ನೀನು ಯಾರವನಾಗಿರುವೆಯೋ ಅವರಿಗೆ ಜಯವು ಲಭಿಸುವುದರಲ್ಲಿ ಆಶ್ಚರ್ಯವೇನಿಲ್ಲ. ಪ್ರತಿನಿತ್ಯವೂ ಯುದ್ಧಸಮಯದಲ್ಲಿ ನೀನೇ ನಮಗೆ ರಕ್ಷಕನಾಗಿರುವೆ. ನೀನು ನಮಗೆ ಹಿತವನ್ನುಂಟುಮಾಡುವುದರಲ್ಲಿಯೇ ಸರ್ವದಾ ನಿರತನಾಗಿರುವೆ. ಸರ್ವಪ್ರಕಾರದಿಂದಲೂ ನಿನ್ನನ್ನೇ ಆಶ್ರಯನನ್ನಾಗಿ ಪಡೆದಿರುವ ನಮಗೆ ವಿಜಯವು ಲಭಿಸಿರುವುದು ಆಶ್ಚರ್ಯದ ಸಂಗತಿಯಲ್ಲ ವೆಂಬುದು ನನ್ನ ಭಾವನೆಯಾಗಿದೆ."

ಯುಧಿಷ್ಠಿರನ ಮಾತಿಗೆ ಶ್ರೀಕೃಷ್ಣನು ನಸುನಗುತ್ತಾ ಹೇಳಿದನು :

"ಪಾರ್ಥಿವೋತ್ತಮನೇ! ನಿನ್ನ ಈ ಮಾತುಗಳು ನಿನ್ನ ಸ್ವಭಾವಕ್ಕೆ ಅನುಗುಣವಾಗಿಯೇ ಇವೆ."

ಇ೨೦ನೆಯ ಅಧ್ಯಾಯವು ಮುಗಿಯಿತು.

ಇ೨ಇನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಅರ್ಜುನನು ದಿವ್ಯಜಲವನ್ನು ಪ್ರಕಟೀಕರಿಸಿ ಭೀಷ್ಮನ ಬಾಯಾರಿಕೆಯನ್ನು ಹೋಗಲಾಡಿಸಿದುದು : ಭೀಷ್ಮನಿಂದ ಅರ್ಜುನನ ಪ್ರಶಂಸೆ : ಪಾಂಡವರೊಡನೆ ಸಂಧಿಮಾಡಿಕೊಳ್ಳಲು ದುರ್ಯೋಧನನಿಗೆ ಸಲಹೆನೀಡಿದುದು

ಸಂಜಯನು ಹನ್ನೊಂದನೆಯ ದಿವಸದ ಪ್ರಾತಃಕಾಲದಲ್ಲಿ ನಡೆದುದನ್ನು ಹೇಳಲು ಉಪಕ್ರಮಿಸುತ್ತಾನೆ :

“ಮಹಾರಾಜ! ರಾತ್ರಿಯು ಕಳೆದು ಬೆಳಗಾಗುತ್ತಲೇ ಪಾಂಡವರೂ ಕೌರವರೂ, ನಾನಾದೇಶಗಳಿಂದ ಆಗಮಿಸಿದ್ದ ಎಲ್ಲ ರಾಜರೂ, ಕ್ಷತ್ರಿಯರೂ ವೀರಶಯನದಲ್ಲಿ ಮಲಗಿದ್ದ ಕ್ಷತ್ರಿಯರ್ಷಭನಾದ ಭೀಷ್ಮನಿಗೆ ಅಭಿವಾದನ ಮಾಡಿ ಸುತ್ತುವರಿದು ನಿಂತರು. ಸಾವಿರಾರು ಸಂಖ್ಯೆಯಲ್ಲಿ ಕನ್ಯೆಯರು ಭೀಷ್ಮನ ಬಳಿಗೆ ಬಂದು ಅವನನ್ನು ಚಂದನಚೂರ್ಣಗಳಿಂದಲೂ, ಭತ್ತದ ಅರಳಿನಿಂದಲೂ ಮತ್ತು ಪುಷ್ಪಮಾಲಿಕೆಗಳಿಂದಲೂ ಅಲಂಕರಿಸುತ್ತಿದ್ದರು. ಸ್ತ್ರೀಯರೂ, ವೃದ್ಧರೂ, ಬಾಲಕರೂ ಮತ್ತು ಇತರ ಅನೇಕ ಪ್ರಜೆಗಳೂ, ಪ್ರಾಣಿಗಳೂ-ಅಂಧಕಾರನಾಶಕನಾದ ಸೂರ್ಯನನ್ನು ಸಂದರ್ಶಿಸಲು ಇಚ್ಛಿಸು ವಂತೆ-ಭೀಷ್ಮನನ್ನು ಸಂದರ್ಶಿಸುವ ಸಲುವಾಗಿ ಅಲ್ಲಿಗೆ ಆಗಮಿಸಿದರು. ನೂರಾರು ವಾದ್ಯಗಳು ಮತ್ತು ವಾದ್ಯಗಾರರು, ನಟ-ನರ್ತಕರು, ಶಿಲ್ಪಿಗಳು– ಇವರೆಲ್ಲರೂ ಕುರುವೃದ್ಧನಾದ ಭೀಷ್ಮನನ್ನು ಸಂದರ್ಶಿಸಲು ಅಲ್ಲಿಗೆ ಆಗಮಿಸಿ ದರು. ಕೌರವ-ಪಾಂಡವರು ಯುದ್ಧಗಳನ್ನು ನಿಲ್ಲಿಸಿ, ಕವಚಗಳನ್ನು ತೆಗೆದಿಟ್ಟು, ಆಯುಧಗಳನ್ನು ಬದಿಗಿಟ್ಟು, ಒಟ್ಟಾಗಿ ಸೇರಿ ಹಿಂದಿನಂತೆಯೇ ತಮ್ಮ ವಯೋನುಗುಣವಾಗಿ ಪರಸ್ಪರಪ್ರೀತಿಯನ್ನು ಹೊಂದಿದವರಾಗಿ, ಅರಿಂದಮ ನಾದ ಭೀಷ್ಮನ ಸಮೀಪದಲ್ಲಿ ಕುಳಿತರು. ನೂರಾರು ರಾಜರಿಂದ ಸಮಾಕೀರ್ಣ ವಾಗಿದ್ದ, ಭೀಷ್ಮನಿಂದ ಸುಶೋಭಿತವಾಗಿದ್ದ ಭರತವಂಶೀಯರ ಆ ಮಹಾ ಸಭೆಯು ಆಕಾಶದಲ್ಲಿನ ಸೂರ್ಯಮಂಡಲದಂತೆಯೇ–ಪ್ರಕಾಶಿಸಿತು.

ದೇವೇಶನಾದ ಪಿತಾಮಹನನ್ನು ಉಪಾಸನೆಮಾಡುವ ದೇವತೆಗಳ ಸಭೆ ಯಂತೆಯೇ–ಗಂಗಾಸುತನಾದ ಭೀಷ್ಮನ ಸಮೀಪದಲ್ಲಿ ಕುಳಿತಿದ್ದ ಆ ರಾಜರ ಮಹಾಸಭೆಯು ಪರಿಶೋಭಿಸುತ್ತಿದ್ದಿತು. ಭೀಷ್ಮನ ಶರೀರದಲ್ಲಿ ಬಾಣಗಳು ಬಹಳ ಆಳವಾಗಿ ನಾಟಿಕೊಂಡಿದ್ದುದರಿಂದ ಅವನು ಪರಿತಪಿಸುತ್ತಿದ್ದನು. ಸರ್ಪದಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದನು. ಬಹಳ ಧೈರ್ಯದಿಂದ ವೇದನೆಯನ್ನು ಸಹಿಸಿಕೊಳ್ಳುತ್ತಿದ್ದನು. ಆದರೂ ಶರಗಳ ಆಘಾತದಿಂದ ಶರೀರಾದ್ಯಂತವಾಗಿ ಆಗಿದ್ದ ಗಾಯಗಳಿಂದ ಪರಿತಪಿಸುತ್ತಿದ್ದ ಸತ್ಯವ್ರತನು ಒಮ್ಮೊಮ್ಮೆ ಮೂರ್ಛಿತನೂ ಆಗುತ್ತಿದ್ದನು. ಮೂರ್ಛೆಯು ತಿಳಿದ ಸಮಯ ದಲ್ಲೊಮ್ಮೆ ಸುತ್ತಲೂ ಇದ್ದ ರಾಜರನ್ನು ನೋಡಿ ‘ಪಾನೀಯಂ–ನೀರು’

ಎಂದು ಹೇಳಿದನು. ಸುತ್ತಲೂ ಇದ್ದ ಕ್ಷತ್ರಿಯರು ಬೇಗನೆ ಹೋಗಿ ಶುಚಿ-ರುಚಿಯಾದ ಭಕ್ಷ್ಯ-ಭೋಜ್ಯಗಳನ್ನೂ, ಶೀತಲವಾಗಿದ್ದ ಸಿಹಿನೀರಿನ ಬಿಂದಿಗೆಗಳನ್ನೂ ತಂದರು. ದೊಡ್ಡ-ದೊಡ್ಡ ಬಿಂದಿಗೆಗಳಲ್ಲಿ ನೀರನ್ನು ತಂದುದನ್ನು ನೋಡಿ ಶಾಂತನವನು ಹೇಳಿದನು : "ನಾನೀಗ ಮನುಷ್ಯಲೋಕದಲ್ಲಿರುವ ಭೋಗ್ಯವಸ್ತುಗಳಾವುದನ್ನೂ ಉಪಭೋಗಿಸಲು ಶಕ್ತನಾಗಿಲ್ಲ. ನಾನೀಗ ಮನುಷ್ಯರಿಂದ ಪ್ರತ್ಯೇಕವಾಗಿಬಿಟ್ಟಿದ್ದೇನೆ. ಶರಶಯ್ಯೆಯಲ್ಲಿರುವ ನಾನು ಮನುಷ್ಯಲೋಕದಿಂದಲೂ ಮೇಲಿದ್ದೇನೆ. ಸೂರ್ಯ-ಚಂದ್ರರ ಉತ್ತರದ ಗತಿಯನ್ನು ನಿರೀಕ್ಷಿಸುತ್ತಾ ಪ್ರಾಣವನ್ನಿಟ್ಟುಕೊಂಡಿದ್ದೇನೆ"–ಎಂಬುದಾಗಿ ಹೇಳಿ, ತನ್ನ ಆಶಯವನ್ನು ಅರಿತುಕೊಳ್ಳದಿದ್ದ ಪಾರ್ಥಿವರನ್ನು ಮಾತಿನ ಮೂಲಕ ನಿಂದಿಸುತ್ತಾ, ಕಡೆಗೊಮ್ಮೆ ಅರ್ಜುನನನ್ನು ನೋಡಬೇಕೆನ್ನುವ ತನ್ನ ಅಭಿಲಾಷೆಯನ್ನು ವ್ಯಕ್ತಪಡಿಸಿದನು. ಕೂಡಲೇ ಮಹಾಬಾಹುವಾದ ಅರ್ಜುನನು ಬಂದು ಭೀಷ್ಮನಿಗೆ ನಮಸ್ಕರಿಸಿ ವಿನೀತನಾಗಿ ಬದ್ಧಾಂಜಲಿಯಾಗಿ ನಿಂತು "**ಕಿಂ ಕರೋಮಿ**?–ನಾನು ನಿನಗೆ ಯಾವ ಸೇವೆಯನ್ನು ಮಾಡಲಿ?"–ಎಂದು ಕೇಳಿದನು. ಅಭಿವಾದನಮಾಡಿ ತನ್ನ ಮುಂದೆ ವಿನೀತನಾಗಿ ನಿಂತಿದ್ದ ಅರ್ಜುನನನ್ನು ಕಂಡು, ಸುಪ್ರೀತನಾದ ಧರ್ಮಾತ್ಮನಾದ ಭೀಷ್ಮನು ಧನಂಜಯನೊಡನೆ ಹೇಳಿದನು : "ಅರ್ಜುನ! ನಿನ್ನ ಬಾಣಗಳ ಆವರಣದಿಂದಾಗಿ ನನ್ನ ಶರೀರವು ದಹಿಸುತ್ತಿರುವಂತಿದೆ. ನನ್ನ ಮರ್ಮಸ್ಥಾನಗಳಲ್ಲಿ ಬಹಳವಾದ ವೇದನೆಯುಂಟಾಗುತ್ತಿದೆ. ಮುಖವು ಒಣಗಿಹೋಗುತ್ತಿದೆ. ಅರ್ಜುನ! ವೇದನೆಯಿಂದ ಶರೀರದ ಎಲ್ಲ ಅವಯವಗಳೂ ಪೀಡಿತವಾಗಿವೆ. ನನಗೆ ನೀರನ್ನು ಕೊಡು. ಮಹಾಧನುಷ್ಮಂತನೇ! ವಿಧಿಪೂರ್ವಕವಾಗಿ ನಾನು ಸ್ವೀಕರಿಸಲು ಯೋಗ್ಯವಾದ ನೀರನ್ನು ಕೊಡಲು ನೀನೇ ಸಮರ್ಥನಾಗಿರುವೆ."

ಮಹಾರಾಜ! ವೀರ್ಯವಂತನಾದ ಅರ್ಜುನನು ಹಾಗೆಯೇ ಆಗಲೆಂದು ಭೀಷ್ಮನಿಗೆ ಹೇಳಿ ರಥವನ್ನೇರಿ ಗಾಂಡೀವಧನುಸ್ಸಿಗೆ ಬಲಪೂರ್ವಕ ವಾಗಿ ಹೆದೆಯೇರಿಸಿ ಟೇಂಕರಿಸಿದನು. ಸಿಡಿಲಿನ ಧ್ವನಿಯಂತಿದ್ದ ಧನುಸ್ಸಿನ ಟೇಂಕಾರಶಬ್ದವನ್ನು ಕೇಳಿ ಅಲ್ಲಿದ್ದ ಎಲ್ಲ ಪ್ರಾಣಿಗಳೂ ಮತ್ತು ರಾಜರೂ ಭಯಗೊಂಡರು. ಸರ್ವಶಸ್ತ್ರಭೃತರಲ್ಲಿ ಶ್ರೇಷ್ಠನಾದ, ಭೂತಶ್ರೇಷ್ಠನಾದ, ರಥಿಗಳಲ್ಲಿ ಶ್ರೇಷ್ಠನಾದ ಅರ್ಜುನನು ಶರತಲ್ಪದಲ್ಲಿ ಮಲಗಿದ್ದ ಭೀಷ್ಮನನ್ನು ರಥಸಹಿತ

ವಾಗಿಯೇ ಪ್ರದಕ್ಷಿಣೆಮಾಡಿ, ಪ್ರದೀಪ್ತವಾದ ಬಾಣವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಅಭಿಮಂತ್ರಿಸಿ, ಪರ್ಜನ್ಯಾಸ್ತ್ರದಿಂದ ಬಾಣವನ್ನು ಸಂಯೋಜಿಸಿ ಎಲ್ಲರೂ ನೋಡುತ್ತಿದ್ದಂತೆಯೇ ಭೀಷ್ಮನ ಬಲಭಾಗದಲ್ಲಿ ಭೂಮಿಯನ್ನು ಪ್ರಹರಿಸಿದನು. ಒಡನೆಯೇ ಶೀತಲವಾದ, ಅಮೃತಕ್ಕೆ ಸಮಾನವಾದ, ಮಧುರವಾದ, ದಿವ್ಯಸುಗಂಧದಿಂದಲೂ–ದಿವ್ಯರಸದಿಂದಲೂ ಯುಕ್ತವಾದ, ವಿಮಲವಾದ, ಶುಭಾವಹವಾದ ಜಲಧಾರೆಯು ಭೂಮಿಯಿಂದ ಬುಗ್ಗೆಯಂತೆ ಹೊರಬಂದಿತು. ಶೀತಲವಾಗಿದ್ದ ಆ ಜಲಧಾರೆಯಿಂದ ಅರ್ಜುನನು ದಿವ್ಯಕರ್ಮಪರಾಕ್ರಮನಾದ, ಕುರುಶ್ರೇಷ್ಠನಾದ ಭೀಷ್ಮನನ್ನು ತೃಪ್ತಿಪಡಿಸಿದನು.



ಶಕ್ರಸಮಪರಾಕ್ರಮನಾದ ಅರ್ಜುನನ ಆ ಅದ್ಭುತಕರ್ಮದಿಂದ ಅಲ್ಲಿದ್ದ ರಾಜರೆಲ್ಲರೂ ವಿಸ್ಮಯಭರಿತರಾದರು. ಅರ್ಜುನನ ಅತಿಮಾನುಷವಾದ ಪರಾಕ್ರಮವನ್ನು ನೋಡಿ ಕುರುಗಳು–ಶೀತದಿಂದ ಪೀಡಿತವಾದ ಹಸುಗಳಂತೆ–ನಡುಗಿದರು. ಅಲ್ಲಿ ಕುಳಿತಿದ್ದ ಎಲ್ಲ ರಾಜರೂ ವಿಸ್ಮಯಾವಿಷ್ಟರಾಗಿ ತಮ್ಮ ಉತ್ತರೀಯಗಳನ್ನು ಅಳ್ಳಾಡಿಸುತ್ತಿದ್ದರು. ನಾಲ್ಕು ದಿಕ್ಕುಗಳಿಂದಲೂ ಶಂಖಗಳ ಮತ್ತು ನಗಾರಿಗಳ ಗಂಭೀರಧ್ವನಿಗಳು ಕೇಳಿಬಂದುವು. ಎಲ್ಲ ರಾಜರ ಮಧ್ಯದಲ್ಲಿ ಪಾರ್ಥನನ್ನು ಪ್ರಶಂಸಿಸುತ್ತಿರುವನೋ ಎಂಬಂತೆ ತೃಪ್ತನಾದ ಶಾಂತನವನು ಬೀಭತ್ಸುವನ್ನು ಕುರಿತು ಹೇಳಿದನು :

**ನೈತಚ್ಚಿತ್ರಂ ಮಹಾಬಾಹೋ ತ್ವಯಿ ಕೌರವನನ್ದನ ।**
**ಕಥಿತೋ ನಾರದೇನಾಸಿ ಪೂರ್ವರ್ಷಿರಮಿತದ್ಯುತೇ ॥೩೧॥**

**ವಾಸುದೇವಸಹಾಯಸ್ತ್ವಂ ಮಹತ್ಕರ್ಮ ಕರಿಷ್ಯಸಿ ।**
**ಯನ್ನೋತ್ಸಹತಿ ದೇವೇನ್ದ್ರಃ ಸಹ ದೇವೈರಪಿ ಧ್ರುವಮ್ ॥೩೨॥**

"ಮಹಾಬಾಹೋ! ಕೌರವನಂದನ! ನಿನ್ನಲ್ಲಿ ಇಂತಹ ಅದ್ಭುತ ಪರಾಕ್ರಮವಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಅಮಿತದ್ಯುತಿಯೇ! ನಾರದರು ನಿನ್ನ ವಿಷಯವಾಗಿ ನನಗೆ ಹಿಂದೆಯೇ ಹೇಳಿರುತ್ತಾರೆ. ನೀನು ಹಿಂದೆ (ನರನೆಂಬ) ಋಷಿಯಾಗಿದ್ದೆ. ವಾಸುದೇವನನ್ನೇ ಸಹಾಯಕನನ್ನಾಗಿ ಪಡೆದಿರುವ ನೀನು ಪ್ರಪಂಚದಲ್ಲಿ ಎಂತಹ ಮಹಾಕಾರ್ಯಗಳನ್ನು ಮಾಡುವೆಯೆಂದರೆ : ದೇವತೆಗಳಿಂದೊಡಗೂಡಿದ ದೇವೇಂದ್ರನೂ ಸಹ ಅಂತಹ ಮಹಾಕಾರ್ಯಗಳನ್ನು ಮಾಡಲು ಸಮರ್ಥನಾಗಲಾರನು.

**ವಿದುಸ್ತ್ವಾಂ ನಿಧನಂ ಪಾರ್ಥ ಸರ್ವಕ್ಷತ್ರಸ್ಯ ತದ್ವಿದಃ ।**
**ಧನುರ್ಧರಾಣಾಮೇಕಸ್ತ್ವಂ ಪೃಥಿವ್ಯಾಂ ಪ್ರವರೋ ನೃಷು ॥೩೩॥**

ಪಾರ್ಥ! ತಿಳಿದವರು ನಿನ್ನನ್ನು ಎಲ್ಲ ಕ್ಷತ್ರಿಯರಿಗೂ ಮೃತ್ಯುಸ್ವರೂಪನಾದವನೆಂದು ಹೇಳುತ್ತಾರೆ. ನೀನು ಪ್ರಪಂಚದಲ್ಲಿರುವ ಮನುಷ್ಯರಲ್ಲಿ ಶ್ರೇಷ್ಠನಾದವನೂ ಮತ್ತು ಧನುರ್ಧಾರಿಗಳಲ್ಲಿ ಪ್ರಧಾನಭೂತನಾದವನೂ ಆಗಿರುತ್ತೀಯೆ.

**ಮನುಷ್ಯಾ ಜಗತಿ ಶ್ರೇಷ್ಠಾಃ ಪಕ್ಷಿಣಾಂ ಪತಗೇಶ್ವರಃ ।**
**ಸರಿತಾಂ ಸಾಗರಃ ಶ್ರೇಷ್ಠೋ ಗೌರ್ವರಿಷ್ಠಾ ಚತುಷ್ಪದಾಮ್ ॥೩೪॥**

ಪ್ರಪಂಚದಲ್ಲಿರುವ ಪ್ರಾಣಿಗಳಲ್ಲಿ ಮನುಷ್ಯರೇ ಶ್ರೇಷ್ಠರು. ಪಕ್ಷಿಗಳಲ್ಲಿ ಪಕ್ಷಿಗಳಿಗೆ ಒಡೆಯನಾದ ಗರುಡನು ಶ್ರೇಷ್ಠನು. ನದಿಗಳಲ್ಲಿ (ಜಲಾಶಯಗಳಲ್ಲಿ) ಸಮುದ್ರನು ಶ್ರೇಷ್ಠನು. ನಾಲ್ಕು ಕಾಲುಗಳಿರುವ ಪ್ರಾಣಿಗಳಲ್ಲಿ ಹಸುವು ಶ್ರೇಷ್ಠವಾದುದು.

**ಆದಿತ್ಯಸ್ತೇಜಸಾಂ ಶ್ರೇಷ್ಠೋ ಗಿರೀಣಾಂ ಹಿಮವಾನ್ವರಃ ।**
**ಜಾತೀನಾಂ ಬ್ರಾಹ್ಮಣಃ ಶ್ರೇಷ್ಠಃ ಶ್ರೇಷ್ಠಸ್ತ್ವಮಸಿ ಧನ್ವಿನಾಮ್ ॥೩೫॥**

ತೇಜೋಮಯವಾದ ಪದಾರ್ಥಗಳಲ್ಲಿ ಸೂರ್ಯನು ಶ್ರೇಷ್ಠನು. ಪರ್ವತಗಳಲ್ಲಿ ಹಿಮವಂತನು ಶ್ರೇಷ್ಠನು. ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣನು ಶ್ರೇಷ್ಠನು. ಧನುಷ್ಮಂತರಲ್ಲಿ ನೀನೇ ಶ್ರೇಷ್ಠನು.

ನಾನು, ವಿದುರ, ದ್ರೋಣರು, ಪರಶುರಾಮ, ಜನಾರ್ದನ, ಸಂಜಯ ಈ ಎಲ್ಲರೂ ಪಾಂಡವರೊಡನೆ ಯುದ್ಧಮಾಡುವುದು ಬೇಡವೆಂದು ದುರ್ಯೋಧನನಿಗೆ ಮತ್ತೆ-ಮತ್ತೆ ಹೇಳಿದೆವು. ಆದರೆ ನಮ್ಮ ಮಾತನ್ನು ಅವನು ಕೇಳಲಿಲ್ಲ. ದುರ್ಯೋಧನನು ವಿಪರೀತಬುದ್ಧಿಯವನಾಗಿದ್ದಾನೆ. (ಸತ್ಪುರುಷರಿಗೆ ಸರಿ ಎನಿಸಿದುದು ಅವನಿಗೆ ತಪ್ಪು ಎನಿಸುತ್ತದೆ. ಸತ್ಪುರುಷರು ತಪ್ಪು ಎಂದು ಭಾವಿಸಿದುದನ್ನು ಅವನು ಸರಿ ಎಂದು ಭಾವಿಸುತ್ತಾನೆ.) ಮೂಢನಂತೆ ವರ್ತಿಸುತ್ತಾನೆ. ಆದುದರಿಂದ ನಾವು ಹೇಳುವುದರಲ್ಲಿ ಅವನಿಗೆ ಶ್ರದ್ಧೆಯೇ ಇಲ್ಲವಾಗಿದೆ. ಶಾಸ್ತ್ರಗಳನ್ನು ಮೀರಿ ನಡೆಯತಕ್ಕವನಾಗಿದ್ದಾನೆ. ಈ ಕಾರಣಗಳಿಂದಾಗಿ ಅವನು ಭೀಮನ ಬಲದಿಂದ ಪರಾಜಿತನಾಗಿ ಬಹಳ ಕಾಲ ರಣಭೂಮಿಯಲ್ಲಿ ಮಲಗುವನು.”

ಭೀಷ್ಮನ ಮಾತನ್ನು ಕೇಳಿ ಕೌರವೇಂದ್ರನಾದ ದುರ್ಯೋಧನನು ದೀನಮನಸ್ಕನಾದನು. ಅದನ್ನು ಗಮನಿಸಿದ ಶಾಂತನವನು ದುರ್ಯೋಧನನ ಕಡೆಗೆ ತಿರುಗಿ ಹೇಳಿದನು : “ದುರ್ಯೋಧನ! ಕೋಪವನ್ನು ದೂರಮಾಡು. ನಾನು ಹೇಳುವುದನ್ನು ಕೇಳು. ಅರ್ಜುನನು ಅಮೃತದಂತಿರುವ ಶೀತಲವಾದ ನೀರಿನ ಧಾರೆಯನ್ನು ಪ್ರಕಟಪಡಿಸಿರುವುದನ್ನು ನೀನೂ ನೋಡಿರುವೆ.

**ಏತಸ್ಯ ಕರ್ತಾ ಲೋಕೇಽಸ್ಮಿನ್ನಾನ್ಯಃ ಕಶ್ಚನ ವಿದ್ಯತೇ ।**
**ಆಗ್ನೇಯಂ ವಾರುಣಂ ಸೌಮ್ಯಂ ವಾಯವ್ಯಮಥ ವೈಷ್ಣವಮ್ ॥೪೦॥**

**ಐನ್ದ್ರಂ ಪಾಶುಪತಂ ಬ್ರಾಹ್ಮಂ ಪಾರಮೇಷ್ಠ್ಯಂ ಪ್ರಜಾಪತೇಃ ।**
**ಧಾತುಸ್ತ್ವಷ್ಟುಶ್ಚ ಸವಿತುರ್ವೈವಸ್ವತಮಥಾಪಿ ವಾ ॥೪೧॥**

**ಸರ್ವಸ್ಮಿನ್ಮಾನುಷೇ ಲೋಕೇ ವೇತ್ತ್ಯೇಕೋ ಹಿ ಧನಂಜಯಃ ।**
**ಕೃಷ್ಣೋ ವಾ ದೇವಕೀಪುತ್ರೋ ನಾನ್ಯೋ ವೇದೇಹ ಕಶ್ಚನ ॥೪೨॥**

ದುರ್ಯೋಧನ! ಈ ಪ್ರಪಂಚದಲ್ಲಿ ಇಂತಹ ಅದ್ಭುತವಾದ ಕಾರ್ಯವನ್ನು ಮಾಡಿ ತೋರಿಸುವವನು ಅರ್ಜುನನನ್ನು ಬಿಟ್ಟು ಬೇರೆ ಯಾವನೂ ಇಲ್ಲ. ಆಗ್ನೇಯ, ವಾರುಣ, ಸೌಮ್ಯ, ವಾಯವ್ಯ, ವೈಷ್ಣವ, ಐಂದ್ರ, ಪಾಶುಪತ,

ಬ್ರಾಹ್ಮ, ಪಾರಮೇಷ್ಠ್ಯ, ಪ್ರಾಜಾಪತ್ಯ, ಧಾತ್ರ, ತ್ವಾಷ್ಟ್ರ, ಸಾವಿತ್ರ, ವೈವಸ್ವತ–ಈ ಎಲ್ಲ ಮಹಾಸ್ತ್ರಗಳನ್ನೂ ಮನುಷ್ಯಲೋಕದಲ್ಲಿ ಧನಂಜಯನೊಬ್ಬನು ಮಾತ್ರವೇ ತಿಳಿದವನಾಗಿರುತ್ತಾನೆ. ದೇವಕೀಪುತ್ರನಾದ ಶ್ರೀಕೃಷ್ಣನಿಗೂ ಈ ಮಹಾಸ್ತ್ರಗಳು ತಿಳಿದಿವೆ. ಇವರಿಬ್ಬರನ್ನು ಬಿಟ್ಟು ಈ ಮಹಾಸ್ತ್ರಗಳೆಲ್ಲವನ್ನೂ ತಿಳಿದಿರುವವನು ಬೇರೊಬ್ಬನಿಲ್ಲ.

ತಾತ! ಈ ಕಾರಣದಿಂದ ಯುದ್ಧದಲ್ಲಿ ಅರ್ಜುನನನ್ನು ಜಯಿಸಲು ಯಾರಿಂದಲೂ ಶಕ್ಯವಾಗುವುದಿಲ್ಲ. ಮಹಾತ್ಮನಾದ ಅರ್ಜುನನು ತನ್ನ ಅಮಾನುಷವಾದ ಕರ್ಮಗಳನ್ನು ಪ್ರತ್ಯಕ್ಷವಾಗಿಯೇ ತೋರಿಸಿಕೊಟ್ಟಿದ್ದಾನೆ. ಇಂತಹುದೇ ಅಮಾನುಷಕರ್ಮಗಳು ಅರ್ಜುನನಲ್ಲಿ ಅನೇಕವಾಗಿವೆ. ಆದುದರಿಂದ ಧೈರ್ಯವಂತನಾದ, ಬಲಿಷ್ಠನಾದ, ಶೂರನಾದ, ಆಹವಶೋಭಿಯಾದ, ಅಸ್ತ್ರವಿದ್ಯಾಪಾರಂಗತನಾದ ಅರ್ಜುನನೊಡನೆ ಸಾಧ್ಯವಾದಷ್ಟು ಬೇಗ ಸಂಧಿಯೇರ್ಪಡಲಿ.

**ಯಾವತ್ಕೃಷ್ಣೋ ಮಹಾಬಾಹುಃ ಸ್ವಾಧೀನಃ ಕುರುಸತ್ತಮ ।**
**ತಾವತ್ಪಾರ್ಥೇನ ಶೂರೇಣ ಸನ್ಧಿಸ್ತೇ ತಾತ ಯುಜ್ಯತಾಮ್ ॥೪೫॥**

ಕುರುಸತ್ತಮ! ಎಲ್ಲಿಯವರೆಗೆ ಮಹಾಬಾಹುವಾದ ಶ್ರೀಕೃಷ್ಣನು ಪಾಂಡವರ ಸ್ವಾಧೀನದಲ್ಲಿರುತ್ತಾನೆಯೋ, ಅಲ್ಲಿಯವರೆಗೂ ವಿಜಯದ ಆಸೆಯನ್ನು ಬಿಟ್ಟು ಶೂರನಾದ ಪಾರ್ಥನೊಡನೆ ಸಂಧಿಯನ್ನು ಏರ್ಪಡಿಸು. (ಕೃಷ್ಣನು ಎಲ್ಲಿಯವರೆಗೆ ಸ್ವಾಧೀನನಾಗಿರುತ್ತಾನೆಯೋ–ಸಂಧಿಯ ವಿಷಯದಲ್ಲಿ ನಮ್ಮ ಮಾತನ್ನು ಸಮರ್ಥಿಸುತ್ತಾನೆಯೋ ಅಷ್ಟರೊಳಗೆ ಸಂಧಿ ಮಾಡಿಕೋ.)

**ಯಾವನ್ನ ತೇ ಚಮೂಃ ಸರ್ವಾಃ ಶರೈಃ ಸನ್ನತಪರ್ವಭಿಃ ।**
**ನಾಶಯತ್ಯರ್ಜುನಸ್ತಾವತ್ಸನ್ಧಿಸ್ತೇ ತಾತ ಯುಜ್ಯತಾಮ್ ॥೪೬॥**

ಸನ್ನತಪರ್ವಗಳಾದ ಬಾಣಗಳಿಂದ ನಿನ್ನ ಎಲ್ಲ ಸೈನ್ಯಗಳನ್ನೂ ಅರ್ಜುನನು ಸಂಪೂರ್ಣವಾಗಿ ವಿನಾಶಗೊಳಿಸುವುದರೊಳಗಾಗಿ ನೀನು ಅವನೊಡನೆ ಸಂಧಿಯನ್ನು ಮಾಡಿಕೋ.

**ಯಾವತ್ತಿಷ್ಠನ್ತಿ ಸಮರೇ ಹತಶೇಷಾಃ ಸಹೋದರಾಃ ।**
**ನೃಪಾಶ್ಚ ಬಹವೋ ರಾಜಂಸ್ತಾವತ್ಸನ್ಧಿಃ ಪ್ರಯುಜ್ಯತಾಮ್ ॥೪೭॥**

ಹತಶೇಷರಾದ ಸಹೋದರರು ಇನ್ನೂ ಬದುಕಿರುವಾಗಲೇ ಅರ್ಜುನನೊಡನೆ ಸಂಧಿಯನ್ನು ಮಾಡಿಕೋ. ನಿನ್ನ ಸಹಾಯಕ್ಕಾಗಿ ಬಂದಿರುವ ರಾಜರಲ್ಲಿ ಹೆಚ್ಚು ಮಂದಿ ಸಪ್ರಾಣರಾಗಿರುವಾಗಲೇ ಅರ್ಜುನನೊಡನೆ ಸಂಧಿ ಮಾಡಿಕೊಳ್ಳುವುದು ಉಚಿತವಾಗಿದೆ.

**ನ ನಿರ್ದಹತಿ ತೇ ಯಾವತ್ಕ್ರೋಧದೀಪ್ತೇಕ್ಷಣಶ್ಚಮೂಮ್ ।**
**ಯುಧಿಷ್ಠಿರೋ ರಣೇ ತಾವತ್ಸನ್ಧಿಸ್ತೇ ತಾತ ಯುಜ್ಯತಾಮ್ ॥೪೮॥**

ಯುಧಿಷ್ಠಿರನು ಕ್ರೋಧದಿಂದ ದೀಪ್ತವಾದ ಕಣ್ಣುಗಳ ವೀಕ್ಷಣಮಾತ್ರದಿಂದಲೇ ನಿನ್ನ ಸೈನ್ಯವೆಲ್ಲವನ್ನೂ ದಹಿಸಿಬಿಡಬಲ್ಲನು. ಆದುದರಿಂದ ಅವನು ಕೋಪಗೊಳ್ಳುವ ಮೊದಲೇ ಪಾಂಡವರೊಡನೆ ಸಂಧಿಯನ್ನೇರ್ಪಡಿಸು.

**ನಕುಲಃ ಸಹದೇವಶ್ಚ ಭೀಮಸೇನಶ್ಚ ಪಾಣ್ಡವಃ ।**
**ಯಾವಚ್ಚಮೂಂ ಮಹಾರಾಜ ನಾಶಯನ್ತಿ ನ ಸರ್ವಶಃ ॥೪೯॥**

**ತಾವತ್ತೇ ಪಾಣ್ಡವೈರ್ವೀರೈಃ ಸೌಹಾರ್ದಂ ಮಮ ರೋಚತೇ ।**
**ಯುದ್ಧಂ ಮದನ್ತಮೇವಾಸ್ತು ತಾತ ಸಂಶಾಮ್ಯ ಪಾಣ್ಡವೈಃ ॥೫೦॥**

ನಕುಲ, ಸಹದೇವ ಮತ್ತು ಭೀಮಸೇನ–ಇವರು ನಿನ್ನ ಸಂಪೂರ್ಣ ಸೈನ್ಯವನ್ನು ನಾಶಮಾಡುವುದರೊಳಗಾಗಿ ನೀನು ವೀರರಾದ ಪಾಂಡವರೊಡನೆ ಸೌಹಾರ್ದವನ್ನು ಬೆಳೆಸುವುದು ನನಗೆ ಬಹಳ ಪ್ರಿಯವಾಗಿ ಕಾಣುತ್ತದೆ. ಈ ಮಹಾಯುದ್ಧಕ್ಕೆ ನನ್ನ ಸಾವೇ ಕೊನೆಯಾಗಲಿ. ಮುಂದೆ ನಡೆಯುವುದು ಬೇಡ. ಪಾಂಡವರೊಡನೆ ಸಂಧಿಯನ್ನು ಸಾಧಿಸು.

ದುರ್ಯೋಧನ! ನೀನು ಕೋಪವನ್ನು ಪರಿತ್ಯಜಿಸಿ ಕುಂತಿಯ ಮಕ್ಕಳೊಡನೆ ಸಂಧಿಯನ್ನು ಮಾಡಿಕೋ. ಅರ್ಜುನನು ಇದುವರೆಗೆ ಯಾವ ವಿಶಸನಕ್ರಿಯೆಯನ್ನು ಮಾಡಿದ್ದಾನೆಯೋ ಅದು ಪರ್ಯಾಪ್ತವಾಗಿದೆ. (ಸಾಕಷ್ಟಾಗಿದೆ. ) ಭೀಷ್ಮನ ಅಂತದೊಡನೆ ನಿಮ್ಮ ವೈರವೂ ಕೊನೆಯಾಗಿ ನಿಮ್ಮಲ್ಲಿ ಸೌಹಾರ್ದವುಂಟಾಗಲಿ. ಉಳಿದವರಾದರೂ ಚೆನ್ನಾಗಿ ಬದುಕಿ ಬಾಳಲಿ. ನೀನು ಕೋಪವನ್ನು ತೊರೆದು ಪ್ರಸನ್ನನಾಗು.

ಪಾಂಡವರಿಗೆ ರಾಜ್ಯದ ಅರ್ಧಭಾಗವನ್ನು ಕೊಟ್ಟುಬಿಡು. ಧರ್ಮರಾಜನು ಇಂದ್ರಪ್ರಸ್ಥಕ್ಕೆ ಹೊರಟುಹೋಗಲಿ. ಇದರಿಂದಾಗಿ ನೀನು ರಾಜರ ಮಧ್ಯದಲ್ಲಿ

'ಮಿತ್ರದ್ರೋಹೀ ; ರಾಜರಲ್ಲಿ ನೀಚ' ಎಂಬ ದುಷ್ಕೀರ್ತಿಯನ್ನು ಪಡೆಯುವುದಿಲ್ಲ. ನನ್ನ ಅವಸಾನದಿಂದಾಗಿ ಪ್ರಜೆಗಳಲ್ಲಿ ಶಾಂತಿಯು ನೆಲೆಸಲಿ. ಪ್ರೀತಮನಸ್ಕರಾದ ರಾಜರು ತಮ್ಮ-ತಮ್ಮ ರಾಜ್ಯಗಳಿಗೆ ಪ್ರಯಾಣಮಾಡಲಿ. ತಂದೆಯು-ಮಗನನ್ನೂ, ಸೋದರಳಿಯನು-ಸೋದರಮಾವನನ್ನೂ, ಅಣ್ಣನು-ತಮ್ಮನನ್ನೂ ಸಂಧಿಸುವಂತಾಗಲಿ. ಒಂದು ವೇಳೆ ನೀನು ಮೋಹಪರವಶನಾಗಿ ಮೂರ್ಖತ್ವದ ಕಾರಣದಿಂದ ಸಮಯೋಚಿತವಾಗಿ ಹೇಳಿರುವ ನನ್ನ ಈ ಮಾತನ್ನು ಕೇಳದೆಯೇ ಹೋದರೆ ಕಡೆಯಲ್ಲಿ ನೀನು ಪರಿತಪಿಸುವೆ. ನಿಮ್ಮೆಲ್ಲರಿಗೂ ಈ ಯುದ್ಧವೇ ಮೃತ್ಯುವಾಗಿ ಪರಿಣಮಿಸುತ್ತದೆ. ಸತ್ಯವಾದ ಈ ಮಾತನ್ನು ನಾನು ನಿನಗೆ ಹೇಳುತ್ತಿದ್ದೇನೆ."

ಮಹಾರಾಜ! ಆಪಗೇಯನಾದ ಭೀಷ್ಮನು ಎಲ್ಲ ರಾಜರ ಮಧ್ಯದಲ್ಲಿ ಸೌಹಾರ್ದದ ಕಾರಣದಿಂದ ದುರ್ಯೋಧನನಿಗೆ ಈ ಮಾತುಗಳನ್ನು ಹೇಳಿ, ಬಾಣಗಳಿಂದ ಸಂತಪ್ತವಾದ ಮರ್ಮಸ್ಥಾನಗಳಲ್ಲಿ ತನಗಾಗುತ್ತಿದ್ದ ವೇದನೆಯನ್ನು ತಡೆದುಕೊಂಡು ಮನಸ್ಸನ್ನು ಆತ್ಮನಲ್ಲಿ ಯೋಜಿಸಿ ಮೌನಿಯಾದನು.

ಧರ್ಮಾರ್ಥಸಹಿತವಾದ, ಕ್ಷೇಮಕರವಾದ ಭೀಷ್ಮನ ಮಾತುಗಳನ್ನು ಕೇಳಿದ ನಿನ್ನ ಮಗನಿಗೆ–ಮರಣೋನ್ಮುಖನಾಗಿರುವವನಿಗೆ ಔಷಧಿಯು ಹಿಡಿಸದ ರೀತಿಯಲ್ಲಿ–ಭೀಷ್ಮನ ಹಿತವಚನಗಳು ರುಚಿಸಲಿಲ್ಲ."

೧೨೧ನೆಯ ಅಧ್ಯಾಯವು ಮುಗಿಯಿತು.

೧೨೨ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಕರ್ಣ–ಭೀಷ್ಮರ ರಹಸ್ಯಸಂವಾದ

ಸಂಜಯನು ಕರ್ಣ-ಭೀಷ್ಮರಲ್ಲಿ ಬಹುರಹಸ್ಯವಾಗಿ ನಡೆದ ಸಂಭಾಷಣೆಯನ್ನು ಧೃತರಾಷ್ಟ್ರನೊಡನೆ ಹೇಳಲುಪಕ್ರಮಿಸುತ್ತಾನೆ :

"ಮಹಾರಾಜ! ಶಾಂತನುವಿನ ಮಗನಾದ ಭೀಷ್ಮನು ಮಾತು ಮುಗಿಸಿ ಮೌನಧರಿಸಿದನಂತರ ಅಲ್ಲಿ ನೆರೆದಿದ್ದ ರಾಜರೆಲ್ಲರೂ ತಮ್ಮ-ತಮ್ಮ ಶಿಬಿರಗಳಿಗೆ ತೆರಳಿದರು. ಪುರುಷರ್ಷಭನಾದ ರಾಧೇಯನು, ಭೀಷ್ಮನು ಅರ್ಜುನನ

ಬಾಣಗಳಿಂದ ಪ್ರಹೃತನಾಗಿ ರಥದಿಂದ ಕೆಳಕ್ಕೆ ಬಿದ್ದುಹೋದನೆಂಬ ವಿಷಯವನ್ನು ಕೇಳಿ ಸ್ವಲ್ಪ ಕಳವಳಗೊಂಡವನಾಗಿ ಅವಸರದಿಂದಲೇ ಭೀಷ್ಮನ ಬಳಿಗೆ ಧಾವಿಸಿಬಂದನು. ಜೊಂಡುಹುಲ್ಲಿನ ಮೇಲೆ ಜನ್ಮತಾಳಿದ ಪ್ರಭುವಾದ ಕಾರ್ತಿಕೇಯನಂತೆಯೇ–ಶರತಲ್ಪದ ಮೇಲೆ ಮಲಗಿದ್ದ ಮಹಾತ್ಮನಾದ ಭೀಷ್ಮನನ್ನು ಅವನು ನೋಡಿದನು. ಕಣ್ಣುಗಳನ್ನು ಮುಚ್ಚಿಕೊಂಡಿದ್ದ ವೀರನಾದ ಭೀಷ್ಮನನ್ನು ನೋಡಿ ಕಂಬನಿದುಂಬಿದ ಕಣ್ಣುಗಳಿಂದ ಕೂಡಿದ ವೃಷನು (ಕರ್ಣನು) "ಭೀಷ್ಮ! ಮಹಾಬಾಹೋ!" ಎಂದು ಗದ್ಗದಕಂಠದಿಂದ ಕೂಗಿಕೊಂಡನು. "ಕುರುಶ್ರೇಷ್ಠನೇ! ನಾನು ರಾಧೇಯ. ನಿತ್ಯವೂ ನಿನ್ನ ಕಣ್ಣುಗಳಿಗೆ ಬಹಳ ಅನಿಷ್ಟನಾಗಿ ಕಾಣುತ್ತಿದ್ದವನು. ಯಾವಾಗಲೂ ಎಲ್ಲೆಡೆಗಳಲ್ಲಿಯೂ ನಿನ್ನ ದ್ವೇಷಕ್ಕೆ ಪಾತ್ರನಾಗುತ್ತಿದ್ದವನು. ಅಂತಹ ಕರ್ಣನಾದ ನಾನು ನಿನ್ನನ್ನು ಸಂದರ್ಶಿಸುವ ಸಲುವಾಗಿ ಬಂದಿದ್ದೇನೆ." ಮಹಾರಾಜ! ಕರ್ಣನ ಅಶ್ರುಪೂರ್ಣವಾದ ಗದ್ಗದಧ್ವನಿಯಿಂದ ಕೂಡಿದ ಮಾತುಗಳನ್ನು ಕೇಳಿ ಬಲಿಷ್ಠನಾದ, ಕುರುವೃದ್ಧನಾದ ಭೀಷ್ಮನು ಮುಚ್ಚಿದ್ದ ಕಣ್ಣುಗಳನ್ನರಳಿಸಿ, ಮಂದ-ಮಂದವಾಗಿ ಕರ್ಣನ ಕಡೆಗೆ ವೀಕ್ಷಿಸುತ್ತಾ, ತಾನಿದ್ದ ಸ್ಥಳವು ಜನರಿಂದ ರಹಿತವಾಗಿರುವುದನ್ನು ಗಮನಿಸಿ ತನ್ನನ್ನು ರಕ್ಷಿಸುತ್ತಿದ್ದವನನ್ನು ದೂರಕ್ಕೆ ಕಳುಹಿಸಿ, ತಂದೆಯು ಮಗನನ್ನು ಅಪ್ಪಿಕೊಳ್ಳುವಂತೆ–ಒಂದೇ ಕೈಯಿಂದ ಕರ್ಣನನ್ನಪ್ಪಿಕೊಂಡು ಸ್ನೇಹಪೂರ್ವಕವಾಗಿ ಹೇಳಿದನು :

**ಏಹ್ಯೇಹಿ ಮೇ ವಿಪ್ರತೀಪ ಸ್ಪರ್ಧಸೇ ತ್ವಂ ಮಯಾ ಸಹ ।**
**ಯದಿ ಮಾಂ ನಾಧಿಗಚ್ಛೇಥಾ ನ ತೇ ಶ್ರೇಯೋ ಧ್ರುವಂ ಭವೇತ್ ॥೮॥**

"ನನ್ನ ವಿರೋಧಿಯೇ! ಕರ್ಣ! ಬಾ. ಬಾ. ನನ್ನೊಡನೆ ಯಾವಾಗಲೂ ನೀನು ಸ್ಪರ್ಧಿಸುತ್ತಲೇ ಇದ್ದೆಯಲ್ಲವೇ? ಒಂದು ವೇಳೆ ನೀನೀಗ ನನ್ನನ್ನು ನೋಡಲು ಬಾರದೇ ಇದ್ದಿದ್ದರೆ ನಿಶ್ಚಯವಾಗಿಯೂ ನಿನಗೆ ಶ್ರೇಯಸ್ಸು ಲಭಿಸುತ್ತಿರಲಿಲ್ಲ.

**ಕೌನ್ತೇಯಸ್ತ್ವಂ ನ ರಾಧೇಯೋ ನ ತವಾಧಿರಥಃ ಪಿತಾ ।**
**ಸೂರ್ಯಜಸ್ತ್ವಂ ಮಹಾಬಾಹೋ ವಿದಿತೋ ನಾರದಾನ್ಮಯಾ ॥೯॥**

ವತ್ಸ! ಕರ್ಣ! ನೀನು ಕುಂತಿಯ ಮಗನು. ನೀನು ರಾಧೇಯನಲ್ಲ.

ಅಧಿರಥನು ನಿನ್ನ ತಂದೆಯೂ ಅಲ್ಲ. ನೀನು ಕುಂತಿಯ ಹೊಟ್ಟೆಯಲ್ಲಿ ಸೂರ್ಯನಿಂದ ಹುಟ್ಟಿದವನು. ಮಹಾಬಾಹುವೇ! ಈ ವಿಷಯವು ನನಗೆ ನಾರದರಿಂದ ಮೊದಲೇ ತಿಳಿದಿತ್ತು.

**ಕೃಷ್ಣದ್ವೈಪಾಯನಾಚ್ಚೈವ ತಚ್ಚ ಸತ್ಯಂ ನ ಸಂಶಯಃ ।**
**ನ ಚ ದ್ವೇಷೋಽಸ್ತಿ ಮೇ ತಾತ ತ್ವಯಿ ಸತ್ಯಂ ಬ್ರವೀಮಿ ತೇ ॥೧೦॥**

ತಾತ! ಕೃಷ್ಣದ್ವೈಪಾಯನರೂ ನನಗೆ ಈ ವಿಷಯವನ್ನು ಹೇಳಿದ್ದರು. ಆದುದರಿಂದ ಈ ವೃತ್ತಾಂತವು ಸತ್ಯವೆಂಬುದರಲ್ಲಿ ಸಂಶಯಲೇಶವೂ ಇಲ್ಲ. ನಿನ್ನ ಮೇಲೆ ನನಗೆ ಯಾವ ದ್ವೇಷವೂ ಇಲ್ಲ. ಈ ವಿಷಯವನ್ನು ನಾನು ನಿನಗೆ ಸತ್ಯವಾಗಿ ಹೇಳುತ್ತೇನೆ.



**ತೇಜೋವಧನಿಮಿತ್ತಂ ತು ಪರುಷಂ ತ್ವಾಹಮಬ್ರುವಮ್ ।**
**ಅಕಸ್ಮಾತ್ಪಾಂಡವಾನ್ಸರ್ವಾನವಾಕ್ಷಿಪಸಿ ಸುವ್ರತ ।**
**ಯೇನಾಸಿ ಬಹುಶೋ ರಾಜ್ಞಾ ಚೋದಿತಃ ಸೂತನನ್ದನ ॥೧೧॥**

ಸುವ್ರತನೇ! ಕೆಲವು ಸಮಯಗಳಲ್ಲಿ ನಾನು ನಿನ್ನ ವಿಷಯದಲ್ಲಿ ಕಠೋರವಾದ ಮಾತುಗಳನ್ನೇ ಆಡುತ್ತಿದ್ದುದು ನಿಜ. ನಿನ್ನ ಉತ್ಸಾಹವನ್ನೂ ಮತ್ತು ತೇಜಸ್ಸನ್ನೂ ಕುಗ್ಗಿಸಬೇಕೆಂಬುದೇ ಅದಕ್ಕೆ ಕಾರಣವಾಗಿದ್ದಿತು.

ಏಕೆಂದರೆ : ದುರ್ಯೋಧನನಿಂದ ಚೋದಿತನಾದ ನೀನು ನಿಷ್ಕಾರಣವಾಗಿ ಪಾಂಡವರೆಲ್ಲರನ್ನೂ ನಿಂದಿಸುತ್ತಿದ್ದೆಯಲ್ಲವೇ?

ಆದರೆ ನೀನು ಹೀಗೆ ಮಾಡಲೂ ಕಾರಣವಿಲ್ಲದೇ ಇರಲಿಲ್ಲ.

**ಜಾತೋಽಸಿ ಧರ್ಮಲೋಪೇನ ತತಸ್ತೇ ಬುದ್ಧಿರೀದೃಶೀ ॥೧೨॥**

**ನೀಚಾಶ್ರಯಾನ್ಮತ್ಸರೇಣ ದ್ವೇಷಿಣೀ ಗುಣಿನಾಮಪಿ ।**
**ತೇನಾಸಿ ಬಹುಶೋ ರೂಕ್ಷಂ ಶ್ರಾವಿತಃ ಕುರುಸಂಸದಿ ॥೧೩॥**

ಕರ್ಣ! ನೀನು ಧರ್ಮಲೋಪದಿಂದ ಹುಟ್ಟಿರುವೆ. (ಯಾವ ವಿಧವಾದ ಸಂಸ್ಕಾರವೂ ಇಲ್ಲದೇ ಕೇವಲ ಕನ್ಯೆಯಾಗಿದ್ದಾಗಲೇ ಕುಂತಿಯ ಗರ್ಭದಲ್ಲಿ ನೀನು ಜನಿಸಿದೆ) ಆ ಕಾರಣದಿಂದಲೇ ನಿನ್ನ ಬುದ್ಧಿಯು ಈ ರೀತಿಯಾಗಿರುವುದು. ಎರಡನೆಯದಾಗಿ :– ನೀಚಾಶ್ರಯದಲ್ಲಿ ನೀನು ಇರುವುದರಿಂದ ನಿನ್ನ ಬುದ್ಧಿಯು ಅಸೂಯಾಪರವಶವಾಗಿ ಗುಣಸಂಪನ್ನರಾದ ಪಾಂಡವರನ್ನೂ ದ್ವೇಷಿಸುವಂತಾಗಿದೆ. ಈ ಕಾರಣದಿಂದಲೇ ನಾನು ಕೌರವರ ಮಹಾಸಭೆಯಲ್ಲಿ ಕಠಿಣವಾದ ಮಾತುಗಳಿಂದ ನಿನ್ನನ್ನು ತೆಗಳುತ್ತಿದ್ದೆನು.

**ಜಾನಾಮಿ ಸಮರೇ ವೀರ್ಯಂ ಶತ್ರುಭಿರ್ದುಃಸಹಂ ಭುವಿ ।**
**ಬ್ರಹ್ಮಣ್ಯತಾಂ ಚ ಶೌರ್ಯಂ ಚ ದಾನೇ ಚ ಪರಮಾಂ ಸ್ಥಿತಿಮ್ ॥೧೪॥**

ನೀನು ಯುದ್ಧದಲ್ಲಿ ಮಹಾವೀರ್ಯವಂತನೆಂಬುದನ್ನೂ ನಿನ್ನನ್ನು ಎದುರಿಸಲು ಶತ್ರುಗಳಿಗೆ ಅಸಾಧ್ಯವೆಂಬುದನ್ನೂ ನಾನು ತಿಳಿದಿದ್ದೇನೆ. ನೀನು ಬ್ರಾಹ್ಮಣರ ಭಕ್ತನೆಂಬುದನ್ನೂ, ಮಹಾಶೌರ್ಯವಂತನೆಂಬುದನ್ನೂ, ದಾನ ಮಾಡುವುದರಲ್ಲಿ ಶ್ರೇಷ್ಠವಾದ ನಿಷ್ಠೆಯನ್ನು ಪಡೆದಿರುವೆಯೆಂಬುದನ್ನೂ ನಾನು ತಿಳಿದಿದ್ದೇನೆ.

**ನ ತ್ವಯಾ ಸದೃಶಃ ಕಶ್ಚಿತ್ಪುರುಷೇಷ್ವಮರೋಪಮ ।**
**ಕುಲಭೇದಭಯಾಚ್ಚಾಹಂ ಸದಾ ಪರುಷಮುಕ್ತವಾನ್ ॥೧೫॥**

ಅಮರೋಪಮನೇ! ನಿನ್ನ ಸದೃಶರಾದವರು ಮನುಷ್ಯರಲ್ಲೇ ಯಾರೂ ಇರುವುದಿಲ್ಲ. ಕುರುಕುಲದ ಭೇದವಾಗುವುದೆಂಬ (ಒಡೆದುಹೋಗುವುದೆಂಬ) ಭಯದಿಂದಲೂ ನಾನು ನಿನ್ನ ವಿಷಯದಲ್ಲಿ ಎಲ್ಲ ಸಮಯಗಳಲ್ಲಿಯೂ ಕಠಿಣವಾದ ಮಾತುಗಳನ್ನೇ ಆಡುತ್ತಿದ್ದೆನು.

**ಇಷ್ವಸ್ತ್ರೇ ಚಾಸ್ತ್ರಸಂಧಾನೇ ಲಾಘವೇಽಸ್ತ್ರಬಲೇ ತಥಾ ।**
**ಸದೃಶಃ ಫಾಲ್ಗುನೇನಾಸಿ ಕೃಷ್ಣೇನ ಚ ಮಹಾತ್ಮನಾ ॥೧೬॥**

ಬಾಣಗಳ ಬಿಡುವಿಕೆಯಲ್ಲಿ, ದಿವ್ಯಾಸ್ತ್ರಗಳ ಅನುಸಂಧಾನದಲ್ಲಿ, ವೇಗದಲ್ಲಿ (ಕೈಚಳಕದಲ್ಲಿ) ಮತ್ತು ಅಸ್ತ್ರಬಲದಲ್ಲಿ ನೀನು ಅರ್ಜುನನಿಗೂ ಮತ್ತು ಮಹಾತ್ಮನಾದ ಶ್ರೀಕೃಷ್ಣನಿಗೂ ಸಮನಾಗಿರುವೆ.

ದುರ್ಯೋಧನನಿಗೆ ಕನ್ಯಾರ್ಥವಾಗಿ ನೀನೊಬ್ಬನೇ ಕಾಶೀಪುರಕ್ಕೆ ಹೋದೆ. ಧನುಷ್ಮಂತನಾದ ನಿನ್ನೊಬ್ಬನಿಂದಲೇ ಅಲ್ಲಿ ನಿನ್ನನ್ನೆದುರಿಸಿದ ರಾಜರೆಲ್ಲರೂ ಪರಾಜಿತರಾದರು. ಸಮರಶ್ಲಾಘಿಯೇ! ಬಲಿಷ್ಠನಾದ, ದುರಾಸದನಾದ ಜರಾಸಂಧನೂ ಸಹ ಯುದ್ಧದಲ್ಲಿ ನಿನಗೆ ಸಮಾನನಾಗಲಿಲ್ಲ.

**ಬ್ರಹ್ಮಣ್ಯಃ ಸತ್ತ್ವಯೋಧೀ ಚ ತೇಜಸಾ ಚ ಬಲೇನ ಚ ।**
**ದೇವಗರ್ಭಸಮಃ ಸಂಖ್ಯೇ ಮನುಷ್ಯೈರಧಿಕೋ ಯುಧಿ ॥೧೯॥**

ನೀನು ಬ್ರಾಹ್ಮಣಪ್ರಿಯನು. ಸತ್ತ್ವದಿಂದ ಯುದ್ಧಮಾಡುವವನು. ತೇಜಸ್ಸಿನಿಂದಲೂ, ಬಲದಿಂದಲೂ ಸಂಪನ್ನನಾದವನು. ಯುದ್ಧದಲ್ಲಿ ದೇವಕುಮಾರರಿಗೆ ಸಮಾನನಾಗಿರತಕ್ಕವನು. ಮನುಷ್ಯರಲ್ಲಿ ಎಲ್ಲರಿಗಿಂತಲೂ ಅಧಿಕನಾಗಿರತಕ್ಕವನು.

**ವ್ಯಪನೀತೋಽದ್ಯ ಮನ್ಯುರ್ಮೇ ಯಸ್ತ್ವಾಂ ಪ್ರತಿ ಪುರಾ ಕೃತಃ ।**
**ದೈವಂ ಪುರುಷಕಾರೇಣ ನ ಶಕ್ಯಮತಿವರ್ತಿತುಮ್ ॥೨೦॥**

ನಿನ್ನ ಮೇಲೆ ಹಿಂದಿನಿಂದಲೂ ಇದ್ದ ನನ್ನ ಕೋಪವು ಈಗ ಹೊರಟು ಹೋಯಿತು. ಈಗ ನಿನ್ನ ಮೇಲೆ ನನಗೆ ಕಿಂಚಿತ್ತಾದರೂ ಕೋಪವಿಲ್ಲ. ಪುರುಷಪ್ರಯತ್ನದಿಂದ ದೈವದ ನಿಯಮವನ್ನು ಬದಲಾಯಿಸಲು ಸಾಧ್ಯವಾಗುವುದಿಲ್ಲ.

**ಸೋದರ್ಯಾಃ ಪಾಣ್ಡವಾ ವೀರಾ ಭ್ರಾತರಸ್ತೇಽರಿಸೂದನ ।**
**ಸಂಗಚ್ಛ ತೈರ್ಮಹಾಬಾಹೋ ಮಮ ಚೇದಿಚ್ಛಸಿ ಪ್ರಿಯಮ್ ॥೨೧॥**

ಅರಿಸೂದನನೇ! ವೀರರಾದ ಪಾಂಡವರೂ ಮತ್ತು ನೀನೂ ಒಂದೇ ಹೊಟ್ಟೆಯಲ್ಲಿ ಹುಟ್ಟಿದವರಾಗಿರುತ್ತೀರಿ. ಆದುದರಿಂದ ಅವರು ನಿನ್ನ ಅನುಜ

ರಾಗಿದ್ದಾರೆ. ಈ ಸಮಯದಲ್ಲಿ ನನಗೇನಾದರೂ ಪ್ರಿಯವಾದ ಕಾರ್ಯವನ್ನು ಮಾಡಿಕೊಡುವ ಇಚ್ಛೆಯುಳ್ಳವನಾಗಿದ್ದರೆ ನೀನು ಅವರೊಡನೆ ಸೇರಿಕೊ.

**ಮಯಾ ಭವತು ನಿರ್ವೃತ್ತಂ ವೈರಮಾದಿತ್ಯನನ್ದನ ।**
**ಪೃಥಿವ್ಯಾಂ ಸರ್ವರಾಜಾನೋ ಭವನ್ತ್ವದ್ಯ ನಿರಾಮಯಾಃ ॥೨೨॥**

ಸೂರ್ಯಪುತ್ರನೇ! ನನ್ನ ಅವಸಾನದೊಡನೆಯೇ ಈ ದ್ವೇಷವೂ ಅವಸಾನ ಹೊಂದಲಿ. ಇದರಿಂದಾಗಿ ಪೃಥಿವಿಯಲ್ಲಿರುವ ಎಲ್ಲ ರಾಜರೂ ದುಃಖ-ಶೋಕಗಳಿಂದ ರಹಿತರಾಗಲಿ."

"ಮಹಾಬಾಹುವೇ! ಭೀಷ್ಮ! ನೀನು ಹೇಳಿದ ವಿಷಯಗಳೆಲ್ಲವನ್ನೂ ನಾನೂ ತಿಳಿದಿರುತ್ತೇನೆ. ನೀನು ಹೇಳಿದ ವಿಷಯಗಳೆಲ್ಲವೂ ಸತ್ಯವಾಗಿಯೇ ಇವೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ನೀನು ಹೇಳಿದಂತೆ ನಾನು ಕೌಂತೇಯನೇ ಹೊರತು ಸೂತಜನಲ್ಲ.

ಆದರೆ, ಭೀಷ್ಮ! ಕುಂತಿಯು ನನ್ನನ್ನು ನೀರಿಗೆ ಬಿಸುಟಳು. ಅಧಿರಥನು ನನ್ನನ್ನು ಪ್ರೀತಿಯಿಂದ ಸಾಕಿ-ಸಲಹಿದನು. ಈ ಘಳಿಗೆಯವರೆಗೂ ದುರ್ಯೋಧನನ ಐಶ್ವರ್ಯವನ್ನು ನಾನು ಉಪಭೋಗಿಸಿ ಈಗ ನಾನದನ್ನು ನಿಷ್ಫಲಗೊಳಿಸಲು ಸಿದ್ಧನಾಗಿಲ್ಲ.

**ವಸುದೇವಸುತೋ ಯದ್ವತ್ಪಾಣ್ಡವಾಯ ದೃಢವ್ರತಃ ।**
**ವಸು ಚೈವ ಶರೀರಂ ಚ ಪುತ್ರದಾರಂ ತಥಾ ಯಶಃ ॥೨೫॥**

**ಸರ್ವಂ ದುರ್ಯೋಧನಸ್ಯಾರ್ಥೇ ತ್ಯಕ್ತಂ ಮೇ ಭೂರಿದಕ್ಷಿಣ ।**
**ಮಾ ಚೈತದ್ವ್ಯಾಧಿಮರಣಂ ಕ್ಷತ್ರಂ ಸ್ಯಾದಿತಿ ಕೌರವ ।**
**ಕೋಪಿತಾಃ ಪಾಣ್ಡವಾ ನಿತ್ಯಂ ಸಮಾಶ್ರಿತ್ಯ ಸುಯೋಧನಮ್ ॥೨೬॥**

ಯಾವ ರೀತಿಯಲ್ಲಿ ವಸುದೇವನ ಮಗನಾದ ಶ್ರೀಕೃಷ್ಣನು ಪಾಂಡು ಪುತ್ರನಾದ ಅರ್ಜುನನ ಹಿತರಕ್ಷಣೆಯಲ್ಲಿ ದೃಢವ್ರತನಾಗಿರುವನೋ–ಅದೇ ರೀತಿಯಲ್ಲಿ ನನ್ನ ಐಶ್ವರ್ಯ, ಶರೀರ, ಮಕ್ಕಳು, ಹೆಂಡತಿ ಮತ್ತು ಯಶಸ್ಸು ಮತ್ತು ನನ್ನ ಎಲ್ಲ ಸರ್ವಸ್ವವೂ ದುರ್ಯೋಧನನಿಗಾಗಿ ಮೀಸಲಾಗಿದೆ. ಯಜ್ಞ ಗಳಲ್ಲಿ ಪ್ರಚುರವಾದ ದಕ್ಷಿಣೆಯನ್ನು ಕೊಡತಕ್ಕವನೇ! ನಾನು ಪಾಂಡವರನ್ನು

ತೆಗಳುತ್ತಿದ್ದುದಕ್ಕೆ ಕಾರಣವಿಲ್ಲದಿಲ್ಲ. ಕ್ಷತ್ರಿಯರಿಗೆ ರೋಗದಿಂದ ಮರಣವಾಗ ಬಾರದೆಂಬುದಾಗಿ (ಯುದ್ಧದಲ್ಲಿ ಮರಣಹೊಂದಿ ಅವರು ಬ್ರಹ್ಮಲೋಕವನ್ನು ಪಡೆಯುವಂತಾಗಬೇಕೆಂದು) ಇಚ್ಛಿಸಿ ಆ ಕಾರಣದಿಂದಲೇ ದುರ್ಯೋಧನ ನನ್ನಾಶ್ರಯಿಸಿ ಪಾಂಡವರನ್ನು ನಿತ್ಯವೂ ಕೆರಳಿಸುತ್ತಿದ್ದನು.

**ಅವಶ್ಯಭಾವೀ ಹ್ಯರ್ಥೋऽಯಂ ಯೋ ನ ಶಕ್ಯೋ ನಿವರ್ತಿತುಮ್ ।**
**ದೈವಂ ಪುರುಷಕಾರೇಣ ಕೋ ನಿವರ್ತಿತುಮುತ್ಸಹೇತ್ ॥೨೭॥**

ಪಿತಾಮಹ! ಈ ಯುದ್ಧವು ಅವಶ್ಯವಾಗಿ ನಡೆಯತಕ್ಕದ್ದೇ ಆಗಿದೆ. ಆದುದರಿಂದ ಇದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ. ದೈವನಿಯಮ ವನ್ನು ಪುರುಷಪ್ರಯತ್ನದಿಂದ ಬದಲಾಯಿಸಲು ಯಾರು ತಾನೇ ಉತ್ಸುಕ ರಾಗಿರುತ್ತಾರೆ?

ಪಿತಾಮಹ! ಭೂಮಿಯ ಕ್ಷಯವನ್ನು ಸೂಚಿಸುವ ನಿಮಿತ್ತಗಳನ್ನು ನೀವೆಲ್ಲರೂ ನೋಡಿದಿರಿ. ಕೌರವರ ಸಭೆಯಲ್ಲಿಯೂ ಅದನ್ನೇ ಹೇಳಿದಿರಿ. (ಆದರೂ ಪ್ರಯೋಜನವೇನಾಯಿತು? ದೈವನಿಯಮದಂತೆ ನಡೆಯಬೇಕಾ ದುದು ನಡೆಯುತ್ತಲೇ ಇದೆಯಲ್ಲವೇ? )

**ಪಾಣ್ಡವಾ ವಾಸುದೇವಶ್ಚ ವಿದಿತಾ ಮಮ ಸರ್ವಶಃ ।**
**ಅಜೇಯಾಃ ಪುರುಷೈರನ್ಯೈರಿತಿ ತಾಂಶ್ಚೋತ್ಸಹಾಮಹೇ ।**
**ವಿಜಯಿಷ್ಯೇ ರಣೇ ಪಾಣ್ಡೂನಿತಿ ಮೇ ನಿಶ್ಚಿತಂ ಮನಃ ॥೩೦॥**

ಪಾಂಡವರನ್ನೂ, ವಾಸುದೇವನನ್ನೂ ನಾನು ಚೆನ್ನಾಗಿ ತಿಳಿದುಕೊಂಡಿ ದ್ದೇನೆ. ಅವರು ಬೇರೆಯವರಿಂದ ಅಜೇಯರೆಂಬುದನ್ನೂ ತಿಳಿದಿದ್ದೇನೆ. ಆದರೂ ಸಹ ಅವರೊಡನೆ ಯುದ್ಧಮಾಡಲು ನಾನು ಉತ್ಸಾಹದಿಂದಲೇ ಇದ್ದೇನೆ. 'ಯುದ್ಧದಲ್ಲಿ ನಾನು ಪಾಂಡವರನ್ನು ಜಯಿಸುತ್ತೇನೆ' ಎಂಬುದು ನನ್ನ ಮನಸ್ಸಿನ ದೃಢನಿಶ್ಚಯವಾಗಿದೆ.

ನಮಗೂ-ಪಾಂಡವರಿಗೂ ಉಂಟಾಗಿರುವ ಸುದಾರುಣವಾದ ವೈರ ವನ್ನು ಬಿಟ್ಟುಬಿಡಲು ಖಂಡಿತವಾಗಿಯೂ ಸಾಧ್ಯವಾಗುವುದೇ ಇಲ್ಲ. ಸ್ವಧರ್ಮಾನುಸಾರವಾಗಿ, ಪ್ರಸನ್ನಚಿತ್ತನಾಗಿ ನಾನು ಧನಂಜಯನೊಡನೆ ಯುದ್ಧಮಾಡುತ್ತೇನೆ.

**ಅನುಜಾನೀಷ್ವ ಮಾಂ ತಾತ ಯುದ್ಧಾಯ ಕೃತನಿಶ್ಚಯಮ್ ।**
**ಅನುಜ್ಞಾತಸ್ತ್ವಯಾ ವೀರ ಯುಧ್ಯೇಯಮಿತಿ ಮೇ ಮತಿಃ ॥೩೨॥**

ಪಿತಾಮಹ! ಧನಂಜಯನೊಡನೆ ಯುದ್ಧವನ್ನು ಮಾಡಿಯೇ ತೀರ ಬೇಕೆಂದು ನಿಶ್ಚಯಿಸಿರುವ ನನಗೆ ಯುದ್ಧಮಾಡಲು ಅನುಮತಿಯನ್ನು ದಯಪಾಲಿಸು. ಯುದ್ಧಕ್ಕೆ ನಿನ್ನ ಅನುಜ್ಞೆಯನ್ನು ಪಡೆದುಕೊಂಡೆನಾದರೆ ನಾನು ಯಶಸ್ವಿಯಾಗಿ ಯುದ್ಧಮಾಡಬಲ್ಲೆನೆಂಬುದು ನನ್ನ ಅಭಿಮತವಾಗಿದೆ.

**ದುರುಕ್ತಂ ವಿಪ್ರತೀಪಂ ವಾ ರಭಸಾಚ್ಚಾಪಲಾತ್ತಥಾ ।**
**ಯನ್ಮಯೇಹ ಕೃತಂ ಕಿಂಚಿತ್ತನ್ಮೇ ತ್ವಂ ಕ್ಷನ್ತುಮರ್ಹಸಿ ॥೩೩॥**

ಕ್ರೋಧದ ಆವೇಗದಿಂದ ಅಥವಾ ಚಪಲತೆಯಿಂದ ನಿನ್ನ ವಿಷಯದಲ್ಲಿ ದುರುಕ್ತಿಯನ್ನು ಹೇಳಿದ್ದರೆ ಮತ್ತು ನಿನಗೆ ವಿರೋಧವಾಗಿ ವರ್ತಿಸಿದ್ದರೆ–ಅವುಗಳೆಲ್ಲವನ್ನೂ ನೀನು ಕ್ಷಮಿಸುವ ಕೃಪೆಮಾಡು.”

“ಕರ್ಣ! ಸುದಾರುಣವಾದ ಈ ವೈರವನ್ನು ಬಿಡಲು ಸಾಧ್ಯವಾಗದೆಯೇ ಹೋದರೆ ನಿನಗೆ ಯುದ್ಧಮಾಡಲು ಅನುಮತಿಯನ್ನು ಕೊಡುತ್ತೇನೆ. ಸ್ವರ್ಗಕಾಮನಾಗಿ ಯುದ್ಧಮಾಡು. ಕೋಪವಿಲ್ಲದವನಾಗಿ, ಹೆಚ್ಚಿನ ಸಡಗರವಿಲ್ಲದವನಾಗಿ, ಸತ್ಪುರುಷರ ಆಚಾರವನ್ನಿಟ್ಟುಕೊಂಡು ಯಥಾಶಕ್ತಿ ಉತ್ಸಾಹವಿದ್ದಷ್ಟು ನಿನ್ನ ಕರ್ತವ್ಯವನ್ನು ಮಾಡು (ಯುದ್ಧಮಾಡು). ನಾನು ನಿನಗೆ ಅನುಜ್ಞೆ ನೀಡಿದ್ದೇನೆ. ನೀನು ಯಾವುದನ್ನು ಅಭಿಲಾಷಿಸಿದೆಯೋ ಅದನ್ನೇ ನೀನು ಹೊಂದುವವನಾಗು. ನೀನು ಯುದ್ಧಮಾಡಲು ಇಚ್ಛಿಸಿರುವೆ. ನೀನು ಯುದ್ಧಮಾಡಬಹುದು. ಅದಕ್ಕೆ ನಾನು ನನ್ನ ಅನುಮತಿಯನ್ನು ಕೊಟ್ಟಿದ್ದೇನೆ. ಕ್ಷತ್ರಧರ್ಮದಿಂದ ಜಯಿಸಲ್ಪಡತಕ್ಕ ಪುಣ್ಯಲೋಕಗಳನ್ನು ಧನಂಜಯನ ಮೂಲಕ ಪಡೆಯುವೆ.

**ಯುಧ್ಯಸ್ವ ನಿರಹಙ್ಕಾರೋ ಬಲವೀರ್ಯವ್ಯಪಾಶ್ರಯಃ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ಕ್ಷತ್ರಿಯಸ್ಯ ನ ವಿದ್ಯತೇ ॥೩೪॥**

ಬಲ ಮತ್ತು ವೀರ್ಯಗಳನ್ನಾಶ್ರಯಿಸಿ ನಿರಹಂಕಾರನಾಗಿ ಯುದ್ಧ ಮಾಡು. ಕ್ಷತ್ರಿಯನಾದವನಿಗೆ ಧರ್ಮಯುದ್ಧಕ್ಕಿಂತಲೂ ಶ್ರೇಯಸ್ಕರವಾದುದು ಮತ್ತೊಂದಿಲ್ಲ.

ಕರ್ಣ! ನಾನು ಎರಡು ಪಕ್ಷಗಳ ನಡುವೆ ಶಾಂತಿಯನ್ನು ಸ್ಥಾಪಿಸಲು ಬಹಳ ಕಾಲ ಹೆಚ್ಚು ಪ್ರಯತ್ನಮಾಡಿದೆನು. ಆದರೆ ಅದರಲ್ಲಿ ನಾನು ಕೃತ ಕೃತ್ಯನಾಗಲಿಲ್ಲ. ಈ ಮಾತು ಸತ್ಯ."

ಮಹಾರಾಜ! ಗಾಂಗೇಯನು ಇಷ್ಟು ಹೇಳಿದನಂತರ ರಾಧೇಯನು ಭೀಷ್ಮನಿಗೆ ಅಭಿವಾದನಮಾಡಿ ಅವನ ಅನುಮತಿಯನ್ನು ಪಡೆದು ರಥವನ್ನು ಹತ್ತಿ ನಿನ್ನ ಮಗನ ಬಳಿಗೆ ಹೊರಟುಹೋದನು.

೧೨೨ನೆಯ ಅಧ್ಯಾಯವು ಮುಗಿಯಿತು.

## ಭೀಷ್ಮಪರ್ವವು ಮುಗಿಯಿತು

---

## ಹತ್ತನೆಯ ದಿವಸದ ಯುದ್ಧದ ವಿಶ್ಲೇಷಣೆ

ಹತ್ತನೆಯ ದಿವಸದ ಯುದ್ಧದಲ್ಲಿ ಸರ್ವಶತ್ರುನಿಬರ್ಹಣವಾದ ವ್ಯೂಹ ವನ್ನು ಪಾಂಡವರು ರಚಿಸಿಕೊಂಡರೆಂದಿದೆ. ವ್ಯೂಹದ ಹೆಸರಿಲ್ಲ. ಅಂದು ಕೌರವರು ಇಂತಹುದೇ ವ್ಯೂಹವನ್ನು ರಚಿಸಿದರೆಂಬ ವಿಷಯವಿಲ್ಲದಿದ್ದರೂ ಭೀಷ್ಮನು ಪ್ರತಿನಿತ್ಯವೂ ಆಸುರ, ಪೈಶಾಚ ಮತ್ತು ರಾಕ್ಷಸವ್ಯೂಹಗಳನ್ನು ರಚಿಸುತ್ತಿದ್ದನೆಂಬ ವಾಕ್ಯವಿದೆ. (೧೦೮-೧೬) ಅಂದಿನ ಯುದ್ಧದಲ್ಲಿ ಮೊದಲು ಮೊದಲು ಪಾಂಡವರದೇ ಮೇಲುಗೈ ಆಗಿ ಕಾಣುತ್ತದೆ. ಅನಂತರ ಭೀಷ್ಮನ ಪರಾಕ್ರಮದ ವರ್ಣನೆಯಿದೆ. ಪಾಂಡವರ ಅಂದಿನ ವ್ಯೂಹಕ್ಕೆ ಶಿಖಂಡಿಯೇ ಅಗ್ರಭಾಗದಲ್ಲಿದ್ದು ಭೀಷ್ಮನನ್ನು ಅನೇಕಬಾಣಗಳಿಂದ ಪ್ರಹರಿಸುತ್ತಾನೆ. ಆದರೆ ಶಿಖಂಡಿಯ ಮೇಲೆ ಭೀಷ್ಮನು ಬಾಣಪ್ರಯೋಗಮಾಡುವುದಿಲ್ಲ. 'ನೀನು ಎಷ್ಟೇ ಪ್ರಹರಿಸಿದರೂ ಹೆಣ್ಣಾಗಿ ಹುಟ್ಟಿರುವ ನಿನ್ನ ಮೇಲೆ ಬಾಣಪ್ರಯೋಗವನ್ನು ಮಾಡುವುದಿಲ್ಲವೆಂದೇ'–ಭೀಷ್ಮನು ಅವನೊಡನೆ ಹೇಳುತ್ತಾನೆ. ಅರ್ಜುನನೂ ಸಹ ಆ ಸಮಯದಲ್ಲಿ ಶಿಖಂಡಿಗೆ ಭೀಷ್ಮನನ್ನು ಸಂಹರಿಸುವಂತೆ ಪ್ರೋತ್ಸಾಹಿಸುತ್ತಾನೆ. ಇಲ್ಲಿಗೆ ೧೦೮ನೆಯ ಅಧ್ಯಾಯವು ಮುಗಿಯುತ್ತದೆ. ಮುಂದಿನ ಅಧ್ಯಾಯವು ಭೀಷ್ಮನ ಪರಾಕ್ರಮದ ವರ್ಣನೆ ಯಿಂದ ಪ್ರಾರಂಭವಾದರೂ ಅರ್ಜುನನ ಪರಾಕ್ರಮದ ವರ್ಣನೆಯೇ ಇಲ್ಲಿ ಹೆಚ್ಚಾಗಿ ಬರುತ್ತದೆ. ಇಲ್ಲಿ ದುರ್ಯೋಧನನು ತನ್ನ ದುಃಖವನ್ನು ಪುನಃ

ಭೀಷ್ಮನೊಡನೆ ತೊಡಗಿಕೊಳ್ಳುತ್ತಾನೆ. ಮನನೊಂದ ಭೀಷ್ಮನು ಇಲ್ಲಿ **'ಭರ್ತೃಪಿಂಡಕೃತಂ ತವ ಋಣಂ ಪ್ರತಿಮೋಕ್ಷ್ಯೇ**–ಸ್ವಾಮಿಯ ಪಿಂಡವನ್ನು (ಅನ್ನವನ್ನು) ತಿಂದ ನಿನ್ನ ಋಣವನ್ನು ತೀರಿಸುತ್ತೇನೆ' ಎಂಬ ಒಂದು ಮಾತನ್ನು ಹೇಳುತ್ತಾನೆ. ಮುಂದೆ ದೊಡ್ಡ ಹತ್ಯಾಕಾಂಡವನ್ನೇ ಭೀಷ್ಮನು ನಡೆಸುತ್ತಾನೆ. ಇಲ್ಲಿಗೆ ೧೦೯ನೆಯ ಅಧ್ಯಾಯವು ಮುಗಿಯುತ್ತದೆ. ಭೀಷ್ಮನ ರಭಸವನ್ನು ನೋಡಿ ಅರ್ಜುನನು ಭೀಷ್ಮನನ್ನು ಸಂಹರಿಸುವಂತೆ ಶಿಖಂಡಿಯನ್ನು ಪುನಃ ಪ್ರೋತ್ಸಾಹಿಸುತ್ತಾನೆ. ಮುಂದೆ ಪಾಂಡವಯೋಧರಿಗೂ–ಕೌರವಯೋಧರಿಗೂ ದ್ವಂದ್ವಯುದ್ಧವು ಪ್ರಾರಂಭವಾಗುತ್ತದೆ. ಅದರಲ್ಲಿ ದುಃಶಾಸನನು ಪಾರ್ಥನೊಡನೆ ಯುದ್ಧಮಾಡುತ್ತಾನೆ. ದುಃಶಾಸನನ ಯುದ್ಧದ ವರ್ಣನೆಯಿದೆ. ಒಮ್ಮೆ ಮೂರ್ಛಿತನಾದರೂ ಪುನಃ ಎಚ್ಚೆತ್ತು ಪಾರ್ಥನೊಡನೆ ಯುದ್ಧಕ್ಕೆ ತೊಡಗುತ್ತಾನೆ. ಇಲ್ಲಿಗೆ ೧೧೦ನೆಯ ಅಧ್ಯಾಯವು ಮುಗಿಯುತ್ತದೆ. ೧೧೧ನೆಯ ಅಧ್ಯಾಯದಲ್ಲಿಯೂ ದ್ವಂದ್ವಯುದ್ಧದ ವರ್ಣನೆಯೇ ಇದೆ. ಭೀಷ್ಮನನ್ನೇ ನೇರವಾಗಿ ಎದುರಿಸಬೇಕೆಂಬುದು ಪಾಂಡವರ ಇಚ್ಛೆ. ಅಂದು ಹೇಗಾದರೂ ಮಾಡಿ ಭೀಷ್ಮನನ್ನು ರಕ್ಷಿಸಬೇಕೆಂಬುದು ಕೌರವರ ಅಭಿಲಾಷೆ. ಅದರಂತೆ ಭೀಷ್ಮನ ಸಮೀಪಕ್ಕೆ ಹೋಗಲಿದ್ದ ಪಾಂಡವಯೋಧರೆಲ್ಲರನ್ನೂ ತಡೆದು ಕೌರವರು ಯುದ್ಧಮಾಡುತ್ತಾರೆ. ೧೧೨ನೆಯ ಅಧ್ಯಾಯದಲ್ಲಿ ದ್ರೋಣರು ತಮ್ಮ ಮಗನೊಡನೆ ಮಾತನಾಡುತ್ತಾ ಅಶುಭಸೂಚಕಗಳನ್ನು ವರ್ಣಿಸುತ್ತಾರೆ. ಯುದ್ಧಕ್ಕೆ ಕಾರಣನಾದ ದುರ್ಯೋಧನನನ್ನು ತೆಗಳುತ್ತಾರೆ. ಪಾಂಡವರನ್ನು ಹೊಗಳುತ್ತಾರೆ. ಆದರೂ ಸಹ ಭೀಷ್ಮನನ್ನು ರಕ್ಷಿಸಲು ಧೃಷ್ಟದ್ಯುಮ್ನನೊಡನೆ ಯುದ್ಧಮಾಡುವಂತೆ ಮಗನಿಗೆ ಹೇಳುತ್ತಾರೆ. ತಾವು ಯುಧಿಷ್ಠಿರನನ್ನು ಎದುರಿಸುವುದಾಗಿ ಹೇಳುತ್ತಾರೆ. ಅಲ್ಲಲ್ಲಿ ನಡೆಯುತ್ತಿದ್ದ ಯುದ್ಧದ ಸಂಗತಿಗಳನ್ನು ಇವರ ಮುಖದಿಂದಲೂ ನಾವು ಕೇಳುತ್ತೇವೆ. ಇಲ್ಲಿಗೆ ೧೧೨ನೆಯ ಅಧ್ಯಾಯವು ಮುಗಿಯುತ್ತದೆ. ಮುಂದಿನ ಅಧ್ಯಾಯದಲ್ಲಿ ಭೀಮನ ಪರಾಕ್ರಮದ ವರ್ಣನೆಯಿದೆ. ಹತ್ತು ಮಹಾಯೋಧರನ್ನು ಒಬ್ಬನೇ ಎದುರಿಸಿ ಯುದ್ಧಮಾಡುತ್ತಾನೆ. ಕಡೆಗೆ ಅರ್ಜುನನೂ ಭೀಮನ ಸಹಾಯಕ್ಕೆ ಬರು

ತ್ತಾನೆ. ಭೀಮಾರ್ಜುನರಿಬ್ಬರೂ ಶಿಖಂಡಿಯನ್ನು ಮುಂದೆಮಾಡಿಕೊಂಡು ಭೀಷ್ಮನೊಡನೆ ಯುದ್ಧಕ್ಕೆ ಹೋಗುತ್ತಾರೆ.

ಅನಂತರ ದುರ್ಯೋಧನನ ಆಜ್ಞೆಯಂತೆ ತ್ರಿಗರ್ತರಾಜನು ಭೀಮಾರ್ಜುನರನ್ನು ತಡೆಯುತ್ತಾನೆ. ಇಲ್ಲಿಗೆ ೧೧೩ನೆಯ ಅಧ್ಯಾಯವು ಮುಗಿಯುತ್ತದೆ. ಮುಂದಿನ ಅಧ್ಯಾಯದಲ್ಲಿ ಭೀಮಾರ್ಜುನರ ಪರಾಕ್ರಮದ ವರ್ಣನೆಯಿದೆ. ಕಡೆಯಲ್ಲಿ ಯುಧಿಷ್ಠಿರಪ್ರಮುಖರಾದ ಪಾಂಡವಯೋಧರು ಶಿಖಂಡಿಯನ್ನು ಮುಂದೆಮಾಡಿಕೊಂಡು ಭೀಷ್ಮನೊಡನೆ ಯುದ್ಧಕ್ಕೆ ಹೋಗುತ್ತಾರೆ. ಇಲ್ಲಿಗೆ ೧೧೪ನೆಯ ಅಧ್ಯಾಯವು ಮುಗಿಯುತ್ತದೆ. ೧೧೫ನೆಯ ಅಧ್ಯಾಯದಲ್ಲಿ ಒಂದು ವಿಶೇಷವಿದೆ. ತನ್ನನ್ನು ಸಂಹರಿಸುವಂತೆ ಭೀಷ್ಮನೇ ಯುಧಿಷ್ಠಿರನಿಗೆ ಮತ್ತೊಮ್ಮೆ ಹೇಳುತ್ತಾನೆ. ಇಲ್ಲಿ ಗಮನಿಸಬೇಕಾದ ಒಂದಂಶವೆಂದರೆ ಭೀಷ್ಮನು ತನ್ನ ಜೀವಿತದ ವಿಷಯವಾಗಿ ಬೇಸತ್ತು ಯುಧಿಷ್ಠಿರನಿಗೆ ವಧೆಮಾಡಲು ಹೇಳಿದರೂ ಸಹ ಅವನ ಯುದ್ಧದ ರಭಸವು ಸ್ವಲ್ಪವಾದರೂ ಕಡಿಮೆಯಾಗುವುದಿಲ್ಲ. ಈ ಅಧ್ಯಾಯವು ದ್ವಂದ್ವಯುದ್ಧದ ವರ್ಣನೆಯೊಡನೆ ಮುಗಿಯುತ್ತದೆ. ೧೧೬ನೆಯ ಅಧ್ಯಾಯದಲ್ಲಿ ಪುನಃ ದ್ವಂದ್ವಯುದ್ಧದ ವರ್ಣನೆಯಿದೆ. ಸಾಮಾನ್ಯವಾಗಿ ಹತ್ತನೆಯ ದಿವಸದ ಯುದ್ಧವನ್ನು ವರ್ಣಿಸುವ ಅಧ್ಯಾಯಗಳಲ್ಲಿ "ಭೀಷ್ಮನ ಕಾರಣದಿಂದ ಯುದ್ಧ ಮಾಡುತ್ತಿದ್ದರು"–ಎಂದೇ ವರ್ಣಿಸಿದ್ದಾರೆ. ಅದೇ ಅಧ್ಯಾಯದಲ್ಲಿ ಪುನಃ ಭೀಷ್ಮನು ಸೋಮಕರನ್ನೆಲ್ಲಾ ಸಂಹಾರಮಾಡಿದ ಪ್ರಕರಣವೂ ಬರುತ್ತದೆ. ಕಡೆಯಲ್ಲಿ ಭೀಷ್ಮನ ಪರಾಕ್ರಮದ ವರ್ಣನೆಯೇ ಸಂಪೂರ್ಣವಾಗಿದೆ. ಅವನು ವಿಷಣ್ಣನಾಗಿದ್ದನೆಂಬ ಕುರುಹೂ ಇಲ್ಲಿ ಕಾಣುವುದಿಲ್ಲ. ಶಿಖಂಡಿಯು ಬಾಣಗಳಿಂದ ಭೀಷ್ಮನನ್ನು ಪ್ರಹರಿಸುವುದರೊಡನೆ ೧೧೭ನೆಯ ಅಧ್ಯಾಯವು ಪ್ರಾರಂಭವಾಗುತ್ತದೆ. ಇಲ್ಲಿಯೂ ಸಹ ದುಃಶಾಸನನ ಪರಾಕ್ರಮವು ವಿಪುಲವಾಗಿ ವರ್ಣಿಸಲ್ಪಟ್ಟಿದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ವಿಷಯವೆಂದರೆ ಶಿಖಂಡಿಯು ಪ್ರಹರಿಸಿದ ಸರ್ಪವಿಷೋಪಮವಾದ ಅಶನಿಸಂಸ್ಪರ್ಶವುಳ್ಳ ಬಾಣಗಳು ಭೀಷ್ಮನಿಗೆ ಸುಖದಾಯಕಗಳಾಗಿತ್ತೆಂಬುದು. ಬಿಸಿಲಿನಿಂದ ಬಳಲಿದವನು ಜಲಧಾರೆಯನ್ನು ಪ್ರತೀಕ್ಷಿಸುವಂತೆ–ಭೀಷ್ಮನು ಶಿಖಂಡಿಯು ಬಿಟ್ಟ ಬಾಣಗಳನ್ನು ಪ್ರತಿಗ್ರಹಿಸಿದನು. (೧೧೭-೨೪) ಕಡೆಯಲ್ಲಿ ಅರ್ಜುನನ

ಪರಾಕ್ರಮದ ವಿಪುಲವರ್ಣನೆಯಿದೆ. ರಣರಂಗದ ಭೀಕರವಾದ ವರ್ಣನೆಯಿದೆ. ಭೀಷ್ಮನು ಕುಪಿತನಾಗಿ ಮಹಾಸ್ತ್ರವನ್ನು ಬಿಡಲು ಸಿದ್ಧನಾಗುತ್ತಾನೆ. ಆದರೆ ಶಿಖಂಡಿಯು ಎದುರಾಗಿ ಬರುತ್ತಲೇ ಉಪಸಂಹಾರಮಾಡುತ್ತಾನೆ. ೧೧೮ನೆಯ ಅಧ್ಯಾಯದಲ್ಲಿ ಭೀಷ್ಮನ ಅದ್ಭುತಪರಾಕ್ರಮದ ವರ್ಣನೆಯಿದೆ. ಅವನೊಬ್ಬನೇ ಅಂದು ಮಾಡಿದ ಸೇನಾಸಂಹಾರದ ಸಂಖ್ಯೆಯನ್ನು ಸಂಜಯನಿಲ್ಲಿ ಹೇಳಿದ್ದಾನೆ. ಐದು ಸಾವಿರ ರಥಿಗಳು, ಹದಿನಾಲ್ಕು ಸಾವಿರ ಪದಾತಿಗಳು, ಸಾವಿರ ಆನೆಗಳು, ಹತ್ತು ಸಾವಿರ ಕುದುರೆಗಳು ಮತ್ತು ಏಳು ಮಹಾರಥರನ್ನು ಸಂಹರಿಸಿದನೆಂದು ಹೇಳಿದ್ದಾನೆ. ಮಹಾರಥರ ನಾಮಧೇಯಗಳನ್ನು ಹೇಳಿಲ್ಲ. ಹತರಾದವರಲ್ಲಿ ಹೆಸರಾಂತ ಯೋಧನೆಂದರೆ ವಿರಾಟನ ತಮ್ಮನಾದ ಶತಾನೀಕ. ಭೀಷ್ಮನ ವಿಶಸನಕ್ರಿಯೆಯನ್ನು ಕಂಡು ಪುನಃ ಶ್ರೀಕೃಷ್ಣನು ಭೀಷ್ಮನನ್ನು ವಧೆಮಾಡುವಂತೆ ಅರ್ಜುನನನ್ನು ಪ್ರೋತ್ಸಾಹಿಸುತ್ತಾನೆ. ಹತ್ತನೆಯ ದಿವಸದ ಯುದ್ಧಸಮಯದಲ್ಲಿ ಒಮ್ಮೆಯೂ ಪಾರ್ಥನು ವಿಷಾದಯೋಗವನ್ನವಲಂಬಿಸುವುದಿಲ್ಲ. 'ಶಿಖಂಡಿಯನ್ನು ಮುಂದೆಮಾಡಿಕೊಂಡು ಭೀಷ್ಮನ ಮೇಲೆ ಯುದ್ಧಕ್ಕೆ ಹೋಗುತ್ತಾನೆ'–ಎಂಬುದರಿಂದಲೇ ಈ ಅಧ್ಯಾಯವು ಮುಗಿಯುತ್ತದೆ. ೧೧೯ನೆಯ ಅಧ್ಯಾಯದಲ್ಲಿ ಭೀಷ್ಮನನ್ನು ಪಾಂಡವರ ಕಡೆಯ ಯೋಧರೆಲ್ಲರೂ ಅನೇಕವಿಧವಾದ ಆಯುಧಗಳಿಂದ ಪ್ರಹರಿಸುತ್ತಾರೆ. ಇಲ್ಲೊಂದು ಆಯುಧಗಳ ಪಟ್ಟಿಯೇ ಇದೆ. ಈ ಸಂದರ್ಭದಲ್ಲಿ ಶಿಖಂಡಿಯನ್ನು ಮುಂದಿಟ್ಟುಕೊಂಡು ಭೀಷ್ಮನೊಡನೆ ಯುದ್ಧಮಾಡುತ್ತಿದ್ದ ಅರ್ಜುನನು ಅವನ ಧನುಸ್ಸನ್ನು ಕತ್ತರಿಸುತ್ತಾನೆ. ಭೀಷ್ಮನು ಪುನಃ ಧನುಸ್ಸನ್ನು ಹಿಡಿಯಲು ಅವಕಾಶವನ್ನೇ ಕೊಡುವುದಿಲ್ಲ. ಅವನು ಕೈಗೆತ್ತಿ ಕೊಂಡ ಧನುಸ್ಸುಗಳೆಲ್ಲವನ್ನೂ ಕತ್ತರಿಸಿಬಿಡುತ್ತಾನೆ. ಆ ಸಮಯದಲ್ಲಿ ಭೀಷ್ಮನು ಒಂದು ಉದ್ಗಾರ ಹಾಕುತ್ತಾನೆ : 'ಶ್ರೀಕೃಷ್ಣನ ರಕ್ಷಣೆಯು ಇವರಿಗಿಲ್ಲದಿದ್ದರೆ ಒಂದೇ ಧನುಸ್ಸಿನಿಂದ ಈ ಎಲ್ಲ ಪಾಂಡವರನ್ನೂ ಸಂಹರಿಸುತ್ತಿದ್ದೆನು.' (೧೧೯-೩೨) ಪುನಃ ಧನುಸ್ಸನ್ನು ಹಿಡಿಯಲು ಆಗದೇ ಇದ್ದ ಕಾರಣ–'ನಾನಿನ್ನು ಪಾಂಡವರೊಡನೆ ಯುದ್ಧವನ್ನು ಮಾಡುವುದಿಲ್ಲ'–ಎಂದು ನಿಶ್ಚಯಿಸಿಬಿಡುತ್ತಾನೆ.

ಭೀಷ್ಮನ ನಿಶ್ಚಯವನ್ನು ದೇವತೆಗಳೂ, ಋಷಿಗಳೂ, ಪ್ರಶಂಸಿಸುತ್ತಾರೆ. ಪುಷ್ಪವೃಷ್ಟಿಯಾಗುತ್ತದೆ.

ಭೀಷ್ಮನು ರಥದಿಂದ ಬೀಳುವನೆಂಬುದನ್ನು ತಿಳಿದು ದೇವತೆಗಳೂ ಸಡಗರಗೊಳ್ಳುತ್ತಾರೆ. ಇಲ್ಲಿಂದ ಮುಂದಿನ ಪ್ರಕರಣವು ಜಿಜ್ಞಾಸುಗಳಿಗೆ ಸ್ವಲ್ಪ ಸಮಸ್ಯೆಯಾಗಿ ಕಾಣುತ್ತದೆ. ಭೀಷ್ಮನು ತನ್ನ ಎಲ್ಲ ಧನುಸ್ಸುಗಳನ್ನೂ ಕಳೆದು ಕೊಳ್ಳುತ್ತಾನೆ. ಅವನ ಶಕ್ತ್ಯಾಯುಧವನ್ನು ಸಹ ಅರ್ಜುನನು ಕತ್ತರಿಸಿಬಿಡುತ್ತಾನೆ. 'ತಾನು ಪಾಂಡವರೊಡನೆ ಯುದ್ಧಮಾಡುವುದಿಲ್ಲ' (೧೧೯-೩೩) ಎಂದು ಹೇಳಿದನಂತರ ಭೀಷ್ಮನು ಪುನಃ ಧನುಸ್ಸನ್ನು ಹಿಡಿದುಕೊಂಡು ಯುದ್ಧಕ್ಕೆ ಸಿದ್ಧನಾದನೆಂಬ ವಾಕ್ಯವಿಲ್ಲ. ಆದರೆ ಇವನ ಮೇಲೆ ಸತತವಾಗಿ ಬಾಣಗಳು ಬೀಳುತ್ತಲೇ ಇರುತ್ತವೆ. ಆದರೆ ೪೮ನೆಯ ಶ್ಲೋಕದ ಪೂರ್ವಾರ್ಧದಲ್ಲಿ ಮತ್ತು ೪೯ನೆಯ ಶ್ಲೋಕದ ಪೂರ್ವಾರ್ಧದಲ್ಲಿ **ತಾನಪ್ಯಾಶು ಶರೈಃ ಭೀಷ್ಮಃ ಪ್ರವಿವ್ಯಾಧ । ನಿವಾರಯಾಮಾಸ ಶರೈಃ**–ತನಗೆ ಎದುರಾಗಿ ಬರುತ್ತಿದ್ದ ಬಾಣಗಳನ್ನು ಬಾಣಗಳಿಂದಲೇ ತಡೆದನು–ಎಂಬ ವಾಕ್ಯಗಳಿವೆ. ಪಾಂಡವರೊಡನೆ ಯುದ್ಧಮಾಡುವುದಿಲ್ಲ–ಎಂದು ಹೇಳಿದನಂತರ ಪುನಃ ಅವನು ಯಾವಾಗ ಧನುಸ್ಸನ್ನು ತೆಗೆದುಕೊಂಡನು–ಎಂಬುದಕ್ಕೆ ವಾಕ್ಯವಿಲ್ಲ. ಮತ್ತು ಎದುರಾಗಿ ಬರುತ್ತಿದ್ದ ಬಾಣಗಳನ್ನು ಬಾಣಗಳಿಂದ ತಡೆದನು ಎಂಬುವುದಕ್ಕೆ ಮೇಲೆ ಹೇಳಿರುವ ಎರಡು ವಾಕ್ಯಗಳಿವೆಯೇ ಹೊರತು ಪುನಃ ಭೀಷ್ಮನು ಶತ್ರುಗಳ ಮೇಲೆ ಬಾಣಪ್ರಯೋಗವನ್ನು ಮಾಡಿದನೆಂಬ ಶ್ಲೋಕ ಗಳಿಲ್ಲ. ಇದಾದನಂತರ ೪೯ನೆಯ ಶ್ಲೋಕದಿಂದ ಹಿಂದಿನ ಪ್ರಕರಣವೇ ಪುನರಾವರ್ತಿತವಾಗಿದೆ. ಅರ್ಜುನನು ಧನುಸ್ಸನ್ನು ಕತ್ತರಿಸಿದುದು ; ಧ್ವಜವನ್ನು ಕತ್ತರಿಸಿದುದು ; ಸಾರಥಿಯನ್ನು ಹತ್ತು ಬಾಣಗಳಿಂದ ಪ್ರಹರಿಸಿದುದು ; ಭೀಷ್ಮನು ಧನುಸ್ಸನ್ನು ತೆಗೆದುಕೊಂಡಂತೆಲ್ಲಾ ಕತ್ತರಿಸುತ್ತಲೇ ಇದ್ದುದು- ಎಲ್ಲವೂ ಯಥಾಶ್ರುತವಾಗಿಯೇ ಬರುತ್ತವೆ. ಇಲ್ಲಿ ಕಾಣುವ ಒಂದು ದೋಷವೆಂದರೆ ಅವನ ರಥಕ್ಕೆ ಎರಡು ಧ್ವಜಗಳಿದ್ದುವೆ? ಹಾಗಿಲ್ಲದಿದ್ದರೆ ಕತ್ತರಿಸಿದ ಧ್ವಜದ ಸ್ಥಳದಲ್ಲಿ ಮತ್ತೊಂದು ಧ್ವಜವನ್ನು ಇಟ್ಟ ಪ್ರಸ್ತಾಪವಿಲ್ಲದೇ ಇರುವುದರಿಂದ ಒಮ್ಮೆ ಕತ್ತರಿಸಿದ ಧ್ವಜವನ್ನು ಮತ್ತೆ ಕತ್ತರಿಸುವುದು ಹೇಗೆ?

ಎರಡನೆಯ ಸಲವೂ ಭೀಷ್ಮನು ಕೈಗೆತ್ತಿಕೊಂಡ ಧನುಸ್ಸುಗಳೆಲ್ಲವನ್ನೂ ಕಳೆದುಕೊಂಡಮೇಲೆ ಅರ್ಜುನನು ಬಾಣಗಳನ್ನು ಬಿಡುತ್ತಲೇ ಇರುತ್ತಾನೆ. ಈ ಮಧ್ಯದಲ್ಲಿ ಭೀಷ್ಮ-ದುಃಶಾಸನರ ಸಂಭಾಷಣೆಯಿದೆ. ಇಬ್ಬರೂ ಮಾತನಾಡು

ತ್ತಿರುವಾಗಲೇ ಅರ್ಜುನನು ಶಿಖಂಡಿಯನ್ನು ಮುಂದೆಮಾಡಿಕೊಂಡು ಪುನಃ ಬಾಣಗಳಿಂದ ಪ್ರಹರಿಸುತ್ತಾನೆ. ಅಷ್ಟು ಬಲವಾಗಿ ಪೆಟ್ಟುತಿಂದರೂ, ಭೀಷ್ಮನು ಪ್ರತಿಕ್ರಿಯೆಯನ್ನೇ ಮಾಡದೇ ದುಃಶಾಸನನೊಡನೆ ಮಾತನಾಡುತ್ತಲೇ ಇರುತ್ತಾನೆ. ಮಾತು ಮುಗಿದಮೇಲೆ ಹಿಂದಿನ ಪ್ರಕರಣದಂತೆಯೇ ಭೀಷ್ಮನು ಪುನಃ ಶಕ್ತ್ಯಾಯುಧವನ್ನು ಪ್ರಯೋಗಿಸುತ್ತಾನೆ. ಅದನ್ನೂ ಅರ್ಜುನನು ಕತ್ತರಿ ಸಿದನಂತರ ಕತ್ತಿ-ಗುರಾಣಿಗಳನ್ನು ಭೀಷ್ಮನು ತೆಗೆದುಕೊಳ್ಳುತ್ತಾನೆ. ಆ ಸಮಯದಲ್ಲಿ ಅರ್ಜುನನು ಗುರಾಣಿಯನ್ನೂ ಕತ್ತರಿಸಿಬಿಡುತ್ತಾನೆ. ಈ ಪ್ರಕರಣವು ಇಲ್ಲಿಗೆ ನಿಲ್ಲುತ್ತದೆ. ಇಲ್ಲಿ ಪುನಃ ಭೀಷ್ಮನು ಧನುಸ್ಸನ್ನು ತೆಗೆದು ಕೊಂಡನೆಂಬುದಕ್ಕೆ ವಾಕ್ಯವಿಲ್ಲ. ಯುಧಿಷ್ಠಿರನು ತನ್ನ ಅಪಾರಸೈನ್ಯದಿಂದ ಭೀಷ್ಮನನ್ನು ಆಕ್ರಮಿಸುತ್ತಾನೆ. ಇಲ್ಲಿ ಭೀಷ್ಮಾರ್ಜುನರಿಗೆ ಯುದ್ಧನಡೆದ ಪ್ರಕರಣವಿಲ್ಲದಿದ್ದರೂ ಅದರ ಪರಿಣಾಮದ ವರ್ಣನೆಯಿದೆ. ನಿರಾಯುಧ ನಾದ ಭೀಷ್ಮನನ್ನೇ ಪಾಂಡವರು ಆಕ್ರಮಿಸಿದರೇ?–ಎಂಬ ಸಂಶಯವೊಂದು ಇಲ್ಲಿ ಮೂಡುತ್ತದೆ. ಯುದ್ಧದ ವರ್ಣನೆಯಾಗುತ್ತಿರುವಾಗಲೇ ಭೀಷ್ಮನು ಕೆಳಕ್ಕೆ ಬಿದ್ದ ಪ್ರಕರಣವು ಬರುತ್ತದೆ. ಆ ಸಮಯದಲ್ಲಿ ಭೀಷ್ಮನು ಯಾರ ಬಾಣಗಳಿಗೆ ತುತ್ತಾಗಿ ಕೆಳಕ್ಕೆ ಬಿದ್ದನೆಂಬುದು ಸ್ಪಷ್ಟವಾಗಿಲ್ಲ.

ಭೀಷ್ಮನ ರಥದ ಸುತ್ತಲೂ ಪಾಂಡವಯೋಧರು ನಿಂತು **'ನಿಪಾತಯತ, ಗೃಹ್ಣೀತ, ಯುಧ್ಯಧ್ವಂ, ಅವಕೃನ್ತತ'** 'ಹೊಡೆಯಿರಿ, ಬಂಧಿಸಿರಿ,' ಮುಂತಾಗಿ ಕೂಗಿಕೊಳ್ಳುತ್ತಾರೆ. ಇದಾದೊಡನೆಯೇ ಭೀಷ್ಮನು ರಥದಿಂದ ಕೆಳಕ್ಕೆ ಬೀಳುವ ಪ್ರಕರಣವು ಬರುತ್ತದೆ. ಜಿಜ್ಞಾಸುಗಳಿಗೆ ಇದು ಸ್ವಲ್ಪ ಅಸಹಜವಾಗಿ ಕಾಣ ಬಹುದು. ಇದೇ ಪ್ರಕರಣದಲ್ಲಿ ಬರುವ ಒಂದು ವಿಷಯವನ್ನು ವಿದ್ವಾಂಸರೂ ಆಧಾರವನ್ನಾಗಿ ತೆಗೆದುಕೊಳ್ಳುವುದರಿಂದ ಈ ಪ್ರಕರಣವು ಸಹಜವೇ-ಅಸಹ ಜವೇ?-ಎಂದು ನಿರ್ಧರಿಸುವ ಇಚ್ಛೆಯಿಲ್ಲದಿದ್ದರೂ ಇಲ್ಲಿ ನಮಗೆ ಕಂಡಿರುವ ಒಂದು ವಿಷಯವನ್ನು ಪ್ರಸ್ತಾಪಿಸಿ ಈ ಪ್ರಕರಣವನ್ನು ಮುಗಿಸುತ್ತೇವೆ. ೪೭ ನೆಯ ಶ್ಲೋಕದವರೆಗೆ ಭೀಷ್ಮನು ಎಲ್ಲ ಧನುಸ್ಸುಗಳನ್ನೂ ಕಳೆದುಕೊಂಡರೂ, ಶಕ್ತ್ಯಾಯುಧವನ್ನೂ ಕಳೆದುಕೊಂಡರೂ, ಅನಂತರ ಪಾಂಡವರೊಡನೆ ಯುದ್ಧಮಾಡುವುದಿಲ್ಲವೆಂದು ನಿಶ್ಚಯಿಸಿದುದು ; ಅದಕ್ಕೆ ದೇವತೆಗಳು ಹರ್ಷವನ್ನು ಸೂಚಿಸಿದುದು ; ಮುಂದೆ ಭೀಷ್ಮನು ಯಾವ ಪ್ರತಿಕ್ರಿಯೆಯೂ

ಇಲ್ಲದೇ ಬಿಟ್ಟ ಬಾಣಗಳನ್ನೂ ಸಹಿಸಿಕೊಂಡುದು ಇವಿಷ್ಟು ಪ್ರಕರಣಗಳೂ ಬರುತ್ತವೆ. ಇಲ್ಲಿಯ ಶ್ಲೋಕಗಳು ಈ ರೀತಿ ಬರುತ್ತವೆ.

**ಏವಮನ್ಯೈರಪಿ ಭೃಶಂ ವಿದ್ಧ್ಯಮಾನಃ ಸಹಸ್ರಶಃ ॥೪೭॥**

**ನ ತಸ್ಯಾಸೀದನಿರ್ಭಿನ್ನಂ ಗಾತ್ರೇ ದ್ವ್ಯಙ್ಗುಲಮನ್ತರಮ್ ।**
**ಏವಂಭೂತಸ್ತವ ಪಿತಾ ಶರೈರ್ವಿಶಕಲೀಕೃತಃ ।**
**ಶಿತಾಗ್ರೈಃ ಫಾಲ್ಗುನೇನಾಜೌ ಪ್ರಾಕ್ಶಿರಾಃ ಪ್ರಾಪತದ್ರಥಾತ್ ॥೮೭॥**

ಈ ಆನುಪೂರ್ವಿಯನ್ನು ನಾವು ತೆಗೆದುಕೊಂಡರೆ ಯಾವ ಸಮಸ್ಯೆಯೂ ಇರುವುದಿಲ್ಲ. ಜಿಜ್ಞಾಸುಗಳ ತರ್ಕ-ವಿತರ್ಕಗಳಿಗೂ ಅವಕಾಶವಿರುವುದಿಲ್ಲ. ಕಥಾಪ್ರವಾಹಕ್ಕೂ ಚ್ಯುತಿಯಿಲ್ಲ. ವಿಷಯದ ಲೋಪವಿಲ್ಲ.

ಇದೇ ಪ್ರಕರಣದಲ್ಲಿ ಬರುವ ೬೬ನೆಯ ಶ್ಲೋಕದ ಪೂರ್ವಾರ್ಧವು ಈ ರೀತಿಯಾಗಿದೆ.

**ಕೃನ್ತನ್ತಿ ಮಮ ಗಾತ್ರಾಣಿ ಮಾಘಮಾಂ ಸೇಗವಾ ಇವ ।**

ಮಾಘಮಾ ಎಂಬುದಕ್ಕೆ ಏಡಿ ಎಂದೂ, ಸೇಗವಾ ಎಂಬುದಕ್ಕೆ ಏಡಿಯ ಮರಿಗಳೆಂದೂ ಅರ್ಥಮಾಡಲಾಗಿದೆ. ಮಾಘಮಾ ಎಂಬುದಕ್ಕೆ ಏಡಿ ಎಂಬ ಅರ್ಥಬರುವ, ಸೇಗವಾ ಎಂಬುದಕ್ಕೆ ಏಡಿಮರಿಗಳು ಎಂಬ ಅರ್ಥಬರುವ ನಿಘಂಟಾಗಲೀ ವ್ಯುತ್ಪತ್ತಿಯಾಗಲೀ ಸಿಕ್ಕಿಲ್ಲವಾದರೂ ಒಬ್ಬ ವಿದ್ವಾಂಸರು ಇದಕ್ಕೆ ನಿರುಕ್ತವನ್ನು ಹೀಗೆ ಕೊಟ್ಟಿರುತ್ತಾರೆ.

**ಮಾಘಮಾ ಕರ್ಕಟೀ ಪ್ರೋಕ್ತಾ ತದಪತ್ಯಂ ತು ಸೇಗವಾ** ಏಡಿಮರಿಗಳು ತಾಯಿಯ ಹೊಟ್ಟೆಯಿಂದ ಹೊರಬರುವಾಗ ತಾಯಿಯ ಹೊಟ್ಟೆಯನ್ನೂ ಸೀಳಿಕೊಂಡೇ ಹೊರಬರುತ್ತವೆ. ಏಡಿಮರಿಗಳು ತಾಯಿಯ ಹೊಟ್ಟೆಯನ್ನು ಕತ್ತರಿಸುವಂತೆ ಅರ್ಜುನನ ಬಾಣಗಳು ನನ್ನ ಶರೀರವನ್ನು ಕತ್ತರಿಸುತ್ತಿವೆ ಎಂದು ಭೀಷ್ಮನು ಹೇಳುತ್ತಾನೆ.

**ಮಾಘಮಾಸೇ ಗವಾಮಿವ** ಎಂಬ ಮತ್ತೊಂದು ಪಾಠವಿದೆ. ಇದಕ್ಕೆ ಆಧುನಿಕರೊಬ್ಬರು ಮಾಘಮಾಸದಲ್ಲಿ ಯಜ್ಞಮಾಡುವಾಗ ಪಶುಹನನ ಮಾಡುವಂತೆ–ಎಂದು ಅರ್ಥಮಾಡಿ ಗೋವಧೆಯು ಹಿಂದೆ ಇತ್ತೆಂಬುದಕ್ಕೆ

ಒಂದು ಸಮರ್ಥನೆಯನ್ನಾಗಿ ಕೊಟ್ಟು ಲೇಖನವನ್ನು ಪ್ರಕಟಿಸಿದ್ದರು. ಹೀಗೆ ಅರ್ಥಮಾಡುವುದು ಅಜ್ಞತೆಯ ಪರಮಾವಧಿಯೇ ಸರಿ.

**ಮಾಘಮಾಸೇ ಗವಾಮಿವ**–ಎಂಬುದಕ್ಕೆ ವ್ಯಾಖ್ಯಾನವೋ ಎಂಬಂತೆ ೧೧೮ನೆಯ ಅಧ್ಯಾಯದ ೮ನೆಯ ಶ್ಲೋಕದಲ್ಲಿ ಇದೇ ರೀತಿಯ ಮತ್ತೊಂದು ಉಪಮಾನವಿದೆ.

**ಯಥಾ ಹಿ ಶೈಶಿರಃ ಕಾಲೋ ಗವಾಂ ಮರ್ಮಾಣಿ ಕೃನ್ತತಿ ।**

ಶಿಶಿರಋತುವಿನ ಮೊದಲನೆಯ ತಿಂಗಳು ಮಾಘಮಾಸ. ಶಿಶಿರಕಾಲದ ಅಥವಾ ಮಾಘಮಾಸದ ಶೀತವು ಹಸುಗಳನ್ನು (ಹಸುಗಳ ಮರ್ಮಸ್ಥಾನ ಗಳನ್ನು) ಕೊರೆಯುವಂತೆ ಅರ್ಜುನನ ಬಾಣಗಳು ಭೀಷ್ಮನ ಶರೀರವನ್ನು ಕೊರೆದುವು. ಉತ್ತರದೇಶದಲ್ಲಿ ಶೀತಮಾರುತಕ್ಕೆ ಸಿಕ್ಕಿ ಮನುಷ್ಯರೇ ಸತ್ತು ಹೋಗುತ್ತಾರೆ. ಹಸುಗಳ ವಿಷಯವನ್ನು ಹೇಳಬೇಕಾಗಿಯೇ ಇಲ್ಲ. ಆದುದ ರಿಂದ **ಮಾಘಮಾಸೇ ಗವಾಮಿವ** ಎಂಬ ಉಪಮಾನವೂ ಸಹ ಈ ಪ್ರಕರಣಕ್ಕೆ ಚೆನ್ನಾಗಿಯೇ ಹೊಂದಿಕೊಳ್ಳುತ್ತದೆ.

ಭೀಷ್ಮನು ತನ್ನ ಶರೀರದಲ್ಲಿ ಚುಚ್ಚಿಕೊಂಡಿರುವ ಬಾಣಗಳನ್ನೇ ಆಸರೆಯನ್ನಾಗಿ ಪಡೆಯುತ್ತಾನೆ. ಅರ್ಥಾತ್ ಅವನು ನೆಲದ ಮೇಲೆ ಬೀಳು ವುದಿಲ್ಲ. ಅಂತಹ ಸ್ಥಿತಿಯನ್ನು ನಾವು ನೆನೆಸಿಕೊಳ್ಳಲೂ ಸಾಧ್ಯವಾಗುವುದಿಲ್ಲ. ಅವನು ರಥದಿಂದ ಬಿದ್ದಾಗ ಅವನ ಶರೀರದೊಳಕ್ಕೆ ಬಾಣಗಳು ಎಷ್ಟುದೂರ ನಾಟಿದ್ದವೆಂಬುದನ್ನು ಊಹಿಸಲೂ ಕೂಡ ಕಷ್ಟವೇ ಸರಿ. ಅಂತಹ ಯಾತನೆ ಯಲ್ಲಿಯೂ ಅವನು ಉತ್ತರಾಯಣಕ್ಕಾಗಿ ಕಾಯುತ್ತಾನೆ. ದಕ್ಷಿಣಾಯನ ವಾದುದರಿಂದ ಪ್ರಾಣಬಿಡಲು ಇಚ್ಛಿಸುವುದಿಲ್ಲ. ಆದರೆ ಅವನಿಗೆ ಯೋಗಶಕ್ತಿ ಯಿದ್ದುದರಿಂದ ಮನಸ್ಸನ್ನು ಪರಮಾತ್ಮನಲ್ಲಿ ಕೇಂದ್ರೀಕರಿಸಿ ವೇದನೆಯನ್ನು ನಿರ್ಲಕ್ಷಿಸುವ ಶಕ್ತಿಯಿದ್ದಿತು. ಅಣಿಮಾಂಡವ್ಯನ ಸ್ಥಿತಿಯನ್ನೂ ನಾವಿಲ್ಲಿ ಜ್ಞಾಪಿಸಿಕೊಳ್ಳಬಹುದಾಗಿದೆ. ವೇದೋಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿ ರುವ ಉತ್ತರಾಯಣದಲ್ಲಿ ಮರಣಹೊಂದಬೇಕೆಂಬ ಅಭಿಪ್ರಾಯವನ್ನು ಭೀಷ್ಮನಿಲ್ಲಿ ಕಾರ್ಯತಃ ಮಾಡಿ ತೋರಿಸಿದ್ದಾನೆ. ಉತ್ತರಾಯಣದಲ್ಲಿ ಮರಣವು ಸದ್ಗತಿಪ್ರದವೆಂಬುದನ್ನು ಭೀಷ್ಮನಿಲ್ಲಿ ಲೋಕಕ್ಕೆ ಸಾರಿಹೇಳಿದ್ದಾನೆ.

ಶರತಲ್ಪದಲ್ಲಿ ಮಲಗಿದ್ದ ಭೀಷ್ಮನಿಗೆ ಎಲ್ಲರೂ ಗೌರವವನ್ನು ಅರ್ಪಿಸು ತ್ತಾರೆ. ಇಲ್ಲಿಗೆ ೧೧೯ನೆಯ ಅಧ್ಯಾಯವು ಮುಗಿಯುತ್ತದೆ.

ಭೀಷ್ಮನ ಮರಣವಿಷಯವನ್ನು ಭೀಷ್ಮಪರ್ವದ ಹದಿಮೂರನೆಯ ಅಧ್ಯಾಯದಲ್ಲಿ ಕೇಳಿ ಧೃತರಾಷ್ಟ್ರನು ಆಗಲೇ ವಿಲಪಿಸಿದ್ದನು. ಪುನಃ ಭೀಷ್ಮನ ಸಂಬಂಧವಾದ ಯುದ್ಧವಾರ್ತೆಯು ಮುಗಿಯಲಿದ್ದಾಗ ಸಂಜಯನು ಹೇಳಿದ ಮರಣವಾರ್ತೆಯನ್ನು ಕೇಳಿ ಅವನು ದುಃಖಪಡುತ್ತಾನೆ. ಭೀಷ್ಮನ ವಧೆಯಿಂದ ಕೌರವರಿಗೆ ದುಃಖವೂ–ಪಾಂಡವರಿಗೆ ಸಂತೋಷವೂ ಆಗಿರುವುದೆಂಬುದನ್ನು ಸಂಜಯನು ೧೨೦ನೆಯ ಅಧ್ಯಾಯದಲ್ಲಿ ವಿವರಿಸಿದ್ದಾನೆ. ಇಲ್ಲಿ ಅರ್ಜುನನ ಕೀರ್ತಿಯನ್ನು ಹೆಚ್ಚಿಸುವ ಒಂದು ಪ್ರಕರಣವು ಬರುತ್ತದೆ. ಬಾಣಪ್ರಯೋಗ ದಿಂದಲೇ ಭೀಷ್ಮನು ಅಪೇಕ್ಷಿಸಿದ ಶರರೂಪವಾದ ತಲೆದಿಂಬನ್ನು ಅರ್ಜುನನು ಒದಗಿಸುತ್ತಾನೆ. ಭೀಷ್ಮನ ರಕ್ಷಣೆಗೆ ತಕ್ಕ ವ್ಯವಸ್ಥೆಮಾಡಿ ಎಲ್ಲರೂ ತಮ್ಮ-ತಮ್ಮ ಬಿಡಾರಗಳಿಗೆ ಹೋಗುತ್ತಾರೆ. ಅಂದಿನ ವಿಜಯಕ್ಕಾಗಿ ಯುಧಿಷ್ಠಿರನು ಶ್ರೀಕೃಷ್ಣ ನನ್ನು ಅಭಿನಂದಿಸುತ್ತಾನೆ. ಇಲ್ಲಿಗೆ ಈ ಅಧ್ಯಾಯವು ಮುಗಿಯುತ್ತದೆ. ೧೨೧ ನೆಯ ಅಧ್ಯಾಯದಲ್ಲಿಯೂ ಅರ್ಜುನನ ಕೀರ್ತಿಯನ್ನು ಮತ್ತಷ್ಟು ಹೆಚ್ಚಿಸುವ ಪ್ರಕರಣವಿದೆ. ಬಾಣಪ್ರಯೋಗಮಾಡಿ ಅರ್ಜುನನು ಅಂತರ್ಗಂಗೆಯನ್ನು ಚಿಮ್ಮಿಸಿ ಭೀಷ್ಮನು ಬಾಯಾರಿಕೆಯನ್ನು ಹೋಗಲಾಡಿಸುತ್ತಾನೆ. ಇದನ್ನೇ ನಿದರ್ಶಿಸಿ ಭೀಷ್ಮನು ದುರ್ಯೋಧನನಿಗೆ ಪಾಂಡವರೊಡನೆ ಸಂಧಿಮಾಡಿ ಕೊಳ್ಳುವಂತೆ ಹೇಳುತ್ತಾನೆ. ಆದರೆ ಅದರಿಂದ ಪ್ರಯೋಜನವೇನೂ ಆಗುವು ದಿಲ್ಲ. ಅಲ್ಲಿಗೆ ಈ ಅಧ್ಯಾಯವು ಮುಗಿಯುತ್ತದೆ.

೧೨೨ನೇ ಅಧ್ಯಾಯದಲ್ಲಿ ಕರ್ಣ-ಭೀಷ್ಮರ ಸಮಾಗಮವಿದೆ. ಇವರ ಸಂಭಾಷಣೆಯು ಹೃದಯಂಗಮವಾಗಿ ರಾಜಕೀಯದಲ್ಲಿ ಒಬ್ಬೊಬ್ಬರೂ ಹೇಗೆ ನಡೆದುಕೊಳ್ಳುತ್ತಾರೆಂಬುದನ್ನು ಬೆಳಕಿಗೆ ತರುವುದಾಗಿದೆ. ಇನ್ನೊಂದು ಮಹತ್ತರ ವಿಷಯವೆಂದರೆ ಸಂಸ್ಕಾರಗಳ ಮಹತ್ತ್ವವನ್ನು ಕುರಿತು ಭೀಷ್ಮನು ಹೇಳುವ ಮಾತುಗಳು. ಯದ್ಯಪಿ ಮಹಾತ್ಮರಿಂದ ಕೊಟ್ಟ ಮಂತ್ರಪುರಶ್ಚರಣ ಬಲದಿಂದ ದೇವನಿಗೆ ಹುಟ್ಟಿದವನಾದರೂ, ಸಂಸ್ಕಾರರಹಿತನಾದುದರಿಂದಲೂ, ವಿಧಿನಿಯಮ ಮತ್ತು ಧರ್ಮಗಳಿಗೆ ವಿರುದ್ಧವಾಗಿ ಅವನ ಜನನ ವಾದುದ ರಿಂದಲೂ, ಕರ್ಣನ ಬುದ್ಧಿಯು ಧರ್ಮಕ್ಕೆ ವಿರುದ್ಧವಾಗಿಯೇ ಹರಿಯಿತು.

## ಭೀಷ್ಮಪರ್ವದ ಫಲಶ್ರುತಿ

ವೈಶಂಪಾಯನರು ಹೇಳುತ್ತಾರೆ :

**ಇತ್ಯೇತದ್ಬಹುವೃತ್ತಾನ್ತಂ ಭೀಷ್ಮಪರ್ವಾಖಿಲಂ ಮಯಾ ।**
**ಶೃಣ್ವತೇ ತೇ ಮಹಾರಾಜ ಪ್ರೋಕ್ತಂ ಪಾಪಹರಂ ಶುಭಮ್ ॥೧॥**

ಮಹಾರಾಜ! ಅನೇಕವೃತ್ತಾಂತಗಳಿಂದ ಕೂಡಿರುವ ಸಂಪೂರ್ಣ ಭೀಷ್ಮಪರ್ವವನ್ನು ನಾನು ನಿನಗೆ ಹೇಳಿರುತ್ತೇನೆ. ಈ ಪರ್ವದ ಶ್ರವಣವು ಸಕಲಪಾಪಹರವೂ–ಶುಭದಾಯಕವೂ ಆಗಿದೆ.

**ಯಃ ಶ್ರಾವಯೇತ್ಸದಾ ರಾಜನ್ಬ್ರಾಹ್ಮಣಾನ್ವೇದಪಾರಗಾನ್ ।**
**ಶ್ರದ್ಧಾವನ್ತಶ್ಚ ಯೇ ಚಾಪಿ ಶ್ರೋಷ್ಯನ್ತಿ ಮನುಜಾ ಭುವಿ ॥೨॥**

**ವಿಧೂಯ ಸರ್ವಪಾಪಾನಿ ವಿಹಾಯಾನ್ತೇ ಕಲೇವರಮ್ ।**
**ಪ್ರಯಾನ್ತಿ ತತ್ಪದಂ ವಿಷ್ಣೋರ್ಯತ್ಪ್ರಾಪ್ಯ ನ ನಿವರ್ತತೇ ॥೩॥**

ಮಹಾರಾಜ! ವೇದಪಾರಂಗತರಾದ ಬ್ರಾಹ್ಮಣರಿಗೆ ಯಾರು ಇದನ್ನು ಹೇಳುತ್ತಾರೆಯೋ, ಶ್ರದ್ಧಾವಂತರಾಗಿ ಯಾವ ಮನುಷ್ಯರು ಪ್ರಪಂಚದಲ್ಲಿ ಈ ಭೀಷ್ಮಪರ್ವವನ್ನು ಕೇಳುತ್ತಾರೆಯೋ, ಅವರು ಸರ್ವಪಾಪಗಳನ್ನೂ ಕಳೆದು ಕೊಂಡು ಕೊನೆಯಲ್ಲಿ ದೇಹತ್ಯಾಗಮಾಡಿ–ಯಾವ ಸ್ಥಳವನ್ನು ಸೇರಿದನಂತರ ಪುನಃ ಹಿಂದಕ್ಕೆ ಬರಬೇಕಾಗುವುದಿಲ್ಲವೋ–ಅಂತಹ ವಿಷ್ಣುವಿನ ಪರಮಪದ ವನ್ನೇ ಸೇರುತ್ತಾರೆ.

**ತಸ್ಮಾತ್ಸರ್ವಪ್ರಯತ್ನೇನ ಭಾರತಂ ಭರತರ್ಷಭ ।**
**ಶೃಣುಯಾತ್ಸಿದ್ಧಿಮನ್ವಿಚ್ಛನ್ನಿಹ ವಾಮುತ್ರ ಮಾನವಃ ॥೪॥**

ಈ ಲೋಕದಲ್ಲಾಗಲೀ, ಪರಲೋಕದಲ್ಲಾಗಲೀ–ಶುಭಕಾರ್ಯದ ಸಿದ್ಧಿಯನ್ನು ಅಪೇಕ್ಷಿಸುವವನು ಪ್ರಯತ್ನಪೂರ್ವಕವಾಗಿ ಮಹಾಭಾರತದ ಕಥೆ ಯನ್ನು ಅವಶ್ಯವಾಗಿ ಕೇಳಲೇಬೇಕು.

**ಭೋಜನಂ ಭೋಜಯೇದ್ವಿಪ್ರಾನ್ಗನ್ಧಮಾಲ್ಯೈರಲಂಕೃತಾನ್ ।**
**ಭೀಷ್ಮಪರ್ವಣಿ ರಾಜೇನ್ದ್ರ ದದ್ಯಾತ್ಪಾನೀಯಮುತ್ತಮಮ್ ॥೫॥**

ಭೀಷ್ಮಪರ್ವವನ್ನು ಕೇಳಿದನಂತರ ಬ್ರಾಹ್ಮಣರನ್ನು ಗಂಧ-ಮಾಲ್ಯಾದಿಗಳಿಂದ ಅಲಂಕರಿಸಿ ಭೋಜನಮಾಡಿಸಬೇಕು ಮತ್ತು ಉತ್ತಮವಾದ ಪಾನೀಯವನ್ನು ಕೊಡಬೇಕು.

**ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ**
**ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।**
**ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ**
**ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥**

**ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।**
**ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸನ್ತು ನಿರ್ಭಯಾಃ ॥**
**ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ ॥**
**ಅಧನಾಃ ಸಧನಾಃ ಸನ್ತು ಜೀವನ್ತು ಶರದಾಂ ಶತಮ್ ॥**

**ಕಾಯೇನ ವಾಚಾ ಮನಸೇನ್ದ್ರಿಯೈರ್ವಾ**
**ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।**
**ಕರೋಮಿ ಯದ್ಯತ್ಸಕಲಂ ಪರಸ್ಮೈ**
**ನಾರಾಯಣಾಯೇತಿ ಸಮರ್ಪಯಾಮಿ ॥**

ಹರಿಃ ಓಂ

ಶ್ರೀಕೃಷ್ಣಾರ್ಪಣಮಸ್ತು ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು
ಓಂ ತತ್ಸತ್



ಶ್ರೀಮಹಾಗಣಪತಯೇ ನಮಃ ಶ್ರೀಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ದ್ರೋಣಪರ್ವ

೧ನೆಯ ಅಧ್ಯಾಯ ದ್ರೋಣಾಭಿಷೇಕಪರ್ವ

## ಭೀಷ್ಮನ ಪತನದಿಂದಾಗಿ ಕೌರವರ ಶೋಕ: ಕರ್ಣನ ಸ್ಮರಣೆ

ಜನಮೇಜಯರಾಜನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

**ತಮಪ್ರತಿಮಸತ್ತ್ವೌಜೋಬಲವೀರ್ಯಸಮನ್ವಿತಮ್ ।**
**ಹತಂ ದೇವವ್ರತಂ ಶ್ರುತ್ವಾ ಪಾಞ್ಚಾಲ್ಯೇನ ಶಿಖಣ್ಡಿನಾ ॥೧॥**
**ಧೃತರಾಷ್ಟ್ರಸ್ತತೋ ರಾಜಾ ಶೋಕವ್ಯಾಕುಲಲೋಚನಃ ।**
**ಕಿಮಚೇಷ್ಟತ ವಿಪ್ರರ್ಷೇ ಹತೇ ಪಿತರಿ ವೀರ್ಯವಾನ್ ॥೨॥**

"ಬ್ರಹ್ಮರ್ಷಿಗಳೇ! ಅನುಪಮವಾದ ಸತ್ತ್ವ, ಓಜಸ್ಸು, ಬಲ ಮತ್ತು ಪರಾಕ್ರಮಗಳಿಂದ ವಿಶಿಷ್ಟನಾಗಿದ್ದ ದೇವವ್ರತನನ್ನು ಪಾಂಚಾಲರಾಜಕುಮಾರನಾದ ಶಿಖಂಡಿಯು ಸಂಹರಿಸಿದನೆಂಬ ವಾರ್ತೆಯನ್ನು ಕೇಳಿ ಶೋಕದಿಂದ ವ್ಯಾಕುಲಲೋಚನನಾದ, ವೀರ್ಯವಂತನಾದ ಧೃತರಾಷ್ಟ್ರನು ತನ್ನ ತಂದೆಯು ಹೋದುದಕ್ಕಾಗಿ ಏನು ಮಾಡಿದನು? ಅವನ ಮಗ ದುರ್ಯೋಧನನು ಭೀಷ್ಮ-ದ್ರೋಣಪ್ರಮುಖರಾದ ಮಹಾರಥರ ಮೂಲಕವಾಗಿ ಪಾಂಡವರನ್ನು ಪರಾಜಯಗೊಳಿಸಿ ಅಖಂಡರಾಜ್ಯವನ್ನೂ ಪಡೆದುಕೊಳ್ಳಬೇಕೆಂದು ಇಚ್ಛಿಸಿದ್ದನು. ತಪೋಧನರೇ! ಸರ್ವಧನುಷ್ಮಂತರಿಗೂ ಕೇತುಪ್ರಾಯನಾಗಿದ್ದ ಭೀಷ್ಮನು ಹತನಾಗಲಾಗಿ ದುರ್ಯೋಧನನ ಮುಂದಿನ ಪ್ರಯತ್ನವೇನು?–ಎಂಬುದನ್ನೂ ನನಗೆ ವಿವರಿಸಿ ಹೇಳಿರಿ."

ವೈಶಂಪಾಯನರು ಹೇಳುತ್ತಾರೆ :

"ಮಹಾರಾಜ! ತನ್ನ ತಂದೆಯು ಯುದ್ಧದಲ್ಲಿ ಹತನಾದುದನ್ನು ಕೇಳಿ ಜನಾಧಿಪನಾದ, ಕುರುಕುಲೋತ್ಪನ್ನನಾದ ಧೃತರಾಷ್ಟ್ರನು ಚಿಂತಾಶೋಕ

ಪರಾಯಣನಾದನು. ಅವನ ಮನಸ್ಸಿಗೆ ಶಾಂತಿಯೆಂಬುದೇ ಇಲ್ಲವಾಯಿತು. ಹೀಗೆ ಯಾವಾಗಲೂ ಭೀಷ್ಮನ ವಿಷಯವಾಗಿ ಚಿಂತಿಸುತ್ತಿದ್ದ ಧೃತರಾಷ್ಟ್ರನ ಬಳಿಗೆ ವಿಶುದ್ಧಾತ್ಮನಾದ, ಗವಲ್ಗಣನ ಮಗನಾದ ಸಂಜಯನು ಬಂದನು. ಶಿಬಿರದಿಂದ ರಾತ್ರಿಯ ವೇಳೆಯಲ್ಲಿ ಹಾಸ್ತಿನಪುರಕ್ಕೆ ಬಂದ ಸಂಜಯನನ್ನು ಕುರಿತು ಅಂಬಿಕೆಯ ಮಗನಾದ ಧೃತರಾಷ್ಟ್ರನು ಪ್ರಶ್ನಿಸಿದನು. ಭೀಷ್ಮನ ನಿಧನವಾರ್ತೆಯನ್ನು ಸಂಜಯನಿಂದ ಕೇಳಿದಾಗಿನಿಂದ ರಾಜನ ಮನಸ್ಸು



ಬಹಳ ಖಿನ್ನವಾಗಿತ್ತು. ಅವನಿಗೆ ಸಂತೋಷವೆಂಬುದೇ ಇರಲಿಲ್ಲ. ಮಕ್ಕಳ ವಿಜಯವನ್ನೇ ಸದಾ ಬಯಸುತ್ತಿದ್ದನು. ಅದಕ್ಕಾಗಿ ಅವನು–ರೋಗಿಷ್ಠನಾದವನು ಪ್ರಲಪಿಸುವಂತೆ–ಅನೇಕ ವೇಳೆ ಪ್ರಲಪಿಸುತ್ತಲೂ ಇದ್ದನು. ಈ ರೀತಿಯಲ್ಲಿ ಪರಮದುಃಖಿತನಾಗಿದ್ದ ಧೃತರಾಷ್ಟ್ರನು ಸಂಜಯನನ್ನು ಕಂಡೊಡನೆಯೇ ಪ್ರಶ್ನಿಸಿದನು : "ತಾತ! ಭೀಮಪರಾಕ್ರಮನಾದ ಭೀಷ್ಮನ ನಿಧನಕ್ಕಾಗಿ ಶೋಕಪಟ್ಟನಂತರ ಕಾಲಚೋದಿತರಾದ ನನ್ನ ಮಕ್ಕಳೇನು ಮಾಡಿದರು? ದುರಾಧರ್ಷನಾದ, ಶೂರನಾದ, ಮಹಾತ್ಮನಾದ ಭೀಷ್ಮನು ನಿಧನಹೊಂದಲಾಗಿ ಶೋಕಸಾಗರದಲ್ಲಿ ಮುಳುಗಿದ ನನ್ನ ಮಕ್ಕಳು ಮುಂದೇನು ಮಾಡಿ

ದರು? ಮಹಾತ್ಮರಾದ ಪಾಂಡವರ ವಿಶಾಲವಾದ ಮತ್ತು ದೊಡ್ಡದಾದ ಆ ಸೈನ್ಯವು ಮೂರು ಲೋಕಗಳಿಗೂ ತೀವ್ರವಾದ ಭಯವನ್ನು ಉಂಟುಮಾಡಬಲ್ಲುದಾಗಿದೆ. ಅಂತಹ ಸಂದರ್ಭದಲ್ಲಿ ದುರ್ಯೋಧನನ ಸೈನ್ಯದಲ್ಲಿ ಯಾವ ಮಹಾರಥನನ್ನು ಆಶ್ರಯಿಸಿ ಸೈನಿಕರೆಲ್ಲರೂ ಭಯವನ್ನು ತೊರೆದರು? ಸೈನಿಕರೆಲ್ಲರನ್ನೂ ಭಯರಹಿತರನ್ನಾಗಿ ಮಾಡಿ ಪಾಂಡವರ ಅಜೇಯಸೈನ್ಯದ ಎದುರಿನಲ್ಲಿ ಯುದ್ಧಕ್ಕೆ ಸಜ್ಜಾಗಿಸಿದ ಪುರುಷನು ಯಾರು? ಕುರುಗಳಿಗೆ ಋಷಭಪ್ರಾಯನಾಗಿದ್ದ ದೇವವ್ರತನು ನಿಧನಹೊಂದಲಾಗಿ ನಮ್ಮ ಕಡೆಯ ರಾಜರೇನು ಮಾಡಿದರು?—ಈ ಎಲ್ಲ ವಿಷಯಗಳನ್ನೂ ನನಗೆ ವಿವರಿಸಿ ಹೇಳು ಸಂಜಯ!"

"ಮಹಾರಾಜ! ಯುದ್ಧದಲ್ಲಿ ದೇವವ್ರತನು ಹತನಾದನಂತರ ನಿನ್ನ ಮಕ್ಕಳು ಏನು ಮಾಡಿದರೆಂಬುದನ್ನು ಹೇಳುವೆನು. ಏಕಾಗ್ರಚಿತ್ತನಾಗಿ ಕೇಳು. ಸತ್ಯಪರಾಕ್ರಮನಾದ ಭೀಷ್ಮನು ಹತನಾಗಲಾಗಿ ನಿನ್ನ ಕಡೆಯವರೂ ಮತ್ತು ಪಾಂಡವರ ಕಡೆಯವರೂ ಪ್ರತ್ಯೇಕ-ಪ್ರತ್ಯೇಕವಾಗಿ ಸಮಾಲೋಚನೆಗಳನ್ನು ನಡೆಸಿದರು.

* ಮಹಾರಾಜ! ಅವರು ಕ್ಷತ್ರಧರ್ಮವನ್ನು ವಿಮರ್ಶಿಸಿ ವಿಸ್ಮಿತರೂ, ಪ್ರಹೃಷ್ಟರೂ ಆದರು. ಆದರೂ ತಮ್ಮ ಧರ್ಮವನ್ನೇ ನಿಂದಿಸುತ್ತಾ ಮಹಾತ್ಮನಾದ ಭೀಷ್ಮನಿಗೆ ನಮಸ್ಕಾರಮಾಡಿ ಅಮಿತಪರಾಕ್ರಮಿಯಾದ ಭೀಷ್ಮನಿ

---

* ಇಲ್ಲಿ ಶ್ಲೋಕವು ಈ ರೀತಿಯಾಗಿದೆ. ವಿಸ್ಮಿತಾಶ್ಚ ಪ್ರಹೃಷ್ಟಾಶ್ಚ ಕ್ಷತ್ರಧರ್ಮಂ ನಿಶಮ್ಯ ತೇ । ಸ್ವಧರ್ಮಂ ನಿನ್ದಮಾನಾಸ್ತೇ ಪ್ರಣಿಪತ್ಯ ಮಹಾತ್ಮನೇ ॥೧೬॥ ಕ್ಷತ್ರಧರ್ಮವನ್ನು ಕೇಳಿ ವಿಸ್ಮಿತರೂ ಪ್ರಹೃಷ್ಟರೂ ಆದರು ಎಂದು ಪೂರ್ವಾರ್ಧದ ಅರ್ಥ. ವಿಸ್ಮಿತರೂ ಪ್ರಹೃಷ್ಟರೂ ಏಕೆ ಆದರೆಂಬುದಕ್ಕೆ ನೀಲಕಂಠರು ಹೀಗೆ ವ್ಯಾಖ್ಯಾನಮಾಡಿರುತ್ತಾರೆ. ವಿಸ್ಮಿತಾಃ = **ಗುರುವಧೇऽಪಿ ದೋಷಾಭಾವಾತ್**. ಗುರುವಿನ (ಭೀಷ್ಮನ) ವಧೆಮಾಡಿ ದರೂ ಕ್ಷತ್ರಧರ್ಮದ ಪ್ರಕಾರ ದೋಷವಿಲ್ಲವೆಂದು ಹೇಳಿರುವುದರಿಂದ ವಿಸ್ಮಿತರು, **ಪ್ರಹೃಷ್ಟಾಃ = ಮಹಾಫಲತ್ವಾತ್ ಯುದ್ಧಮರಣಸ್ಯ**. ಯುದ್ಧದಲ್ಲಿ ಮರಣವುಂಟಾದರೆ ಮಹಾಫಲವು ( ಬ್ರಹ್ಮಲೋಕಪ್ರಾಪ್ತಿಯು ) ಲಭಿಸುತ್ತದೆಂದು ತಿಳಿದು ಪ್ರಹೃಷ್ಟರಾದರು. ಆದರೆ ಮುಂದಿನ ಉತ್ತರಾರ್ಧದಲ್ಲಿಯೇ **ಸ್ವಧರ್ಮಂ ನಿನ್ದಮಾನಾಃ** = ಸ್ವಧರ್ಮವನ್ನು ನಿಂದನೆಮಾಡುತ್ತಾ—ಎಂದಿದೆ. ಕ್ಷತ್ರಧರ್ಮವನ್ನು ಕೇಳಿ ಪ್ರಹೃಷ್ಟರಾದವರು ಸ್ವಧರ್ಮವನ್ನು (ಕ್ಷತ್ರಧರ್ಮವನ್ನು ) ನಿಂದಿಸಿದುದು ಹೇಗೆ? ನಮಗೆ ಲಭ್ಯವಿರುವ ಯಾವ ಪುಸ್ತಕದಲ್ಲಿಯೂ ಪಾಠವ್ಯತ್ಯಾಸವಿಲ್ಲ. ಆದರೆ ಬಂಗಾಳಿ ಪ್ರತಿಯೊಂದರಲ್ಲಿ 'ವಿಸ್ಮಿತಾಶ್ಚಾ ಪ್ರಹೃಷ್ಟಾಶ್ಚ' ಎಂಬ ಪಾಠವಿದೆಯೆಂದು ತಿಳಿದು ಬಂದಿದೆ. ಭೀಷ್ಮನ ಪತನವಾಗಿ

ಗೋಸ್ಕರ ಬಗ್ಗಿದ ಗಿಣ್ಣುಗಳುಳ್ಳ ಬಾಣಗಳಿಂದ ಹಾಸಿಗೆಯನ್ನೂ ಮತ್ತು ತಲೆದಿಂಬನ್ನೂ ಮಾಡಿದರು. ಪರಸ್ಪರವಾಗಿ ಸಮಾಲೋಚಿಸಿ ಭೀಷ್ಮನು ಮಲಗಿದ್ದ ಸ್ಥಳದ ಸುತ್ತಲೂ ಸುಭದ್ರವಾದ ರಕ್ಷಣಾವ್ಯವಸ್ಥೆಯನ್ನೂ ಏರ್ಪಡಿಸಿ, ಗಾಂಗೇಯನ ಅನುಮತಿಯನ್ನು ಪಡೆದು ಅವನನ್ನು ಪ್ರದಕ್ಷಿಣೆಮಾಡಿ, ಪರಸ್ಪರವಾಗಿ ಕಲೆತು ಯುದ್ಧವನ್ನು ಮಾಡಬೇಕೆಂದೇ ನಿರ್ಧರಿಸಿದವರಾಗಿ, ಕಾಲಚೋದಿತರಾದ ಕ್ಷತ್ರಿಯರು ರಕ್ತಾಂತಲೋಚನರಾಗಿ ಹೊರಟುಹೋದರು. ತೂರ್ಯಗಳು ಮತ್ತು ಭೇರಿಗಳ ನಿನಾದದೊಂದಿಗೆ ನಿನ್ನ ಕಡೆಯ ಮತ್ತು ಶತ್ರುಗಳ ಕಡೆಯ ಸೈನ್ಯಗಳು ಯುದ್ಧಕ್ಕೆ ಹೊರಟುವು. ಗಾಂಗೇಯನು ಸತ್ತುಹೋಗಲಾಗಿ ಸೂರ್ಯನು ಪಶ್ಚಿಮದಿಕ್ಕಿನ ಕಡೆಗೆ ತಿರುಗಿರಲಾಗಿ ಕಾಲದ ಪ್ರಭಾವದಿಂದ ವ್ಯತ್ಯಸ್ತವಾದ ಬುದ್ಧಿಯುಳ್ಳವರಾಗಿದ್ದ, ಕ್ರೋಧಪರವಶರಾಗಿದ್ದ ಭರತಶ್ರೇಷ್ಠರು ಮಹಾತ್ಮನಾದ ಗಾಂಗೇಯನ ಪಥ್ಯವಾದ ಮಾತನ್ನೂ ತಿರಸ್ಕರಿಸಿ ಶಸ್ತ್ರಗಳನ್ನು ಹಿಡಿದು ವೇಗವಾಗಿ ರಣಾಂಗಣಕ್ಕೆ ತೆರಳಿದರು. ಮಹಾರಾಜ! ನಿನ್ನ ಮಗನ ಮತ್ತು ನಿನ್ನ ಅವಿವೇಕದಿಂದಲೂ, ಭೀಷ್ಮನ ವಧೆಯಿಂದಲೂ ಕೌರವರು ಸರ್ವರಾಜರೊಡನೆ ಮೃತ್ಯುವಿಗೆ ಅಧೀನರಾಗಿಯೇ ಹೋದರು. ಮಾಂಸಾಶಿಗಳಾದ ಹಿಂಸ್ರಮೃಗಗಳ ಮಧ್ಯದಲ್ಲಿ ರಕ್ಷಣೆಯೇ ಇಲ್ಲದ ಆಡು-ಕುರಿಗಳಂತೆ ದೇವವ್ರತನಿಂದ ಹೀನರಾದ ನಿನ್ನ ಸೈನಿಕರು ಉದ್ವಿಗ್ನರಾದರು. ಭರತಶ್ರೇಷ್ಠನಾದ ಭೀಷ್ಮನು ಧರಾಶಾಯಿಯಾಗಲಾಗಿ ನಿನ್ನ ಸೈನ್ಯವು ನಕ್ಷತ್ರಗಳೇ ಇಲ್ಲದ ಆಕಾಶದಂತಾಯಿತು ; ಗಾಳಿಯೇ

---

ರುವ ಸಂದರ್ಭದಲ್ಲಿ ವಿಸ್ಮಿತರೂ ಅಪ್ರಹೃಷ್ಟರೂ ಆಗಲು ಸಾಧ್ಯ. ಅಂತೆಯೇ ಮುಂದಿನ ಪಾದದಲ್ಲಿರುವ ಸ್ವಧರ್ಮಂ ನಿನ್ದಮಾನಾಃ –ಎಂಬುದೂ ಸಮಂಜಸವಾಗುತ್ತದೆ. ವ್ಯಾಖ್ಯಾನಕಾರರ ಅಭಿಪ್ರಾಯದಂತೆ ವಿಸ್ಮಿತಾಃ ಎಂಬುದಕ್ಕೆ ಕ್ಷತ್ರಧರ್ಮದ ಪ್ರಕಾರ ಯುದ್ಧಕಾಲದಲ್ಲಿ ಗುರುಗಳನ್ನು ವಧಿಸಿದರೂ ದೋಷವಿಲ್ಲ–ಎಂಬುದು ವಿಸ್ಮಯಕ್ಕೆ ಕಾರಣವಾಗಬಹುದು. ಆದರೂ ಭೀಷ್ಮನ ವಧೆಯಿಂದಾಗಿ ಎಲ್ಲರೂ ಅಪ್ರಹೃಷ್ಟರೇ ಆಗಿದ್ದಾರೆ. ಆದುದರಿಂದಲೇ ಅವರು ಕ್ರೌರ್ಯದಿಂದ ಕೂಡಿದ ತಮ್ಮ ಸ್ವಧರ್ಮವನ್ನು ನಿಂದಿಸುತ್ತಾ–ಎಂಬ ಅರ್ಥವು ಸಮಂಜಸವಾಗಿ ಕಾಣುತ್ತದೆ. ಅಥವಾ ಸ್ವ (ಕ್ಷತ್ರ) ಧರ್ಮಂ ನಿನ್ದಮಾನಾಃ ಗುರುವಧೆಯನ್ನೂ ಮಾಡಬೇಕಾಗಿ ಬಂದುದಕ್ಕಾಗಿ ಕ್ಷತ್ರಧರ್ಮವನ್ನು ನಿಂದಿಸುತ್ತಾ ಮಹಾತ್ಮನೇ ಪ್ರಣಿಪತ್ಯ–ಮಹಾತ್ಮನಾದ ಭೀಷ್ಮನಿಗೆ ನಮಸ್ಕರಿಸಿ, ಅನಂತರ ಅವನಿಂದಲೇ ಕ್ಷತ್ರಧರ್ಮಂ ನಿಶಮ್ಯ–ಕ್ಷತ್ರಧರ್ಮದ ರಹಸ್ಯವೇನೆಂಬುದನ್ನು ತಿಳಿದವರಾಗಿ, ವಿಸ್ಮಿತಾಃ ಪ್ರಹೃಷ್ಟಾಶ್ಚ ಆಸನ್ = ವಿಸ್ಮಿತರೂ ಪ್ರಹೃಷ್ಟರೂ ಆದರು.

ಇಲ್ಲದ ಅಂತರಿಕ್ಷದಂತಾಯಿತು. ಹಾಳಾಗಿಹೋದ ಸಸ್ಯಗಳುಳ್ಳ ಭೂಮಿಯಂತಾಯಿತು. ಅಸಂಸ್ಕೃತವಾದ ಮಾತಿನಂತಾಯಿತು. ಬಲಿಚಕ್ರವರ್ತಿಯು ನಿಗ್ರಹಿಸಲ್ಪಟ್ಟನಂತರ ನಾಯಕನಿಂದ ರಹಿತವಾದ ಆಸುರೀಸೇನೆಯಂತೆ ನಿನ್ನ ಸೈನ್ಯವೂ ಅಸ್ತವ್ಯಸ್ತವಾಯಿತು. ಭೀಷ್ಮನಿಂದ ರಹಿತವಾದ ನಿನ್ನ ಸೇನೆಯು–ಸುಂದರಿಯಾದ ವಿಧವೆಯಂತೆ ಕಾಣುತ್ತಿದ್ದಿತು. ಶುಷ್ಕವಾಗಿ ಹೋದ ನೀರುಳ್ಳ ನದಿಯಂತಿದ್ದಿತು. ಜೊತೆಯಲ್ಲಿದ್ದ ಗಂಡುಜಿಂಕೆಯನ್ನು ಕಳೆದುಕೊಂಡು ತೋಳಗಳಿಂದ ಸುತ್ತುವರಿಯಲ್ಪಟ್ಟ ಹೆಣ್ಣುಜಿಂಕೆಯಂತೆ–ನಿನ್ನ ಸೈನ್ಯದ ಸ್ಥಿತಿಯಾಗಿತ್ತು. ಶರಭದಿಂದ ಕೊಲ್ಲಲ್ಪಟ್ಟ ಸಿಂಹವಿರುವ ಪರ್ವತದ ತಪ್ಪಲಿನಲ್ಲಿರುವ ವಿಶಾಲವಾದ ಗುಹೆಯಂತೆ–ಗಂಗಾಪುತ್ರನು ಸತ್ತನಂತರ ವಿಶಾಲವಾದ ಸೈನ್ಯವು ಹೇಳುವವರು ಕೇಳುವವರೇ ಇಲ್ಲದಂತಾಯಿತು. ಲಕ್ಷ್ಯವನ್ನು ಭೇದಿಸುವುದರಲ್ಲಿ ಸಮರ್ಥರಾದ, ಬಲಿಷ್ಠರಾದ ಪಾಂಡವರಿಂದ ಸಮ್ಮರ್ದಿತವಾಗುತ್ತಿದ್ದ ನಿನ್ನ ಸೈನ್ಯವು ದೊಡ್ಡ ಸಮುದ್ರದಲ್ಲಿರುವ ನೌಕೆಯು ನಾಲ್ಕು ದಿಕ್ಕುಗಳಿಂದಲೂ ಬೀಸುವ ಸುಂಟರಗಾಳಿಗೆ ಸಿಕ್ಕಿ ಮುರಿದುಬೀಳುವಂತೆ ವಿಪತ್ತಿನಲ್ಲಿ ಸಿಕ್ಕಿಹಾಕಿಕೊಂಡಿತು. ಆ ಸಮಯದಲ್ಲಿ ನಿನ್ನ ಸೇನೆಯಲ್ಲಿದ್ದ ಕುದುರೆ, ರಥ ಮತ್ತು ಗಜಸೈನ್ಯಗಳು ಬಹಳ ವ್ಯಾಕುಲಗೊಂಡುವು. ಅನೇಕರಾಗಲೇ ವಿಪತ್ತಿಗೆ ಒಳಗಾಗಿದ್ದರು. ಅವರ ಮನಸ್ಸು ಖಿನ್ನವಾಗಿದ್ದಿತು ಮತ್ತು ಅವರೆಲ್ಲರೂ ಬಹಳ ದೀನರಾಗಿಯೂ ಇದ್ದರು. ದೇವವ್ರತನಿಲ್ಲದೇ ನಾನಾ ವಿಭಾಗಗಳಲ್ಲಿದ್ದ ಸೈನಿಕರೂ ಮತ್ತು ರಾಜರೂ ಅತ್ಯಂತಭಯಭೀತರಾಗಿ ಯಾವ ಆಸರೆಯೂ ಇಲ್ಲದೇ ಪಾತಾಳದಲ್ಲಿ ಮುಳುಗಿಹೋಗುತ್ತಿರುವರೋ ಎಂಬಂತೆ ಕಾಣುತ್ತಿದ್ದರು.

ಸದ್ಗೃಹಸ್ಥನು ಮಧ್ಯಾಹ್ನದ ಸಮಯದಲ್ಲಿ ಅತಿಥಿಯನ್ನು ಸ್ಮರಿಸುವಂತೆ–ಆಪತ್ತಿನಲ್ಲಿರುವವನು ಬಂಧು-ಮಿತ್ರರನ್ನು ಸ್ಮರಿಸುವಂತೆ–ಆ ಸಂಕಟ ಸಮಯದಲ್ಲಿ ಕೌರವರು ಸರ್ವಶಸ್ತ್ರಧಾರಿಗಳಲ್ಲಿಯೂ ಶ್ರೇಷ್ಠನಾದ ಕರ್ಣನನ್ನು ಸ್ಮರಿಸಿದರು. ಅವನು ದೇವವ್ರತನಿಗೆ ಸಮಾನವಾದ ಪರಾಕ್ರಮವುಳ್ಳವನಾಗಿದ್ದನು. ಆದುದರಿಂದ ಅವನನ್ನೇ ಕುರಿತು ಅವರೆಲ್ಲಾ ಚಿಂತಿಸುತ್ತಿದ್ದರು. ಆ ಸಮಯದಲ್ಲಿ ರಾಜರೆಲ್ಲರೂ 'ಕರ್ಣ! ಕರ್ಣ!' ಎಂದೂ ಕೂಗಿಕೊಂಡರು. "ನಮ್ಮ ಹಿತಚಿಂತಕನಾದ, ನಮಗಾಗಿ ಪ್ರಾಣಬಿಡಲೂ ಸಿದ್ಧನಾಗಿ

ರುವ ಅಮಾತ್ಯಬಂಧುಸಹಿತನಾದ, ಸೂತಪುತ್ರನಾದ ರಾಧೇಯನನ್ನು ಈಗಲೇ ಕರೆತನ್ನಿರಿ. ಮಹಾಯಶೋವಂತನಾದ ಅವನು ಪ್ರತಿಜ್ಞೆಯ ಕಾರಣದಿಂದಾಗಿ ಹತ್ತು ದಿವಸಗಳ ಕಾಲ ಯುದ್ಧವನ್ನು ಮಾಡಲಿಲ್ಲ. ದುರ್ಯೋಧನನ ಪ್ರಾರ್ಥನೆಯಂತೆ ನಮ್ಮ ಸೈನ್ಯದಲ್ಲಿದ್ದ ಬಲಿಷ್ಠರನ್ನೂ, ಪರಾಕ್ರಮಿಗಳನ್ನೂ ಗಣನೆ ಮಾಡುತ್ತಿದ್ದಾಗ ಮಹಾಬಾಹುವಾದ ಭೀಷ್ಮನು ಎಲ್ಲ ಕ್ಷತ್ರಿಯರೂ ನೋಡುತ್ತಿದ್ದಂತೆಯೇ ಮಹಾರಥನಾದ ಕರ್ಣನನ್ನು ಅರ್ಧರಥನೆಂದು ಗಣನೆಮಾಡಿದನು. ನರರ್ಷಭನಾದ ಕರ್ಣನು ಭೀಷ್ಮನು ಪರಿಗಣಿಸಿ ದುದಕ್ಕಿಂತಲೂ ಎರಡು ಪಟ್ಟು ಹೆಚ್ಚಿನವನೆಂಬುದರಲ್ಲಿ ಸಂಶಯವೇ ಇಲ್ಲ. ನಿಜವಾಗಿ ಹೇಳುವುದಾದರೆ ಶೂರಸಮ್ಮತನಾದ, ಅಸುರರಿಂದೊಡಗೂಡಿದ ದೇವತೆಗಳೊಡನೆಯೂ ಯುದ್ಧಮಾಡಲು ಉತ್ಸುಕನಾಗಿರುವ ಕರ್ಣನು ರಥಾತಿರಥ ಸಂಖ್ಯಾಗಣನೆಯಲ್ಲಿ ಮೊದಲಿಗನಾಗಲು ಅರ್ಹನಾಗಿರುತ್ತಾನೆ. ಇಂತಹ ಮಹಾರಥನನ್ನು ಅರ್ಧರಥನೆಂದು ಹೇಳಿದ ಗಾಂಗೇಯನಿಗೆ ಕೋಪದಿಂದಲೇ ಅವನು ಹೀಗೆಂದು ಹೇಳಿದನು :

**ತ್ವಯಿ ಜೀವತಿ ಕೌರವ್ಯ ನಾಹಂ ಯೋತ್ಸ್ಯೇ ಕದಾಚನ ।**
**ತ್ವಯಾ ತು ಪಾಣ್ಡವೇಯೇಷು ನಿಹತೇಷು ಮಹಾಮೃಧೇ ।**
**ದುರ್ಯೋಧನಮನುಜ್ಞಾಪ್ಯ ವನಂ ಯಾಸ್ಯಾಮಿ ಕೌರವ ॥೩೯॥**

"ಕೌರವ್ಯನೇ! ನೀನು ಜೀವಿಸಿರುವವರೆಗೆ ನಾನು ಯುದ್ಧಮಾಡುವುದಿಲ್ಲ. ಒಂದು ವೇಳೆ ನೀನೇ ಪಾಂಡವರೆಲ್ಲರನ್ನೂ ಮಹಾಯುದ್ಧದಲ್ಲಿ ಸಂಹಾರಮಾಡಿಬಿಟ್ಟರೆ–ನಾನು ದುರ್ಯೋಧನನ ಅನುಮತಿಯನ್ನು ಪಡೆದು ಅರಣ್ಯಕ್ಕೆ ಹೊರಟುಹೋಗುತ್ತೇನೆ.

**ಪಾಣ್ಡವೈರ್ವಾ ಹತೇ ಭೀಷ್ಮೇ ತ್ವಯಿ ಸ್ವರ್ಗಮುಪೇಯುಷಿ ।**
**ಹನ್ತಾಸ್ಮ್ಯೇಕರಥೇನೈವ ಕೃತ್ಸ್ನಾನ್ಯಾನ್ಮನ್ಯಸೇ ರಥಾನ್ ॥೪೦॥**

ಅಥವಾ ನೀನೇ ಪಾಂಡವರಿಂದ ಹತನಾಗಿ ಸ್ವರ್ಗಕ್ಕೆ ಹೊರಟುಹೋದೆಯಾದರೆ, ನೀನೀಗ ಯಾರು-ಯಾರನ್ನು ರಥಿಗಳೆಂದು ಭಾವಿಸಿರುವೆಯೋ–ಅವರೆಲ್ಲರನ್ನೂ ಒಂದೇ ಒಂದು ರಥದ ಸಹಾಯದಿಂದ ನಾನು ಸಂಹಾರ ಮಾಡುತ್ತೇನೆ."

ಹೀಗೆಂದು ಹೇಳಿದ ಮಹಾಬಾಹುವಾದ ಕರ್ಣನು ನಿನ್ನ ಮಗನ ಸಮ್ಮತಿ

ಯನ್ನು ಪಡೆದು ಹತ್ತು ದಿವಸಗಳೂ ಯುದ್ಧದಲ್ಲಿ ಭಾಗವಹಿಸಲಿಲ್ಲ. ಸಮರ ವಿಕ್ರಾಂತನಾದ, ಅನಂತಪರಾಕ್ರಮಿಯಾದ ಭೀಷ್ಮನು ಯುದ್ಧಸಮಯದಲ್ಲಿ ಯುಧಿಷ್ಠಿರನ ಅಸಂಖ್ಯಾತಸೈನಿಕರನ್ನು ಸಂಹರಿಸಿದನು. ಮಹಾತೇಜಸ್ವಿಯಾದ, ಸತ್ಯಸಂಧನಾದ ಭೀಷ್ಮನು ಹತನಾಗಲಾಗಿ, ನದಿಯನ್ನು ದಾಟಲು ಇಚ್ಛಿಸುವ ಮನುಷ್ಯರು ದೋಣಿಯನ್ನು ಸ್ಮರಿಸಿಕೊಳ್ಳುವಂತೆ–ನಿನ್ನ ಮಕ್ಕಳು ಯುದ್ಧಸಾಗರವನ್ನು ದಾಟಲು ಕರ್ಣನನ್ನು ಸ್ಮರಿಸಿಕೊಂಡರು. ನಿನ್ನ ಕಡೆಯ ಸೈನಿಕರೂ, ನಿನ್ನ ಮಕ್ಕಳೂ ಮತ್ತು ಎಲ್ಲ ರಾಜರೂ ಒಟ್ಟಾಗಿ–"ಹಾ ಕರ್ಣ! ನಿನ್ನ ಪರಾಕ್ರಮವನ್ನು ತೋರಿಸಲು ಇದು ಸರಿಯಾದ ಕಾಲವಾಗಿದೆ"–ಎಂಬು ದಾಗಿ ಹೇಳಿಕೊಂಡು ವಿಲಪಿಸಿದರು. ಈ ರೀತಿಯಲ್ಲಿ ದುರ್ಯೋಧನನ ಸಲುವಾಗಿ ಪ್ರಾಣಬಿಡಲೂ ಸಿದ್ಧನಾಗಿದ್ದ ಸೂತಪುತ್ರನಾದ, ರಾಧೇಯನನ್ನು ಕುರಿತು ಮಹಾಬಲರಾದ ಯೋಧರು ಅಲ್ಲಲ್ಲಿ ಗುಂಪಾಗಿ ನಿಂತುಕೊಂಡು ಮಾತನಾಡಿಕೊಳ್ಳುತ್ತಿದ್ದರು. "ಕರ್ಣನು ಜಮದಗ್ನಿಯ ಮಗನಾದ ಪರಶು ರಾಮನಿಂದ ಅಸ್ತ್ರವಿದ್ಯೆಯನ್ನು ಕಲಿತವನು. ಅವನು ಶತ್ರುಗಳಿಂದ ತಡೆಯಲು ಅಸಾಧ್ಯವಾದ ಪೌರುಷವಿರುವವನು. ಆಪತ್ತಿನ ಸಮಯದಲ್ಲಿ ಮನುಷ್ಯನು ಬಂಧುಗಳನ್ನು ಸ್ಮರಿಸುವಂತೆ–ನಮ್ಮ ಮನಸ್ಸೂ ಸಹ ಕರ್ಣನನ್ನು ಅನುಸರಿಸಿ ಹೋಯಿತು. ಯಾವ ರೀತಿಯಲ್ಲಿ ಮಹಾವಿಷ್ಣುವು ದೇವತೆಗಳನ್ನು ಮಹಾಭಯದಿಂದ ಪಾರುಮಾಡುತ್ತಾನೆಯೋ–ಅದೇ ರೀತಿಯಲ್ಲಿ ಈಗ ಪ್ರಾಪ್ತವಾಗಿರುವ ಮಹಾಭಯದಿಂದ ನಮ್ಮನ್ನು ಕಾಪಾಡಲು ಕರ್ಣನು ನಿಶ್ಚಯವಾಗಿಯೂ ಸಮರ್ಥನಾಗಿರುತ್ತಾನೆ."

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

ಮಹಾರಾಜ! ಸಂಜಯನು ಕರ್ಣನನ್ನೇ ಪುನಃ ಪುನಃ ಹೊಗಳು ತ್ತಿರುವುದನ್ನು ಕೇಳಿ ಧೃತರಾಷ್ಟ್ರನು ವಿಷಸರ್ಪದಂತೆ ದೀರ್ಘವಾಗಿ ನಿಟ್ಟುಸಿರು ಬಿಡುತ್ತಾ ಹೇಳಿದನು :

"ಸಂಜಯ! ನೀನು ಹೇಳುತ್ತಿರುವುದು ಸರಿ. ನಿಮ್ಮ ಮನಸ್ಸು ವೈಕರ್ತ ನನ ಕಡೆಗೆ ಹೋಯಿತು. ನೀವೆಲ್ಲರೂ 'ಕರ್ಣ! ಕರ್ಣ!' ಎಂದು ಕೂಗಿ ಕೊಂಡಿರಿ. ಗೋಳಾಡಿದಿರಿ. ಎಲ್ಲವೂ ಸರಿಯೇ. ಈ ವಿಷಯವನ್ನೇ ನಾನು

ನಿನ್ನಿಂದ ಪುನಃ ಪುನಃ ಕೇಳುತ್ತಲೇ ಇದ್ದೇನೆ. ಆದರೆ ನಿಮಗಾಗಿ ಪ್ರಾಣಬಿಡಲು ಸಿದ್ಧನಾಗಿದ್ದ ಸೂತಪುತ್ರನಾದ ಆ ರಾಧೇಯನನ್ನು ನೀವೇನಾದರೂ ಕಂಡಿರಾ? ನಿಮ್ಮ ಗೋಳಾಟವನ್ನು ಕೇಳಿ ಅವನಲ್ಲಿಗೆ ಬಂದನೇ? ಸಂಭ್ರಾಂತರಾಗಿದ್ದ, ಆರ್ತರಾಗಿದ್ದ, ಭಯಗೊಂಡಿದ್ದ, ಅವನ ಅವಲಂಬನೆಯನ್ನೇ ನಿರೀಕ್ಷಿಸಿದ್ದ ನಿಮ್ಮ ಪ್ರಾರ್ಥನೆಯನ್ನು ಸತ್ಯಪರಾಕ್ರಮನಾದ ಕರ್ಣನು ನಿಷ್ಫಲಗೊಳಿಸಲಿಲ್ಲವಷ್ಟೆ? ಭೀಷ್ಮನ ಸಂಹಾರದಿಂದ ಕೌರವರ ಪಕ್ಷದಲ್ಲಿ ಉಂಟಾಗಿದ್ದ ಒಂದು ದೊಡ್ಡ ಕೊರತೆಯನ್ನು ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಕರ್ಣನು ತನ್ನ ಉಪಸ್ಥಿತಿಯಿಂದ ಹೋಗಲಾಡಿಸಿದನೇ? ಭೀಷ್ಮನ ನಿರ್ಗಮನದಿಂದಾದ ನಷ್ಟವನ್ನು ತುಂಬಿದನೇ? ಭೀಷ್ಮನ ನಿರ್ಗಮನದಿಂದಾದ ನಷ್ಟವನ್ನು ತುಂಬಿ ಕೊಡುತ್ತಾ ಶತ್ರುಗಳಿಗೆ ಭಯವನ್ನುಂಟುಮಾಡಿದನೇ? ಕರ್ಣನನ್ನು ಪುರುಷ ಸಿಂಹನೆಂದೇ ಪ್ರಪಂಚದ ಜನರೆಲ್ಲರೂ ಹೇಳುತ್ತಾರೆ. ಆರ್ತರಾಗಿದ್ದ, ಅದರ ಲ್ಲಿಯೂ ವಿಶೇಷವಾಗಿ 'ಕರ್ಣ! ಕರ್ಣ!' ಎಂದು ಕೂಗಿಕೊಂಡು ರೋದನ ಮಾಡುತ್ತಿದ್ದ ಬಂಧುಗಳ ರಕ್ಷಣೆಗಾಗಿ ತನ್ನ ಪ್ರಾಣಗಳನ್ನೇ ಮುಡುಪಾಗಿಟ್ಟು ಯುದ್ಧಕ್ಕೆ ಸಿದ್ಧನಾಗಿ ನನ್ನ ಮಕ್ಕಳಿಗೆ ಕ್ಷೇಮವನ್ನುಂಟುಮಾಡಿದನೇ? ನನ್ನ ಮಕ್ಕಳ ವಿಜಯದ ಆಶೆಯನ್ನೇನಾದರೂ ಸಫಲಗೊಳಿಸಿದನೇ?–ಈ ವಾರ್ತೆಯನ್ನು ಮುಂದುವರಿಸಿ ವಿಷಯವನ್ನು ವಿವರಿಸಿ ಹೇಳು, ಸಂಜಯ!"

೧ನೆಯ ಅಧ್ಯಾಯವು ಮುಗಿಯಿತು.

೨ನೆಯ ಅಧ್ಯಾಯ ದ್ರೋಣಾಭಿಷೇಕಪರ್ವ (ಮುಂದುವರಿದಿದೆ.)

## ಕರ್ಣನ ರಣಯಾತ್ರೆ

"ಮಹಾರಾಜ! ಎಲ್ಲ ವಿಷಯಗಳನ್ನೂ ವಿಶದವಾಗಿಯೇ ಹೇಳುತ್ತೇನೆ. ಸಾವಧಾನಚಿತ್ತನಾಗಿ ಕೇಳು :

ಭೀಷ್ಮನ ಮರಣವಾರ್ತೆಯನ್ನು ಕೇಳಿ ವ್ಯಸನಗೊಂಡ ಅಧಿರಥನ ಮಗನಾದ ಕರ್ಣನು–ಅಗಾಧವಾದ ಸಮುದ್ರದ ಮಧ್ಯದಲ್ಲಿ ಭಿನ್ನವಾಗಿ ಹೋದ ನೌಕೆಯಂತಿದ್ದ–ಕುರುಗಳ ಸೈನ್ಯವನ್ನು ವ್ಯಸನದಿಂದ ಪಾರುಮಾಡಬೇಕೆಂಬ ಆಶಯದಿಂದ ಕಷ್ಟಸಮಯದಲ್ಲಿ ಸಹಾಯವೆಸಗಲು ಬರುವ ಸಹೋದರನಂತೆ–ರಣಾಂಗಣಕ್ಕೆ ಬಂದನು. ಪುರುಷೇಂದ್ರನಾದ, ತನ್ನ ಪ್ರತಿಜ್ಞೆಯಿಂದ ಎಂದೂ ಚ್ಯುತನಾಗದಿದ್ದ, ಮಹಾರಥನಾದ ಶಾಂತನವನು ರಥದಿಂದ ಕೆಳಕ್ಕೆ

ಬೀಳಿಸಲ್ಪಟ್ಟನೆಂಬುದನ್ನು ಕೇಳಿ, ಶತ್ರುಕರ್ಷಣನಾದ, ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಕರ್ಣನು ಒಡನೆಯೇ ದುರ್ಯೋಧನನ ಬಳಿಗೆ ಹೋದನು.

ರಥಸತ್ತಮನಾದ ಭೀಷ್ಮನು ಶತ್ರುಗಳಿಂದ ಹತನಾಗಲಾಗಿ, ಕರ್ಣನು ಸಮುದ್ರದಮಧ್ಯದಲ್ಲಿ ಮುಳುಗುತ್ತಿರುವ ನೌಕೆಯೋಪಾದಿಯಲ್ಲಿದ್ದ ನಿನ್ನ ಮಗನ ಸೈನ್ಯವನ್ನು ಸಂಕಟದಿಂದ ಪಾರುಮಾಡುವ ಆಶಯದಿಂದ–ಮಕ್ಕಳು ಕಷ್ಟದಲ್ಲಿರುವಾಗ ತಂದೆಯಾದವನು ಅವರ ಕಷ್ಟವನ್ನು ಪರಿಹರಿಸಲು ಅವ ಸರದಿಂದ ಧಾವಿಸುವಂತೆ-ಬಹಳ ವೇಗವಾಗಿ ದುರ್ಯೋಧನನ ಸಮೀಪಕ್ಕೆ ಹೋದನು. ದುರ್ಯೋಧನನೊಡನೆ ಈ ಮಾತುಗಳನ್ನು ಹೇಳಿದನು :

ಯಸ್ಮಿನ್ಧೃತಿರ್ಬುದ್ಧಿ ಪರಾಕ್ರಮೌಜಃ
ಸತ್ಯಂ ಸ್ಮೃತಿರ್ವೀರಗುಣಾಶ್ಚ ಸರ್ವೇ ।
ಅಸ್ತ್ರಾಣಿ ದಿವ್ಯಾನ್ಯಥ ಸಂನತಿರ್ಹ್ರೀಃ
ಪ್ರಿಯಾ ಚ ವಾಗನಸೂಯಾ ಚ ಭೀಷ್ಮೇ ॥೪॥

ಸದಾ ಕೃತಜ್ಞೇ ದ್ವಿಜಶತ್ರುಘಾತಕೇ
ಸನಾತನಂ ಚನ್ದ್ರಮಸೀವ ಲಕ್ಷ್ಮ ।
ಸ ಚೇತ್ಪ್ರಶಾನ್ತಃ ಪರವೀರಹನ್ತಾ
ಮನ್ಯೇ ಹತಾನೇವ ಚ ಸರ್ವವೀರಾನ್ ॥೫॥

"ಚಂದ್ರನಲ್ಲಿ ಮೃಗಲಾಂಛನವು ಶಾಶ್ವತವಾಗಿರುವಂತೆ–ಯಾವನಲ್ಲಿ ಧೈರ್ಯ, ಬುದ್ಧಿ, ಪರಾಕ್ರಮ, ಓಜಸ್ಸು, ಸತ್ಯ, ಸ್ಮೃತಿ, ವಿನಯ, ಲಜ್ಜೆ, ಪ್ರಿಯವಾದ ಮಾತು, ಅನಸೂಯತೆ ಮತ್ತು ಎಲ್ಲ ವೀರಗುಣಗಳೂ ಶಾಶ್ವತ ವಾಗಿದ್ದುವೋ, ಸಕಲದಿವ್ಯಾಸ್ತ್ರಗಳೂ ಇದ್ದುವೋ, ಯಾವನು ಯಾವಾಗಲೂ ತನಗೆ ಮಾಡಿದ ಕಿಂಚಿದುಪಕಾರವನ್ನೂ ಸ್ಮರಿಸಿಕೊಳ್ಳುತ್ತಿದ್ದನೋ, ಬ್ರಾಹ್ಮಣರ ಶತ್ರುಗಳಿಗೆ ಮೃತ್ಯುಪ್ರಾಯನಾಗಿದ್ದನೋ, ಶತ್ರುವೀರಹಂತಕನಾಗಿದ್ದನೋ– ಅಂತಹ ಮಹಾನುಭಾವನಾದ ಭೀಷ್ಮನೇ ಹತನಾದನೆಂದಮೇಲೆ ನಮ್ಮ ಕಡೆಯ ಎಲ್ಲ ವೀರರೂ ಹತರಾಗಿ ಹೋದರೆಂದೇ ನಾನು ಭಾವಿಸುತ್ತೇನೆ.

ನೇಹ ಧ್ರುವಂ ಕಿಂಚನ ಜಾತು ವಿದ್ಯತೇ
ಲೋಕೇ ಹ್ಯಸ್ಮಿನ್ಕರ್ಮಣೋಽನಿತ್ಯಯೋಗಾತ್ ।

ಸೂರ್ಯೋದಯೇ ಕೋ ಹಿ ವಿಮುಕ್ತಸಂಶಯೋ
ಭಾವಂ ಕುರ್ವೀತಾರ್ಯಮಹಾವ್ರತೇ ಹತೇ ॥೯॥

ಈ ಪ್ರಪಂಚದಲ್ಲಿ ಕರ್ಮಗಳು ಅನಿತ್ಯಸಂಬಂಧವನ್ನು ಹೊಂದಿರುವುದರಿಂದ ಯಾವ ವಸ್ತುವೂ ಶಾಶ್ವತವಾಗಿ ಯಾವಾಗಲೂ ಉಳಿಯುವುದಿಲ್ಲ. ಮೃತ್ಯುವನ್ನು ಜಯಿಸಿದ್ದ ಅಥವಾ ಸ್ವೇಚ್ಛಾಮರಣಿಯಾಗಿದ್ದ, ನೈಷ್ಠಿಕಬ್ರಹ್ಮಚರ್ಯವೆಂಬ ಮಹಾವ್ರತದಲ್ಲಿ ನಿಷ್ಠನಾಗಿದ್ದ ಭೀಷ್ಮನೇ ಹತನಾದನೆಂದ ಮೇಲೆ ನಾಳೆ ಮುಂಜಾನೆ ಸೂರ್ಯೋದಯವಾಗುತ್ತದೆಯೋ–ಇಲ್ಲವೋ? ಎಂಬುದರಲ್ಲಿ ಯಾರಿಗೆ ತಾನೇ ಸಂಶಯವಾಗುವುದಿಲ್ಲ? (ಮಹಾವ್ರತನಿಷ್ಠನಾದ ಭೀಷ್ಮನೇ ಹೋದಮೇಲೆ ನಾವಾದರೂ ನಾಳೆ ಸೂರ್ಯೋದಯದವರೆಗೂ ಬದುಕಿರುವೆವೆಂದು ನಿಃಸಂಶಯವಾಗಿ ಹೇಗೆತಾನೇ ಹೇಳಲು ಸಾಧ್ಯವಾಗುತ್ತದೆ?)

ವಸುಪ್ರಭಾವೇ ವಸುವೀರ್ಯಸಮ್ಭವೇ
ಗತೇ ವಸೂನೇವ ವಸುನ್ಧರಾಧಿಪೇ ।
ವಸೂನಿ ಪುತ್ರಾಂಶ್ಚ ವಸುನ್ಧರಾಂ ತಥಾ
ಕುರೂಂಶ್ಚ ಶೋಚಧ್ವಮಿಮಾಂ ಚ ವಾಹಿನೀಮ್ ॥೭॥

ಭೀಷ್ಮನು ವಸುಗಳಂತೆ ಪ್ರಭಾವಶಾಲಿಯಾಗಿದ್ದನು. ವಸುಗಳಿಗೆ ಸಮಾನನೆನಿಸಿದ್ದ ಶಂತನುವಿನಿಂದ ಜನ್ಮತಾಳಿದವನು. ವಸುಂಧರೆಗೆ ಸ್ವಾಮಿಯಾಗಿದ್ದ ಅವನು ಪುನಃ ವಸುಗಳನ್ನೇ ಸೇರಿಬಿಟ್ಟನು. ವಸುಗಳ ಸ್ವರೂಪನಾಗಿದ್ದ ಭೀಷ್ಮನು ಹೊರಟುಹೋಗಲಾಗಿ ಅವನು ಬಿಟ್ಟುಹೋಗಿರುವ ಐಶ್ವರ್ಯ, ಪುತ್ರರು, ವಸುಂಧರೆ, ಕುರುಗಳು ಮತ್ತು ಈ ಸೈನ್ಯ–ಇವುಗಳೆಲ್ಲದರ ಭವಿಷ್ಯವನ್ನೂ ಕುರಿತು ಶೋಕಿಸಬೇಕಾಗಿದೆ. ಇವರೆಲ್ಲರೂ ಶೋಚನೀಯಸ್ಥಿತಿಯನ್ನು ಹೊಂದಿರುವರು.”

ಮಹಾರಾಜ! ಮಹಾಪ್ರಭುವಾದ, ವರದನಾದ, ಲೋಕೇಶ್ವರನಾದ, ನಿಯಾಮಕನಾದ, ಅಮಿತೌಜಸ್ಕನಾದ, ಭೀಷ್ಮನು ಸತ್ತುಹೋಗಲಾಗಿ, ಭರತಕುಲದ ರಾಜಕುಮಾರರು ಪರಾಜಿತರಾಗಲಾಗಿ, ಕರ್ಣನು ಬಹುದುಃಖಿತನಾಗಿ ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಧಾರಾಕಾರವಾಗಿ ಕಣ್ಣೀರು ಸುರಿಸುತ್ತಿದ್ದನು. ರಾಧೇಯನ ಮಾತುಗಳನ್ನು ಕೇಳಿ ನಿನ್ನ ಮಕ್ಕಳೂ ಮತ್ತು ಸೈನಿಕರೂ ಪರಸ್ಪರವಾಗಿ ತಮ್ಮ ಆತಂಕವನ್ನು ಹೇಳಿಕೊಂಡು ಕೂಗುತ್ತಾ ಬಿಕ್ಕಿ

ಬಿಕ್ಕಿ ಅಳುತ್ತಾ ಕಣ್ಣೀರು ಸುರಿಸಿದರು. ಪುನಃ ಮಹಾಯುದ್ಧವು ಪ್ರಾರಂಭವಾಗುವುದರಲ್ಲಿರಲಾಗಿ, ಪಾಂಡವರ ಕಡೆಯ ರಾಜರು-ಕೌರವರ ಕಡೆಯ ಸೈನಿಕರನ್ನು ಧ್ವಂಸಮಾಡುವುದರಲ್ಲಿರಲಾಗಿ, ಎಲ್ಲ ಮಹಾರಥರಿಗೂ ಶ್ರೇಷ್ಠನಾದ ಕರ್ಣನು ರಥಿಶ್ರೇಷ್ಠರನ್ನು ಕುರಿತು ಹರ್ಷಕರವಾದ ಈ ಮಾತುಗಳನ್ನು ಹೇಳಿದನು :



ಜಗತ್ಯನಿತ್ಯೇ ಸತತಂ ಪ್ರಧಾವತಿ
ಪ್ರಚಿನ್ತಯನ್ನಸ್ಥಿರಮದ್ಯ ಲಕ್ಷಯೇ ।
ಭವತ್ಸುತಿಷ್ಠತ್ಸ್ವಿಹ ಪಾತಿತೋ ಮೃಧೇ
ಗಿರಿಪ್ರಕಾಶಃ ಕುರುಪುಙ್ಗವಃ ಕಥಮ್ ॥೧೧॥

“ಸತತವಾಗಿ ಮೃತ್ಯುವಿನ ಕಡೆಗೇ ಧಾವಿಸುತ್ತಿರುವ, ಅನಿತ್ಯವಾದ,

ಅಶಾಶ್ವತವಾದ ಈ ಜಗತ್ತಿನಲ್ಲಿ ನಾನೆಷ್ಟೇ ಗಾಢವಾಗಿ ಯೋಚಿಸಿದರೂ ಈಗ ಅಸ್ಥಿರತೆಯನ್ನೇ ಕಾಣುತ್ತಿದ್ದೇನೆ. ನೀವೆಲ್ಲರೂ ರಕ್ಷಕರಾಗಿರಲಾಗಿ ಪರ್ವತಕ್ಕೆ ಸಮಾನವಾಗಿ ಅಚಲನಾಗಿದ್ದ ಕುರುಪುಂಗವನಾದ ಭೀಷ್ಮನು ಯುದ್ಧದಲ್ಲಿ ಮಡಿದುದು ಹೇಗೆ? (ಈ ವಿಷಯವನ್ನು ಯೋಚಿಸುತ್ತಿದ್ದಂತೆಲ್ಲಾ ನನಗೆ ಜಗತ್ತಿನಲ್ಲಿ ಅಸ್ಥಿರತೆಯೇ ಸ್ಪಷ್ಟವಾಗಿ ಕಾಣುತ್ತದೆ.)

ನಿಪಾತಿತೇ ಶಾನ್ತನವೇ ಮಹಾರಥೇ
ದಿವಾಕರೇ ಭೂತಲಮಾಸ್ಥಿತೇ ಯಥಾ ।
ನ ಪಾರ್ಥಿವಾಃ ಸೋಢುಮಲಂ ಧನಂಜಯಂ
ಗಿರಿಪ್ರವೋಢಾರಮಿವಾನಿಲಂ ದ್ರುಮಾಃ ॥೧೨॥

ಭೂಪಾಲರೇ! ಭೀಷ್ಮನು ಯುದ್ಧದಲ್ಲಿ ಕೆಳಕ್ಕೆ ಬೀಳಿಸಲ್ಪಟ್ಟನೆಂಬುದು– ಸೂರ್ಯನು ತನ್ನ ಮಂಡಲದಿಂದ ಕಳಚಿ ಭೂಮಿಯ ಮೇಲೆ ಬಿದ್ದಂತೆಯೇ ಸರಿ. ಪರ್ವತಗಳನ್ನೇ ಹಾರಿಸಿಕೊಂಡು ಹೋಗುವ ಚಂಡಮಾರುತವನ್ನು ಸಾಧಾರಣವೃಕ್ಷಗಳು ತಡೆಯಲು ಸಾಧ್ಯವಾಗದಂತೆ–ಭೀಷ್ಮನನ್ನೇ ಕೆಳಕ್ಕುರುಳಿಸಿದ ಧನಂಜಯನನ್ನು ಎದುರಿಸಲು ಈ ಭೂಪಾಲರು ಸಮರ್ಥರಲ್ಲ.

ಕೌರವಸೇನೆಯು ಈಗ ಪ್ರಧಾನದಂಡನಾಯಕನನ್ನು ಕಳೆದುಕೊಂಡು ಬಿಟ್ಟಿದೆ. ಆದುದರಿಂದ ಇದು ಈಗ ಅತ್ಯಂತವಾದ ಕಷ್ಟಕ್ಕೆ ಸಿಲುಕಿದೆ. ಶತ್ರುಗಳಿಂದ ಅನವರತವಾಗಿ ಪೀಡಿಸಲ್ಪಡುತ್ತಿದ್ದು ತನ್ನ ಉತ್ಸಾಹವನ್ನು ಕಳೆದುಕೊಂಡುಬಿಟ್ಟಿದೆ. ಅನಾಥವಾಗಿದೆ. ಆದುದರಿಂದ ಮಹಾತ್ಮನಾದ ಭೀಷ್ಮನು ಯಾವ ರೀತಿಯಲ್ಲಿ ಈ ಕೌರವಸೇನೆಯನ್ನು ರಕ್ಷಿಸುತ್ತಿದ್ದನೋ ಅದೇ ರೀತಿಯಲ್ಲಿ ಇಂದು ಇದನ್ನು ರಕ್ಷಿಸಬೇಕಾದುದು ನನ್ನ ಕರ್ತವ್ಯವಾಗಿದೆ.

ಈಗ ನಾನೇನೋ ಈ ಕೌರವಸೇನೆಯ ರಕ್ಷಣಾಭಾರವನ್ನು ವಹಿಸಿಕೊಂಡುಬಿಟ್ಟಿದ್ದೇನೆ. ಜಗತ್ತು ಅನಿತ್ಯವೆಂಬುದನ್ನು ನಾನು ಕಾಣುತ್ತಿರುವಾಗ, ಯುದ್ಧಕುಶಲನಾದ ಭೀಷ್ಮನೂ ಸಹ ಈ ಯುದ್ಧದಲ್ಲಿ ಹತನಾಗಿರುವಾಗ ಇಂತಹ ಸಮಯದಲ್ಲಿ ನಾನೇಕೆ ಭಯಪಡಬೇಕು? ನಾನಾದರೋ ನೇರವಾಗಿ ಹೋಗುವ ನನ್ನ ಬಾಣಗಳಿಂದ ಕುರುವೃಷಭರಾದ ಪಾಂಡವರನ್ನು ಯಮನ ಪಟ್ಟಣಕ್ಕೆ ಕಳುಹಿಸುತ್ತಾ ರಣಾಂಗಣದಲ್ಲಿ ಸಂಚರಿಸುತ್ತೇನೆ. ಜಗತ್ತಿನಲ್ಲಿ ನನ್ನ

ಯಶಸ್ಸನ್ನು ಹೆಚ್ಚಿಸಿಕೊಳ್ಳುತ್ತೇನೆ ಅಥವಾ ಶತ್ರುಗಳಿಂದ ಹತನಾಗಿ ಯುದ್ಧಭೂಮಿಯಲ್ಲಿ ಮಲಗುತ್ತೇನೆ.

**ಯುಧಿಷ್ಠಿರೋ ಧೃತಿಮತಿಸತ್ಯಸತ್ತ್ವವಾ-**
**ನ್ವೃಕೋದರೋ ಗಜಶತತುಲ್ಯವಿಕ್ರಮಃ ।**
**ತಥಾರ್ಜುನಸ್ತ್ರಿದಶವರಾತ್ಮಜೋ ಯುವಾ**
**ನ ತದ್ಬಲಂ ಸುಜಯಮಿಹಾಮರೈರಪಿ ॥೧೬॥**

ಯುಧಿಷ್ಠಿರನು ಧೈರ್ಯಶಾಲೀ, ಬುದ್ಧಿವಂತ, ಸತ್ಯನಿಷ್ಠ ಮತ್ತು ಸತ್ತ್ವಗುಣಸಂಪನ್ನ. ಭೀಮಸೇನನು ನೂರು ಆನೆಗಳ ಬಲಕ್ಕೆ ಸಮಾನವಾದ ಬಲವುಳ್ಳವನು. ಅರ್ಜುನನಾದರೋ ಸಾಕ್ಷಾತ್ ದೇವೇಂದ್ರನ ಮಗನೇ ಆಗಿದ್ದಾನೆ. ಮೇಲಾಗಿ ಯುವಕನು. ಇಂತಹವರ ಸೈನ್ಯವನ್ನು ದೇವತೆಗಳೂ ಕೂಡ ಸುಲಭವಾಗಿ ಜಯಿಸಲಾರರು.

**ಯಮೌ ರಣೇ ಯತ್ರ ಯಮೋಪಮೌ ಬಲೇ**
**ಸಸಾತ್ಯಕಿರ್ಯತ್ರ ಚ ದೇವಕೀಸುತಃ ।**
**ನ ತದ್ಬಲಂ ಕಾಪುರುಷೋಽಭ್ಯುಪೇಯಿವಾ-**
**ನ್ನಿವರ್ತತೇ ಮೃತ್ಯುಮುಖಾನ್ನ ಚಾಸುಭೃತ್ ॥೧೭॥**

ಯಾವ ಸೈನ್ಯದಲ್ಲಿ ಯಮನಿಗೆ ಸಮಾನವಾದ ಬಲವುಳ್ಳ ನಕುಲ-ಸಹದೇವರಿರುತ್ತಾರೆಯೋ ಮತ್ತು ಸಾತ್ಯಕಿಯೊಡನೆ ದೇವಕಿಯ ಮಗನಾದ ಶ್ರೀಕೃಷ್ಣನಿರುತ್ತಾನೆಯೋ–ಅಂತಹ ಸೈನ್ಯವ್ಯೂಹವನ್ನು ಕಾಪುರುಷನು ಖಂಡಿತವಾಗಿಯೂ ಪ್ರವೇಶಿಸಲಾರನು. ಒಂದು ವೇಳೆ ಪ್ರವೇಶಿಸಿದರೂ ಮೃತ್ಯುಮುಖದಂತಿರುವ ಆ ಸೇನಾಮುಖದಿಂದ ಪ್ರಾಣವುಳಿಸಿಕೊಂಡು ಹಿಂದಿರುಗಲಾರನು.

**ತಪೋಽಭ್ಯುದೀರ್ಣಂ ತಪಸೈವ ಬಾಧ್ಯತೇ**
**ಬಲಂ ಬಲೇನೈವ ತಥಾ ಮನಸ್ವಿಭಿಃ ।**
**ಮನಶ್ಚ ಮೇ ಶತ್ರುನಿವಾರಣೇ ಧ್ರುವಂ**
**ಸ್ವರಕ್ಷಣೇ ಚಾಚಲವದ್ವ್ಯವಸ್ಥಿತಮ್ ॥೧೮॥**

ಬುದ್ಧಿವಂತರಾದವರು ತಮ್ಮ ಜೀವನದಲ್ಲಿ ಬರುವ ಅನೇಕರೀತಿಯ ಸಂತಾಪಗಳನ್ನು (ಕಷ್ಟಗಳನ್ನು), ಕಷ್ಟಸಾಧ್ಯವಾದ ಕೃಚ್ಛ್ರ-ಚಾಂದ್ರಾಯಣಾದಿವ್ರತಗಳನ್ನು ಮಾಡಿಯೇ ಹೋಗಲಾಡಿಸಿಕೊಳ್ಳುತ್ತಾರೆ. (ತಪಸ್ಸನ್ನು

ತಪಸ್ಸಿನಿಂದಲೇ ಎದುರಿಸಬೇಕು.) ಬಲಿಷ್ಠರನ್ನು ಬಲದಿಂದಲೇ ಎದುರಿಸುತ್ತಾರೆ. (ಬಲವನ್ನು ಬಲದಿಂದಲೇ ಎದುರಿಸಬೇಕು.) ಆದುದರಿಂದ ನಾನೂ ಸಹ ಬಲಿಷ್ಠರಾದ ಶತ್ರುಗಳನ್ನು ಬಲದಿಂದಲೇ ಎದುರಿಸಲು ನಿಶ್ಚಯಿಸಿದ್ದೇನೆ. ನನ್ನ ರಕ್ಷಣೆಯ ವಿಷಯದಲ್ಲಿಯೂ ಪರ್ವತದಂತೆ ಅವಿಚಲಿತವಾದ ಭಾವದಿಂದಲೇ ಇದ್ದುಬಿಟ್ಟಿದ್ದೇನೆ.''

ಮಹಾರಾಜ! ಕರ್ಣನು ಕುರುರಾಜರಿಗೆ ಹೀಗೆ ಹೇಳಿದನಂತರ ತನ್ನ ಸೂತನನ್ನು ಕುರಿತು ಹೇಳಿದನು : "ಸೂತ! ನಾನೀಗಲೇ ಯುದ್ಧಕ್ಕೆ ಹೋಗಿ ಶತ್ರುಗಳ ಪ್ರಭಾವವನ್ನು ಕುಗ್ಗಿಸುತ್ತೇನೆ ಮತ್ತು ಅವರನ್ನಿಂದು ಜಯಿಸುತ್ತೇನೆ.

**ಮಿತ್ರದ್ರೋಹೋ ಮರ್ಷಣೀಯೋ ನ ಮೇಽಯಂ**
**ಭಗ್ನೇ ಸೈನ್ಯೇ ಯಃ ಸಮೇಯಾತ್ಸ ಮಿತ್ರಮ್ ॥೧೯॥**

ಮಿತ್ರನಿಗೆ ದ್ರೋಹವನ್ನೆಸಗುವುದು ನನಗೆ ಸಹ್ಯವಾಗುವುದಿಲ್ಲ. ಸೈನ್ಯವು ನಾಯಕನಿಲ್ಲದೇ ಭಗ್ನವಾಗಿ ಹೋಗಿರುವ ಕಾಲದಲ್ಲಿ ಯಾವನು ಹೋಗಿ ಸೈನ್ಯವನ್ನು ವ್ಯವಸ್ಥೆಗೊಳಿಸುತ್ತಾನೆಯೋ ಅವನೇ ಮಿತ್ರನು.

**ಕರ್ತಾಸ್ಮ್ಯೇತತ್ಸತ್ಪುರುಷಾರ್ಯಕರ್ಮ**
**ತ್ಯಕ್ತ್ವಾ ಪ್ರಾಣಾನನುಯಾಸ್ಯಾಮಿ ಭೀಷ್ಮಮ್ ।**
**ಸರ್ವಾನ್ಸಂಖ್ಯೇ ಶತ್ರುಸಂಘಾನ್ಹನಿಷ್ಯೇ**
**ಹತಸ್ತೈರ್ವಾ ವೀರಲೋಕಂ ಪ್ರಪತ್ಸ್ಯೇ ॥೨೦॥**

ಸತ್ಪುರುಷರು ಆಚರಿಸಲು ಯೋಗ್ಯವಾದ ಈ ಶ್ರೇಷ್ಠಕಾರ್ಯವನ್ನು ನಾನು ಮಾಡುತ್ತೇನೆ. ಭೀಷ್ಮನಂತೆಯೇ ನಾನೂ ಸಹ ಶತ್ರುಗಳೊಡನೆ ಯುದ್ಧಮಾಡುತ್ತಿದ್ದು ಪ್ರಾಣತೊರೆದು (ಪ್ರಾಣಗಳ ಮೇಲಿನ ಆಸೆಯನ್ನು ಬಿಟ್ಟು) ಭೀಷ್ಮನನ್ನೇ ಅನುಸರಿಸಿ ಹೋಗುತ್ತೇನೆ. ಯುದ್ಧದಲ್ಲಿ ಶತ್ರುಗಳ ಸಮೂಹವನ್ನು ಸಂಪೂರ್ಣವಾಗಿ ವಿನಾಶಗೊಳಿಸುತ್ತೇನೆ ಅಥವಾ ಅವರಿಂದ ಹತನಾಗಿ ವೀರಲೋಕವನ್ನಾದರೂ ಸೇರುತ್ತೇನೆ.

ಸೂತ! ಭೀಷ್ಮನ ಅವಸಾನವಾದನಂತರ ದುರ್ಯೋಧನನ ಪೌರುಷವು ಸಂಪೂರ್ಣವಾಗಿ ಉಡುಗಿಹೋಗಿದೆ. ಅವನ ಕಡೆಯ ಹೆಂಗಸರು, ಮಕ್ಕಳು, ಬಂಧು-ಮಿತ್ರರು ಎಲ್ಲರೂ 'ತ್ರಾಹಿ-ತ್ರಾಹಿ' ಎಂದು ಮೊರೆಯಿಡುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ನನ್ನ ಕರ್ತವ್ಯವೇನೆಂಬುದನ್ನು ನಾನು

ತಿಳಿದವನಾಗಿದ್ದೇನೆ. ಈ ಕಾರಣದಿಂದಲೇ ನಾನು ದುರ್ಯೋಧನನ ಶತ್ರುಗಳನ್ನು ಈಗಲೇ ಜಯಿಸುತ್ತೇನೆ. ಘೋರರೂಪವಾದ ಈ ಮಹಾಯುದ್ಧದಲ್ಲಿ ಕೌರವರನ್ನು ರಕ್ಷಿಸುವ ಇಚ್ಛೆಯಿಂದಲೂ, ಪಾಂಡವರನ್ನು ಜಯಿಸುವ ಇಚ್ಛೆಯಿಂದಲೂ ನನ್ನ ಪ್ರಾಣಗಳನ್ನೇ ಒತ್ತೆಯಾಗಿಟ್ಟು ಯುದ್ಧಮಾಡುತ್ತಾ ಎಲ್ಲ ಶತ್ರುಗಳನ್ನೂ ಸಂಹರಿಸಿ ದುರ್ಯೋಧನನಿಗೆ ಈ ಅಖಂಡಸಾಮ್ರಾಜ್ಯವನ್ನೂ ಒಪ್ಪಿಸಿಬಿಡುತ್ತೇನೆ. ಸೂತ! ಮಣಿರತ್ನಗಳಿಂದ ಪ್ರಕಾಶಮಾನವಾಗಿರುವ, ಶುಭ್ರವಾಗಿರುವ, ಸುವರ್ಣಮಯವಾಗಿರುವ, ವಿಚಿತ್ರವಾಗಿರುವ ಕವಚವನ್ನು ನನಗೆ ತೊಡಿಸು. ಸೂರ್ಯನ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿರುವ ಕಿರೀಟವನ್ನು ತಲೆಯ ಮೇಲಿಡು. ಅಗ್ನಿ, ವಿಷ ಮತ್ತು ಸರ್ಪಗಳಿಗೆ ಸಮಾನವಾದ ಬಾಣಗಳನ್ನೂ–ಧನುಸ್ಸನ್ನೂ ತೆಗೆದುಕೊಂಡು ಬಾ. ಸೇವಕರು ಬಾಣಗಳಿಂದ ಪೂರ್ಣವಾಗಿರುವ ಹದಿನಾರು ಬತ್ತಳಿಕೆಗಳನ್ನು ಸಿದ್ಧಗೊಳಿಸಲಿ. ದಿವ್ಯವಾದ ಧನುಸ್ಸುಗಳನ್ನೂ, ಕತ್ತಿ-ಗುರಾಣಿಗಳನ್ನೂ, ಶಕ್ತ್ಯಾಯುಧಗಳನ್ನೂ, ಭಾರವಾದ ಗದೆಗಳನ್ನೂ, ಸುವರ್ಣಖಚಿತವಾದ ಮತ್ತು ಚಿತ್ರಿತವಾದ ರಂಧ್ರದಿಂದ ಕೂಡಿರುವ ಶಂಖವನ್ನೂ ತೆಗೆದುಕೊಂಡು ಬಂದು ರಥದಲ್ಲಿಡಲಿ. ಆನೆಗೆ ಕಟ್ಟುವ ಸುವರ್ಣಮಯವಾದ ಮತ್ತು ವಿಚಿತ್ರವಾದ ಸರಪಣಿಯನ್ನೂ ಮತ್ತು ಜಯಪ್ರಾಪಕವಾದ ಕಮಲದ ಚಿಹ್ನೆಯಿರುವ ದಿವ್ಯವಾದ ಧ್ವಜವನ್ನೂ ನವಿರಾದ ಮತ್ತು ಸುಂದರವಾದ ಬಟ್ಟೆಗಳಿಂದ ಒರೆಸಿ ತೆಗೆದುಕೊಂಡು ಬರಲಿ. ಮಂಗಳಕರವಾದ ಅರಳಿನೊಡನೆ ಚೆನ್ನಾಗಿ ಕಟ್ಟಿರುವ ಮತ್ತು ಚಿತ್ರ-ವಿಚಿತ್ರವಾಗಿರುವ ಪುಷ್ಪಮಾಲಿಕೆಯನ್ನು ನಮ್ಮ ಸೇವಕರು ತರಲಿ.

ಸೂತ! ಶೀಘ್ರಗಾಮಿಗಳಾದ, ಬಿಳಿಯ ಮೋಡದಂತೆ ಪ್ರಕಾಶಮಾನವಾದ, ಪುಷ್ಟವಾದ, ಮಂತ್ರಪೂತವಾದ ನೀರಿನಿಂದ ಸ್ನಾನಮಾಡಿರುವ, ಪುಟಕ್ಕೆ ಹಾಕಿದ ಚಿನ್ನದ ಆಭರಣಗಳಿಂದ ಸಮಲಂಕೃತವಾದ, ಶ್ರೇಷ್ಠವಾದ ಕುದುರೆಗಳನ್ನು ಅತಿಶೀಘ್ರವಾಗಿ ಸಿದ್ಧಗೊಳಿಸು. ಸುವರ್ಣಮಾಲೆಗಳಿಂದ ಅಲಂಕೃತವಾದ, ಸೂರ್ಯ-ಚಂದ್ರರ ಪ್ರಕಾಶವುಳ್ಳ ರತ್ನಗಳಿಂದ ಚಿತ್ರಿತವಾದ, ಯುದ್ಧೋಪಯೋಗಿಗಳಾದ ಸಾಮಗ್ರಿಗಳಿಂದ ಸಂಪನ್ನವಾದ, ಮೇಲೆ ಹೇಳಿದ ಲಕ್ಷಣಗಳಿರುವ ಕುದುರೆಗಳಿಂದ ಯುಕ್ತವಾದ ಶ್ರೇಷ್ಠವಾದ ರಥವೊಂದನ್ನು ಶೀಘ್ರವಾಗಿ ಸಿದ್ಧಗೊಳಿಸು. ವೇಗಯುಕ್ತವಾದ ಮತ್ತು ಚಿತ್ರಿತವಾದ ಧನುಸ್ಸು

ಗಳನ್ನೂ ಉತ್ತಮವಾದ ( ಗಟ್ಟಿಯಾದ ) ಶಿಂಜಿನಿಗಳನ್ನೂ, ಕವಚಗಳನ್ನೂ, ಬಾಣಗಳಿಂದ ಪೂರ್ಣವಾದ ವಿಶಾಲವಾದ ಬತ್ತಳಿಕೆಗಳನ್ನೂ, ಶರೀರದ ಆವರಣಗಳನ್ನೂ ಕೂಡಲೇ ಸಿದ್ಧಗೊಳಿಸು. ರಣಯಾತ್ರೆಗೆ ಅವಶ್ಯವಾದ ಎಲ್ಲ ಸಾಮಗ್ರಿಗಳನ್ನೂ ತನ್ನಿರಿ. ಮೊಸರಿನಿಂದ ತುಂಬಿದ ಕಂಚಿನ ಮತ್ತು ಚಿನ್ನದ ಪಾತ್ರೆಗಳನ್ನು ತನ್ನಿರಿ. ವಿಜಯಮಾಲೆಯನ್ನು ತಂದು ನನ್ನ ಕುತ್ತಿಗೆಗೆ ಹಾಕಿರಿ. ನನ್ನ ವಿಜಯಕ್ಕಾಗಿ ಭೇರಿ–ಮೊದಲಾದ ಜಯಘೋಷವಾದ್ಯಗಳು ಬಾರಿಸಲ್ಪಡಲಿ. ಇವೆಲ್ಲವನ್ನೂ ಸಜ್ಜುಗೊಳಿಸಿದನಂತರ ದಿವ್ಯರಥವನ್ನು ಕಿರೀಟೀ, ವೃಕೋದರ, ಯುಧಿಷ್ಠಿರ ಮತ್ತು ನಕುಲ-ಸಹದೇವರು ಇರುವೆಡೆಗೆ ನಡೆಸಿಕೊಂಡು ಹೋಗು. ಯುದ್ಧದಲ್ಲಿ ನಾನು ಅವರೆಲ್ಲರನ್ನೂ ಸಂಹಾರಮಾಡು ತ್ತೇನೆ ಅಥವಾ ಅವರಿಂದಲಾದರೂ ಹತನಾಗಿ ಭೀಷ್ಮನನ್ನೇ ಅನುಸರಿಸಿ ಹೋಗುತ್ತೇನೆ. ಯಾವ ಸೈನ್ಯದಲ್ಲಿ ಸತ್ಯಧೃತಿಯಾದ ಯುಧಿಷ್ಠಿರನಿದ್ದಾನೆಯೋ, ಭೀಮಾರ್ಜುನರಿದ್ದಾರೆಯೋ ಮತ್ತು ವಾಸುದೇವ-ಸಾತ್ಯಕಿ-ಸೃಂಜಯರಿದ್ದಾರೆಯೋ–ಆ ಸೈನ್ಯವು ನಮ್ಮ ಸೈನ್ಯದಲ್ಲಿರುವ ರಾಜರಿಂದ ಅಜಯ್ಯವಾದುದೆಂದೇ ನಾನು ಭಾವಿಸಿದ್ದೇನೆ. ಆದರೂ ರಣರಂಗದಲ್ಲಿ-ಸರ್ವಹರನಾದ ಮೃತ್ಯುದೇವನೇ ಅಪ್ರಮತ್ತನಾಗಿದ್ದುಕೊಂಡು ಕಿರೀಟಿಯನ್ನು ರಕ್ಷಿಸುತ್ತಿದ್ದರೂ–ಅವನನ್ನು ನಾನು ಸಂಹರಿಸದೇ ಬಿಡುವುದಿಲ್ಲ. ಒಂದು ವೇಳೆ ಸಂಹರಿಸಲಾಗದಿದ್ದರೆ ಅವನಿಂದಲಾದರೂ ಹತನಾಗಿ ಭೀಷ್ಮನು ಹೋದ ಮಾರ್ಗವನ್ನೇ ಹಿಡಿದು ಯಮಲೋಕಕ್ಕಾದರೂ ಹೋಗುತ್ತೇನೆ. ಈಗ ನಾನು ಆ ಶೂರ-ವೀರರೊಡನೆ ಯುದ್ಧಕ್ಕೆ ಹೋಗುವುದಿಲ್ಲವೆಂಬ ವಿಷಯವೇ ಇಲ್ಲ. ಈ ವಿಷಯದಲ್ಲಿ ನನ್ನ ಖಚಿತವಾದ ಅಭಿಪ್ರಾಯವು ಈ ರೀತಿಯಾಗಿದೆ : ಮಿತ್ರದ್ರೋಹಿಗಳು, ದುರ್ಬಲವಾದ ಸ್ವಾಮಿಭಕ್ತಿಯುಳ್ಳವರು ಮತ್ತು ಪಾಪಾತ್ಮರು–ಇವರಾರೂ ನನ್ನ ಸಹಾಯಕ್ಕೆ ಸರ್ವಥಾ ಬರಲಾರರು.”

ಮಹಾರಾಜ! ಕರ್ಣನು ಸೂತನೊಡನೆ ಹೀಗೆಂದು ಹೇಳಿ, ವಾಯುವಿಗೆ ಸಮಾನವಾದ ವೇಗವುಳ್ಳ ಉತ್ತಮವಾದ ಕುದುರೆಗಳಿಂದ ಸಜ್ಜಾಗಿದ್ದ, ಮೂಕಿಯಿಂದಲೂ, ಪತಾಕೆಯಿಂದಲೂ ಕೂಡಿದ್ದ, ಸುವರ್ಣಭೂಷಿತವಾಗಿದ್ದ, ಸುಂದರವಾಗಿದ್ದ, ಯುದ್ಧೋಪಯೋಗಿಗಳಾದ ಸಾಮಗ್ರಿಗಳಿಂದ ಸಮೃದ್ಧವಾಗಿದ್ದ, ಸುದೃಢವಾಗಿದ್ದ ಮತ್ತು ಶ್ರೇಷ್ಠವಾಗಿದ್ದ ರಥದಲ್ಲಿ ಕುಳಿತು

ಯುದ್ಧದಲ್ಲಿ ವಿಜಯಗಳಿಸಲು ಹೊರಟನು. ದೇವಗಣಗಳು ಇಂದ್ರನನ್ನು ಗೌರವಿಸುವಂತೆ–ಕುರುಗಳು ಮಹಾತ್ಮನಾದ ರಥರ್ಷಭನಾದ ಕರ್ಣನನ್ನು ಯಥಾಯೋಗ್ಯವಾಗಿ ಗೌರವಿಸಿದನಂತರ ಉಗ್ರವಾದ ಧನುಸ್ಸನ್ನು ಹೊಂದಿದ್ದ ಕರ್ಣನು ಭರತರ್ಷಭನಾದ ಭೀಷ್ಮನ ಅವಸಾನವು ಯಾವ ರಣಭೂಮಿ ಯಲ್ಲಾಯಿತೋ ಆ ರಣಭೂಮಿಗೆ ಪ್ರಯಾಣಮಾಡಿದನು. ಸುವರ್ಣ ಮುಕ್ತಾಮಣಿ ರತ್ನಮಾಲೆಯಿಂದ ಸಮಲಂಕೃತವಾಗಿದ್ದ, ಒಳ್ಳೆಯ ಕುದುರೆ ಗಳನ್ನು ಹೊಂದಿದ್ದ, ಮೇಘಧ್ವನಿಗೆ ಸಮಾನವಾಗಿ ಗಂಭೀರಶಬ್ದಮಾಡುವ, ಸುಂದರವಾದ ಧ್ವಜದಿಂದ ಸುಶೋಭಿತವಾಗಿದ್ದ ರಥದಲ್ಲಿ ಕುಳಿತು–ಸೂರ್ಯ ನಂತೆ ಅಮಿತತೇಜಸ್ಕನಾದ ಕರ್ಣನು ಸೈನ್ಯಸಮೇತನಾಗಿ ಯುದ್ಧಭೂಮಿಗೆ ಪ್ರಯಾಣಮಾಡಿದನು.



ಯಜ್ಞೇಶ್ವರನಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ, ಮಂಗಳ ಸ್ವರೂಪನಾದ, ಧನುರ್ಧರನಾದ, ಮಹಾರಥನಾದ, ಅಧಿರಥನ ಮಗನಾದ ಕರ್ಣನು ಶುಭಪ್ರದವಾದ ತನ್ನ ರಥದಲ್ಲಿ ಕುಳಿತು ಹೊರಟನು. ಆಗ ಅವನು ವಿಮಾನದಲ್ಲಿ ಕುಳಿತು ವಿರಾಜಿಸುವ ದೇವತೆಗಳ ಅಧಿಪತಿಯಾದ ಇಂದ್ರ ನಂತೆಯೇ ಪ್ರಕಾಶಿಸಿದನು.” ೨ನೆಯ ಅಧ್ಯಾಯವು ಮುಗಿಯಿತು.

## ಭೀಷ್ಮನ ವಿಷಯವಾಗಿ ಕರ್ಣನ ಪ್ರಶಂಸಾವಚನಗಳು

ಸಂಜಯನು ಮುಂದೆ ಕರ್ಣನ ವಿಷಯವನ್ನು ವಿವರಿಸುತ್ತಾ ಹೇಳುತ್ತಾನೆ:

"ಮಹಾರಾಜ! ಮಹಾಪ್ರಳಯಕಾಲದಲ್ಲಿ ದೊಡ್ಡ ದೊಡ್ಡ ಬಿರುಗಾಳಿಗಳ ಸಮೂಹದಿಂದ ಶೋಷಿಸಲ್ಪಟ್ಟ ಸಮುದ್ರದಂತೆ–ಅರ್ಜುನನ ರಭಸ ವಾದ ಬಾಣಗಳಿಂದ ಶೋಷಿಸಲ್ಪಟ್ಟವನಾಗಿ ಶರತಲ್ಪದಲ್ಲಿ ಮಲಗಿದ್ದ, ಅಮಿತೌಜಸ್ಕನಾದ, ಮಹಾತ್ಮನಾದ, ಸರ್ವಕ್ಷತ್ರಿಯರಿಗೂ ಅಂತಕಪ್ರಾಯನಾಗಿದ್ದ, ಗುರುವಾದ, ಮಹಾಧನುಷ್ಮಂತನಾದ, ಪಿತಾಮಹನಾದ, ಸವ್ಯಸಾಚಿಯಿಂದ ದಿವ್ಯಾಸ್ತ್ರಗಳ ಮೂಲಕವಾಗಿ ರಥದಿಂದ ಕೆಳಕ್ಕೆ ಬೀಳಿಸಲ್ಪಟ್ಟ ಭೀಷ್ಮನನ್ನು ನೋಡಿದ ನಿನ್ನ ಮಕ್ಕಳಿಗೆ ತಮ್ಮ ಕ್ಷೇಮವೂ ರಕ್ಷಾಕವಚವೂ ಭಗ್ನವಾದಂತಾಯಿತು. ಪಾಂಡವರನ್ನು ಜಯಿಸಬೇಕೆಂಬ ಆಶೆಯು ಸಂಪೂರ್ಣವಾಗಿ ಭಸ್ಮವಾಯಿತು. ಅಗಾಧವಾಗಿದ್ದ ಯುದ್ಧಸಮುದ್ರದ ಆಳವನ್ನು ನೋಡಬಯಸಿದ್ದ ಮತ್ತು ಪಾರವನ್ನೇ ಕಾಣದಿದ್ದ ಕೌರವರಿಗೆ ಭೀಷ್ಮನು ದ್ವೀಪರೂಪದಲ್ಲಿದ್ದನು. ಯಮುನಾನದಿಯ ಪ್ರವಾಹರೂಪವಾಗಿದ್ದ ಬಾಣಗಳ ಸಮೂಹದಿಂದ ಭೀಷ್ಮನು ಮುಳುಗಿಬಿಟ್ಟಿದ್ದನು. ಮಹೇಂದ್ರನಿಂದ ಕೆಳಕ್ಕೆ ಬೀಳಿಸಲ್ಪಟ್ಟ ಮಹೋನ್ನತವಾದ ಮೈನಾಕಪರ್ವತದಂತೆಯೇ–ಅವನು ಕಾಣುತ್ತಿದ್ದನು. ಆಕಾಶದಿಂದ ಜಾರಿ ಭೂಮಿಯ ಮೇಲೆ ಬಿದ್ದಿದ್ದ ಸೂರ್ಯನಂತೆಯೇ ಕಾಣುತ್ತಿದ್ದನು. ಪೂರ್ವಕಾಲದಲ್ಲಿ ವೃತ್ರಾಸುರನಿಂದ ಪರಾಜಿತನಾದ ಅಚಿಂತ್ಯನಾದ ದೇವರಾಜನಂತೆಯೇ–ಭೀಷ್ಮನು ಆ ಸಮಯದಲ್ಲಿ ಕಾಣುತ್ತಿದ್ದನು. ಭೀಷ್ಮನ ಪತನದಿಂದಾಗಿ ಕೌರವರ ಸೈನ್ಯವೆಲ್ಲವೂ ಭ್ರಾಂತವಾಗಿದ್ದಿತು. ಭೀಷ್ಮನು ಎಲ್ಲ ಸೈನಿಕರಿಗೂ ಶ್ರೇಷ್ಠನಾಗಿದ್ದನು. ಎಲ್ಲ ಧನುಷ್ಮಂತರಿಗೂ ಶಿರೋಮಣಿಯಾಗಿದ್ದನು. ಧನಂಜಯನ ಬಾಣಗಳಿಂದ ವ್ಯಾಪ್ತನಾಗಿ ಶರತಲ್ಪದಲ್ಲಿ ಮಲಗಿದ್ದ ಪುರುಷರ್ಷಭನಾದ, ಮಹಾವ್ರತನಾದ, ಭರತವಂಶೀಯರಲ್ಲಿ ಮಹಾದ್ಯುತಿಮಂತನಾದ ಭೀಷ್ಮನನ್ನು ಅಧಿರಥನ ಮಗನಾದ ಕರ್ಣನು ನೋಡಿ, ಆರ್ತನಾಗಿ ರಥದಿಂದ ಇಳಿದು, ಕಣ್ಣೀರಿನಿಂದ

ವ್ಯಾಕುಲಿತವಾದ ಗದ್ಗದಧ್ವನಿಯಿಂದ ಕೂಡಿದವನಾಗಿ, ಭೀಷ್ಮನಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಬದ್ಧಾಂಜಲಿಯಾಗಿ ಭೀಷ್ಮನನ್ನು ಪುನಃ ವಂದಿಸುತ್ತಾ ಮಾತನಾಡಿದನು : "ಭಾರತ! ನಿನಗೆ ಮಂಗಳವಾಗಲಿ. ನಾನು ಕರ್ಣನು. ನನ್ನೊಡನೆ ಮಾತನಾಡು. ಪುಣ್ಯವಾದ ಮತ್ತು ಮಂಗಳಮಯವಾದ ಮಾತುಗಳನ್ನಾಡು ಮತ್ತು ಪುಣ್ಯವೂ ಕ್ಷೇಮಕರವೂ ಆದ ದೃಷ್ಟಿಯಿಂದ ನನ್ನನ್ನು ನೋಡು. ನನ್ನ ಅಭಿಪ್ರಾಯದಲ್ಲಿ :

**ನ ನೂನಂ ಸುಕೃತಸ್ಯೇಹ ಫಲಂ ಕಶ್ಚಿತ್ಸಮಶ್ನುತೇ ।**
**ಯತ್ರ ಧರ್ಮಪರೋ ವೃದ್ಧಃ ಶೇತೇ ಭುವಿ ಭವಾನಿಹ ॥೧೦॥**

ನಿಶ್ಚಯವಾಗಿಯೂ ತಾವು ಮಾಡಿದ ಪುಣ್ಯದ ಫಲವನ್ನು ಇಲ್ಲಿ ಯಾರೂ ಅನುಭವಿಸಲಾರರು. ಏಕೆಂದರೆ : ಧರ್ಮಪರನಾದ, ವೃದ್ಧನಾದ ನೀನಿಂದು ರಣಭೂಮಿಯಲ್ಲಿ ಈ ಸ್ಥಿತಿಯಲ್ಲಿ ಮಲಗಿರುವುದೇ ಇದಕ್ಕೆ ಸಾಕ್ಷಿಯಾಗಿದೆ. ಕುರುಪುಂಗವ! ಕೋಶಸಂಗ್ರಹದಲ್ಲಿ, ಮಂತ್ರಾಲೋಚನೆಯಲ್ಲಿ, ವ್ಯೂಹರಚನೆಯಲ್ಲಿ, ಶತ್ರುಗಳನ್ನು ಪ್ರಹರಿಸುವುದರಲ್ಲಿ–ನಿನ್ನನ್ನು ಬಿಟ್ಟು ಬೇರೆ ಯಾರನ್ನೂ ನಾನು ಈ ಕುರುಗಳ ಸಮೂಹದಲ್ಲಿ ಕಾಣುತ್ತಿಲ್ಲ. ಇಂದು ಕುರುಗಳನ್ನು ಭಯದಿಂದ ಪಾರುಮಾಡುವವನು ಯಾವನು ತಾನೇ ಇದ್ದಾನೆ? ಯಾವ ವಿಧವಾದ ಕಲ್ಮಷವೂ ಇಲ್ಲದ ಶುದ್ಧವಾದ ಬುದ್ಧಿಯಿಂದ ಕೂಡಿರುವ ನೀನು ಯುದ್ಧದಲ್ಲಿ ಅನೇಕಯೋಧರನ್ನು ಸಂಹರಿಸಿ ಪಿತೃಲೋಕಕ್ಕೆ ಹೋಗುತ್ತಿರುವೆ. ಕೋಪಗೊಂಡ ವ್ಯಾಘ್ರಗಳು ಕಾಡಿನಲ್ಲಿರುವ ಮೃಗಗಳನ್ನು ಸಂಹಾರ ಮಾಡುತ್ತಾ ಅವುಗಳ ಸಂಖ್ಯೆಯನ್ನು ಕ್ಷಯಗೊಳಿಸುವಂತೆ–ಇನ್ನು ಮುಂದೆ ಕ್ರುದ್ಧರಾದ ಪಾಂಡವರು ಕುರುಗಳನ್ನು ಕ್ಷಯಗೊಳಿಸುತ್ತಾರೆ. ಈಗ (ನೀನಿಲ್ಲದಿರುವಾಗ) ಗಾಂಡೀವವನ್ನು ಟೇಂಕರಿಸುವ ಅರ್ಜುನನ ವೀರ್ಯವೇನೆಂಬುದನ್ನು ತಿಳಿದಿರತಕ್ಕ ಕುರುಗಳು–ವಜ್ರಪಾಣಿಯಾದ ಇಂದ್ರನಿಗೆ ಅಸುರರು ಭಯಪಡುವಂತೆ–ಭಯಗ್ರಸ್ತರಾಗುತ್ತಾರೆ. (ಸಿಡಿಲಿನ ಧ್ವನಿಯಂತಿರುವ) ಗಾಂಡೀವಧನುಸ್ಸಿನಿಂದ ಪ್ರಯುಕ್ತವಾದ ಬಾಣಗಳ ಧ್ವನಿಯು ಕುರುಗಳನ್ನೂ ಮತ್ತು ಇತರ ರಾಜರನ್ನೂ ಭಯಗೊಳಿಸುತ್ತದೆ. ಚೆನ್ನಾಗಿ ಉರಿಸಲ್ಪಟ್ಟು ಜ್ವಾಲೆಗಳಿಂದ ಕೂಡಿರುವ ಅಗ್ನಿಯು ಯಾವ ರೀತಿಯಲ್ಲಿ ದೊಡ್ಡ-ದೊಡ್ಡ ವೃಕ್ಷಗಳನ್ನೂ ದಹಿಸಿಬಿಡುತ್ತದೆಯೋ–ಅದೇ ರೀತಿಯಲ್ಲಿ ಕಿರೀಟಿಯ ಬಾಣಗಳು ಧೃತರಾಷ್ಟ್ರನ ಮಕ್ಕಳೆಲ್ಲರನ್ನೂ ದಹಿಸಿಬಿಡುತ್ತವೆ.

**ಯೇನ ಯೇನ ಪ್ರಸರತೋ ವಾಯ್ವಗ್ನೀ ಸಹಿತೌ ವನೇ ।**
**ತೇನ ತೇನ ಪ್ರದಹತೋ ಭೂರಿಗುಲ್ಮತೃಣದ್ರುಮಾನ್ ॥೧೭॥**

ವಾಯು ಮತ್ತು ಅಗ್ನಿ–ಎರಡೂ ಒಟ್ಟಾಗಿ ಸೇರಿ ಅರಣ್ಯದಲ್ಲಿ ಯಾವ-ಯಾವ ಮಾರ್ಗಗಳ ಮೂಲಕವಾಗಿ ಹೋಗುತ್ತವೆಯೋ–ಆಯಾ ಮಾರ್ಗಗಳಲ್ಲಿರುವ ಎಲ್ಲ ವೃಕ್ಷಗಳನ್ನೂ, ಹುಲ್ಲಿನ ರಾಶಿಗಳನ್ನೂ ಮತ್ತು ಪೊದರುಗಳನ್ನೂ ಭಸ್ಮಮಾಡುತ್ತಾ ಹೋಗುತ್ತವೆ.

**ಯಾದೃಶೋಽಗ್ನಿಃ ಸಮುದ್ಭೂತಸ್ತಾದೃಕ್ಪಾರ್ಥೋ ನ ಸಂಶಯಃ ।**
**ಯಥಾ ವಾಯುರ್ನರವ್ಯಾಘ್ರ ತಥಾ ಕೃಷ್ಣೋ ನ ಸಂಶಯಃ ॥೧೮॥**

ಪುರುಷಸಿಂಹನೇ! ಪ್ರಜ್ವಲಿಸುತ್ತಿರುವ ಅಗ್ನಿಯು ಯಾವ ರೀತಿಯಲ್ಲಿ ಇರುತ್ತದೆಯೋ-ಅದೇ ರೀತಿಯಲ್ಲಿ ಅರ್ಜುನನಿದ್ದಾನೆ. ಇದರಲ್ಲಿ ಸಂಶಯವೇ ಇಲ್ಲ. ವಾಯುವು ಯಾವ ರೀತಿಯಲ್ಲಿ ಸದಾ ಅಗ್ನಿಗೆ ಸಹಾಯಕನಾಗಿರುತ್ತಾನೆಯೋ ಅದೇ ರೀತಿಯಲ್ಲಿ ಶ್ರೀಕೃಷ್ಣನು ಅರ್ಜುನನೆಂಬ ಅಗ್ನಿಗೆ ವಾಯುರೂಪದಲ್ಲಿದ್ದು (ಕುರುಗಳ) ಭಸ್ಮಕ್ರಿಯೆಗೆ ಸರ್ವದಾ ನೆರವುನೀಡುತ್ತಿರುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಶ್ರೀಕೃಷ್ಣನ ಪಾಂಚಜನ್ಯಶಂಖದ ಧ್ವನಿಯನ್ನೂ–ಅರ್ಜುನನ ಗಾಂಡೀವಧನುಸ್ಸಿನ ಟೇಂಕಾರವನ್ನೂ ಕೇಳಿ ನಮ್ಮ ಕಡೆಯ ಎಲ್ಲ ಸೈನ್ಯಗಳೂ ಭಯಗೊಳ್ಳುತ್ತವೆ. ಶತ್ರುಸೂದನನಾದ, ಕಪಿಧ್ವಜನಾದ ಅರ್ಜುನನ ನೆಗೆ-ನೆಗೆದುಕೊಂಡು ಮೇಲೆ ಬೀಳಲು ಬರುತ್ತಿರುವ ರಥದ ಶಬ್ದವನ್ನು ನಿನ್ನೊಬ್ಬನ ಹೊರತಾಗಿ ಯಾವ ರಾಜರೂ ಸಹಿಸಿಕೊಳ್ಳಲು ಸಮರ್ಥರಲ್ಲ. ಪಿತಾಮಹ! ನಿನ್ನೊಬ್ಬನನ್ನು ಬಿಟ್ಟು ಪಾರ್ಥನೊಡನೆ ಯುದ್ಧಮಾಡುವ ಯೋಗ್ಯತೆಯು ತಾನೇ ಯಾವ ರಾಜನಿಗಿದೆ? ಮನನಶೀಲರಾದ ಮಹಾತ್ಮರೂ ಸಹ ಅವನು ಮಾಡಿರುವ ದಿವ್ಯಕರ್ಮಗಳನ್ನು ಮುಕ್ತಕಂಠದಿಂದ ಹೊಗಳುತ್ತಾರೆ. ಮನುಷ್ಯರಲ್ಲದೇ ಇರುವ ದೇವತೆಗಳೊಡನೆಯೂ, ಅಸುರರೊಡನೆಯೂ, ದೈತ್ಯರೊಡನೆಯೂ, ಗಂಧರ್ವರೊಡನೆಯೂ ಅರ್ಜುನನು ಯುದ್ಧಮಾಡಿ ಜಯಗಳಿಸಿದ್ದಾನೆ. ತ್ರ್ಯಂಬಕನೊಡನೆಯೂ ಯುದ್ಧಮಾಡಿ ಅವನ ಅನುಗ್ರಹಕ್ಕೂ ಪಾತ್ರನಾಗಿ ದ್ದಾನೆ. ಆದುದರಿಂದಲೇ ಅವನು ಜಿತೇಂದ್ರಿಯರಲ್ಲದವರಿಗೆ ದುಷ್ಪ್ರಾಪ್ಯವಾದ ವರವನ್ನೂ ಆ ಶಿವನಿಂದಲೇ ಪಡೆದುಕೊಂಡಿದ್ದಾನೆ. ಈ ಹಿಂದೆ ನೀನೂ

ಸಹ ಅವನನ್ನು ಜಯಿಸಲಿಲ್ಲವೆಂದಮೇಲೆ ಬೇರೆ ಯಾರು ತಾನೇ ಅವನನ್ನು ಜಯಿಸಲು ಸಮರ್ಥರು? ಯಾರಿಂದ ಅವನನ್ನು ಜಯಿಸಲು ಶಕ್ಯವಿದೆ? ಭೀಷ್ಮ! ನೀನೇನೂ ಸಾಮಾನ್ಯನಲ್ಲ. ದೇವ-ದಾನವರ ದರ್ಪವನ್ನೂ ಮುರಿದ, ಕ್ಷತ್ರಿಯರಿಗೇ ಯಮಪ್ರಾಯನಾಗಿದ್ದ, ಘೋರನಾಗಿದ್ದ ಪರಶುರಾಮನನ್ನು ಜಯಿಸಿದ ವೀರ್ಯಶಾಲಿಯಾದ ಮಹಾನುಭಾವನು ನೀನು. (ಆದರೆ ನಿನ್ನಂತಹ ಅತುಲಪರಾಕ್ರಮಿಯಿಂದಲೂ ಅರ್ಜುನನು ಒಮ್ಮೆಯಾದರೂ ಯುದ್ಧದಲ್ಲಿ ಪರಾಜಯಹೊಂದಲಿಲ್ಲ.) ನಿನ್ನ ವಧೆಯಿಂದಾಗಿ ಅರ್ಜುನನ ವಿಷಯದಲ್ಲಿ ಅಸಹನೆಯಿಂದಿರುವ ನಾನು ನಿನ್ನಿಂದ ಆಜ್ಞಪ್ತನಾಗಿ ದೃಷ್ಟಿಯನ್ನು (ದೃಷ್ಟಿಯಿಂದಲೇ ಪ್ರಾಣವನ್ನು ) ಅಪಹರಿಸುವ ಸುಘೋರವಾದ ವಿಷಸರ್ಪಕ್ಕೆ ಸಮಾನನಾಗಿರುವ, ಶೂರನಾದ ಯುದ್ಧಕುಶಲನಾದ ಪಾಂಡವನನ್ನು (ಅರ್ಜುನನನ್ನು ) ನನ್ನಲ್ಲಿರುವ ಅಸ್ತ್ರಗಳ ಬಲದಿಂದ ಸಂಹಾರಮಾಡುತ್ತೇನೆ.”

ಇನೆಯ ಅಧ್ಯಾಯವು ಮುಗಿಯಿತು.

ಳನೆಯ ಅಧ್ಯಾಯ ದ್ರೋಣಾಭಿಷೇಕಪರ್ವ (ಮುಂದುವರಿದಿದೆ.)

## ಭೀಷ್ಮನು ಕರ್ಣನನ್ನು ಪ್ರೋತ್ಸಾಹಿಸಿ ಯುದ್ಧಕ್ಕೆ ಕಳುಹಿಸಿದುದು : ಕರ್ಣನು ಯುದ್ಧದಲ್ಲಿ ಭಾಗವಹಿಸಲು ಹೋದುದರಿಂದ ಕೌರವರ ಹರ್ಷೋತ್ಸಾಹ

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ :

“ಮಹಾರಾಜ! ಹೀಗೆ ಅನೇಕಪ್ರಕಾರವಾಗಿ ಸಮಾಧಾನಕರವಾದ ರೀತಿಯಲ್ಲಿ ಕರ್ಣನು ಹೇಳಿದ ಮಾತುಗಳನ್ನು ಕೇಳಿ ಸುಪ್ರೀತನಾದ ಪಿತಾಮಹನು ದೇಶಕಾಲೋಚಿತವಾದ ಈ ಮಾತುಗಳನ್ನು ಹೇಳಿದನು :

**ಸಮುದ್ರ ಇವ ಸಿನ್ಧೂನಾಂ ಜ್ಯೋತಿಷಾಮಿವ ಭಾಸ್ಕರಃ ।**
**ಸತ್ಯಸ್ಯ ಚ ಯಥಾ ಸನ್ತೋ ಬೀಜಾನಾಮಿವ ಚೋರ್ವರಾ ॥೨॥**

**ಪರ್ಜನ್ಯ ಇವ ಭೂತಾನಾಂ ಪ್ರತಿಷ್ಠಾ ಸುಹೃದಾಂ ಭವ ।**
**ಬಾನ್ಧವಾಸ್ತ್ವಾನುಜೀವನ್ತು ಸಹಸ್ರಾಕ್ಷಮಿವಾಮರಾಃ ॥೩॥**

“ನದಿಗಳಿಗೆ ಸಮುದ್ರವು ಆಶ್ರಯಸ್ಥಾನವಾಗಿರುವಂತೆ-ಜ್ಯೋತಿರ್ಮಯ

ಪದಾರ್ಥಗಳಿಗೆ ಸೂರ್ಯನು ಆಶ್ರಯನಾಗಿರುವಂತೆ–ಸತ್ಯಕ್ಕೆ ಸತ್ಪುರುಷರು ಆಶ್ರಯಸ್ಥಾನರಾಗಿರುವಂತೆ–ಬೀಜಗಳಿಗೆ ಭೂಮಿಯು ಆಶ್ರಯಸ್ಥಾನ ವಾಗಿರುವಂತೆ–ಪ್ರಾಣಿಗಳಿಗೆ ಪರ್ಜನ್ಯನು ಆಶ್ರಯನಾಗಿರುವಂತೆ–ನೀನು ನಿನ್ನ ಸುಹೃದರಿಗೆ ಆಶ್ರಯನಾಗಿರು. ದೇವತೆಗಳು ಇಂದ್ರನನ್ನು ಆಶ್ರಯಿಸಿ ಜೀವಿ ಸಿರುವಂತೆ-ನಿನ್ನ ಬಂಧು-ಮಿತ್ರರು ನಿನ್ನನ್ನು ಆಶ್ರಯಿಸಿ ಜೀವಿಸಿರಲಿ.

**ಮಾನಹಾ ಭವ ಶತ್ರೂಣಾಂ ಮಿತ್ರಾಣಾಂ ನನ್ದಿವರ್ಧನಃ ।**
**ಕೌರವಾಣಾಂ ಭವ ಗತಿರ್ಯಥಾ ವಿಷ್ಣುರ್ದಿವೌಕಸಾಮ್ ॥೪॥**

ಶತ್ರುಗಳ ಪ್ರತಿಷ್ಠೆಯನ್ನು ಕುಗ್ಗಿಸು. ಮಿತ್ರರಿಗೆ ಆನಂದವನ್ನುಂಟು ಮಾಡು. ದೇವತೆಗಳಿಗೆ ವಿಷ್ಣುವೇ ಪರಮಗತಿಯಾಗಿರುವಂತೆ ಕೌರವರಿಗೆ ನೀನು ಪರಮಗತಿಯಾಗಿರು (ಸಂರಕ್ಷಕನಾಗಿರು).

ದುರ್ಯೋಧನನಿಗೆ ವಿಜಯಗಳಿಸಿಕೊಡಬೇಕೆಂದು ಇಚ್ಛಿಸಿದ ನೀನು ರಾಜಪುರಕ್ಕೆ ಹೋಗಿ ಸ್ವಬಾಹುಬಲವೀರ್ಯದಿಂದ ಕಾಂಬೋಜರನ್ನು ಜಯಿ ಸಿದೆ. ಗಿರಿವ್ರಜನಿವಾಸಿಗಳಾದ ನಗ್ನಜಿತನೇ ಮುಂತಾದ ರಾಜರೂ, ಅಂಬಷ್ಠರೂ, ವಿದೇಹರೂ, ಗಾಂಧಾರರೂ ನಿನ್ನಿಂದ ಪರಾಜಿತರಾದರು. ಹಿಮಾಲಯದ ದುರ್ಗಪ್ರದೇಶಗಳಲ್ಲಿ ವಾಸಮಾಡುತ್ತಿದ್ದ ರಣಕರ್ಕಶರಾದ ಕಿರಾತರನ್ನು ಗೆದ್ದು ಅವರನ್ನು ದುರ್ಯೋಧನನಿಗೆ ಆಶ್ರಿತರಾಜರನ್ನಾಗಿ ಮಾಡಿ ರುವೆ. ಉತ್ಕಲ, ಮೇಕಲ, ಪೌಂಡ್ರ, ಕಲಿಂಗ, ಆಂಧ್ರ, ನಿಷಾದ, ತ್ರಿಗರ್ತ ಮತ್ತು ಬಾಹ್ಲೀಕ–ಈ ದೇಶಗಳ ರಾಜರನ್ನೂ ನೀನು ಗೆದ್ದು ದುರ್ಯೋಧನ ನಿಗೆ ಅವರನ್ನು ಸಾಮಂತರಾಜರನ್ನಾಗಿ ಮಾಡಿರುವೆ. ದುರ್ಯೋಧನನ ಹಿತೈಷಿಯಾದ ಮಹಾಪರಾಕ್ರಮಿಯಾದ ನೀನು ದೇಶದ ನಾನಾಭಾಗಗಳಲ್ಲಿ ನಡೆದ ಯುದ್ಧಗಳಲ್ಲಿ ಅನೇಕರಾಜರನ್ನು ಜಯಿಸಿ ದುರ್ಯೋಧನನ ಸಾರ್ವಭೌಮತ್ವವನ್ನು ಸಂಸ್ಥಾಪಿಸಿರುವೆ. ಕರ್ಣ! ಜ್ಞಾತಿಗಳ ಸಮೂಹ ದಿಂದಲೂ ಬಂಧು-ಬಾಧವರಿಂದಲೂ ಸಮೇತನಾದ ದುರ್ಯೋಧನನು ಯಾವ ರೀತಿಯಲ್ಲಿ ಎಲ್ಲ ಕೌರವರಿಗೂ ಆಶ್ರಯನಾಗಿದ್ದಾನೆಯೋ–ಅದೇ ರೀತಿಯಲ್ಲಿ ನೀನೂ ಸಹ ಸಕಲಕೌರವರಿಗೂ ಆಶ್ರಯದಾತನಾಗಿರು. ಮಂಗಳಮಯವಾದ ಮನಸ್ಸಿನಿಂದ ನಿನಗೆ ಆಶೀರ್ವದಿಸಿ ಹೇಳುತ್ತೇನೆ. ಈಗಲೇ ರಣರಂಗಕ್ಕೆ ಹೋಗು. ಶತ್ರುಗಳೊಡನೆ ಯುದ್ಧಮಾಡು.

ಯುದ್ಧಸಮಯದಲ್ಲಿ ಕೌರವರನ್ನು ಯಥಾಯೋಗ್ಯವಾಗಿ ನಿರ್ದೇಶಿಸು. ಅವರಿಗೆ ಯುದ್ಧಮಾಡಲು ಮಾರ್ಗದರ್ಶನಮಾಡು. ದುರ್ಯೋಧನನಿಗೆ ವಿಜಯವನ್ನು ಸಂಪಾದಿಸಿಕೊಡು.



**ಭವಾನ್ಪೌತ್ರಸಮೋಽಸ್ಮಾಕಂ ಯಥಾ ದುರ್ಯೋಧನಸ್ತಥಾ ।**
**ತವಾಪಿ ಧರ್ಮತಃ ಸರ್ವೇ ಯಥಾ ತಸ್ಯ ವಯಂ ತಥಾ ॥೧೨॥**

ಮಗು ಕರ್ಣ! ದುರ್ಯೋಧನನು ನಮಗೆ ಯಾವ ರೀತಿಯಲ್ಲಿ ಮೊಮ್ಮಗನೋ ಅದೇ ರೀತಿಯಲ್ಲಿ ನೀನೂ ಸಹ ನಮಗೆ ಮೊಮ್ಮಗನಿಗೆ ಸಮಾನನೇ ಆಗಿರುವೆ. ಧರ್ಮದ ದೃಷ್ಟಿಯಿಂದ ನಾವೆಲ್ಲರೂ ದುರ್ಯೋಧನ ನಿಗೆ ಹೇಗೆ ಸಂಬಂಧಿಗಳೋ ನಿನಗೂ ಸಹ ಹಾಗೆಯೇ ಸಂಬಂಧಿಗಳಾಗಿದ್ದೇವೆ.

**ಯೌನಾತ್ಸಮ್ಬನ್ಧಕಾಲ್ಲೋಕೇ ವಿಶಿಷ್ಟಂ ಸಂಗತಂ ಸತಾಮ್ ।**
**ಸದ್ಭಿಃ ಸಹ ನರಶ್ರೇಷ್ಠ ಪ್ರವದನ್ತಿ ಮನೀಷಿಣಃ ॥೧೩॥**

ನರಶ್ರೇಷ್ಠನೇ! ಪ್ರಪಂಚದಲ್ಲಿ ಕೌಟುಂಬಿಕವಾದ (ರಕ್ತ) ಸಂಬಂಧಕ್ಕಿಂತಲೂ ಸತ್ಪುರುಷರೊಡನೆ ಬೆಳೆಯುವ ಮೈತ್ರಿಯ ಸಂಬಂಧವೇ ಹೆಚ್ಚಿನದೆಂದು ಮನೀಷಿಗಳಾದ ಮಹಾತ್ಮರು ಹೇಳುತ್ತಾರೆ.

ಆ ರೀತಿಯಲ್ಲಿ ನೀನು ಸನ್ಮಿತ್ರನಾಗಿ–'ಇದು ನನ್ನ ಕಾರ್ಯ'–ಎಂಬುದಾಗಿ ನಿಶ್ಚಯಮಾಡಿಕೊಂಡು ದುರ್ಯೋಧನನು ಯಾವ ರೀತಿಯಲ್ಲಿ ಕುರು ಸೈನ್ಯಗಳನ್ನು ರಕ್ಷಿಸುವ ಭಾರವನ್ನು ವಹಿಸಿದ್ದಾನೆಯೋ–ಅದೇ ರೀತಿಯಲ್ಲಿ ನೀನೂ ಸಹ ಕುರುಗಳನ್ನು ಸಂರಕ್ಷಿಸು."

ಮಹಾರಾಜ! ಭೀಷ್ಮನ ಪ್ರೋತ್ಸಾಹಕರವಾದ ಮಾತುಗಳನ್ನು ಕೇಳಿ ಕರ್ಣನು ಭೀಷ್ಮನ ಪಾದಗಳಿಗೆರಗಿ ಕೌರವರ ಕಡೆಯ ಸರ್ವಧನುಷ್ಮಂತಯೋಧರೂ ಇದ್ದ ಸ್ಥಳಕ್ಕೆ ತೆರಳಿದನು. ಅಲ್ಲವನು ಕೌರವರ ಸೈನ್ಯವು ನಿಂತಿದ್ದ ವಿಶಾಲವಾದ ಮತ್ತು ಅಪ್ರತಿಮವಾದ ರಣಾಂಗಣವನ್ನು ವೀಕ್ಷಿಸಿದನು. ಸೈನಿಕರು ವ್ಯೂಹಕ್ರಮದಲ್ಲಿ ಉಪಸ್ಥಿತರಾಗಿದ್ದರು. ಅವರ ಆಯುಧಗಳು ಉರಃಸ್ಥವಾಗಿದ್ದುವು. ವಕ್ಷಃಸ್ಥಳಕ್ಕೆ ಸಮೀಪದಲ್ಲಿ ಅವರೆಲ್ಲರೂ ಧನುರ್ಬಾಣಗಳನ್ನು ಹಿಡಿದು ನಿಂತಿದ್ದರು. ಕರ್ಣನು ಅಂತಹ ಅಪಾರಸೈನ್ಯವನ್ನು ತನ್ನ ಸಾನ್ನಿಧ್ಯದಿಂದಾಗಿ ಉತ್ಸಾಹಗೊಳಿಸಿದನು. ಎಲ್ಲ ಸೈನ್ಯಗಳ ಅಗ್ರಭಾಗದಲ್ಲಿದ್ದ, ಯುದ್ಧಸನ್ನದ್ಧನಾಗಿ ಬಂದಿದ್ದ, ಮಹಾತ್ಮನಾದ ಕರ್ಣನನ್ನು ನೋಡಿ ದುರ್ಯೋಧನ ಪ್ರಮುಖರಾದ ಎಲ್ಲ ಕುರುಯೋಧರೂ ಆನಂದತುಂದಿಲರಾದರು. ನಾನಾಪ್ರಕಾರವಾದ ಗರ್ಜನೆಗಳಿಂದಲೂ, ಕೈಚಪ್ಪಾಳೆಗಳಿಂದಲೂ, ಭುಜಗಳನ್ನು ತಟ್ಟುವುದರಿಂದಲೂ, ಸಿಂಹನಾದಗಳಿಂದಲೂ, ಧನುಷ್ಟೇಂಕಾರಗಳಿಂದಲೂ, ಶಂಖ-ಭೇರೀನಿನಾದಗಳಿಂದಲೂ ಕೌರವಯೋಧರು ಕರ್ಣನನ್ನು ಸ್ವಾಗತಿಸಿ ಸತ್ಕರಿಸಿದರು."

೪ನೆಯ ಅಧ್ಯಾಯವು ಮುಗಿಯಿತು.

೫ನೆಯ ಅಧ್ಯಾಯ ದ್ರೋಣಾಭಿಷೇಕಪರ್ವ (ಮುಂದುವರಿದಿದೆ.)

## ದ್ರೋಣರನ್ನು ಸೇನಾಪತಿಯನ್ನಾಗಿ ಮಾಡುವಂತೆ ಕರ್ಣನು ದುರ್ಯೋಧನನಿಗೆ ಸಲಹೆನೀಡಿದುದು

ಸಂಜಯನು ಹೇಳುತ್ತಾನೆ :

"ಮಹಾರಾಜ! ಪುರುಷವ್ಯಾಘ್ರನಾದ ಕರ್ಣನು ರಥದಲ್ಲಿ ಕುಳಿತು

ಯುದ್ಧಸನ್ನದ್ಧನಾಗಿ ಬಂದಿರುವುದನ್ನು ನೋಡಿ ಹೃಷ್ಟನಾದ ದುರ್ಯೋಧನನು ಕರ್ಣನಿಗೆ ಹೇಳಿದನು :

“ವಯಸ್ಯ ಕರ್ಣ! ನಿನ್ನಿಂದ ರಕ್ಷಿಸಲ್ಪಡುವ ನಮ್ಮ ಸೇನೆಯು ಯಾವಾಗಲೂ ಸನಾಥವಾಗಿಯೇ ಇರುವುದೆಂದೂ, ಅನಾಥವಾಗುವುದಿಲ್ಲವೆಂದೂ ನಾನು ಭಾವಿಸುತ್ತೇನೆ. ಈಗ ಇಲ್ಲಿ ನಾವು ಏನು ಮಾಡಿದರೆ ಹೆಚ್ಚಿನ ಅರ್ಥ ಪ್ರಾಪ್ತಿಗೆ (ಪ್ರಯೋಜನಕ್ಕೆ) ಕಾರಣವಾಗುತ್ತದೆ ಮತ್ತು ನಮಗೆ ಹಿತವಾಗಿ ಪರಿಣಮಿಸುತ್ತದೆ? ಅದನ್ನು ನೀನೀಗಲೇ ನಿಶ್ಚಯಿಸು.”

ಅದಕ್ಕುತ್ತರವಾಗಿ ಕರ್ಣನು ಹೇಳುತ್ತಾನೆ :

“ಪುರುಷಸಿಂಹನೇ! ನರೇಶ್ವರ! ನೀನು ಪ್ರಾಜ್ಞನಾಗಿರುವೆ. ನೀನೇ ನಮಗೆ ಈ ವಿಷಯವನ್ನು ಹೇಳಬೇಕು. **ಯಥಾ ಚಾರ್ಥಪತಿಃ ಕೃತ್ಯಂ ಪಶ್ಯತೇ ನ ತಥೇತರಃ**–ರಾಜನಾದವನು ಕಾರ್ಯಾಕಾರ್ಯಗಳನ್ನು ವಿವೇಚಿಸಿ ನಿರ್ಧರಿಸುವಂತೆ ಬೇರೆಯವನು ನಿರ್ಧರಿಸಲಾರನು. ನಾವೆಲ್ಲರೂ ನಿನ್ನ ಮಾತನ್ನು ಕೇಳಬೇಕೆಂಬ ಇಚ್ಛೆಯುಳ್ಳವರಾಗಿದ್ದೇವೆ. ನೀನು ನ್ಯಾಯ ಸಮ್ಮತವಲ್ಲದ ಯಾವ ಮಾತನ್ನೂ ಹೇಳುವುದಿಲ್ಲವೆಂದೂ ನನಗೆ ದೃಢವಾದ ವಿಶ್ವಾಸವಿದೆ.”

“ಕರ್ಣ! ವಯಸ್ಸಿನಿಂದ ಹಿರಿಯನಾದ, ಮಹಾಪರಾಕ್ರಮಿಯಾದ, ವಿದ್ಯಾಸಂಪನ್ನನಾದ ಭೀಷ್ಮನು ನಮ್ಮ ಸೈನ್ಯಕ್ಕೆ ಸೇನಾಪತಿಯಾಗಿದ್ದನು. ಅತ್ಯಂತಯಶೋವಂತನಾದ ಅವನು ನಮ್ಮ ಯೋಧಗಣಗಳಿಂದೊಡಗೂಡಿ ಶತ್ರುಸಮೂಹವನ್ನು ಧ್ವಂಸಮಾಡಿದನು. ಉತ್ತಮವಾದ ಯುದ್ಧದ ವ್ಯವಸ್ಥೆಯಿಂದ ಮಹಾತ್ಮನಾದ ಭೀಷ್ಮನು ನಮ್ಮ ಸೈನ್ಯವನ್ನು ಹತ್ತು ದಿವಸಗಳ ಪರ್ಯಂತವಾಗಿ ಪರಿಪಾಲಿಸಿದನು. ಹತ್ತು ದಿವಸಗಳೂ ಅವನು ದುಷ್ಕರವಾದ ಕರ್ಮಗಳನ್ನೇ ಮಾಡಿ ಈಗ ಸ್ವರ್ಗದ ಮಾರ್ಗವನ್ನು ಹಿಡಿದಿರುತ್ತಾನೆ. ಇಂದಿನ ನಮ್ಮ ಈ ಸ್ಥಿತಿಯಲ್ಲಿ ಭೀಷ್ಮನ ನಂತರ ನಮ್ಮ ಸೇನಾನಾಯಕನಾಗಲು ಯೋಗ್ಯನಾದವನು ಯಾರು? ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು? ಕರ್ಣ!

**ನ ವಿನಾ ನಾಯಕಂ ಸೇನಾ ಮುಹೂರ್ತಮಪಿ ತಿಷ್ಠತಿ ।**
**ಆಹವೇಷ್ವಾಹವಶ್ರೇಷ್ಠ ನೇತೃಹೀನೇವ ನೌರ್ಜಲೇ ॥೮॥**

ಆಹವಶ್ರೇಷ್ಠನೇ! ನೀರಿನಲ್ಲಿರುವ ಅಂಬಿಗನಿಲ್ಲದ ನೌಕೆಯು ಬಹಳ ಬೇಗ ನಾಶಹೊಂದುವಂತೆ–ಯುದ್ಧದಲ್ಲಿ ನಾಯಕನಿಲ್ಲದ ಸೈನ್ಯವು ಮುಹೂರ್ತಕಾಲವಾದರೂ ಶತ್ರುವನ್ನು ಎದುರಿಸಿ ನಿಲ್ಲಲಾರದು.

**ಯಥಾ ಹ್ಯಕರ್ಣಧಾರಾ ನೌ ರಥಶ್ಚಾಸಾರಥಿರ್ಯಥಾ ।**
**ದ್ರವೇದ್ಯಥೇಷ್ಟಂ ತದ್ವತ್ಸ್ಯಾದೃತೇ ಸೇನಾಪತಿಂ ಬಲಮ್ ॥೯॥**

ನಾವಿಕನಿಲ್ಲದ ನೌಕೆಯೂ, ಸಾರಥಿಯಿಲ್ಲದ ರಥವೂ ಯಾವ ರೀತಿ ಯಲ್ಲಿ ಹದ್ದುಮೀರಿ ಹೋಗಲು ಪ್ರಾರಂಭಿಸುತ್ತವೆಯೋ–ಅದೇ ರೀತಿಯಲ್ಲಿ ಸೇನಾನಾಯಕನಿಲ್ಲದ ಸೈನ್ಯವೂ ಚದುರಿ ಓಡಿಹೋಗುತ್ತದೆ.

**ಅದೇಶಿಕೋ ಯಥಾ ಸಾರ್ಥಃ ಸರ್ವಃ ಕೃಚ್ಛ್ರಂ ಸಮೃಚ್ಛತಿ ।**
**ಅನಾಯಕಾ ತಥಾ ಸೇನಾ ಸರ್ವಾನ್ದೋಷಾನ್ಸಮಾರ್ಛತಿ ॥೧೦॥**

ಮಾರ್ಗದರ್ಶಕನಿಲ್ಲದ ಸಂಚಾರೀ ವಣಿಕ್ಸಮೂಹವು ಯಾವ ರೀತಿ ಯಲ್ಲಿ ನಾನಾವಿಧವಾದ ಕಷ್ಟಗಳಿಗೂ ಗುರಿಯಾಗುತ್ತದೆಯೋ–ಅದೇ ರೀತಿಯಲ್ಲಿ ನಾಯಕನಿಲ್ಲದ ಸೈನ್ಯವೂ ಎಲ್ಲ ವಿಧವಾದ ದೋಷಗಳನ್ನೂ ಹೊಂದಿರುತ್ತದೆ.

ಕರ್ಣ! ಈ ಕಾರಣದಿಂದ ನನ್ನಲ್ಲಿರುವ ಮಹಾತ್ಮರಾದ ಯೋಧರಲ್ಲಿ ಭೀಷ್ಮನ ಉತ್ತರಾಧಿಕಾರಿಯಾಗಿ ಸೇನಾಪತ್ಯವನ್ನು ವಹಿಸಿಕೊಳ್ಳಲು ಅರ್ಹ ರಾದವರು ಯಾರೆಂಬುದನ್ನು ಪರ್ಯಾಲೋಚಿಸಿ ಹೇಳು. ನೀನು ನಮ್ಮಲ್ಲಿ ಯಾರನ್ನು ಸೇನಾಪತಿಯನ್ನಾಗಿ ಮಾಡಲು ಹೇಳುವೆಯೋ ಅವರನ್ನೇ ನಾವೆಲ್ಲರೂ ಸೇರಿ ಸೇನಾಪತಿಯನ್ನಾಗಿ ಮಾಡೋಣ. ಈ ವಿಷಯದಲ್ಲಿ ಸಂಶಯವೇ ಇಲ್ಲ."

"ಮಹಾರಾಜ! ಮಹಾತ್ಮರಾದ ಈ ಪುರುಷೋತ್ತಮರೆಲ್ಲರೂ ಸೇನಾ ಪತಿಯ ಸ್ಥಾನಕ್ಕೆ ಅರ್ಹರೇ ಆಗಿರುತ್ತಾರೆ. ಈ ವಿಷಯವನ್ನು ವಿಚಾರಮಾಡ ಬೇಕಾದ ಆವಶ್ಯಕತೆಯೇ ಇಲ್ಲ. ಇಲ್ಲಿರುವ ರಾಜರೆಲ್ಲರೂ ಕುಲ, ಶರೀರ ದಾರ್ಢ್ಯ, ಜ್ಞಾನ, ಬಲ, ಪರಾಕ್ರಮ ಮತ್ತು ಬುದ್ಧಿ–ಇವುಗಳಿಂದ ಸೇನಾ ಪತಿಯ ಪದವಿಗೆ ಯೋಗ್ಯರೇ ಆಗಿರುತ್ತಾರೆ. ಇವರೆಲ್ಲರೂ ವೇದಜ್ಞರೂ, ಧೀಮಂತರೂ ಮತ್ತು ಯುದ್ಧದಲ್ಲಿ ಹಿಂದಿರುಗದೇ ಇರುವವರೂ ಆಗಿರು

ತ್ತಾರೆ. ಆದರೆ ಈ ಎಲ್ಲರನ್ನೂ ಒಂದೇಬಾರಿಗೆ ಸೇನಾಗ್ರಣಿಗಳನ್ನಾಗಿ ಮಾಡಲು ಸಾಧ್ಯವಾಗುವುದಿಲ್ಲ. ಇವರೆಲ್ಲರೂ ಸೇನಾಪತಿಯ ಸ್ಥಾನಕ್ಕೆ ಅರ್ಹರೇ ಆಗಿದ್ದರೂ ಇವರಲ್ಲಿ ಒಬ್ಬರನ್ನು ಮಾತ್ರವೇ ಸೇನಾಪತಿಯನ್ನಾಗಿ ನೇಮಿಸಲು ಸಾಧ್ಯವಾಗುತ್ತದೆ. ಆದುದರಿಂದ ವಿಶಿಷ್ಟಗುಣಗಳೂ ಯಾವ ಒಬ್ಬನಲ್ಲಿವೆಯೋ ಅಂತಹವನನ್ನೇ ಸೇನಾಪತಿಯನ್ನಾಗಿ ಆರಿಸುವುದು ನಮ್ಮ ಇಂದಿನ ಕರ್ತವ್ಯವಾಗಿದೆ. ಆದರೆ ಸೇನಾಪತಿಯ ಸ್ಥಾನಕ್ಕೆ ಈ ರಾಜರಲ್ಲಿ ಪರಸ್ಪರಸ್ಪರ್ಧೆಯಿರುವಾಗ ಒಬ್ಬರನ್ನು ಆರಿಸಿ ಸೇನಾಪತಿಯನ್ನಾಗಿ ಮಾಡಿದಲ್ಲಿ ಉಳಿದವರಿಗೆ ಅಸಮಾಧಾನವಾಗಬಹುದು. ಮುಂದೆ ಅವರು ನಿನ್ನ ಹಿತಾಸಕ್ತಿಯಿಂದ ಯುದ್ಧಮಾಡುವುದಿಲ್ಲವೆಂಬುದು ಸ್ಪಷ್ಟವಾಗಿಯೇ ಇದೆ. ಆದುದರಿಂದ ನಾವು ಸೇನಾಪತಿಯನ್ನು ಆರಿಸುವಾಗ ಸ್ಪರ್ಧೆಗೆ ಅವಕಾಶ ವಿಲ್ಲದೇ ಇರುವ ವ್ಯಕ್ತಿಯನ್ನು ಹುಡುಕಬೇಕಾಗಿದೆ. ದ್ರೋಣರು ಸರ್ವ ಯೋಧರಿಗೂ ಆಚಾರ್ಯರಾಗಿದ್ದಾರೆ. ವಯೋವೃದ್ಧರಾಗಿದ್ದಾರೆ. ಗುರು ಗಳಾಗಿದ್ದಾರೆ. ಶಸ್ತ್ರವನ್ನು ಹೊಂದಿರುವವರಲ್ಲಿ ಶ್ರೇಷ್ಠರಾದ ಇವರೇ ಸೇನಾ ಪತಿಯ ಸ್ಥಾನಕ್ಕೆ ಅರ್ಹರಾಗಿದ್ದಾರೆಂಬುದು ನನ್ನ ಅಭಿಪ್ರಾಯವಾಗಿದೆ. ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ, ದುರ್ಧರ್ಷರಾದ ದ್ರೋಣರಿರಲಾಗಿ–ಶುಕ್ರ ನಿಗೂ ಮತ್ತು ಬೃಹಸ್ಪತಿಗೂ ಸಮಾನರಾದ ಇವರನ್ನು ಬಿಟ್ಟು, ಸೇನಾಪತಿಯ ಸ್ಥಾನಕ್ಕೆ ಮತ್ತಾರಿದ್ದಾರೆ? ಸೇನಾಮುಖದಲ್ಲಿ ಹೋಗುತ್ತಿರುವ ದ್ರೋಣಾ ಚಾರ್ಯರನ್ನು ಹಿಂಬಾಲಿಸಿ ಹೋಗದಿರುವ ಯಾವನೊಬ್ಬ ಯೋಧನೂ ನಿನ್ನ ಈ ರಾಜಸಮೂಹದಲ್ಲಿಲ್ಲ. ಮಹಾರಾಜ! ಇವರು ನಿನ್ನ ಸೇನಾನಾಯಕ ರೆಲ್ಲರಿಗೂ ಶ್ರೇಷ್ಠರಾಗಿರುತ್ತಾರೆ. ನಿನ್ನಲ್ಲಿರುವ ಶಸ್ತ್ರಧಾರಿಗಳಾದ ಯೋಧರೆಲ್ಲ ರಿಗೂ ಶ್ರೇಷ್ಠರಾಗಿರುತ್ತಾರೆ. ಬುದ್ಧಿವಂತರಲ್ಲಿಯೂ ಇವರು ಶ್ರೇಷ್ಠರಾಗಿದ್ದಾರೆ. ಮೇಲಾಗಿ ಇವರು ನಿನ್ನ ಗುರುಗಳೂ ಆಗಿದ್ದಾರೆ. ಆದುದರಿಂದ ಯುದ್ಧದಲ್ಲಿ ಅಸುರರನ್ನು ಜಯಿಸಲು ಇಚ್ಛಿಸಿದ ದೇವತೆಗಳು ಕಾರ್ತಿಕೇಯನನ್ನು ತಮ್ಮ ಸೇನಾನಿಯನ್ನಾಗಿ ಮಾಡಿಕೊಂಡಂತೆ–ಆಚಾರ್ಯರಾದ ದ್ರೋಣರನ್ನು ನೀನೀಗಲೇ ಸೇನಾಪತಿಗಳನ್ನಾಗಿ ನಿಯಮಿಸು."

೫ನೆಯ ಅಧ್ಯಾಯವು ಮುಗಿಯಿತು.

## ದುರ್ಯೋಧನನು ದ್ರೋಣರನ್ನು ಸೇನಾಪತಿಗಳಾಗುವಂತೆ ಪ್ರಾರ್ಥಿಸಿದುದು

ಸಂಜಯನು ಮುಂದುವರಿಸಿ ಹೇಳುತ್ತಾನೆ :

"ಮಹಾರಾಜ! ಕರ್ಣನ ಮಾತುಗಳನ್ನು ಕೇಳಿ ದುರ್ಯೋಧನ ರಾಜನು ಸೇನೆಯ ಮಧ್ಯಭಾಗದಲ್ಲಿದ್ದ ದ್ರೋಣರಲ್ಲಿಗೆ ಹೋಗಿ ಅವರನ್ನು ಕುರಿತು ಹೇಳಿದನು : "ದ್ವಿಜಶ್ರೇಷ್ಠರೇ! ತಾವು ಉತ್ತಮವರ್ಣದವರಾಗಿದ್ದೀರಿ. ಶ್ರೇಷ್ಠವಾದ ಕುಲದಲ್ಲಿ ಜನ್ಮತಾಳಿರುವಿರಿ. ಶಾಸ್ತ್ರಜ್ಞಾನ, ವಯಸ್ಸು, ಬುದ್ಧಿ-ಪರಾಕ್ರಮಗಳು, ಯುದ್ಧಕೌಶಲ, ಅಜೇಯತೆ, ಅರ್ಥಜ್ಞಾನ, ನೀತಿ, ವಿಜಯ, ತಪಸ್ಸು ಮತ್ತು ಕೃತಜ್ಞತೆ ಇತ್ಯಾದಿ ಸಮಸ್ತಸದ್ಗುಣಗಳಿಂದ ಎಲ್ಲರಿಗಿಂತಲೂ ತಾವು ಅಧಿಕರಾಗಿದ್ದೀರಿ. ನಿಮಗೆ ಸಮಾನರಾದ ರಕ್ಷಕರು ಈ ರಾಜರ ಸಮೂಹದಲ್ಲೇ ಯಾರೂ ಇರುವುದಿಲ್ಲ. ಇಂದ್ರನು ದೇವತೆಗಳನ್ನು ರಕ್ಷಿಸುವಂತೆ–ನೀವೀಗ ನಮ್ಮನ್ನು ರಕ್ಷಿಸಬೇಕಾಗಿದೆ. ದ್ವಿಜಸತ್ತಮರೇ! ನಿಮ್ಮ ನೇತೃತ್ವದಲ್ಲಿ ಶತ್ರುಗಳನ್ನು ಜಯಿಸಬೇಕೆಂದು ನಾವು ಇಚ್ಛಿಸಿದ್ದೇವೆ.

**ರುದ್ರಾಣಾಮಿವ ಕಾಪಾಲೀ ವಸೂನಾಮಿವ ಪಾವಕಃ ।**
**ಕುಬೇರ ಇವ ಯಕ್ಷಾಣಾಂ ಮರುತಾಮಿವ ವಾಸವಃ ॥೫॥**

**ವಸಿಷ್ಠ ಇವ ವಿಪ್ರಾಣಾಂ ತೇಜಸಾಮಿವ ಭಾಸ್ಕರಃ ।**
**ಪಿತೄಣಾಮಿವ ಧರ್ಮೋಽಥ ಆದಿತ್ಯಾನಾಮಿವಾಂಬುರಾಟ್ ॥೬॥**

**ನಕ್ಷತ್ರಾಣಾಮಿವ ಶಶೀ ದಿತಿಜಾನಾಮಿವೋಶನಾಃ ।**
**ಶ್ರೇಷ್ಠಃ ಸೇನಾಪ್ರಣೇತೄಣಾಂ ಸ ನಃ ಸೇನಾಪತಿರ್ಭವ ॥೭॥**

ರುದ್ರರಲ್ಲಿ ಶಂಕರನು ಶ್ರೇಷ್ಠನು. ವಸುಗಳಲ್ಲಿ ಪಾವಕನು ಶ್ರೇಷ್ಠನು. ಯಕ್ಷರಲ್ಲಿ ಕುಬೇರನು ಶ್ರೇಷ್ಠನು. ಮರುದ್ಗಣದಲ್ಲಿ ವಾಸವನು ಶ್ರೇಷ್ಠನು. ಬ್ರಾಹ್ಮಣರಲ್ಲಿ ವಸಿಷ್ಠರು ಶ್ರೇಷ್ಠರು. ತೇಜಸ್ವಿಗಳಲ್ಲಿ ಭಾಸ್ಕರನು ಶ್ರೇಷ್ಠನು. ಪಿತೃದೇವತೆಗಳಲ್ಲಿ ಧರ್ಮರಾಜನು ಶ್ರೇಷ್ಠನು. ಜಲಚರಗಳಲ್ಲಿ ವರುಣನು ಶ್ರೇಷ್ಠನು. ನಕ್ಷತ್ರಗಳಲ್ಲಿ ಚಂದ್ರನು ಶ್ರೇಷ್ಠನು. ದಿತಿಯ ಮಕ್ಕಳಾದ ದೈತ್ಯರಿಗೆ ಶುಕ್ರರು ಪೂಜ್ಯರಾದವರು. ಅದೇ ರೀತಿಯಲ್ಲಿ ತಾವು ನಮ್ಮಲ್ಲಿರುವ

ಸೇನಾನಾಯಕರಲ್ಲಿ ಶ್ರೇಷ್ಠರಾಗಿರುತ್ತೀರಿ. ಆದುದರಿಂದ ತಾವು ನನ್ನ ಸೇನೆಯ ದಂಡನಾಯಕರಾಗಬೇಕೆಂದು ಬಿನ್ನವಿಸುತ್ತೇನೆ. ಹನ್ನೊಂದು



ಅಕ್ಷೌಹಿಣೀಸೈನ್ಯಗಳೂ ನಿಮ್ಮ ವಶದಲ್ಲಿರಲಿ. ಅವುಗಳಿಂದ ನೀವು ಶತ್ರುಗಳು ರಚಿಸುವ ವ್ಯೂಹಕ್ಕೆ ಪ್ರತಿವ್ಯೂಹವನ್ನು ರಚಿಸಿ–ಇಂದ್ರನು ದಾನವರನ್ನು ಸಂಹಾರಮಾಡಿದಂತೆ–ಶತ್ರುಗಳನ್ನು ಸಂಹರಿಸಿರಿ. ಕಾರ್ತಿಕೇಯನು ದೇವ ಸೇನೆಯ ಅಗ್ರಭಾಗದಲ್ಲಿ ಹೋಗುತ್ತಿದ್ದಂತೆ-ತಾವು ನಮ್ಮ ಸೇನೆಯ ಅಗ್ರಭಾಗ ದಲ್ಲಿ ಹೋಗಿರಿ. ಗೂಳಿಯನ್ನನುಸರಿಸಿ ಹೋರಿಕರುಗಳು ಹೋಗುವಂತೆ– ಯುದ್ಧದಲ್ಲಿ ನಾವೆಲ್ಲರೂ ನಿಮ್ಮನ್ನೇ ಅನುಸರಿಸಿ ಬರುತ್ತೇವೆ. ದಿವ್ಯವಾದ ಧನುಸ್ಸನ್ನು ಟೇಂಕರಿಸುತ್ತಾ ನಮ್ಮ ಸೇನೆಯ ಅಗ್ರಭಾಗದಲ್ಲಿರುವ ತಮ್ಮನ್ನು

ಕಂಡೊಡನೆಯೇ ಉಗ್ರಧನ್ವನಾದ, ಬಿಲ್ಲುಗಾರನಾದ ಅರ್ಜುನನು ಬಾಣಗಳಿಂದ ಪ್ರಹರಿಸುವುದಿಲ್ಲ. ಪುರುಷವ್ಯಾಘ್ರರೇ! ತಾವೇನಾದರೂ ಸೇನಾಪತಿಗಳಾದರೆ ನಾನು ನಿಶ್ಚಯವಾಗಿಯೂ ಬಾಂಧವಸಮೇತನಾದ, ಭ್ರಾತೃಸಹಿತನಾದ ಯುಧಿಷ್ಠಿರನನ್ನು ಜಯಿಸುವೆನು."

ಮಹಾರಾಜ! ದ್ರೋಣಾಚಾರ್ಯರನ್ನು ಕುರಿತು ನಿನ್ನ ಮಗನು ಹೀಗೆಂದು ಹೇಳಲಾಗಿ, ಸುತ್ತಲೂ ಇದ್ದ ರಾಜರು ಗಟ್ಟಿಯಾಗಿ ಸಿಂಹನಾದ ಮಾಡಿ ದುರ್ಯೋಧನನನ್ನು ಹರ್ಷಗೊಳಿಸುತ್ತಾ–"ದ್ರೋಣಾಚಾರ್ಯರಿಗೆ ಜಯವಾಗಲಿ! ಸೇನಾಪತಿಗಳಿಗೆ ಜಯವಾಗಲಿ! ದುರ್ಯೋಧನನಿಗೆ ಜಯವಾಗಲಿ!"– ಎಂದು ಗಗನಕ್ಕೆ ಮುಟ್ಟುವಂತೆ ಜಯಕಾರಮಾಡಿದರು.

ಸೈನಿಕರೂ ಸಂತೋಷಗೊಂಡವರಾಗಿ ದುರ್ಯೋಧನನನ್ನು ಮುಂದೆ ಮಾಡಿಕೊಂಡು ಯುದ್ಧದಲ್ಲಿ ಮಹಾಯಶಸ್ಸನ್ನು ಆಶಿಸುತ್ತಾ, ಬ್ರಾಹ್ಮಣೋತ್ತಮರಾದ ದ್ರೋಣಾಚಾರ್ಯರನ್ನು ಪ್ರಶಂಸಾಯುಕ್ತವಾದ ಮಾತುಗಳಿಂದ ಅಭಿನಂದಿಸುತ್ತಾ, ಅವರ ಉತ್ಸಾಹವನ್ನು ವೃದ್ಧಿಪಡಿಸುತ್ತಿದ್ದರು. ಅನಂತರ ದ್ರೋಣರು ದುರ್ಯೋಧನನನ್ನು ಕುರಿತು ಹೇಳತೊಡಗಿದರು."

ಒನೆಯ ಅಧ್ಯಾಯವು ಮುಗಿಯಿತು.

ಒನೆಯ ಅಧ್ಯಾಯ ದ್ರೋಣಾಭಿಷೇಕಪರ್ವ (ಮುಂದುವರಿದಿದೆ.)

## ದ್ರೋಣಾಚಾರ್ಯರಿಗೆ ಸೇನಾಪತಿಪಟ್ಟಗಟ್ಟಿದುದು : ಕೌರವ-ಪಾಂಡವರ ಯುದ್ಧ ಮತ್ತು ದ್ರೋಣರ ಪರಾಕ್ರಮ ಪ್ರದರ್ಶನ

ಸಂಜಯನು ಧೃತರಾಷ್ಟ್ರನಿಗೆ ದ್ರೋಣರು ದುರ್ಯೋಧನನಿಗೆ ಹೇಳಿದ ಮಾತುಗಳನ್ನು ಹೇಳುತ್ತಾನೆ :

"ದುರ್ಯೋಧನ! ಷಡಂಗಸಹಿತವಾದ ವೇದಗಳನ್ನು ನಾನು ಅಧ್ಯ ಯನ ಮಾಡಿದ್ದೇನೆ. ಮನುವು ಹೇಳಿರುವ ಅರ್ಥಶಾಸ್ತ್ರವನ್ನೂ ಅಧ್ಯಯನ ಮಾಡಿದ್ದೇನೆ. ಶಂಕರನ ಸಂಬಂಧವಾದ ಇಷ್ವಸ್ತ್ರಗಳನ್ನೂ ಮತ್ತು ಇನ್ನೂ ಅನೇಕ ವಿಧವಾದ ಶಸ್ತ್ರಗಳನ್ನೂ ತಿಳಿದುಕೊಂಡಿರುತ್ತೇನೆ. ವಿಜಯಾಕಾಂಕ್ಷಿಗಳಾದ ನೀವು ನನ್ನಲ್ಲಿ ಯಾವ ಗುಣಗಳನ್ನು ಹೇಳಿರುವಿರೋ ಆ ಎಲ್ಲ ಗುಣ

ಗಳನ್ನೂ ಪ್ರಮಾಣೀಕರಿಸಿ ತೋರಿಸುವ ಇಚ್ಛೆಯಿಂದ ನಾನು ಎಲ್ಲ ಪಾಂಡವ ರೊಡನೆಯೂ ಯುದ್ಧಮಾಡುತ್ತೇನೆ. ಆದರೆ ದ್ರುಪದನ ಮಗನಾದ ಧೃಷ್ಟದ್ಯುಮ್ನನನ್ನು ಮಾತ್ರ ನಾನು ಯಾವುದೇ ಕಾರಣದಿಂದಲೂ ಸಂಹಾರ ಮಾಡುವುದಿಲ್ಲ. (ಸಂಹಾರಮಾಡಲು ಸಾಧ್ಯವಾಗುವುದಿಲ್ಲ). ಆ ಪುರುಷ ರ್ಷಭನು ನನ್ನನ್ನು ವಧಿಸುವ ಸಲುವಾಗಿಯೇ ಜನ್ಮತಾಳಿದ್ದಾನೆ. ಎಲ್ಲ ಸೋಮಕರನ್ನೂ ಸಂಹಾರಮಾಡುತ್ತಾ ನಾನು ಪಾಂಡವರ ಸೈನ್ಯದೊಡನೆ ಯುದ್ಧಮಾಡುತ್ತೇನೆ. ಆದರೆ ಪಾಂಡವರು ಪ್ರಸನ್ನಚಿತ್ತರಾಗಿ ನನ್ನೊಡನೆ ಯುದ್ಧಮಾಡುವುದು ಸಾಧ್ಯವಾಗಲಾರದು."



ಮಹಾರಾಜ! ದ್ರೋಣರು ಹೀಗೆ ಹೇಳಿ ಕೌರವಸೈನ್ಯಕ್ಕೆ ಸೇನಾಪತಿ ಗಳಾಗಲು ಒಪ್ಪಿಗೆಯನ್ನು ನೀಡಲಾಗಿ, ನಿನ್ನ ಮಗ ದುರ್ಯೋಧನನು

ಶಾಸ್ತ್ರವಿಧಿಗಳಿಗೆ ಅನುಸಾರವಾಗಿ ದ್ರೋಣರನ್ನು ಕೌರವಸೇನೆಯ ದಂಡ ನಾಯಕರನ್ನಾಗಿ ಮಾಡಿದನು. ಹಿಂದೆ ಇಂದ್ರಪ್ರಮುಖರಾದ ದೇವತೆಗಳು ಸ್ಕಂದನನ್ನು ದೇವಸೇನೆಯ ಅಧಿಪತಿಯ ಸ್ಥಾನದಲ್ಲಿ ಅಭಿಷೇಕಮಾಡಿ ದಂತೆಯೇ ದುರ್ಯೋಧನಪ್ರಮುಖರಾದ ರಾಜರು ದ್ರೋಣರನ್ನು ಪ್ರಧಾನ ಸೇನಾಪತಿಯ ಸ್ಥಾನದಲ್ಲಿ ಕುಳ್ಳಿರಿಸಿ ಅಭಿಷೇಕಮಾಡಿದರು. ಮಂಗಳವಾದ್ಯ ಗಳ ಘೋಷಗಳೊಡನೆ ಮತ್ತು ಶಂಖಧ್ವನಿಗಳೊಡನೆ ದ್ರೋಣರು ಕೌರವ ಸೇನೆಗೆ ಮಹಾದಂಡನಾಯಕರಾದರು. ಆದರಿಂದ ಕೌರವರೆಲ್ಲರಿಗೂ ಮಹಾ ನಂದವಾಯಿತು. ಪುಣ್ಯಾಹಘೋಷ, ಸ್ವಸ್ತಿವಾಚನ, ಸೂತ-ವಂದಿ-ಮಾಗಧರ ಹೊಗಳಿಕೆ, ಸಂಗೀತ, ಶ್ರೇಷ್ಠರಾದ ಬ್ರಾಹ್ಮಣರಿಂದ ಜಯಾಶಿಷಗಳು, ನೃತ್ಯ ಗಾತಿಯರಿಂದ ನರ್ತನ–ಇತ್ಯಾದಿಗಳಿಂದ ದ್ರೋಣರನ್ನು ಯಥಾವಿಧಿಯಾಗಿ ಸತ್ಕರಿಸಿದ ಕೌರವರು, ಪಾಂಡವರು ಪರಾಜಿತರಾದರೆಂದೇ ಭಾವಿಸಿದರು.

ಮಹಾರಥರಾದ ದ್ರೋಣರು ಸೇನಾಪತಿಯ ಸ್ಥಾನವನ್ನು ವಹಿಸಿ ಕೊಂಡು ಪಾಂಡವರೊಡನೆ ಯುದ್ಧಮಾಡಲಿಚ್ಛಿಸಿ ತಮ್ಮ ಸೈನ್ಯವನ್ನು ವ್ಯೂಹ ಕ್ರಮದಲ್ಲಿ ನಿಲ್ಲಿಸಿ, ನಿನ್ನ ಮಕ್ಕಳೊಡನೆ ರಣಾಂಗಣಕ್ಕೆ ತೆರಳಿದರು. ಸಿಂಧು ರಾಜನಾದ ಜಯದ್ರಥ, ಕಳಿಂಗರಾಜ, ನಿನ್ನ ಮಗ ವಿಕರ್ಣ–ಇವರು ಕವಚ ಗಳನ್ನು ಧರಿಸಿ ದ್ರೋಣರ ದಕ್ಷಿಣಭಾಗವನ್ನು ಆಶ್ರಯಿಸಿದರು. ಶುದ್ಧವಾದ ಪ್ರಾಸಾಯುಧಗಳಿಂದಲೇ ಯುದ್ಧಮಾಡುವ ಕುಶಲತೆಯನ್ನು ಹೊಂದಿದ್ದ, ಗಾಂಧಾರದೇಶದ ಶ್ರೇಷ್ಠರಾದ ಕುದುರೆಸವಾರರೊಡನೆ ಶಕುನಿಯು ದಕ್ಷಿಣ ಭಾಗದಲ್ಲಿದ್ದ ರಾಜರಿಗೆ ಸಹಾಯಕನಾಗಿ ಹೋಗುತ್ತಿದ್ದನು. ದುಃಶಾಸನ ಪ್ರಮುಖರಾದ ಕೃಪ, ಕೃತವರ್ಮಾ, ಚಿತ್ರಸೇನ, ವಿವಿಂಶತಿ-ಇವರು ದ್ರೋಣಾಚಾರ್ಯರ ಎಡಭಾಗದಲ್ಲಿದ್ದರು. ಅವರಿಗೆ ಸಹಾಯಕರಾಗಿ ಸುದಕ್ಷಿಣಪುರಃಸರರಾದ ಕಾಂಬೋಜಸೈನಿಕರು ಹೋಗುತ್ತಿದ್ದರು. ಅವರೊಡನೆ ಯವನರಿಂದ ಕೂಡಿದ ಶಕರು ಮಹಾವೇಗಯುಕ್ತವಾದ ಕುದುರೆಗಳ ಮೇಲೆ ಕುಳಿತು ಹೋಗುತ್ತಿದ್ದರು. ಮದ್ರರು, ತ್ರಿಗರ್ತರು, ಅಂಬಷ್ಠರು, ಪಾಶ್ಚಾತ್ಯರು, ಔತ್ತರೇಯರು, ಮಾಲವರು, ಶಿಬಿಗಳು, ಶೂರ ಸೇನರು, ಶೂದ್ರರು, ಮಲದರು, ಸೌವೀರರು, ಕಿತವರು, ದಾಕ್ಷಿಣಾತ್ಯರು– ಇವರೆಲ್ಲರೂ ದುರ್ಯೋಧನನನ್ನು ಮುಂದೆಮಾಡಿಕೊಂಡು ಕರ್ಣನ ಹಿಂಭಾಗದಲ್ಲಿ–ತಮ್ಮ ತಮ್ಮ ಸೈನಿಕರನ್ನು ಜಯಘೋಷಗಳಿಂದ ಹರ್ಷ

ಗೊಳಿಸುತ್ತಾ ನಿನ್ನ ಇತರ ಮಕ್ಕಳೊಡನೆ ಹೋಗುತ್ತಿದ್ದರು. ಸರ್ವಯೋಧರಲ್ಲೂ ಶ್ರೇಷ್ಠನಾದ ವಿಕರ್ತನನ ಮಗನಾದ ಕರ್ಣನು ಎಲ್ಲ ಸೈನಿಕರಿಗೂ ತನ್ನ ಉಪಸ್ಥಿತಿಯಿಂದಲೇ ಬಲೋತ್ಸಾಹಗಳನ್ನು ತುಂಬುತ್ತಾ ಸರ್ವಧನುಷ್ಮಂತರ ಮುಂಭಾಗದಲ್ಲಿ ಹೋಗುತ್ತಿದ್ದನು. ಬಹಳ ದೊಡ್ಡದಾಗಿದ್ದ ಆನೆಯ ನಡುವಿಗೆ ಕಟ್ಟುವ ಹಗ್ಗದ ಚಿಹ್ನೆಯನ್ನು ಹೊಂದಿದ್ದ, ಸೂರ್ಯನ ಪ್ರಭೆಗೆ ಸಮಾನವಾದ ಪ್ರಭೆಯನ್ನು ಹೊಂದಿದ್ದ ಮಹಾಧ್ವಜವು ಕರ್ಣನ ರಥದ ಸುತ್ತಲೂ ಇದ್ದ ಸೈನಿಕರನ್ನು ಹರ್ಷಗೊಳಿಸುತ್ತಾ ಬಹಳವಾಗಿ ಪ್ರಕಾಶಿಸಿತು. ಕರ್ಣನನ್ನು ನೋಡಿದನಂತರ ಕೌರವಸೈನಿಕರು ಭೀಷ್ಮನ ಮರಣದಿಂದಾದ ದುಃಖವನ್ನು ಮರೆತೇಬಿಟ್ಟರು. ಕುರುಗಳೊಡನಿದ್ದ ಎಲ್ಲ ರಾಜರೂ ಶೋಕರಹಿತರಾದರು. ಆನಂದತುಂದಿಲರಾದ ಅನೇಕಯೋಧರು ಬಹಳ ಗಟ್ಟಿಯಾಗಿಯೇ ಪರಸ್ಪರವಾಗಿ ಹೀಗೆ ಹೇಳಿಕೊಳ್ಳುತ್ತಿದ್ದರು :

**ನ ಹಿ ಕರ್ಣಂ ರಣೇ ದೃಷ್ಟ್ವಾ ಯುಧಿ ಸ್ಥಾಸ್ಯನ್ತಿ ಪಾಣ್ಡವಾಃ ॥೨೦॥**

"ರಣಭೂಮಿಯಲ್ಲಿ ಕರ್ಣನನ್ನು ನೋಡಿದೊಡನೆಯೇ ಪಾಂಡವರು ರಣರಂಗದಲ್ಲಿ ನಿಲ್ಲುವುದೇ ಇಲ್ಲ.

**ಕರ್ಣೋ ಹಿ ಸಮರೇ ಶಕ್ತೋ ಜೇತುಂ ದೇವಾನ್ಸವಾಸವಾನ್ ।**
**ಕಿಮು ಪಾಣ್ಡುಸುತಾನ್ಯುದ್ಧೇ ಹೀನವೀರ್ಯಪರಾಕ್ರಮಾನ್ ॥೨೧॥**

ಕರ್ಣನು ಯುದ್ಧದಲ್ಲಿ ಇಂದ್ರಸಹಿತರಾದ ದೇವತೆಗಳನ್ನೂ ಜಯಿಸಲು ಸಮರ್ಥನಾಗಿರುತ್ತಾನೆ. ಹೀಗಿರುವಾಗ ಹೀನವೀರ್ಯಪರಾಕ್ರಮರಾದ (ಪರಾಕ್ರಮದಲ್ಲಿ ಕರ್ಣನಿಗೆ ಸ್ವಲ್ಪವಾದರೂ ಸಾಟಿಯೇ ಅಲ್ಲದ) ಪಾಂಡುಪುತ್ರರನ್ನು ಜಯಿಸುವುದರಲ್ಲಿ ವಿಶೇಷವೇನಿದೆ?

**ಭೀಷ್ಮೇಣ ತು ರಣೇ ಪಾರ್ಥಾಃ ಪಾಲಿತಾ ಬಾಹುಶಾಲಿನಾ ।**
**ತಾಂಸ್ತು ಕರ್ಣಃ ಶರೈಸ್ತೀಕ್ಷ್ಣೈರ್ನಾಶಯಿಷ್ಯತಿ ಸಂಯುಗೇ ॥೨೨॥**

ಯದ್ಯಪಿ ಉತ್ಕೃಷ್ಟವಾದ ಭುಜಗಳಿಂದ ಶೋಭಿತನಾದ ಭೀಷ್ಮನು ದುರ್ಯೋಧನನ ಪಕ್ಷದಲ್ಲಿಯೇ ಇದ್ದರೂ ಕಳೆದ ಹತ್ತು ದಿವಸಗಳ ಯುದ್ಧದಲ್ಲಿ ಪಾಂಡವರನ್ನು ರಕ್ಷಿಸುತ್ತಲೇ ಇದ್ದನು. (ಕೊಲ್ಲಲಿಲ್ಲ). ಆದರೆ ಕರ್ಣನ ಸ್ವಭಾವವು ಹಾಗಲ್ಲ. ಇವನು ಸಮಯ ಸಿಕ್ಕಿತೆಂದರೆ ಯುದ್ಧದಲ್ಲಿ ತೀಕ್ಷ್ಣವಾದ ಬಾಣಗಳಿಂದ ಪಾಂಡವರನ್ನು ನಾಶಗೊಳಿಸುತ್ತಾನೆ." ಈ ರೀತಿಯಲ್ಲಿ

ಆ ಸೈನಿಕರು ಪರಸ್ಪರವಾಗಿ ಮಾತನಾಡಿಕೊಂಡು ಪ್ರಸನ್ನಚಿತ್ತರಾಗಿ ರಾಧೇಯನನ್ನು ಆದರಿಸುತ್ತಾ ಮತ್ತು ಪ್ರಶಂಸಿಸುತ್ತಾ ಮುಂದೆ ಹೋಗುತ್ತಿದ್ದರು. ಅಂದಿನ ದಿವಸ ದ್ರೋಣರು ನಮ್ಮ ಸೈನ್ಯಗಳ ಮೂಲಕ ಶಕಟವ್ಯೂಹವನ್ನು ರಚಿಸಿದರು. ಮಹಾತ್ಮರಾದ ನಮ್ಮ ಶತ್ರುಗಳು ಕ್ರೌಂಚವ್ಯೂಹವನ್ನೇ ಪುನಃ ರಚಿಸಿಕೊಂಡಿದ್ದರು. ಪ್ರಸನ್ನಚಿತ್ತನಾಗಿದ್ದ ಯುಧಿಷ್ಠಿರರಾಜನೇ ಆ ವ್ಯೂಹವನ್ನು ರಚಿಸಿದ್ದನು. ಅವರ ವ್ಯೂಹದ ಅಗ್ರಭಾಗದಲ್ಲಿ ವಿಷ್ವಕ್ಸೇನ-ಧನಂಜಯರು ತಮ್ಮ ರಥದಲ್ಲಿ ವಾನರಧ್ವಜವನ್ನು ಹಾರಿಸಿಕೊಂಡು ನಿಂತಿದ್ದರು. ಸರ್ವಸೈನ್ಯಗಳಿಗೂ ಗುರುತಿನ ರೂಪವಾಗಿದ್ದ, ಸರ್ವಧನುಷ್ಮಂತರಿಗೂ ಆಶ್ರಯಭೂತವಾಗಿದ್ದ, ಸೂರ್ಯನ ಮಾರ್ಗವಾದ ಆಕಾಶದಲ್ಲಿದ್ದ, ಅಮಿತತೇಜಸ್ವಿಯಾದ ಪಾರ್ಥನ ಕಪಿಧ್ವಜವು ಮಹಾತ್ಮನಾದ ಯುಧಿಷ್ಠಿರನ ಸೈನ್ಯವನ್ನು ಪ್ರಕಾಶಗೊಳಿಸಿತು. ಪ್ರಳಯಕಾಲದಲ್ಲಿ ಪ್ರಜ್ವಲಿತನಾದ ಸೂರ್ಯನು ಯಾವ ರೀತಿಯಲ್ಲಿ ಭೂಮಿಯನ್ನು ಉಜ್ಜ್ವಲಪ್ರಕಾಶದಿಂದ ಬೆಳಗುವನೋ- ಅದೇ ರೀತಿಯಲ್ಲಿ ಧೀಮಂತನಾದ ಅರ್ಜುನನ ಧ್ವಜವು ಆ ರಣಾಂಗಣವನ್ನು ತನ್ನ ಉಜ್ಜ್ವಲಪ್ರಕಾಶದಿಂದ ಬೆಳಗುತ್ತಿರುವಂತೆ ಕಾಣುತ್ತಿದ್ದಿತು.

**ಯೋಧಾನಾಮರ್ಜುನಃ ಶ್ರೇಷ್ಠೋ ಗಾಣ್ಡೀವಂ ಧನುಷಾಂ ವರಮ್ ।**
**ವಾಸುದೇವಶ್ಚ ಭೂತಾನಾಂ ಚಕ್ರಾಣಾಂ ಚ ಸುದರ್ಶನಮ್ ॥೨೯॥**

ಯೋಧರಲ್ಲಿ ಅರ್ಜುನನು ಶ್ರೇಷ್ಠನು. ಧನುಸ್ಸುಗಳಲ್ಲಿ ಗಾಂಡೀವ ಧನುಸ್ಸು ಶ್ರೇಷ್ಠವಾದುದು. ಪ್ರಾಣಿಗಳಲ್ಲಿ ವಾಸುದೇವನು ಶ್ರೇಷ್ಠನಾದವನು. ಚಕ್ರಗಳಲ್ಲಿ ಸುದರ್ಶನಚಕ್ರವು ಶ್ರೇಷ್ಠವಾದುದು. ಈ ನಾಲ್ಕು ತೇಜಸ್ಸುಗಳನ್ನೂ ಧರಿಸಿಕೊಂಡು ಬಿಳಿಯ ಕುದುರೆಗಳಿಂದ ಯುಕ್ತವಾಗಿದ್ದ ರಥವು ಮೇಲೆದ್ದುನಿಂತಿರುವ ಕಾಲಚಕ್ರದೋಪಾದಿಯಲ್ಲಿ–ಶತ್ರುಸೈನ್ಯದ ಅಗ್ರಭಾಗದಲ್ಲಿ ನಿಂತಿದ್ದಿತು. ಈ ರೀತಿಯಲ್ಲಿ ಮಹಾತ್ಮರಾದ ಕೃಷ್ಣಾರ್ಜುನರಿಬ್ಬರೂ ಬಲಿಷ್ಠವಾದ ತಮ್ಮ ಸೈನ್ಯದ ಅಗ್ರಭಾಗದಲ್ಲಿ ವಿರಾಜಮಾನರಾಗಿದ್ದರು. ನಿನ್ನ ಸೈನ್ಯದ ಅಗ್ರಭಾಗದಲ್ಲಿ ಕರ್ಣನೂ, ಶತ್ರುಸೈನ್ಯದ ಅಗ್ರಭಾಗದಲ್ಲಿ ಧನಂಜಯನೂ ನಿಂತಿದ್ದರು. ಆ ಸಮಯದಲ್ಲಿ ಕರ್ಣಾರ್ಜುನರು ತಮ್ಮ-ತಮ್ಮ ಪಕ್ಷಕ್ಕೆ ವಿಜಯವನ್ನು ಗಳಿಸಿಕೊಡಬೇಕೆಂಬ ಕಾರಣದಿಂದ ಕ್ರುದ್ಧರಾಗಿದ್ದರು. ಒಬ್ಬರು ಮತ್ತೊಬ್ಬರನ್ನು ವಧೆಮಾಡುವ ಇಚ್ಛೆಯಿಂದಿದ್ದ ಕರ್ಣ-ಪಾಂಡವರು

ಪರಸ್ಪರವಾಗಿ ದುರುಗುಟ್ಟಿಕೊಂಡು ನೋಡುತ್ತಿದ್ದರು. ಮಹಾರಥರಾದ ಭಾರದ್ವಾಜರು ಸೇನೆಯ ಅಗ್ರಭಾಗಕ್ಕೆ ರಭಸದಿಂದ ಹೋಗಲಾಗಿ ಭಯಂಕರ ವಾದ ಆರ್ತನಾದಗಳಿಂದ ಪ್ರಪಂಚವೇ ನಡುಗಿತು.

ಪ್ರಚಂಡವಾದ ಗಾಳಿಯೆದ್ದು ರೇಷ್ಮೆಯಂತಹ ನವುರಾದ ಧೂಳಿ ಯೆದ್ದಿತು. ಭಯಂಕರವಾದ ಆ ಧೂಳಿಯು ಸೂರ್ಯಸಹಿತವಾಗಿ ಆಕಾಶ ವನ್ನೇ ವ್ಯಾಪಿಸಿಬಿಟ್ಟಿತು. ಆಗ ಆಕಾಶದಲ್ಲಿ ಮೋಡವಿಲ್ಲದಿದ್ದರೂ ಮಾಂಸ, ಮೂಳೆ ಮತ್ತು ರಕ್ತಗಳ ಮಳೆಯು ಸುರಿಯಿತು. ಹದ್ದುಗಳು, ಗಿಡಗಪಕ್ಷಿಗಳು, ಬಕಪಕ್ಷಿಗಳು, ರಣಹದ್ದುಗಳು ಮತ್ತು ಕಾಗೆಗಳು ಸಾವಿರಾರು ಸಂಖ್ಯೆಯಲ್ಲಿ ನಿನ್ನ ಸೈನ್ಯದ ಮೇಲ್ಭಾಗದಲ್ಲಿ ಹಾರಾಡುತ್ತಿದ್ದುವು. ಗುಳ್ಳೇನರಿಗಳು ಭಯಂಕರವಾಗಿ ಮತ್ತು ವಿಕಾರವಾಗಿ ಕಿರುಚಿಕೊಳ್ಳುತ್ತಿದ್ದುವು. ಮಾಂಸವನ್ನು ತಿನ್ನುವ ಇಚ್ಛೆಯಿಂದಲೂ, ರಕ್ತವನ್ನು ಕುಡಿಯುವ ಇಚ್ಛೆಯಿಂದಲೂ ಗುಳ್ಳೇನರಿಗಳು ನಿನ್ನ ಸೈನ್ಯವನ್ನು ಅಪಸವ್ಯವಾಗಿ ಸುತ್ತುತ್ತಿದ್ದುವು. ಆ ಸಮಯದಲ್ಲಿ ಪ್ರಜ್ವಲಿಸುತ್ತಿದ್ದ ಮತ್ತು ದೇದೀಪ್ಯಮಾನವಾಗಿದ್ದ ಒಂದು ಉಲ್ಕೆಯು ತನ್ನ ಬಾಲದಿಂದ ಆಕಾಶವನ್ನು ವ್ಯಾಪಿಸಿ ದೊಡ್ಡ ಶಬ್ದವನ್ನೂ ಮತ್ತು ಕಂಪನವನ್ನೂ ಉಂಟುಮಾಡುತ್ತಾ ಭೂಮಿಯ ಮೇಲೆ ಬಿದ್ದಿತು. ಕೌರವರ ಕಡೆಯ ಸೇನಾಪತಿಗಳಾದ ದ್ರೋಣರು ಯುದ್ಧಮಾಡಲು ಮುಂದೆ ಹೋಗಲಾಗಿ ಸೂರ್ಯನ ಸುತ್ತಲೂ ದೊಡ್ಡ ಪರಿವೇಷವು ಕಟ್ಟಿತು. ಮಿಂಚಿನೊಡನೆ ಮೇಘಗಳ ಗರ್ಜನೆಯು ಕೇಳಿಬರುತ್ತಿದ್ದಿತು. ಅದೂ ಅಲ್ಲದೇ ವೀರರ ಜೀವಿತಕ್ಷಯಕಾರಿಗಳಾದ ಸುದಾರುಣಗಳಾದ ಇನ್ನೂ ಅನೇಕವಾದ ಉತ್ಪಾತ ಗಳು ಯುದ್ಧಸಮಯದಲ್ಲಿ ಕಾಣಿಸಿಕೊಂಡುವು. ಅನಂತರ ಪರಸ್ಪರ ವಧೇಚ್ಛುಗಳಾದ ಕುರು-ಪಾಂಡವಸೈನ್ಯಗಳ ನಡುವೆ ಯುದ್ಧವು ಪ್ರಾರಂಭ ವಾಯಿತು. ಆ ಸಮಯದಲ್ಲುಂಟಾದ ಕೋಲಾಹಲಶಬ್ದವು ಜಗತ್ತನ್ನೇ ವ್ಯಾಪಿ ಸಿತು. ಬಹಳ ಕ್ರುದ್ಧರಾಗಿದ್ದ ಪ್ರಹಾರಕುಶಲರಾದ ಕೌರವರೂ ಮತ್ತು ಪಾಂಡವರೂ ವಿಜಯಗಳಿಸುವ ಅಭಿಲಾಷೆಯಿಂದ ಅನ್ಯೋನ್ಯವಾಗಿ ನಿಶಿತ ವಾದ ಶಸ್ತ್ರಗಳಿಂದ ಪ್ರಹರಿಸತೊಡಗಿದರು. ಮಹಾದ್ಯುತಿಮಂತರಾದ ಮತ್ತು ಮಹಾಧನುಷ್ಮಂತರಾದ ದ್ರೋಣರು ನಿಶಿತವಾದ ನೂರಾರು ಬಾಣಗಳ ಮಳೆಗರೆಯುತ್ತಾ ಪಾಂಡವರ ವಿಶಾಲವಾದ ಸೈನ್ಯವನ್ನು ವೇಗವಾಗಿ ಆಕ್ರಮಿಸಿದರು. ದ್ರೋಣರು ತಮ್ಮನ್ನು ಆಕ್ರಮಿಸಿದುದನ್ನು ಕಂಡು ಪಾಂಡವ

ಯೋಧರು ಸೃಂಜಯಯೋಧರೊಡನೆ ಸೇರಿ ಪ್ರತಿಯೊಬ್ಬ ಯೋಧನೂ ಪ್ರತ್ಯೇಕ-ಪ್ರತ್ಯೇಕವಾಗಿ ದ್ರೋಣರ ಮೇಲೆ ಬಾಣಗಳ ಮಳೆಗರೆಯುತ್ತಾ ಅವರನ್ನು ಎದುರಿಸಿದನು. ಆದರೆ ಚಂಡಮಾರುತದಿಂದ ಮೋಡವು ಚದುರಿ ಹೋಗುವಂತೆ–ಸೇನಾಪತಿಗಳಾದ ದ್ರೋಣರ ಅವ್ಯಾಹತವಾದ ಬಾಣಗಳ ಪ್ರಹಾರದಿಂದ ಮಥಿಸಲ್ಪಟ್ಟ ಪಾಂಚಾಲಸೇನೆಯಿಂದ ಕೂಡಿದ್ದ ಪಾಂಡವ ಮಹಾಸೇನೆಯು ಕ್ಷತ-ವಿಕ್ಷತವಾಗಿ ಹೋಯಿತು (ನುಚ್ಚುನೂರಾಗಿ ಹೋಯಿತು.) ದ್ರೋಣರು ಯುದ್ಧದಲ್ಲಿ ಅನೇಕಾನೇಕ ದಿವ್ಯಾಸ್ತ್ರಗಳನ್ನು ಪ್ರಯೋಗಿಸುತ್ತಾ ಕ್ಷಣಮಾತ್ರದಲ್ಲಿ ಪಾಂಡವ-ಸೃಂಜಯರನ್ನು ಬಹುವಾಗಿ ಪೀಡಿಸಿದರು. ಇಂದ್ರನಿಂದ ದಾನವರು ಪೀಡಿಸಲ್ಪಡುತ್ತಿದ್ದಂತೆ-ದ್ರೋಣರಿಂದ ಸತತವಾಗಿ ಪೀಡಿಸಲ್ಪಡುತ್ತಿದ್ದ ಧೃಷ್ಟದ್ಯುಮ್ನಪುರಃಸರರಾದ ಪಾಂಚಾಲರು ಭಯದಿಂದ ನಡುಗತೊಡಗಿದರು. ದ್ರೋಣರ ಪೀಡನೆಯಿಂದ ಪರಮಕ್ರುದ್ಧ ನಾದ, ದಿವ್ಯಾಸ್ತ್ರವಿದನಾಗಿದ್ದ, ಶೂರನಾದ, ಮಹಾರಥನಾದ ಧೃಷ್ಟದ್ಯುಮ್ನನು ದ್ರೋಣಾಚಾರ್ಯರ ಸೈನ್ಯವನ್ನು ಅನೇಕಪ್ರಕಾರವಾಗಿ ಭೇದಿಸಿದನು.

ಬಲಿಷ್ಠನಾದ ಪಾರ್ಷತನು ದ್ರೋಣರ ಬಾಣಗಳ ವರ್ಷವನ್ನು ಬಾಣ ಗಳ ವರ್ಷದಿಂದಲೇ ನಿರಸನಗೊಳಿಸಿ ಅನಂತರ ಕೌರವರ ಅನೇಕಸೈನಿಕರನ್ನೂ ಸಂಹರಿಸಿದನು. ಅದರಿಂದ ಕ್ರುದ್ಧರಾದ ಮಹಾಧನುಷ್ಮಂತರಾದ ದ್ರೋಣರು ಭಯಪಟ್ಟು ಓಡುತ್ತಿದ್ದ ತಮ್ಮ ಸೈನ್ಯವನ್ನು ಹತೋಟಿಗೆ ತೆಗೆದುಕೊಂಡು ಅದನ್ನು ರಣಾಂಗಣದಲ್ಲಿ ಸುವ್ಯವಸ್ಥಿತವಾದ ಸ್ಥಿತಿಯಲ್ಲಿ ನಿಲ್ಲಿಸಿ ಪಾರ್ಷತನನ್ನು ಬೆನ್ನಟ್ಟಿದರು. ಪರಮಕ್ರುದ್ಧನಾದ ಇಂದ್ರನು ದಾನವರ ಮೇಲೆ ಬಾಣಗಳ ಮಳೆಗರೆದಂತೆ–ದ್ರೋಣರು ಧೃಷ್ಟದ್ಯುಮ್ನನ ಮೇಲೆ ದೊಡ್ಡದಾದ ಬಾಣಗಳ ಮಳೆಯನ್ನು ಸುರಿಸಿದರು. ಸಿಂಹದರ್ಶನದಿಂದ ಇತರ ಮೃಗಗಳು ಭಯಗೊಂಡು ಓಡುವಂತೆ–ದ್ರೋಣರ ಬಾಣಗಳಿಂದ ನಡುಗಿಹೋದ ಪಾಂಡವ-ಸೃಂಜಯಯೋಧರು ಪುನಃ-ಪುನಃ ಭಗ್ನರಾಗಿಹೋಗುತ್ತಿದ್ದರು. ಈ ರೀತಿಯಲ್ಲಿ ಬಲಿಷ್ಠರಾದ ದ್ರೋಣರು ಪಾಂಡವರ ಸೇನಾವ್ಯೂಹವನ್ನು ಹೊಕ್ಕು ಕೊಳ್ಳಿಯ ಚಕ್ರದಂತೆ ಸುತ್ತಲೂ ತಿರುಗುತ್ತಾ ಸೈನಿಕರನ್ನು ಧ್ವಂಸಮಾಡುತ್ತಿದ್ದರು. ಅದು ನಮಗೆ ಪರಮಾದ್ಭುತವಾಗಿ ಕಾಣಿಸುತ್ತಿದ್ದಿತು.

ಮಹಾರಾಜ! ಶಾಸ್ತ್ರೋಕ್ತವಾದ ವಿಧಾನದಿಂದ ನಿರ್ಮಿತವಾಗಿದ್ದ

ದ್ರೋಣರ ರಥವು ಆಕಾಶದಲ್ಲಿರುವ ಗಂಧರ್ವನಗರಿಯಂತೆಯೇ ಕಾಣುತ್ತಿದ್ದಿತು. ರಥದ ಪತಾಕೆಯು ಗಾಳಿಯಿಂದ ಪಟ-ಪಟಿಸಿ ಹಾರಾಡುತ್ತಿದ್ದಿತು. ನೋಡಿದವರಿಗೆ ಅದು ಆಹ್ಲಾದವನ್ನು ಉಂಟುಮಾಡುವುದಾಗಿದ್ದಿತು. ರಥದ ಕುದುರೆಗಳು ನೆಗೆ-ನೆಗೆದುಕೊಂಡು ಓಡುತ್ತಿದ್ದುವು. ಆ ರಥವು ಸ್ಫಟಿಕಶಿಲೆಯಂತೆ ಸ್ವಚ್ಛವಾಗಿಯೂ ಮತ್ತು ಕಲ್ಮಶರಹಿತವಾಗಿಯೂ ಇದ್ದ ಧ್ವಜವನ್ನು ಹೊಂದಿದ್ದಿತು. ಶತ್ರುಗಳಿಗೆ ಭಯವನ್ನುಂಟುಮಾಡುವುದಾಗಿದ್ದಿತು. ಅಂತಹ ಶ್ರೇಷ್ಠವಾದ ರಥದಲ್ಲಿ ಕುಳಿತು ದ್ರೋಣರು ಶತ್ರುಸೈನ್ಯವನ್ನು ಅಪರಿಮಿತವಾದ ಸಂಖ್ಯೆಯಲ್ಲಿ ಸಂಹಾರಮಾಡುತ್ತಿದ್ದರು.”

ಒನೆಯ ಅಧ್ಯಾಯವು ಮುಗಿಯಿತು.

೮ನೆಯ ಅಧ್ಯಾಯ ದ್ರೋಣಾಭಿಷೇಕಪರ್ವ (ಮುಂದುವರಿದಿದೆ.)

## ದ್ರೋಣಾಚಾರ್ಯರ ಪರಾಕ್ರಮ ಮತ್ತು ಅವರ ವಧೆಯ ಸಂಕ್ಷಿಪ್ತವಾರ್ತೆ

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ :

“ಮಹಾರಾಜ! ಈ ರೀತಿಯಲ್ಲಿ ದ್ರೋಣರು ಶತ್ರುಪಕ್ಷದ ಅಶ್ವ-ಸೂತ-ರಥ-ಗಜಗಳನ್ನು ಅಪಾರಸಂಖ್ಯೆಯಲ್ಲಿ ಸಂಹಾರಮಾಡುತ್ತಿದ್ದುದನ್ನು ನೋಡಿಯೂ ಪಾಂಡವರು ಅವರನ್ನು ಆಕ್ರಮಿಸಲು ಸಮರ್ಥರಾಗಲಿಲ್ಲ. ಸುಮ್ಮನೆ ವ್ಯಥೆಪಡುತ್ತಿದ್ದರು. ಆ ಸಮಯದಲ್ಲಿ ಯುಧಿಷ್ಠಿರನು ಎಲ್ಲ ಕಡೆಗಳಿಂದಲೂ ಏಕಕಾಲದಲ್ಲಿ ದ್ರೋಣರನ್ನು ಆಕ್ರಮಿಸಿ ಸಂಹಾರಕಾರ್ಯವನ್ನು ನಿಲ್ಲಿಸುವಂತೆ ಮಾಡಬೇಕೆಂದು ಧೃಷ್ಟದ್ಯುಮ್ನ-ಧನಂಜಯರಿಗೆ ಹೇಳಿದನು. ಯುಧಿಷ್ಠಿರನ ಮಾತನ್ನು ಕೇಳಿ ಅರ್ಜುನನೂ, ಅನುಯಾಯಿಗಳಿಂದೊಡಗೂಡಿದ ಧೃಷ್ಟದ್ಯುಮ್ನನೂ ಮತ್ತು ಪಾಂಡವರ ಕಡೆಯ ಎಲ್ಲ ಮಹಾರಥರೂ ದ್ರೋಣರನ್ನು ಮುತ್ತಿದರು.

ಕೇಕಯರು, ಭೀಮಸೇನ, ಅಭಿಮನ್ಯು, ಘಟೋತ್ಕಚ, ಯುಧಿಷ್ಠಿರ, ನಕುಲ-ಸಹದೇವರು, ಮತ್ಸ್ಯದೇಶೀಯಸೈನಿಕರು, ದ್ರುಪದನ ಮಕ್ಕಳು, ಸಂಹೃಷ್ಟರಾದ ದ್ರೌಪದಿಯ ಐವರು ಮಕ್ಕಳು, ಧೃಷ್ಟಕೇತು, ಸಾತ್ಯಕಿ, ಕ್ರುದ್ಧನಾದ ಚೇಕಿತಾನ, ಮಹಾರಥನಾದ ಯುಯುತ್ಸು, ಪಾಂಡವರ ಅನು

ಯಾಯಿಗಳಾದ ಇತರ ರಾಜರು–ಇವರೆಲ್ಲರೂ ತಮ್ಮ ಕುಲಕ್ಕೂ ಮತ್ತು ಪರಾಕ್ರಮಕ್ಕೂ ಅನುಗುಣವಾಗಿ ವೀರೋಚಿತವಾದ ಅನೇಕರೀತಿಯ ಕರ್ಮ ಗಳನ್ನು ಮಾಡತೊಡಗಿದರು. ಪಾಂಡವರಿಂದ ಅವರ ವಿಶಾಲಸೇನೆಯು ಸಂರಕ್ಷಿಸಲ್ಪಟ್ಟುದನ್ನು ಕಂಡು ದ್ರೋಣರು ಕಣ್ಣುಗಳನ್ನರಳಿಸಿ ಕುಪಿತರಾಗಿ ನೋಡಿದರು. ಸಮರದುರ್ಜಯರಾದ ದ್ರೋಣರು ಅತ್ಯಂತಕೋಪಾವಿಷ್ಟ ರಾಗಿ, ಚಂಡಮಾರುತವು ಮೋಡಗಳನ್ನು ಛಿನ್ನ-ಭಿನ್ನಗೊಳಿಸುವಂತೆ–ಪಾಂಡ ವರ ಸೈನ್ಯವನ್ನು ಧ್ವಂಸಮಾಡಲು ಉಪಕ್ರಮಿಸಿದರು. ದ್ರೋಣರು ಯದ್ಯಪಿ ವೃದ್ಧರಾಗಿದ್ದರೂ ತರುಣರಂತೆಯೇ ಯುದ್ಧಮಾಡುತ್ತಿದ್ದರು. ಉನ್ಮತ್ತರಾದ ವರಂತೆ ಅವರು ರಣಾಂಗಣದ ಸುತ್ತಲೂ ಇತ್ತಲಿಂದತ್ತ-ಅತ್ತಲಿಂದಿತ್ತ ಧಾವಿ ಸುತ್ತಾ ಪಾಂಡವರ ರಥಗಳನ್ನೂ, ಕುದುರೆಗಳನ್ನೂ, ಪದಾತಿಗಳನ್ನೂ ಆನೆ ಗಳನ್ನೂ ಸಂಹರಿಸುತ್ತಾ ಸಂಚರಿಸುತ್ತಿದ್ದರು. ಸ್ವಭಾವತಃ ಕೆಂಪಾಗಿದ್ದ ದ್ರೋಣರ ರಥದ ಕುದುರೆಗಳು ರಕ್ತದಿಂದ ಅವುಗಳ ಶರೀರವೆಲ್ಲವೂ ತೋಯ್ದುಹೋಗಲಾಗಿ ಇನ್ನೂ ಹೆಚ್ಚು ಕೆಂಪಾಗಿ ಕಾಣುತ್ತಿದ್ದುವು. ವಾಯು ವೇಗದಿಂದ ಕೂಡಿದ್ದ ಶ್ರೇಷ್ಠಜಾತಿಯ ಆ ಕುದುರೆಗಳು ನಿಶ್ಚಯವಾಗಿಯೂ ಸ್ವಲ್ಪವೂ ವಿಶ್ರಾಂತಿಯೇ ಇಲ್ಲದೆ ದ್ರೋಣರ ರಥವನ್ನೆಳೆದುಕೊಂಡು ಹೋಗು ತ್ತಿದ್ದುವು. ನಿಯಮಪೂರ್ವಕವಾಗಿ ವ್ರತಗಳನ್ನು ಪಾಲಿಸುತ್ತಿದ್ದ ದ್ರೋಣರು ಅತ್ಯಂತಕ್ರುದ್ಧರಾಗಿ, ದಂಡಪಾಣಿಯಾದ ಅಂತಕನಂತೆಯೇ ಮೇಲೆ ಬೀಳಲು ಬರುತ್ತಿರುವುದನ್ನು ಕಂಡು ಪಾಂಡವರ ಕಡೆಯ ಯೋಧರು ಎಲ್ಲ ಕಡೆ ಗಳಿಗೂ ಓಡಿಹೋಗುತ್ತಿದ್ದರು. ಆ ರೀತಿಯಲ್ಲಿ ಓಡುತ್ತಿದ್ದವರ, ಅನಂತರ ನಾಯಕರ ಮಾತನ್ನು ಕೇಳಿ ಹಿಂದಿರುಗುತ್ತಿದ್ದವರ, ಸುಮ್ಮನೆ ನಿಂತು ನೋಡು ತ್ತಿದ್ದವರ, ನಿಂತು ಕೂಗಿಕೊಳ್ಳುತ್ತಿದ್ದವರ ದಾರುಣವಾದ ಭಯಂಕರಶಬ್ದವು ರಣಾಂಗಣದ ಎಲ್ಲೆಡೆಗಳಲ್ಲಿಯೂ ಕೇಳಿಬರುತ್ತಿದ್ದಿತು. ಆ ಕೋಲಾಹಲ ಶಬ್ದವು ಶೂರರಾದವರಿಗೆ ಹರ್ಷದಾಯಕವೂ, ಭೀರುಗಳಿಗೆ ಭಯ ವರ್ಧಕವೂ ಆಗಿದ್ದು ಭೂಮಿಗೂ ಮತ್ತು ಆಕಾಶಕ್ಕೂ ಇದ್ದ ಅಂತರವನ್ನು ಎಲ್ಲ ಕಡೆಗಳಲ್ಲಿಯೂ ತುಂಬಿಬಿಟ್ಟಿದ್ದಿತು. ಅನಂತರ ಪುನರಪಿ ದ್ರೋಣರು ತಮ್ಮ ಹೆಸರನ್ನು ಎಲ್ಲರಿಗೂ ಕೇಳುವಂತೆ ಗಟ್ಟಿಯಾಗಿ ಹೇಳುತ್ತಾ ಶತ್ರು ಸೈನಿಕರ ಮೇಲೆ ನೂರಾರು ಬಾಣಗಳನ್ನು ಸುರಿಸುತ್ತಾ ತಮ್ಮ ಸ್ವರೂಪ ವನ್ನು ಬಹುಭಯಂಕರವಾಗಿ ಪರಿವರ್ತಿಸಿದರು. ವೃದ್ಧರಾಗಿದ್ದರೂ ಬಲಿಷ್ಠ

ರಾಗಿದ್ದ ದ್ರೋಣರು ಯುವಕನೋಪಾದಿಯಲ್ಲಿ ಪಾಂಡುಪುತ್ರನಾದ ಯುಧಿಷ್ಠಿರನ ಸೈನ್ಯದ ಮಧ್ಯಭಾಗದಲ್ಲಿ ಅಂತಕನಂತೆಯೇ ಸಂಚರಿಸುತ್ತಿದ್ದರು. ದ್ರೋಣರು ರಥಿಕರ ಕತ್ತುಗಳನ್ನು ಕತ್ತರಿಸಿ, ಕನಕಾಂಗದ-ಕೇಯೂರಗಳಿಂದ ಸುಭೂಷಿತವಾಗಿದ್ದ ಮತ್ತು ಭಯಂಕರವಾಗಿದ್ದ ತೋಳುಗಳನ್ನು ಕತ್ತರಿಸಿ, ಕೆಳಕ್ಕೆ ಬೀಳಿಸಿ ರಥಗಳನ್ನು ಶೂನ್ಯವನ್ನಾಗಿ ಮಾಡಿಬಿಡುತ್ತಿದ್ದರು. ಮಹಾರಥಿಗಳ ಕಡೆಗೆ ಅರಳಿದ ಕಣ್ಣುಗಳಿಂದ ನೋಡುತ್ತಾ ಗಟ್ಟಿಯಾಗಿ ಗರ್ಜನೆ ಮಾಡುತ್ತಿದ್ದರು.

ದ್ರೋಣರು ಹರ್ಷಪೂರ್ವಕವಾಗಿ ಮಾಡುತ್ತಿದ್ದ ಸಿಂಹಗರ್ಜನೆಗಳಿಂದಲೂ, ಅವರು ಬಿಡುತ್ತಿದ್ದ ಬಾಣಗಳ ವೇಗದಿಂದಲೂ ಪಾಂಡವರ ಕಡೆಯ ಯೋಧರು–ಶೈತ್ಯದಿಂದ ಪೀಡಿತವಾದ ಹಸುಗಳಂತೆ ಥರ-ಥರನೆ ನಡುಗುತ್ತಿದ್ದರು. ದ್ರೋಣರ ರಥದ ಘೋಷದಿಂದಲೂ, ಮೌರ್ವಿಯ ಉಜ್ಜುವಿಕೆಯಿಂದಲೂ, ಧನುಸ್ಸಿನ ಟೇಂಕಾರಶಬ್ದದಿಂದಲೂ ಸಮ್ಮಿಶ್ರವಾದ ಒಂದು ಮಹಾಶಬ್ದವು ಆಕಾಶದಲ್ಲಿ ಪ್ರಾದುರ್ಭವಿಸಿತು. ದ್ರೋಣರ ಧನುಸ್ಸಿನಿಂದ ಸಾವಿರಾರು ಸಂಖ್ಯೆಯಲ್ಲಿ ಬಾಣಗಳು ಹೊರಬಂದು ಎಲ್ಲ ದಿಕ್ಕುಗಳನ್ನೂ ವ್ಯಾಪಿಸಿ ಶತ್ರುಪಕ್ಷದ ಗಜಾಶ್ವ-ರಥ-ಪದಾತಿಸೈನ್ಯಗಳ ಮೇಲೆ ವೇಗವಾಗಿ ಬೀಳುತ್ತಿದ್ದುವು. ಮಹಾವೇಗಯುಕ್ತವಾದ ಧನುಸ್ಸನ್ನು ಹೊಂದಿದ್ದ ಮಹಾಸ್ತ್ರಗಳ ಉಪಸ್ಥಿತಿಯಿಂದ ಜ್ವಲಿಸುವ ಯಜ್ಞೇಶ್ವರನಂತೆಯೇ ಇದ್ದ ದ್ರೋಣರನ್ನು ಆಕ್ರಮಿಸಲು ಪಾಂಚಾಲರು ಪಾಂಡವರೊಡನೆ ಸೇರಿಕೊಂಡು ಬಹಳವಾಗಿ ಪ್ರಯತ್ನಿಸಿದರು. ಹಾಗೆ ಆಕ್ರಮಿಸಲು ಬಂದ ಪಾಂಡವ-ಪಾಂಚಾಲರ ಗಜಾಶ್ವ-ಪದಾತಿಸೈನಿಕರನ್ನು ದ್ರೋಣರು ಕ್ಷಣಮಾತ್ರದಲ್ಲಿ ಯಮನ ಮನೆಗೆ ಕಳುಹಿಸಿದರು. ಆ ಸಂಹಾರಕ್ರಿಯೆಯಿಂದ ದ್ರೋಣರು ರಣಾಂಗಣವನ್ನು ಬಹಳ ಬೇಗ ರಕ್ತದ ಕೆಸರಿನಿಂದ ಕೂಡಿದುದನ್ನಾಗಿ ಮಾಡಿದರು. ದ್ರೋಣರು ಅನೇಕವೇಳೆ ಮಹಾಸ್ತ್ರಗಳನ್ನು ಅಭಿಮಂತ್ರಿಸಿ ಪ್ರಯೋಗಿಸುತ್ತಿದ್ದರು. ಕೆಲವು ವೇಳೆ ಬಾಣಗಳನ್ನೇ ಪುಂಖಾನುಪುಂಖವಾಗಿ ಬಿಡುತ್ತಿದ್ದರು. ಆದರಿಂದಾಗಿ ದ್ರೋಣರು ಬಾಣಗಳ ಬಲೆಯನ್ನೇ ಆಕಾಶದ ಸುತ್ತಲೂ ಹಾಸಿಬಿಟ್ಟಿರುವಂತೆ ಕಾಣುತ್ತಿದ್ದಿತು. ಪದಾತಿಸೈನ್ಯದಲ್ಲಿ, ರಥಸೈನ್ಯದಲ್ಲಿ, ಅಶ್ವಸೈನ್ಯದಲ್ಲಿ, ಗಜಸೈನ್ಯ

ದಲ್ಲಿ-ಎಲ್ಲೆಡೆಯಲ್ಲಿಯೂ ದ್ರೋಣರ ಧ್ವಜವು ಮೋಡದಲ್ಲಿ ಕಾಣಿಸುವ ವಿದ್ಯುತ್ತಿನಂತೆ ಕಾಣಿಸುತ್ತಿದ್ದಿತು. ಧೀರಸತ್ತ್ವರಾದ ದ್ರೋಣರು ಐವರು ಕೇಕಯರಾಜರನ್ನೂ, ಪಾಂಚಾಲರಾಜನಾದ ದ್ರುಪದನನ್ನೂ ಬಾಣಗಳಿಂದ ಮಥಿಸಿ ಧನುರ್ಬಾಣಗಳನ್ನು ಹಿಡಿದು ಯುಧಿಷ್ಠಿರನ ಸೈನ್ಯವನ್ನು ಆಕ್ರಮಿಸಿದರು. ದ್ರೋಣರು ತಮ್ಮ ಸೈನ್ಯವನ್ನು ಆಕ್ರಮಿಸುತ್ತಿರುವುದನ್ನು ಕಂಡು ಭೀಮಸೇನ, ಧನಂಜಯ, ಸಾತ್ಯಕಿ, ಧೃಷ್ಟದ್ಯುಮ್ನ, ಶೈಬ್ಯನ ಮಗ, ಕಾಶಿರಾಜ, ಶಿಬಿ–ಇವರೆಲ್ಲರೂ ಗರ್ಜನೆಮಾಡುತ್ತಾ ದ್ರೋಣರನ್ನು ಬಾಣಗಳಿಂದ ಮುಚ್ಚಿಬಿಟ್ಟರು. ಅದಕ್ಕೆ ಪ್ರತಿಯಾಗಿ ದ್ರೋಣರ ಧನುಸ್ಸಿನಿಂದ ಬಿಡಲ್ಪಟ್ಟ ಸುವರ್ಣಮಯವಾದ ಮತ್ತು ಚಿತ್ರ-ವಿಚಿತ್ರವಾದ ರೆಕ್ಕೆಗಳನ್ನು ಹೊಂದಿದ್ದ ಬಾಣಗಳು ಗಜಾಶ್ವ-ಪದಾತಿಗಳ ಶರೀರಗಳನ್ನು ಭೇದಿಸಿ ಹೊರಬಂದು ರಕ್ತದಿಂದ ತೋಯ್ದವುಗಳಾಗಿ ಭೂಮಿಯ ಮೇಲೆ ಬಿದ್ದುವು. ದ್ರೋಣರ ಬಾಣಗಳಿಂದ ಹತರಾದ ಯೋಧರ ಸಮೂಹದಿಂದಲೂ, ಭಗ್ನವಾಗಿಹೋದ ರಥಗಳಿಂದಲೂ, ಛಿನ್ನ-ಭಿನ್ನವಾಗಿ ಬಿದ್ದಿದ್ದ ಆನೆ-ಕುದುರೆಗಳಿಂದಲೂ ಸಮಾಕೀರ್ಣವಾಗಿದ್ದ ಭೂಮಿಯು–ಕಾಲಮೇಘಗಳಿಂದ ವ್ಯಾಪ್ತವಾಗಿದ್ದ ಆಕಾಶದಂತೆಯೇ–ಕಾಣಿಸುತ್ತಿದ್ದಿತು. ಸಾತ್ಯಕಿ-ಭೀಮಾರ್ಜುನರೇ ನಾಯಕರಾಗಿದ್ದ ಸೇನಾಸಮೂಹವನ್ನೂ, ಅಭಿಮನ್ಯು-ದ್ರುಪದ ಮತ್ತು ಕಾಶಿರಾಜ ಇವರ ರಕ್ಷಣೆಯನ್ನು ಹೊಂದಿದ್ದ ಸೇನಾಸಮೂಹವನ್ನೂ, ಇನ್ನೂ ಅನೇಕ ವೀರ ಯೋಧರನ್ನೂ ದ್ರೋಣರು ನಿನ್ನ ಮಕ್ಕಳ ರಾಜ್ಯೈಶ್ವರ್ಯಪ್ರಾಪ್ತಿಯನ್ನು ಆಶಿಸಿ ಮರ್ದನಮಾಡುತ್ತಿದ್ದರು.

ಕೌರವೇಂದ್ರ! ಇದೂ ಅಲ್ಲದೇ ಮಹಾತ್ಮರಾದ ದ್ರೋಣರು ಇನ್ನೂ ಭಯಂಕರವಾದ ಅನೇಕ ಕರ್ಮಗಳನ್ನು ಮಾಡುತ್ತಾ–ಪ್ರಳಯಕಾಲದ ಸೂರ್ಯನು ಎಲ್ಲ ಲೋಕಗಳನ್ನೂ ಪರಿತಾಪಗೊಳಿಸುವಂತೆ–ಪಾಂಡವರ ಸೈನ್ಯವನ್ನು ತಾಪನಗೊಳಿಸುತ್ತಾ ಕಡೆಯಲ್ಲಿ ಸ್ವರ್ಗಕ್ಕೆ ಹೊರಟುಹೋದರು. ಸುವರ್ಣಮಯವಾದ ರಥವನ್ನು ಹೊಂದಿದ್ದ, ಶೂರರಾದ ದ್ರೋಣರು ಪಾಂಡವರ ಕಡೆಯ ಲಕ್ಷೋಪಲಕ್ಷ ಯೋಧರನ್ನು ಸಂಹರಿಸಿ, ಕಡೆಯಲ್ಲಿ ಧೃಷ್ಟದ್ಯುಮ್ನನಿಂದ ವಧಿಸಲ್ಪಟ್ಟರು. ಯುದ್ಧದಲ್ಲಿ ಹಿಂದಿರುಗದೇ ಇದ್ದ, ಒಂದು ಅಕ್ಷೌಹಿಣಿಗಿಂತಲೂ ಅಧಿಕಸಂಖ್ಯಾತರಾದ ಯೋಧರನ್ನು ಸಂಹರಿಸಿ

ಅನಂತರ ಧೃತಿಮಂತರಾದ ದ್ರೋಣರು ಪರಮಗತಿಯನ್ನು ಸೇರಿದರು. ರುಕ್ಮ ರಥರಾದ ದ್ರೋಣರು ಸುದುಷ್ಕರವಾದ ಸಂಹಾರಕರ್ಮವನ್ನು ಮಾಡಿ, ಅಮಂಗಳವಾದ ಕಾರ್ಯಮಾಡುವವರೂ, ಕ್ರೂರಕರ್ಮಿಗಳೂ ಆದ ಪಾಂಡವ ರಿಂದೊಡಗೂಡಿದ ಪಾಂಚಾಲರಿಂದ ಹತರಾದರು. ಆಚಾರ್ಯರಾದ ದ್ರೋಣರು ನಿಧನಹೊಂದಲಾಗಿ, ಆಕಾಶದಲ್ಲಿದ್ದ ಅದೃಶ್ಯಪ್ರಾಣಿಗಳ ಮಧ್ಯ ದಲ್ಲಿ ಮತ್ತು ಕೌರವಸೈನಿಕರ ಮಧ್ಯದಲ್ಲಿ ಆರ್ತನಾದಗಳು ಕೇಳಿಬಂದುವು. 'ಆಚಾರ್ಯದ್ರೋಣರ ಸಂಹಾರವಾಯಿತು. ಕ್ಷತ್ರಧರ್ಮಕ್ಕೆ (ಇಂತಹ ಅಕೃ ತ್ಯಕ್ಕೆ ) ಧಿಕ್ಕಾರ'–ಎಂಬುದಾಗಿ ಪ್ರಾಣಿಗಳು ಕೂಗಿಕೊಳ್ಳುತ್ತಿದ್ದ ಶಬ್ದವು ಸ್ವರ್ಗ ಲೋಕ-ಭೂಲೋಕಗಳು, ಅಂತರಿಕ್ಷ-ದಿಕ್ಕುಗಳು ಮತ್ತು ಉಪದಿಕ್ಕುಗಳು ಇವೆಲ್ಲ ಕಡೆಗಳಲ್ಲಿಯೂ ಪ್ರತಿಧ್ವನಿಸಿ ಸರ್ವತ್ರವ್ಯಾಪ್ತವಾಯಿತು. ದೇವತೆಗಳು, ಪಿತೃದೇವತೆಗಳು ಮತ್ತು ದ್ರೋಣರಿಗೆ ಹಿಂದೆ ಬಂಧುಗಳಾಗಿದ್ದವರು ಎಲ್ಲರೂ ಮಹಾರಥರಾದ ದ್ರೋಣರು ಧೃಷ್ಟದ್ಯುಮ್ನನಿಂದ ಹತರಾದುದನ್ನು ನೋಡಿ ದರು. ಪಾಂಡವರಾದರೋ, ವಿಜಯಗಳಿಸಿ ಗಟ್ಟಿಯಾಗಿ ಸಿಂಹನಾದಗಳನ್ನು ಮಾಡಿದರು. ಅವರ ಆ ಸಿಂಹನಾದಗಳಿಂದ ಭೂಮಿಯೇ ನಡುಗಿತು."

೮ನೆಯ ಅಧ್ಯಾಯವು ಮುಗಿಯಿತು.

೯ನೆಯ ಅಧ್ಯಾಯ ದ್ರೋಣಾಭಿಷೇಕಪರ್ವ (ಮುಂದುವರಿದಿದೆ.)

## ದ್ರೋಣರು ನಿಧನಹೊಂದಿದ ವಾರ್ತೆಯನ್ನು ಕೇಳಿ ಧೃತರಾಷ್ಟ್ರನು ಶೋಕಿಸಿದುದು

ದ್ರೋಣರು ಪರಲೋಕವನ್ನೈದಿದರೆಂಬ ವಾರ್ತೆಯನ್ನು ಕೇಳಿ, ಬಹು ದುಃಖಿತನಾದ ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ದ್ರೋಣರು ಅಸ್ತ್ರವಿದ್ಯೆಯಲ್ಲಿ ನಿಪುಣರಾಗಿದ್ದರು. ಸರ್ವಶಸ್ತ್ರಧಾರಿಗಳಲ್ಲಿಯೂ ಶ್ರೇಷ್ಠರಾಗಿದ್ದರು. ಅವರು ಯುದ್ಧ ಮಾಡುತ್ತಿದ್ದಾಗ ಪಾಂಡವರು ಅವರನ್ನು ವಧೆಮಾಡಿರಲಾರರು. ಹಾಗೆ ವಧೆಮಾಡಲು ಸಾಧ್ಯವೇ ಇಲ್ಲವೆಂಬುದು ನನ್ನ ಅಭಿಪ್ರಾಯವಾಗಿದೆ. ಆದುದರಿಂದ ಪಾಂಡವ-ಸೃಂಜಯರು ದ್ರೋಣರನ್ನು ಸಂಹರಿಸಿದಾಗ ಅವರೇನು ಮಾಡುತ್ತಿದ್ದರೆಂಬುದನ್ನು ಹೇಳು. ರಥವೇನಾದರೂ ಮುರಿದುಹೋಗಿದ್ದಿತೇ? ಧನುಸ್ಸಿಗೆ ಬಾಣಗಳನ್ನು ಯೋಜಿಸಿ

ಶಿಂಜಿನಿಯನ್ನು ಸೆಳೆಯುತ್ತಿದ್ದ ಸಮಯದಲ್ಲಿ ಧನುಸ್ಸೇನಾದರೂ ಮುರಿದು ಹೋಯಿತೇ? ಅಥವಾ ಆ ಸಮಯದಲ್ಲಿ ದ್ರೋಣರು ಪ್ರಮತ್ತರಾಗಿದ್ದರೆ? (ಎಚ್ಚರತಪ್ಪಿದ್ದರೆ?) ಈ ಕಾರಣಗಳಿಂದಲೇನಾದರೂ ಅವರಿಗೆ ಮೃತ್ಯು ವುಂಟಾಯಿತೇ? ಇಂತಹ ದುಃಸ್ಥಿತಿಯಲ್ಲಿದ್ದಾಗ ಸಮಯನೋಡಿ ಪಾಂಡವ-ಪಾಂಚಾಲರು ದ್ರೋಣರನ್ನು ಸಂಹರಿಸಿರಬೇಕೆಂದು ನಾನು ಭಾವಿಸುತ್ತೇನೆ.

ಶತ್ರುಗಳಿಂದ ಎದುರಿಸಲು ಅಸಾಧ್ಯವಾದ, ಚಿನ್ನದ ರೆಕ್ಕೆಗಳಿದ್ದ ಬಾಣ ಗಳ ಮಳೆಯನ್ನು ಶತ್ರುಸೈನ್ಯಗಳ ಮೇಲೆ ಅವ್ಯಾಹತವಾಗಿ ಸುರಿಸುತ್ತಿದ್ದ, ಕ್ಷಿಪ್ರಹಸ್ತರಾದ, ಬ್ರಾಹ್ಮಣಶ್ರೇಷ್ಠರಾದ, ಪಂಡಿತರಾದ, ಚಿತ್ರಯೋಧಿಗಳಾದ, ಬಾಣಗಳನ್ನು ಬಹಳ ದೂರದವರೆಗೂ ಬಿಡುವ ಸಾಮರ್ಥ್ಯವಿದ್ದ, ಜಿತೇಂದ್ರಿ ಯರಾದ, ಅಸ್ತ್ರಯುದ್ಧಗಳಲ್ಲಿ ಪಾರಂಗತರಾದ, ಅನೇಕದಿವ್ಯಾಸ್ತ್ರಗಳನ್ನು ಪಡೆದುಕೊಂಡಿದ್ದ, ಯುದ್ಧಮರ್ಯಾದೆಯನ್ನು ಮೀರಿ ನಡೆಯದೇ ಇದ್ದ (ಅಚ್ಯುತರಾದ), ಯುದ್ಧಸಮಯದಲ್ಲಿ ಪ್ರಯತ್ನಪೂರ್ವಕವಾಗಿ ದಾರುಣ ವಾದ ಸಂಹಾರಕ್ರಿಯೆಯನ್ನು ಮಾಡುತ್ತಿದ್ದ, ಮಹಾರಥರಾದ ದ್ರೋಣರನ್ನು ದ್ರುಪದನ ಮಗನಾದ ಧೃಷ್ಟದ್ಯುಮ್ನನು ಹೇಗೆ ಸಂಹರಿಸಿದನು? ಮಹಾತ್ಮನಾದ ಧೃಷ್ಟದ್ಯುಮ್ನನಿಂದ ದ್ರೋಣರು ಹತರಾದರೆಂದ ಮೇಲೆ ಪುರುಷ ಪ್ರಯತ್ನಕ್ಕಿಂತಲೂ ದೈವಚಿಂತನೆಯೇ ಮಿಗಿಲಾದುದೆಂಬುದು ವ್ಯಕ್ತ ವಾಯಿತು. ಯಾರಲ್ಲಿ ನಾಲ್ಕು ವಿಧವಾದ ಅಸ್ತ್ರಗಳೂ ಮೂರ್ತಿಮತ್ತಾಗಿ ನೆಲೆಸಿದ್ದುವೋ, ಯಾರು ಧನುರ್ಧಾರಿಗಳಿಗೆಲ್ಲರಿಗೂ ಆಚಾರ್ಯರಾಗಿ ದ್ದರೋ–ಅಂತಹ ದ್ರೋಣರನ್ನು ನೀನು ಶತ್ರುಗಳಿಂದ ಹತರಾದರೆಂದು ಹೇಳುತ್ತಿರುವೆ. (ಎಂತಹ ವಿಪರ್ಯಾಸವಿದು?) ವ್ಯಾಘ್ರದ ಚರ್ಮದಿಂದ ಆಚ್ಛಾದಿತವಾಗಿದ್ದ, ಸುವರ್ಣಮಯವಾದ ರಥದಲ್ಲಿ ಕುಳಿತಿದ್ದ ಮತ್ತು ಸುವರ್ಣಮಯವಾದ ಕಿರೀಟವನ್ನು ಧರಿಸಿದ್ದ ದ್ರೋಣರು ಹತರಾದರೆಂಬು ದನ್ನು ಕೇಳಿ ನನಗೆ ಬಹಳ ದುಃಖವಾಗಿದೆ. ನನಗೆ ಅವರ ನಷ್ಟದಿಂದಾದ ದುಃಖವನ್ನು ತಡೆದುಕೊಳ್ಳಲು ಸಾಧ್ಯವಾಗುತ್ತಲೇ ಇಲ್ಲ. ಸಂಜಯ! ದ್ರೋಣರು ಹತರಾದರೆಂಬ ವಾರ್ತೆಯನು ್ನ ಕೇಳಿಯೂ ಮಂದಬುದ್ಧಿಯವನಾದ ನಾನಿನ್ನೂ ಜೀವಿಸಿಯೇ ಇದ್ದೇನೆ. ಇದರಿಂದ ಒಬ್ಬರು ಸತ್ತುಹೋದುದರಿಂದ ಉಂಟಾದ ದುಃಖದಿಂದಲೇ ಇನ್ನೊಬ್ಬರು ಸಾಯುವುದಿಲ್ಲವೆಂಬುದು ನಿಶ್ಚಯವಾಗುತ್ತದೆ. ಸಂಜಯ! ದೈವೇಚ್ಛೆಯೇ ಶ್ರೇಷ್ಠವಾದುದೆಂದು

ನಾನು ಭಾವಿಸುತ್ತೇನೆ. ಪುರುಷಪ್ರಯತ್ನವೆಂಬುದು ಕೇವಲ ಅನರ್ಥವೇ (ಪ್ರಯೋಜನವಿಲ್ಲದುದೇ) ಸರಿ. ನನ್ನ ಸುದೃಢವಾಗಿರುವ ಈ ಹೃದಯವು ಉಕ್ಕಿನಿಂದಲೇ ಮಾಡಲ್ಪಟ್ಟಿರಬೇಕು. ಏಕೆಂದರೆ ದ್ರೋಣರು ಹತರಾದರೆಂಬುದನ್ನು ಕೇಳಿಯೂ ಈ ನನ್ನ ಹೃದಯವು ನೂರಾರು ಭಾಗಗಳಾಗಿ ಸೀಳಿ ಹೋಗಲಿಲ್ಲ. (ಲೋಹಮಯವಾಗಿರದಿದ್ದರೆ ನೂರಾರು ಚೂರುಗಳಾಗಿ ಸೀಳಿ ಹೋಗಬೇಕಾಗಿದ್ದಿತು.) ಗುಣಾರ್ಥಿಗಳಾದ ಬ್ರಾಹ್ಮಣರೂ ಮತ್ತು ರಾಜಪುತ್ರರೂ ಬ್ರಾಹ್ಮ ಮತ್ತು ದೈವಸಂಬಂಧವಾದ ಅಸ್ತ್ರಗಳಿಗಾಗಿ ಯಾವ ದ್ರೋಣರನ್ನು ಉಪಾಸನೆಮಾಡುತ್ತಿದ್ದರೋ–ಅಂತಹ ದ್ರೋಣರು ಹೇಗೆ ಮೃತ್ಯುವಶರಾದರು? ಸಾಗರದ ಶೋಷಣವು ಹೇಗೆ ಅಸಂಭವವೋ–ಮೇರುಪರ್ವತವು ಚಲಿಸುವುದು ಹೇಗೆ ಅಸಂಭವವೋ–ಸೂರ್ಯನು ಮಂಡಲದಿಂದ ಕಳಚಿ ಕೆಳಕ್ಕೆ ಬೀಳುವನೆಂಬುದು ಎಷ್ಟು ಅಸಂಭವವೋ–ದ್ರೋಣರ ಪತನವೆಂಬುದೂ ನನಗೆ ಅಷ್ಟೇ ಅಸಂಭವವಾಗಿ ಕಾಣುತ್ತದೆ. ಅವರು ಹತರಾದರೆಂಬುದನ್ನು ನಾನು ಈಗಲೂ ಸಹಿಸಿಕೊಳ್ಳಲು ಸಾಧ್ಯವಿಲ್ಲದವನಾಗಿದ್ದೇನೆ. ಶತ್ರುಗಳಿಗೆ ಪರಿತಾಪವನ್ನುಂಟುಮಾಡುತ್ತಿದ್ದ ದ್ರೋಣರು ದುಷ್ಟರ ದಂಡಕರೂ, ಧಾರ್ಮಿಕರ ರಕ್ಷಕರೂ ಆಗಿದ್ದರು. ಅವರು ಕೃಪಣನಾದ ನನ್ನ ಸಲುವಾಗಿ ತಮ್ಮ ಪ್ರಾಣಗಳನ್ನೇ ಅರ್ಪಿಸಿಬಿಟ್ಟರು. ನನ್ನ ಮಕ್ಕಳ ವಿಜಯದ ಆಶೆಯು ದ್ರೋಣರ ಪರಾಕ್ರಮವನ್ನೇ ಅವಲಂಬಿಸಿದ್ದಿತು. ಬುದ್ಧಿಯಲ್ಲಿ ದೇವಗುರುವಾದ ಬೃಹಸ್ಪತಿಗೂ ಮತ್ತು ದೈತ್ಯಗುರುವಾದ ಶುಕ್ರನಿಗೂ ಸಮಾನರಾಗಿದ್ದ ದ್ರೋಣರು ಹೇಗೆ ಹತರಾದರು? ದ್ರೋಣರ ಕುದುರೆಗಳು ಕೆಂಪಾಗಿಯೂ ದಷ್ಟ-ಪುಷ್ಟವಾಗಿಯೂ ಇದ್ದುವು. ಸುವರ್ಣಮಯವಾದ ಬಲೆಗಳಿಂದ ಆಚ್ಛಾದಿಸಲ್ಪಟ್ಟಿದ್ದುವು. ರಥಕ್ಕೆ ಹೂಡಿದಾಗ ಆ ಕುದುರೆಗಳು ವಾಯುವಿಗೆ ಸಮಾನವಾದ ವೇಗದಿಂದ ಧಾವಿಸುತ್ತಿದ್ದುವು. ಅವು ಎಲ್ಲ ವಿಧ ವಾದ ಶಸ್ತ್ರಾಸ್ತ್ರಗಳ ಪ್ರಹಾರವನ್ನೂ ತಪ್ಪಿಸಿಕೊಳ್ಳುತ್ತಿದ್ದುವು ಅಥವಾ ಸಹಿಸಿಕೊಳ್ಳುತ್ತಿದ್ದುವು. ಬಲಯುಕ್ತವಾಗಿದ್ದುವು. ಗಂಭೀರವಾಗಿ ಕೆನೆಯುತ್ತಿದ್ದುವು. ಸುಶಿಕ್ಷಿತವಾಗಿದ್ದುವು. (ಮೇರೆತಪ್ಪಿಹೋಗುತ್ತಿರಲಿಲ್ಲ.) ಎಂತಹ ಭಾರವನ್ನೂ ಸಹ ಹೊರುತ್ತಿದ್ದುವು. ದೃಢವಾಗಿದ್ದುವು. ಇಂತಹ ಕುದುರೆಗಳು ಯುದ್ಧದ ಮಧ್ಯದಲ್ಲಿ ಯಾವುದೇ ಸಮಯದಲ್ಲಾದರೂ ಆನೆಗಳ ಚೀತ್ಕಾರಗಳಿಂದಾ

ಗಲೀ, ಶಂಖ-ದುಂದುಭಿಗಳ ಧ್ವನಿಗಳಿಂದಾಗಲೀ ವ್ಯಾಕುಲಗೊಳ್ಳಲಿಲ್ಲವೇ? ಮೌರ್ವಿಯಿಂದ ಹೊರಬರುತ್ತಿದ್ದ ಬಾಣಗಳ ವರ್ಷವನ್ನೂ, ಕತ್ತಿಯೇ ಮೊದಲಾದ ಶಸ್ತ್ರಗಳ ಪ್ರಹಾರವನ್ನೂ ಸಹಿಸಿಕೊಳ್ಳುತ್ತಿದ್ದುವಲ್ಲವೇ? ಶತ್ರುಗಳನ್ನು ಜಯಿಸಬೇಕೆಂಬ ಆಶಯವು ಆ ಕುದುರೆಗಳಿಗೂ ಇದ್ದಿತು. ಸಿಂಧು ದೇಶದಲ್ಲಿ ಹುಟ್ಟಿದ್ದ ಆ ಕುದುರೆಗಳು ಕೆಲವು ಸಮಯಗಳಲ್ಲಿ ಉಸಿರನ್ನೂ ಕಟ್ಟಿ ಮುನ್ನುಗ್ಗುತ್ತಿದ್ದುವು. ಅವಕ್ಕೆ ವ್ಯಥೆ ಎಂಬುದೇ ಇರಲಿಲ್ಲ. ನೃವೀರರಾದ ದ್ರೋಣರನ್ನೇ ಆಶ್ರಯಿಸಿದ್ದ, ದ್ರೋಣರ ಸುವರ್ಣಮಯವಾದ ರಥಕ್ಕೆ ನಿಬದ್ಧವಾಗಿದ್ದ ಮತ್ತು ಅಂತಹ ಭಾರದ್ವಾಜರ ರಥದ ಭಾರವನ್ನೂ ವಹಿಸಿದ್ದ ಶೀಘ್ರಗಾಮಿಗಳಾದ ಆ ಕುದುರೆಗಳು ಪರಾಜಿತವಾದುವೇ? ಪಾಂಡವರ ಸಾಗರಪ್ರಾಯವಾದ ಸೈನ್ಯವನ್ನು ಅವುಗಳೇಕೆ ದಾಟಿಹೋಗಲಿಲ್ಲ ಸಂಜಯ! ಸುವರ್ಣಭೂಷಿತವಾಗಿದ್ದ ಉತ್ತಮೋತ್ತಮವಾದ ರಥದಲ್ಲಿ ಕುಳಿತು ಸತ್ಯಪರಾಕ್ರಮರಾದ ದ್ರೋಣರು ಯುದ್ಧದ ಸಮಯದಲ್ಲಿ ಏನು ಮಾಡಿದರು? ಪ್ರಪಂಚದಲ್ಲಿರುವ ಎಲ್ಲ ಧನುರ್ಧಾರಿಗಳೂ ಯಾರ ವಿದ್ಯೆಯಿಂದಲೇ ಇಂದು ತಮ್ಮ ಜೀವನವನ್ನು ನಡೆಸುತ್ತಿದ್ದಾರೆಯೋ ಅಂತಹ ಸತ್ಯಸಂಧರಾದ, ಬಲಿಷ್ಠರಾದ ದ್ರೋಣರು ಯುದ್ಧದ ಸಮಯದಲ್ಲಿ ಏನು ಮಾಡುತ್ತಿದ್ದರು? ಸ್ವರ್ಗದಲ್ಲಿರುವ ಇಂದ್ರನಂತೆಯೇ ಸರ್ವಶ್ರೇಷ್ಠರಾದ, ಎಲ್ಲ ಧನುರ್ಧಾರಿಗಳಿಗೂ ಮಹಾಮಾತ್ರರಾದ (ನಾಯಕಮಣಿಗಳಾದ) ಭಯಂಕರಕರ್ಮರಾದ ದ್ರೋಣರನ್ನು ಯುದ್ಧದಲ್ಲಿ ಶತ್ರುಪಕ್ಷದ ಯಾವ ಯೋಧರು ಆಕ್ರಮಿಸಿದರು? ನೀನು ಈ ಮೊದಲು ಹೇಳಿದಂತೆ ಮಹಾಬಲಿಷ್ಠರಾದ, ಸಮಯವರಿತು ದಿವ್ಯಾಸ್ತ್ರಗಳನ್ನು ಪ್ರಯೋಗಿಸುತ್ತಿದ್ದ, ಸುವರ್ಣಮಯವಾದ ರಥದಲ್ಲಿ ಕುಳಿತಿದ್ದ ದ್ರೋಣರನ್ನು ನೋಡಿದೊಡನೆಯೇ ಪಾಂಡವರೆಲ್ಲರೂ ಸೈನ್ಯಸಮೇತರಾಗಿ ದಿಕ್ಕು-ದಿಕ್ಕಿಗೆ ಓಡಿಹೋಗುತ್ತಿದ್ದರಲ್ಲವೇ? ನಿಶ್ಚಯವಾಗಿಯೂ ಹೀಗಾಗಿರಬೇಕು : ಧರ್ಮರಾಜನು ತನ್ನ ತಮ್ಮಂದಿರೊಡನೆ ಧೃಷ್ಟದ್ಯುಮ್ನನನ್ನು ಆಶ್ರಯನನ್ನಾಗಿಟ್ಟುಕೊಂಡು ದ್ರೋಣರನ್ನು ಮುತ್ತಿರಬೇಕು. ಆಗ ಪಾರ್ಥನು ನಮ್ಮ ಕಡೆಯ ಇತರ ರಾಜರನ್ನು ನೇರವಾಗಿಹೋಗುವ ಬಾಣಗಳಿಂದ ತಡೆದುಬಿಟ್ಟಿರಬಹುದು. ಆ ಸಮಯದಲ್ಲಿಯೇ ಪಾಪಕರ್ಮಿಯಾದ ಧೃಷ್ಟದ್ಯುಮ್ನನು ದ್ರೋಣರ ಮೇಲೆ ಆಕ್ರಮಣವನ್ನು ನಡೆಸಿರಬೇಕು. ಕಿರೀಟಿಯಿಂದ ರಕ್ಷಿತನಾದ, ಭಯಂಕರನಾದ ಧೃಷ್ಟದ್ಯುಮ್ನನ ಹೊರ

ತಾಗಿ ದ್ರೋಣರನ್ನು ಸಂಹರಿಸಲು ಸಮರ್ಥರಾದ ಯಾವ ತೇಜಸ್ವೀಪುರುಷರನ್ನೂ ಶತ್ರುಪಕ್ಷದಲ್ಲಿ ನಾನು ಕಂಡಿಲ್ಲ.

ಇರುವೆಗಳಿಂದ ಸರ್ಪವು ಬಾಧಿಸಲ್ಪಡುವಂತೆ, ಕೇಕಯ-ಚೇದಿ-ಕರೂಷ-ಮತ್ಸ್ಯದೇಶೀಯಸೈನಿಕರಿಂದಲೂ, ಇತರ ರಾಜರಿಂದಲೂ ವ್ಯಾಕುಲಗೊಂಡ, ಬಹುಕಷ್ಟಕರವಾದ ಸಂಹಾರಕರ್ಮವನ್ನು ಮಾಡುವುದರಲ್ಲಿಯೇ ಆಸಕ್ತರಾಗಿದ್ದ ದ್ರೋಣರನ್ನು ಪಾಂಚಾಲ್ಯಾಪಸದನಾದ ಧೃಷ್ಟದ್ಯುಮ್ನನು ಪಾಂಡವರ ಸೈನ್ಯದಿಂದ ಸಮಾವೃತನಾಗಿ ಸಂಹರಿಸಿರಬಹುದೆಂದು ನಾನು ಭಾವಿಸುತ್ತೇನೆ. ಷಡಂಗಯುಕ್ತವಾದ ನಾಲ್ಕು ವೇದಗಳನ್ನೂ ಮತ್ತು ಐದನೆಯದಾದ ಪುರಾಣೇತಿಹಾಸಗಳನ್ನೂ ಅಧ್ಯಯನಮಾಡಿ–ನದಿಗಳಿಗೆ ಸಮುದ್ರವು ಆಶ್ರಯಸ್ಥಾನವಾಗಿರುವಂತೆ–ಯಾರು ಬ್ರಾಹ್ಮಣರಿಗೆ ಆಶ್ರಯಸ್ಥಾನರಾಗಿದ್ದರೋ, ಪರಂತಪರಾದ ಯಾರು ಬ್ರಹ್ಮ-ಕ್ಷತ್ರಧರ್ಮಗಳೆರಡನ್ನೂ ಆಚರಣೆಯಲ್ಲಿ ಇಟ್ಟುಕೊಂಡಿದ್ದರೋ–ಅಂತಹ ಬ್ರಾಹ್ಮಣಶ್ರೇಷ್ಠರಾದ ದ್ರೋಣರು ಶಸ್ತ್ರದಿಂದ ಹೇಗೆ ಅಸುವನ್ನು ತ್ಯಜಿಸಿದರು? ಕ್ರುದ್ಧನಾದ ನಾನು ಕಷ್ಟಪಡಲು ಅನರ್ಹರಾದ ಕುಂತಿಯ ಮಕ್ಕಳಿಗೆ ಕೊಡಬಾರದ ಕಷ್ಟಗಳನ್ನೆಲ್ಲಾ ಕೊಟ್ಟೆನು. ಆದರೆ ದ್ರೋಣರು, ಪಾಂಡವರು ನನ್ನ ಕಾರಣದಿಂದ ಕಷ್ಟಪಡುತ್ತಿರುವುದನ್ನು ಪ್ರತ್ಯಕ್ಷವಾಗಿಯೇ ನೋಡುತ್ತಿದ್ದರೂ ಸಹ ಅದನ್ನು ಹಾಗೆಯೇ ಸಹಿಸಿಕೊಂಡುಬಿಡುತ್ತಿದ್ದರು. ಅಂದು ಅವರು ಪಾಂಡವರ ಕಷ್ಟವನ್ನು ನೋಡಿಯೂ ಸಹಿಸಿಕೊಂಡುದಕ್ಕೆ ಇಂದು ಅದರ ಫಲವು ಅವರ ವಧೆಯೇ ಆಗಿದೆ. ಲೋಕದಲ್ಲಿ ಎಲ್ಲ ಧನುಷ್ಮಂತರೂ ಯಾರ ಶಿಕ್ಷಣರೂಪವಾದ ಕರ್ಮದಿಂದ ತಮ್ಮ ಜೀವನವನ್ನು ನಡೆಸುತ್ತಿದ್ದಾರೆಯೋ–ಅಂತಹ ಸತ್ಯಸಂಧರಾದ ಮತ್ತು ಸುಕೃತಿಗಳಾದ ದ್ರೋಣರು ಶ್ರೀಕಾಮರಿಂದ (ರಾಜ್ಯಲೋಭಿಗಳಿಂದ) ಹೇಗೆತಾನೇ ಹತರಾದರು? ಸ್ವರ್ಗದಲ್ಲಿ ಇಂದ್ರನು ದೇವತೆಗಳೆಲ್ಲರಿಗೂ ಶ್ರೇಷ್ಠನಾಗಿರುವಂತೆ–ಈ ಲೋಕದಲ್ಲಿ ಎಲ್ಲರಿಗೂ (ಸರ್ವಧನುಷ್ಮಂತರಿಗೂ) ಶ್ರೇಷ್ಠರಾಗಿದ್ದ, ಮಹಾಸತ್ತ್ವರಾದ, ಮಹಾಬಲರಾದ ದ್ರೋಣರು-ಕ್ಷುದ್ರಜಂತುಗಳಾದ ಮೀನುಗಳಿಂದ ತಿಮಿಯೊಂದು ಸಾಯಿಸಲ್ಪಟ್ಟಿತೋ ಎಂಬಂತೆ–ಕ್ಷುದ್ರರಾದ ಪಾರ್ಥರಿಂದ ಹೇಗೆತಾನೇ ಮೃತಿಯನ್ನು ಹೊಂದಿದರು? ಸಂಜಯ! ದ್ರೋಣರು ಕ್ಷಿಪ್ರಹಸ್ತರಾಗಿದ್ದರು. ಶತ್ರುಗಳ ತಲೆಯು ತೊಪ-ತೊಪನೆ ಕೆಳಕ್ಕೆ ಬೀಳುವುದೊಂದು ಪ್ರೇಕ್ಷಕರಿಗೆ ಕಾಣುತ್ತಿದ್ದಿತೇ

ಹೊರತು, ಬಾಣಗಳ ಆದಾನ-ಸಂಧಾನ-ಆಕರ್ಷಣ-ಪ್ರಯೋಗ ಈ ಯಾವ ವಿಧವಾದ ಕ್ರಿಯೆಗಳೂ ಕಾಣಿಸುತ್ತಲೇ ಇರಲಿಲ್ಲ. ಅವರು ಬಲಿಷ್ಠರಾಗಿದ್ದರು. ದೃಢವಾದ ಧನುಸ್ಸನ್ನು ಹೊಂದಿದ್ದರು. ಶತ್ರುಸಂಹಾರಕರಾಗಿದ್ದರು. ವಿಜಯ ವನ್ನಭಿಲಷಿಸಿದ ದ್ರೋಣರ ಮುಂದೆ ನಿಂತು ಅವರ ಬಾಣಕ್ಕೆ ಲಕ್ಷ್ಯನಾದ ಯಾವ ವೀರನೇ ಆಗಲಿ ಪ್ರಾಣಸಹಿತನಾಗಿ ಹಿಂದಿರುಗುತ್ತಿರಲಿಲ್ಲ.

**ಯಂ ದ್ವೌ ನ ಜಹತಃ ಶಬ್ದೌ ಜೀವಮಾನಂ ಕದಾಚನ ।**
**ಬ್ರಾಹ್ಮಶ್ಚ ವೇದಕಾಮಾನಾಂ ಜ್ಯಾಘೋಷಶ್ಚ ಧನುಷ್ಮತಾಮ್ ॥೩೬॥**

ಎರಡು ಶಬ್ದಗಳು ಮಾತ್ರ ಅವರನ್ನು ಜೀವಪರ್ಯಂತವಾಗಿ ಬಿಟ್ಟು ಹೋಗಲೇ ಇಲ್ಲ. ವೇದಾಧ್ಯಯನವನ್ನು ಇಚ್ಛಿಸಿ ಬರುವವರಿಗೆ ವೇದಗಳ ಅಧ್ಯಾಪನದ ಮೂಲಕವಾದ ಶ್ರುತಿಶಬ್ದ ಮತ್ತು ಧನುರ್ವಿದ್ಯೆಯನ್ನು ಕಲಿ ಯಲು ಬರುವವರಿಗೆ ಬಾಣಗಳ ಸಂಧಾನಕ್ರಿಯೆಯನ್ನು ತೋರಿಸಿಕೊಡಲು ಮಾಡುತ್ತಿದ್ದ ಹೆದೆಯ ಟೇಂಕಾರಶಬ್ದ–ಈ ಎರಡು ಶಬ್ದಗಳು ಸದಾಕಾಲ ದಲ್ಲಿಯೂ ದ್ರೋಣರ ವಾಸಸ್ಥಳದಲ್ಲಿ ಕೇಳಿಬರುತ್ತಿದ್ದುವು. ಯಾವುದೇ ಸಂದರ್ಭದಲ್ಲಿಯೂ ಧೈರ್ಯಗೆಡದ, ಪುರುಷಸಿಂಹರಾದ, ಲಜ್ಜಾಶೀಲರಾದ, ಯಾರಿಂದಲೂ ಪರಾಜಯಗೊಳ್ಳದೇ ಇದ್ದ, ಸಿಂಹದ ಮತ್ತು ಆನೆಯ ಬಲಕ್ಕೆ ಸಮಾನವಾದ ಬಲವಿದ್ದ ದ್ರೋಣರು ಹತರಾದುದನ್ನು ಕೇಳಿ ಅವರ ನಷ್ಟ ದಿಂದಾದ ದುಃಖವನ್ನು ಸಹಿಸಿಕೊಳ್ಳಲು ನಾನು ಅಸಮರ್ಥನಾಗಿದ್ದೇನೆ. ಎದುರಿಸಲು ಅಸಾಧ್ಯರಾದ, ಜಯಿಸಲಾಗದ ಯಶಸ್ಸಿನಿಂದಲೂ–ಬಲ ದಿಂದಲೂ ಕೂಡಿದ್ದ ದ್ರೋಣರನ್ನು ಎಲ್ಲ ರಾಜೇಂದ್ರರೂ ನೋಡುತ್ತಿ ದ್ದಂತೆಯೇ ಯುದ್ಧದಲ್ಲಿ ಧೃಷ್ಟದ್ಯುಮ್ನನು ಹೇಗೆ ಸಂಹರಿಸಿದನು? ಆ ಸಮಯದಲ್ಲಿ ದ್ರೋಣರ ಮುಂದುಗಡೆ ಯುದ್ಧಮಾಡುತ್ತಿದ್ದವರು ಯಾರು? ಅವರ ಹತ್ತಿರದಲ್ಲೇ ನಿಂತು ಅವರನ್ನು ರಕ್ಷಿಸುತ್ತಿದ್ದವರು ಯಾರು? ದುರ್ಗಮವಾದ ಮಾರ್ಗದಲ್ಲಿ ಹೋಗುತ್ತಾ ದ್ರೋಣರ ಹಿಂಭಾಗ ವನ್ನು ಯಾರು ರಕ್ಷಿಸುತ್ತಿದ್ದರು? ದ್ರೋಣರ ರಥದ ಬಲಭಾಗದ ಚಕ್ರವನ್ನು ಯಾರು ರಕ್ಷಿಸುತ್ತಿದ್ದರು? ಮಹಾತ್ಮರಾದ ಅವರ ರಥದ ಎಡಭಾಗದ ಚಕ್ರವನ್ನು ಯಾರು ರಕ್ಷಿಸುತ್ತಿದ್ದರು? ಯುದ್ಧಮಾಡುತ್ತಿದ್ದ ವೀರರಾದ ದ್ರೋಣರ ಮುಂಭಾಗದಲ್ಲಿ ನಿಂತು ಅವರನ್ನು ಶತ್ರುಗಳಿಂದ ಯಾರು ರಕ್ಷಿಸುತ್ತಿದ್ದರು? ಆ ರಣಕ್ಷೇತ್ರದಲ್ಲಿ ಶತ್ರುಗಳನ್ನು ಎದುರಿಸಿ ಘೋರಯುದ್ಧ

ಮಾಡಿ ಕಡೆಯಲ್ಲಿ ತಮ್ಮ ಪ್ರಾಣಗಳನ್ನೇ ತ್ಯಜಿಸಿ ಮೃತ್ಯುಪರವಶರಾದವರು ಯಾರು? ದ್ರೋಣರ ಯುದ್ಧದಲ್ಲಿ ಹೆಚ್ಚಾದ ಧೈರ್ಯವನ್ನು ತೋರಿಸಿದ ವೀರರು ಯಾರು? ಪ್ರಾಣಭಯದಿಂದಾಗಿ ಯುದ್ಧದಲ್ಲಿ ಮಂದಬುದ್ಧಿಯ ಕ್ಷತ್ರಿಯಯೋಧರು ದ್ರೋಣರನ್ನು ಬಿಟ್ಟು ಪಲಾಯನಮಾಡಿದರೇ? ರಕ್ಷಕರೇ ಇಲ್ಲವೆಂಬ ಕಾರಣದಿಂದ ದ್ರೋಣರು ಶತ್ರುಗಳಿಂದ ವಧಿಸಲ್ಪಡ ಲಿಲ್ಲವಲ್ಲವೇ? (ನನ್ನ ಮಕ್ಕಳು ದ್ರೋಣರೊಬ್ಬರನ್ನೇ ಬಿಟ್ಟುಹೋಗಿರ ಲಾರರು.) ಎಂತಹ ಆಪತ್ಕಾಲದಲ್ಲಿಯೇ ಆದರೂ ದ್ರೋಣರು ಶೌರ್ಯದ ಕಾರಣದಿಂದಾಗಿ ತಮ್ಮ ಪೃಷ್ಠಭಾಗವನ್ನು ಭಯಪಟ್ಟು ತೋರಿಸಿರಲಾರರು. (ಅವರು ಯಾವಾಗಲೂ ರಣರಂಗದಿಂದ ಓಡಿಹೋಗತಕ್ಕವರಲ್ಲ.) ಅಂತಹ ವರು ಶತ್ರುಗಳಿಂದ ಹೇಗೆತಾನೇ ಹತರಾದರು? (ಅವರನ್ನು ಎದುರಿಸಿದವ ರಾರೂ ಅವರನ್ನು ಸಂಹರಿಸಲಾರರು. ಓಡಿಹೋದಾಗ ಕೊಂದಿರಬಹು ದೆಂಬುದಕ್ಕೆ ದ್ರೋಣರಿಗೆ ಯುದ್ಧದಲ್ಲಿ ಹಿಮ್ಮೆಟ್ಟುವ ಕಲೆಯೇ ತಿಳಿಯದು. ಹೀಗಿರುವಾಗ ಅವರನ್ನು ಶತ್ರುಗಳು ಹೇಗೆ ಕೊಂದರು?) ಸಂಜಯ! ಆರ್ಯರಾದವರು (ಶ್ರೇಷ್ಠಪುರುಷರು) ಕಷ್ಟಸಮಯಗಳಲ್ಲಿ, ಆಪತ್ಕಾಲಗಳಲ್ಲಿ ಶಕ್ತಿಯಿರುವಷ್ಟು ಪರಾಕ್ರಮವನ್ನು ತೋರಿಸಬೇಕು. ಆ ಕಾರ್ಯವನ್ನು ದ್ರೋಣರು ಪೂರ್ಣವಾಗಿ ಮಾಡಿದ್ದಾರೆ. ಆ ಸಮಯದಲ್ಲವರು ಶಕ್ತಿಮೀರಿ ಪರಾಕ್ರಮವನ್ನು ತೋರಿಸಿದ್ದಾರೆ. ಸಂಜಯ! ದ್ರೋಣರ ನಿಧನವಾರ್ತೆಯನ್ನು ಕೇಳಿ ನನ್ನ ಮನಸ್ಸು ವಿಮೋಹಗೊಳ್ಳುತ್ತಿದೆ. ನಾನು ಎಚ್ಚರತಪ್ಪುತ್ತಿದ್ದೇನೆ. ಆದುದರಿಂದ ಸದ್ಯಕ್ಕೆ ಯುದ್ಧವಾರ್ತೆಯನ್ನು ನಿಲ್ಲಿಸು. ನಾನು ಪುನಃ ಪ್ರಜ್ಞೆಯನ್ನು ಪಡೆದನಂತರ ನನ್ನ ಮನಸ್ಸು ತಿಳಿಯಾದನಂತರ ಕೇಳುತ್ತೇನೆ." ಎಂದುಹೇಳಿ ರಾಜನು ಸಂಜಯನನ್ನು ಕಳುಹಿಸಿಕೊಟ್ಟನು.

೯ನೆಯ ಅಧ್ಯಾಯವು ಮುಗಿಯಿತು.

೧೦ನೆಯ ಅಧ್ಯಾಯ ದ್ರೋಣಾಭಿಷೇಕಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನು ದುಃಖದಿಂದ ವ್ಯಾಕುಲಿತನಾದುದು : ಮುಂದೆ ನಡೆದ ಯುದ್ಧದ ವಿಷಯವಾಗಿ ಸಂಜಯನನ್ನು ಪ್ರಶ್ನಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಮಹಾರಾಜ! ಈ ರೀತಿಯಾಗಿ ಸಂಜಯನನ್ನು 'ಸ ಕಥಂ ನಿಹತಃ ಪರೈಃ' ದ್ರೋಣರು ಶತ್ರುಗಳಿಂದ ಹೇಗೆ ಹತರಾದರು? ಎಂದು ಪ್ರಶ್ನಿಸುತ್ತಾ ಹೃದಯಶೋಕದಿಂದ ಅತ್ಯಂತಪೀಡಿತನಾಗಿದ್ದ ಧೃತರಾಷ್ಟ್ರನು ತನ್ನ ಮಕ್ಕಳ ವಿಜಯದ ವಿಷಯದಲ್ಲಿ ಸಂಪೂರ್ಣವಾದ ನಿರಾಶೆಯನ್ನೇ ಹೊಂದಿದವನಾಗಿ ಕುಸಿದು ಭೂಮಿಯ ಮೇಲೆ ಬಿದ್ದನು. ಹೀಗೆ ಜ್ಞಾನಶೂನ್ಯವಾಗಿ ಬಿದ್ದ ರಾಜನಿಗೆ ರಾಜನ ಪರಿಚಾರಿಕೆಯರು ಬೀಸಣಿಗೆಗಳಿಂದ ಗಾಳಿಬೀಸಿದರು. ಸುಗಂಧಯುಕ್ತವಾಗಿದ್ದ ಮತ್ತು ಶೀತಲವಾಗಿದ್ದ ನೀರನ್ನು ಚುಮುಕಿಸಿದರು. (ಶೈತ್ಯೋಪಚಾರವನ್ನು ಮಾಡಿದರು.) ರಾಜನು ಮೂರ್ಛಿತನಾದ ವಿಷಯವು ಅಂತಃಪುರದಲ್ಲಿದ್ದ ಎಲ್ಲ ಸ್ತ್ರೀಯರಿಗೂ ತಿಳಿಯಿತು. ಒಡನೆಯೇ ಭರತಸ್ತ್ರೀಯರು ನಾಲ್ಕು ಕಡೆಗಳಿಂದಲೂ ಬಂದು ಕೆಳಗೆ ಬಿದ್ದಿದ್ದ ರಾಜನನ್ನು ಸುತ್ತುವರಿದು ಕುಳಿತು ತಮ್ಮ ಕೈಗಳಿಂದ ಅವನನ್ನು ನೇವರಿಸಿದರು. ಕಂಬನಿದುಂಬಿದ ಕಣ್ಣುಗಳಿಂದಲೂ, ಗದ್ಗದಧ್ವನಿಗಳಿಂದಲೂ ಕೂಡಿದ್ದ ವರಾಂಗನೆಯರು ರಾಜನನ್ನು ಮೆಲ್ಲ-ಮೆಲ್ಲನೆ ಭೂಮಿಯಿಂದ ಮೇಲಕ್ಕೆತ್ತಿ ಹತ್ತಿರದಲ್ಲಿಯೇ ಇದ್ದ ಸುಖಾಸನದ ಮೇಲೆ ಕುಳ್ಳಿರಿಸಿದರು. ಆಸನದಲ್ಲಿ ಕುಳ್ಳಿರಿಸಿದ ಮೇಲೂ ರಾಜನಿಗೆ ಮೂರ್ಛೆಯು ಸಂಪೂರ್ಣವಾಗಿ ತಿಳಿದಿರಲಿಲ್ಲ. ನಿಶ್ಚೇಷ್ಟನಾಗಿಯೇ ಕುಳಿತಿದ್ದನು. ಸುತ್ತಲೂ ನಿಂತಿದ್ದ ರಾಜಕುಮಾರಿಯರು ಬೀಸಣಿಗೆಯಿಂದ ಗಾಳಿಬೀಸುತ್ತಿದ್ದರು. ಅನಂತರ ಮೆಲ್ಲ-ಮೆಲ್ಲನೆ ರಾಜನು ಸಂಜ್ಞೆಯನ್ನು ಪಡೆದನು. ಆದರೂ ಅವನು ನಡುಗುತ್ತಲೇ ಇದ್ದನು. ಪುನಃ ಯುದ್ಧವಾರ್ತೆಯನ್ನು ಕೇಳಬೇಕೆನ್ನುವ ಆಶಯದಿಂದ ಸೂತನಾದ ಗಾವಲ್ಗಣಿಯನ್ನು (ಸಂಜಯನನ್ನು) ಕರೆಯಿಸಿ ಯುದ್ಧವಾರ್ತೆಯನ್ನು ಯಥಾವತ್ತಾಗಿ ಹೇಳುವಂತೆ ಆಜ್ಞಾಪಿಸಿದನು :

"ಸಂಜಯ! ತನ್ನ ತೇಜಸ್ಸಿನಿಂದ ಅಂಧಕಾರವನ್ನು ಹೋಗಲಾಡಿಸುವ ಉದಯಿಸಿದ ಸೂರ್ಯನಂತಿದ್ದ ದ್ರೋಣರ ಸಮೀಪಕ್ಕೆ ಬರುತ್ತಿದ್ದ ಯುಧಿಷ್ಠಿರನನ್ನು ನಮ್ಮ ಕಡೆಯ ಯಾವ ಯೋಧರು ತಡೆದರು?

ಹೆಣ್ಣಾನೆಯೊಡನೆ ಸಮಾಗಮದ ಕಾಲದಲ್ಲಿ ಮತ್ತೊಂದು ಮದಗಜವು ಬರುತ್ತಿರುವುದನ್ನು ನೋಡಿ ಅದನ್ನು ಆಕ್ರಮಿಸುವ ಮತ್ತು ಆ ಸಮಯದಲ್ಲಿ ಸಲಗಗಳಿಂದಲೂ ಜಯಿಸಲು ಅಸಾಧ್ಯವಾದ, ಮದೋದಕವನ್ನು ಸುರಿಸುವ

ಆನೆಯಂತಿರುವ–ಕ್ರುದ್ಧನಾದ, ವೇಗವಂತನಾದ, ಸುಹೃದರ ವಿಷಯದಲ್ಲಿ ಪ್ರಸನ್ನವದನನಾದ ಯುಧಿಷ್ಠಿರನನ್ನು ಆ ಸಮಯದಲ್ಲಿ ತಡೆದವರು ಯಾರು? ಪುರುಷಶ್ರೇಷ್ಠನಾದ ಯಾವನು ಯುದ್ಧದಲ್ಲಿ ಅನೇಕವೀರರನ್ನು ಸಂಹಾರಮಾಡಿದನೋ, ಒಬ್ಬನೇ ಒಬ್ಬ ಮಹಾವೀರ್ಯನಾದ ಯಾವನು ತನ್ನ ಘೋರವಾದ ದೃಷ್ಟಿಪಾತದಿಂದಲೇ ನಿಖಿಲವಾದ ದುರ್ಯೋಧನನ ಸೈನ್ಯವನ್ನೂ ದಹಿಸಿಬಿಡಬಲ್ಲನೋ–ಅಂತಹ ಯುಧಿಷ್ಠಿರನನ್ನು ಆ ಸಮಯ ದಲ್ಲಿ ಯಾರು ತಡೆದರು? ಧೃತಿಮಂತನೂ, ಸತ್ಯನಿಷ್ಠನೂ, ಕಣ್ಣುಗಳಿಂದಲೇ ದಹಿಸತಕ್ಕವನೂ, ಜಯದಲ್ಲಿಯೇ ಆಸಕ್ತನಾಗಿರತಕ್ಕವನೂ, ಧನುರ್ಧರನೂ, ಧರ್ಮಮಾರ್ಗದಿಂದ ಚ್ಯುತನಾಗದೇ ಇರತಕ್ಕವನೂ, ಜಿತೇಂದ್ರಿಯನೂ, ಬಹುಜನಪ್ರಿಯನೂ, ಲೋಕಮಾನ್ಯನೂ ಆದ ಯುಧಿಷ್ಠಿರನನ್ನು ನಮ್ಮ ಪಕ್ಷದ ಯಾವ ಶೂರಯೋಧರು ತಡೆದು ನಿಲ್ಲಿಸಿದರು? ಎದುರಿಸಲು ಅಸಾಧ್ಯನಾದ, ಮಹಾಧನುರ್ಧರನಾದ, ಯಾವುದೇ ಕಾರಣದಿಂದಲೂ ಧರ್ಮದಿಂದ ಚ್ಯುತನಾಗದ, ನರವ್ಯಾಘ್ರನಾದ, ಕುಂತಿಯ ಮಗನಾದ ಯುಧಿಷ್ಠಿರನನ್ನು ನನ್ನ ಕಡೆಯ ಯಾವ ಯೋಧರು ಆಕ್ರಮಿಸಿದರು? ಯಾವನು ಬಹಳ ವೇಗವಾಗಿ ಬಂದು ದ್ರೋಣರನ್ನು ಆಕ್ರಮಣಮಾಡಿದನೋ, ಮಹಾಬಲನೋ, ಶತ್ರುಗಳ ಮಧ್ಯದಲ್ಲಿ ಯಾವನು ಮಹಾ ಸಂಹಾರಕಾರ್ಯವನ್ನು ನಡೆಸುವನೋ, ಮಹಾಕಾಯನೂ ಮಹೋ ತ್ಸಾಹನೂ ಹತ್ತುಸಾವಿರ ಆನೆಗಳ ಬಲಕ್ಕೆ ಸಮಾನವಾದ ಬಲವುಳ್ಳವನೂ ಆಗಿರುವನೋ ಅಂತಹ ಭೀಮಸೇನನನ್ನು ನನ್ನ ಕಡೆಯ ಯಾವ ಶೂರ ಯೋಧರು ಎದುರಿಸಿ ಯುದ್ಧಮಾಡಿದರು?

ಮೇಘಶ್ಯಾಮನಾದ, ಮಹಾರಥನಾದ, ಮಹಾಪರಾಕ್ರಮಿಯಾದ ಅರ್ಜುನನು ಪರ್ಜನ್ಯನೋಪಾದಿಯಲ್ಲಿ ಭಯಂಕರವಾದ ವಜ್ರಾಯುಧಕ್ಕೆ ಸಮಾನವಾದ ಮಹಾಸ್ತ್ರಗಳನ್ನು ಸೃಷ್ಟಿಸುವವನು. ಇಂದ್ರನೋಪಾದಿಯಲ್ಲಿ ಶರಜಾಲರೂಪವಾದ ಮಳೆಯನ್ನು ಸುರಿಸುವವನು. ಧನುಸ್ಸಿನ ಟೇಂಕಾರ ದಿಂದಲೂ ಮತ್ತು ತನ್ನ ರಥಚಕ್ರಗಳ ಧ್ವನಿಯಿಂದಲೂ ಎಲ್ಲ ದಿಕ್ಕುಗಳನ್ನೂ ಶಬ್ದಾಯಮಾನವನ್ನಾಗಿ ಮಾಡುತ್ತಾ ಅರ್ಜುನನು ಭಯಂಕರವಾದ ಮೇಘ ದಂತೆಯೇ ಕಾಣುತ್ತಿದ್ದಿರಬಹುದು. ಅವನಲ್ಲಿದ್ದ ಗಾಂಡೀವಧನುಸ್ಸು ಕಾರ್ಮು ಗಿಲಿನಲ್ಲಿರುವ ಮಿಂಚಿನಂತೆ ಕಾಣುತ್ತಿದ್ದಿರಬಹುದು. ರಥಗಳ ಸಮೂಹವೇ

ಅರ್ಜುನನೆಂಬ ಕಾರ್ಮುಗಿಲಿನ ವಿಸ್ತಾರದಂತೆ ಕಾಣುತ್ತಿದ್ದಿರಬಹುದು. ರಥದ ಚಕ್ರಗಳ ಅಂಚಿನಲ್ಲಿ ಆಗುತ್ತಿದ್ದ ಗಡ-ಗಡಾಶಬ್ದವು ಮೋಡದಲ್ಲಿನ ಗುಡುಗಿನ ಶಬ್ದದಂತೆ ಕಂಡಿರಬಹುದು. 'ಸೊಯ್' 'ಸೂಯ್' ಎಂಬ ಸುಮನೋಹರ ವಾದ ಬಾಣಗಳ ಶಬ್ದವು ಮಳೆಗರೆಯುವಾಗ ಆಗುವ ಶಬ್ದವನ್ನು ಅನುಕರಿ ಸಿರಬಹುದು. ಅರ್ಜುನನೆಂಬ ಕಾರ್ಮುಗಿಲು ರೋಷವೆಂಬ ಗಾಳಿಯಿಂದ ಹುಟ್ಟುತ್ತದೆ. ಇಚ್ಛೆಬಂದಲ್ಲಿಗೆ ಹೋಗುವುದಾಗಿದ್ದು ಮರ್ಮಸ್ಥಳಗಳನ್ನು ಕತ್ತರಿಸುವಂತಹ ಬಾಣಗಳನ್ನು ಹೊಂದಿರುತ್ತದೆ. ಭಯಂಕರವಾಗಿದ್ದ ಆ ಅರ್ಜುನಮೇಘವು ಯಾವಾಗ ರಣಾಂಗಣಕ್ಕೆ ಬಂದಿತೋ–ಆಗ ರಕ್ತದ ಮಳೆ ಯಿಂದ ಎಲ್ಲ ದಿಕ್ಕುಗಳನ್ನೂ ಮುಳುಗಿಸುತ್ತಾ ಮಾನವರನ್ನು ನೆಲದ ಮೇಲೆ ಹರಡಿಬಿಟ್ಟಿರಬಹುದು. ಭಯಂಕರವಾಗಿ ಗರ್ಜನೆಯನ್ನು ಮಾಡುವ, ಭಯಂಕರನಾದ, ಧೀಮಂತನಾದ, ವಿಜಯನಾದ ಅರ್ಜುನನು ಗಾಂಡೀವ ಧನುಸ್ಸನ್ನು ಧರಿಸಿ ಗೃಧ್ರಪಕ್ಷಿಗಳ ರೆಕ್ಕೆಗಳಿಂದ ಕೂಡಿದ ಮತ್ತು ಮಸೆಗಲ್ಲಿನಿಂದ ಚೂಪಾಗಿ ಮಾಡಿದ ಬಾಣಗಳಿಂದ ದುರ್ಯೋಧನನೇ ಮೊದಲಾದವರನ್ನು ಯುದ್ಧದಲ್ಲಿ ಅಭಿಷೇಕಮಾಡುತ್ತಿದ್ದ ಸಮಯದಲ್ಲಿ ನಿಮ್ಮಗಳ ಮನಸ್ಸು ಹೇಗಿ ದ್ದಿತು? ಕಪಿಶ್ರೇಷ್ಠನನ್ನು ಧ್ವಜದಲ್ಲಿ ಹೊಂದಿರುವ ಪಾರ್ಥನು ತನ್ನ ಬಾಣಗಳ ಸಮೂಹದಿಂದ ಆಕಾಶವನ್ನೇ ಮುಚ್ಚುತ್ತಾ ದ್ರೋಣರ ಸಮೀಪಕ್ಕೆ ಬಂದಾಗ ಅವನ ಭಯಂಕರರೂಪವನ್ನು ನೋಡುತ್ತಿದ್ದ ನಿಮ್ಮ ಮನಸ್ಸಿಗೆ ಏನೆನ್ನಿಸಿತು? ಅರ್ಜುನನು ಭಯಂಕರವಾಗಿ ಗರ್ಜನೆಮಾಡುತ್ತಾ ನಿಮ್ಮನ್ನು ಆಕ್ರಮಿಸಿದಾಗ ಅವನ ಗಾಂಡೀವದ ಭಯಂಕರಧ್ವನಿಯನ್ನು ಕೇಳಿದ ನಮ್ಮ ಸೈನ್ಯವು ಒಡ ನೆಯೇ ಓಡಿಹೋಗಲಿಲ್ಲ ತಾನೇ? ಗಾಳಿಯು ವೇಗದಿಂದ ಬೀಸುತ್ತಿದ್ದು ದೊಡ್ಡ-ದೊಡ್ಡ ಮೋಡಗಳನ್ನು ಚೆಲ್ಲಾ-ಪಿಲ್ಲಿಯಾಗಿ ಮಾಡಿಬಿಡುವಂತೆ–ತನ್ನ ವೇಗಯುಕ್ತವಾದ ಬಾಣಗಳ ಸಮೂಹದಿಂದ ದೊಡ್ಡ-ದೊಡ್ಡ ಮೋಡ ಗಳೋಪಾದಿಯಲ್ಲಿದ್ದ ರಾಜರನ್ನು ನಿಮೇಷಾರ್ಧದಲ್ಲಿ ಚದುರಿಸಿ ಬಿಡಲಿಲ್ಲ ತಾನೇ? ನಿಶಿತವಾದ ಬಾಣಗಳಿಂದ ನಿಮ್ಮ ಪ್ರಾಣಗಳನ್ನು ತೆಗೆದು ಬಿಡಲಿಲ್ಲ ತಾನೇ? ಯಾವನು ಸೇನೆಯ ಅಗ್ರಭಾಗದಲ್ಲಿರುವನೆಂದು ಕೇಳಿದೊಡನೆಯೇ ಎಲ್ಲ ಜನರೂ ಭಯದಿಂದ ಎದೆಯೊಡೆದು ಓಡಿಹೋಗುತ್ತಾರೆಯೋ ಅಂತಹ ಗಾಂಡೀವಧನ್ವನಾದ ಅರ್ಜುನನನ್ನು ಎದುರಿಸಿ ನಿಂತು ಯುದ್ಧ

ಮಾಡುವ ಮನುಷ್ಯನು ಯಾವನಿದ್ದಾನೆ? ಅರ್ಜುನನ ಉಪಸ್ಥಿತಿಯಿಂದಾಗಿ ಯಾವ ಸೈನ್ಯಗಳು ನಡುಗಿದುವು? ಯಾವ ವೀರರನ್ನು ಭಯವು ಆವರಿಸಿತು? ಆ ಸಮಯದಲ್ಲಿ ದ್ರೋಣರನ್ನು ಬಿಟ್ಟುಹೋಗದೇ ಅವರೊಡನೆಯೇ ಸೇರಿ ಯುದ್ಧಮಾಡುತ್ತಿದ್ದವರು ಯಾರು? ಕ್ಷುದ್ರರಾದ ಯಾವ ಯೋಧರು ದ್ರೋಣರನ್ನು ಬಿಟ್ಟು ಭಯದಿಂದ ಓಡಿಹೋದರು? ಮಾನವರಲ್ಲದವ ರೊಡನೆಯೂ (ದೇವ-ದಾನವರೊಡನೆಯೂ) ಯುದ್ಧಮಾಡಿ ವಿಜಯಗಳಿ ಸಿದ ಧನಂಜಯನನ್ನು ಯುದ್ಧದಲ್ಲಿ ಪ್ರತಿಕಕ್ಷಿಯನ್ನಾಗಿ ಮಾಡಿಕೊಂಡು ಯುದ್ಧಮಾಡುತ್ತಾ ತಮ್ಮ ದೇಹಗಳನ್ನು ತೊರೆದು ಮೃತ್ಯುಪರವಶರಾದವರು ಯಾರು? ಸಂಜಯ! ನನ್ನ ಸೈನಿಕರು ಶ್ವೇತಾಶ್ವನಾದ ಅರ್ಜುನನ ವೇಗ ವನ್ನೂ-ವರ್ಷಾಕಾಲದ ಮೇಘದ ಗರ್ಜನೆಯಂತೆ ಭಯಂಕರವಾದ ಧ್ವನಿ ಯುಳ್ಳ ಗಾಂಡೀವಧನುಸ್ಸಿನ ಟೇಂಕಾರವನ್ನೂ ಸಹಿಸಿಕೊಳ್ಳಲಾರರು.

**ವಿಷ್ವಕ್ಸೇನೋ ಯಸ್ಯ ಯನ್ತಾ ಯಸ್ಯ ಯೋದ್ಧಾ ಧನಂಜಯಃ ।**
**ಅಶಕ್ಯಃ ಸ ರಥೋ ಜೇತುಂ ಮನ್ಯೇ ದೇವಾಸುರೈರಪಿ ॥೨೮॥**

ಯಾವ ರಥದ ನಿಯಂತೃವು ಸ್ವಯಂ ಶ್ರೀಕೃಷ್ಣನೇ ಆಗಿರುವನೋ ಮತ್ತು ಯಾವ ರಥದಲ್ಲಿ ಕುಳಿತು ಯುದ್ಧಮಾಡುವವನು ಶ್ರೀಕೃಷ್ಣಸಖನಾದ ಧನಂಜಯನೋ-ಅಂತಹ ರಥವನ್ನು ಜಯಿಸಲು ದೇವಾಸುರರೂ ಸಹ ಅಶಕ್ತರೆಂದೇ ನನ್ನ ಭಾವನೆಯಾಗಿದೆ.

ಸಂಜಯ! ಸುಕುಮಾರನೂ, ಯುವಕನೂ, ಶೂರನೂ, ದರ್ಶನೀ ಯನೂ, ಮೇಧಾವಿಯೂ, ಯುದ್ಧನಿಪುಣನೂ, ಬುದ್ಧಿವಂತನೂ, ಸತ್ಯ ಪರಾಕ್ರಮನೂ ಆದ ನಕುಲನು ಗಟ್ಟಿಯಾಗಿ ಗರ್ಜನೆಮಾಡುತ್ತಾ ಬಾಣಗಳ ಪ್ರಹಾರದಿಂದ ಎಲ್ಲ ಸೈನಿಕರನ್ನೂ ಪೀಡಿಸುತ್ತಾ ದ್ರೋಣರ ಸಮೀಪಕ್ಕೆ ಬಂದ ಸಮಯದಲ್ಲಿ ಅವನನ್ನು ನಮ್ಮ ಕಡೆಯ ಯಾವ ಯೋಧರು ಆಕ್ರಮಿಸಿದರು?

ಕೋಪಗೊಂಡ ವಿಷಸರ್ಪದಂತಿರುವ, ತೇಜಸ್ಸಿನಿಂದ ಕೂಡಿದ್ದ ದುರ್ಜಯನೂ ಆದ ಸಹದೇವನು ಯುದ್ಧದಲ್ಲಿ ಶತ್ರುಗಳನ್ನು ಸಂಹಾರ ಮಾಡುತ್ತಾ ದ್ರೋಣರ ಬಳಿಗೆ ಬಂದ ಸಮಯದಲ್ಲಿ-ಆರ್ಯವ್ರತನೂ, ಅಮೋಘವಾದ ಬಾಣಗಳುಳ್ಳವನೂ, ಲಜ್ಜಾಶೀಲನೂ, ಅಪರಾಜಿತನೂ ಆದ ಅವನನ್ನು ನನ್ನ ಕಡೆಯ ಯಾವ ಶೂರಯೋಧರು ತಡೆದರು?

ಪಾಂಡವರ ಕಡೆಯಲ್ಲಿರುವ ಮಹಾರಥನಾದ ಸಾತ್ಯಕಿಯೂ ಸಾಮಾನ್ಯನೇನಲ್ಲ. ಅವನು ಸೌವೀರರಾಜನ ಮಹಾಸೈನ್ಯವನ್ನು ಧ್ವಂಸಮಾಡಿ ಸರ್ವಾಂಗ ಶೋಭನೆಯಾದ ಕಮನೀಯಳಾದ ಭೋಜಾ ಎಂಬ ಕನ್ಯೆಯನ್ನು ಕರೆತಂದು ತನ್ನ ಭಾರ್ಯೆಯನ್ನಾಗಿ ಮಾಡಿಕೊಂಡನು. ಪುರುಷರ್ಷಭನಾದ ಆ ಸಾತ್ಯಕಿಯಲ್ಲಿ ಸತ್ಯ, ಧೈರ್ಯ, ಶೌರ್ಯ, ವಿಶುದ್ಧವಾದ ಬ್ರಹ್ಮಚರ್ಯೆ–ಈ ಎಲ್ಲ ಗುಣಗಳೂ ನಿತ್ಯವಾಗಿವೆ. (ಮೂರ್ತಿಮತ್ತಾಗಿವೆ.) ಬಲಿಷ್ಠನಾದ, ಸತ್ಯಪರಾಕ್ರಮಿಯಾದ, ಧೀರನಾದ, ಅಪರಾಜಿತನಾದ, ಯುದ್ಧದಲ್ಲಿ ವಾಸುದೇವನಿಗೆ ಸಮಾನನಾದ, ವಯಸ್ಸಿನಲ್ಲಿ ವಾಸುದೇವನಿಗಿಂತಲೂ ಸ್ವಲ್ಪ ಚಿಕ್ಕವನಾದ, ಧನಂಜಯನ ಉಪದೇಶದಿಂದ ಇಷ್ವಸ್ತ್ರವಿದ್ಯೆಯಲ್ಲಿ ಶ್ರೇಷ್ಠತ್ವವನ್ನು ಸಂಪಾದಿಸಿದ, ಅಸ್ತ್ರಗಳ ಸಂಚಾಲನದಲ್ಲಿ ಅರ್ಜುನನಿಗೆ ಸಮಾನನಾದ, ದ್ರೋಣ ಸಮೀಪಗನಾದ ಸಾತ್ಯಕಿಯನ್ನು ನಮ್ಮ ಕಡೆಯ ಯಾವ ವೀರಯೋಧರು ತಡೆದು ನಿಲ್ಲಿಸಿದರು? ವೃಷ್ಣಿವಂಶೀಯರಲ್ಲಿ ಶ್ರೇಷ್ಠನಾದ ಸಾತ್ಯಕಿಯು ಎಲ್ಲ ಧನುಷ್ಮಂತರಲ್ಲೂ ಉತ್ತಮೋತ್ತಮನಾದವನು. ಶೂರನು. ಅಸ್ತ್ರವಿದ್ಯೆಯಿಂದಲೂ ಯಶಸ್ಸಿನಿಂದಲೂ ಪರಾಕ್ರಮದಿಂದಲೂ ಅವನು ಮಹಾಮಹಿಮನಾದ ಪರಶುರಾಮನಿಗೆ ಸಮಾನನೆನಿಸಿದ್ದಾನೆ. ಮೂರು ಲೋಕಗಳೂ ಕೇಶವನಲ್ಲಿ ಐಕ್ಯವಾಗಿರುವಂತೆ–ಸತ್ಯ, ಧೈರ್ಯ, ಬುದ್ಧಿ, ಶೌರ್ಯ ಮತ್ತು ಸರ್ವಶ್ರೇಷ್ಠವಾದ ಬ್ರಹ್ಮಾಸ್ತ್ರ–ಇವುಗಳು ಸಾತ್ವತನಲ್ಲಿ (ಸಾತ್ಯಕಿಯಲ್ಲಿ) ಮೂರ್ತಿಮತ್ತಾಗಿ ನೆಲೆಸಿವೆ. ಅಂತಹ ಸಕಲಗುಣಸಂಪನ್ನನಾದ, ದೇವತೆಗಳಿಂದಲೂ ದುರ್ನಿವಾರ್ಯನಾದ, ಮಹಾಧನುಷ್ಮಂತನಾದ ಸಾತ್ಯಕಿಯ ಬಳಿಗೆ ನಮ್ಮ ಕಡೆಯ ಯಾವ ಶೂರರು ಹೋಗಿ ಅವನನ್ನು ತಡೆದು ನಿಲ್ಲಿಸಿದರು? ಪಾಂಚಾಲರಲ್ಲಿಯೇ ಉತ್ತಮನಾದ, ವೀರನಾದ, ಉತ್ತಮ ಕುಲದ, ಹಿರಿಯರಿಗೆ ಬಹುಪ್ರಿಯನಾದ, ಸದಾ ಸತ್ಕರ್ಮಗಳಲ್ಲಿ ನಿರತನಾದ, ಯುದ್ಧಸಮಯದಲ್ಲಿ ಉತ್ತಮವಾದ ತನ್ನ ಆತ್ಮಬಲವನ್ನು ಪ್ರದರ್ಶಿಸುವ, ಧನಂಜಯನ ಹಿತದಲ್ಲಿಯೇ ಯಾವಾಗಲೂ ಆಸಕ್ತನಾದ, ನಮ್ಮ ಅನರ್ಥಕ್ಕಾಗಿಯೇ ಜನ್ಮತಾಳಿರುವ, ಯಮ-ಕುಬೇರಾದಿತ್ಯ-ಮಹೇಂದ್ರ-ವರುಣರಿಗೆ ಸಮಾನನಾದ, ಮಹಾರಥನೆಂದು ಪ್ರಸಿದ್ಧನಾದ, ತನ್ನ ಪ್ರಾಣಗಳನ್ನೇ ಪಣವನ್ನಾಗಿಟ್ಟು ಯುದ್ಧದ ಸಮಯದಲ್ಲಿ ದ್ರೋಣರ ಮೇಲೆ ಸರ್ವದಾ ಆಕ್ರಮಣನಡೆಸುವ ಧೃಷ್ಟದ್ಯುಮ್ನನನ್ನು ನಮ್ಮ ಕಡೆಯ ಯಾವ ಶೂರ

ಯೋಧರು ತಡೆದು ನಿಲ್ಲಿಸಿದರು? ಚೇದಿದೇಶದ ಅನೇಕರಾಜರಲ್ಲಿ ಧೃಷ್ಟ ಕೇತುವೊಬ್ಬನೇ ಪಾಂಡವರನ್ನು ಆಶ್ರಯಿಸಿ ಅವರ ಕಡೆಗೆ ಯುದ್ಧಮಾಡಲು ಬಂದಿರುತ್ತಾನೆ. ದ್ರೋಣರೊಡನೆ ಯುದ್ಧವಾಗುತ್ತಿದ್ದ ಸಮಯದಲ್ಲಿ ದ್ರೋಣರ ಸಮೀಪಗತನಾದ ಅವನನ್ನು ನಮ್ಮ ಕಡೆಯ ಯಾವ ಯೋಧರು ತಡೆದು ನಿಲ್ಲಿಸಿದರು? ಪಾಂಡವರ ಕಡೆಯ ಕೇತುಮಂತನೂ ಸಹ ಮಹಾಪರಾಕ್ರಮೀ. ಅವನು ಅಪರಾಂತಪರ್ವತದ ದ್ವಾರಪ್ರದೇಶದಲ್ಲಿದ್ದ ದುರಾಸದನಾದ ರಾಜಪುತ್ರನನ್ನು ಸಂಹರಿಸಿದನು. ಅಂತಹ ಅತುಲಪರಾಕ್ರಮಿಯಾದ ಕೇತುಮಂತನು ದ್ರೋಣರ ಸಮೀಪಕ್ಕೆ ಬಂದಾಗ ಅವನನ್ನು ತಡೆದವರಾರು?

ಯಾವ ಪುರುಷಸಿಂಹನು ಸ್ತ್ರೀ ಮತ್ತು ಪುರುಷದೇಹಗಳ ಗುಣಾವಗುಣ ಗಳನ್ನು ಸ್ವಾನುಭವದಿಂದಲೇ ತಿಳಿದಿರುತ್ತಾನೆಯೋ, ಯುದ್ಧದಲ್ಲಿ ಉತ್ಸಾಹ ಹೀನವಾದ ಮನಸ್ಸಿನಿಂದ ಕೂಡಿರುವುದಿಲ್ಲವೋ, ಮಹಾತ್ಮನಾದ ದೇವವ್ರತನ ಮೃತ್ಯುವಿಗೆ ಯಾರು ಕಾರಣನೋ–ದ್ರುಪದಪುತ್ರನಾದ ಅಂತಹ ಶಿಖಂಡಿಯು ದ್ರೋಣಾಭಿಮುಖನಾಗಿ ಬರುತ್ತಿದ್ದಾಗ ನಮ್ಮ ಪಕ್ಷದ ಯಾವ ವೀರಯೋಧರು ಅವನನ್ನು ತಡೆದು ನಿಲ್ಲಿಸಿದರು?

ಯಾವ ವೀರನಲ್ಲಿ ಎಲ್ಲ ಸದ್ಗುಣಗಳೂ ಧನಂಜಯನಿಗಿಂತಲೂ ಅಧಿಕವಾಗಿವೆಯೋ, ಯಾವನಲ್ಲಿ ಅಸ್ತ್ರಗಳು, ಸತ್ಯ, ಬ್ರಹ್ಮಚರ್ಯ ಇವುಗಳು ಸರ್ವದಾ ಸುಪ್ರತಿಷ್ಠಿತವಾಗಿರುವುವೋ, ಯಾರು ಪರಾಕ್ರಮದಲ್ಲಿ ವಾಸು ದೇವನಿಗೆ ಸಮನಾಗಿರುವನೋ, ಬಲದಲ್ಲಿ ಧನಂಜಯನಿಗೆ ಸಮನಾಗಿರು ವನೋ, ತೇಜಸ್ಸಿನಲ್ಲಿ ಆದಿತ್ಯಸದೃಶನಾಗಿರುವನೋ, ಬುದ್ಧಿಯಲ್ಲಿ ಬೃಹಸ್ಪತಿಗೆ ಸಮನಾಗಿರುವನೋ, ಯುದ್ಧದಲ್ಲಿ ಬಾಯ್ದೆರೆದ ಅಂತಕನಂತಿರು ವನೋ–ಅಂತಹ ಮಹಾತ್ಮನಾದ ಅಭಿಮನ್ಯುವು ದ್ರೋಣರಿಗೆ ಅಭಿಮುಖ ವಾಗಿ ರಭಸದಿಂದ ಹೋಗುತ್ತಿರಲಾಗಿ ಅವನನ್ನು ನಮ್ಮ ಕಡೆಯ ಯಾವ ವೀರಯೋಧರು ತಡೆದು ನಿಲ್ಲಿಸಿದರು?

ಸುಭದ್ರೆಯ ಮಗನಾದ ಅಭಿಮನ್ಯುವಿನ್ನೂ ಎಳೆಯ ಪ್ರಾಯದ ತರುಣ. ತರುಣಪ್ರಜ್ಞ (ಬಹಳ ತೀಕ್ಷ್ಣವಾದ ಮತ್ತು ಸೂಕ್ಷ್ಮವಾದ ಬುದ್ಧಿ ಯಿರುವವನು.) ಶತ್ರುವೀರಹಂತಕನು. ಅವನು ಧನುಷ್ಪಾಣಿಯಾಗಿ ದ್ರೋಣರನ್ನು ಆಕ್ರಮಿಸಲು ಬಂದಾಗ ನಿಮ್ಮ ಮನಸ್ಸು ಹೇಗಿದ್ದಿತು?

ನರವ್ಯಾಘ್ರರಾದ, ದ್ರೌಪದಿಯ ಐವರು ಮಕ್ಕಳೂ–ಸಮುದ್ರವನ್ನು ಸೇರಲು ನದಿಗಳು ರಭಸದಿಂದ ಹರಿದು ಹೋಗುವಂತೆ–ರಭಸದಿಂದ ದ್ರೋಣರ ಕಡೆಗೆ ಬರುತ್ತಿರಲಾಗಿ ನಮ್ಮ ಕಡೆಯ ಯಾವ ಶೂರರು ಅವರನ್ನು ತಡೆದರು? ಆ ಬಾಲಕರು ಹನ್ನೆರಡು ವರ್ಷಗಳ ಕಾಲ ತಮ್ಮ ಆಟ-ಪಾಟ ಗಳೆಲ್ಲವನ್ನೂ ಬದಿಗಿರಿಸಿ ಅಸ್ತ್ರವಿದ್ಯೆಯ ಅಭ್ಯಾಸಕ್ಕಾಗಿಯೇ ಉತ್ತಮವಾದ ಬ್ರಹ್ಮಚರ್ಯವ್ರತವನ್ನು ಪರಿಪಾಲಿಸುತ್ತಾ ಭೀಷ್ಮನ ಸಮೀಪದಲ್ಲಿಯೇ ಇದ್ದು ಬಿಟ್ಟರು.

ದ್ರೋಣರ ಬಳಿಗೆ ರಭಸದಿಂದ ಹೋಗುತ್ತಿದ್ದ ಧೃಷ್ಟದ್ಯುಮ್ನನ ವೀರಪುತ್ರರಾದ ಕ್ಷತ್ರಂಜಯ, ಕ್ಷತ್ರದೇವ ಮತ್ತು ಮಾನದನಾದ ಕ್ಷತ್ರವರ್ಮಾ ಇವರನ್ನು ನಮ್ಮ ಕಡೆಯ ಯಾವ ಯೋಧರು ತಡೆದರು? ಮಹಾ ಧನುಷ್ಮಂತನಾದ ಚೇಕಿತಾನನನ್ನು ವೃಷ್ಣಿವಂಶೀಯರು ನೂರು ಯೋಧರಿ ಗಿಂತಲೂ ಅಧಿಕನಾದವನೆಂದು ತಿಳಿದಿದ್ದರು. ಅಂತಹ ಮಹಾವೀರನನ್ನು ನಮ್ಮ ಕಡೆಯ ಯಾವ ಯೋಧರು ದ್ರೋಣರ ಸಮೀಪಕ್ಕೆ ಹೋಗದಂತೆ ತಡೆದುನಿಲ್ಲಿಸಿದರು?

ವೃದ್ಧಕ್ಷೇಮನ ಮಗನಾದ ಧೀರನಾದ ಅನಾಧೃಷ್ಟಿಯು ಯುದ್ಧದಲ್ಲಿ ಕಲಿಂಗರನ್ನು ಸೋಲಿಸಿ ವೀರಶುಲ್ಕದಿಂದ ಕಲಿಂಗರಾಜನ ಕುಮಾರಿಯನ್ನು ಸೆಳೆದುತಂದ ಖ್ಯಾತಿವಂತನು. ಅವನನ್ನು ದ್ರೋಣರ ಸಮೀಪಕ್ಕೆ ಹೋಗದಂತೆ ಯಾರು ತಡೆದರು?

ಐವರು ಕೇಕಯಸಹೋದರರೂ ಪರಮಧಾರ್ಮಿಕರು, ಸತ್ಯವಿಕ್ರ ಮರು; ಇಂದ್ರಗೋಪಕದಂತೆ (ಮಿಂಚಿನ ಹುಳುವಿನಂತೆ) ಫಳ-ಫಳಿಸುವ ಕಾಂತಿಯಿಂದ ಕೂಡಿದವರು ; ಕೆಂಪುಬಣ್ಣದ ಕವಚವನ್ನು ಧರಿಸಿರತಕ್ಕ ವರು; ನಾನಾವಿಧವಾದ ಆಯುಧಗಳನ್ನು ಧರಿಸಿರತಕ್ಕವರು ಮತ್ತು ನಾನಾ ವರ್ಣಗಳ ಧ್ವಜಗಳುಳ್ಳವರು. ಅವರು ಪಾಂಡವರಿಗೆ ಚಿಕ್ಕಮ್ಮನ ಮಕ್ಕಳು (ಕುಂತಿಯ ತಂಗಿಯ ಮಕ್ಕಳು.) ಪಾಂಡವರ ವಿಜಯಕ್ಕಾಗಿ ದ್ರೋಣರನ್ನು ಸಂಹಾರಮಾಡುವ ಉದ್ದೇಶದಿಂದಲೇ ದ್ರೋಣರ ಸಮೀಪಕ್ಕೆ ರಭಸದಿಂದ ಹೋಗುತ್ತಿದ್ದ ಅವರನ್ನು ನಮ್ಮ ಕಡೆಯ ಯಾವ ವೀರಯೋಧರು ತಡೆದು ನಿಲ್ಲಿಸಿದರು?

ಸಂಜಯ! ಅವರ ಕಡೆಯಲ್ಲಿ ಇರುವ ಯುಯುತ್ಸುವೂ ಮಹಾಪರಾಕ್ರಮಿ. ಒಮ್ಮೆ ವಾರಣಾವತದಲ್ಲಿ ರಾಜರೆಲ್ಲರೂ ಸೇರಿ ಅವನನ್ನು ಸಂಹರಿಸುವ ಇಚ್ಛೆಯಿಂದ ಯುದ್ಧವನ್ನಾರಂಭಿಸಿದರು. ಆ ರಾಜರು ಪರಮಕ್ರುದ್ಧರಾಗಿ ಆರು ತಿಂಗಳುಗಳ ಕಾಲ ಸತತವಾಗಿ ಯುದ್ಧಮಾಡಿದರೂ ಸಹ ಯೋಧರಲ್ಲಿ ಶ್ರೇಷ್ಠನಾದ, ಧನುಷ್ಮಂತರಲ್ಲಿ ಉತ್ತಮನಾದ, ಶೂರನಾದ, ಸತ್ಯಸಂಧನಾದ, ಮಹಾಬಲನಾದ, ನರವ್ಯಾಘ್ರನಾದ ಯುಯುತ್ಸುವನ್ನು ಜಯಿಸಲು ಸಾಧ್ಯವಾಗಲಿಲ್ಲ. ಅಂತಹ ಮಹಾಪರಾಕ್ರಮಿಯಾದ ಯುಯುತ್ಸುವು ದ್ರೋಣರ ಸಮೀಪಕ್ಕೆ ರಭಸದಿಂದ ಬರುತ್ತಿದ್ದಾಗ ನಮ್ಮ ಕಡೆಯ ವೀರರಲ್ಲಿ ಅವನನ್ನು ತಡೆದವರಾರು?

ಸ್ತ್ರೀಯರಲ್ಲಿಯೇ ಹೆಚ್ಚಿನ ಆಸಕ್ತಿಯುಳ್ಳವನಾಗಿದ್ದ, ಮಹಾರಥನಾದ ಕಾಶಿರಾಜನ ಮಗನನ್ನು ಯಾವನು ಯುದ್ಧದಲ್ಲಿ ಭಲ್ಲಾಯುಧದಿಂದಲೇ ಪ್ರಹರಿಸಿ ರಥದಿಂದ ಕೆಳಕ್ಕೆ ಬೀಳಿಸಿದನೋ–ಅಂತಹ ಅತುಲಪರಾಕ್ರಮಿಯಾದ, ಮಹಾಧನುಷ್ಮಂತನಾದ, ಪಾಂಡವರ ಮಂತ್ರಾಲೋಚಕನಾದ, ದುರ್ಯೋಧನನಿಗೆ ಅನರ್ಥವನ್ನು ಮಾಡುವುದರಲ್ಲಿಯೇ ಆಸಕ್ತನಾದ, ದ್ರೋಣರ ವಧೆಗಾಗಿಯೇ ಜನ್ಮತಾಳಿದ್ದ, ಯುದ್ಧದಲ್ಲಿ ಯೋಧರನ್ನು ಬಾಣಗಳಿಂದ ದಹಿಸುತ್ತಾ ಸೀಳಿಹಾಕುತ್ತಾ ಇದ್ದು, ದ್ರೋಣರಿಗೆ ಅಭಿಮುಖವಾಗಿ ರಭಸದಿಂದ ಬರುತ್ತಿದ್ದ ಧೃಷ್ಟದ್ಯುಮ್ನನನ್ನು ನಮ್ಮ ಕಡೆಯ ಯಾವ ಯೋಧರು ತಡೆದರು?

ಪಿತಾಮಹನಾದ ದ್ರುಪದನ ತೊಡೆಯ ಮೇಲೆಯೇ ಬೆಳೆದ, ಅಸ್ತ್ರವಿದರಲ್ಲಿ ಶ್ರೇಷ್ಠನಾದ, ಶಸ್ತ್ರಗಳಿಂದ ಸುರಕ್ಷಿತನಾಗಿದ್ದ ಶಿಖಂಡಿಯ ಮಗನನ್ನು ದ್ರೋಣರ ಸಮೀಪಕ್ಕೆ ಹೋಗದಂತೆ ಯಾರು ತಡೆದರು?

ಚರ್ಮವು ದೇಹವನ್ನು ಸಂಪೂರ್ಣವಾಗಿ ಆವರಿಸಿರುವಂತೆ–ಉಶೀನರನ ಪುತ್ರನಾದ ಶೈಬ್ಯನು ತನ್ನ ರಥಘೋಷದಿಂದ ಭೂಮಿಯೆಲ್ಲವನ್ನೂ ಆವರಿಸಿಬಿಟ್ಟನು. ಆ ಮಹಾರಥನು ಮುಖ್ಯಶತ್ರುಗಳನ್ನು ಸಂಹರಿಸಿದನು. ಅಖಂಡಭೂವಲಯದಲ್ಲಿ ಅವನ ರಥಚಕ್ರಗಳ ಶಬ್ದವನ್ನು ಕೇಳದಿರುವ ಸ್ಥಳವೇ ಇರಲಿಲ್ಲ. ಅವನು ಮೃಷ್ಟಾನ್ನ-ಪಾನೀಯ-ದಕ್ಷಿಣೆಗಳಿಂದ ಸಮೃದ್ಧವಾದ ಹತ್ತು ಅಶ್ವಮೇಧಯಾಗಗಳನ್ನು ಮಾಡಿದನು. ಅಶ್ವಮೇಧವೇ ಅಲ್ಲದೇ ಇತರ ಎಲ್ಲ ಯಾಗಗಳನ್ನು ನಿರ್ವಿಘ್ನವಾಗಿ ನೆರವೇರಿಸಿದನು. ಪ್ರಜೆಗಳನ್ನು

ಮಕ್ಕಳಂತೆಯೇ ಪರಿಪಾಲನೆಮಾಡುತ್ತಿದ್ದನು. ಗಂಗಾನದಿಯಲ್ಲಿ ಎಷ್ಟು ಮರಳಿನ ಕಣಗಳಿವೆಯೋ-ಅಷ್ಟು ಸಂಖ್ಯೆಯ ಹಸುಗಳನ್ನು ಉಶೀನರನ ಮಗನು ಯಜ್ಞಸಮಯಗಳಲ್ಲಿ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ದುಷ್ಕರವಾದ ಯಜ್ಞಕರ್ಮವು ಮುಗಿದನಂತರದಲ್ಲಿ ಸುಪ್ರೀತರಾದ ದೇವತೆಗಳು :

**ನ ಪೂರ್ವೇ ನಾಪರೇ ಚಕ್ರುರಿದಂ ಕೇಚನ ಮಾನವಾಃ ॥೬೭॥**

'ಭೂಮಿಯಲ್ಲಿ ಯಾವ ಮನುಷ್ಯರೂ ಹಿಂದೆ ಇಂತಹ ದುಷ್ಕರವಾದ ಬಹುದಕ್ಷಿಣಾಕವಾದ ಯಜ್ಞವನ್ನು ಮಾಡಿರಲಿಲ್ಲ. ಇತ್ತೀಚಿನವರೂ ಇಂತಹ ಯಾಗವನ್ನು ಮಾಡಲಿಲ್ಲ. ಮುಂದೆಯೂ ಮಾಡಲಾರರು'–ಎಂದು ಹೇಳಿಕೊಂಡು ಹೋಗುತ್ತಿದ್ದರು.

ಸ್ಥಾವರ-ಜಂಗಮರೂಪವಾದ ಮೂರು ಲೋಕಗಳಲ್ಲಿಯೂ ಉಶೀನರನ ಮಗನಾದ ಶೈಬ್ಯನೊಬ್ಬನನ್ನು ಬಿಟ್ಟು ಇಂತಹ ವಿಶೇಷಗುಣಗಳುಳ್ಳ ಯಜ್ಞದ ಮಹಾಭಾರವನ್ನು ವಹಿಸುವ ಎರಡನೆಯ ರಾಜನು ಹುಟ್ಟಿರುವುದನ್ನು ನಾವು ಇದುವರೆಗೂ ಕೇಳಿಲ್ಲ. ಈಗಲೂ ಕೇಳುತ್ತಿಲ್ಲ. ಮುಂದೆಯೂ ಕೇಳಲಾರೆವು. ಈ ಮನುಷ್ಯಲೋಕದಲ್ಲಿ ಹುಟ್ಟಿದವರಾರೂ ಸಹ ಶೈಬ್ಯನು ಹೊಂದಲಿರುವ ಉತ್ತಮಗತಿಯನ್ನು ಹೊಂದಲಾರರು. ಅಂತಹ ಉಶೀನರ ಪುತ್ರನ ಮೊಮ್ಮಗನಾದ, ಬಾಯ್ತೆರೆದ ಅಂತಕನಂತೆಯೇ ದ್ರೋಣರಿಗೆ ಅಭಿಮುಖವಾಗಿ ಯುದ್ಧಮಾಡಲು ಬಂದ ಶೈಬ್ಯನನ್ನು ನಮ್ಮ ಸೈನ್ಯದಲ್ಲಿ ಯಾರು ತಡೆದರು? ದ್ರೋಣರೊಡನೆ ಯುದ್ಧಮಾಡಬೇಕೆಂಬ ಇಚ್ಛೆಯಿಂದ ಮುನ್ನುಗ್ಗಿ ಬರುತ್ತಿದ್ದ ಶತ್ರುಘಾತಿಯಾದ, ಮತ್ಸ್ಯರಾಜನಾದ ವಿರಾಟನ ರಥಸೈನ್ಯವನ್ನು ನಮ್ಮ ಕಡೆಯ ಯಾವ ಯೋಧರು ತಡೆದು ನಿಲ್ಲಿಸಿದರು? ಹಿಡಿಂಬೆಯಲ್ಲಿ ವೃಕೋದರನಿಗೆ ಒಡನೆಯೇ ಹುಟ್ಟಿದ, ಮಹಾಬಲಪರಾಕ್ರಮನಾದ, ಮಾಯಾವಿಯಾದ, ವೀರನಾದ, ಪಾರ್ಥರಿಗೆ ವಿಜಯವನ್ನು ಇಚ್ಛಿಸುವ, ನನ್ನ ಮಕ್ಕಳಿಗೆ ಕಂಟಕಪ್ರಾಯನಾದ, ಮಹಾತ್ಮನಾದ ಘಟೋತ್ಕಚರಾಕ್ಷಸನನ್ನು ದ್ರೋಣರ ಸಮೀಪಕ್ಕೆ ಹೋಗದಂತೆ ತಡೆದವರು ಯಾರು? ಅವನಿಗಾಗಿ ನಾನು ಬಹಳ ಭಯಪಡುತ್ತೇನೆ. ಸಂಜಯ!

ಇವರುಗಳೇ ಅಲ್ಲದೆ ಇನ್ನೂ ಯಾವ ಅನೇಕವೀರರು ಪಾಂಡವರ ಸಲುವಾಗಿ ಪ್ರಾಣಗಳನ್ನೇ ಮುಡುಪಾಗಿಟ್ಟು ಯುದ್ಧಮಾಡುತ್ತಿದ್ದರೋ–ಅಂತಹ

ವೀರರ ಸಹಕಾರದಿಂದ ಪಾಂಡವರು ಯಾರನ್ನು ತಾನೇ ಜಯಿಸದೇ ಇದ್ದಾರು? ಪಾಂಡವರಿಗೆ ಪುರುಷಸಿಂಹನಾದ, ಶಾರ್ಙ್ಗಧನ್ವನಾದ ಶ್ರೀಕೃಷ್ಣನೇ ಆಶ್ರಯನೂ ಮತ್ತು ಹಿತಾರ್ಥಿಯೂ ಆಗಿರುವನು. ಅಂತಹವರಿಗೆ ಪರಾ ಜಯವು ಹೇಗೆತಾನೇ ಆದೀತು? ಭಗವಾನ್ ಶ್ರೀಕೃಷ್ಣನು ಸಕಲಜಗತ್ತಿಗೂ ಪರಮಗುರುವಾಗಿದ್ದಾನೆ. ಸಕಲಜಗತ್ತುಗಳಿಗೂ ಸ್ವಾಮಿಯಾಗಿದ್ದಾನೆ. ಸನಾತನನಾದ, ದಿವ್ಯನಾದ, ದಿವ್ಯಾತ್ಮನಾದ, ಪ್ರಭುವಾದ ನಾರಾಯಣನು ಯುದ್ಧದಲ್ಲಿ ಪಾಂಡವರಿಗೆ ನಾಥನಾಗಿ ಸರ್ವದಾ ಅವರನ್ನು ರಕ್ಷಿಸುತ್ತಿರುತ್ತಾನೆ. ಮನೀಷಿಗಳಾದವರು ಅವನ ದಿವ್ಯಕರ್ಮಗಳನ್ನು ಹಾಡಿ-ಹೊಗಳುತ್ತಾರೆ. ನಾನೂ ಸಹ ನನ್ನ ಆತ್ಮಕ್ಕೆ ಸ್ಥೈರ್ಯವನ್ನು ಪಡೆದುಕೊಳ್ಳಲು ಶ್ರೀಕೃಷ್ಣನು ಮಾಡಿರುವ ಅದ್ಭುತಕರ್ಮಗಳನ್ನು ಭಕ್ತಿಪೂರ್ವಕವಾಗಿ ಕೀರ್ತನ ಮಾಡುತ್ತೇನೆ."

೧೦ನೆಯ ಅಧ್ಯಾಯವು ಮುಗಿಯಿತು.

೧೧ನೆಯ ಅಧ್ಯಾಯ ದ್ರೋಣಾಭಿಷೇಕಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನು ಶ್ರೀಕೃಷ್ಣನ ಲೀಲೆಗಳನ್ನು ಸ್ತೋತ್ರಮಾಡಿದುದು : ಶ್ರೀಕೃಷ್ಣಾರ್ಜುನರ ಮಹಿಮೆಯ ಕಥನ

ಧೃತರಾಷ್ಟ್ರನು ಸಂಜಯನಿಗೆ ಹೇಳುತ್ತಾನೆ :

"ಸಂಜಯ! ವಾಸುದೇವನು ಮಾಡಿದ ದಿವ್ಯಕರ್ಮಗಳನ್ನು ಹೇಳುತ್ತೇನೆ ಕೇಳು. ಬೇರಾವ ಮನುಷ್ಯನೂ ಮಾಡದಿದ್ದ ಅಮಾನುಷವಾದ ಅನೇಕ ಕರ್ಮಗಳನ್ನು ಗೋವಿಂದನು ಮಾಡಿರುವನು.

ಗೋಪಕುಲದಲ್ಲಿ ಬೆಳೆಯುತ್ತಿದ್ದಾಗ ಬಾಲಕನಾಗಿದ್ದಾಗಲೇ ಮಹಾತ್ಮನಾದ ಶ್ರೀಕೃಷ್ಣನು ತನ್ನ ಭುಜಬಲಪರಾಕ್ರಮವೆಷ್ಟೆಂಬುದನ್ನು ಮೂರು ಲೋಕಗಳಿಗೂ ತಿಳಿಯುವಂತೆ ಮಾಡಿದನು. ಯಮುನಾನದಿಯ ತೀರ ಪ್ರದೇಶದ ಅರಣ್ಯದಲ್ಲಿ ವಾಸಮಾಡುತ್ತಿದ್ದ, ಉಚ್ಚೈಃಶ್ರವಸ್ಸೆಂಬ ಇಂದ್ರನ ಕುದುರೆಗೆ ಸಮಾನವಾದ ಬಲದಿಂದ ಕೂಡಿದ್ದ, ವೇಗದಲ್ಲಿ ವಾಯುವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ ಕೇಶೀ ಎಂಬ ಹಯರಾಜನನ್ನು ಶ್ರೀಕೃಷ್ಣನು ಸಂಹರಿಸಿದನು. ಹಸುಗಳಿಗೆ ಮೃತ್ಯುವಿನೋಪಾದಿಯಲ್ಲಿ ಉದ್ಭೂತನಾದ, ಘೋರಕರ್ಮನಾದ ಗೂಳಿಯ ರೂಪದಲ್ಲಿದ್ದ ವೃಷಭಾ

ಸುರನೆಂಬ ರಾಕ್ಷಸನನ್ನು ಶ್ರೀಕೃಷ್ಣನಿನ್ನೂ ಬಾಲಕನಾಗಿದ್ದಾಗಲೇ ಭುಜಗಳಿಂದ ಅಪ್ಪಳಿಸಿ ಕೊಂದುಹಾಕಿದನು. ಪುಷ್ಕರೇಕ್ಷಣನಾದ (ಕಮಲನಯನನಾದ) ಶ್ರೀಕೃಷ್ಣನು ಪ್ರಲಂಬ, ನರಕಾಸುರ, ಜಂಭಾಸುರ, ಪೀಠಮಹಾಸುರ, ಯಮ ರಾಜಸದೃಶನಾದ ಮುರ–ಇವರೆಲ್ಲರನ್ನೂ ಸಂಹರಿಸಿದನು. ಅದೇ ರೀತಿಯಲ್ಲಿ ಜರಾಸಂಧನ ರಕ್ಷಣೆಯನ್ನು ಪಡೆದಿದ್ದ ಕಂಸನೂ ಸಹ ಪರಿವಾರಸಮೇತನಾಗಿ ಬಾಹುಬಲಪರಾಕ್ರಮವುಳ್ಳ ಶ್ರೀಕೃಷ್ಣನಿಂದ ಸಂಹರಿಸಲ್ಪಟ್ಟನು. ಶತ್ರುಹಂತಕ ನಾದ ಶ್ರೀಕೃಷ್ಣನು ತನ್ನ ಅಣ್ಣನಾದ ಬಲರಾಮನೊಡನೆ ಶೂರಸೇನದೇಶಕ್ಕೆ ಹೋಗಿ ರಣವಿಕ್ರಾಂತನಾದ, ಸಂಪೂರ್ಣವಾದ ಅಕ್ಷೌಹಿಣೀಸೈನ್ಯಕ್ಕೆ ಅಧಿಪತಿ ಯಾಗಿದ್ದ, ವೀರ್ಯವಂತನಾದ, ಭೋಜರಾಜನಾದ, ಕಂಸನ ನಡುತಮ್ಮ ನಾದ, ವೇಗವಂತನಾದ, ಶೂರಸೇನರಿಗೆ ಅಧಿಪತಿಯಾದ ಸುನಾಮಾ ಎಂಬ ರಾಜನನ್ನು ಅಕ್ಷೌಹಿಣೀಸೈನ್ಯಗಳೊಡನೆ ಸುಟ್ಟು ಭಸ್ಮಮಾಡಿದನು. ದುರ್ವಾಸ ನೆಂಬ ವಿಪ್ರರ್ಷಿಯು ಮಹಾಕೋಪಿಷ್ಠನು. ಅಂತಹವನನ್ನೂ ಸಹ ಭಾರ್ಯಾ ಸಮೇತನಾದ ಶ್ರೀಕೃಷ್ಣನು ಯಥಾಯೋಗ್ಯವಾಗಿ ಆರಾಧಿಸಿ ಅವನಿಂದಲೂ ವರಗಳನ್ನು ಪಡೆದನು. ಕಮಲನಯನನಾದ ಶ್ರೀಕೃಷ್ಣನು ಸ್ವಯಂವರದಲ್ಲಿ ಗಾಂಧಾರರಾಜನ ಮಗಳನ್ನು ಪಡೆದುಕೊಳ್ಳುವ ಸಲುವಾಗಿ ಅಲ್ಲಿಗೆ ಆಗಮಿ ಸಿದ್ದ ಪೃಥ್ವೀಪಾಲರೆಲ್ಲರನ್ನೂ ಸೋಲಿಸಿ ರಾಜಕುಮಾರಿಯನ್ನು ಮದುವೆ ಯಾದನು. ಸೋತುಹೋದ ಅಸಹನಶೀಲರಾದ ರಾಜರನ್ನು ಒಳ್ಳೆಯ ಜಾತಿಯ ಕುದುರೆಗಳನ್ನು ರಥಕ್ಕೆ ಕಟ್ಟುವಂತೆ ವಿವಾಹಸಂಬಂಧವಾಗಿ ಸಜ್ಜು ಗೊಳಿಸಿದ್ದ ರಥಕ್ಕೆ ಕಟ್ಟಿಸಿ ಅವರಿಂದಲೇ ರಥವನ್ನು ಎಳೆಸಿದನು. ಆ ಸಮಯ ದಲ್ಲಿ ಆ ರಾಜರು ಚಾವಟಿಗಳಿಂದಲೂ ಪ್ರಹೃತರಾಗಿ ಪೀಡಿತರಾದರು. ಸಮಗ್ರವಾದ ಅಕ್ಷೌಹಿಣೀಸೈನ್ಯಕ್ಕೆ ಅಧಿಪತಿಯಾಗಿದ್ದ ಮಹಾಬಾಹುವಾದ ಜರಾಸಂಧನನ್ನು ಜನಾರ್ದನನು ಇತರರಿಂದ (ಭೀಮನಿಂದ) ಉಪಾಯವಾಗಿ ಕೊಲ್ಲಿಸಿದನು. ರಾಜರ ಸೈನ್ಯಗಳಿಗೆ ನಾಯಕನಾಗಿದ್ದ, ಮಹಾಪರಾಕ್ರಮಿ ಯಾಗಿದ್ದ, ಚೇದಿದೇಶಕ್ಕೆ ರಾಜನಾಗಿದ್ದ, ಅರ್ಘ್ಯಾಹರಣಸಮಯದಲ್ಲಿ ವಿವಾದಮಾಡುತ್ತಿದ್ದ ಶಿಶುಪಾಲನನ್ನೂ ಶ್ರೀಕೃಷ್ಣನು ಪಶುವನ್ನು ಕೊಲ್ಲು ವಂತೆಯೇ ಕೊಂದುಹಾಕಿದನು. ಶಾಲ್ವರಾಜನಿಂದ ರಕ್ಷಿಸಲ್ಪಡುತ್ತಿದ್ದ ದುರಾಸದವಾಗಿದ್ದ, ಆಕಾಶದಲ್ಲಿದ್ದ ಸೌಭವೆಂಬ ರಾಕ್ಷಸನಗರಿಯನ್ನು ಶ್ರೀಕೃಷ್ಣನು ಸಮುದ್ರದ ಮಧ್ಯದಲ್ಲಿ ಅತ್ಯಂತಪರಾಕ್ರಮದಿಂದ ಹೊಡೆದುರುಳಿ

ಸಿದನು. ಅಂಗ, ವಂಗ, ಕಳಿಂಗ, ಮಗಧ, ಕಾಶಿ, ಕೋಸಲ, ವತ್ಸ, ಗರ್ಗ, ಕರೂಷ, ಪೌಂಡ್ರ–ಇವೇ ಮೊದಲಾದ ದೇಶಗಳ ರಾಜರನ್ನೂ ಶ್ರೀಕೃಷ್ಣನು ಯುದ್ಧದಲ್ಲಿ ಗೆದ್ದನು. ಇದೇ ರೀತಿಯಲ್ಲಿ ಕಮಲನಯನನಾದ ಶ್ರೀಕೃಷ್ಣನು ಅವಂತಿಗಳು, ದಾಕ್ಷಿಣಾತ್ಯರು, ಪರ್ವತೀಯರು, ದಶೇರಕರು, ಕಾಶ್ಮೀರಿಗಳು, ಔರಸಿಕರು, ಪಿಶಾಚರು, ಮುದ್ಗಲರು, ಕಾಂಬೋಜರು, ವಾಟಧಾನರು, ಚೋಲರು, ಪಾಂಡ್ಯರು, ತ್ರಿಗರ್ತರು, ಮಾಲವರು, ಅತ್ಯಂತದುರ್ಜಯರಾದ ದರದರು, ನಾನಾದಿಕ್ಕುಗಳಿಂದ ಆಗಮಿಸಿದ್ದ ಖಶರು, ಶಕರು ಮತ್ತು ಅನುಯಾಯಿಗಳಿಂದೊಡಗೂಡಿದ ಕಾಲಯವನ–ಇವರೆಲ್ಲರನ್ನೂ ಗೆದ್ದನು. ಹಿಂದೊಮ್ಮೆ ಶ್ರೀಕೃಷ್ಣನು ಅನೇಕವಿಧವಾದ ಜಲಜಂತುಗಳಿಂದ ನಿಷೇವಿತವಾದ ಸಮುದ್ರವನ್ನು ಪ್ರವೇಶಿಸಿ ನೀರಿನೊಳಗೆ ಸೇರಿಕೊಂಡಿದ್ದ ವರುಣನನ್ನು ಯುದ್ಧದಲ್ಲಿ ಜಯಿಸಿದನು. ಶ್ರೀಕೃಷ್ಣನು ಪಾತಾಲವಾಸಿಯಾಗಿದ್ದ ಪಂಚಜನ ಎಂಬ ದೈತ್ಯನನ್ನು ಕೊಂದು ಪಾಂಚಜನ್ಯವೆಂಬ ದಿವ್ಯವಾದ ಶಂಖವನ್ನು ಪಡೆದುಕೊಂಡನು. ಮಹಾಬಲನಾದ ಶ್ರೀಕೃಷ್ಣನು ಖಾಂಡವವನದಲ್ಲಿ ಅರ್ಜುನನೊಡನೆ ಸೇರಿಕೊಂಡು ಯಜ್ಞೇಶ್ವರನನ್ನು ತೃಪ್ತಿಗೊಳಿಸಿ ಅಗ್ನಿಯಿಂದ ದುರ್ಧರ್ಷವಾದ ಆಗ್ನೇಯಾಸ್ತ್ರವನ್ನೂ, ಚಕ್ರವನ್ನೂ ಸಹ ಪಡೆದುಕೊಂಡನು. ವೀರನಾದ ಶ್ರೀಕೃಷ್ಣನು ಗರುಡನ ಮೇಲೆ ಹತ್ತಿಕೊಂಡು ಇಂದ್ರನ ರಾಜಧಾನಿಯಾದ ಅಮರಾವತಿಯಲ್ಲಿದ್ದ ದೇವತೆಗಳನ್ನು ಭಯಪಡಿಸಿ ಮಹೇಂದ್ರನ ಅರಮನೆಯಿಂದ ಪಾರಿಜಾತವೃಕ್ಷವನ್ನು ತಂದನು. ಶ್ರೀಕೃಷ್ಣನ ಪರಾಕ್ರಮವೆಷ್ಟೆಂಬುದನ್ನು ತಿಳಿದಿದ್ದ ಇಂದ್ರನು ಸಹನೆತಾಳಿದನು. (ಶ್ರೀಕೃಷ್ಣನೊಡನೆ ಯುದ್ಧಮಾಡಲು ಹೋಗಲಿಲ್ಲ.) ಸಂಜಯ! ನನಗೆ ತಿಳಿದಿರುವಂತೆ ಶ್ರೀಕೃಷ್ಣನು ಜಯಿಸದೇ ಇರತಕ್ಕ ರಾಜರೂ ಇದ್ದಾರೆಂಬುದನ್ನೇ ನಾನು ಇದುವರೆಗೆ ಕೇಳಿಲ್ಲ. ಶ್ರೀಕೃಷ್ಣನು ನನ್ನ ಸಭೆಗೆ ಬಂದಿದ್ದಾಗ ಮಹಾಶ್ಚರ್ಯಕರವಾದ ದೃಶ್ಯವನ್ನು ತೋರಿಸಿಬಿಟ್ಟನು. ಅವನಲ್ಲದೇ ಮತ್ತಾರು ತಾನೇ ಅಂತಹ ಪರಮಾದ್ಭುತವಾದ ದೃಶ್ಯವನ್ನು ತೋರಿಸಲು ಸಮರ್ಥರು? ಅಂದು ನಾನು ಶಾಂತಮನಸ್ಕನಾಗಿ, ಭಕ್ತಿಯಿಂದ ಪ್ರಾರ್ಥಿಸಿ, ಶ್ರೀಕೃಷ್ಣನ ಯಾವ ಈಶ್ವರೀಯ ದಿವ್ಯರೂಪವನ್ನು ನೋಡಿದೆನೋ–ಆ ದಿವ್ಯರೂಪವು ಇಂದೂ ಪ್ರತ್ಯಕ್ಷದಲ್ಲಿಯೇ ಇದೆಯೋ ಎಂಬಂತೆ ಸ್ಪಷ್ಟವಾಗಿ ನನ್ನ ಸ್ಮೃತಿಪಥದಲ್ಲಿದೆ.

ಬುದ್ಧಿಯಿಂದಲೂ ಮತ್ತು ಪರಾಕ್ರಮದಿಂದಲೂ ಯುಕ್ತನಾದ ಹೃಷೀಕೇಶನ ಅದ್ಭುತಕರ್ಮಗಳಿಗೆ ಕೊನೆಯಲ್ಲಿದೆಯೆಂಬುದನ್ನು ಕಂಡುಹಿಡಿಯಲು ಸಾಧ್ಯವೇ ಆಗುವುದಿಲ್ಲ. (ಅವನು ಮಾಡಿರುವ ಅದ್ಭುತಕರ್ಮಗಳು ಅಗಣಿತವಾಗಿವೆ.) ಅವನ ಆಜ್ಞಾಧಾರಕರಾದ ಗದ, ಸಾಂಬ, ಪ್ರದ್ಯುಮ್ನ, ವಿದೂರಥ, ಅಗಾವಹ, ಅನಿರುದ್ಧ, ಚಾರುದೇಷ್ಣ, ಸಾರಣ, ಉಲ್ಮುಕ, ನಿಶಠ, ಝಿಲ್ಲೀ, ಪರಾಕ್ರಮಿಯಾದ ಬಭ್ರು, ಪೃಥು, ವಿಪೃಥು, ಶಮೀಕ, ಅರಿಮೇಜಯ–ಇವರೇ ಮೊದಲಾದ ಬಲಿಷ್ಠರಾದ, ಪ್ರಹಾರಕುಶಲಿಗಳಾದ ಇನ್ನೂ ಅನೇಕ ವೃಷ್ಣಿಕುಲಯೋಧರು ಮಹಾತ್ಮನಾದ, ವೃಷ್ಣಿಕುಲವೀರನಾದ ಕೇಶವನಿಂದ ಆಹೂತರಾಗಿ, ಒಂದುವೇಳೆ ಪಾಂಡವರ ಸೈನ್ಯಕ್ಕೆ ಸೇರಿಕೊಂಡು ಯುದ್ಧಸನ್ನದ್ಧರಾಗಿ ನಿಂತರೆ, ನಮ್ಮ ಎಲ್ಲ ಪ್ರಯತ್ನಗಳೂ ಸಂಶಯದಲ್ಲೇ ಉಳಿಯುತ್ತದೆಂಬುದು ನನ್ನ ಅಭಿಮತವಾಗಿದೆ. (ನಮ್ಮ ಸೈನ್ಯವೆಲ್ಲವೂ ಪ್ರಾಣ ಸಂಶಯಕ್ಕೆ ಗುರಿಯಾಗುತ್ತದೆಯೆಂದು ನಾನು ತಿಳಿಯುತ್ತೇನೆ.)

ಹತ್ತುಸಾವಿರ ಆನೆಗಳಿಗೆ ಸಮಾನವಾದ ಬಲವುಳ್ಳ, ಕೈಲಾಸಶಿಖರೋಪಮನಾದ, ವನಮಾಲಿಯಾದ, ಹಲಾಯುಧನಾದ ಬಲರಾಮನು ಶ್ರೀಕೃಷ್ಣನೆಲ್ಲಿರುತ್ತಾನೆಯೋ ಆ ಪಕ್ಷದಲ್ಲಿಯೇ ಇರುತ್ತಾನೆ.

ವಾಸುದೇವನನ್ನು ದ್ವಿಜರು ಸರ್ವಲೋಕಗಳಿಗೂ ತಂದೆಯೆಂದೇ ಹೇಳುವರು. ಅವನೂ ಪಾಂಡವರ ಸಲುವಾಗಿ ಆಯುಧವನ್ನು ಹಿಡಿದು ಯುದ್ಧ ಮಾಡುವನೇ? ಸಂಜಯ! ಒಂದು ವೇಳೆ ಶ್ರೀಕೃಷ್ಣನೇನಾದರೂ ಕವಚವನ್ನು ಧರಿಸಿ ಪಾಂಡವರ ಸಲುವಾಗಿ ಯುದ್ಧಕ್ಕೆ ನಿಂತುದಾದರೆ ಅವನನ್ನು ಎದುರಿಸಿ ನಿಂತು ಯುದ್ಧಮಾಡುವ ಯೋಧರೇ ಇಲ್ಲವಾಗುತ್ತಾರೆ. (ನಮ್ಮ ಕಡೆಯ ಯಾವ ಯೋಧರೂ ಅವನನ್ನೆದುರಿಸಿ ಯುದ್ಧಮಾಡಲಾರರು.) ಆದರೆ ಪ್ರಬಲವಾದ ಕಾರಣವಿಲ್ಲದೇ ಶ್ರೀಕೃಷ್ಣನು ಪ್ರತಿಜ್ಞೆಯನ್ನು ಮುರಿದು ಆಯುಧಪಾಣಿಯಾಗಿ ಯುದ್ಧಕ್ಕಿಳಿಯುವನೆಂದು ನಾನು ಭಾವಿಸುವುದಿಲ್ಲ. ಒಂದು ವೇಳೆ ಎಲ್ಲ ಕೌರವರೂ ಸೇರಿ ಪಾಂಡವರೆಲ್ಲರನ್ನೂ ಯುದ್ಧದಲ್ಲಿ ಜಯಗಳಿಸುವ ಪ್ರಸಂಗ ಬಂದರೆ ಆ ಸಮಯದಲ್ಲಿ ಮಾತ್ರವೇ ವಾರ್ಷ್ಣೇಯನು ಪಾಂಡವರ ರಕ್ಷಣೆಗಾಗಿ ಉತ್ತಮವಾದ ಶಸ್ತ್ರವನ್ನು ಹಿಡಿದು ಯುದ್ಧಕ್ಕೆ ಸಿದ್ಧನಾಗುವನು. ಅನಂತರ ನರವ್ಯಾಘ್ರನಾದ–ಮಹಾಬಾಹುವಾದ ಶ್ರೀಕೃಷ್ಣನು

ಪರಮಕ್ರುದ್ಧನಾಗಿ ನಮ್ಮ ಕಡೆಯ ಎಲ್ಲ ರಾಜರನ್ನೂ–ಎಲ್ಲ ಕೌರವರನ್ನೂ ಸಂಹರಿಸಿ, ಈ ಅಖಂಡರಾಜ್ಯವನ್ನು ಪಾಂಡವರ ತಾಯಿಯಾದ ಕುಂತಿಗಾದರೂ ಒಪ್ಪಿಸುತ್ತಾನೆ. (ಆದರೆ ನನ್ನ ಮಕ್ಕಳು ಪಾಂಡವರನ್ನು ಜಯಿಸುವರೆಂಬ ವಿಚಾರವೂ ಭ್ರಾಂತಿಯ ವಿಷಯವೇ ಆಗಿದೆ.) ಯಾವ ರಥದ ಸಾರಥಿಯು ಸ್ವಯಂ ಹೃಷೀಕೇಶನೋ, ಯಾವ ರಥದಲ್ಲಿ ಕುಳಿತು ಸ್ವಯಂ ಧನಂಜಯನೇ ಯುದ್ಧಮಾಡುವನೋ–ಅಂತಹ ಮಹಾರಥವನ್ನೆದುರಿಸಿ ನಿಲ್ಲುವ ಸಮರ್ಥಶಾಲಿಯಾದ ರಥವಾದರೂ ಯಾವುದಿದೆ? ಯಾವುದೇ ಉಪಾಯದಿಂದಲೂ ಕುರುಗಳಿಗೆ ಜಯವಾಗುತ್ತದೆಯೆಂಬುದು ನನಗೆ ಕಾಣುತ್ತಿಲ್ಲ. ಆದುದರಿಂದ ಯುದ್ಧವು ಹೇಗೆ ನಡೆಯಿತೆಂಬುದನ್ನು ನನಗೆ ವಿವರಿಸಿ ಹೇಳು ; ಸಂಜಯ!

**ಅರ್ಜುನಃ ಕೇಶವಸ್ಯಾತ್ಮಾ ಕೃಷ್ಣೋಽಪ್ಯಾತ್ಮಾ ಕಿರೀಟಿನಃ ।**
**ಅರ್ಜುನೇ ವಿಜಯೋ ನಿತ್ಯಂ ಕೃಷ್ಣೇ ಕೀರ್ತಿಶ್ಚ ಶಾಶ್ವತೀ ॥೩೮॥**

ಸಂಜಯ! ಅರ್ಜುನನು ಕೇಶವನಿಗೆ ಆತ್ಮಪ್ರಾಯನಾಗಿದ್ದಾನೆ. ಶ್ರೀಕೃಷ್ಣನು ಅರ್ಜುನನಿಗೆ ಆತ್ಮಪ್ರಾಯನಾಗಿದ್ದಾನೆ. ಅರ್ಜುನನಲ್ಲಿ ವಿಜಯವೆಂಬುದು ಶಾಶ್ವತವಾಗಿ ನೆಲೆಸಿದೆ. ಶ್ರೀಕೃಷ್ಣನಲ್ಲಿ ಕೀರ್ತಿಯು ಶಾಶ್ವತವಾಗಿ ನೆಲೆಸಿದೆ.

ಎಲ್ಲ ಲೋಕಗಳಲ್ಲಿಯೂ ಅರ್ಜುನನು ಅಪರಾಜಿತನೇ ಆಗಿ ಬಂದಿದ್ದಾನೆ. ಯಾವ ಲೋಕದಲ್ಲಿಯೂ ಅವನಿಗೆ ಪರಾಜಯವೆಂಬುದೇ ಇಲ್ಲ. ಶ್ರೀಕೃಷ್ಣನಲ್ಲಿ ಅಸಂಖ್ಯಾತವಾದ ಗುಣಗಳಿವೆ. ಆದರೆ ಪ್ರಧಾನವಾದ ಗುಣಗಳನ್ನೇ ವಿಶೇಷವಾಗಿ ಹೇಳಿರುವೆನು.

ದುರ್ಯೋಧನನು ಮೋಹಪರವಶನಾಗಿ ಸಚ್ಚಿದಾನಂದಸ್ವರೂಪನಾದ ಶ್ರೀಕೃಷ್ಣನ ನಿಜಸ್ವರೂಪವನ್ನು ತಿಳಿದವನಾಗಿಲ್ಲ. ದೈವಯೋಗದಿಂದ ಮೋಹಿತನಾಗಿರುವ ಇವನು ಮೃತ್ಯುವಿನ ಪಾಶದಿಂದ ಪುರಸ್ಕೃತನಾಗಲಿದ್ದಾನೆ.

**ನ ವೇದ ಕೃಷ್ಣಂ ದಾಶಾರ್ಹಮರ್ಜುನಂ ಚೈವ ಪಾಣ್ಡವಮ್ ।**
**ಪೂರ್ವದೇವೌ ಮಹಾತ್ಮಾನೌ ನರನಾರಾಯಣಾವುಭೌ ॥೪೧॥**

**ಏಕಾತ್ಮಾನೌ ದ್ವಿಧಾಭೂತೌ ದೃಶ್ಯೇತೇ ಮಾನವೈರ್ಭುವಿ ।**
**ಮನಸಾಪಿ ಹಿ ದುರ್ಧರ್ಷೌ ಸೇನಾಮೇತಾಂ ಯಶಸ್ವಿನೌ ॥೪೨॥**

**ನಾಶಯೇತಾಮಿಹೇಚ್ಛನ್ತೌ ಮಾನುಷತ್ವಾಚ್ಚ ನೇಚ್ಛತಮ್ ॥೪೩॥**

ಮಂದಾತ್ಮನಾದ ದುರ್ಯೋಧನನು ದಾಶಾರ್ಹಕುಲತಿಲಕನಾದ ಶ್ರೀಕೃಷ್ಣನಾರೆಂಬುದನ್ನು ತಿಳಿದವನಾಗಿಲ್ಲ. ಪಾಂಡವಮಧ್ಯಮನಾದ ಅರ್ಜುನ ನಾರೆಂಬುದನ್ನೂ ತಿಳಿದವನಾಗಿಲ್ಲ. ಮಹಾತ್ಮರಾದ ಅವರಿಬ್ಬರೂ ಹಿಂದೆ ನರ-ನಾರಾಯಣರೆಂಬ ದೇವತೆಗಳೇ ಆಗಿದ್ದರು. ಏಕಾತ್ಮರೇ ಆದ ಅವರಿ ಬ್ಬರೂ ಈ ಪ್ರಪಂಚದಲ್ಲಿ ಇಬ್ಬರಂತೆ ಕಾಣುತ್ತಿದ್ದಾರೆ. ದುರ್ಧರ್ಷರಾದ ಕೃಷ್ಣಾರ್ಜುನರು ಈ ಅಪಾರಸೈನ್ಯವು ನಾಶವಾಗಲೆಂದು ಮನಸ್ಸಿನಿಂದ ಚಿಂತಿಸಿ ದರೂ, ನಮ್ಮ ಎಲ್ಲ ಸೈನ್ಯವೂ ಕ್ಷಣಾರ್ಧದಲ್ಲಿ ನಾಶವಾಗಿಹೋಗುತ್ತದೆ. ಅವರು ಮನುಷ್ಯರಾಗಿ ಹುಟ್ಟಿರುವ ಕಾರಣ ಅಮಾನುಷವಾದ ರೀತಿಯಲ್ಲಿ ಸೈನ್ಯವನ್ನು ವಿನಾಶಮಾಡಲು ಇಚ್ಛಿಸುತ್ತಿಲ್ಲ. ಇಚ್ಛಾಮರಣಿಯಾದ ಭೀಷ್ಮನ ವಧೆಯಿಂದಲೂ ಮತ್ತು ಮಹಾತ್ಮರಾದ ದ್ರೋಣರ ವಧೆಯಿಂದಲೂ ಯುಗವೇ ವಿಪರ್ಯಾಸಗೊಂಡಂತೆ ಕಾಣುತ್ತಿದೆ. ಈ ವಾರ್ತೆಯು ಸಂಪೂರ್ಣಜಗತ್ತಿಗೇ ಭ್ರಾಂತಿಯನ್ನುಂಟುಮಾಡಿಬಿಟ್ಟಿದೆ. ಈ ಘಟನೆ ಗಳಿಂದಾಗಿ ಒಂದು ನಿರ್ಣಯಕ್ಕೆ ಬರಬಹುದಾಗಿದೆ.

**ನ ಹ್ಯೇವ ಬ್ರಹ್ಮಚರ್ಯೇಣ ನ ವೇದಾಧ್ಯಯನೇನ ಚ ।**
**ನ ಕ್ರಿಯಾಭಿರ್ನ ಚಾಸ್ತ್ರೇಣ ಮೃತ್ಯೋಃ ಕಶ್ಚಿನ್ನಿವಾರ್ಯತೇ ॥೪೪॥**

ಮೃತ್ಯುವಿನಿಂದ ಪಾರಾಗಲು ಸದಾ ಬ್ರಹ್ಮಚರ್ಯವ್ರತದಲ್ಲಿಯೇ ಇರು ವಿಕೆಯಿಂದಲೂ ಸಾಧ್ಯವಾಗುವುದಿಲ್ಲ. ಸದಾ ವೇದಾಧ್ಯಯನಮಾಡುತ್ತಿರು ವುದರಿಂದಲೂ ಸಾಧ್ಯವಾಗುವುದಿಲ್ಲ. ಯಾವುದೇ ವಿಧವಾದ ಅನುಷ್ಠಾನ ದಿಂದಲೂ ಸಾಧ್ಯವಾಗುವುದಿಲ್ಲ. ಯಾವ ಅಸ್ತ್ರದಿಂದಲೂ ಸಾಧ್ಯವಾಗು ವುದಿಲ್ಲ. ಮಾನವನಾಗಿ ಹುಟ್ಟಿದವನಿಗೆ ಮೃತ್ಯುವು ಅನಿವಾರ್ಯ.

ಭೀಷ್ಮ-ದ್ರೋಣರಿಬ್ಬರೂ ಲೋಕಸಮ್ಮಾನಿತರಾದವರು. ವೀರರು. ಅಸ್ತ್ರ ವಿದ್ಯಾಕೋವಿದರು. ಯುದ್ಧದುರ್ಮದರು. ಇಂತಹವರೇ ಯುದ್ಧದಲ್ಲಿ ಹತ ರಾದರೆಂದು ಕೇಳಿದನಂತರ ನಾನೇಕೆ ಜೀವಿಸಿರಲಿ? ಸಂಜಯ! ಹಿಂದೆ ಯುಧಿಷ್ಠಿರನ ಬಳಿಯಲ್ಲಿದ್ದ ಅಪಾರವಾದ ಸಂಪತ್ತನ್ನು ಕಂಡು ಅಸೂಯೆ ಪಟ್ಟೆವು (ಮಾಡಬಾರದುದೆಲ್ಲವನ್ನೂ ಮಾಡಿದೆವು.) ಅದಕ್ಕೆ ಭೀಷ್ಮ- ದ್ರೋಣರ ವಧೆಯರೂಪವಾದ ಫಲವನ್ನು ನಾವೀಗ ಅನುಭವಿಸುತ್ತಿದ್ದೇವೆ. ನಿಶ್ಚಯವಾಗಿಯೂ ನನ್ನ ಕಾರಣದಿಂದಲೇ ಕುರುಗಳ ಈ ವಿನಾಶವು ಪ್ರಾರಂಭವಾಗಿದೆ.

**ಪಕ್ವಾನಾಂ ಹಿ ವಧೇ ಸೂತ ವಜ್ರಾಯನ್ತೇ ತೃಣಾನ್ಯುತ ॥೪೭॥**

ಕಾಲದಿಂದ ಪರಿಪಕ್ವರಾದವರ ವಧೆಯ ವಿಷಯದಲ್ಲಿ ಹುಲ್ಲುಕಡ್ಡಿಗಳೂ ವಜ್ರಾಯುಧದ ಕಾರ್ಯವನ್ನು ಮಾಡಿಬಿಡುತ್ತವೆ. ಯಾವನ ಕೇವಲ ಕೋಪದ ಕಾರಣದಿಂದ ಮಹಾತ್ಮರಾದ ಭೀಷ್ಮ-ದ್ರೋಣರು ಅಸುವನ್ನು ನೀಗಿದರೋ ಅಂತಹ ಯುಧಿಷ್ಠಿರನು ಇಂದು ಲೋಕದಲ್ಲಿರುವ ಅನಂತವಾದ ಐಶ್ವರ್ಯವನ್ನು ಪಡೆದುಕೊಂಡನೆಂದೇ ಹೇಳಬಹುದಾಗಿದೆ. ಯುಧಿಷ್ಠಿರನು ಸ್ವಭಾವತಃ ಧರ್ಮಿಷ್ಠ. ಆದರೆ ಆ ಧರ್ಮವು ನನ್ನ ಮಕ್ಕಳ ಸಮೀಪಕ್ಕೂ ಬರಲೇ ಇಲ್ಲ. (ಯುಧಿಷ್ಠಿರನು ಸ್ವಭಾವತಃ ಧರ್ಮಿಷ್ಠನಾದರೆ ನನ್ನ ಮಕ್ಕಳು ಸ್ವಭಾವತಃ ಅಧರ್ಮಿಷ್ಠರು.) ಸರ್ವರ ವಿನಾಶಕ್ಕೆಂದೇ ಪ್ರಾಪ್ತವಾಗಿರುವ ಈ ಕ್ರೂರವಾದ ಕಾಲವು ಅನಿವಾರಣೀಯ.

**ಅನ್ಯಥಾ ಚಿನ್ತಿತಾ ಹ್ಯರ್ಥಾ ನರೈಸ್ತಾತ ಮನಸ್ವಿಭಿಃ ।**
**ಅನ್ಯಥೈವ ಪ್ರಪದ್ಯನ್ತೇ ದೈವಾದಿತಿ ಮತಿರ್ಮಮ ॥೫೦॥**

ಬುದ್ಧಿವಂತರಾದವರು ಪ್ರಾಪಂಚಿಕವಾದ ಸಾಧನ-ಸಂಪತ್ತುಗಳನ್ನೇ ಗಮನದಲ್ಲಿಟ್ಟುಕೊಂಡು ಪ್ರಯೋಜನವನ್ನು ನಿರ್ಣಯಿಸುತ್ತಾರೆ. ಆದರೆ ದೈವದ ಇಚ್ಛೆಯು ವಿಪರೀತವಾಗಿದ್ದಲ್ಲಿ ಎಲ್ಲವೂ ಬುದ್ಧಿವಂತರು ಮಾಡಿದ ನಿರ್ಣಯಕ್ಕೆ ವಿರೋಧವಾಗಿಯೇ ಪರಿಣಮಿಸುವುದೆಂಬುದು ನನ್ನ ಅಭಿಪ್ರಾಯವಾಗಿದೆ. (ದೈವನಿಯಮದ ಮುಂದೆ ಮನುಷ್ಯಪ್ರಯತ್ನಗಳೆಲ್ಲವೂ ವ್ಯರ್ಥವಾಗುತ್ತವೆ.)

ಸಂಜಯ! ಈಗ ನಮಗೆ ಅಪರಿಹಾರ್ಯವಾದ, ದಾಟಲು ಅಸಾಧ್ಯವಾದ, ಯೋಚಿಸಲು ಸಹ ಅಸಾಧ್ಯವಾದ ಮಹತ್ತರವಾದ ಕಷ್ಟವು ಪ್ರಾಪ್ತವಾಗಿಬಿಟ್ಟಿದೆ. ಈ ವಿಷಯವನ್ನೀಗ ಚಿಂತಿಸುವುದರಿಂದ ಅಥವಾ ಇದನ್ನು ಕುರಿತು ದುಃಖಿಸುವುದರಿಂದ ಯಾವ ಪ್ರಯೋಜನವೂ ಇಲ್ಲ. ಆದುದರಿಂದ ಯಾವುದು ಹೇಗೆ ನಡೆಯಿತೋ ಹಾಗೆಯೇ ಎಲ್ಲ ವಿಷಯಗಳನ್ನೂ ಹೇಳಿಬಿಡು."

೧೧ನೆಯ ಅಧ್ಯಾಯವು ಮುಗಿಯಿತು.

೧೨ನೆಯ ಅಧ್ಯಾಯ ದ್ರೋಣಾಭಿಷೇಕಪರ್ವ (ಮುಂದುವರಿದಿದೆ.)

## ದುರ್ಯೋಧನನು ದ್ರೋಣರನ್ನು ವರಕೇಳಿದುದು : ಅರ್ಜುನನು ಇಲ್ಲದ ಸಮಯದಲ್ಲಿ ಯುಧಿಷ್ಠಿರನನ್ನು ಬಂಧಿಸಿ ತರಲು ದ್ರೋಣರು ಪ್ರತಿಜ್ಞೆಮಾಡಿದುದು

ಧೃತರಾಷ್ಟ್ರನ ಆಶಯದಂತೆ ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸುತ್ತಾನೆ :

"ಮಹಾರಾಜ! ಯುದ್ಧದ ಪ್ರತ್ಯಕ್ಷದರ್ಶಿಯಾದ ನಾನು ದ್ರೋಣರು ಪಾಂಡವ-ಸೃಂಜಯರಿಂದ ಯಾವ ರೀತಿಯಲ್ಲಿ ಸಂಹಾರಮಾಡಲ್ಪಟ್ಟರು ಮತ್ತು ಅನಂತರ ಅವರು ಯಾವ ರೀತಿಯಲ್ಲಿ ರಥದಿಂದ ಕೆಳಕ್ಕೆ ಬಿದ್ದರು?–ಎಂಬ ದುಃಖಪೂರ್ಣವಾದ ಈ ಎಲ್ಲ ವಿಷಯಗಳನ್ನೂ ವಿವರಿಸಿ ಹೇಳುತ್ತೇನೆ.

ಸೇನಾಪತಿಯ ಸ್ಥಾನವನ್ನು ವಹಿಸಿಕೊಂಡ ಮಹಾರಥರಾದ ಭಾರ ದ್ವಾಜರು (ದ್ರೋಣರು) ಎಲ್ಲ ಸೈನ್ಯದ ಮಧ್ಯದಲ್ಲಿ ನಿನ್ನ ಮಗನೊಡನೆ ಹೇಳಿದರು:

"ದುರ್ಯೋಧನ! ಕೌರವಪುಂಗವನಾದ ಭೀಷ್ಮನ ಅನಂತರ ನನ್ನನ್ನು ನೀನು ಸೇನಾಪತಿಯನ್ನಾಗಿ ಮಾಡಿ ಗೌರವಿಸಿರುವೆ. ಈ ನಿನ್ನ ಕಾರ್ಯಕ್ಕೆ ತಕ್ಕ ಪ್ರತಿಫಲವನ್ನೂ ಪಡೆಯುವೆ. ನಾನು ನಿನಗಿಷ್ಟವಾದ ಯಾವ ಕಾರ್ಯವನ್ನು ಮಾಡಿಕೊಡಲಿ? ಈಗ ನೀನು ನಿನಗೆ ಇಷ್ಟವಾದ ವರವನ್ನು ಕೇಳು."

ಆಚಾರ್ಯರು ತಾವಾಗಿಯೇ ವರಕೊಡಲು ಬಂದಿರುವಾಗ ಸುದೀರ್ಘ ವಾಗಿ ಯೋಚಿಸಿ ವರವನ್ನು ಕೇಳಬೇಕಲ್ಲವೇ? ಒಡನೆಯೇ ದುರ್ಯೋಧನ ರಾಜನು ಕರ್ಣ-ದುಃಶಾಸನಾದಿಗಳೊಡನೆ ಸಮಾಲೋಚಿಸಿ ವಿಜಯಿಗಳಲ್ಲಿ ಶ್ರೇಷ್ಠರಾದ, ದುರ್ಧರ್ಷರಾದ ಆಚಾರ್ಯರನ್ನು ಕುರಿತು ಹೇಳಿದನು :

**ದದಾಸಿ ಚೇದ್ವರಂ ಮಹ್ಯಂ ಜೀವಗ್ರಾಹಂ ಯುಧಿಷ್ಠಿರಮ್ ।**
**ಗೃಹೀತ್ವಾ ರಥಿನಾಂ ಶ್ರೇಷ್ಠಂ ಮತ್ಸಮೀಪಮಿಹಾನಯ ॥೬॥**

"ಆಚಾರ್ಯರೇ! ನೀವು ನನಗೆ ವರವನ್ನು ದಯಪಾಲಿಸಲು ಇಚ್ಛಿಸಿ ರುವಿರಾದರೆ ರಥಿಗಳಲ್ಲಿ ಶ್ರೇಷ್ಠನಾದ ಯುಧಿಷ್ಠಿರನನ್ನು ಜೀವಸಹಿತವಾಗಿ ಹಿಡಿದು ನನ್ನ ಸಮೀಪಕ್ಕೆ ತನ್ನಿರಿ."

ಅನಂತರ ಕುರುಗಳ ಆಚಾರ್ಯರಾದ ದ್ರೋಣರು ನಿನ್ನ ಮಗನ ಮಾತನ್ನು ಕೇಳಿ ಎಲ್ಲ ಸೈನಿಕರನ್ನೂ ಹರ್ಷಗೊಳಿಸುತ್ತಾ ಈ ಮಾತುಗಳನ್ನು ಹೇಳಿದರು :

**ಧನ್ಯಃ ಕುನ್ತೀಸುತೋ ರಾಜನ್ಯಸ್ಯ ಗ್ರಹಣಮಿಚ್ಛಸಿ ।**
**ನ ವಧಾರ್ಥಂ ಸುದುರ್ಧರ್ಷಂ ವರಮದ್ಯ ಪ್ರಯಾಚಸೇ ॥೮॥**

"ದುರ್ಯೋಧನ! ನೀನು ಯುಧಿಷ್ಠಿರನ ಬಂಧನವನ್ನು ಮಾತ್ರವೇ ಇಚ್ಛಿಸಿದೆಯಲ್ಲವೇ? ನಿಜವಾಗಿಯೂ ಅವನು ಅದೃಷ್ಟವಂತನೇ ಸರಿ. ಏಕೆಂದರೆ : ಯುಧಿಷ್ಠಿರನ ವಧೆಯಾಗಬೇಕೆಂಬ ಬಹಳ ಪ್ರಯತ್ನದಿಂದಲೂ ಸಾಧಿಸಲಾಗದ ವರವನ್ನು ನೀನು ಕೇಳಲಿಲ್ಲ.

**ಕಿಮರ್ಥಂ ಚ ನರವ್ಯಾಘ್ರ ನ ವಧಂ ತಸ್ಯ ಕಾಂಕ್ಷಸೇ ।**
**ನಾಶಂಸಸಿ ಕ್ರಿಯಾಮೇತಾಂ ಮತ್ತೋ ದುರ್ಯೋಧನ ಧ್ರುವಮ್ ॥೯॥**

ದುರ್ಯೋಧನ! ನಾನಾಗಿಯೇ ನಿನಗೆ ಯಾವ ವರವನ್ನು ಬೇಕಾದರೂ ಕೇಳೆಂದು ಹೇಳಿದರೂ ಸಹ ಯಾವ ಕಾರಣದಿಂದ ನೀನು ಧರ್ಮಜನ ವಧೆಯಾಗಬೇಕೆಂಬ ವರನನ್ನು ಕೇಳಿಕೊಳ್ಳಲಿಲ್ಲ? ನರವ್ಯಾಘ್ರ! (ನೀನು ರಾಜನೀತಿಜ್ಞನೆಂಬುದು ನಿಶ್ಚಯ. ಆದರೂ ಸಹ ಈ ಸಮಯದಲ್ಲಿ ನೀನು ನನ್ನಿಂದ ಯುಧಿಷ್ಠಿರನ ವಧೆಯಾಗಬೇಕೆಂದು ನೀನೇಕೆ ಆಶಿಸಲಿಲ್ಲ? )

**ಆಹೋಸ್ವಿದ್ಧರ್ಮರಾಜಸ್ಯ ದ್ವೇಷ್ಟಾ ತಸ್ಯ ನ ವಿದ್ಯತೇ ।**
**ಯದೀಚ್ಛಸಿ ತ್ವಂ ಜೀವನ್ತಂ ಕುಲಂ ರಕ್ಷಸಿ ಚಾತ್ಮನಃ ॥೧೦॥**

ಅಥವಾ ಇದು ಹೀಗಿದ್ದರೂ ಇರಬಹುದು : ಧರ್ಮರಾಜನನ್ನು ದ್ವೇಷಿಸುವವರೇ ಈ ಪ್ರಪಂಚದಲ್ಲಿಲ್ಲ. ನಿನಗೂ ಸಹ ಇದೇ ಕಾರಣದಿಂದ ಅವನನ್ನು ವಧಿಸುವ ಇಚ್ಛೆಯು ಬಾರದೇ ಇದ್ದಿರಬಹುದು. ನೀನು ಯುಧಿಷ್ಠಿರನನ್ನು ಜೀವಂತಬಂದಿಯಾಗಿ ಅಪೇಕ್ಷಿಸಿದೆಯಾದ ಕಾರಣ ಯುಧಿಷ್ಠಿರನ ವಧೆಯಿಂದ ಸಂಪೂರ್ಣವಾಗಿ ವಿನಾಶವಾಗಲಿದ್ದ ನಿನ್ನ ಕುಲ ವನ್ನು ರಕ್ಷಿಸಲು ಇಚ್ಛಿಸಿರುವೆ–ಎಂದಾಯಿತು.

**ಅಥವಾ ಭರತಶ್ರೇಷ್ಠ ನಿರ್ಜಿತ್ಯ ಯುಧಿ ಪಾಣ್ಡವಾನ್ ।**
**ರಾಜ್ಯಂ ಸಮ್ಪ್ರತಿ ದತ್ತ್ವಾ ಚ ಸೌಭ್ರಾತ್ರಂ ಕರ್ತುಮಿಚ್ಛಸಿ ॥೧೧॥**

ಭರತಶ್ರೇಷ್ಠನೇ! ಹಾಗಲ್ಲದೇ ಯುದ್ಧದಲ್ಲಿ ಪಾಂಡವರನ್ನು ಸಂಹರಿಸದೇ ಪರಾಜಯಗೊಳಿಸಿ, ಧರ್ಮಜನನ್ನು ಜೀವಂತನಾಗಿಯೇ ಹಿಡಿದು ತಂದು ಅವನಿಗೆ ಈಗಲೇ ರಾಜ್ಯವನ್ನು ಒಪ್ಪಿಸಿ ಸೌಭ್ರಾತೃತ್ವವನ್ನು ಊರ್ಜಿತ ಗೊಳಿಸಬೇಕೆಂದಿರುವೆಯಾ?

ಯಾವ ಆಶಯದಿಂದಲೇ ಆದರೂ ನೀನು ಯುಧಿಷ್ಠಿರನನ್ನು ಜೀವಂತ ಬಂದಿಯನ್ನಾಗಿ ಮಾಡಿ ಕರೆತರಲು ಹೇಳಿರಬಹುದು. ಅಂತೂ ಕುಂತಿಯ ಮಗನಾದ ಯುಧಿಷ್ಠಿರನು ನಿಶ್ಚಯವಾಗಿಯೂ ಅದೃಷ್ಟವಂತನೇ ಸರಿ.

**ಧನ್ಯಃ ಕುನ್ತಿಸುತೋ ರಾಜಾ ಸುಜಾತಂ ಚಾಸ್ಯ ಧೀಮತಃ ।**
**ಅಜಾತಶತ್ರುತಾ ಸತ್ಯಾ ತಸ್ಯ ಯತ್ನಿಹ್ನೃತೇ ಭವಾನ್ ॥೧೩॥**

ಕುಂತಿಯ ಮಗನಾದ ಯುಧಿಷ್ಠಿರನು ಅದೃಷ್ಟವಂತ. ಧೀಮಂತನಾದ ಅವನ ಜನ್ಮವೂ ಉತ್ತಮವಾದುದು. ನೀನೂ ಸಹ ಅವನ ವಧೆಯನ್ನಾಶಿಸದೇ ಕೇವಲ ಜೀವಗ್ರಹಣವನ್ನಾಶಿಸಿ ಅವನ ವಿಷಯದಲ್ಲಿ ಸ್ನೇಹವನ್ನು ತೋರಿರು ವುದರಿಂದ ಅವನ ಅಜಾತಶತ್ರುತ್ವವು ಸತ್ಯವಾಗಿ ಪರಿಣಮಿಸಿತು. ಅವನಿಗೆ ಅಜಾತಶತ್ರುವೆಂಬ ನಾಮಧೇಯವು ಇಂದು ಸಾರ್ಥಕ್ಯಹೊಂದಿತು."

ಮಹಾರಾಜ! ದ್ರೋಣರು ಹೀಗೆಂದು ಹೇಳಿದೊಡನೆಯೇ ನಿನ್ನ ಮಗನ ಹೃದಯದಲ್ಲಿ ಬಹಳ ಕಾಲದಿಂದಲೂ ಶಾಶ್ವತವಾಗಿ ಅಡಗಿದ್ದ ಅಭಿಪ್ರಾಯವು ಒಡನೆಯೇ ಹೊರಹೊಮ್ಮಿತು.

**ನಾಕಾರೋ ಗೂಹಿತುಂ ಶಕ್ಯೋ ಬೃಹಸ್ಪತಿಸಮೈರಪಿ ।**
**ತಸ್ಮಾತ್ತವ ಸುತೋ ರಾಜನ್ಪ್ರಹೃಷ್ಟೋ ವಾಕ್ಯಮಬ್ರವೀತ್ ॥೧೪॥**

ಬೃಹಸ್ಪತಿಗೆ ಸಮಾನರಾದ ಬುದ್ಧಿವಂತರಿಂದಲೂ ಸಮಯಗಳಲ್ಲಿ ತಮ್ಮ ಹೃದಯದ ವಿಕಾರವನ್ನು ಹೊರಸೂಸುವ ಮುಖದ ವಿಕಾರವನ್ನು ಮುಚ್ಚಿಡಲು ಸಾಧ್ಯವಾಗುವುದಿಲ್ಲ. ಆದುದರಿಂದಲೇ ನಿನ್ನ ಮಗನು ದ್ರೋಣರಿತ್ತ ವರದಿಂದ ಅತ್ಯಂತಪ್ರಹೃಷ್ಟನಾಗಿಯೇ ಈ ಮಾತುಗಳನ್ನು ಹೇಳಿದನು :

**ವಧೇ ಕುನ್ತೀಸುತಸ್ಯಾಜೌ ನಾಚಾರ್ಯ ವಿಜಯೋ ಮಮ ।**
**ಹತೇ ಯುಧಿಷ್ಠಿರೇ ಪಾರ್ಥಾ ಹನ್ಯುಃ ಸರ್ವಾನ್ಹಿ ನೋ ಧ್ರುವಮ್ ॥೧೫॥**

"ಆಚಾರ್ಯರೇ! ಯುದ್ಧದಲ್ಲಿ ಕುಂತಿಯ ಮಗನಾದ ಯುಧಿಷ್ಠಿರನನ್ನು

ಕೊಲ್ಲುವುದರಿಂದ ನನಗೆ ವಿಜಯವು ಖಂಡಿತವಾಗಿಯೂ ಲಭಿಸುವುದಿಲ್ಲ. ಯುಧಿಷ್ಠಿರನನ್ನು ವಧೆಮಾಡುವಂತೆ ನಿಮ್ಮನ್ನು ವರಕೇಳಿ ನೀವು ಯುಧಿಷ್ಠಿರನ ವಧೆಯನ್ನು ಮಾಡಿಬಿಟ್ಟರೆ ಉಳಿದ ಪಾರ್ಥರು ನಮ್ಮಲ್ಲಿ ಒಬ್ಬರನ್ನೂ ಬಿಡದೇ ಸಂಹಾರಮಾಡಿಬಿಡುವರು. ಇದು ನಿಶ್ಚಯ.

**ನ ಚ ಶಕ್ಯಾ ರಣೇ ಸರ್ವೇ ನಿಹನ್ತುಮಮರೈರಪಿ ।**
**ಯ ಏವ ತೇಷಾಂ ಶೇಷಃ ಸ್ಯಾತ್ಸ ಏವಾಸ್ಮಾನ್ನ ಶೇಷಯೇತ್ ॥೧೬॥**

ದೇವತೆಗಳಿಂದಲೂ ಕೂಡ ಆ ಐವರು ಪಾಂಡವರನ್ನು ಸಂಹಾರ ಮಾಡಲು ಸಾಧ್ಯವೇ ಆಗುವುದಿಲ್ಲ. ಅವರಲ್ಲಿ ಯಾವನೊಬ್ಬನು ಉಳಿದು ಕೊಂಡರೂ ಅವನೇ ನಮ್ಮಲ್ಲಿ ಯಾರೂ ಉಳಿಯದಂತೆ ನಿಃಶೇಷಮಾಡಿಬಿಡು ತ್ತಾನೆ.

'ಹಾಗಾದರೆ ಅವನನ್ನು ಬಂಧಿಸಿ ತರುವುದಾದರೂ ಏಕೆ?'–ಎಂದು ನೀವು ಪ್ರಶ್ನಿಸಬಹುದು. ಅದರಿಂದ ಪ್ರಯೋಜನವಿದೆ.

**ಸತ್ಯಪ್ರತಿಜ್ಞೇ ತ್ವಾನೀತೇ ಪುನರ್ದ್ಯೂತೇನ ನಿರ್ಜಿತೇ ।**
**ಪುನರ್ಯಾಸ್ಯನ್ತ್ಯರಣ್ಯಾಯ ಪಾಣ್ಡವಾಸ್ತಮನುವ್ರತಾಃ ॥೧೭॥**

**ಸೋಽಯಂ ಮಮ ಜಯೋ ವ್ಯಕ್ತಂ ದೀರ್ಘಕಾಲಂ ಭವಿಷ್ಯತಿ ।**
**ಅತೋ ನ ವಧಮಿಚ್ಛಾಮಿ ಧರ್ಮರಾಜಸ್ಯ ಕರ್ಹಿಚಿತ್ ॥೧೮॥**

ನೀವು ಸತ್ಯಪ್ರತಿಜ್ಞನಾದ ಯುಧಿಷ್ಠಿರನನ್ನು ಜೀವಸಹಿತವಾಗಿ ಹಿಡಿದು ತಂದರೆ ಅವನೊಡನೆ ಪುನಃ ನಾನು ದ್ಯೂತವಾಡುತ್ತೇನೆ. ದ್ಯೂತದಲ್ಲಿ ನಾನು ಶಕುನಿಯ ಬೆಂಬಲದಿಂದ ಅವನನ್ನು ಜಯಿಸಬಲ್ಲೆನು. ಹಿಂದಿನ ಪಣವನ್ನೇ ಇಂದೂ ಇಟ್ಟುಕೊಂಡು ದ್ಯೂತದಲ್ಲಿ ನಾನು ಅವನನ್ನು ಜಯಿಸಿಬಿಟ್ಟರೆ ಧರ್ಮಜನು ಪುನಃ ಅರಣ್ಯಕ್ಕೆ ಹೋಗಲೇಬೇಕಾಗುತ್ತದೆ. ಸತ್ಯಪ್ರತಿಜ್ಞನಾದ ಅವನು ಹೋಗಿಯೇ ಹೋಗುತ್ತಾನೆ. ಅಣ್ಣನಲ್ಲಿ ಭಕ್ತಿಭಾವದಿಂದಿರುವ ಅವನ ತಮ್ಮಂದಿರೂ ಸಹ ಅವನನ್ನು ಅನುಸರಿಸಿ ಕಾಡಿಗೆ ಹೋಗುತ್ತಾರೆ. ನನ್ನ ಈ ವಿಜಯದ ಫಲವು ದೀರ್ಘಕಾಲದವರೆಗೂ ಇರುತ್ತದೆಯೆಂಬುದು ಸ್ಪಷ್ಟ ವಾಗಿಯೇ ಇದೆ. ಆದುದರಿಂದ ನಾನು ಯಾವುದೇ ಕಾರಣದಿಂದಲೂ ಯಾವಾಗಲೂ ಧರ್ಮರಾಜನ ವಧೆಯನ್ನು ಇಚ್ಛಿಸುವುದಿಲ್ಲ."

ಮಹಾರಾಜ! ತತ್ತ್ವವಿದರಾದ, ಬುದ್ಧಿವಂತರಾದ ದ್ರೋಣರು ದುರ್ಯೋಧನನ ಕುಟಿಲತೆಯಿಂದ ಕೂಡಿದ ಅಭಿಪ್ರಾಯವನ್ನು ಅವನಿಂದಲೇ

ಕೇಳಿ ತಿಳಿದುಕೊಂಡವರಾಗಿ, ತಮ್ಮಲ್ಲಿಯೇ ಸ್ವಲ್ಪಹೊತ್ತು ಚಿಂತಿಸಿ ದುರ್ಯೋಧನನು ಅಪೇಕ್ಷಿಸಿದ ವರವನ್ನು ಒಂದು ನಿಬಂಧನೆಯೊಡನೆ ದಯಪಾಲಿಸಿದರು :

**ನ ಚೇದ್ಯುಧಿಷ್ಠಿರಂ ವೀರಃ ಪಾಲಯತ್ಯರ್ಜುನೋ ಯುಧಿ ।**
**ಮನ್ಯಸ್ವ ಪಾಣ್ಡವಶ್ರೇಷ್ಠಮಾನೀತಂ ವಶಮಾತ್ಮನಃ ॥೨೦॥**

"ದುರ್ಯೋಧನ! ರಣಾಂಗಣದಲ್ಲಿ ವೀರನಾದ ಅರ್ಜುನನು ಯುಧಿಷ್ಠಿರನ ರಕ್ಷಣೆಗೆ ಇರದಿದ್ದರೆ ಪಾಂಡವಶ್ರೇಷ್ಠನಾದ ಯುಧಿಷ್ಠಿರನು ನಿನ್ನ ಬಂದಿಯಾದನೆಂದೇ ಭಾವಿಸು. ಅರ್ಜುನನ ವಿಷಯವಾಗಿ ಹೇಳುವುದಾದರೆ :

**ನ ಹಿ ಶಕ್ಯೋ ರಣೇ ಪಾರ್ಥಃ ಸೇನ್ದ್ರೈರ್ದೇವಾಸುರೈರಪಿ ।**
**ಪ್ರತ್ಯುದ್ಯಾತುಮತಸ್ತಾತ ನೈತದಾಮರ್ಷಯಾಮ್ಯಹಮ್ ॥೨೧॥**

ಯುದ್ಧದಲ್ಲಿ ಅರ್ಜುನನನ್ನು ಜಯಿಸಲು ಇಂದ್ರಸಹಿತರಾದ ದೇವಾಸುರರಿಂದಲೂ ಶಕ್ಯವಾಗುವುದಿಲ್ಲ. ಆದುದರಿಂದ ಅವನ ಮೇಲೆ ಬೀಳಲಾಗಲೀ ಅವನನ್ನು ಜಯಿಸಲಾಗಲೀ ನಾನು ಯಾವಾಗಲೂ ಯೋಚಿಸುವುದೇ ಇಲ್ಲ.

ಮೇಲಾಗಿ ಅರ್ಜುನನು ನನ್ನ ಪ್ರಿಯಶಿಷ್ಯನೆಂಬುದರಲ್ಲಿಯೂ ಸಂಶಯವಿಲ್ಲ. ಅವನಿಗೆ ಅಸ್ತ್ರವಿದ್ಯೆಯನ್ನು ಬೋಧಿಸಿದವರಲ್ಲಿ ನಾನೇ ಮೊದಲಿಗನು. ಅವನಿನ್ನೂ ತರುಣನು. ಅನೇಕ ಪುಣ್ಯಕಾರ್ಯಗಳನ್ನು ಮಾಡಿರುವ ಸುಕೃತಿಯು. ವಿಜಯವೊಂದರಲ್ಲೇ ಅವನು ನೆಟ್ಟ ಮನಸ್ಸುಳ್ಳವನಾಗಿದ್ದಾನೆ. ಅವನು ನನ್ನಿಂದ ಅಸ್ತ್ರವಿದ್ಯೆಯನ್ನು ಕಲಿತುದಲ್ಲದೇ ಇಂದ್ರನಿಂದಲೂ, ರುದ್ರನಿಂದಲೂ ಮಹಾಸ್ತ್ರಗಳನ್ನು ಪಡೆದುಕೊಂಡಿರುತ್ತಾನೆ. ನಿನ್ನಿಂದ ಕೋಪಗೊಳಿಸಲ್ಪಟ್ಟಿರುತ್ತಾನೆ. ಆದುದರಿಂದ ನಾನು ಅರ್ಜುನನ ವಿಷಯದಲ್ಲಿ ಅಷ್ಟು ಅಸಹನೆಯನ್ನು ತಾಳುವುದಿಲ್ಲ. (ಅವನ ಮೇಲೆ ಅಷ್ಟಾಗಿ ನನಗೆ ಕೋಪವು ಬರುವುದಿಲ್ಲ.) ಆದುದರಿಂದ ಯಾವ ಉಪಾಯದಿಂದ ಅವನನ್ನು ರಣರಂಗದಿಂದ ದೂರ ಕಳುಹಿಸಲು ಶಕ್ಯವಾಗುತ್ತದೆ–ಎಂಬುದನ್ನು ಚೆನ್ನಾಗಿ ಸಮಾಲೋಚಿಸಿ ಅವನನ್ನು ದೂರಕ್ಕೆ ಕಳುಹಿಸಿಬಿಡು. ಅರ್ಜುನನು ರಣಕ್ಷೇತ್ರದಿಂದ ಹೊರಟುಹೋಗಲಾಗಿ ಧರ್ಮರಾಜನನ್ನು ನೀನು ಜಯಿಸಿದೆಯೆಂದೇ ಭಾವಿಸಬಹುದಾಗಿದೆ. (ಅರ್ಜುನನ ರಕ್ಷಣೆಯಿಲ್ಲದ ಧರ್ಮರಾಜನನ್ನು ಕ್ಷಣಮಾತ್ರದಲ್ಲಿ ಹಿಡಿದುಹಾಕುತ್ತೇನೆ.) ಯುಧಿಷ್ಠಿರನ ಜೀವಗ್ರಾಹದಲ್ಲೇ ನಿನಗೆ ಜಯವಾಗುವುದೆಂದೂ, ವಧೆಯಿಂದ ಜಯವಾಗುವುದಿಲ್ಲವೆಂದೂ–ನೀನೇ

ಹೇಳಿರುವೆಯಾದಕಾರಣ ನಾನು ಹೇಳಿದ ಈ ಉಪಾಯದಿಂದ ಅವನ ಜೀವಗ್ರಹಣವನ್ನು (ಬಂಧನವನ್ನು ) ಸಾಧಿಸಬಹುದಾಗಿದೆ. ನರವ್ಯಾಘ್ರನಾದ, ಕುಂತೀಪುತ್ರನಾದ ಧನಂಜಯನನ್ನು ದೂರಕ್ಕೆ ಒಯ್ದನಂತರ ಯುಧಿಷ್ಠಿರನು ನನ್ನನ್ನೆದುರಿಸುತ್ತಾ ಮುಹೂರ್ತಕಾಲವಿದ್ದುದಾದರೆ ಸತ್ಯಧರ್ಮಪರಾಯಣನಾದ ರಾಜನನ್ನು ಬಂಧಿಸಿ ನಿನ್ನ ವಶಕ್ಕೆ ಒಪ್ಪಿಸುತ್ತೇನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.

**ಫಾಲ್ಗುನಸ್ಯ ಸಮೀಪೇ ತು ನ ಹಿ ಶಕ್ಯೋ ಯುಧಿಷ್ಠಿರಃ ।**
**ಗ್ರಹೀತುಂ ಸಮರೇ ರಾಜನ್ಸೇನ್ದ್ರೈರಪಿ ಸುರಾಸುರೈಃ ॥೨೮॥**

ಅರ್ಜುನನ ಸಮೀಪದಲ್ಲಿ ಯುಧಿಷ್ಠಿರನಿರುವಾಗ ಅವನನ್ನು ಬಂಧಿಸುವ ಸಾಧ್ಯತೆಯೇ ಇಲ್ಲ. ಕೇವಲ ನನಗೆ ಮಾತ್ರವೇ ಅಸಾಧ್ಯವೆಂದಲ್ಲ. ಯುಧಿಷ್ಠಿರನು ಅರ್ಜುನನ ರಕ್ಷಣೆಯಲ್ಲಿರುವಾಗ ಇಂದ್ರಸಹಿತರಾದ ಸುರಾಸುರರಿಂದಲೂ ಅವನನ್ನು ಬಂಧಿಸಲು ಸಾಧ್ಯವಾಗುವುದಿಲ್ಲ."

ಮಹಾರಾಜ! ಯುಧಿಷ್ಠಿರನ ಸಜೀವಬಂಧನವನ್ನು ಈ ಒಂದು ನಿಬಂಧನೆಯೊಡನೆ ಮಾಡುವೆನೆಂದು ದ್ರೋಣರು ಪ್ರತಿಜ್ಞೆಮಾಡಲಾಗಿ ಅತ್ಯಂತಮೂರ್ಖರಾದ ನಿನ್ನ ಮಕ್ಕಳು ಯುಧಿಷ್ಠಿರನು ದ್ರೋಣರಿಂದ ಬಂಧಿಸಲ್ಪಟ್ಟನೆಂದೇ ಭಾವಿಸಿಬಿಟ್ಟರು. ನಿನ್ನ ಮಗನು ದ್ರೋಣರನ್ನು ಪಾಂಡವರಲ್ಲಿ ಪಕ್ಷಪಾತವುಳ್ಳವರೆಂದು ತಿಳಿದಿದ್ದನು. ಈ ಕಾರಣದಿಂದಲೇ ಅವನು ದ್ರೋಣರು ರಹಸ್ಯದಲ್ಲಿ ಮಾಡಿದ್ದ ಪ್ರತಿಜ್ಞೆಯ ಸ್ಥಿರೀಕರಣಕ್ಕಾಗಿ ಅದನ್ನು ಸರ್ವತ್ರ ಬಹಿರಂಗಪಡಿಸಿಬಿಟ್ಟನು. (ಪ್ರತಿಜ್ಞೆಮಾಡಿರುವುದು ಯಾರಿಗೂ ತಿಳಿದಿಲ್ಲವೆಂಬ ಕಾರಣದಿಂದಲೇ ದ್ರೋಣರು ಯುಧಿಷ್ಠಿರನ ಬಂಧನಕ್ಕೆ ಪ್ರಯತ್ನಿಸದೆಯೇ ಇದ್ದುಬಿಡಬಹುದು. ವಿಷಯವನ್ನು ಬಹಿರಂಗಪಡಿಸಿಬಿಟ್ಟರೆ ತಮ್ಮ ಪ್ರತಿಜ್ಞಾಪಾಲನೆಗಾಗಿ ದ್ರೋಣರು ಯುಧಿಷ್ಠಿರನನ್ನು ಬಂಧಿಸಲು ಪ್ರಯತ್ನಿಸಲೇಬೇಕಾಗುವುದು. ಈ ವಿಧವಾದ ಆಲೋಚನೆಯೇ ದುರ್ಯೋಧನನು ರಹಸ್ಯವನ್ನು ಬಹಿರಂಗಪಡಿಸಲು ಮುಖ್ಯಕಾರಣವಾಗಿದ್ದಿತು.)

ಅರಿಂದಮನೇ! ಈ ಕಾರಣದಿಂದಲೇ ದುರ್ಯೋಧನನು-ಯುಧಿಷ್ಠಿರನ ಸಜೀವಬಂಧನಕ್ಕೆ ದ್ರೋಣರು ಪ್ರತಿಜ್ಞೆಮಾಡಿರುವರೆಂಬ ವಿಷಯವನ್ನು–ಸೈನ್ಯದ ಎಲ್ಲ ತುಕಡಿಗಳಲ್ಲಿಯೂ ಪ್ರಚುರಪಡಿಸಿದನು."

೧೨ನೆಯ ಅಧ್ಯಾಯವು ಮುಗಿಯಿತು.

## ಅರ್ಜುನನು ಯುಧಿಷ್ಠಿರನಿಗೆ ಆಶ್ವಾಸನೆಯನ್ನಿತ್ತುದು : ದ್ರೋಣರ ಪರಾಕ್ರಮವರ್ಣನೆ

ಸಂಜಯನು ಮುಂದುವರಿದು ಹೇಳುತ್ತಾನೆ :

"ಮಹಾರಾಜ! ದ್ರೋಣರು ಯುಧಿಷ್ಠಿರರಾಜನ ಬಂಧನದ ವಿಷಯದಲ್ಲಿ ತಪ್ಪಿಸಿಕೊಳ್ಳಬಹುದಾದ ಒಂದು ಛಿದ್ರವನ್ನಿಟ್ಟು ಪ್ರತಿಜ್ಞೆಮಾಡಿದನಂತರ, ನಿನ್ನ ಸೈನಿಕರೆಲ್ಲರೂ ಯುಧಿಷ್ಠಿರನ ಜೀವಸಹಿತವಾದ ಬಂಧನವಾಗುವುದೆಂಬ ಶುಭವಾರ್ತೆಯನ್ನು ಕೇಳಿ ಸಿಂಹದ ಗರ್ಜನೆಯಂತೆ ಗರ್ಜನೆಗಳನ್ನು ಮಾಡಿದರು. ಅನೇಕಬಾರಿ ಭುಜಗಳನ್ನು ಅಪ್ಪಳಿಸಿಕೊಂಡು ಶಬ್ದ ಮಾಡಿದರು. ದ್ರೋಣರು ಮಾಡಿದ ಪ್ರತಿಜ್ಞೆಯ ಪರಿಪಾಠವೆಲ್ಲವೂ ಯುಧಿಷ್ಠಿರನಿಗೆ ತನ್ನ ಆಪ್ತರಿಂದ ಯಥಾವತ್ತಾಗಿ ತಿಳಿಯಿತು. ಒಡನೆಯೇ ಧರ್ಮರಾಜನು ತನ್ನ ತಮ್ಮಂದಿರನ್ನೂ ಇತರ ರಾಜರನ್ನೂ ಆಹ್ವಾನಿಸಿ ಸಭಾಮಧ್ಯದಲ್ಲಿ ಅರ್ಜುನನನ್ನು ಉದ್ದೇಶಿಸಿ ಹೇಳಿದನು : "ಪುರುಷಸಿಂಹನೇ! ಈಗ ದ್ರೋಣರು ಮಾಡಿರುವ ಪ್ರತಿಜ್ಞೆಯನ್ನು ನೀನೂ ಕೇಳಿದೆಯಲ್ಲವೇ? ಅವರು ಮಾಡಿರುವ ಪ್ರತಿಜ್ಞೆಯು ಸತ್ಯವಾಗಿ ಪರಿಣಮಿಸದ ರೀತಿಯಲ್ಲಿ ನೀನು ನೀತಿಯೊಂದನ್ನು ರೂಪಿಸಿಕೊಡಬೇಕಾಗಿದೆ. ಶತ್ರುಕರ್ಷಕರಾದ ದ್ರೋಣರು ಪ್ರತಿಜ್ಞೆಮಾಡಿರುವುದರಲ್ಲಿಯೂ ಒಂದು ಛಿದ್ರವನ್ನಿಟ್ಟಿದ್ದಾರೆಂಬುದನ್ನು ನಾವು ಗಮನಿಸಬಹುದಾಗಿದೆ. ಮಹಾಧನುಷ್ಮಂತನೇ! ನಿನ್ನ ಅನುಪಸ್ಥಿತಿಯನ್ನು ಆಧರಿಸಿ ಅವರು ಈ ಪ್ರತಿಜ್ಞೆಯನ್ನು ಮಾಡಿರುತ್ತಾರೆ. ನಿನ್ನ ಅನುಪಸ್ಥಿತಿಯೆಂಬ ನಿಬಂಧನೆಯನ್ನು ಸೇರಿಸಿರುವುದೇ ಅವರ ಪ್ರತಿಜ್ಞೆಯಲ್ಲಿನ ಒಂದು ಛಿದ್ರವಾಗಿದೆ. ದ್ರೋಣರ ಪ್ರತಿಜ್ಞೆಯ ಮೂಲಕವಾಗಿ ದುರ್ಯೋಧನನು ತನ್ನ ಇಚ್ಛೆಯನ್ನು ಕಾರ್ಯಗತಮಾಡಿಕೊಳ್ಳಲು ಸಾಧ್ಯವಾಗದಂತೆ ನೀನು ನನ್ನ ಸಮೀಪದಲ್ಲಿಯೇ ಇದ್ದುಕೊಂಡು ಯುದ್ಧಮಾಡಬೇಕು."

ಯುಧಿಷ್ಠಿರನನ್ನು ಆಶ್ವಸಿಸುತ್ತಾ ಅರ್ಜುನನು ಹೇಳುತ್ತಾನೆ :

**ಯಥಾ ಮೇ ನ ವಧಃ ಕಾರ್ಯ ಆಚಾರ್ಯಸ್ಯ ಕದಾಚನ ।**
**ತಥಾ ತವ ಪರಿತ್ಯಾಗೋ ನ ಮೇ ರಾಜಂಶ್ಚಿಕೀರ್ಷಿತಃ ॥೭॥**

ಹೇಗೆ ಆಚಾರ್ಯದ್ರೋಣರ ವಧೆಯು ಯಾವಾಗಲೂ ನಾನು ಮಾಡಬಾರದ ಕಾರ್ಯವಾಗಿದೆಯೋ ಅದೇ ರೀತಿಯಲ್ಲಿ ನಿನ್ನ ಪರಿತ್ಯಾಗವೂ ನಾನು ಮಾಡಲು ಇಚ್ಛಿಸುವ ಕಾರ್ಯವಲ್ಲ. (ಆಚಾರ್ಯರ ವಧೆಯನ್ನು ಮಾಡದೆಯೇ ನಿನ್ನ ರಕ್ಷಣೆಯನ್ನು ನಾನು ಮಾಡುತ್ತೇನೆ.)

ಅಣ್ಣ! ನಾನು ಯುದ್ಧದಲ್ಲಿ ಪ್ರಾಣವನ್ನಾದರೂ ಬಿಟ್ಟೇನು. ಆದರೆ ಆಚಾರ್ಯರ ವಿಷಯದಲ್ಲಿ ವಿರೋಧಭಾವನೆಯನ್ನು ಮಾತ್ರ ಖಂಡಿತವಾಗಿಯೂ ಇಟ್ಟುಕೊಳ್ಳುವುದಿಲ್ಲ. ನಿನ್ನನ್ನು ಬಂಧಿಸಿ ಈ ಅಖಂಡಸಾಮ್ರಾಜ್ಯವನ್ನೂ ಪಡೆದುಕೊಳ್ಳಬೇಕೆಂದು ದುರ್ಯೋಧನನು ಆಶಿಸಿದ್ದಾನೆ. ಆದರೆ ಈ ಜೀವಲೋಕದಲ್ಲಿ ಅವನು ತನ್ನ ಈ ಕಾಮನೆಯನ್ನು ಖಂಡಿತವಾಗಿಯೂ ಪೂರ್ಣಮಾಡಿಕೊಳ್ಳಲಾರನು.

**ಪ್ರಪತೇದ್ದ್ಯೌಃ ಸನಕ್ಷತ್ರಾ ಪೃಥಿವೀ ಶಕಲೀಭವೇತ್ ।**
**ನ ತ್ವಾಂ ದ್ರೋಣೋ ನಿಗೃಹ್ಣೀಯಾಜ್ಜೀವಮಾನೇ ಮಯಿ ಧ್ರುವಮ್ ॥**

ನಕ್ಷತ್ರಸಹಿತವಾಗಿರುವ ಆಕಾಶವಾದರೂ ಕಳಚಿ ಕೆಳಕ್ಕೆ ಬಿದ್ದುಬಿಡಬಹುದು ; ಈ ಭೂಮಿಯೂ ಛಿನ್ನ-ಭಿನ್ನವಾಗಿ ಬಿಡಬಹುದು. ಆದರೆ ನಾನು ಜೀವಿಸಿರುವವರೆಗೂ ದ್ರೋಣರು ಮಾತ್ರ ನಿನ್ನನ್ನು ಬಂಧಿಸಲಾರರು. ಇದು ನಿಶ್ಚಯ.

**ಯದಿ ತಸ್ಯ ರಣೇ ಸಾಹ್ಯಂ ಕುರುತೇ ವಜ್ರಭೃತ್ಸ್ವಯಮ್ ।**
**ವಿಷ್ಣುರ್ವಾ ಸಹಿತೋ ದೇವೈರ್ನ ತ್ವಾಂ ಪ್ರಾಪ್ಸ್ಯತ್ಯಸೌ ಮೃಧೇ ॥೧೧॥**
**ಮಯಿ ಜೀವತಿ ರಾಜೇನ್ದ್ರ ನ ಭಯಂ ಕರ್ತುಮರ್ಹಸಿ ।**
**ದ್ರೋಣಾದಸ್ತ್ರಭೃತಾಂ ಶ್ರೇಷ್ಠಾತ್ಸರ್ವಶಸ್ತ್ರಭೃತಾಮಪಿ ॥೧೨॥**

ಒಂದು ವೇಳೆ ದುರ್ಯೋಧನನ ಸಹಾಯಕ್ಕೆ ವಜ್ರಪಾಣಿಯಾದ ದೇವೇಂದ್ರನೇ ಸಾಕ್ಷಾತ್ತಾಗಿ ಬಂದರೂ, ದೇವತೆಗಳಿಂದ ಕೂಡಿಕೊಂಡು ಮಹಾವಿಷ್ಣುವೇ ಬಂದರೂ ನಾನು ಜೀವಿಸಿರುವಾಗ ನಿನ್ನನ್ನವನು ಬಂಧಿಸಲಾರನು. ಆದುದರಿಂದ ಶಸ್ತ್ರಧಾರಿಗಳಲ್ಲಿ ಮತ್ತು ಅಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರ ವಿಷಯವಾಗಿ ನೀನು ಭಯಪಡುವ ಕಾರಣವಿಲ್ಲ. ನನ್ನ ಈ

ನಿಶ್ಚಲವಾದ ಪ್ರತಿಜ್ಞೆಯ ಸಂಬಂಧದಲ್ಲಿ ಮತ್ತೊಂದು ವಿಷಯವನ್ನೂ ನಿನಗೆ ಹೇಳಬಯಸುತ್ತೇನೆ.

**ನ ಸ್ಮರಾಮ್ಯನೃತಂ ತಾವನ್ನ ಸ್ಮರಾಮಿ ಪರಾಜಯಮ್ ।**
**ನ ಸ್ಮರಾಮಿ ಪ್ರತಿಶ್ರುತ್ಯ ಕಿಂಚಿದಪ್ಯನೃತಂ ಕೃತಮ್ ॥೧೪॥**

ನಾನು ಒಮ್ಮೆಯಾದರೂ ಸುಳ್ಳುಹೇಳಿರುವ ಸ್ಮರಣೆಯು ನನಗಿಲ್ಲ. ಇದುವರೆಗೆ ನಾನು ಮಾಡಿರುವ ಅನೇಕಯುದ್ಧಗಳಲ್ಲಿ ಒಮ್ಮೆಯಾದರೂ ಪರಾಜಿತನಾಗಿರುವ ಸ್ಮರಣೆಯೂ ಇಲ್ಲ. ಪ್ರತಿಜ್ಞೆಮಾಡಿದನಂತರ ಅದನ್ನು ಸುಳ್ಳಾಗಿಸಿದ ಒಂದೇ ಒಂದು ಪ್ರಕರಣವೂ ನನ್ನ ಜ್ಞಾಪಕದಲ್ಲಿಲ್ಲ. (ಆದುದರಿಂದ ಈಗ ನಿನ್ನ ಬಂಧನದ ಸಂಬಂಧವಾಗಿ ಮಾಡಿರುವ ಪ್ರತಿಜ್ಞೆಯ ವಿಷಯವಾಗಿ ಸಂಶಯಪಡಬೇಕಾದ ಕಾರಣವಿಲ್ಲ )."

ಮಹಾರಾಜ! ಅರ್ಜುನನು ಹೀಗೆ ಹೇಳಿದೊಡನೆಯೇ ಪಾಂಡವರ ಶಿಬಿರದಲ್ಲಿ ಶಂಖಗಳನ್ನೂದಿದರು. ಭೇರೀ, ಮೃದಂಗ, ಆನಕ–ಇವೇ ಮೊದಲಾದ ವಾದ್ಯಗಳನ್ನು ಬಾರಿಸಿದರು. ಶಬ್ದಗಳ ಜೊತೆಗೆ ಮಹಾತ್ಮರಾದ ಪಾಂಡವರ ಸಿಂಹನಾದಗಳೂ ಕೇಳಿಬಂದುವು. ಧನುಸ್ಸುಗಳ ಟೇಂಕಾರಶಬ್ದ ಗಳೂ ಬಹಳ ಭಯಂಕರವಾಗಿದ್ದು ಆಕಾಶದಲ್ಲಿ ಪ್ರತಿಧ್ವನಿಸುತ್ತಿದ್ದುವು. ಮಹೌಜಸನಾದ ಪಾಂಡವನ (ಯುಧಿಷ್ಠಿರನ) ಶಂಖದ ಧ್ವನಿಯನ್ನು ಕೇಳಿ ನಿನ್ನ ಸೈನಿಕರೂ ವಾದಿತ್ರಾದಿ ವಾದ್ಯಗಳನ್ನು ಬಾರಿಸಿದರು. ಅನಂತರ ನಮ್ಮ ಕಡೆಯವರೂ ಮತ್ತು ಅವರ ಕಡೆಯವರೂ ಸೈನ್ಯಗಳನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿದರು. ಮಂದ-ಮಂದವಾಗಿ ಎರಡು ಕಡೆಯ ಯೋಧರೂ ಪರಸ್ಪರ ವಾಗಿ ಯುದ್ಧಮಾಡಲು ಸಮ್ಮಿಳಿತರಾದರು. ಅನಂತರ ಕೌರವ-ಪಾಂಡವ ರಿಗೂ, ದ್ರೋಣ-ಧೃಷ್ಟದ್ಯುಮ್ನರಿಗೂ ಭಯಂಕರವೂ ರೋಮಾಂಚ ಕಾರಿಯೂ ಆದ ಯುದ್ಧವು ಪ್ರಾರಂಭವಾಯಿತು.

ಸೃಂಜಯಯೋಧರು ಆ ಯುದ್ಧದಲ್ಲಿ ದ್ರೋಣರ ಸೈನ್ಯವನ್ನು ವಿನಾಶ ಗೊಳಿಸಲು ಬಹಳವಾಗಿ ಪ್ರಯತ್ನಿಸುತ್ತಿದ್ದರು. ಆದರೆ ಆ ಮಹಾಸೈನ್ಯವು ಸೇನಾಪತಿಗಳಾದ ದ್ರೋಣರಿಂದಲೇ ರಕ್ಷಿಸಲ್ಪಡುತ್ತಿದ್ದುದರಿಂದ ಸೃಂಜಯರು ತಮ್ಮ ಪ್ರಯತ್ನದಲ್ಲಿ ಸಫಲರಾಗಲಿಲ್ಲ. ಅದೇ ರೀತಿಯಲ್ಲಿ ವಿಖ್ಯಾತರಾದ ಮತ್ತು ಪ್ರಹಾರಸಮರ್ಥರಾದ ನಿನ್ನ ಕಡೆಯ ಮಹಾರಥರೂ ಸಹ ಅರ್ಜುನ

ನಿಂದ ರಕ್ಷಿಸಲ್ಪಡುತ್ತಿದ್ದ ಪಾಂಡವರ ಸೇನೆಯನ್ನು ಭಗ್ನಗೊಳಿಸಲು ಸಮರ್ಥ ರಾಗಲಿಲ್ಲ. ರಾತ್ರಿಯ ವೇಳೆಯಲ್ಲಿ ಸುಪುಷ್ಪಿತವಾದ ಎರಡು ಅರಣ್ಯಶ್ರೇಣಿಗಳು ಮಲಗಿ ನಿದ್ರಿಸುತ್ತಿರುವಂತೆ (ಎಲೆಗಳ ಸ್ಪಂದನವೂ ಇಲ್ಲದ ವೃಕ್ಷಗಳಿಂದ ಕೂಡಿರುವಂತೆ) ಪರಸ್ಪರವಾಗಿ ಸಂರಕ್ಷಿತವಾಗಿದ್ದ ಕೌರವ-ಪಾಂಡವರ ಸೇನೆ ಗಳು ಸ್ಥಿಮಿತವಾಗಿದ್ದುಬಿಟ್ಟುವು. ಅನಂತರ ರುಕ್ಮರಥರಾದ ದ್ರೋಣರು ಪ್ರಜ್ವಲಿಸುತ್ತಿರುವ ಸೂರ್ಯನೋಪಾದಿಯಲ್ಲಿ ಸೈನ್ಯದ ಗುಂಪಿನಿಂದ ಹೊರ ಬಂದು ಸೇನಾವಿಭಾಗಗಳ ಮುಂಭಾಗದಲ್ಲಿ ಸಂಚರಿಸತೊಡಗಿದರು. ದ್ರೋಣ ರೊಬ್ಬರೇ ರಥದಲ್ಲಿ ಕುಳಿತು ಯುದ್ಧೋದ್ಯತರಾಗಿ, ಅನವರತವಾಗಿ ಅವ್ಯಾ ಹತವಾಗಿ, ಶೀಘ್ರಾತಿಶೀಘ್ರವಾಗಿ ಬಾಣಗಳ ಮಳೆಗರೆಯುತ್ತಿದ್ದುದನ್ನು ಕಂಡು ಬಾಣಗಳ ಪ್ರಹಾರದಿಂದ ಬಹಳ ತ್ರಾಸಗೊಂಡ ಪಾಂಡವ-ಸೃಂಜಯರು ಬಾಣಪ್ರಯೋಗವನ್ನು ಮಾಡುತ್ತಿರುವವರು ದ್ರೋಣರೊಬ್ಬರೇ ಅಲ್ಲವೆಂದೂ ಅನೇಕರು ಏಕಕಾಲದಲ್ಲಿ ತಮ್ಮ ಮೇಲೆ ಬಾಣಗಳ ಮಳೆಯನ್ನು ಸುರಿಸು ತ್ತಿದ್ದಾರೆಂದೂ ಭಾವಿಸಿದರು. ದ್ರೋಣರಿಂದ ಬಿಡಲ್ಪಡುತ್ತಿದ್ದ ಘೋರವಾದ ಬಾಣಗಳು ಯುಧಿಷ್ಠಿರನ ಸೈನ್ಯವನ್ನು ಭಯಪಡಿಸುತ್ತಾ ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸುತ್ತಿದ್ದುವು. ನಡುನೆತ್ತಿಗೆ ಬಂದ, ಸಾವಿರಾರು ಕಿರಣಗಳಿಂದ ಕೂಡಿದ, ಘರ್ಮಾಂಶುವಾದ ಸೂರ್ಯನು ಯಾವ ರೀತಿಯಲ್ಲಿ ಬಹುತೀಕ್ಷ್ಣನಾಗಿ ಕಾಣುತ್ತಾನೆಯೋ–ಅದೇ ರೀತಿಯಲ್ಲಿ ಬಾಣರೂಪವಾದ ಕಿರಣಗಳನ್ನು ಸದಾ ಹೊರಚೆಲ್ಲುತ್ತಿದ್ದ ದ್ರೋಣರೂ ಕಾಣಿಸಿಕೊಂಡರು. ವಜ್ರಪಾಣಿಯಾದ ಕ್ರುದ್ಧನಾದ ಇಂದ್ರನನ್ನು ಯಾವ ರೀತಿಯಲ್ಲಿ ದಾನವರು ನೋಡಲು ಅಸಮರ್ಥರಾಗಿದ್ದರೋ ಅದೇ ರೀತಿಯಲ್ಲಿ ಪಾಂಡವರ ಸೈನ್ಯದಲ್ಲಿ ಯಾವ ನೊಬ್ಬನೂ ದ್ರೋಣರನ್ನು ದಿಟ್ಟಿಸಿನೋಡಲು ಸಮರ್ಥನಾಗಲಿಲ್ಲ. ಪ್ರತಾಪ ವಂತರಾದ ಭಾರದ್ವಾಜರು ಪಾಂಡವರ ಸೈನ್ಯಕ್ಕೆ ಭ್ರಾಂತಿಯನ್ನುಂಟುಮಾಡಿ ಧೃಷ್ಟದ್ಯುಮ್ನನ ರಕ್ಷಣೆಯಲ್ಲಿದ್ದ ಸೈನ್ಯಗಳನ್ನು ನಿಶಿತವಾದ ಬಾಣಗಳಿಂದ ಬಹಳ ಬೇಗ ಧ್ವಂಸಮಾಡಿಬಿಟ್ಟರು. ಅವರು ನೇರವಾಗಿ ಹೋಗುವ ತಮ್ಮ ಬಾಣಗಳಿಂದ ಎಲ್ಲ ದಿಕ್ಕುಗಳನ್ನೂ ಆವರಿಸಿ ಆಕಾಶವನ್ನೂ ಮುಚ್ಚಿಬಿಟ್ಟರು. ಧೃಷ್ಟದ್ಯುಮ್ನನು ಯಾವ ಸ್ಥಳದಲ್ಲಿ ಧನುಷ್ಪಾಣಿಯಾಗಿ ನಿಂತಿದ್ದನೋ ಅಲ್ಲಿಯೇ ಇದ್ದ ಪಾಂಡವರ ಸೈನ್ಯವೆಲ್ಲವನ್ನೂ ದ್ರೋಣರು ಮರ್ದನಮಾಡುತ್ತಿದ್ದರು.”

೧೩ನೆಯ ಅಧ್ಯಾಯವು ಮುಗಿಯಿತು.

## ದ್ರೋಣರ ಪರಾಕ್ರಮ : ಕೌರವ-ಪಾಂಡವವೀರರ ದ್ವಂದ್ವಯುದ್ಧ: ರಣನದಿಯ ವರ್ಣನೆ : ಅಭಿಮನ್ಯುವಿನ ಪರಾಕ್ರಮ

ಸಂಜಯನು ದ್ರೋಣರ ಪರಾಕ್ರಮವನ್ನೇ ಪುನಃ ವರ್ಣಿಸುತ್ತಾನೆ :

"ಮಹಾರಾಜ! ದ್ರೋಣರು ಪಾಂಡವರ ಸೈನ್ಯದಲ್ಲಿ ಮಹತ್ತರವಾದ ಭಯವನ್ನುಂಟುಮಾಡುತ್ತಾ–ಅಗ್ನಿಯು ಹುಲ್ಲುಮೆದೆಯನ್ನು ದಹಿಸುವಂತೆ–ಪಾಂಡವರ ಸೈನ್ಯವನ್ನು ಬಾಣವೆಂಬ ಅಗ್ನಿಯಿಂದ ದಹಿಸುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದರು. ತಾನೇತಾನಾಗಿ ಹುಟ್ಟಿಕೊಂಡ ಕಾಡುಗಿಚ್ಚಿನಂತೆಯೇ ಸೈನಿಕರನ್ನು ಭಸ್ಮೀಭೂತರನ್ನಾಗಿ ಮಾಡುತ್ತಿದ್ದ ಕ್ರುದ್ಧರಾದ ರುಕ್ಮರಥರಾದ ದ್ರೋಣರನ್ನು ಕಂಡು ಸೃಂಜಯರು ಭಯದಿಂದ ನಡುಗಿದರು. ಶೀಘ್ರಾತಿಶೀಘ್ರವಾಗಿ ಬಾಣಗಳ ಆದಾನ-ಸಂಧಾನ-ಪ್ರಕ್ಷೇಪಣಗಳನ್ನು ಮಾಡುತ್ತಿದ್ದ ಸತತವಾಗಿ ಸೆಳೆಯಲ್ಪಡುತ್ತಿದ್ದ ಧನುಸ್ಸಿನ ಶಿಂಜಿನಿಯ ಘೋಷವು (ಟೇಂಕಾರವು) ಸಿಡಿಲಿನ ಶಬ್ದದಂತೆ ಬಹಳ ಗಟ್ಟಿಯಾಗಿ ಕೇಳಿಸುತ್ತಿದ್ದಿತು. ಲಘುಹಸ್ತರಾದ ದ್ರೋಣರಿಂದ ಬಿಡಲ್ಪಡುತ್ತಿದ್ದ ಭಯಂಕರವಾದ ಬಾಣಗಳು ರಥಿಗಳನ್ನೂ, ಕುದುರೆಸವಾರರನ್ನೂ, ಆನೆಗಳನ್ನೂ, ಕುದುರೆಗಳನ್ನೂ, ಕಾಲಾಳುಗಳನ್ನೂ ಅಪಾರಸಂಖ್ಯೆಯಲ್ಲಿ ಧ್ವಂಸಮಾಡುತ್ತಿದ್ದುವು. ಆಷಾಢ ಮಾಸವು ಕಳೆದು ವರ್ಷರ್ತುವು ಪ್ರಾರಂಭವಾದಾಗ ಪರ್ಜನ್ಯವು (ಮೇಘವು) ಗುಡುಗು-ಸಿಡಿಲುಗಳಿಂದ ಗರ್ಜನೆಮಾಡುತ್ತಾ ಆಕಾಶವನ್ನು ವ್ಯಾಪಿಸುವಂತೆ ಮತ್ತು ಆಲಿಕಲ್ಲಿನ ಮಳೆಯನ್ನು ಸುರಿಸುವಂತೆ–ದ್ರೋಣರು ಶತ್ರುಗಳ ಮೇಲೆ ಬಾಣಗಳ ಮಳೆಗರೆದು ಅವರ ಮನಸ್ಸಿನಲ್ಲಿ ಮಹಾಭಯವನ್ನುಂಟು ಮಾಡಿದರು. ಶಕ್ತಿಶಾಲಿಗಳಾದ ದ್ರೋಣರು ರಣಾಂಗಣದ ಸುತ್ತಲೂ ಸಂಚರಿಸುತ್ತಾ ಪಾಂಡವರ–ಸೈನ್ಯವನ್ನು ಅಲ್ಲೋಲ-ಕಲ್ಲೋಲಗೊಳಿಸುತ್ತಾ ಶತ್ರುಗಳ ಮನಸ್ಸಿನಲ್ಲಿ ಮನುಷ್ಯನಾದವನಿಂದ ಹುಟ್ಟಿಸಲು ಸಾಧ್ಯವಾಗದೇ ಇರುವ ಮಹತ್ತರವಾದ ಭಯವನ್ನು ಹುಟ್ಟಿಸಿದರು.

ಮೋಡಗಳಲ್ಲಿ ಮಿಂಚು ಕ್ಷಣ-ಕ್ಷಣಕ್ಕೂ ಕಾಣಿಸಿಕೊಳ್ಳುವಂತೆ–ಒಂದೆಡೆಯಿಂದ ಮತ್ತೊಂದೆಡೆಗೆ ಪರಿಭ್ರಮಿಸುತ್ತಿದ್ದ ಮೇಘರೂಪವಾದ ರಥದಲ್ಲಿ

ಸುವರ್ಣದಿಂದ ಸಮಲಂಕೃತವಾದ ಧನುಸ್ಸು ಮೋಡದಲ್ಲಿನ ಮಿಂಚಿನಂತೆ ಕ್ಷಣ-ಕ್ಷಣಕ್ಕೂ ಫಳ-ಫಳನೆ ಕಾಣಿಸಿಕೊಳ್ಳುತ್ತಿದ್ದಿತು. ಸತ್ಯವಂತರಾದ, ಪ್ರಾಜ್ಞರಾದ, ಧರ್ಮನಿತ್ಯರಾದ, ವೀರರಾದ ದ್ರೋಣರು ಆ ರಣಕ್ಷೇತ್ರದಲ್ಲಿ ಪ್ರಲಯಕಾಲದಂತೆಯೇ ಘೋರವೂ ಮತ್ತು ಭಯಂಕರವೂ ಆದ ರಕ್ತನದಿ ಯನ್ನು ಸೃಷ್ಟಿಸಿದರು.

ಆ ನದಿಯು ಕೋಪದ ಆವೇಗದಿಂದಲೇ ಹುಟ್ಟಿದ್ದಿತು. ಮಾಂಸಾಶಿ ಗಳಾದ ಪ್ರಾಣಿಗಳಿಂದ ಸಮಾಕುಲವಾಗಿದ್ದಿತು. ಸೈನ್ಯಸಮೂಹವೆಂಬ ಪ್ರವಾಹದಿಂದ ಆ ರಕ್ತನದಿಯು ಪೂರ್ಣವಾಗಿದ್ದಿತು. ಧ್ವಜರೂಪವಾದ ವೃಕ್ಷಗಳನ್ನೇ ಅದು ತೇಲಿಸಿಕೊಂಡು ಹೋಗುತ್ತಿದ್ದಿತು. ಸೈನಿಕರ ಶರೀರಗಳಿಂದ ಹರಿಯುತ್ತಿದ್ದ ರಕ್ತವೇ ಆ ನದಿಯ ನೀರಿನ ರೂಪದಲ್ಲಿದ್ದಿತು. ಮುರಿದು ಬಿದ್ದಿದ್ದ ರಥಗಳೇ ಅದರ ಸುಳಿಯ ರೂಪದಲ್ಲಿದ್ದುವು. ಸತ್ತುಬಿದ್ದಿದ್ದ ಆನೆ ಮತ್ತು ಕುದುರೆಗಳೇ ಆ ನದಿಯ ದಂಡೆಗಳಾಗಿದ್ದುವು. ವೀರರ ಕವಚಗಳೇ ಅದರ ದೋಣಿಗಳಂತಿದ್ದುವು. ಮಾಂಸರೂಪವಾದ ಕೆಸರಿನಿಂದ ಅದು ಸಮಾಕುಲವಾಗಿದ್ದಿತು. ಮೇದಸ್ಸು, ಮಜ್ಜೆ ಮತ್ತು ಮೂಳೆಗಳೇ ಆ ನದಿಯ ಮಳಲಿನ ರಾಶಿಯಾಗಿದ್ದಿತು. ಮಹಾರಥರ ಶಿರಸ್ತ್ರಾಣಗಳೇ ಅದರ ನೊರೆಗಳ ರೂಪದಲ್ಲಿದ್ದುವು. ಸಂಗ್ರಾಮವೆಂಬ ಮೋಡದಿಂದ ಸುರಿಸಿದ ರಕ್ತವೃಷ್ಟಿಯಿಂದ ಆ ನದಿಯು ತುಂಬಿದ್ದಿತು. ಪ್ರಾಸಾಯುಧಗಳೇ ಆ ರಕ್ತನದಿಯಲ್ಲಿ ಮೀನುಗಳ ರೂಪದಲ್ಲಿದ್ದುವು. ಆ ರಕ್ತನದಿಯು ನರ-ನಾಗಾಶ್ವಗಳಿಂದ ಪರಿಪೂರ್ಣವಾಗಿದ್ದಿತು. ಬಾಣಗಳ ವೇಗವೆಂಬುದೇ ಆ ನದಿಯ ಪ್ರಖರವಾದ ಪ್ರವಾಹವಾಗಿದ್ದಿತು. ಪ್ರಾಣಿಗಳ ಶರೀರಗಳೇ ಆ ನದಿಯ ದಾರುಮಯವಾದ ಘಟ್ಟಗಳಂತಿದ್ದುವು. ರಥಗಳೆಂಬ ಆಮೆಗಳಿಂದ ಅದು ಸಮಾಕುಲವಾಗಿದ್ದಿತು. ಯೋಧರ ಶಿರಸ್ಸುಗಳು ಆ ನದಿಯಲ್ಲಿನ ಕಮಲದ ಪುಷ್ಪಗಳಂತಿದ್ದುವು. ಯೋಧರ ಖಡ್ಗಗಳೆಂಬ ಮೀನುಗಳಿಂದ ಆ ನದಿಯು ತುಂಬಿಹೋಗಿದ್ದಿತು. ರಥಗಳು ಮತ್ತು ಆನೆಗಳು ಅದರ ಮಡುವುಗಳಂತಿದ್ದುವು. ಆ ರಕ್ತನದಿಯು ನಾನಾವಿಧವಾದ ಆಭರಣಗಳಿಂದ ಭೂಷಿತವಾಗಿದ್ದಂತೆಯೂ ಕಾಣುತ್ತಿದ್ದಿತು. ಮುರಿದುಬಿದ್ದಿದ್ದ ನೂರಾರು ರಥಗಳೇ ಆ ನದಿಯ ಸುಳಿಗಳಂತಿದ್ದುವು.

ಭೂಮಿಯಿಂದ ಹುಟ್ಟಿದ ಧೂಳಿನ ಸಮೂಹವೇ ಆ ರಕ್ತನದಿಯ ತರಂಗ ಪಙ್ಕ್ತಿಗಳಾಗಿದ್ದುವು. ಯುದ್ಧಸ್ಥಳದಲ್ಲಿ ಹುಟ್ಟಿದ್ದ ಆ ನದಿಯು ಮಹಾವೀರ್ಯವಂತರಿಗೆ ದಾಟಲು ಸುಗಮವಾಗಿಯೂ, ಭೀರುಗಳಿಗೆ ದಾಟಲು ಬಹಳ ದುಸ್ತರವಾಗಿಯೂ ಇದ್ದಿತು. ಆ ನದಿಯು ನೂರಾರು ಶರೀರಗಳಿಂದ ಸಮಾಕುಲವಾಗಿದ್ದಿತು. ಹದ್ದುಗಳಿಂದಲೂ ಮತ್ತು ರಣಹದ್ದುಗಳಿಂದಲೂ ಅದು ಸಂಸೇವ್ಯಮಾನವಾಗಿದ್ದಿತು. ಸಾವಿರಾರು ಮಹಾರಥರನ್ನು ಅದು ಯಮನಪಟ್ಟಣಕ್ಕೆ ಒಯ್ಯುತ್ತಿದ್ದಿತು. ಆ ನದಿಯಲ್ಲಿ ಬಿದ್ದಿದ್ದ ಶೂಲಗಳು ನೀರುಹಾವುಗಳಂತೆ ಕಾಣುತ್ತಿದ್ದುವು. ಗುಳ್ಳೇನರಿಯೇ ಮೊದಲಾದ ಪ್ರಾಣಿಗಳಿಂದಲೂ, ಹದ್ದು, ಕಾಗೆ–ಮೊದಲಾದ ಪಕ್ಷಿಗಳಿಂದಲೂ ಆ ನದಿಯು ಸೇವಿಸಲ್ಪಡುತ್ತಿದ್ದಿತು. ಛಿನ್ನ-ಭಿನ್ನರಾಗಿ ಬಿದ್ದಿದ್ದ ಕ್ಷತ್ರಿಯರೇ ಆ ರಕ್ತನದಿಯಲ್ಲಿ ಸಂಚರಿಸುವ ಹಂಸಗಳೋಪಾದಿಯಲ್ಲಿ ಕಾಣುತ್ತಿದ್ದರು. ರಾಜರ ಮುಕುಟಗಳೇ (ಕಿರೀಟಗಳೇ) ಆ ನದಿಯ ನೀರು ಹಕ್ಕಿಗಳಾಗಿದ್ದುವು. ಅಲ್ಲಲ್ಲಿ ಬಿದ್ದಿದ್ದ ಚಕ್ರಗಳೇ ಅದರಲ್ಲಿ ಆಮೆಗಳಂತೆ ಕಾಣುತ್ತಿದ್ದುವು. ಗದೆಗಳು ಆ ನದಿಯಲ್ಲಿನ ಮೊಸಳೆಗಳಂತಿದ್ದುವು. ಬಾಣಗಳೆಂಬ ಸಣ್ಣ ಸಣ್ಣ ಮೀನುಗಳಿಂದ ಅದು ಸಮಾಕುಲವಾಗಿದ್ದಿತು. ಈ ರಕ್ತನದಿಯು ಬಕ-ಗೃಧ್ರ-ಗುಳ್ಳೇನರಿ ಇವೇ ಮೊದಲಾದ ಘೋರವಾದ ಪಕ್ಷಿಗಳ ಸಂಘದಿಂದಲೂ, ಪ್ರಾಣಿಗಳ ಸಂಘದಿಂದಲೂ ಸೇವಿಸಲ್ಪಡುತ್ತಿದ್ದಿತು. ಆ ನದಿಯು ಯುದ್ಧದಲ್ಲಿ ದ್ರೋಣರಿಂದ ಹತವಾದ ನೂರಾರು-ಸಾವಿರಾರು ಪ್ರಾಣಿಗಳನ್ನು ಸತತವಾಗಿ ಪಿತೃಲೋಕಕ್ಕೆ ಒಯ್ಯುತ್ತಿದ್ದಿತು. ನೂರಾರು ಶರೀರಗಳಿಂದ ಸಮಾಕುಲವಾಗಿದ್ದ, ಕೂದಲುಗಳೆಂಬ ಹುಲ್ಲಿನಿಂದಲೂ ಮತ್ತು ಪಾಚಿಯಿಂದಲೂ ಕೂಡಿದ್ದ, ಭೀರುಗಳಿಗೆ ಭಯವನ್ನು ಹೆಚ್ಚಿಸುವುದಾಗಿದ್ದ ರಕ್ತನದಿಯನ್ನು ದ್ರೋಣರು ಸೃಷ್ಟಿಸಿದರು.

ಅಲ್ಲಲ್ಲಿ ಪಾಂಡವರ ಸೈನ್ಯಗಳನ್ನು ಭಯಪಡಿಸುತ್ತಿದ್ದ ಮಹಾರಥರಾದ ದ್ರೋಣರನ್ನು ಯುಧಿಷ್ಠಿರನೇ ಮೊದಲಾದ ಯೋಧರು ನಾಲ್ಕೂ ಕಡೆಗಳಿಂದಲೂ ಮುತ್ತಿಗೆಹಾಕಿದರು. ಆ ರೀತಿಯಲ್ಲಿ ರಭಸದಿಂದ ಮುತ್ತಿಗೆ ಹಾಕುತ್ತಿದ್ದ ಪಾಂಡವರ ಕಡೆಯ ಶೂರಯೋಧರನ್ನು ದೃಢವಿಕ್ರಮರಾದ ನಿನ್ನ ಕಡೆಯ ಯೋಧರು ತಡೆದು ನಿಲ್ಲಿಸಿದರು. ಅದು ಪ್ರೇಕ್ಷಕರಿಗೆ ರೋಮಾಂಚಕ

ವಾಗಿದ್ದಿತು. ನೂರಾರು ಮಾಯಾವಿದ್ಯೆಗಳನ್ನು ತಿಳಿದಿದ್ದ ಶಕುನಿಯು ಸಹದೇವನನ್ನು ಆಕ್ರಮಿಸಿದನು ಮತ್ತು ಅವನನ್ನೂ, ಅವನ ಸಾರಥಿಯನ್ನೂ, ಧ್ವಜವನ್ನೂ, ರಥವನ್ನೂ ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಅದ ರಿಂದ ಹೆಚ್ಚಾಗಿ ಕೋಪಗೊಳ್ಳದಿದ್ದ ಮಾದ್ರಿಯ ಮಗನಾದ ಸಹದೇವನು–ಸೌಬಲನ ಧ್ವಜವನ್ನೂ ಮತ್ತು ಧನುಸ್ಸನ್ನೂ ಕತ್ತರಿಸಿ, ಸೂತನನ್ನೂ–ಕುದುರೆ ಗಳನ್ನೂ ಬಾಣಗಳಿಂದ ಪ್ರಹರಿಸಿ, ಅನಂತರ ಶಕುನಿಯನ್ನು ಅರುವತ್ತು ಬಾಣಗಳಿಂದ ಗಾಯಗೊಳಿಸಿದನು. ಧನುಸ್ಸನ್ನು ಕಳೆದುಕೊಂಡ ಶಕುನಿಯು ಗದೆಯನ್ನೆತ್ತಿಕೊಂಡು ರಥದಿಂದ ಕೆಳಕ್ಕೆ ನೆಗೆದು ಆ ಗದೆಯಿಂದ ಸಹದೇವನ ಸಾರಥಿಯನ್ನು ಅಪ್ಪಳಿಸಿ ಕೆಳಗುರುಳಿಸಿದನು. ರಥಹೀನರಾದ ಮಹಾಬಲ ರಾದ ಶಕುನಿ-ಸಹದೇವರು ಕೋಡು (ಶಿಖರ) ಗಳಿಂದ ಕೂಡಿರುವ ಪರ್ವತ ಗಳಂತೆ ಗದಾಹಸ್ತರಾಗಿ ಆ ರಣಾಂಗಣದಲ್ಲಿ ಪರಸ್ಪರವಾಗಿ ಯುದ್ಧವೆಂಬ ಆಟವಾಡುತ್ತಿದ್ದರು. ದ್ರೋಣರು ಪಾಂಚಾಲರಾಜನಾದ ದ್ರುಪದನನ್ನು ಹತ್ತು ಬಾಣಗಳಿಂದ ಪ್ರಹರಿಸಿದರು. ಅದಕ್ಕೆ ಪ್ರತಿಯಾಗಿ ದ್ರುಪದನೂ ಸಹ ದ್ರೋಣ ರನ್ನು ಅನೇಕಬಾಣಗಳಿಂದ ಗಾಯಗೊಳಿಸಿದನು. ಅದರಿಂದ ಪರಮಕ್ರುದ್ಧ ರಾದ ದ್ರೋಣರು ಪುನಃ ದ್ರುಪದನ ಮೇಲೆ ಅತ್ಯಧಿಕವಾದ ಬಾಣಗಳನ್ನು ಪ್ರಯೋಗಿಸಿ ಅವನನ್ನು ಗಾಯಗೊಳಿಸಿದರು. ಭೀಮಸೇನನು ವಿವಿಂಶತಿ ಯನ್ನು ಇಪ್ಪತ್ತು ಬಾಣಗಳಿಂದ ಪ್ರಹರಿಸಿದನು. ಆದರೂ ವಿವಿಂಶತಿಯನ್ನು ವಿಚಲಿತನನ್ನಾಗಿ ಮಾಡಲು ಭೀಮನು ಸಮರ್ಥನಾಗಿಲಿಲ್ಲ. ಅದು ನಮಗೆ ಪರಮಾದ್ಭುತವಾಗಿ ಕಂಡಿತು. ಒಡನೆಯೇ ವಿವಿಂಶತಿಯು ನಿಶಿತವಾದ ಬಾಣ ಗಳನ್ನು ಪ್ರಯೋಗಿಸಿ ಭೀಮನನ್ನು ಅಶ್ವ-ಕೇತು-ಧನುಸ್ಸುಗಳಿಂದ ವಿಹೀನ ನನ್ನಾಗಿ ಮಾಡಿಬಿಟ್ಟನು. ಅದನ್ನು ನೋಡಿದ ನಮ್ಮ ಕಡೆಯ ಸೈನಿಕರು ವಿವಿಂಶತಿಯನ್ನು ಬಹಳವಾಗಿ ಪ್ರಶಂಸಿಸಿದರು. ಆದರೆ ಆ ಸಮಯದಲ್ಲಿ ಭೀಮನು ಶತ್ರುವಿನ ವಿಕ್ರಮವನ್ನು ಸಹಿಸಿಕೊಳ್ಳಲಿಲ್ಲ. ಒಡನೆಯೇ ಅವನು ವಿವಿಂಶತಿಯ ರಥಕ್ಕೆ ಕಟ್ಟಿದ್ದ ಸುಶಿಕ್ಷಿತವಾಗಿದ್ದ ಎಲ್ಲ ಕುದುರೆಗಳನ್ನೂ ಗದೆ ಯಿಂದ ಪ್ರಹರಿಸಿ ಕೆಳಗುರುಳಿಸಿದನು. ಕುದುರೆಗಳಿಂದ ವಿಹೀನವಾಗಿದ್ದ ರಥ ದಿಂದ ಕೆಳಗಿಳಿದು ವಿವಿಂಶತಿಯು ಕತ್ತಿಯನ್ನೂ ಗುರಾಣಿಯನ್ನೂ ತೆಗೆದು ಕೊಂಡು–ಮದಿಸಿದ ಆನೆಯು ಮತ್ತೊಂದು ಮದಿಸಿದ ಆನೆಯ ಮೇಲೆ ಬೀಳುವಂತೆ–ಭೀಮಸೇನನ ಮೇಲೆ ಬಿದ್ದನು.

ವೀರನಾದ ಶಲ್ಯನು ತನಗೆ ಅತ್ಯಂತಪ್ರಿಯನಾದ, ಸೋದರಳಿಯನಾದ ನಕುಲನನ್ನು ನಗು-ನಗುತ್ತಾ, ಲಾಲನೆಮಾಡುತ್ತಲೂ, ಕೋಪಗೊಳಿಸುತ್ತಲೂ ಇರುವನೋ ಎಂಬಂತೆ ಬಾಣಗಳಿಂದ ಪ್ರಹರಿಸುತ್ತಿದ್ದನು. ಅದಕ್ಕೆ ಪ್ರತಿಯಾಗಿ ಪ್ರತಾಪವಂತನಾದ ನಕುಲನು ಶಲ್ಯನ ಕುದುರೆಗಳನ್ನೂ ಛತ್ರ-ಧ್ವಜ-ಧನುಸ್ಸುಗಳನ್ನೂ ಕತ್ತರಿಸಿ, ಬಳಿಕ ಸೂತನನ್ನೂ ಸಂಹರಿಸಿ ಜಯ ಸೂಚಕವಾಗಿ ಶಂಖಧ್ವನಿಮಾಡಿದನು. ಧೃಷ್ಟಕೇತುವು ಕೃಪರು ಬಿಟ್ಟ ನಾನಾ ವಿಧವಾದ ಬಾಣಗಳೆಲ್ಲವನ್ನೂ ಕತ್ತರಿಸಿ ಅವರ ಧ್ವಜವನ್ನೂ ಮೂರು ಬಾಣ ಗಳಿಂದ ಕತ್ತರಿಸಿ ಅನಂತರ ಅವರನ್ನು ಎಪ್ಪತ್ತು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಬ್ರಾಹ್ಮಣಶ್ರೇಷ್ಠರಾದ ಕೃಪರು ಕ್ರುದ್ಧನಾದ ಧೃಷ್ಟಕೇತುವನ್ನು ದೊಡ್ಡದಾದ ಬಾಣಗಳ ವೃಷ್ಟಿಯಿಂದ ಮುಂದೆಹೋಗದಂತೆ ತಡೆದರು ಮತ್ತು ತೀಕ್ಷ್ಣವಾದ ಅನೇಕಬಾಣಗಳಿಂದ ಅವನನ್ನು ಗಾಯಗೊಳಿಸಿದರು. ಸಾತ್ಯಕಿಯು-ಕೃತವರ್ಮನನ್ನು ನಾರಾಚದಿಂದ ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿ ನಸುನಗುತ್ತಲೇ ಇರುವನೋ ಎಂಬಂತೆ ತೋರ್ಪಡಿಸಿಕೊಳ್ಳುತ್ತಾ ಪುನಃ ಎಪ್ಪತ್ತು ಬಾಣಗಳಿಂದ ಅವನನ್ನು ಗಾಯಗೊಳಿಸಿದನು. ಅನಂತರ ಭೋಜ ವಂಶೀಯನಾದ ಕೃತವರ್ಮನು ನಿಶಿತವಾಗಿದ್ದ ಎಪ್ಪತ್ತೇಳು ಬಾಣಗಳಿಂದ ಪ್ರಹರಿಸಿದರೂ–ವಾಯುವು ಪರ್ವತವನ್ನು ಅಲ್ಲಾಡಿಸಲು ಸಮರ್ಥವಾಗ ದಂತೆ–ಸಾತ್ಯಕಿಯನ್ನು ವಿಚಲಿತನನ್ನಾಗಿ ಮಾಡಲು ಸಮರ್ಥನಾಗಲಿಲ್ಲ. ಪಾಂಡವರ ಸೇನಾಪತಿಯಾದ ಧೃಷ್ಟದ್ಯುಮ್ನನು ಸುಶರ್ಮನನ್ನು ಅವನ ಮರ್ಮಸ್ಥಳಗಳಲ್ಲಿ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಸುಶರ್ಮನೂ ಸಹ ತೋಮರದಿಂದ ಧೃಷ್ಟದ್ಯುಮ್ನನ ಜತ್ರುಪ್ರದೇಶಕ್ಕೆ ಗುರಿಯಿಟ್ಟು ಹೊಡೆದನು. ಮತ್ಸ್ಯಾಧಿಪತಿಯಾದ ವಿರಾಟನು ತನ್ನ ಮತ್ಸ್ಯದೇಶದ ಮಹಾವೀರರೊಡನೆ ಸೇರಿಕೊಂಡು ಕರ್ಣನನ್ನು ತಡೆದು ನಿಲ್ಲಿಸಿದನು. ವೃದ್ಧನಾದ ವಿರಾಟನು ಮಹಾಪರಾಕ್ರಮಿಯಾದ ಕರ್ಣನನ್ನು ಎದುರಿಸಿದುದು ನಮಗೆ ಪರಮಾ ದ್ಭುತವಾಗಿ ಕಂಡಿತು. ಸೂತಪುತ್ರನ ದಾರುಣವಾದ ಪರಾಕ್ರಮವು ಅಲ್ಲಿ ಪ್ರಕಟವಾಯಿತು. ಸನ್ನತಪರ್ವಗಳಾದ ಬಾಣಗಳಿಂದ ಕರ್ಣನು ವಿರಾಟನ ಅಪಾರಸೈನ್ಯಸಮೂಹವನ್ನೇ ಕ್ಷಣಮಾತ್ರದಲ್ಲಿ ತಡೆದು ನಿಲ್ಲಿಸಿದನು.

ದ್ರುಪದರಾಜನು ತಾನೇ ಸ್ವತಃ ಹೋಗಿ ಭಗದತ್ತನನ್ನು ಯುದ್ಧಕ್ಕೆ

ಆಹ್ವಾನಿಸಿ ಅವನೊಡನೆ ಯುದ್ಧಮಾಡಲು ಉಪಕ್ರಮಿಸಿದನು. ಅವರಿಬ್ಬರ ಯುದ್ಧವು ವಿಚಿತ್ರವಾಗಿ ಕಾಣುತ್ತಿದ್ದಿತು. ಪುರುಷರ್ಷಭನಾದ ಭಗದತ್ತನು ಸನ್ನತಪರ್ವಗಳಾದ ಬಾಣಗಳಿಂದ ದ್ರುಪದನನ್ನೂ ಅವನ ಸಾರಥಿಯನ್ನೂ ಪ್ರಹರಿಸಿ ಧ್ವಜವನ್ನೂ ಕತ್ತರಿಸಿ ರಥವನ್ನೂ ಭಗ್ನಗೊಳಿಸಿದನು. ಅದರಿಂದ ಕ್ರುದ್ಧನಾದ ದ್ರುಪದನು ಬಹಳ ಬೇಗ ಬಗ್ಗಿದ ಗಿಣ್ಣೆನಿಂದ ಕೂಡಿದ್ದ ಬಾಣದಿಂದ ಮಹಾರಥನಾದ ಭಗದತ್ತನನ್ನು ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಅಸ್ತ್ರವಿಶಾರದರಾದ, ಯೋಧಶ್ರೇಷ್ಠರಾದ ಭೂರಿಶ್ರವಸ–ಶಿಖಂಡಿಗಳು ಲೋಕದಲ್ಲಿ ಸಮಸ್ತಪ್ರಾಣಿಗಳಿಗೂ ಭಯವನ್ನುಂಟುಮಾಡತಕ್ಕ ಘೋರವಾದ ಯುದ್ಧವನ್ನು ಮಾಡುತ್ತಿದ್ದರು. ವೀರ್ಯವಂತನಾದ ಭೂರಿಶ್ರವಸನು ಮಹಾರಥನಾದ ಶಿಖಂಡಿಯನ್ನು ದೊಡ್ಡದಾದ ಬಾಣಗಳ ಸಮೂಹದಿಂದ ಮುಚ್ಚಿಬಿಟ್ಟನು.

ಅದರಿಂದ ಪರಮಕ್ರುದ್ಧನಾದ ಶಿಖಂಡಿಯು ಸೌಮದತ್ತಿಯು ಬಿಟ್ಟ ಬಾಣಗಳೆಲ್ಲವನ್ನೂ ಕತ್ತರಿಸಿ ಪುನಃ ಅವನನ್ನು ತೊಂಬತ್ತು ಬಾಣಗಳಿಂದ ಪ್ರಹರಿಸಿ ನಡುಗಿಸಿಬಿಟ್ಟನು. ಪರಸ್ಪರವಾಗಿ ವಿಜಯವನ್ನು ಇಚ್ಛಿಸಿದ್ದ ಭಯಂಕರಕರ್ಮರಾದ ರಾಕ್ಷಸರಾದ ಹೈಡಿಂಬಾಲಂಬುಷರು ಅತ್ಯದ್ಭುತವಾದ ರೀತಿಯಲ್ಲಿ ಯುದ್ಧಮಾಡುತ್ತಿದ್ದರು. ಬಲದಿಂದ ಕೊಬ್ಬಿಹೋಗಿದ್ದ ಆ ಇಬ್ಬರು ರಾಕ್ಷಸರೂ ಯುದ್ಧಸಮಯದಲ್ಲಿ ನೂರಾರು ಮಾಯೆಗಳನ್ನು ಸೃಷ್ಟಿಸುತ್ತಿದ್ದರು. ಮಾಯೆಯಿಂದಲೇ ಒಬ್ಬರು ಮತ್ತೊಬ್ಬರನ್ನು ಪರಾಭವ ಗೊಳಿಸಲು ಪ್ರಯತ್ನಿಸುತ್ತಿದ್ದರು. ಪ್ರೇಕ್ಷಕರಿಗೆ ವಿಸ್ಮಯವನ್ನುಂಟುಮಾಡುತ್ತಿದ್ದ ಆ ರಾಕ್ಷಸರು ಯಾರ ಕಣ್ಣುಗಳಿಗೂ ಕಾಣಿಸದಂತೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಿಬಿಡುತ್ತಿದ್ದರು. ದೇವಾಸುರರ ಯುದ್ಧದಲ್ಲಿ ಮಹಾ ಬಲರಾದ ಬಲ ಮತ್ತು ಇಂದ್ರರು ಭಯಂಕರವಾಗಿ ಯುದ್ಧಮಾಡಿದಂತೆ– ಚೇಕಿತಾನ ಮತ್ತು ಅನುವಿಂದರು ಬಹುಭಯಂಕರವಾಗಿ ಯುದ್ಧಮಾಡುತ್ತಿದ್ದರು. ಹಿಂದಿನ ಕಾಲದಲ್ಲಿ ವಿಷ್ಣುವು ಹಿರಣ್ಯಾಕ್ಷನೊಡನೆ ಯುದ್ಧ ಮಾಡಿದ್ದಂತೆ–ಲಕ್ಷ್ಮಣನು ಕ್ಷತ್ರದೇವನೊಡನೆ ಭಯಂಕರವಾದ ಯುದ್ಧದಲ್ಲಿ ತೊಡಗಿದನು. ಅನಂತರ ಶಾಸ್ತ್ರಾನುಸಾರವಾಗಿ ಸುಸಜ್ಜಿತವಾಗಿದ್ದ, ಚಂಚಲ ಸ್ವಭಾವವುಳ್ಳ ಕುದುರೆಗಳಿಂದ ಯುಕ್ತವಾಗಿದ್ದ ರಥದಲ್ಲಿ ಕುಳಿತು ಗರ್ಜನೆ

ಮಾಡುತ್ತಾ ಪೌರವರಾಜನು ಸುಭದ್ರೆಯ ಮಗನಾದ ಅಭಿಮನ್ಯುವನ್ನು ಆಕ್ರಮಿಸಿದನು. ಅರಿಂದಮನಾದ, ಯುದ್ಧವನ್ನೇ ಬಯಸುತ್ತಾ ನಿಂತಿದ್ದ, ಮಹಾಬಲನಾದ ಅಭಿಮನ್ಯುವು ಪೌರವನನ್ನು ಎದುರಿಸಿ ಘೋರವಾದ ಯುದ್ಧವನ್ನು ಉಪಕ್ರಮಿಸಿದನು. ಪೌರವನು ಅಭಿಮನ್ಯುವನ್ನು ಬಾಣಗಳ ಸಮೂಹದಿಂದ ಮುಚ್ಚಿಬಿಟ್ಟನು. ಅದಕ್ಕೆ ಪ್ರತಿಯಾಗಿ ಆರ್ಜುನಿಯು ಪೌರವನ ಛತ್ರವನ್ನೂ, ಧ್ವಜವನ್ನೂ ಮತ್ತು ಧನುಸ್ಸನ್ನೂ ಕತ್ತರಿಸಿ ಕೆಳಕ್ಕೆ ಬೀಳಿಸಿದನು. ಅನಂತರ ಅಭಿಮನ್ಯುವು ಬೇರೆಯ ಏಳು ಶೀಘ್ರಗಾಮಿಗಳಾದ ಬಾಣಗಳಿಂದ ಪೌರವನನ್ನು ಪ್ರಹರಿಸಿ ಪುನಃ ಐದು ಬಾಣಗಳಿಂದ ಅವನ ಕುದುರೆಗಳನ್ನೂ ಮತ್ತು ಸೂತನನ್ನೂ ಪ್ರಹರಿಸಿದನು. ಅಭಿಮನ್ಯುವು ತನ್ನ ಅದ್ಭುತ ಕರ್ಮದಿಂದ ಪಾಂಡವಸೇನೆಯನ್ನು ಹರ್ಷಗೊಳಿಸುತ್ತಾ ಸಿಂಹದಂತೆ ಬಾರಿ ಬಾರಿಗೂ ಗರ್ಜನೆಮಾಡುತ್ತಾ ಪೌರವನನ್ನು ಅಂತ್ಯಗೊಳಿಸುವ ಬಾಣವೊಂದನ್ನು ಬತ್ತಳಿಕೆಯಿಂದ ತೆಗೆದನು. ಅಭಿಮನ್ಯುವು ಪೌರವನ ವಧೆಗಾಗಿ ಬಹುಘೋರವಾಗಿ ಕಾಣುತ್ತಿದ್ದ ಬಾಣವನ್ನು ಅನುಸಂಧಾನಮಾಡಿದುದನ್ನು ಕಂಡು ಹಾರ್ದಿಕ್ಯನು ಎರಡು ಬಾಣಗಳಿಂದ ಅಭಿಮನ್ಯುವಿನ ಬಾಣಸಹಿತವಾದ ಧನುಸ್ಸನ್ನೇ ಕತ್ತರಿಸಿಬಿಟ್ಟನು. ಶತ್ರುವೀರಹಂತಕನಾದ ಅಭಿಮನ್ಯುವು ತುಂಡಾಗಿದ್ದ ಧನುಸ್ಸನ್ನು ಕೆಳಕ್ಕೆ ಹಾಕಿ ಥಳಥಳಿಸುತ್ತಿದ್ದ ಕತ್ತಿಯನ್ನು ಒರೆಯಿಂದ ತೆಗೆದು ಗುರಾಣಿಯನ್ನೂ ಮತ್ತೊಂದು ಕೈಯಲ್ಲಿ ಹಿಡಿದುಕೊಂಡನು. ಅನೇಕವಾದ ನಕ್ಷತ್ರಗಳ ಚಿಹ್ನೆಗಳಿಂದ ಕೂಡಿದ್ದ ಗುರಾಣಿಯನ್ನು ಧರಿಸಿದ್ದ ಅಭಿಮನ್ಯುವು ಕತ್ತಿವರಸೆಯಲ್ಲಿ ಪಳಗಿದ ಕೈಗಳುಳ್ಳವನೋ ಎಂಬಂತೆ ಕತ್ತಿಯನ್ನು ವರಸೆ-ವರಸೆಯಾಗಿ ತಿರುಗಿಸುತ್ತಾ ಖಡ್ಗಯುದ್ಧದಲ್ಲಿಯೂ ತನಗಿದ್ದ ಪರಾಕ್ರಮವನ್ನು ತೋರಿಸುತ್ತಾ ರಣಾಂಗಣದ ಸುತ್ತಲೂ ತಿರುಗುತ್ತಿದ್ದನು.

ಭ್ರಾಮಿತ (ಕತ್ತಿ-ಗುರಾಣಿಗಳನ್ನು ಕೆಳಭಾಗದಲ್ಲಿ ತಿರುಗಿಸುವುದು), ಉದ್ಭ್ರಾಂತ (ಕತ್ತಿಯನ್ನು ಮೇಲೆ ತಿರುಗಿಸುವುದು), ಆಧೂತ (ಸುತ್ತಲೂ ತಿರುಗಿಸುವುದು), ಉತ್ಥಿತ (ಮೇಲಕ್ಕೆ ಹಾರಿ ತಿರುಗಿಸುವುದು)–ಇತ್ಯಾದಿ ವರಸೆಗಳಿಂದ ಅಭಿಮನ್ಯುವು ಕತ್ತಿ-ಗುರಾಣಿಗಳನ್ನು ತಿರುಗಿಸುತ್ತಿದ್ದನು. ಹೀಗೆ ತಿರುಗಿಸುತ್ತಿರುವಾಗ ಅಭಿಮನ್ಯುವು ಹಿಡಿದಿದ್ದ ಕತ್ತಿ ಮತ್ತು ಗುರಾಣಿಗಳಲ್ಲಿ ಯಾವ ಅಂತರವೂ ಕಾಣಿಸುತ್ತಿರಲಿಲ್ಲ. ಅನಂತರ ಅಭಿಮನ್ಯುವು ಗರ್ಜನೆ

ಮಾಡುತ್ತಾ ಪೌರವನ ರಥದ ಮೂಕಿಯ ಮೇಲಕ್ಕೆ ಹಾರಿ ಒಡನೆಯೇ ರಥದ ಒಳಭಾಗಕ್ಕೆ ಹೋಗಿ ತಲೆಗೂದಲಿನಿಂದ ಪೌರವನನ್ನು ಹಿಡಿದುಕೊಂಡನು. (ಪೌರವನ ಶಿಖೆಯನ್ನು ಹಿಡಿದುಕೊಂಡನು.) ಅನಂತರ ಅಭಿಮನ್ಯುವು ಅವನನ್ನು ಕಾಲಿನಿಂದಲೇ ಒದೆದು ಅವನ ರಥದಲ್ಲಿದ್ದ ಸೂತನನ್ನು ಸಂಹರಿಸಿದನು. ಕತ್ತಿಯಿಂದ ಧ್ವಜವನ್ನೂ ಕತ್ತರಿಸಿ, ಸಮುದ್ರವನ್ನು ಅಲ್ಲೋಲ-ಕಲ್ಲೋಲಗೊಳಿಸಿ ಗರುಡನು ಹಾವುಗಳನ್ನು ಹಿಡಿಯುವಂತೆ–ತಲೆಗೂದಲಿನಿಂದ ಹಿಡಿದಿದ್ದ ಪೌರವನನ್ನು ರಥದ ಪೀಠದಿಂದ ಸೆಳೆದುಕೊಂಡನು. ಸಿಂಹದಿಂದ ಕೆಳಕ್ಕೆ ಬೀಳಿಸಲ್ಪಟ್ಟ ಎತ್ತಿನಂತೆ–ಅಭಿಮನ್ಯುವಿನಿಂದ ಕೆಳಕ್ಕೆ ಬೀಳಿಸಲ್ಪಟ್ಟಿದ್ದ, ಪ್ರಜ್ಞಾರಹಿತನಾಗಿದ್ದ ಮತ್ತು ಬಿಚ್ಚಿಹೋದ ಕೇಶದಿಂದ ಕೂಡಿದ್ದ ಪೌರವನನ್ನು ಎಲ್ಲ ರಾಜರೂ ನೋಡಿದರು. ಅಭಿಮನ್ಯುವಿನ ವಶನಾಗಿದ್ದ, ಹೇಳುವವರು-ಕೇಳುವವರು ಇಲ್ಲದ ಅನಾಥನಂತೆ ಹಿಂದಕ್ಕೂ-ಮುಂದಕ್ಕೂ ಅಭಿಮನ್ಯುವಿನಿಂದ ಎಳೆದಾಡಲ್ಪಡುತ್ತಾ ಕೆಳಕ್ಕೆ ಬಿದ್ದಿದ್ದ ಪೌರವನನ್ನು ನೋಡಿ ಜಯದ್ರಥನ ಸಹನೆಯು ಮೀರಿತು. ನವಿಲುಗಳ ಗರಿಗಳಿಂದ ಆಚ್ಛಾದಿತವಾಗಿದ್ದ, ಸಣ್ಣ ಸಣ್ಣ ಗಂಟೆಗಳ ಸಮೂಹದಿಂದ ಸಮಲಂಕೃತವಾಗಿದ್ದ ಗುರಾಣಿಯನ್ನೂ ಮತ್ತು ಖಡ್ಗವನ್ನೂ ತೆಗೆದುಕೊಂಡು ಗರ್ಜನೆಮಾಡುತ್ತಾ ಜಯದ್ರಥನು ರಥದಿಂದ ಕೆಳಕ್ಕೆ ಧುಮುಕಿದನು. ಸೈಂಧವನು ಖಡ್ಗಪಾಣಿಯಾಗಿ ಬರುತ್ತಿರುವುದನ್ನು ಕಂಡು ಆರ್ಜುನಿಯು ಪೌರವನನ್ನು ಅಲ್ಲಿಯೇ ಬಿಟ್ಟು ಪೌರವನ ರಥದಿಂದ ಕೆಳಕ್ಕೆ ಧುಮುಕಿ ಗಿಡಗಪಕ್ಷಿಯಂತೆ ರಭಸದಿಂದ ಜಯದ್ರಥನ ಮೇಲೆ ಎರಗಿದನು. ಆ ಸಮಯದಲ್ಲಿ ಅಭಿಮನ್ಯುವು ಶತ್ರುಗಳು ತನ್ನ ಮೇಲೆ ಏಕಪ್ರಕಾರವಾಗಿ ಬಿಡುತ್ತಿದ್ದ ಪ್ರಾಸ, ಪಟ್ಟಿಶ, ಕತ್ತಿ–ಇವುಗಳನ್ನು ಗುರಾಣಿಯಿಂದ ನಿರೋಧಿಸುತ್ತಲೂ ಕತ್ತಿಯಿಂದ ಕತ್ತರಿಸುತ್ತಲೂ ಇದ್ದನು. ತನ್ನ ಬಾಹುಬಲವೆಷ್ಟೆಂಬುದನ್ನು ಸೈನಿಕರಿಗೆ ತೋರಿಸುತ್ತಾ ಮಹಾಖಡ್ಗವನ್ನೂ ಮತ್ತು ಗುರಾಣಿಯನ್ನೂ ಮೇಲೆತ್ತಿಕೊಂಡು ವೃದ್ಧಕ್ಷತ್ರನ ಮಗನಾದ, ತನ್ನ ತಂದೆಗೆ ಅತ್ಯಂತವೈರಿಯಾದ ಜಯದ್ರಥನನ್ನು–ಹುಲಿಯು ಆನೆಯನ್ನು ಎದುರಿಸುವಂತೆ–ಶೂರನಾದ ಅಭಿಮನ್ಯುವು ಎದುರಿಸಿದನು. ಖಡ್ಗ, ಹಲ್ಲು ಮತ್ತು ನಖಗಳೇ ಆಯುಧಗಳಾಗಿದ್ದ ಸಿಂಹ ಮತ್ತು ಹುಲಿಗಳೋಪಾದಿಯಲ್ಲಿ ಅಭಿಮನ್ಯು-ಜಯದ್ರಥರಿಬ್ಬರೂ ಯುದ್ಧದಲ್ಲಿ ತೊಡಗಿ–

ಉತ್ಸಾಹಿತರಾಗಿರುವಂತೆಯೇ ಪರಸ್ಪರಪ್ರಹಾರದಲ್ಲಿ ತೊಡಗಿದರು. ಕತ್ತಿ ಮತ್ತು ಗುರಾಣಿಗಳ ಸಂಪಾತ-ಅಭಿಘಾತ-ನಿಪಾತಗಳಲ್ಲಿ ಪುರುಷಸಿಂಹರಾದ ಜಯದ್ರಥ–ಅಭಿಮನ್ಯುಗಳಲ್ಲಿ ಯಾವ ವಿಧವಾದ ವ್ಯತ್ಯಾಸವೂ ಕಾಣುತ್ತಿರಲಿಲ್ಲ. ಇಬ್ಬರೂ ಒಂದೇ ವಿಧವಾದ ಪರಾಕ್ರಮದಿಂದ ಒಂದೇ ವಿಧವಾದ ಹಸ್ತಲಾಘವದಿಂದ ವಿಧ-ವಿಧವಾದ ವರಸೆಗಳಿಂದ ಯುದ್ಧಮಾಡುತ್ತಿದ್ದರು.

ಖಡ್ಗಪ್ರಹಾರ, ಖಡ್ಗಸಂಚಾಲನದ ಶಬ್ದ, ಅನೇಕವಿಧವಾದ ವರಸೆಗಳ ಪ್ರದರ್ಶನ (ಈಟಿ-ಚೂರಿ ಮುಂತಾದ ಇತರ ಶಸ್ತ್ರಗಳ ಪ್ರದರ್ಶನ), ಶರೀರದ ಮುಂಭಾಗ ಮತ್ತು ಹಿಂಭಾಗಗಳಲ್ಲಿ ಸಮಯವರಿತು ಪ್ರಹರಿಸುವಿಕೆ–ಈ ಎಲ್ಲದರಲ್ಲಿಯೂ ಉಭಯತ್ರರಿಗೂ ಸಮಾನವಾದ ಪ್ರಾವೀಣ್ಯವಿದ್ದುದು ಕಂಡುಬರುತ್ತಿದ್ದಿತು. ಶರೀರದ ಮುಂಭಾಗದಲ್ಲಿಯೂ ಮತ್ತು ಹಿಂಭಾಗದಲ್ಲಿಯೂ ಖಡ್ಗವನ್ನು ವರಸೆ-ವರಸೆಯಾಗಿ ತಿರುಗಿಸುತ್ತಾ ವಿಧಿವತ್ತಾಗಿ ಹೆಜ್ಜೆಗಳನ್ನಿಡುತ್ತಾ ಸಂಚರಿಸುತ್ತಿದ್ದ ಮಹಾತ್ಮರಾದ ಅಭಿಮನ್ಯು-ಜಯದ್ರಥರು ರೆಕ್ಕೆಗಳಿರುವ ಪರ್ವತಗಳಂತೆಯೇ ಕಾಣುತ್ತಿದ್ದರು. ಆ ಸಮಯದಲ್ಲಿ ಕತ್ತಿಯನ್ನು ವರಸೆ-ವರಸೆಯಾಗಿ ತಿರುಗಿಸುತ್ತಿದ್ದ ಯಶಸ್ವಿಯಾದ ಅಭಿಮನ್ಯುವಿನ ಗುರಾಣಿಯ ಒಂದು ಭಾಗವನ್ನು ಜಯದ್ರಥನು ಕತ್ತಿಯಿಂದ ಪ್ರಹರಿಸಿದನು. ಜಾಜ್ವಲ್ಯಮಾನವಾದ ಚಿನ್ನದ ತಗಡಿನಿಂದ ಕೂಡಿದ್ದ ಅಭಿಮನ್ಯುವಿನ ಗುರಾಣಿಯಲ್ಲಿ ಚುಚ್ಚಿಕೊಂಡಿದ್ದ ಜಯದ್ರಥನ ದೊಡ್ಡ ಕತ್ತಿಯು, ಜಯದ್ರಥನು ಬಲಪೂರ್ವಕವಾಗಿ ಅಳ್ಳಾಡಿಸಿ ಕೀಳಲು ಹೋದಾಗ ಹೊರಕ್ಕೆ ಬರದೆ ಮುರಿದೇಹೋಯಿತು. ತನ್ನ ಕತ್ತಿಯು ಮುರಿದುಹೋದುದನ್ನು ಗಮನಿಸಿದ ಜಯದ್ರಥನು ಒಡನೆಯೇ ಆರು ಅಡಿಗಳಷ್ಟು ದೂರ ಹಾರಿ, ನಿಮೇಷಮಾತ್ರದಲ್ಲಿ ತನ್ನ ರಥದಲ್ಲಿ ಕುಳಿತಿದ್ದುದು ಕಂಡುಬಂದಿತು. ಅಭಿಮನ್ಯುವೂ ಸಹ ಯುದ್ಧವನ್ನು ನಿಲ್ಲಿಸಿ ತನ್ನ ರಥದಲ್ಲಿ ಕುಳಿತುಕೊಂಡನು. ಅವನು ರಥದಲ್ಲಿ ಕುಳಿತುದುದನ್ನು ಕಂಡು ನಮ್ಮ ಕಡೆಯ ಎಲ್ಲ ರಾಜರೂ ಒಟ್ಟಾಗಿ ಸೇರಿ ನಾಲ್ಕು ದಿಕ್ಕುಗಳಿಂದಲೂ ಅವನನ್ನು ಆಕ್ರಮಿಸಿದರು. ಅನಂತರ ಅರ್ಜುನನ ಮಗ ನಾದ ಅಭಿಮನ್ಯುವು ತನ್ನ ಖಡ್ಗವನ್ನೂ ಮತ್ತು ಗುರಾಣಿಯನ್ನೂ ಮೇಲೆತ್ತಿ ಜಯದ್ರಥನನ್ನು ದಿಟ್ಟಿಸಿನೋಡುತ್ತಾ ಸಿಂಹನಾದವನ್ನು ಮಾಡಿದನು. ಶತ್ರುವೀರಹಂತಕನಾದ ಅಭಿಮನ್ಯುವು ಜಯದ್ರಥನನ್ನು ಪರಿತ್ಯಜಿಸಿ–

ಸೂರ್ಯದೇವನು ಪ್ರಪಂಚಕ್ಕೆ ತಾಪವನ್ನುಂಟುಮಾಡುವಂತೆ ತನ್ನನ್ನು ಆಕ್ರಮಿಸಿದ್ದವರೆಲ್ಲರನ್ನೂ ನಿಶಿತವಾದ ಬಾಣಗಳಿಂದ ಸಂತಾಪಗೊಳಿಸಿದನು. ಅಗ್ನಿಯ ಜ್ವಾಲೆಯಂತೆ ಪ್ರದೀಪ್ತವಾಗಿದ್ದ, ಕನಕಭೂಷಿತವಾಗಿದ್ದ, ಲೋಹ ಮಯವಾಗಿದ್ದ, ಘೋರವಾದ ಶಕ್ತ್ಯಾಯುಧವನ್ನು ಶಲ್ಯನು ಅಭಿಮನ್ಯುವಿನ ಮೇಲೆ ಪ್ರಯೋಗಿಸಿದನು. ಗರುಡನು ಮೇಲಿಂದ ಬೀಳುತ್ತಿರುವ ಶ್ರೇಷ್ಠನಾಗ ನನ್ನು ಕ್ಷಣಮಾತ್ರದಲ್ಲಿ ಹಿಡಿದುಬಿಡುವಂತೆ–ಅಭಿಮನ್ಯುವು ನೆಗೆದು ಶಲ್ಯನು ಬಿಟ್ಟ ಶಕ್ತ್ಯಾಯುಧವನ್ನು ಹಿಡಿದುಬಿಟ್ಟನು. ಅಭಿಮನ್ಯುವು ಪುನಃ ತನ್ನ ಒರೆ ಯಲ್ಲಿದ್ದ ಕತ್ತಿಯನ್ನು ಹೊರಕ್ಕೆ ತೆಗೆದನು. ಅಮಿತತೇಜಸ್ವಿಯಾದ ಆರ್ಜುನಿಯ ಬಲವನ್ನೂ ಮತ್ತು ಹಸ್ತಕೌಶಲವನ್ನೂ ಕಂಡು ಸುತ್ತಲೂ ಇದ್ದ ಎಲ್ಲ ರಾಜರೂ ಒಟ್ಟಾಗಿ ಸಿಂಹನಾದಮಾಡಿದರು. ವೈಡೂರ್ಯದಿಂದ ಸಮಲಂಕೃತವಾಗಿದ್ದ, ನಿಶಿತವಾಗಿದ್ದ ಶಲ್ಯನು ಬಿಟ್ಟ ಆ ಶಕ್ತ್ಯಾಯುಧವನ್ನೇ ಪುನಃ ಶತ್ರು ವೀರಹಂತಕನಾದ ಅಭಿಮನ್ಯುವು ತನ್ನ ಭುಜದ ಬಲವೆಲ್ಲವನ್ನೂ ಯೋಜಿಸಿ ಶಲ್ಯನ ಮೇಲೆ ಪ್ರಹರಿಸಿದನು. ಪೊರೆಯನ್ನು ಬಿಟ್ಟ ಹಾವಿನಂತಿದ್ದ ಆ ಶಕ್ತ್ಯಾ ಯುಧವು ರಭಸದಿಂದ ಹೋಗಿ ಶಲ್ಯನ ರಥದಲ್ಲಿದ್ದ ಸಾರಥಿಯನ್ನು ಸಂಹರಿಸಿ ರಥದಿಂದ ಅವನನ್ನು ಕೆಳಕ್ಕೆ ಬೀಳಿಸಿತು. ಅಭಿಮನ್ಯುವಿನ ಆ ಅದ್ಭುತಪರಾ ಕ್ರಮವನ್ನು ನೋಡಿದ ವಿರಾಟ, ದ್ರುಪದ, ಧೃಷ್ಟಕೇತು, ಯುಧಿಷ್ಠಿರ, ಸಾತ್ಯಕಿ, ಕೇಕಯರಾಜಕುಮಾರರು, ಭೀಮಸೇನ, ಧೃಷ್ಟದ್ಯುಮ್ನ, ಶಿಖಂಡೀ, ನಕುಲ-ಸಹದೇವರು ಮತ್ತು ದ್ರೌಪದಿಯ ಐವರು ಮಕ್ಕಳು–ಇವರೆಲ್ಲರೂ ಅಭಿ ಮನ್ಯುವನ್ನು 'ಸಾಧು ಸಾಧು' ಎಂದು ಕೂಗುತ್ತಾ ಪ್ರೋತ್ಸಾಹಿಸಿದರು.

ಯುದ್ಧದಲ್ಲಿ ಪಲಾಯನವೆಂಬುದನ್ನೇ ಅರಿಯದ ಅಭಿಮನ್ಯುವನ್ನು ಹರ್ಷಗೊಳಿಸುವಂತಹ ನಾನಾಪ್ರಕಾರವಾದ ಬಾಣಸಂಚಾಲನಶಬ್ದಗಳೂ, ವಿಪುಲವಾದ ಸಿಂಹನಾದಗಳೂ ಆ ರಣಾಂಗಣದಲ್ಲಿ ಕೇಳಿಬಂದುವು. ಶತ್ರು ಗಳ ವಿಜಯಸೂಚಕವಾದ ಆ ಸಿಂಹನಾದಗಳನ್ನಾಗಲೀ ಟೇಂಕಾರಶಬ್ದಗಳ ನ್ನಾಗಲೀ ನಿನ್ನ ಮಕ್ಕಳು ಸಹಿಸಿಕೊಳ್ಳಲಿಲ್ಲ. ಮೋಡಗಳು ಪರ್ವತವನ್ನು ಜಲಧಾರೆಗಳಿಂದ ಮುಚ್ಚಿಬಿಡುವಂತೆ–ಅಭಿಮನ್ಯುವನ್ನು ನಾಲ್ಕು ದಿಕ್ಕು ಗಳಿಂದಲೂ ಸುತ್ತುವರಿದು ನಿಶಿತವಾದ ಬಾಣಗಳಿಂದ ಮುಚ್ಚಿಬಿಟ್ಟರು. ತಾನು ಪ್ರಯೋಗಿಸಿದ ಶಕ್ತ್ಯಾಯುಧದಿಂದಲೇ ಸೌಭದ್ರನು ತನ್ನ ಸಾರಥಿ ಯನ್ನು ಸಂಹರಿಸಿದುದಕ್ಕಾಗಿ ಕ್ರುದ್ಧನಾಗಿದ್ದ, ಶತ್ರುಹಂತಕನಾದ ಶಲ್ಯನು

ನಿನ್ನ ಮಕ್ಕಳಿಗೆ ಪ್ರಿಯವನ್ನುಂಟುಮಾಡುವ ಇಚ್ಛೆಯಿಂದ ಅಭಿಮನ್ಯುವನ್ನು ಪುನಃ ಆಕ್ರಮಿಸಿದನು."

೧೪ನೆಯ ಅಧ್ಯಾಯವು ಮುಗಿಯಿತು.

೧೫ನೆಯ ಅಧ್ಯಾಯ ದ್ರೋಣಾಭಿಷೇಕಪರ್ವ (ಮುಂದುವರಿದಿದೆ.)

## ಶಲ್ಯನೊಡನೆ ಭೀಮಸೇನನ ಯುದ್ಧ: ಶಲ್ಯನು ಪರಾಜಿತನಾದುದು

ಯುದ್ಧವಾರ್ತೆಯನ್ನು ಕೇಳುತ್ತಿದ್ದ ಧೃತರಾಷ್ಟ್ರನು ಹೇಳುತ್ತಾನೆ :

"ಸಂಜಯ! ವಿಚಿತ್ರತರವಾದ ಅನೇಕ ದ್ವಂದ್ವಯುದ್ಧಗಳ ವಿವರಣೆಯನ್ನು ನಿನ್ನಿಂದ ಕೇಳಿದ ನಾನು ಕಣ್ಣುಳ್ಳವರ ಸೌಭಾಗ್ಯವನ್ನು ಅಪೇಕ್ಷಿಸುತ್ತೇನೆ. ದೇವಾಸುರರ ಯುದ್ಧಕ್ಕೆ ಸಮಾನವಾದ ಕುರು-ಪಾಂಡವರ ಯುದ್ಧವನ್ನು ಮನುಷ್ಯರು ಅತ್ಯಾಶ್ಚರ್ಯಕರವಾದ ಘಟನೆಯೆಂದು ಲೋಕದಲ್ಲಿ ಬಣ್ಣಿಸುತ್ತಾರೆ. ಉತ್ತಮೋತ್ತಮವಾದ ಈ ಯುದ್ಧವಾರ್ತೆಯನ್ನು ಎಷ್ಟುಕೇಳಿದರೂ ನನಗೆ ತೃಪ್ತಿಯೇ ಇಲ್ಲವಾಗಿದೆ. ಈಗ ನೀನು ಶಲ್ಯ-ಸೌಭದ್ರರ ಯುದ್ಧವಾರ್ತೆಯನ್ನು ವಿವರಿಸಿ ಹೇಳು."

"ಮಹಾರಾಜ! ಶಲ್ಯನು ತನ್ನ ಸಾರಥಿಯು ಶಕ್ತ್ಯಾಯುಧದಿಂದ ಹತನಾದುದನ್ನು ಕಂಡು ಪರಮಕ್ರುದ್ಧನಾಗಿ ಲೋಹಮಯವಾದ ಗದೆಯನ್ನೆತ್ತಿಕೊಂಡು ಗರ್ಜನೆಮಾಡುತ್ತಾ ರಥದಿಂದ ಕೆಳಕ್ಕೆ ಧುಮುಕಿದನು. ಪ್ರಳಯಕಾಲದ ಪ್ರದೀಪ್ತನಾದ ಅಗ್ನಿಯಂತೆಯೂ ಮತ್ತು ದಂಡಧರನಾದ ಯಮನಂತೆಯೂ ಕಾಣುತ್ತಿದ್ದ–ಗದಾಧರನಾದ ಶಲ್ಯನನ್ನು ನೋಡಿ ಭೀಮನು ಗದೆಯನ್ನೆತ್ತಿಕೊಂಡು ಬಹಳ ವೇಗದಿಂದ ಶಲ್ಯನ ಕಡೆಗೆ ಧಾವಿಸಿದನು. ಇತ್ತಲಾಗಿ ಅಭಿಮನ್ಯುವೂ ಸಹ ವಜ್ರಾಯುಧಕ್ಕೆ ಸಮಾನವಾಗಿದ್ದ ದೊಡ್ಡದಾದ ಗದೆಯನ್ನು ಎತ್ತಿಕೊಂಡು ಶಲ್ಯನನ್ನು ಕುರಿತು 'ಏಹ್ಯೇಹಿ' 'ಬಾ-ಬಾ-ಬೇಗ ಬಾ' ಎಂದು ಕೂಗುತ್ತಿದ್ದನು. ಆದರೆ ಶಲ್ಯನ ಮೇಲೆ ಗದಾಯುದ್ಧಕ್ಕೆ ಹೋಗದಂತೆ ಅಭಿಮನ್ಯುವನ್ನು ಭೀಮನು ಪ್ರಯತ್ನಪೂರ್ವಕವಾಗಿ ತಡೆದನು. ಸೌಭದ್ರನನ್ನು ಮುನ್ನುಗ್ಗಿಹೋಗದಂತೆ ತಡೆದು ನಿಲ್ಲಿಸಿ ಪ್ರತಾಪವಂತನಾದ ಭೀಮಸೇನನು ಶಲ್ಯನ ಸಮೀಪಕ್ಕೆ ಹೋಗಿ ಪರ್ವತದಂತೆ ಅಚಲನಾಗಿ ಅವನ ಮುಂದೆ ನಿಂತುಕೊಂಡನು. ಅದೇ

ರೀತಿಯಲ್ಲಿ ಶಲ್ಯನೂ ಸಹ ಮಹಾಬಲನಾದ ಭೀಮನು ಗದಾಪಾಣಿಯಾಗಿ ಬಂದುದನ್ನು ನೋಡಿ–ಹುಲಿಯು ಆನೆಯನ್ನು ಆಕ್ರಮಿಸುವಂತೆ–ಭೀಮನಿಗೆ ಅಭಿಮುಖವಾಗಿ ಹೋಗಿ ಅವನನ್ನು ಆಕ್ರಮಿಸಿದನು.

ಆ ಸಮಯದಲ್ಲಿ ಸಾವಿರಾರು ರಣವಾದ್ಯಗಳ ಘೋಷಗಳೂ, ಶಂಖ ಧ್ವನಿಗಳೂ, ಭೇರಿಗಳ ನಿನಾದಗಳೂ, ಸಿಂಹನಾದಗಳೂ ಸರ್ವತ್ರ ಕೇಳಿ ಬರುತ್ತಿದ್ದುವು. ಪಾಂಡವ-ಕೌರವರ ಪರಸ್ಪರ ಘರ್ಷಣೆಯ ಸಮಯದಲ್ಲಿ ನೂರಾರು ಮಂದಿ ಯುದ್ಧಪ್ರೇಕ್ಷಕರು ಮಾಡುತ್ತಿದ್ದ 'ಸಾಧು-ಸಾಧು' ಎಂಬ ಪ್ರೋತ್ಸಾಹಕಶಬ್ದಗಳೂ ಎಲ್ಲ ದಿಕ್ಕುಗಳಲ್ಲಿಯೂ ಪ್ರತಿಧ್ವನಿಸಿದುವು. ಅಲ್ಲಿದ್ದ ರಾಜರಲ್ಲಿ ಮದ್ರಾಧಿಪನಾದ ಶಲ್ಯನ ಹೊರತಾಗಿ ಬೇರೆ ಯಾವ ರಾಜರೂ ಯುದ್ಧದಲ್ಲಿ ಭೀಮಸೇನನ ಗದಾಪ್ರಹಾರದ ವೇಗವನ್ನು ಸಹಿಸಿಕೊಳ್ಳಲು ಉತ್ಸುಕರಾಗಿರಲಿಲ್ಲ. ಅದೇ ರೀತಿಯಲ್ಲಿ ಮಹಾತ್ಮನಾದ ಶಲ್ಯನ ಗದೆಯ ವೇಗವನ್ನೂ ಈ ಲೋಕದಲ್ಲಿ ವೃಕೋದರನಿಂದ ಬೇರೆಯವರಾದ ಯಾವ ಯೋಧರು ತಾನೇ ಎದುರಿಸಲು ಮುಂದೆ ಬಂದಾರು? (ಭೀಮನ ಗದಾಪ್ರಹಾರವನ್ನು ಶಲ್ಯನೊಬ್ಬನಲ್ಲದೇ ಬೇರೆಯವರು ಸಹಿಸಿಕೊಳ್ಳ ಲಾರರು. ಶಲ್ಯನ ಗದಾಪ್ರಹಾರವನ್ನು ಭೀಮನಲ್ಲದೇ ಬೇರೆಯವರು ಸಹಿಸಿ ಕೊಳ್ಳಲಾರರು.) ಭೀಮನಿಂದ ಆ ಸಮಯದಲ್ಲಿ ಪ್ರಮುಕ್ತವಾದ ಮಹಾಗದೆಯು ಸುವರ್ಣದ ತಗಡಿನಿಂದ ಹೊದ್ದಿಸಲ್ಪಟ್ಟಿದ್ದು ಅಗ್ನಿಗೆ ಸಮಾನವಾಗಿ ಪ್ರಜ್ವಲಿಸುತ್ತಿದ್ದಿತು. ಅದು ವೀರರಿಗೆ ಹರ್ಷವನ್ನುಂಟು ಮಾಡುವುದಾಗಿದ್ದಿತು. ಅದೇ ರೀತಿಯಲ್ಲಿ ಗದಾಯುದ್ಧದ ವಿವಿಧ ವರಸೆ ಗಳನ್ನೂ ಪ್ರದರ್ಶಿಸುತ್ತಾ ಮಂಡಲಾಕಾರವಾಗಿ ತಿರುಗಿಸಲ್ಪಡುತ್ತಿದ್ದ ಶಲ್ಯನ ಗದೆಯು ದೊಡ್ಡದಾದ ವಿದ್ಯುತ್ತಿನ ಪ್ರಕಾಶದಂತೆಯೇ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿದ್ದಿತು. ಶಲ್ಯ-ಭೀಮರು ಗದಾರೂಪವಾದ ಕೊಂಬುಗಳನ್ನು ಸುತ್ತಿಸುತ್ತಾ ಎರಡು ಗೂಳಿಗಳೋಪಾದಿಯಲ್ಲಿ ಗರ್ಜನೆಮಾಡುತ್ತಾ ವರ್ತುಲಾಕಾರವಾಗಿ ತಿರುಗುತ್ತಿದ್ದರು. ಮಂಡಲಾವರ್ತಮಾರ್ಗಗಳಲ್ಲಿಯೂ (ವರಸೆ-ವರಸೆಯಾಗಿ ಗದೆಯನ್ನು ತಿರುಗಿಸುವುದು, ಪಟ್ಟು ಹಿಡಿಯುವುದು, ವರಸೆಗೆ ಸರಿಯಾಗಿ ಹೆಜ್ಜೆಗಳನ್ನಿಡುವುದು) ಮತ್ತು ಗದೆಯನ್ನು ಸಮಯವರಿತು ಪ್ರಹರಿಸುವುದರಲ್ಲಿಯೂ ಆ ಇಬ್ಬರು ಪುರುಷಸಿಂಹ ರಲ್ಲಿ ಯಾವ ವಿಧವಾದ ವ್ಯತ್ಯಾಸವೂ ಕಾಣುತ್ತಿರಲಿಲ್ಲ. ಹೀಗೆಯೇ ವರಸೆ-

ವರಸೆಯಾಗಿ ನಾನಾವಿಧವಾದ ಪಟ್ಟುಗಳನ್ನು ಹಿಡಿದು ಯುದ್ಧಮಾಡು ತ್ತಿದ್ದಾಗ ಭೀಮಸೇನನ ಗದೆಯಿಂದ ಪ್ರಹೃತವಾದ ಶಲ್ಯನ ಗದೆಯು ಅಗ್ನಿ ಜ್ವಾಲೆಗಳಿಂದ ಕೂಡಿದುದಾಗಿ, ಮಹಾಭಯಂಕರರೂಪವನ್ನು ತಾಳಿ ಒಡ ನೆಯೇ ಛಿನ್ನ-ಭಿನ್ನವಾಗಿ ಹೋಯಿತು. ಅದೇ ರೀತಿಯಲ್ಲಿ ಶತ್ರುವಿನಿಂದ ಪ್ರಹೃತವಾದ ಭೀಮನ ಗದೆಯೂ ಸಹ ವರ್ಷಾಕಾಲದ ಸಂಧ್ಯಾಸಮಯದಲ್ಲಿ ಮಿಣುಕುಹುಳುಗಳು ಮುತ್ತಿಕೊಂಡಿರುವ ವೃಕ್ಷದಂತೆಯೇ ಪ್ರಕಾಶಿಸಿತು. ಮದ್ರರಾಜನಿಂದ ಪ್ರಮುಕ್ತವಾದ ಮತ್ತೊಂದು ಗದೆಯು ಆಕಾಶವನ್ನೇ ಬೆಳಗಿತು ಮತ್ತು ಬಾರಿಬಾರಿಗೂ ಆ ಗದೆಯು ಬೆಂಕಿಯನ್ನು ಸೃಷ್ಟಿಸುತ್ತಿದ್ದಿತು. ಅದೇ ರೀತಿಯಲ್ಲಿ ಭೀಮಸೇನನು ಶತ್ರುವಿನ ಮೇಲೆ ಪ್ರಯೋಗಿಸಿದ ಮತ್ತೊಂದು ಗದೆಯು ಆಕಾಶದಿಂದ ಬೀಳುವ ದೊಡ್ಡದಾದ ಉಲ್ಕೆಯಂತೆ ದುರ್ಯೋಧನನ ಸೈನ್ಯದ ಮೇಲೆ ಬಿದ್ದು ಅದನ್ನು ಸಂತಾಪಗೊಳಿಸಿತು. ಆ ಎರಡು ಗದೆಗಳೂ ಗದಾಧಾರಿಗಳಲ್ಲಿ ಶ್ರೇಷ್ಠರಾದ ಶಲ್ಯ-ವೃಕೋದರರನ್ನು ಸಮೀಪಿಸಿ ಪರಸ್ಪರವಾಗಿ ಘರ್ಷಿಸಿ ಬುಸುಗುಟ್ಟುತ್ತಿರುವ ನಾಗಕನ್ಯೆಯರಂತೆ–ಅಗ್ನಿಯನ್ನು ಸೃಷ್ಟಿಸುತ್ತಿದ್ದುವು. ಮಹಾವ್ಯಾಘ್ರಗಳು ನಖಗಳಿಂದಲೇ ಸೆಣೆಸು ವಂತೆ ಮಹಾಗಜಗಳು ದಂತಗಳಿಂದಲೇ ಬಡಿದಾಡುವಂತೆ–ಭೀಮ-ಶಲ್ಯರು ಶ್ರೇಷ್ಠವಾದ ಗದೆಗಳಿಂದಲೇ ಪರಸ್ಪರವಾಗಿ ಪ್ರಹರಿಸುತ್ತಾ ಸಂಚರಿಸುತ್ತಿದ್ದರು.

ಭೀಮನ ಗದೆಗೂ–ಶಲ್ಯನ ಗದೆಗೂ ಆಗುತ್ತಿದ್ದ ಘರ್ಷಣೆಯು ಮುಂದುವರಿಯಿತು. ಸಮಯನೋಡಿ ಪರಸ್ಪರವಾಗಿ ಪ್ರಹರಿಸಲು ಇಬ್ಬರೂ ಉಪಕ್ರಮಿಸಿದರು. ಗದೆಗಳ ಪ್ರಹಾರಗಳಿಂದ ಕ್ಷಣಮಾತ್ರ ದಲ್ಲಿ ಇಬ್ಬರೂ ರಕ್ತದಿಂದ ತೋಯ್ದುಹೋದರು. ಆ ಸಮಯದಲ್ಲಿ ಅವರಿಬ್ಬರೂ ಪುಷ್ಪಿತವಾದ ಮುತ್ತುಗದ ವೃಕ್ಷಗಳಂತೆಯೇ ಕಾಣುತ್ತಿದ್ದರು. ಪುರುಷಸಿಂಹರಾದ ಅವರಿಬ್ಬರ ಗದೆಗಳ ಸಂಘರ್ಷಣದಿಂದ ಉಂಟಾದ, ಇಂದ್ರನ ವಜ್ರಾಯುಧದ ಶಬ್ದಕ್ಕೆ ಸಮಾನವಾಗಿದ್ದ ಶಬ್ದವು ಎಲ್ಲ ದಿಕ್ಕುಗಳ ಲ್ಲಿಯೂ ಪ್ರತಿಧ್ವನಿಸುತ್ತಿದ್ದಿತು. ಮದ್ರರಾಜನು ಸಮಯನೋಡಿ ಭೀಮ ಸೇನನ ಬಲಪಾರ್ಶ್ವಕ್ಕೂ ಮತ್ತು ಎಡಪಾರ್ಶ್ವಕ್ಕೂ ಗದೆಯಿಂದ ಪ್ರಹರಿ ಸಿದನು. ಪರ್ವತವು ಸೀಳಿಹೋದರೂ ಇದ್ದಲ್ಲಿಂದ ಚಲಿಸದಂತೆ–ಗದೆ ಯಿಂದ ಪ್ರಹೃತನಾದರೂ ಭೀಮಸೇನನು ವಿಚಲಿತನಾಗಲಿಲ್ಲ. ಅದೇ

ರೀತಿಯಲ್ಲಿ ಮಹಾಬಲನಾದ ಮದ್ರರಾಜನೂ ವಜ್ರಾಘಾತದಿಂದ ಪೀಡಿತವಾದ ಪರ್ವತದಂತೆ ವೇಗಯುಕ್ತವಾದ ಗದೆಯಿಂದ ಪ್ರಹೃತನಾದರೂ ನಿಂತಲ್ಲಿಂದ ಕದಲದೇ ಧೈರ್ಯದಿಂದಲೇ ನಿಂತಿದ್ದನು. ಮಹಾವೇಗಯುಕ್ತರಾಗಿದ್ದ ಭೀಮ–ಶಲ್ಯರು ಗದೆಗಳನ್ನೆತ್ತಿಕೊಂಡು ಪುನಃ ಯುದ್ಧದಲ್ಲಿ ತೊಡಗಿದರು. ಪುನಃ ಅಂತರಮಾರ್ಗಸ್ಥರಾಗಿ ಮಂಡಲಾಕಾರದ ಗತಿಯಿಂದ ಚಲಿಸತೊಡಗಿದರು. ಎಂಟು ಹೆಜ್ಜೆಗಳಷ್ಟು ದೂರ ಕುಪ್ಪಳಿಸಿ ಎರಡು ಆನೆಗಳೋಪಾದಿಯಲ್ಲಿ ಸಂಘರ್ಷಿಸತೊಡಗಿ ಲೋಹಮಯವಾದ ಗದೆಗಳಿಂದ ಒಬ್ಬರು ಮತ್ತೊಬ್ಬರನ್ನು ಪ್ರಹರಿಸಿದರು. ಭೀಮ–ಶಲ್ಯರು ಪರಸ್ಪರ ವೇಗದಿಂದಲೂ, ಗದೆಗಳಿಂದಲೂ ಪರಸ್ಪರವಾಗಿ ಬಡಿದಾಡಿ ಬಹಳವಾಗಿ ಗಾಯಗೊಂಡು ಇಂದ್ರನ ಧ್ವಜಗಳೋಪಾದಿಯಲ್ಲಿ ಒಂದೇ ಬಾರಿಗೆ ಇಬ್ಬರೂ ಭೂಮಿಯ ಮೇಲೆ ಬಿದ್ದರು. ಆ ಸಮಯದಲ್ಲಿ ಶಲ್ಯನು ಬಹಳವಾಗಿ ವ್ಯಾಕುಲಗೊಂಡಿದ್ದನು. ಬಾರಿ-ಬಾರಿಗೂ ನಿಟ್ಟುಸಿರುಬಿಡುತ್ತಿದ್ದನು. ಆ ವೇಳೆಗೆ ಸರಿಯಾಗಿ ಮಹಾರಥನಾದ ಕೃತವರ್ಮನು ಶಲ್ಯನ ಸಮೀಪಕ್ಕೆ ಬಂದನು. ಗದೆಯಿಂದ ಬಹಳವಾಗಿ ಗಾಯಗೊಳಿಸಲ್ಪಟ್ಟಿದ್ದ ಮೂರ್ಛಾಕ್ರಾಂತನಾಗಿದ್ದ, ಸರ್ಪದಂತೆ ಹೊರಳಾಡುತ್ತಿದ್ದ ಶಲ್ಯನ ಅವಸ್ಥೆಯನ್ನು ನೋಡಿ ಕೂಡಲೇ ಮಹಾರಥನಾದ ಕೃತವರ್ಮನು ಮದ್ರಾಧಿಪತಿಯಾದ ಶಲ್ಯನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ರಣಾಂಗಣದಿಂದ ಹೊರಕ್ಕೆ ಕರೆದೊಯ್ದನು. ವಿಹ್ವಲನಾಗಿದ್ದ, ವೀರನಾದ, ಮಹಾಬಾಹುವಾದ ಭೀಮಸೇನನು ನಿಮೇಷಮಾತ್ರದಲ್ಲಿ–ಮದೋನ್ಮತ್ತನು (ಮದ್ಯಪಾನದಿಂದ ಉನ್ಮಾದವನ್ನು ಹೊಂದಿದವನು) ಕೆಳಕ್ಕೆ ಬಿದ್ದು ಪುನಃ ಮೇಲಕ್ಕೆ ಏಳುವಂತೆ–ಮೇಲೆದ್ದು ಗದಾಪಾಣಿಯಾಗಿ ಪುನಃ ರಣಾಂಗಣದಲ್ಲಿ ಕಾಣಿಸಿಕೊಂಡನು. ಅತುಲಪರಾಕ್ರಮಿಯಾದ ಮದ್ರಾಧಿಪತಿಯೂ ಪರಾಙ್ಮುಖನಾದುದನ್ನು ಕಂಡು ಗಜಾಶ್ವ-ಪದಾತಿ-ರಥ ಸೈನಿಕರಿಂದ ಸಮೇತರಾದ ನಿನ್ನ ಮಕ್ಕಳು ಭಯದಿಂದ ಕಂಪಿಸಿದರು. ವಿಜಯದಿಂದ ಕಾಂತಿಮಂತರಾಗಿದ್ದ ಪಾಂಡವರಿಂದ ಸಮ್ಮರ್ದಿತರಾಗುತ್ತಿದ್ದ ನಿನ್ನ ಸೈನಿಕರು–ಬಿರುಗಾಳಿಯಿಂದ ಛಿದ್ರ-ವಿಚ್ಛಿದ್ರವಾಗಿ ಹೋಗುವ ಮೇಘಗಳೋಪಾದಿಯಲ್ಲಿ-ದಿಕ್ಕು-ದಿಕ್ಕುಗಳಿಗೂ ಓಡಿಹೋದರು. ಈ ರೀತಿಯಲ್ಲಿ ಮಹಾರಥರಾದ ಪಾಂಡವರು ನಿನ್ನ ಮಕ್ಕಳನ್ನು

ಗೆದ್ದು ಪ್ರಜ್ವಲಿಸುವ ಅಗ್ನಿಗಳೋಪಾದಿಯಲ್ಲಿ ರಣಾಂಗಣದಲ್ಲಿ ಪ್ರಕಾಶಿಸಿದರು. ಆನಂದತುಂದಿಲರಾಗಿದ್ದ ಅವರು ನಿರಂತರವಾಗಿ ಸಿಂಹನಾದಗಳನ್ನು ಮಾಡುತ್ತಿದ್ದರು. ಶಂಖಗಳನ್ನು ಊದುತ್ತಿದ್ದರು. ಭೇರಿಗಳನ್ನೂ, ಮೃದಂಗ ಗಳನ್ನೂ, ನಗಾರಿಗಳನ್ನೂ ಬಾರಿಸುತ್ತಿದ್ದರು."

೧೫೫ನೆಯ ಅಧ್ಯಾಯವು ಮುಗಿಯಿತು.

೧೬೬ನೆಯ ಅಧ್ಯಾಯ ದ್ರೋಣಾಭಿಷೇಕಪರ್ವ (ಮುಂದುವರಿದಿದೆ.)

## ವೃಷಸೇನನ ಪರಾಕ್ರಮ : ಕೌರವ-ಪಾಂಡವರ ಭಯಂಕರಯುದ್ಧ : ದ್ರೋಣರು ಪಾಂಡವಪಕ್ಷದ ಅನೇಕವೀರರನ್ನು ಸಂಹರಿಸಿದುದು : ಅರ್ಜುನನ ವಿಜಯ

ಸಂಜಯನು ಕೌರವರ ಪರಾಭವವಾದನಂತರದ ವಾರ್ತೆಯನ್ನು ಹೇಳಲು ಉಪಕ್ರಮಿಸುತ್ತಾನೆ :

"ಮಹಾರಾಜ! ಆ ನಿನ್ನ ದೊಡ್ಡಸೈನ್ಯವು ಪಾಂಡವರ ಪ್ರಹಾರಭಯ ದಿಂದ ಚೆಲ್ಲಾಪಿಲ್ಲಿಯಾದುದನ್ನು ಕಂಡು ವೀರ್ಯವಂತನಾದ, ಕರ್ಣನ ಮಗನಾದ ವೃಷಸೇನನೊಬ್ಬನೇ ತನ್ನ ಅಸ್ತ್ರಮಾಯೆಯಿಂದ (ಅಸ್ತ್ರಪ್ರಯೋಗ ಕೌಶಲದಿಂದ) ಓಡಿಹೋಗುತ್ತಿದ್ದ ಸೈನಿಕರೆಲ್ಲರನ್ನೂ ತಡೆದು ಪುನಃ ಯುದ್ಧಕ್ಕೆ ಸಜ್ಜುಗೊಳಿಸಿದನು. ಯುದ್ಧದಲ್ಲಿ ವೃಷಸೇನನು ಬಿಡುತ್ತಿದ್ದ ಬಾಣಗಳು ಪಾಂಡವರ ಕಡೆಯ ಪದಾತಿಗಳನ್ನೂ, ಕುದುರೆಗಳನ್ನೂ, ರಥಿಗಳನ್ನೂ ಮತ್ತು ಆನೆಗಳನ್ನೂ ಭೇದಿಸುತ್ತಾ ಎಲ್ಲ ದಿಕ್ಕುಗಳಲ್ಲಿಯೂ ಚಲಿಸುತ್ತಿದ್ದುವು. ಗ್ರೀಷ್ಮರ್ತುವಿನಲ್ಲಿ ಸೂರ್ಯನಿಂದ ಸಾವಿರಾರು ಉಜ್ಜ್ವಲವಾದ ಕಿರಣಗಳು ಹೊರಟು ಸರ್ವತ್ರ ವ್ಯಾಪ್ತವಾಗುವಂತೆ–ವೃಷಸೇನನ ಧನುಸ್ಸಿನಿಂದ ಸಾವಿ ರಾರು ಸಂಖ್ಯೆಯಲ್ಲಿ ಪ್ರದೀಪ್ತವಾದ ಮಹಾಬಾಣಗಳು ಹೊರಬಂದು ಸರ್ವತ್ರ ವ್ಯಾಪ್ತವಾಗುತ್ತಿದ್ದುವು. ವೃಷಸೇನನಿಂದ ಪ್ರಮರ್ದಿತರಾದ ರಥಿಗಳು ಮತ್ತು ಕುದುರೆಸವಾರರು–ಬಿರುಗಾಳಿಯಿಂದ ಮುರಿದು ಕೆಳಕ್ಕೆ ಬೀಳುವ ವೃಕ್ಷಗಳೋ ಪಾದಿಯಲ್ಲಿ ರಣಾಂಗಣದ ಸುತ್ತಲೂ ತೊಪ-ತೊಪನೆ ಬೀಳುತ್ತಿದ್ದರು. ಮಹಾರಥನಾದ ವೃಷಸೇನನು ತನ್ನ ಅವ್ಯಾಹತವಾದ ಬಾಣಗಳ ಪ್ರಯೋಗ ದಿಂದ ಪಾಂಡವರ ಅಶ್ವಸಮೂಹಗಳನ್ನೂ, ರಥಸಮೂಹಗಳನ್ನೂ, ಆನೆಗಳ ಗುಂಪುಗಳನ್ನೂ, ನೂರಾರು-ಸಾವಿರಾರು ಸಂಖ್ಯೆಯಲ್ಲಿ ಕೆಳಗುರುಳಿ

ಸಿದನು. ಸ್ವಲ್ಪವಾದರೂ ಭಯವೇ ಇಲ್ಲದವನಂತೆ ಸಮರಾಂಗಣದ ಸುತ್ತಲೂ ಬಾಣಗಳ ಮಳೆಗರೆಯುತ್ತಾ ಸುತ್ತುತ್ತಿದ್ದ ಅದ್ವಿತೀಯನಾದ ವೃಷಸೇನನನ್ನು ಶತ್ರುಪಕ್ಷದ ರಾಜರೆಲ್ಲರೂ ಒಟ್ಟಾಗಿ ನಾಲ್ಕು ಕಡೆಗಳಿಂದಲೂ ಮುತ್ತಿಗೆಹಾಕಿದರು. ನಕುಲನ ಮಗನಾದ ಶತಾನೀಕನು ವೃಷಸೇನನನ್ನು ಎದುರಿಸಿ ಮರ್ಮವನ್ನು ಭೇದಿಸುವ ಹತ್ತು ಬಾಣಗಳಿಂದ ಅವನನ್ನು ಪ್ರಹರಿಸಿದನು. ಕರ್ಣನ ಮಗನಾದ ವೃಷಸೇನನು, ಶತಾನೀಕನು ಬಿಟ್ಟ ಹತ್ತು ಬಾಣಗಳನ್ನೂ ನಿರಸನಗೊಳಿಸಿ ಅವನ ಧನುಸ್ಸನ್ನೂ ಕತ್ತರಿಸಿ, ಧ್ವಜವನ್ನೂ ಸಹ ಕೆಳಗುರುಳಿಸಿದನು. ಧನುಸ್ಸಿನಿಂದ ವಿಹೀನನಾಗಿದ್ದ ಶತಾನೀಕನನ್ನು ರಕ್ಷಿಸುವ ಸಲುವಾಗಿ ದ್ರೌಪದಿಯ ಉಳಿದ ನಾಲ್ವರು ಮಕ್ಕಳೂ ವೃಷಸೇನನನ್ನು ಎದುರಿಸಿ ನಿಂತರು. ಕ್ಷಣಮಾತ್ರದಲ್ಲಿ ಪ್ರತಿವಿಂಧ್ಯಾದಿಗಳು ಬಾಣಗಳ ಸಮೂಹದಿಂದ ಕರ್ಣನ ಮಗನಾದ ವೃಷಸೇನನನ್ನು ಅದೃಶ್ಯಗೊಳಿಸಿದರು. (ಬಾಣಗಳಿಂದ ಅವನನ್ನು ಸಂಪೂರ್ಣವಾಗಿ ಮುಚ್ಚಿಬಿಟ್ಟರು) ಅದನ್ನು ನೋಡಿ ಅಶ್ವತ್ಥಾಮಪ್ರಮುಖರಾದ ಮಹಾರಥರು ಗರ್ಜನೆಮಾಡುತ್ತಾ ವೃಷಸೇನನ ರಕ್ಷಣೆಗೆ ಧಾವಿಸಿಬಂದರು. ಪರ್ವತಗಳನ್ನು ಮೋಡಗಳು ಜಲಧಾರೆಗಳಿಂದ ಮುಚ್ಚಿಬಿಡುವಂತೆ–ಮಹಾರಥರಾದ ದ್ರೌಪದೇಯರನ್ನು ನಾನಾವಿಧವಾದ ಬಾಣಗಳಿಂದ ಅಶ್ವತ್ಥಾಮಾದಿ ಮಹಾರಥರು ಮುಚ್ಚಿಬಿಟ್ಟರು.

ಅಶ್ವತ್ಥಾಮನೇ ಮೊದಲಾದ ಕುರುಯೋಧರು ದ್ರೌಪದಿಯ ಮಕ್ಕಳ ಮೇಲೆ ಬಿದ್ದುದನ್ನು ಕಂಡು ಮಕ್ಕಳನ್ನು ರಕ್ಷಿಸಬೇಕೆನ್ನುವ ಇಚ್ಛೆಯಿಂದ ಪಾಂಡವರು ಒಡನೆಯೇ ದ್ರೌಪದೇಯರಿದ್ದ ಸ್ಥಳಕ್ಕೆ ಧಾವಿಸಿ ಕೌರವಯೋಧರನ್ನು ಎದುರಿಸಿದರು. ಅವರ ಜೊತೆಯಲ್ಲಿಯೇ ಪಾಂಚಾಲರೂ, ಕೇಕಯರೂ, ಮತ್ಸ್ಯರೂ ಮತ್ತು ಸೃಂಜಯರೂ ಆಯುಧಗಳನ್ನೆತ್ತಿಕೊಂಡು ಕೌರವರ ಮೇಲೆ ದಾಳಿಮಾಡತೊಡಗಿದರು. ದೇವ-ದಾನವರ ಯುದ್ಧದಂತೆ ನಿನ್ನ ಕಡೆಯವರಿಗೂ ಮತ್ತು ಪಾಂಡವರ ಕಡೆಯವರಿಗೂ ಆ ಸಮಯದಲ್ಲಿ ರೋಮಾಂಚಕರವಾದ ಮತ್ತು ಘೋರವಾದ ಮಹಾಯುದ್ಧವು ನಡೆಯಿತು. ಈ ರೀತಿಯಲ್ಲಿ ಪರಸ್ಪರವಾಗಿ ಅಪರಾಧಿಗಳಾದ, ಕ್ರುದ್ಧರಾದ ಕುರು-ಪಾಂಡವರು ಒಬ್ಬರು ಮತ್ತೊಬ್ಬರನ್ನು ದುರುಗುಟ್ಟಿಕೊಂಡು ನೋಡುತ್ತಾ ಯುದ್ಧ ಮಾಡುತ್ತಿದ್ದರು. ಅಮಿತತೇಜಸ್ವಿಗಳಾಗಿದ್ದ ರಾಜರ ಶರೀರಗಳು–ಕೋಪಾಧಿಕ್ಯ

ದಿಂದ ಆಕಾಶದಲ್ಲಿ ಪರಸ್ಪರ ಯುದ್ಧಮಾಡುವ ಇಚ್ಛೆಯಿಂದ ಸಮ್ಮಿಳಿತರಾದ ಪಕ್ಷಿರಾಜನಾದ ಗರುಡ ಮತ್ತು ಸರ್ಪಗಳ ಶರೀರಗಳಂತೆ–ಕಾಣುತ್ತಿದ್ದುವು. ಭೀಮ, ಕರ್ಣ, ಕೃಪಾಚಾರ್ಯರು, ದ್ರೋಣರು, ಅಶ್ವತ್ಥಾಮಾ, ಧೃಷ್ಟದ್ಯುಮ್ನ ಮತ್ತು ಸಾತ್ಯಕಿ–ಇವರೇ ಮೊದಲಾದ ಶೂರ-ವೀರರಿಂದ ನಿಬಿಡವಾಗಿದ್ದ ಆ ರಣರಂಗವು–ಪ್ರಳಯಕಾಲದಲ್ಲಿ ಹುಟ್ಟಿದ ಸೂರ್ಯನ ಕಿರಣಗಳಿಂದ ಪ್ರಪಂಚವು ಪ್ರಕಾಶಮಾನವಾಗುವಂತೆ–ಪ್ರಕಾಶಮಾನವಾಗಿದ್ದಿತು. ಪರಸ್ಪರ ವಾಗಿ ಪ್ರಹಾರದಲ್ಲಿ ತೊಡಗಿದ್ದ, ಮಹಾಬಲರಾದ ಕೌರವ-ಪಾಂಡವರ ಯುದ್ಧವು ಹಿಂದೆ ಬಲಿಷ್ಠರಾದ ದಾನವರಿಗೂ ಮತ್ತು ದೇವತೆಗಳಿಗೂ ನಡೆದ ಯುದ್ಧದಂತೆ–ಭಯಂಕರವಾಗಿ ನಡೆಯಿತು. ಬಳಿಕ ಉಕ್ಕಿಬರುವ ಸಮುದ್ರ ದಂತೆ ಭೋರ್ಗರೆಯುವ ಶಬ್ದದಿಂದ ಕೂಡಿದ್ದ ಯುಧಿಷ್ಠಿರನ ಮಹಾಸೈನ್ಯವು ನಿನ್ನ ಸೈನ್ಯವನ್ನು ಸಂಹರಿಸತೊಡಗಿತು. ಅದರಿಂದಾಗಿ ಕೌರವಸೇನೆಯಲ್ಲಿದ್ದ ಅನೇಕರಥಿಗಳು ಪಲಾಯನಮಾಡತೊಡಗಿದರು. ಶತ್ರುಗಳಿಂದ ಬಹಳ ಬೇಗ ವಿಧ್ವಂಸಿತವಾದ ಆ ಸೈನ್ಯವನ್ನು ನೋಡಿ ದ್ರೋಣರು–"**ಅಲಂ ದ್ರುತೇನ ವಃ** ಶೂರಾಃ–ಶೂರಸೈನಿಕರೇ! ನೀವು ಓಡಿಹೋಗುವುದನ್ನು ನಿಲ್ಲಿಸಿರಿ"–ಎಂದು ಗಟ್ಟಿಯಾಗಿ ಕೂಗಿ ಹೇಳಿದರು. ಅನಂತರ ಪರಮಕ್ರುದ್ಧರಾದ ರಕ್ತಾಶ್ವರಾದ ದ್ರೋಣರು ನಾಲ್ಕು ದಂತಗಳನ್ನು ಹೊಂದಿರುವ ಆನೆಯೋಪಾದಿಯಲ್ಲಿ (ದಿಗ್ಗಜದಂತೆ) ಪಾಂಡವರ ಸೈನ್ಯವನ್ನು ಹೊಕ್ಕು ಯುಧಿಷ್ಠಿರನನ್ನು ಆಕ್ರಮಿಸಿದರು. ದ್ರೋಣರು ತನ್ನನ್ನು ಆಕ್ರಮಿಸಿದುದನ್ನು ಕಂಡು ಯುಧಿಷ್ಠಿರನು ಗೃಧ್ರಗಳ ರೆಕ್ಕೆಗಳನ್ನು ಹೊಂದಿದ್ದ ನಿಶಿತವಾದ ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ಯುಧಿಷ್ಠಿರನು ಬಿಟ್ಟ ಬಾಣಗಳನ್ನು ಮಧ್ಯದಲ್ಲೇ ಕತ್ತರಿಸಿ ದ್ರೋಣರು ಬಹಳ ಬೇಗ ಯುಧಿಷ್ಠಿರನ ಧನುಸ್ಸನ್ನು ಕತ್ತರಿಸಿ ಪುನಃ ಅವನ ಮೇಲೆ ಬೇಗನೆ ಮುನ್ನುಗ್ಗಿದರು. ಆ ಸಮಯದಲ್ಲಿ ಯುಧಿಷ್ಠಿರನ ರಥಗಳ ಚಕ್ರಗಳನ್ನು ರಕ್ಷಿಸುತ್ತಿದ್ದ ಯಶೋವಂತನಾದ ಪಾಂಚಾಲಕುಮಾರನು–ಉಕ್ಕಿಬರುವ ಸಮುದ್ರವನ್ನು ತೀರವು ತಡೆ ಹಿಡಿಯುವಂತೆ–ಯುಧಿಷ್ಠಿರನ ಮೇಲೆ ಹೋಗದಂತೆ ದ್ರೋಣರನ್ನು ತಡೆದು ನಿಲ್ಲಿಸಿದನು. ದ್ವಿಜಶ್ರೇಷ್ಠರಾದ ದ್ರೋಣರನ್ನು ಪಾಂಚಾಲಕುಮಾರನು ತಡೆದು ನಿಲ್ಲಿಸಿದುದನ್ನು ಕಂಡು ಪಾಂಡವರ ಸೈನ್ಯದಲ್ಲಿ ಸಿಂಹನಾದಗಳ

ಧ್ವನಿಯೂ ಅದರೊಂದಿಗೆ ‘ಸಾಧು ಕುಮಾರ! ಸಾಧು!’ ಎಂಬ ವೀರೋತ್ತೇಜಕವಾದ ಮಾತುಗಳೂ ಕೇಳಿಬಂದುವು.

ಅನಂತರ ಪಾಂಚಾಲಕುಮಾರನು ಸಿಂಹದಂತೆ ಪದೇ-ಪದೇ ಗರ್ಜನೆಮಾಡುತ್ತಾ ಒಂದು ಬಾಣದಿಂದ ದ್ರೋಣರನ್ನು ವಕ್ಷಃಸ್ಥಲದಲ್ಲಿ ಪ್ರಹರಿಸಿದನು. ಬಾಣಪ್ರಹಾರಕುಶಲನಾದ, (ಸಿದ್ಧಹಸ್ತನಾದ) ಶ್ರಮವನ್ನು ಜಯಿಸಿದ್ದ, ಮಹಾಬಲನಾದ ಕುಮಾರನು ಪುನಃ ಅನೇಕ ಸಾವಿರ ಬಾಣಗಳಿಂದ ದ್ರೋಣರನ್ನು ಪ್ರಹರಿಸಿ ಯುಧಿಷ್ಠಿರನ ಸಮೀಪಕ್ಕೆ ಹೋಗದಂತೆ ತಡೆದುಬಿಟ್ಟನು. ಆದರೆ ದ್ವಿಜಶ್ರೇಷ್ಠರಾದ ದ್ರೋಣರು ಮರುಕ್ಷಣದಲ್ಲಿಯೇ ಶೂರನಾದ, ಆರ್ಯವ್ರತನಿಷ್ಠನಾದ (ಆರ್ಯರ ವ್ರತಗಳನ್ನು ಆಚರಿಸುವ) ಮಂತ್ರಾಸ್ತ್ರಗಳಲ್ಲಿ ಹೆಚ್ಚಿನ ಪರಿಶ್ರಮವನ್ನು ಹೊಂದಿದ್ದ, ಯುಧಿಷ್ಠಿರನ ಚಕ್ರಗಳ ರಕ್ಷಕನಾದ ಕುಮಾರನನ್ನು ನಿಶಿತವಾದ ಬಾಣಗಳಿಂದ ಪರಾಜಯಗೊಳಿಸಿದರು. ದ್ವಿಜಶ್ರೇಷ್ಠರಾದ ಭಾರದ್ವಾಜರು ಪಾಂಡವರ ಸೈನ್ಯದ ಮಧ್ಯಭಾಗಕ್ಕೆ ಹೋಗಿ ನಾಲ್ಕು ಬಗೆಯ ಸೈನ್ಯಗಳನ್ನೂ ವಿಧ್ವಂಸನಗೊಳಿಸುತ್ತಾ ರಣಾಂಗಣದ ಸುತ್ತಲೂ ತಿರುಗುತ್ತಿದ್ದರು. ಈ ರೀತಿಯಲ್ಲವರು ನಿನ್ನ ಸೈನ್ಯದ ಸಂಪೂರ್ಣ ರಕ್ಷಕರಾಗಿದ್ದರು. ದ್ರೋಣರು ತಮ್ಮನ್ನು ಎದುರಿಸಿ ನಿಂತ ಶಿಖಂಡಿಯನ್ನು ಹನ್ನೆರಡು ಬಾಣಗಳಿಂದಲೂ, ಉತ್ತಮೌಜಸನನ್ನು ಇಪ್ಪತ್ತುಬಾಣಗಳಿಂದಲೂ, ನಕುಲನನ್ನು ಐದು ಬಾಣಗಳಿಂದಲೂ, ಸಹದೇವನನ್ನು ಏಳು ಬಾಣಗಳಿಂದಲೂ, ಯುಧಿಷ್ಠಿರನನ್ನು ಹನ್ನೆರಡು ಬಾಣಗಳಿಂದಲೂ, ದ್ರೌಪದಿಯ ಮಕ್ಕಳನ್ನು ಮೂರು-ಮೂರು ಬಾಣಗಳಿಂದಲೂ, ಸಾತ್ಯಕಿಯನ್ನು ಐದು ಬಾಣಗಳಿಂದಲೂ, ವಿರಾಟನನ್ನು ಹತ್ತು ಬಾಣಗಳಿಂದಲೂ ಪ್ರಹರಿಸಿದರು. ಮುಖ್ಯ-ಮುಖ್ಯರಾದ ಯೋಧರ ಮೇಲೆ ದಾಳಿಮಾಡುತ್ತಾ ಪಾಂಡವರ ಕಡೆಯ ಯೋಧರನ್ನು ದ್ರೋಣರು ಕ್ಷೋಭೆಗೊಳಿಸಿದರು. ಯುಧಿಷ್ಠಿರನನ್ನು ಜೀವಂತವಾಗಿ ಬಂಧಿಸುವ ಆಶಯದಿಂದ ಪುನಃ ಅವನ ಕಡೆಗೆ ಧಾವಿಸಿದರು. ಗಾಳಿಯ ಬಡಿತದಿಂದ ಅಲ್ಲೋಲ-ಕಲ್ಲೋಲವಾದ ಸಮುದ್ರದಂತೆ–ಪರಮಕ್ರುದ್ಧರಾಗಿದ್ದ, ಮಹಾರಥರಾದ ದ್ರೋಣರನ್ನು ಯುಗಂಧರ ರಾಜನು ಅವರು ಯುಧಿಷ್ಠಿರನ ಸಮೀಪಕ್ಕೆ ಹೋಗದಂತೆ ತಡೆದುಬಿಟ್ಟನು. ಆದರೂ ಸಹ ದ್ರೋಣರು ಸನ್ನತಪರ್ವಗಳಾದ ಬಾಣಗಳಿಂದ

ಯುಧಿಷ್ಠಿರನನ್ನು ಪ್ರಹರಿಸಿ ಪುನಃ ಭಲ್ಲವೆಂಬ ಬಾಣದ ಪ್ರಹಾರದಿಂದ ಯುಗಂಧರರಾಜನನ್ನು ಅವನು ಕುಳಿತಿದ್ದ ಸ್ಥಾನದಿಂದ ಕೆಳಕ್ಕೆ ಕೆಡವಿಬಿಟ್ಟರು. ದ್ರೋಣರು ವೇಗವಾಗಿ ಯುಧಿಷ್ಠಿರನನ್ನು ಆಕ್ರಮಿಸುತ್ತಿರುವುದನ್ನು ಕಂಡು ಅವನನ್ನು ರಕ್ಷಿಸುವ ಇಚ್ಛೆಯಿಂದ ವಿರಾಟ-ದ್ರುಪದರು, ಕೇಕಯರು, ಸಾತ್ಯಕಿ, ಶಿಬಿ, ಪಾಂಚಾಲದೇಶೀಯನಾದ ವ್ಯಾಘ್ರದತ್ತ, ಪರಾಕ್ರಮಿಯಾದ ಸಿಂಹಸೇನ ಇವರುಗಳೂ ಮತ್ತು ಇನ್ನೂ ಅನೇಕಯೋಧರೂ ದ್ರೋಣರ ಮೇಲೆ ಅಸಂಖ್ಯಾತವಾದ ಬಾಣಗಳನ್ನು ಸುರಿಸುತ್ತಾ ಅವರು ಮುಂದೆ ಹೋಗದಂತೆ ಹಾದಿಯನ್ನೇ ಮುಚ್ಚಿಬಿಟ್ಟರು. (ಮಾರ್ಗಕ್ಕೆ ಅಡ್ಡಗಟ್ಟಿನಿಂತರು.) ಪಾಂಚಾಲ ದೇಶೀಯನಾದ ಮಹಾವೀರನಾದ ವ್ಯಾಘ್ರದತ್ತನು ನಿಶಿತವಾದ ಐವತ್ತು ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ಅದನ್ನು ನೋಡಿ ಸುತ್ತಲೂ ಇದ್ದ ಜನರು ಗಟ್ಟಿಯಾಗಿ ಕೂಗಿಕೊಂಡರು. ಅನಂತರ ಸಿಂಹಸೇನನು ಬಹುಶೀಘ್ರವಾಗಿ ಮಹಾರಥರಾದ ದ್ರೋಣರನ್ನು ಪ್ರಹರಿಸಿ ಕೌರವರ ಕಡೆಯ ಮಹಾರಥರ ಮನಸ್ಸಿನಲ್ಲಿ ಭಯವನ್ನುಂಟುಮಾಡುತ್ತಾ ಪರಮಹೃಷ್ಟನಾಗಿ ಅಟ್ಟಹಾಸದಿಂದ ನಕ್ಕನು.

ಅದರಿಂದ ಪರಮಕ್ರುದ್ಧರಾದ ದ್ರೋಣರು ಕಣ್ಣುಗಳನ್ನು ಅರಳಿಸಿ ದುರುಗುಟ್ಟಿಕೊಂಡು ನೋಡಿ ಧನುಸ್ಸಿನ ಶಿಂಜಿನಿಯನ್ನು ತೀಡಿ, ದೊಡ್ಡದಾಗಿ ಟೇಂಕರಿಸಿ ಸಿಂಹಸೇನನನ್ನು ಆಕ್ರಮಿಸಿದರು. ಬಲಿಷ್ಠರಾದ ದ್ರೋಣರು ಎರಡು ಭಲ್ಲಗಳನ್ನು ತೆಗೆದುಕೊಂಡು ಒಂದು ಭಲ್ಲದಿಂದ ಕರ್ಣಕುಂಡಲಗಳಿಂದ ಯುಕ್ತವಾಗಿದ್ದ ಸಿಂಹಸೇನನ ಶಿರಸ್ಸನ್ನು ಶರೀರದಿಂದ ಪ್ರತ್ಯೇಕಿಸಿಬಿಟ್ಟರು. ಮರುಕ್ಷಣದಲ್ಲಿಯೇ ವ್ಯಾಘ್ರದತ್ತನನ್ನು ಆಕ್ರಮಿಸಿ ಮತ್ತೊಂದು ಭಲ್ಲದಿಂದ ಅವನ ತಲೆಯನ್ನೂ ಹಾರಿಸಿದರು. ಅನಂತರ ಪಾಂಡವಮಹಾರಥರೆಲ್ಲರನ್ನೂ ಬಾಣಗಳ ಸಮೂಹಗಳಿಂದ ಸಮ್ಮರ್ದಿಸಿ–ಸರ್ವವಿನಾಶಕರನಾದ ಮೃತ್ಯುವಿ ನಂತೆ–ಯುಧಿಷ್ಠಿರನ ಸಮೀಪಕ್ಕೆ ಹೋಗಿ ನಿಂತರು. ಆ ಸಮಯದಲ್ಲಿ ಯುಧಿ ಷ್ಠಿರನ ಸೈನ್ಯದಲ್ಲಿ ದೊಡ್ಡ ಗದ್ದಲವೆದ್ದಿತು. ಯತವ್ರತರಾದ ದ್ರೋಣರು ಯುಧಿಷ್ಠಿರನ ಸಮೀಪಕ್ಕೆ ಹೋದೊಡನೆಯೇ–"ಧರ್ಮರಾಜನು ಸತ್ತನು! ನಮ್ಮ ಧರ್ಮಾತ್ಮನಾದ ರಾಜನು ಇನ್ನಿಲ್ಲ!"–ಮುಂತಾಗಿ ಸೈನಿಕರು ಕೂಗ ತೊಡಗಿದರು. ದ್ರೋಣರ ಘೋರಪರಾಕ್ರಮವನ್ನು ನೋಡಿ ಅಲ್ಲಿದ್ದ ಕೌರವ

ಸೈನಿಕರು–"ಈಗ ನಮ್ಮ ದುರ್ಯೋಧನರಾಜನು ಕೃತಾರ್ಥನಾಗಿ ಬಿಡು ತ್ತಾನೆ" ಎಂದು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು. "ಈ ಮುಹೂರ್ತದಲ್ಲಿಯೇ ದ್ರೋಣರು ಯುಧಿಷ್ಠಿರನನ್ನು ಜೀವಂತನನ್ನಾಗಿ ಹಿಡಿದು ನಮ್ಮ ರಾಜನಾದ ದುರ್ಯೋಧನನ ಸಮೀಪಕ್ಕೆ ನಿಶ್ಚಯವಾಗಿಯೂ ಬಂದು ಬಿಡುತ್ತಾರೆ." –ಎಂದೂ ಸಹ ಅವರು ಸಂತೋಷಭರಿತರಾಗಿ ಹೇಳು ತ್ತಿದ್ದರು. ಮಹಾರಾಜ! ನಿನ್ನ ಕಡೆಯ ಸೈನಿಕರು ಹೀಗೆ ಕೂಗಿಕೊಳ್ಳು ತ್ತಿರಲಾಗಿ ಮಹಾರಥನಾದ ಕುಂತಿಯ ಮಗನಾದ ಅರ್ಜುನನು ತನ್ನ ರಥದ ಘೋಷದಿಂದ ಎಲ್ಲ ದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟು ಮಾಡುತ್ತಾ ಬಹಳಶೀಘ್ರವಾಗಿ ಯುಧಿಷ್ಠಿರನ ಸಮೀಪಕ್ಕೆ ಬಂದನು. ಗಜಾಶ್ವ-ರಥ-ಪದಾತಿಗಳ ಸಂಹಾರದಿಂದಲೇ ರಣಾಂಗಣದಲ್ಲಿ ಒಂದು ನದಿಯು ಹರಿಯುತ್ತಿದ್ದಿತು. ಯೋಧರ ರಕ್ತವೇ ಆ ನದಿಯ ನೀರಾಗಿ ದ್ದಿತು. ಶೂರರ ಮುರಿದು ಬಿದ್ದಿದ್ದ ರಥಗಳೇ ಆ ನದಿಯ ಸುಳಿಗಳಾ ಗಿದ್ದುವು. ಸತ್ತುಹೋಗಿದ್ದ ಶೂರರ ಮೂಳೆಗಳ ಸಮೂಹದಿಂದ ಆ ನದಿಯು ಸಮಾಕೀರ್ಣವಾಗಿದ್ದಿತು. ಪ್ರೇತಗಳೆಂಬ ದಡಗಳನ್ನೇ ಕೊಚ್ಚಿಸಿಕೊಂಡು ಹೋಗುವುದಾಗಿದ್ದ, ಬಾಣಗಳ ಸಮೂಹವೇ ನೊರೆಯಾಗಿ ಉಳ್ಳ, ಪ್ರಾಸ ರೂಪವಾದ ಮೀನುಗಳಿಂದ ಸಮಾಕುಲವಾಗಿದ್ದ ನದಿಯನ್ನು ಪಾಂಡುವಿನ ಮಗನಾದ ಕಿರೀಟಿಯು ಬಹಳ ಶೀಘ್ರವಾಗಿ ದಾಟಿ, ಕುರುಯೋಧರನ್ನು ಓಡಿಸಿ ದ್ರೋಣರ ಸೈನಿಕರ ಕಡೆಗೆ ಧಾವಿಸಿದನು. ತನ್ನ ದೊಡ್ಡದಾದ ಬಾಣಗಳ ಸಮೂಹದಿಂದ ದ್ರೋಣರನ್ನು ಮೋಹಗೊಳಿಸುತ್ತಿರುವನೋ ಎಂಬಂತೆ ದ್ರೋಣರ ಮೇಲೂ ಅವರ ಸೈನ್ಯದ ಮೇಲೂ ಬಾಣಗಳ ಮಳೆಯನ್ನೇ ಸುರಿಸಿದನು. ಯಶೋವಂತನಾದ ಕೌಂತೇಯನು ಬತ್ತಳಿಕೆಯಿಂದ ಬಾಣ ಗಳನ್ನು ತೆಗೆದುಕೊಳ್ಳುತ್ತಿದ್ದುದು ಮತ್ತು ಅವುಗಳನ್ನು ಧನುಸ್ಸಿನಲ್ಲಿ ಯೋಜಿಸುತ್ತಿದ್ದುದು–ಈ ಕ್ರಿಯೆಗಳಲ್ಲಿ ಅಂತರವೇ ಕಾಣುತ್ತಿರಲಿಲ್ಲ. ಆ ಸಮಯದಲ್ಲಿ ದಿಕ್ಕುಗಳೂ ಕಾಣಿಸುತ್ತಿರಲಿಲ್ಲ. ಅಂತರಿಕ್ಷವೂ ಕಾಣಿಸುತ್ತಿರ ಲಿಲ್ಲ. ಸ್ವರ್ಗಲೋಕವೂ ಕಾಣಿಸುತ್ತಿರಲಿಲ್ಲ. ಭೂಲೋಕವೂ ಕಾಣುತ್ತಿರಲಿಲ್ಲ. ಎಲ್ಲ ಪ್ರದೇಶಗಳೂ ಅರ್ಜುನನು ಬಿಟ್ಟ ಬಾಣಗಳಿಂದಲೇ ತುಂಬಿಹೋಗಿ ದ್ದುವು. ಮಹಾರಾಜ! ಗಾಂಡೀವಧನ್ವನಾದ ಅರ್ಜುನನಿಂದ ಬಾಣಗಳ

ಮೂಲಕವಾಗಿ ನಿರ್ಮಿತವಾದ ಆ ಅಂಧಕಾರದಲ್ಲಿ ಯಾವುದೊಂದೂ ಕಾಣುತ್ತಿರಲಿಲ್ಲ. ಆ ಸಮಯಕ್ಕೆ ಸರಿಯಾಗಿ ಸೂರ್ಯನೂ ಅಸ್ತಂಗತನಾದುದರಿಂದ ಕತ್ತಲೆಯು ಸರ್ವತ್ರ ಸಂಪೂರ್ಣವಾಗಿ ಕವಿದು–ಶತ್ರುಗಳು ಯಾರು? ಮಿತ್ರರು ಯಾರು?–ಎಂಬುದೂ ಎರಡೂ ಪಕ್ಷಗಳ ಯೋಧರಿಗೆ ತಿಳಿಯುತ್ತಿರಲಿಲ್ಲ ಆ ಸಮಯದಲ್ಲಿ ಅನಿವಾರ್ಯವಾಗಿ ದ್ರೋಣ-ದುರ್ಯೋಧನಾದಿಗಳು ತಮ್ಮ ಕಡೆಯ ಸೈನಿಕರೊಡನೆ ಯುದ್ಧದಿಂದ ಹಿಮ್ಮೆಟ್ಟಿದರು.

ಶತ್ರುಗಳು ಬಹಳ ಭಯಪಟ್ಟಿರುವುದನ್ನೂ, ಯುದ್ಧಮಾಡಲು ನಿರುತ್ಸಾಹಿಗಳಾಗಿರುವುದನ್ನೂ ತಿಳಿದು ಅರ್ಜುನನು ತನ್ನ ಸೈನಿಕರನ್ನೂ ಸಹ ಮಂದ-ಮಂದವಾಗಿ ಹಿಂದಕ್ಕೆ ಕರೆಸಿಕೊಂಡನು. ಋಷಿಗಳು ಸೂರ್ಯನನ್ನು ಸ್ತೋತ್ರಮಾಡುವಂತೆಯೇ–ಪ್ರಹೃಷ್ಟರಾದ ಪಾಂಡು-ಸೃಂಜಯರೂ, ಪಾಂಚಾಲರೂ ಮನೋಜ್ಞವಾದ ಮಾತುಗಳಿಂದ ಪಾರ್ಥನನ್ನು ಪ್ರಶಂಸೆಮಾಡಿದರು.

ಮಹಾರಾಜ! ಈ ರೀತಿಯಲ್ಲಿ ಧನಂಜಯನು ಶತ್ರುಗಳನ್ನು ಗೆದ್ದು ಸಂತೋಷಭರಿತನಾಗಿ ಶ್ರೀಕೃಷ್ಣನೊಡನೆ ಸರ್ವಸೈನ್ಯಗಳ ಹಿಂಭಾಗದಲ್ಲಿ ತನ್ನ ಶಿಬಿರಕ್ಕೆ ತೆರಳಿದನು. ನಕ್ಷತ್ರಗಳಿಂದ ಚಿತ್ರಿತವಾಗಿರುವ ಆಕಾಶದಲ್ಲಿ ಚಂದ್ರನು ಪ್ರಕಾಶಿಸುವಂತೆ–ಅರ್ಜುನನು ಮಣಿಗಳಿಂದಲೂ, ಪದ್ಮರಾಗಗಳಿಂದಲೂ, ಸುವರ್ಣದಿಂದಲೂ, ವಜ್ರಮಣಿಗಳಿಂದಲೂ, ಹವಳಗಳಿಂದಲೂ, ಸ್ಫಟಿಕವೇ ಮೊದಲಾದ ಇನ್ನೂ ಅನೇಕ ಮಣಿರತ್ನಗಳಿಂದಲೂ ವಿಭೂಷಿತವಾಗಿದ್ದ ಚಿತ್ರರಥದಲ್ಲಿ ಪ್ರಕಾಶಿಸಿದನು."

೧೬ನೆಯ ಅಧ್ಯಾಯವು ಮುಗಿಯಿತು.

* * *

## ೧೧ನೆಯ ದಿವಸದ ಯುದ್ಧದ ವಿಶ್ಲೇಷಣೆ

ಯದ್ಯಪಿ ಭೀಷ್ಮನು ಜೀವಿಸಿದ್ದರೂ 'ಪಿತರಂ ನಿಹತಂ' ತಂದೆಯು ಹತನಾದುದನ್ನು ಕೇಳಿ–ಇವೇ ಮುಂತಾದ ವಾಕ್ಯಗಳೇ ಸರ್ವತ್ರ ಬರುತ್ತವೆ. ಬದುಕಿದ್ದರೂ ಸತ್ತನೆಂದೂ ಏಕೆ ಹೇಳಿದ್ದಾರೆ?–ಎಂದು ಪ್ರಶ್ನಿಸಬಹುದು. ಆದರೆ ಭೀಷ್ಮನು ಇಚ್ಛಾಮರಣಿಯಾದುದರಿಂದ ಸ್ವಲ್ಪಕಾಲದವರೆಗೆ ಜೀವ ಧಾರಣೆಮಾಡಿಕೊಂಡಿದ್ದರೂ, ಮುಂದೆ ಧರ್ಮದ ವಿಷಯವಾಗಿ ಧರ್ಮ ರಾಜನಿಗೆ ಉಪದೇಶಮಾಡುವವನಾದರೂ, ಕೌರವ-ಪಾಂಡವರ ಯುದ್ಧದ ದೃಷ್ಟಿಯಲ್ಲಿ ಅವನು ಸತ್ತಂತೆಯೇ ಸರಿ. ದುರ್ಯೋಧನಾದಿಗಳು ಭೀಷ್ಮನಿಗೆ ಕುಡಿಯಲು ನೀರನ್ನೂ, ತಿನ್ನಲು ಭಕ್ಷ್ಯ-ಭೋಜ್ಯಾದಿಗಳನ್ನೂ ತಂದಾಗ ಭೀಷ್ಮನೇ ಈ ವಿಷಯವನ್ನು ಸ್ಪಷ್ಟಪಡಿಸಿರುತ್ತಾನೆ. **ನಾದ್ಯಾತೀತಾ ಮಯಾ ಶಕ್ಯಾ ಭೋಗಾಃ ಕೇಚನ ಮಾನುಷಾಃ । ಅಪಕ್ರಾನ್ತೋ ಮನುಷ್ಯೇಭ್ಯಃ ಶರಶಯ್ಯಾಂ ಗತೋ ಹ್ಯಹಮ್ ॥** "ಮನುಷ್ಯಲೋಕದ ಭೋಗ್ಯವಸ್ತುಗಳನ್ನು ನಾನು ಉಪಭೋಗಿಸಲಾರೆನು. ಅವುಗಳೆಲ್ಲವನ್ನೂ ನಾನು ತ್ಯಜಿಸಿದ್ದೇನೆ. ನಾನೀಗ ಮನುಷ್ಯರಿಂದಲೇ ದೂರವಿದ್ದುಬಿಟ್ಟಿದ್ದೇನೆ. ಶರಶಯ್ಯೆಯಲ್ಲಿದ್ದೇನೆ." (೧೨೧-೧೩) ಎಂಬುದಾಗಿ ಹೇಳುತ್ತಾನೆ. ಭೀಷ್ಮನು ಶರಶಯ್ಯೆಯಲ್ಲಿರುವಾಗ ಯಾವ ಆಹಾರವನ್ನೂ ತೆಗೆದುಕೊಳ್ಳುವುದಿಲ್ಲ. ಹೊರಟುಹೋಗಲಿದ್ದ ಪ್ರಾಣಗಳನ್ನು ತಡೆಹಿಡಿದು ಉತ್ತರಾಯಣಕ್ಕಾಗಿ ಕಾದಿದ್ದಾನೆ. ಪ್ರಪಂಚಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳಿಂದಲೂ ಅವನು ವಿನಿರ್ಮುಕ್ತನಾಗಿರುವುದರಿಂದ ಎಲ್ಲ ಕಡೆಗಳಲ್ಲೂ 'ಭೀಷ್ಮನು ಅವಸಾನ ಹೊಂದಿರುವನು' ಎಂದೇ ಹೇಳಿದ್ದಾರೆ. ಇದು ವಿರೋಧಾಭಾಸವಲ್ಲ.

* * * *

ಭೀಷ್ಮಪರ್ವದ ೧೩ನೆಯ ಅಧ್ಯಾಯದಲ್ಲಿ ಹತ್ತು ದಿವಸಗಳ ಯುದ್ಧವೂ ಮುಗಿದು ಭೀಷ್ಮನ ಪತನವಾದನಂತರ ಯುದ್ಧಭೂಮಿಯಿಂದ ಸಂಜಯನು ಧೃತರಾಷ್ಟ್ರನ ಬಳಿಗೆ ಬಂದು ಭೀಷ್ಮನು ನಿಧನಹೊಂದಿದ ವಾರ್ತೆಯನ್ನು ತಿಳಿಸಿ ಯುದ್ಧವಾರ್ತೆಯನ್ನು ಹೇಳಲು ಉಪಕ್ರಮಿಸುತ್ತಾನೆ. ಹತ್ತು ದಿವಸಗಳ ಯುದ್ಧವನ್ನು ವಿವರಿಸುವ ಸಂದರ್ಭದಲ್ಲಿ ಸಂಜಯನು ಮುಂದಿನ ಯುದ್ಧಗಳಲ್ಲಿಯೂ ಭಾಗವಹಿಸಿ ವಿಷಯಗಳನ್ನು ಸಂಗ್ರಹಿಸುತ್ತಿದ್ದನೇ?

ಅಥವಾ ದಂಡನಾಯಕನ ವಧೆಯಾದೊಡನೆಯೇ ಶಿಬಿರದಿಂದ ಧೃತರಾಷ್ಟ್ರನ ಅರಮನೆಗೆ ಬಂದು ರಾತ್ರಿಯೆಲ್ಲಾ ಕುಳಿತು ಅಷ್ಟು ದಿವಸಗಳ ಯುದ್ಧವನ್ನೂ ಪೂರ್ಣವಾಗಿ ಹೇಳಿ ಪುನಃ ಶಿಬಿರಕ್ಕೂ ಅಲ್ಲಿಂದ ರಣಾಂಗಣಕ್ಕೂ ಹೋಗುತ್ತಿದ್ದನೇ? ಎಂಬ ಶಂಕೆ ಬರಬಹುದು. ಇಲ್ಲಿ ಬಂದಿರುವ ಪ್ರಕರಣವನ್ನು ನೋಡಿದರೆ ಸೇನಾನಾಯಕನ ವಧೆಯಾದೊಡನೆಯೇ ಧೃತರಾಷ್ಟ್ರನ ಅರಮನೆಗೆ ಬಂದು ಒಂದು ರಾತ್ರಿಯಲ್ಲಿಯೇ ಎಲ್ಲ ವಿಷಯಗಳನ್ನೂ ಸಂಪೂರ್ಣವಾಗಿ ಹೇಳಿ ಹೊರಟುಹೋಗುತ್ತಿದ್ದನೆಂದು ಹೇಳಬಹುದಾಗಿದೆ.

ಧೃತರಾಷ್ಟ್ರನು ಭೀಷ್ಮನ ನಿಧನವನ್ನು ಕುರಿತು ಚಿಂತಿಸುತ್ತಿದ್ದಾಗ ಸಂಜಯನು ರಾತ್ರಿ ಯುದ್ಧಶಿಬಿರದಿಂದ ಬರುತ್ತಾನೆ. 'ಶಿಬಿರಾತ್ ಸಂಜಯಂ ಪ್ರಾಪ್ತಂ' ೧-೭. ಆದರೆ ಇಲ್ಲಿ ಸಂಜಯನು ಬಂದೊಡನೆಯೇ ದ್ರೋಣನ ವಧೆಯ ವಿಷಯವಾಗಿ ಹೇಳುವುದಿಲ್ಲ. ಧೃತರಾಷ್ಟ್ರನ ಪ್ರಶ್ನೆಯನ್ನನುಸರಿಸಿ ಭೀಷ್ಮನ ನಿಧನದ ಪ್ರಕರಣವನ್ನೇ ಮುಂದುವರಿಸಿಕೊಂಡು ಹೋಗುತ್ತಾನೆ. ಆದರೆ ದ್ರೋಣರ ವಧೆಯನಂತರವೇ ಬಂದು ಕಥೆಯನ್ನು ಮುಂದುವರಿಸುತ್ತಿದ್ದಾನೆಂಬ ವಿಷಯವು ಎಂಟನೆಯ ಅಧ್ಯಾಯದಲ್ಲಿ ಸ್ಪಷ್ಟವಾಗಿದೆ. ಎಂಟನೆಯ ಅಧ್ಯಾಯದಲ್ಲಿ ದ್ರೋಣರ ವಧೆಯನ್ನು ಸಂಜಯನು ಸಂಕ್ಷೇಪವಾಗಿ ಹೇಳಿಮುಗಿಸಿಬಿಡುತ್ತಾನೆ. ಮುಂದೆ ೧೨ನೆಯ ಅಧ್ಯಾಯದಿಂದ ದ್ರೋಣರ ದಂಡನಾಯಕತ್ವದಲ್ಲಿ ನಡೆದ ಯುದ್ಧದ ವಿವರಣೆಯನ್ನು ಪ್ರಾರಂಭಿಸಿ ಹೇಳುತ್ತಾನೆ.

ಆದುದರಿಂದ ದ್ರೋಣರ ವಧೆಯಾದನಂತರವೇ ಸಂಜಯನು ಧೃತರಾಷ್ಟ್ರನ ಬಳಿಗೆ ಬಂದನೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಆದರೆ ಇಷ್ಟು ವಿಷಯಗಳನ್ನೂ ಒಂದೇ ರಾತ್ರಿಯಲ್ಲಿ ಹೇಳಿ ಮುಗಿಸಲು ಸಾಧ್ಯವೇ? ಶ್ಲೋಕಗಳ ಸಂಖ್ಯೆಯನ್ನೇ ನಾವು ಇದರ ಗಣನೆಗೆ ಇಟ್ಟುಕೊಂಡರೆ ಸಾಧ್ಯವೆಂದೆನಿಸುತ್ತದೆ. ಭೀಷ್ಮಪರ್ವದ ಒಟ್ಟು ಶ್ಲೋಕಗಳ ಸಂಖ್ಯೆ ೬೦೨೨. ಇದರಲ್ಲಿ ಮೊದಲನೆಯ ಹನ್ನೆರಡು ಅಧ್ಯಾಯಗಳ ಶ್ಲೋಕಸಂಖ್ಯೆ ೪೮೪ನ್ನು ಕಳೆದರೆ ಉಳಿದ ೫೫೩೮ ಶ್ಲೋಕಗಳನ್ನು ಸಂಜಯನು ಧೃತರಾಷ್ಟ್ರನಿಗೆ ಹೇಳು ತ್ತಾನೆ. ಇಷ್ಟು ಶ್ಲೋಕಗಳ ಯಥಾವತ್ತಾದ ತಾತ್ಪರ್ಯವನ್ನು ಒಂದು ರಾತ್ರಿ ಯಲ್ಲಿ ಹೇಳಬಹುದಾಗಿದೆ.

*   *   *   *

ಭೀಷ್ಮನು ನಿಧನಹೊಂದುತ್ತಲೇ ಕೌರವರು ಪಾಂಡವರೊಡನೆ ಯುದ್ಧಮಾಡಲು ಹೊರಟುಬಿಡುತ್ತಾರೆ. ಮುಂದಿನ ತಮ್ಮ ಸೇನಾನಾಯಕನು ಯಾರೆಂಬ ಬಗೆಗೆ ಅವರು ಮೊದಲು ಸಮಾಲೋಚಿಸುವುದಿಲ್ಲ. ನಾಯಕ ನಿಲ್ಲದ ಸೈನ್ಯವು ಹೇಗಿರುತ್ತದೆಯೆಂಬುದನ್ನು ಇಲ್ಲಿ ವರ್ಣಿಸಲಾಗಿದೆ. ನಾಯಕ ನಿಲ್ಲದೇ ಕಾತರಪಡುತ್ತಿದ್ದ ಕೌರವರು ಕರ್ಣನನ್ನು ಸ್ಮರಿಸಿಕೊಳ್ಳುತ್ತಾರೆ.

ಭೀಷ್ಮಪರ್ವದ ಕಡೆಯಲ್ಲಿ ಕರ್ಣ-ಭೀಷ್ಮರ ರಹಸ್ಯವಾದ ಭೇಟಿಯಿದೆ. ಅದು ರಹಸ್ಯವಾದುದರಿಂದ ಅದರ ವಿಷಯವನ್ನು ಪುನಃ ಪ್ರಸ್ತಾಪಿಸದೇ **ಹತಂ ಭೀಷ್ಮಮಥಾಧಿರಥಿರ್ವಿದಿತ್ವಾ** ಎಂದೇ ಎರಡನೆಯ ಅಧ್ಯಾಯವು ಪ್ರಾರಂಭ ವಾಗುತ್ತದೆ. ಆದರೆ ೨ನೆಯ ಅಧ್ಯಾಯದಲ್ಲಿ ಮೊದಲು ಬರುವ ಶ್ಲೋಕ ಗಳಿಗೂ ಕಡೆಯಲ್ಲಿ ಬರುವ ಶ್ಲೋಕಗಳಿಗೂ ಸಾಮಂಜಸ್ಯವು ಕಾಣುವುದಿಲ್ಲ. ಮೊದಲ ಮೂರು ಶ್ಲೋಕಗಳಲ್ಲಿ ಕರ್ಣನು ಕೌರವಯೋಧರ ಬಳಿಗೆ ಹೋದನೆಂದೇ ಇದೆ. ಅವರೊಡನೆ ಭೀಷ್ಮನ ವಿಷಯವನ್ನು ಮಾತನಾಡಿದ ನೆಂದೂ ಇದೆ. ಕರ್ಣನು ಭೀಷ್ಮನನ್ನು ಮುಕ್ತಕಂಠದಿಂದ ಹೊಗಳುತ್ತಾನೆ. ಅವನ ಮಾತುಗಳನ್ನು ಕೇಳಿ ಕೌರವ ಯೋಧರು ಕಣ್ಣೀರಿಡುವ ಪ್ರಕರಣವೂ ಇದೆ. ಯುಧಿಷ್ಠಿರಾದಿಗಳ ಪರಾಕ್ರಮವನ್ನೂ ಕರ್ಣನು ಬಹಳವಾಗಿ ಪ್ರಶಂಸೆಮಾಡುತ್ತಾನೆ. ಆದರೆ ೧೯ನೆಯ ಶ್ಲೋಕದಿಂದ ಮುಂದಕ್ಕೆ ಕರ್ಣನು ಯುದ್ಧಸನ್ನದ್ಧನಾಗಿಲ್ಲದವನಂತೆ ರಣರಂಗಕ್ಕೆ ಇನ್ನೂ ಹೋಗಿಯೇ ಇಲ್ಲವೋ ಎಂಬಂತೆ ಆಗ ತಾನೇ ತನ್ನ ಅರಮನೆಯಿಂದ ರಥಾಶ್ವಗಳೆಲ್ಲವನ್ನೂ ಸಜ್ಜು ಗೊಳಿಸಿಕೊಂಡು ಹೊರಟಂತೆ ವರ್ಣನೆಯಿದೆ. ೧೯ನೆಯ ಶ್ಲೋಕದವರೆಗೂ ದುರ್ಯೋಧನಾದಿಗಳೊಂದಿಗೆ ಮಾತನಾಡುತ್ತಿದ್ದವನು ೧೯ನೆಯ ಶ್ಲೋಕ ದಿಂದ ಮುಂದಕ್ಕೆ ಸೂತನೊಬ್ಬನನ್ನೇ ಕುರಿತು ಮಾತನಾಡುವ ಪ್ರಕರಣವು ಬರುತ್ತದೆ. ಕಟ್ಟಕಡೆಯಲ್ಲಿ ಕರ್ಣನು ಸುಸಜ್ಜಿತವಾದ ರಥದಲ್ಲಿ ಕುಳಿತು ರಣರಂಗಕ್ಕೆ ಹೋದನೆಂದು ವರ್ಣಿಸಿ ಅಧ್ಯಾಯವು ಮುಕ್ತಾಯವಾಗುತ್ತದೆ. ಕರ್ಣನು ಮೊದಲು ಔಪಚಾರಿಕವಾಗಿ ದುರ್ಯೋಧನಾದಿಗಳನ್ನು ಸಂಧಿಸಿದ ನೆಂದೂ ಅನಂತರ ಪುನಃ ಹಿಂದಿರುಗಿಹೋಗಿ ಸುಸಜ್ಜಿತವಾದ ಮತ್ತು ಸಕಲಸಂಭಾರಸಂವೃತವಾದ ರಥದಲ್ಲಿ ಕುಳಿತು ಬಂದನೆಂದೂ ಇದಕ್ಕೆ ಸಮಾಧಾನವನ್ನು ಹೇಳಬೇಕಾಗುತ್ತದೆ. ಮೂರನೆಯ ಅಧ್ಯಾಯವು

ಸಂಜಯನ ಮಾತಿನಿಂದ ಪ್ರಾರಂಭವಾಗುತ್ತದೆ. ಆದರೆ ಹಿಂದಿನ ಅಧ್ಯಾಯದಲ್ಲಿ ಮುಗಿದ ಪ್ರಕರಣವನ್ನು ಎತ್ತಿಕೊಂಡು ಸಂಜಯನು ಕಥೆಯನ್ನು ಮುಂದುವರಿಸುವುದಿಲ್ಲ. ಪುನಃ ಇಲ್ಲಿ ಸಂಜಯನು ಶರತಲ್ಪದಲ್ಲಿ ಮಲಗಿರುವ ಭೀಷ್ಮನ ವಿಷಯವಾಗಿಯೇ ಹೇಳುತ್ತಾನೆ. ಮೊದಲನೆಯ ಅಧ್ಯಾಯದಲ್ಲಿ ಸಂಜಯನು ಹೇಳಿದನೆಂದು ಬರುವ ೧೪ನೇ ಶ್ಲೋಕದ ಮುಂದುವರಿಕೆಯಂತೆ ಮೂರನೆ ಅಧ್ಯಾಯದ ಈ ಮೊದಲ ಶ್ಲೋಕಗಳಿವೆ. ಈ ಮಧ್ಯದಲ್ಲಿ ಬರುವ ಕೆಲವು ಅಸಂಗತಗಳನ್ನು ಗಮನಿಸಬಹುದಾಗಿದೆ. ಮೊದಲನೆಯ ಅಧ್ಯಾಯದ ೧೭ನೆಯ ಶ್ಲೋಕದಲ್ಲಿ.

**ಶಯನಂ ಕಲ್ಪಯಾಮಾಸುರ್ಭೀಷ್ಮಾಯಾಮಿತಕರ್ಮಣೇ ।**
**ಸೋಪಧಾನಂ ನರವ್ಯಾಘ್ರ ಶರೈಃ ಸಂನತಪರ್ವಭಿಃ ॥**

'ಅಮಿತಪರಾಕ್ರಮಿಯಾದ ಭೀಷ್ಮನಿಗೋಸ್ಕರ ಬಗ್ಗಿದ ಗಿಣ್ಣುಗಳುಳ್ಳ ಬಾಣಗಳಿಂದ ಹಾಸಿಗೆಯನ್ನೂ ಮತ್ತು ತಲೆದಿಂಬನ್ನೂ ರಾಜರು ಸಿದ್ಧಪಡಿಸಿದರು'–ಎಂದಿದೆ.

ಹಿಂದಿನ ಪ್ರಕರಣದಲ್ಲಿ ಶರತಲ್ಪದ ವಿಷಯವು ಹೀಗೆ ಬಂದಿರುವುದಿಲ್ಲ. ಹಿಂದೊಮ್ಮೆ ಪ್ರಸ್ತಾಪಿಸಿರುವಂತೆ ಸೇನಾನಾಯಕನಿಲ್ಲದೇ ಯುದ್ಧಕ್ಕೆ ಹೋಗಿ ಪಾಂಡವರಿಂದ ವಿಧ್ವಂಸಿತರಾದುದು ಅಷ್ಟು ನೈಜವಾಗಿ ಕಾಣುವುದಿಲ್ಲ. ಏಕೆಂದರೆ : ಐದನೆಯ ಅಧ್ಯಾಯದಲ್ಲಿ ದುರ್ಯೋಧನನೇ '**ನ ವಿನಾ ನಾಯಕಂ ಸೇನಾ ಮುಹೂರ್ತಮಪಿ ತಿಷ್ಠತಿ ॥೮॥** ಎಂದೇ ಕರ್ಣನೊಡನೆ ಹೇಳುತ್ತಾನೆ. ಇಂತಹ ರಾಜಕಾರಣಿಯು ಸೇನಾನಾಯಕನೇ ಇಲ್ಲದೇ ಯುದ್ಧವನ್ನಾರಂಭಿಸಿ ಅಪಾರಸೇನೆಯ ಹತ್ಯೆಗೆ ಕಾರಣನಾದನೇ?

ಯದ್ಯಪಿ ಮುಂದೆ ಸೇನಾನಾಯಕರಾಗುವ ದ್ರೋಣರು ಅಲ್ಲಿಯೇ ಇದ್ದರೂ ಕರ್ಣನನ್ನು ಸ್ಮರಿಸಿ ಕರ್ಣ-ಕರ್ಣ ಎಂದು ಕೂಗಿಕೊಂಡುದು, ಈ ಸಂದರ್ಭದಲ್ಲಿ ಅವನು ಯುದ್ಧಮಾಡದಿರಲು ಕಾರಣವನ್ನು ಕುರಿತು ಧೃತರಾಷ್ಟ್ರನೂ ದೀರ್ಘವಾಗಿ ನಿಟ್ಟುಸಿರುಬಿಡುವ ರೀತಿಯಲ್ಲಿ ಹೇಳಿದುದು, ಕರ್ಣ! ಕರ್ಣ! ಎಂದು ಕೂಗಿಕೊಂಡು ವಿಲಪಿಸಿದುದು–ಇವೆಲ್ಲವೂ ಅಸಹಜವೋ ಎಂಬಂತೆ ಕಾಣುತ್ತದೆ. ಎರಡನೆಯ ಅಧ್ಯಾಯದ ವಿಷಯವನ್ನು ಈ ಹಿಂದೆಯೇ ಪ್ರಸ್ತಾಪಿಸಲಾಗಿದೆ. ೩ನೆಯ ಅಧ್ಯಾಯದಿಂದ ಮುಂದಕ್ಕೆ ಈ ವಿಧವಾದ ಅಸಹಜತೆ ಕಾಣುವುದಿಲ್ಲ.

ಮೊದಲನೆಯ ಅಧ್ಯಾಯದ ೧೩ನೆಯ ಶ್ಲೋಕದಲ್ಲಿ 'ಆ ಸಮಯದಲ್ಲಿ ನಮ್ಮ ಕಡೆಯ ರಾಜರು ಏನು ಮಾಡಿದರು?' ಎಂಬ ಧೃತರಾಷ್ಟ್ರನ ಪ್ರಶ್ನೆಗೆ ಸಂಜಯನು :

**ಶೃಣು ರಾಜನ್ನೇಕಮನಾ ವಚನಂ ಬ್ರುವತೋ ಮಮ ।**
**ಯತ್ತೇ ಪುತ್ರಾಸ್ತದಾ ಕಾರ್ಷುರ್ಹತೇ ದೇವವ್ರತೇ ಮೃಧೇ ॥೧೪॥**

ಈ ಶ್ಲೋಕಾನಂತರ ಮೂರನೆಯ ಅಧ್ಯಾಯದ ಮೊದಲನೆಯ ಶ್ಲೋಕವನ್ನು ಓದಿದರೆ ಕಥಾಭಾಗವು ಬಹಳ ಸಮಂಜಸವಾಗಿರುವಂತೆ ಕಾಣುತ್ತದೆ.

**ಶರತಲ್ಪೇ ಮಹಾತ್ಮಾನಂ ಶಯಾನಮಮಿತೌಜಸಮ್ ।**
**ಮಹಾವಾತಸಮೂಹೇನ ಸಮುದ್ರಮಿವ ಶೋಷಿತಮ್ ॥೧॥**

**ದೃಷ್ಟ್ವಾ ಪಿತಾಮಹಂ.... ಜಯಾಶಾ ತವ ಪುತ್ರಾಣಾಂ ಸಮ್ಭಗ್ನಾ ಶರ್ಮ ವರ್ಮ ಚ ॥** ಎಂದು ಸಂಜಯನು ಉತ್ತರಿಸಿ ಮುಂದೆ ಕರ್ಣನು ಬಂದ ವಿಷಯವನ್ನು ಪ್ರಸ್ತಾಪಿಸಿ ಹೇಳುತ್ತಾನೆ. ಕರ್ಣನು ರಣಾಂಗಣಕ್ಕೆ ಬಂದು ಭೀಷ್ಮನೊಡನೆ ಮಾತನಾಡುತ್ತಾನೆ. **ಮರಣಾನ್ತಾನಿ ವೈರಾಣಿ** ಎಂಬುದನ್ನು ಕರ್ಣನು ಆಡಿ ತೋರಿಸುತ್ತಾನೆ. ಭೀಷ್ಮನನ್ನು ಅವನು ಮುಕ್ತಕಂಠದಿಂದ ಹೊಗಳುತ್ತಾನೆ. ಅನಂತರ ಕೃಷ್ಣಾರ್ಜುನರ ಪರಾಕ್ರಮವನ್ನು ಪ್ರಶಂಸಿಸಿ ಅವರನ್ನು ನಿನ್ನ ಹೊರತಾಗಿ ಬೇರೆ ಯಾರೂ ಎದುರಿಸಲಾರರೆಂದು ಹೇಳುತ್ತಾನೆ. ಕಟ್ಟಕಡೆಯದಾಗಿ 'ನಿನ್ನ ಅನುಜ್ಞೆಯನ್ನು ಪಡೆದು ನಾನು ಅರ್ಜುನನನ್ನು ಎದುರಿಸಬಲ್ಲೆನು' ಎನ್ನುತ್ತಾನೆ ಕರ್ಣ. ಇಲ್ಲಿನ ಸಂದರ್ಭದಲ್ಲಿಯೂ ಕರ್ಣನು ಭೀಷ್ಮನಿಗೆ ತೋರುವ ಗೌರವವು ಶ್ಲಾಘ್ಯವಾದುದು. ೪ನೆಯ ಅಧ್ಯಾಯದಲ್ಲಿ ಭೀಷ್ಮನು ಕರ್ಣನ ಪರಾಕ್ರಮವನ್ನು ಪ್ರಶಂಸಿಸಿ ಅವನ ಸಾಹಸಕಾರ್ಯಗಳ ಸಿಂಹಾವಲೋಕನಮಾಡುತ್ತಾನೆ. ದುರ್ಯೋಧನನ ವಿಜಯಕ್ಕಾಗಿ ಯುದ್ಧಮಾಡಲು ಪ್ರೋತ್ಸಾಹಿಸುತ್ತಾನೆ. **ಭವಾನ್ ಪೌತ್ರಸಮೋಽಸ್ಮಾಕಂ**–'ನೀನೂ ನಮಗೆ ಮೊಮ್ಮಗನ ಸಮಾನ' ಎಂದು ಹೇಳಿ ಅವನು ರಾಧೇಯನಲ್ಲವೆಂಬುದನ್ನು ಪುನಃ ಸ್ಪಷ್ಟಪಡಿಸುತ್ತಾನೆ. ಅನಂತರ ಕರ್ಣನು ಭೀಷ್ಮನಿಗೆ ನಮಸ್ಕರಿಸಿ ಪುನಃ ಸರ್ವಧನುಷ್ಮಂತರ ಸಮೀಪಕ್ಕೆ ಹೋಗುತ್ತಾನೆ. ಕರ್ಣನನ್ನು ಕಂಡ ಅವರೆಲ್ಲರೂ ಆನಂದತುಂದಿಲರಾಗಿ ಸಿಂಹನಾದಗಳನ್ನು ಮಾಡುತ್ತಾರೆ. ಇಲ್ಲಿಗೆ ಅಧ್ಯಾಯವು ಮುಗಿಯು

ತ್ತದೆ. ಐದನೆಯ ಅಧ್ಯಾಯದ ಪ್ರಾರಂಭದಲ್ಲಿ ದುರ್ಯೋಧನನು ಕರ್ಣನನ್ನು ನೋಡಿ ಆನಂದಪಡುತ್ತಾನೆ. ತನಗೆ ಹಿತಕರವಾದ ಸಲಹೆಯನ್ನು ನೀಡುವಂತೆ ಕರ್ಣನನ್ನು ದುರ್ಯೋಧನನು ಕೇಳುತ್ತಾನೆ. ಆದರೆ ಮುಂದೆ ದುರ್ಯೋಧನನೇ ಸೇನಾಪತಿಯ ಪ್ರಸ್ತಾಪಮಾಡುತ್ತಾನೆ. ಸೇನಾಪತಿಯಿಲ್ಲದಿದ್ದರೆ ಸೈನ್ಯವು ಎಷ್ಟು ಅನಾಯಕವಾಗುವುದೆಂಬುದನ್ನು ದುರ್ಯೋಧನನು ಹೃದಯಂಗಮವಾಗಿ ಬಣ್ಣಿಸಿ, ಯಾರನ್ನು ಸೇನಾಪತಿಯನ್ನಾಗಿ ಮಾಡಬೇಕೆಂಬ ಬಗೆಗೆ ಸಲಹೆ ನೀಡುವಂತೆ ಕರ್ಣನನ್ನು ಕೇಳುತ್ತಾನೆ. ಆ ಸಮಯದಲ್ಲಿ ಕರ್ಣನು ಎಂತಹವರನ್ನು ಚುನಾಯಿಸಬೇಕೆಂಬುದನ್ನು ಹೇಳಿ ದ್ರೋಣರ ಹೆಸರನ್ನೇ ಸೇನಾಪತ್ಯಕ್ಕೆ ಸೂಚಿಸುತ್ತಾನೆ. ದ್ರೋಣರನ್ನು ಮುಕ್ತಕಂಠದಿಂದ ಹೊಗಳುತ್ತಾನೆ. ಈ ಸಂದರ್ಭದಲ್ಲಿ ಕರ್ಣನ ಬಾಯಿಂದ ಒಂದೇ ಒಂದು ದುರುಕ್ತಿಯಾಗಲೀ ದುರಭಿಮಾನದ ಮಾತಾಗಲೀ ಬರದೇ ಇರುವುದು ಗಮನಾರ್ಹವಾಗಿದೆ. ೬ನೆಯ ಅಧ್ಯಾಯದಲ್ಲಿ ಕರ್ಣನ ಸಲಹೆಯಂತೆ ದುರ್ಯೋಧನನು ದ್ರೋಣರನ್ನು ಸೇನಾಪತ್ಯವನ್ನು ವಹಿಸಿಕೊಳ್ಳಲು ಪ್ರಾರ್ಥಿಸುತ್ತಾನೆ. ಈ ಸಂದರ್ಭದಲ್ಲಿ **ಅಕ್ಷೌಹಿಣ್ಯೋ ದಶೈಕಾ ಚ ವಶಗಾಃ ಸನ್ತು ತೇऽನಘ ॥೮॥** 'ಹನ್ನೊಂದು ಅಕ್ಷೌಹಿಣೀಸೈನ್ಯಗಳೂ ನಿನ್ನ ವಶದಲ್ಲಿವೆ'–ಎಂದು ಹೇಳುತ್ತಾನೆ. ಹತ್ತು ದಿವಸಗಳಲ್ಲಿ ಲಕ್ಷೋಪಲಕ್ಷ ಸೈನಿಕರು ಸತ್ತುಹೋಗಿರುವಾಗ ಹನ್ನೊಂದು ಅಕ್ಷೌಹಿಣೀಸೈನ್ಯಗಳೂ ಹಾಗೆಯೇ ಉಳಿದಿದ್ದುವೇ?–ಎಂದು ಪ್ರಶ್ನೆಯು ಹುಟ್ಟುವುದು ಸಹಜ. ಆದರೆ ಅಕ್ಷೌಹಿಣೀ ಎಂಬುದನ್ನು ಡಿವಿಜನ್ (ಹಲವಾರು ದಳಗಳನ್ನೊಳಗೊಂಡ ಸೈನ್ಯದ ಒಂದು ಶಾಶ್ವತ ವಿಭಾಗ) ಎಂಬ ಅರ್ಥದಲ್ಲಿ ತೆಗೆದುಕೊಳ್ಳಬೇಕು. ಡಿವಿಜನ್‌ನಲ್ಲಿರುವ ಹತ್ತುಸಾವಿರ ಸೈನಿಕರಲ್ಲಿ ಒಂಬತ್ತು ಸಾವಿರ ಸೈನಿಕರು ಹತರಾದರೂ ಸಹ ಡಿವಿಜನ್ ಎಂಬುದು ನಾಶವಾಗುವುದಿಲ್ಲ. ಅದೇ ರೀತಿಯಲ್ಲಿ ಲಕ್ಷೋಪಲಕ್ಷ ಸೈನ್ಯಗಳ ಸಂಹಾರವಾಗಿರಬಹುದು. ಆದರೆ ಹನ್ನೊಂದು ಅಕ್ಷೌಹಿಣಿಯಲ್ಲಿ ಯಾವುದೂ ಸಹ ಸಂಪೂರ್ಣವಾಗಿ ನಾಶಹೊಂದಿರುವುದಿಲ್ಲ. ಆದುದರಿಂದ ಹನ್ನೊಂದು ಅಕ್ಷೌಹಿಣೀಸೈನ್ಯವೆಂಬುದು ಯುದ್ಧದ ಕಡೆಯವರೆಗೂ ಹಾಗೆಯೇ ಉಳಿದಿರುತ್ತದೆ.

೭ನೆಯ ಅಧ್ಯಾಯದಲ್ಲಿ ದ್ರೋಣರಿಗೆ ಸೇನಾಪತ್ಯದ ಪಟ್ಟಾಭಿಷೇಕ

ವಾಗುತ್ತದೆ. ದ್ರೋಣರು ಶಕಟವ್ಯೂಹವನ್ನು ರಚಿಸುತ್ತಾರೆ. ಪಾಂಡವರು ಕ್ರೌಂಚವ್ಯೂಹವನ್ನು ರಚಿಸುತ್ತಾರೆ. ದ್ವಂದ್ವಯುದ್ಧವು ಪ್ರಾರಂಭವಾಗುತ್ತದೆ. ದ್ರೋಣಾಚಾರ್ಯರ ಪರಾಕ್ರಮದ ವರ್ಣನೆಯೊಡನೆ ಅಧ್ಯಾಯವು ಮುಗಿಯುತ್ತದೆ. ೮ನೆಯ ಅಧ್ಯಾಯದಲ್ಲಿಯೂ ದ್ರೋಣರ ಅದ್ಭುತವಾದ ಪರಾಕ್ರಮದ ವರ್ಣನೆಯಿದೆ. ಶತ್ರುಪಕ್ಷದ ಯೋಧರನ್ನು ಧ್ವಂಸಮಾಡುತ್ತಾ ಕಟ್ಟಕಡೆಗೆ ದ್ರೋಣರು ಅಸುನೀಗುತ್ತಾರೆಂಬುದನ್ನು ಸಂಜಯನು ಹೇಳುತ್ತಾನೆ. ಪಾಂಡವರ ವಿಜಯದೊಡನೆ ಈ ಅಧ್ಯಾಯವು ಮುಗಿಯುತ್ತದೆ. ಇಲ್ಲಿ ಎಷ್ಟು ದಿವಸಗಳು ಯುದ್ಧಮಾಡಿದನಂತರ ದ್ರೋಣರು ಅಸುನೀಗಿದರೆಂಬ ವಿಷಯವನ್ನು ಸಂಜಯನು ಹೇಳಿಲ್ಲ. ದ್ರೋಣರ ಅಭಿಷೇಕ, ಶಕಟ ವ್ಯೂಹರಚನೆ ಅವರ ಪರಾಕ್ರಮದ ಸೂಕ್ಷ್ಮಪರಿಚಯ–ಇಷ್ಟುಮಾತ್ರವನ್ನೇ ಈ ಪ್ರಕರಣದಲ್ಲಿ ಹೇಳಲಾಗಿದೆ. ೯ನೆಯ ಅಧ್ಯಾಯದಲ್ಲಿ ಧೃತರಾಷ್ಟ್ರನು ದ್ರೋಣರ ಸಲುವಾಗಿ ದುಃಖಿಸುತ್ತಾನೆ. ಅವರ ಪರಾಕ್ರಮವನ್ನು ಮುಕ್ತಕಂಠದಿಂದ ಹೊಗಳುತ್ತಾನೆ. ೧೦ನೆಯ ಅಧ್ಯಾಯದಲ್ಲಿ ಒಂದು ಸ್ವಾರಸ್ಯವಿದೆ. 'ದ್ರೋಣರ ಸಮೀಪಕ್ಕೆ ಬರುತ್ತಿದ್ದ ಯುಧಿಷ್ಠಿರಾದಿಗಳನ್ನು ನಮ್ಮ ಕಡೆಯ ಯಾವ ಯೋಧರು ತಡೆದರು?'–ಎಂಬ ಪ್ರಶ್ನೆಯನ್ನು ಕೇಳುವ ವ್ಯಾಜದಿಂದ ಧೃತರಾಷ್ಟ್ರನು ಯುಧಿಷ್ಠಿರನೇ ಮೊದಲಾದ ಎಲ್ಲ ಯೋಧರ ಪರಿಚಯವನ್ನೂ ವಾಚಕರಿಗೆ ಮಾಡಿಕೊಡುತ್ತಾನೆ.

ಹೀಗೆ ಪರಿಚಯಮಾಡಿಕೊಡುವಾಗ ದ್ರೌಪದಿಯ ಐವರು ಮಕ್ಕಳ ವಿಷಯವನ್ನು ಹೇಳುತ್ತಾ :

**ಏತೇ ದ್ವಾದಶ ವರ್ಷಾಣಿ ಕ್ರೀಡಾಮುತ್ಸೃಜ್ಯ ಬಾಲಕಾಃ ।**
**ಅಸ್ತ್ರಾರ್ಥಮವಸನ್ಭೀಷ್ಮೇ ಬಿಭ್ರತೋ ವ್ರತಮುತ್ತಮಮ್ ॥೫೨॥**

ಹನ್ನೆರಡುವರ್ಷಗಳ ಕಾಲ ಭೀಷ್ಮನಲ್ಲಿಯೇ ಇವರು ಅಸ್ತ್ರಾಭ್ಯಾಸ ಮಾಡುತ್ತಿದ್ದರು–ಎಂದು ಹೇಳಿದ್ದಾನೆ. ಆದರೆ ಅರಣ್ಯದಿಂದ ದ್ರೌಪದೇಯ ರನ್ನು ಧೃಷ್ಟದ್ಯುಮ್ನನು ಕರೆದುಕೊಂಡು ಹೋದನೆಂದು ವನಪರ್ವದಲ್ಲಿದೆ.

**ತತಃ ಪ್ರಯಾತೇ ದಾಶಾರ್ಹೇ ಧೃಷ್ಟದ್ಯುಮ್ನೋಽಪಿ ಪಾರ್ಷತಃ ।**
**ದ್ರೌಪದೇಯಾನುಪಾದಾಯ ಪ್ರಯಯೌ ಸ್ವಪುರಂ ತದಾ ॥**

ವನಪರ್ವ-ಅಧ್ಯಾಯ ೨೨-ಶ್ಲೋಕ ೪೯

ಎಂಬುದಾಗಿದೆ. ಆದುದರಿಂದ ಭೀಷ್ಮರಲ್ಲಿಗೆ ಪಾಂಡವೇಯರು ಅಸ್ತ್ರ ವಿದ್ಯಾಭ್ಯಾಸಕ್ಕಾಗಿ ಯಾವಾಗ ಹೋದರು?–ಎಂಬುದು ಒಂದು ಜಿಜ್ಞಾಸೆ ಯಾಗಿದೆ.

೧೧ನೆಯ ಅಧ್ಯಾಯದಲ್ಲಿ ಧೃತರಾಷ್ಟ್ರನು, ೧೦ನೆಯ ಅಧ್ಯಾಯದಲ್ಲಿ ಪಾಂಡವಯೋಧರ ಪರಿಚಯವನ್ನು ಮಾಡಿಕೊಟ್ಟಿರುವ ರೀತಿಯಲ್ಲೇ ಶ್ರೀಕೃಷ್ಣನ ಪರಿಚಯವನ್ನೂ ಮಾಡಿಕೊಟ್ಟಿದ್ದಾನೆ. ಅಧ್ಯಾಯಪೂರ್ತಿಯಾಗಿ ಕೃಷ್ಣಾರ್ಜುನರ ಭವ್ಯವಾದ ಪ್ರಶಂಸೆಯಿದೆ. ೧೨ನೆಯ ಅಧ್ಯಾಯದಲ್ಲಿ ಸ್ವಾರಸ್ಯವಾದ ದ್ರೋಣವರಪ್ರದಾನದ ಪ್ರಸಂಗವಿದೆ. ದುರ್ಯೋಧನನ ಆಂತ ರ್ಯವು ಇಲ್ಲಿ ಬಹಿರಂಗವಾಗಿದೆ. ಅಂತೆಯೇ ದ್ರೋಣರು ಕೊಟ್ಟ ವರಕ್ಕೆ ತಿದ್ದುಪಡಿ ಸೂಚಿಸಿದುದೂ ಹೆಚ್ಚು ಸ್ವಾರಸ್ಯವಾಗಿದೆ. ಇಲ್ಲಿರುವ ರಾಜಕೀಯ ವಿಷಯಗಳು ಗಮನಾರ್ಹವಾಗಿವೆ. ೧೩ನೆಯ ಅಧ್ಯಾಯದಲ್ಲಿ ಅರ್ಜುನನು ಯುಧಿಷ್ಠಿರನಿಗೆ ಆಶ್ವಾಸನೆಯನ್ನು ಕೊಡುತ್ತಾನೆ. ದ್ರೋಣರ ಪರಾಕ್ರಮದ ವರ್ಣನೆಯು ಮುಂದುವರಿಯುತ್ತದೆ. ರಕ್ತನದಿಯ ವರ್ಣನೆಯಿದೆ. ಅನಂತರ ದ್ವಂದ್ವಯುದ್ಧದ ವರ್ಣನೆಯಿದೆ. ಪೌರವನಿಗೂ-ಅಭಿಮನ್ಯುವಿಗೂ ಭಯಂಕರವಾದ ಯುದ್ಧವಾಗುತ್ತದೆ. ಅನಂತರ ಪೌರವನ ರಕ್ಷಣೆಗಾಗಿ ಬಂದ ಜಯದ್ರಥನಿಗೂ–ಅಭಿಮನ್ಯುವಿಗೂ ಘೋರಯುದ್ಧವಾಗುತ್ತದೆ. ಅನಂತರ ಶಲ್ಯನಿಗೂ–ಅಭಿಮನ್ಯುವಿಗೂ ಯುದ್ಧವಾಗುತ್ತದೆ. ಶಲ್ಯನ ಸಾರಥಿಯನ್ನು ಅಭಿಮನ್ಯುವು ಸಂಹರಿಸುತ್ತಾನೆ. ಪಾಂಡವರ ಕಡೆಯವರು ಜಯಘೋಷ ಮಾಡುತ್ತಾರೆ. ಪುನಃ ಶಲ್ಯನು ಅಭಿಮನ್ಯುವಿನ ಮೇಲೆ ದಾಳಿನಡೆಸುತ್ತಾನೆ.

೧೪ನೆಯ ಅಧ್ಯಾಯದಲ್ಲಿ ಶಲ್ಯನು ಗದಾಪಾಣಿಯಾಗಿ ಅಭಿಮನ್ಯುವಿನ ಮೇಲೆ ಯುದ್ಧಕ್ಕೆ ಹೋಗುತ್ತಾನೆ. ಇದನ್ನ ನೋಡಿದ ಭೀಮನು ಅಭಿಮನ್ಯು ವನ್ನು ತಡೆದು ತಾನೇ ಶಲ್ಯನ ಮೇಲೆ ಯುದ್ಧಕ್ಕೆ ಹೋಗುತ್ತಾನೆ. ಗದಾ ಯುದ್ಧದ ವಿಪುಲವರ್ಣನೆಯಿದೆ. ಕಡೆಗೆ ಶಲ್ಯನು ಮೂರ್ಛಿತನಾಗಿ ಬಿದ್ದು ಪರಾಜಿತನಾಗುತ್ತಾನೆ.

೧೬ನೆಯ ಅಧ್ಯಾಯದಲ್ಲಿ ಮೊಟ್ಟಮೊದಲನೆಯವನಾಗಿ ಕರ್ಣನ ಮಗ ನಾದ ವೃಷಸೇನನು ರಣರಂಗದಲ್ಲಿ ಕಾಣಿಸಿಕೊಳ್ಳುತ್ತಾನೆ. ಅವನ ಪರಾ ಕ್ರಮದ ವರ್ಣನೆಯಿದೆ. ಶತಾನೀಕನಿಗೂ–ವೃಷಸೇನನಿಗೂ ಪ್ರಾರಂಭವಾದ

ಯುದ್ಧವು ಅದ್ಭುತವಾಗಿ ಬೆಳೆದು ಕಡೆ-ಕಡೆಗೆ ಕೌರವರು ಸೋತು ಪಲಾಯನಮಾಡುತ್ತಾರೆ. ದ್ರೋಣರು ಅವರೆಲ್ಲರಿಗೂ ಉತ್ಸಾಹವನ್ನು ತುಂಬುತ್ತಾ ಪಾಂಡವರ ಸೈನ್ಯದೊಳಕ್ಕೆ ನುಗ್ಗಿ ವಿಧ್ವಂಸನಕ್ರಿಯೆಯನ್ನು ಆರಂಭಿಸುತ್ತಾರೆ. ತಾವು ದುರ್ಯೋಧನನಿಗೆ ಪ್ರತಿಜ್ಞೆಮಾಡಿಕೊಟ್ಟಿದ್ದಂತೆ ಯುಧಿಷ್ಠಿರನನ್ನು ಬಂಧಿಸುವುದೇ ಅವರ ಲಕ್ಷ್ಯವಾಗಿರುತ್ತದೆ. ಯುಧಿಷ್ಠಿರನ ಕಡೆಯ ಯೋಧರೆಲ್ಲರನ್ನೂ ದ್ರೋಣರು ನಿಶಿತವಾದ ಬಾಣಗಳಿಂದ ಪ್ರಹರಿಸುತ್ತಲೇ ಇರುತ್ತಾರೆ. ಧರ್ಮರಾಜನ ರಕ್ಷಕನಾಗಿದ್ದ ಕುಮಾರನನ್ನು ಪರಾಜಯಗೊಳಿಸಿ ಸಿಂಹಸೇನ ಮತ್ತು ವ್ಯಾಘ್ರದತ್ತರನ್ನೂ ಸಂಹರಿಸಿ ಯುಧಿಷ್ಠಿರನ ಸಮೀಪಕ್ಕೆ ಧಾವಿಸುತ್ತಾರೆ. 'ಯುಧಿಷ್ಠಿರನ ಬಂಧನವಾಗಿ ಹೋಯಿತು'—ಎಂದು ಪಾಂಡವರ ಕಡೆಯ ಸೈನಿಕರೆಲ್ಲರೂ ಹಾಹಾಕಾರ ಮಾಡುತ್ತಿರುವ ಸಮಯಕ್ಕೆ ಸರಿಯಾಗಿ ಅರ್ಜುನನು ಬರುತ್ತಾನೆ. ಜಯವು ತಿರುವು-ಮುರುವಾಗುತ್ತದೆ. ಪಾಂಡವರ ವಿಜಯದೊಡನೆ ಅಂದಿನ ಯುದ್ಧವು ಮುಗಿಯುತ್ತದೆ. ಪಾಂಡವರು ಹೆಚ್ಚು ಜಯಗಳಿಸಿದರೂ ಇಬ್ಬರು ಹೆಸರಾಂತ ಯೋಧರನ್ನು ಕಳೆದುಕೊಳ್ಳುತ್ತಾರೆ. ಹನ್ನೊಂದನೆಯ ದಿವಸದ ಯುದ್ಧವೆಂದು ಯಾರೂ ಆ ದಿನದ ಯುದ್ಧವನ್ನು ಕರೆದಿಲ್ಲ. ಸಾಯಂಕಾಲವಾಗಿ ಸೈನಿಕರು ಶಿಬಿರಗಳಿಗೆ ಹಿಂದಿರುಗಿದುದರಿಂದ ಅದು ಹನ್ನೊಂದನೆಯ ದಿವಸದ ಯುದ್ಧವೆಂದು ಪರಿಗಣಿಸಬಹುದಾಗಿದೆ.

* * * *

೧೭ನೆಯ ಅಧ್ಯಾಯ | ಸಂಶಪ್ತಕವಧಪರ್ವ

## ಸುಶರ್ಮನೇ ಮೊದಲಾದ ಸಂಶಪ್ತಕವೀರರ ಪ್ರತಿಜ್ಞೆ: ಅರ್ಜುನನು ಅವರೊಡನೆ ಯುದ್ಧಮಾಡಲು ಹೋದುದು

ಸಂಜಯನು ಹನ್ನೊಂದನೆಯ ದಿವಸದ ಯುದ್ಧವನ್ನು ಮುಗಿಸಿ ಸೈನಿಕರು ಶಿಬಿರಗಳಿಗೆ ತಲುಪಿದನಂತರದ ವಾರ್ತೆಯನ್ನು ಹೇಳುತ್ತಾನೆ :

"ಮಹಾರಾಜ! ಉಭಯಪಕ್ಷಗಳ ಸೈನ್ಯಗಳೂ ಶಿಬಿರಗಳಿಗೆ ಹಿಂದಿರುಗಿ ಸೈನಿಕರಿಗೆ ನಿಯಮಿತವಾದ ರೀತಿಯಲ್ಲಿ ಅನೇಕವಿಭಾಗಗಳನ್ನೂ, ಅನೇಕಗುಲ್ಮಗಳನ್ನು ಮಾಡಿಕೊಂಡು ಕುಳಿತರು. ಅಂದಿನ ದಿವಸದ ಯುದ್ಧದ ಫಲಿತಾಂಶ

ವನ್ನು ನೋಡಿ ದ್ರೋಣರ ಮನಸ್ಸು ವ್ಯಾಕುಲಗೊಂಡಿದ್ದಿತು. ಸೈನ್ಯಗಳೆಲ್ಲವನ್ನೂ ರಣಾಂಗಣದಿಂದ ಹಿಂದಕ್ಕೆ ಕರೆಸಿಕೊಂಡನಂತರ ದ್ರೋಣರು ಲಜ್ಜಾನ್ವಿತರಾಗಿ ದುರ್ಯೋಧನನನ್ನು ಕುರಿತು ಈ ಮಾತುಗಳನ್ನು ಹೇಳಿದರು : "ದುರ್ಯೋಧನ! ಧನಂಜಯನು ಯುಧಿಷ್ಠಿರನ ಬೆಂಬಲಿಗನಾಗಿ ನಿಂತಿದ್ದೇ ಆದರೆ ದೇವತೆಗಳಿಂದಲೂ ಸಹ ರಾಜನನ್ನು ಬಂಧಿಸಲು ಸಾಧ್ಯ ವಾಗುವುದಿಲ್ಲವೆಂಬ ವಿಷಯವನ್ನು ನಾನು ನಿನಗೆ ಈ ಹಿಂದೆಯೇ ಹೇಳಿದ್ದೆನು. ನೀವೆಲ್ಲರೂ ಸೇರಿ ಎಷ್ಟೇ ಪ್ರಯತ್ನಿಸಿದರೂ ಅರ್ಜುನನು, ನಾನು ಹೇಳಿದ್ದ ವಿಷಯವನ್ನು ಸತ್ಯಗೊಳಿಸಿದನು. (ಯುಧಿಷ್ಠಿರನ ಬಂಧನವು ಕರಗತವಾಯಿತೆಂದು ನಮ್ಮ ಸೈನಿಕರೆಲ್ಲರೂ ಭಾವಿಸಿದ್ದ ಸಮಯಕ್ಕೆ ಸರಿಯಾಗಿ ಅರ್ಜುನನು ಬಂದು ನಮ್ಮ ಪ್ರಯತ್ನಗಳೆಲ್ಲವನ್ನೂ ಕ್ಷಣಮಾತ್ರದಲ್ಲಿ ನಿಷ್ಫಲಗೊಳಿಸಿಬಿಟ್ಟನು.) ಆದುದರಿಂದ ನನ್ನ ಮಾತನ್ನು ನೀವು ಸಂದೇಹಿಸ ಬೇಡಿರಿ. ಕೃಷ್ಣಾರ್ಜುನರು ನನ್ನಿಂದ ಅಜೇಯರು. ಅವರನ್ನು ಜಯಿಸಲು ನನ್ನಿಂದ ಸಾಧ್ಯವಾಗುವುದಿಲ್ಲ. ನಾನು ಹಿಂದೆ ಹೇಳಿದುದನ್ನೇ ಪುನಃ ನಿನ್ನ ಗಮನಕ್ಕೆ ತರಲು ಇಚ್ಛಿಸುತ್ತೇನೆ :

**ಅಪನೀತೇ ತು ಯೋಗೇನ ಕೇನಚಿಚ್ಛ್ವೇತವಾಹನೇ ।**
**ತತ ಏಷ್ಯತಿ ಮೇ ರಾಜನ್ವಶಮೇಷ ಯುಧಿಷ್ಠಿರಃ ॥೫॥**

ಯಾವುದಾದರೂ ಉಪಾಯದಿಂದ ಅರ್ಜುನನು ಬೇರೆಯ ಕಡೆಗೆ ಸೆಳೆಯಲ್ಪಟ್ಟನಾದರೆ ಅನಂತರ ಯುಧಿಷ್ಠಿರನು ನನ್ನ ಬಂದಿಯಾಗುತ್ತಾನೆ. ಅರ್ಜುನನಿಲ್ಲದಿದ್ದರೆ ಯುಧಿಷ್ಠಿರನನ್ನು ಜೀವಿತಬಂದಿಯಾಗಿ ಹಿಡಿಯ ಬಹುದು.

**ಕಶ್ಚಿದಾಹೂಯ ತಂ ಸಂಖ್ಯೇ ದೇಶಮನ್ಯಂ ಪ್ರಕರ್ಷತು ।**
**ತಮಜಿತ್ವಾ ನ ಕೌನ್ತೇಯೋ ನಿವರ್ತೇತ ಕಥಂಚನ ॥೬॥**

ಅರ್ಜುನನು ಈ ರಣಾಂಗಣದಲ್ಲಿಯೇ ಇರಕೂಡದು. ಯಾವ ನಾದರೂ ನಮ್ಮ ಕಡೆಯ ಯೋಧನು ಅರ್ಜುನನನ್ನು ಯುದ್ಧಮಾಡಲು ಬೇರೆಯ ಕಡೆಗೆ ಆಹ್ವಾನಿಸಬೇಕು. ಹಾಗೆ ಆಹ್ವಾನಿಸಿದ್ದೇ ಆದರೆ ಅರ್ಜುನನು ಅವನನ್ನು ಜಯಿಸದೇ ಯುದ್ಧದಿಂದ ಹಿಂದಿರುಗುವುದಿಲ್ಲ.

**ಏತಸ್ಮಿನ್ನನ್ತರೇ ಶೂನ್ಯೇ ಧರ್ಮರಾಜಮಹಂ ನೃಪ ।**
**ಗೃಹೀಷ್ಯಾಮಿ ಚಮೂಂ ಭಿತ್ತ್ವಾ ಧೃಷ್ಟದ್ಯುಮ್ನಸ್ಯ ಪಶ್ಯತಃ ॥೭॥**

ರಣಾಂಗಣವು ಅರ್ಜುನನಿಂದ ಶೂನ್ಯವಾಗಿರುವ ಆ ಸಮಯದಲ್ಲಿ ಪಾಂಡವರ ಕಡೆಯ ಸೇನಾಪತಿಯಾದ ಧೃಷ್ಟದ್ಯುಮ್ನನೂ ನೋಡುತ್ತಿರುವಂತೆಯೇ ಶತ್ರುಸೈನ್ಯವನ್ನು ಭೇದಿಸಿ ಧರ್ಮರಾಜನನ್ನು ನಾನು ಬಂಧಿಸುತ್ತೇನೆ. ಆದರೆ ನಾನಿಲ್ಲಿ ಒಂದು ಮಾತನ್ನು ಹೇಳಬೇಕಾಗಿದೆ. ಅರ್ಜುನನಿಂದ ವಿಹೀನನಾದ ಯುಧಿಷ್ಠಿರನು ನಾನು ಅವನ ಬಳಿಗೆ ಹೋಗುತ್ತಿರುವುದನ್ನು ನೋಡಿ ಭೀತನಾಗಿ ರಣಾಂಗಣವನ್ನು ಬಿಟ್ಟು ಓಡಿಹೋಗಬಾರದು. ಯುಧಿಷ್ಠಿರನ ಮೇಲೆ ಆಕ್ರಮಣಮಾಡಲು ಹೋದಾಗ ಅವನೂ ನನ್ನನ್ನೆದುರಿಸಿ ಯುದ್ಧಮಾಡಬೇಕು. ಹಾಗೆ ಯುದ್ಧಮಾಡಿದ್ದೇ ಆದರೆ ಅವನು ನನ್ನ ಬಂದಿಯಾದನೆಂದೇ ಭಾವಿಸು. ಅರ್ಜುನನಿಂದ ವಿಹೀನನಾದ ಯುಧಿಷ್ಠಿರನು ಕೇವಲ ಒಂದು ಮುಹೂರ್ತಕಾಲ ನನ್ನೊಡನೆ ಯುದ್ಧಮಾಡಿದರೂ ಸಾಕು, ಧರ್ಮಪುತ್ರನಾದ ಯುಧಿಷ್ಠಿರನನ್ನು ಅವನ ಪರಿವಾರದೊಡನೆ ಹಿಡಿದು ತರುತ್ತೇನೆ. ಒಂದು ವೇಳೆ ಯುಧಿಷ್ಠಿರನು ಆ ಸಮಯದಲ್ಲಿ ಪಲಾಯನವನ್ನೇ ಮಾಡಿದರೆ ಅವನ ಬಂಧನಕ್ಕಿಂತಲೂ ಅವನನ್ನು ಪರಾಜಯಗೊಳಿಸಿ ಓಡಿಸಿದುದರಿಂದ ಪ್ರಾಪ್ತವಾಗುವ ವಿಜಯವು ಮತ್ತೂ ವಿಶೇಷವಾದಂತಾಗುತ್ತದೆ.”

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

“ಮಹಾರಾಜ! ದ್ರೋಣರ ಮಾತನ್ನು ಕೇಳಿ ಸಹೋದರರಿಂದೊಡಗೂಡಿದ ತ್ರಿಗರ್ತಾಧಿಪತಿಯಾದ ಸುಶರ್ಮನು ದುರ್ಯೋಧನನೊಡನೆ ಈ ಮಾತುಗಳನ್ನು ಹೇಳಿದನು :

“ಮಹಾರಾಜ! ಗಾಂಡೀವಧನ್ವನಾದ ಅರ್ಜುನನು ನಮ್ಮನ್ನು ಯಾವಾಗಲೂ ಅವಮಾನಿಸುತ್ತಲೇ ಇರುತ್ತಾನೆ. ನಿಜವಾಗಿ ಹೇಳುವುದಾದರೆ ನಾವು ಅವನ ವಿಷಯದಲ್ಲಿ ಯಾವಾಗಲೂ ಅಪರಾಧಮಾಡಿರುವುದಿಲ್ಲ. ಹೀಗಿದ್ದರೂ ಸಹ ಅವನು ನಮ್ಮ ವಿಷಯದಲ್ಲಿ ಅಪರಾಧವನ್ನೆಸಗುತ್ತಲೇ ಇದ್ದಾನೆ. ಅವನು ಮಾಡಿರುವ ಬಗೆ-ಬಗೆಯ ಅಪರಾಧಗಳೆಲ್ಲವನ್ನೂ ಸ್ಮರಿಸುತ್ತಾ ನಾವು ಕ್ರೋಧಾಗ್ನಿಯಿಂದ ದಹಿಸಲ್ಪಟ್ಟವರಾಗಿ ರಾತ್ರಿಯ ವೇಳೆಯಲ್ಲಿ ನಿದ್ರೆಯನ್ನೇ ಮಾಡುತ್ತಿಲ್ಲ. ನಮ್ಮ ಸೌಭಾಗ್ಯದ ಕಾರಣದಿಂದಲೇ ಈಗ ಅಸ್ತ್ರಸಂಪನ್ನನಾದ

ಅರ್ಜುನನು ನಮ್ಮ ದೃಷ್ಟಿಗೋಚರನಾಗಿದ್ದಾನೆ. ಈ ಸುಸಮಯದಲ್ಲಿ ನಾವು ನಮ್ಮ ಮನಸ್ಸಿನಲ್ಲಿರುವ ಆಶೆಯನ್ನು ಪೂರೈಸಿಕೊಂಡುಬಿಡುತ್ತೇವೆ. ಅದಕ್ಕೆ ತಕ್ಕಂತೆ ಕಾರ್ಯಮಾಡುತ್ತೇವೆ. ಈ ಕಾರ್ಯವು ನಮಗೂ ಯಶಸ್ಕರವಾಗಿದೆ. ನಿಮಗೂ ಇದರಿಂದ ಒಳ್ಳೆಯದಾಗಬಹುದು. (ಯುಧಿಷ್ಠಿರನ ಬಂಧನಕ್ಕೂ ಈ ನಮ್ಮ ಕಾರ್ಯವು ಸಹಕಾರಿಯಾಗಬಹುದು.) ರಣಾಂಗಣದಿಂದ ಹೊರಕ್ಕೆ ಅರ್ಜುನನನ್ನು ಸೆಳೆದುಕೊಂಡುಹೋಗಿ ನಾವೆಲ್ಲರೂ ಸೇರಿ ಅವನನ್ನು ಸಂಹಾರಮಾಡುತ್ತೇವೆ.

**ಅದ್ಯಾಸ್ತ್ವನರ್ಜುನಾ ಭೂಮಿರತ್ರಿಗರ್ತಾಥ ವಾ ಪುನಃ ।**
**ಸತ್ಯಂ ತೇ ಪ್ರತಿಜಾನೀಮೋ ನೈತನ್ಮಿಥ್ಯಾ ಭವಿಷ್ಯತಿ ॥೧೬॥**

ಈಗ ಭೂಮಿಯು ಅರ್ಜುನನಿಂದ ರಹಿತವಾದುದಾದರೂ ಆಗುತ್ತದೆ. ತ್ರಿಗರ್ತರಿಂದ ರಹಿತವಾದುದಾದರೂ ಆಗುತ್ತದೆ. (ಇನ್ನು ಮುಂದೆ ಅರ್ಜುನ ಮತ್ತು ತ್ರಿಗರ್ತರು ಭೂಮಿಯ ಮೇಲೆ ಒಟ್ಟಾಗಿ ಉಳಿದಿರಲಾರರು. ಅವನು ಸಾಯಬೇಕು; ಇಲ್ಲದಿದ್ದರೆ ನಾವು ಸಾಯಬೇಕು.) ಈ ವಿಷಯವನ್ನು ನಾವು ನಿನಗೆ ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತಿದ್ದೇವೆ. ಈ ಮಾತು ಖಂಡಿತವಾಗಿಯೂ ಸುಳ್ಳಾಗುವುದಿಲ್ಲ."

ಮಹಾರಾಜ! ಸತ್ಯರಥನು (ಸುಶರ್ಮನು) ಹೀಗೆ ಪ್ರತಿಜ್ಞೆಮಾಡಿದ ನಂತರ ಸತ್ಯವರ್ಮಾ. ಸತ್ಯವ್ರತ, ಸತ್ಯೇಷು, ಸತ್ಯಕರ್ಮಾ ಮತ್ತು ಮೊದಲನೆಯವನಾದ ಸತ್ಯರಥ–ಈ ಐವರು ಸಹೋದರರೂ ಹತ್ತುಸಾವಿರ ರಥಿಗಳೊಡನೆ ಸೇರಿ ಅರ್ಜುನನೊಡನೆ ಯುದ್ಧಮಾಡಲು ಶಪಥಮಾಡುವುದಕ್ಕಾಗಿ ತೆರಳಿದರು. ಮಾಲವರೂ, ತುಂಡಿಕೇರರೂ ಮೂವತ್ತು ಸಾವಿರ ರಥಿಕರೊಡನೆ ಹೊರಟರು. ಪ್ರಸ್ಥಲಾಧಿಪತಿಯಾದ, ನರವ್ಯಾಘ್ರನಾದ, ತ್ರಿಗರ್ತರಾಜನಾದ ಸುಶರ್ಮನು ಮಾವೇಲ್ಲಕರಿಂದಲೂ, ಲಲಿತ್ಥರಿಂದಲೂ, ಮದ್ರಕರಿಂದಲೂ ಮತ್ತು ಸತ್ಯವರ್ಮನೇ ಮೊದಲಾದ ತನ್ನ ಸಹೋದರರಿಂದಲೂ ಕೂಡಿಕೊಂಡು ಹತ್ತುಸಾವಿರ ರಥಸೈನಿಕರೊಡನೆ ಪ್ರತಿಜ್ಞಾವಿಧಿಗಾಗಿ ತೆರಳಿದನು. ನಾನಾದೇಶಗಳಿಂದ ಬಂದಿದ್ದ ಹತ್ತುಸಾವಿರ ಶ್ರೇಷ್ಠಮಹಾರಥಿಗಳು ಶಪಥವನ್ನು ಕೈಗೊಳ್ಳಲು ಸಿದ್ಧರಾದರು. ಅನಂತರ ಯಜ್ಞೇಶ್ವರನನ್ನು ವಿಧಿಪೂರ್ವಕವಾಗಿ ಪ್ರತಿಷ್ಠಾಪಿಸಿ, ನಾಯಕರೆಲ್ಲರೂ ಪ್ರತ್ಯೇಕ-ಪ್ರತ್ಯೇಕವಾಗಿ

ಹೋಮಮಾಡಿ, ಪ್ರತಿಜ್ಞಾವಿಧಿಗೆ ಉಕ್ತವಾಗಿದ್ದ ದರ್ಭೆಯ ವಸ್ತ್ರಗಳನ್ನು ಉಟ್ಟುಕೊಂಡು, ವಿಚಿತ್ರವಾದ ಕವಚಗಳನ್ನೂ ತೊಟ್ಟುಕೊಂಡರು. ಅದಕ್ಕೆ ಮೊದಲು ಅವರು ಮೈಗೆಲ್ಲಾ ತುಪ್ಪವನ್ನು ಬಳಿದುಕೊಂಡಿದ್ದರು. ಮೌಂಜಿಯ ಹುಲ್ಲನ್ನು ಸೊಂಟಕ್ಕೆ ಬಿಗಿದುಕೊಂಡು ಲಕ್ಷೋಪಲಕ್ಷ ಸುವರ್ಣನಾಣ್ಯಗಳನ್ನು ಬ್ರಾಹ್ಮಣರಿಗೆ ದಕ್ಷಿಣೆಯಾಗಿ ಕೊಟ್ಟರು. ವ್ರತದೀಕ್ಷೆಯನ್ನು ಕೈಗೊಂಡಿದ್ದ ಆ ಯೋಧರೆಲ್ಲರೂ ಯಜ್ಞಮಾಡಿದವರಾಗಿದ್ದರು. ಪುತ್ರವಂತರಾಗಿದ್ದರು. ಪುಣ್ಯಲೋಕಗಳಿಗೆ ಹೋಗಲು ಅಧಿಕಾರವುಳ್ಳವರಾಗಿದ್ದರು. ಅವರು ತಾವು ಮಾಡಬೇಕಾಗಿದ್ದ ಕರ್ತವ್ಯಗಳೆಲ್ಲವನ್ನೂ ಮಾಡಿ ಮುಗಿಸಿದ್ದರು. ಶರೀರಗಳನ್ನು ತ್ಯಜಿಸಲು ಸಿದ್ಧರಾಗಿದ್ದ ಅವರು ಯಶಸ್ಸಿಗಾಗಿ ಅಥವಾ ವಿಜಯಕ್ಕಾಗಿ ತಮ್ಮ ಆತ್ಮಾರ್ಪಣೆಯನ್ನು ಮಾಡಿಕೊಂಡರು. ಬ್ರಹ್ಮಚರ್ಯದ ಪಾಲನೆಯಿಂದಲೂ, ವೇದಗಳ ಅಧ್ಯಯನದಿಂದಲೂ, ಯಥೇಚ್ಛವಾಗಿ ದಕ್ಷಿಣೆಗಳನ್ನು ಕೊಡಬೇಕಾಗಿರುವ ಯಜ್ಞಗಳಿಂದಲೂ–ಕಾಲಾಂತರದಲ್ಲಿ ಲಭ್ಯವಾಗುವ ಪುಣ್ಯಲೋಕಗಳನ್ನು ಧರ್ಮಯುದ್ಧದ ಮೂಲಕವಾಗಿ ಬಹಳ ಬೇಗ ಪಡೆದುಕೊಳ್ಳಲು ಅವರು ಇಚ್ಛಿಸಿದ್ದರು. ಸುವರ್ಣನಾಣ್ಯಗಳನ್ನೂ, ಗೋವುಗಳನ್ನೂ, ವಸ್ತ್ರಗಳನ್ನೂ ಪ್ರತ್ಯೇಕ-ಪ್ರತ್ಯೇಕವಾಗಿ ಬ್ರಾಹ್ಮಣರಿಗೆ ದಾನ ಮಾಡಿ ಅವರನ್ನು ತೃಪ್ತಿಪಡಿಸಿ, ಪರಸ್ಪರವಾಗಿ ಸವಿಮಾತುಗಳನ್ನಾಡಿಕೊಂಡು, ಯಜ್ಞೇಶ್ವರನನ್ನು ವಿಧಿಪೂರ್ವಕವಾಗಿ ಪ್ರತಿಷ್ಠಾಪಿಸಿ, ರಣವ್ರತವನ್ನು ಮೇಲೆ ಹೇಳಿದ ರೀತಿಯಲ್ಲಿ ಕೈಗೊಂಡು, ದೃಢನಿಶ್ಚಯರಾಗಿ ಯಜ್ಞೇಶ್ವರನ ಸಮ್ಮುಖದಲ್ಲಿ ತ್ರಿಗರ್ತಯೋಧರು ಪ್ರತಿಜ್ಞೆಮಾಡಿದರು. ಅವರೆಲ್ಲರೂ ಧನಂಜಯನ ವಧೆಗಾಗಿ ಎಲ್ಲ ಪ್ರಾಣಿಗಳಿಗೂ ಕೇಳಿಸುವ ರೀತಿಯಲ್ಲಿ ಗಟ್ಟಿಯಾಗಿ ಹೇಳಿಕೊಂಡು ಪ್ರತಿಜ್ಞೆಮಾಡಿದರು :

**ಯೇ ವೈ ಲೋಕಾಶ್ಚಾವ್ರತಿನಾಂ ಯೇ ಚೈವ ಬ್ರಹ್ಮಘಾತಿನಾಮ್ ।**
**ಮದ್ಯಪಸ್ಯ ಚ ಯೇ ಲೋಕಾ ಗುರುದಾರರತಸ್ಯ ಚ ॥೨೯॥**

**ಬ್ರಹ್ಮಸ್ವಹಾರಿಣಶ್ಚೈವ ರಾಜಪಿಣ್ಡಾಪಹಾರಿಣಃ ।**
**ಶರಣಾಗತಂ ಚ ತ್ಯಜತೋ ಯಾಚಮಾನಂ ತಥಾ ಘ್ನತಃ ॥೩೦॥**

**ಅಗಾರದಾಹಿನಾಂ ಚೈವ ಯೇ ಚ ಗಾಂ ನಿಘ್ನತಾಮಪಿ ।**
**ಅಪಕಾರಿಣಾಂ ಚ ಯೇ ಲೋಕಾ ಯೇ ಚ ಬ್ರಹ್ಮದ್ವಿಷಾಮಪಿ ॥೩೧॥**

**ಸ್ವಭಾರ್ಯಾಮೃತುಕಾಲೇಷು ಮೋಹಾದ್ವೈ ನಾಭಿಗಚ್ಛತಾಮ್ ।**
**ಶ್ರಾದ್ಧಮೈಥುನಿಕಾನಾಂ ಚ ಯೇ ಚಾಪ್ಯಾತ್ಮಾಪಹಾರಿಣಾಮ್ ॥೩೨॥**

**ನ್ಯಾಸಾಪಹಾರಿಣಾಂ ಯೇ ಚ ಶ್ರುತಂ ನಾಶಯತಾಂ ಚ ಯೇ ।**
**ಕ್ಲೀಬೇನ ಯುಧ್ಯಮಾನಾನಾಂ ಯೇ ಚ ನೀಚಾನುಸಾರಿಣಾಮ್ ॥೩೩॥**

**ನಾಸ್ತಿಕಾನಾಂ ಚ ಯೇ ಲೋಕಾ ಯೇಽಗ್ನಿಮಾತೃಪಿತೃತ್ಯಜಾಮ್ ।**
**ತಾನಾಪ್ನುಯಾಮಹೇ ಲೋಕಾನ್ಯೇ ಚ ಪಾಪಕೃತಾಮಪಿ ॥೩೪॥**

**ಯದ್ಯಹತ್ವಾ ವಯಂ ಯುದ್ಧೇ ನಿವರ್ತೇಮ ಧನಂಜಯಮ್ ।**
**ತೇನ ಚಾಭ್ಯರ್ದಿತಾಸ್ತ್ರಾಸಾದ್ಭವೇಮ ಹಿ ಪರಾಙ್ಮುಖಾಃ ॥೩೫॥**

"ಧನಂಜಯನನ್ನು ಯುದ್ಧದಲ್ಲಿ ಸಂಹರಿಸದೇ ಹಿಂದಿರುಗಿದರೆ ಅಥವಾ ಅವನಿಂದ ಪೀಡಿಸಲ್ಪಡುವ ನಾವು ಭಯದಿಂದ ಪರಾಙ್ಮುಖರಾದರೆ–ವ್ರತಗಳನ್ನು ನಿಯಮಪೂರ್ವಕವಾಗಿ ಪಾಲಿಸದೇ ಇರತಕ್ಕವರಿಗೆ ; ಬ್ರಾಹ್ಮಣನನ್ನು ಕೊಲೆಮಾಡುವವರಿಗೆ ; ಮದ್ಯಪಾನಮಾಡುವವರಿಗೆ ; ಗುರುಪತ್ನೀಸಮಾಗಮವನ್ನು ಮಾಡುವವರಿಗೆ ; ಬ್ರಾಹ್ಮಣನ ಸ್ವತ್ತನ್ನು ಅಪಹರಿಸುವವರಿಗೆ ; ರಾಜನು ಕಲ್ಪಿಸಿಕೊಟ್ಟ ಜೀವನಸೌಕರ್ಯವನ್ನು ಹಾಳುಮಾಡುವವರಿಗೆ (ಕೊಟ್ಟಿದ್ದ ದತ್ತಿಯನ್ನು ನಿಲ್ಲಿಸುವವರಿಗೆ) ; ಶರಣಾಗತರಾಗಿ ಬಂದವರನ್ನು ತ್ಯಜಿಸಿ ಶತ್ರುವಿಗೆ ಒಪ್ಪಿಸುವವರಿಗೆ ; ಯಾಚನೆಮಾಡಲು ಬಂದವನನ್ನು ವಾಕ್ಶಲ್ಯಗಳಿಂದಲೂ ಮತ್ತು ದಂಡಗಳಿಂದಲೂ ಪ್ರಹರಿಸುವವರಿಗೆ ; ಮನೆಗೆ ಬೆಂಕಿಯನ್ನಿಡುವವರಿಗೆ ; ಹಸುಗಳನ್ನು ಕೊಲ್ಲುವವರಿಗೆ ; ಇತರರಿಗೆ ಅಪಕಾರ ಮಾಡುವುದರಲ್ಲಿಯೇ ಆಸಕ್ತರಾಗಿರುವವರಿಗೆ ; ಬ್ರಾಹ್ಮಣರನ್ನು ದ್ವೇಷಿಸುವವರಿಗೆ ; ಮೋಹಪರವಶರಾಗಿ ಋತುಸ್ನಾತೆಯಾದ ಪತ್ನಿಯೊಡನೆ ಸಮಾಗಮ ಮಾಡದೇ ಇರುವವರಿಗೆ ; ಶ್ರಾದ್ಧಾದಿದಿನಗಳಲ್ಲಿ ಪತ್ನಿಯೊಡನೆ ಸಮಾಗಮ ಮಾಡುವವರಿಗೆ ; ಮನಸ್ಸಿನಲ್ಲಿ ಒಂದನ್ನಿಟ್ಟುಕೊಂಡು ಬಹಿರಂಗದಲ್ಲಿ ಮತ್ತೊಂದನ್ನು ಹೇಳುತ್ತಾ ಆತ್ಮನಿಗೂ ದ್ರೋಹವೆಸಗುವವರಿಗೆ ; ವಿಶ್ವಸ್ತನಿಧಿಯನ್ನು ದುರುಪಯೋಗಪಡಿಸಿಕೊಳ್ಳುವವರಿಗೆ ; ರಹಸ್ಯವಿಷಯವನ್ನು ಬಯಲುಮಾಡುವವರಿಗೆ ; ನಪುಂಸಕನಾದವನೊಡನೆ ಯುದ್ಧಮಾಡುವವರಿಗೆ ; ನೀಚರಾದವರ ಸೇವೆಯನ್ನು ಮಾಡುವವರಿಗೆ ; ದೇವರಿಲ್ಲವೆಂದು

ಹೇಳುವ ನಾಸ್ತಿಕರಿಗೆ ; ಅಗ್ನಿಪೂಜೆಯನ್ನು ಬಿಟ್ಟವರಿಗೆ ; ಮಾತಾ-ಪಿತೃಸೇವೆಯನ್ನು (ತಂದೆ-ತಾಯಿಗಳನ್ನು ) ಬಿಟ್ಟವರಿಗೆ–ಇವುಗಳೇ ಅಲ್ಲದೇ ಇನ್ನೂ ಅನೇಕವಿಧವಾದ ಪಾಪಕಾರ್ಯಗಳನ್ನು ಮಾಡಿರುವವರಿಗೆ ಯಾವ ಘೋರವಾದ ನರಕಗಳು ಪ್ರಾಪ್ತವಾಗುವುವೋ ಅಂತಹ ಭಯಂಕರವಾದ ನರಕಲೋಕಗಳೇ ನಮಗೂ ಪ್ರಾಪ್ತವಾಗಲಿ. ಒಂದು ವೇಳೆ ನಾವು ಅತ್ಯಂತಕಷ್ಟಸಾಧ್ಯವಾದ ಅರ್ಜುನನ ವಧೆಯೆಂಬ ಕರ್ಮವನ್ನು ಅವನೊಡನೆ ಮಾಡುವ ಯುದ್ಧದಲ್ಲಿ ಮಾಡಿ ಮುಗಿಸಿದೆವಾದರೆ–ನಮ್ಮ ಮನೋವಾಂಛಿತವಾದ ಪುಣ್ಯಲೋಕಗಳನ್ನೇ ಪಡೆದುಕೊಳ್ಳುತ್ತೇವೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ."

ಮಹಾರಾಜ! ಆ ರಾಜರು ಹೀಗೆ ಪ್ರತಿಜ್ಞೆಮಾಡಿ ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸುತ್ತಾ ರಣಾಂಗಣದ ದಕ್ಷಿಣದಿಕ್ಕಿನ ಕಡೆಗೆ ಹೋದರು. ಯಜ್ಞೇಶ್ವರನ ಸಮ್ಮುಖದಲ್ಲಿ ಅರ್ಜುನನ ವಧೆಮಾಡಲು ಪ್ರತಿಜ್ಞೆಮಾಡಿದ ಯೋಧರಿಂದ ಯುದ್ಧಕ್ಕೆ ಆಹ್ವಾನಿಸಲ್ಪಟ್ಟ ಅರ್ಜುನನು ಅವ್ಯವಹಿತವಾದ (ಒಡನೆಯೇ) ಈ ಮಾತುಗಳನ್ನು ಯುಧಿಷ್ಠಿರನಿಗೆ ಹೇಳಿದನು :

**ಆಹೂತೋ ನ ನಿವರ್ತೇಯಮಿತಿ ಮೇ ವ್ರತಮಾಹಿತಮ್ ।**
**ಸಂಶಪ್ತಕಾಶ್ಚ ಮಾಂ ರಾಜನ್ನಾಹ್ವಯನ್ತಿ ಮಹಾಮೃಧೇ ॥೬॥**

"ಯುದ್ಧಕ್ಕೆ ಆಹ್ವಾನಿಸಲ್ಪಟ್ಟರೆ ನಿರಾಕರಿಸುವುದಿಲ್ಲವೆಂಬುದು ನನ್ನ ಪ್ರತಿಜ್ಞೆಯಾಗಿದೆ. ಸಂಶಪ್ತಕರು ನನ್ನನ್ನು ಈಗ ಯುದ್ಧಕ್ಕೆ ಆಹ್ವಾನಿಸುತ್ತಿದ್ದಾರೆ. ಸಹೋದರರೊಡನಿರುವ ಸುಶರ್ಮನು ಯುದ್ಧಕ್ಕೆ ನನ್ನನ್ನು ಆಹ್ವಾನಿಸುತ್ತಿದ್ದಾನೆ. ಆದುದರಿಂದ ಸೈನ್ಯದ ಗಣಗಳಿಂದ ಕೂಡಿರುವ ಸುಶರ್ಮನನ್ನು ವಧೆಮಾಡುವ ಸಲುವಾಗಿ ಯುದ್ಧಮಾಡಲು ನನಗೆ ಅನುಮತಿಯನ್ನು ದಯಪಾಲಿಸು. ಯುದ್ಧಕ್ಕೆ ಬರುವಂತೆ ನನ್ನನ್ನು ಬಾರಿ-ಬಾರಿಗೂ ಆಹ್ವಾನಿಸುತ್ತಿರುವುದನ್ನು ನಾನು ಸಹಿಸುತ್ತಿಲ್ಲ. ಒಡನೆಯೇ ಹೋಗಿ ಅವರೆಲ್ಲರನ್ನೂ ಸಂಹರಿಸಿಬಿಡಬೇಕೆಂದು ನನ್ನ ಮನಸ್ಸು ತವಕಿಸುತ್ತಿದೆ. ನೀನೀಗ ಅವರೊಡನೆ ಯುದ್ಧಮಾಡಲು ಅನುಮತಿಯನ್ನಿತ್ತರೆ ಅವರೆಲ್ಲರ ವಧೆಯಾಯಿತೆಂದೇ ಭಾವಿಸು. ಅವರೆಲ್ಲರನ್ನೂ ಸಂಪೂರ್ಣವಾಗಿ ನಿಗ್ರಹಿಸಿಯೇ ನಾನು ಹಿಂದಿರುಗುವೆನೆಂದು ನಿನಗೆ ಪ್ರತಿಜ್ಞೆಮಾಡಿ ಹೇಳುತ್ತೇನೆ."

"ಅರ್ಜುನ! ದ್ರೋಣರು ಈ ಸಮಯದಲ್ಲಿ ಏನು ಮಾಡಲು ಇಚ್ಛಿಸಿ

ದ್ದಾರೆಂಬ ವಿಷಯವು ನಿನಗೆ ತಿಳಿದೇ ಇದೆ. ಅವರ ಸಂಕಲ್ಪವು ಸುಳ್ಳಾಗುವ ರೀತಿಯಲ್ಲಿ ನೀನು ವರ್ತಿಸಬೇಕಾಗಿದೆ. ಮಹಾರಥನೇ! ನಮ್ಮೆಲ್ಲರಿಗೂ ತಿಳಿದಿರುವಂತೆ ದ್ರೋಣರು ಮಹಾಶೂರರು, ಮಹಾಬಲಿಷ್ಠರು, ಅಸ್ತ್ರವಿದ್ಯಾ ಪಾರಂಗತರು, ಶ್ರಮವೆಂಬುದನ್ನೇ ಸಂಪೂರ್ಣವಾಗಿ ಜಯಿಸಿರತಕ್ಕವರು. ನೀನಿಲ್ಲದ ವೇಳೆಯಲ್ಲಿ ನನ್ನನ್ನು ಸೆರೆಹಿಡಿಯುವುದಾಗಿ ದ್ರೋಣರು ಪ್ರತಿಜ್ಞೆ ಮಾಡಿರುತ್ತಾರೆ.”

“ಅಣ್ಣ! ನಾನಿಲ್ಲದ ಸಮಯದಲ್ಲಿ ಪಾಂಚಾಲಕುಮಾರನಾದ ಸತ್ಯ ಜಿತನು ನಿನ್ನನ್ನು ರಕ್ಷಿಸುತ್ತಾನೆ. ಪಾಂಚಾಲ್ಯನು ನಿನ್ನ ರಕ್ಷಣೆಯ ಭಾರವನ್ನು ವಹಿಸಿ ಯುದ್ಧಮಾಡುತ್ತಿರುವವರೆಗೂ ಆಚಾರ್ಯರು ತಮ್ಮ ಇಚ್ಛೆಯನ್ನು ಪೂರೈಸಿಕೊಳ್ಳಲಾರರು. ಒಂದು ವೇಳೆ ಪುರುಷವ್ಯಾಘ್ರನಾದ ಸತ್ಯಜಿತನು ದ್ರೋಣರಿಂದ ಹತನಾಗಿಬಿಟ್ಟರೆ ಆ ಸಮಯದಲ್ಲಿ ಮಾತ್ರ ನೀನು ನಮ್ಮ ಕಡೆಯ ಸಮಸ್ತಯೋಧರಿಂದಲೂ ಸಮೇತನಾಗಿದ್ದರೂ ಯಾವುದೇ ಕಾರಣ ದಿಂದಲೂ ದ್ರೋಣರಿಗೆ ಎದುರಾಗಿ ನಿಲ್ಲಬಾರದು.”

ಅರ್ಜುನನು ಹೀಗೆ ಆಶ್ವಾಸಿಸಿ ಮುನ್ನೆಚ್ಚರಿಕೆಯನ್ನು ಕೊಟ್ಟನಂತರ ಯುಧಿಷ್ಠಿರನು ಸಂಶಪ್ತಕರೊಡನೆ ಯುದ್ಧಕ್ಕೆ ಹೋಗಲು ಅರ್ಜುನನಿಗೆ ಅನುಮತಿಯನ್ನಿತ್ತನು. ಅರ್ಜುನನನ್ನು ಕಳುಹಿಸಿಕೊಡುವ ಸಮಯದಲ್ಲಿ ಯುಧಿಷ್ಠಿರನು ಅವನನ್ನು ಗಾಢವಾಗಿ ಆಲಿಂಗಿಸಿಕೊಂಡು, ನೆತ್ತಿಯನ್ನು ಆಘ್ರಾ ಣಿಸಿ, ವದನಾರವಿಂದವನ್ನು ಹಲವಾರು ಬಾರಿ ಪ್ರೇಮಪೂರ್ವಕವಾಗಿ ದಿಟ್ಟಿಸಿ ನೋಡಿ ಮನಃಪೂರ್ವಕವಾಗಿ ಆಶೀರ್ವದಿಸಿ ಕಳುಹಿಸಿಕೊಟ್ಟನು. ಹಸಿದ ಸಿಂಹವು ಕ್ಷುದ್ಬಾಧೆಯನ್ನು ಕಳೆದುಕೊಳ್ಳುವ ಸಲುವಾಗಿ ಮೃಗಗಳ ಗುಂಪಿರುವ ಸ್ಥಳಕ್ಕೆ ಹೋಗುವಂತೆ–ಅರ್ಜುನನು ಯುಧಿಷ್ಠಿರನನ್ನು ಬಿಟ್ಟು ತ್ರಿಗರ್ತರಿದ್ದೆಡೆಗೆ ಧಾವಿಸಿದನು. ಅರ್ಜುನನು ತ್ರಿಗರ್ತರೊಡನೆ ಯುದ್ಧಮಾಡಲು ಹೊರಟುಹೋದೊಡನೆಯೇ ದುರ್ಯೋಧನನ ಸೈನಿಕರು ಆನಂದಭರಿತ ರಾದರು. ಅರ್ಜುನನಿಲ್ಲದ ಸಮಯದಲ್ಲಿ ಯುಧಿಷ್ಠಿರನನ್ನು ಬಂಧಿಸುವ ಪ್ರಯತ್ನದಲ್ಲಿ ಅವರು ಅತ್ಯಂತ ಕ್ರೋಧಾವಿಷ್ಟರಾದರು. (ಕುಪಿತರಾದ ಸೈನಿಕರು ಯುಧಿಷ್ಠಿರನನ್ನು ಬಂಧಿಸಲು ಪ್ರಯತ್ನವನ್ನು ಪ್ರಾರಂಭಿಸಿದರು.) ವರ್ಷಾಕಾಲದಲ್ಲಿ ಪೂರ್ಣಪ್ರವಾಹದಿಂದ ಕೂಡಿದ ಗಂಗಾ ಮತ್ತು ಸರಯೂ

ನದಿಗಳು ಸಂಗಮಸ್ಥಳದಲ್ಲಿ ರಭಸದಿಂದ ಸೇರುವಂತೆ-ಕೌರವ-ಪಾಂಡವರ ಸೈನಿಕರು ಬಹಳ ರಭಸದಿಂದ ಸಂಘರ್ಷಿಸಿದರು."

೧೭ನೆಯ ಅಧ್ಯಾಯವು ಮುಗಿಯಿತು.

೧೮ನೆಯ ಅಧ್ಯಾಯ ಸಂಶಪ್ತಕವಧಪರ್ವ (ಮುಂದುವರಿದಿದೆ.)

## ಸಂಶಪ್ತಕಸೇನೆಯೊಡನೆ ಅರ್ಜುನನ ಯುದ್ಧ: ಸುಧನ್ವನ ವಧೆ

ಸಂಜಯನು ಅರ್ಜುನ–ಸಂಶಪ್ತಕರ ಯುದ್ಧವನ್ನು ವರ್ಣಿಸುತ್ತಾ ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಸಂಶಪ್ತಕರು ಸಮವಾಗಿದ್ದ (ಹಳ್ಳ-ತಿಟ್ಟುಗಳಿಲ್ಲದೇ ಇದ್ದ) ಪ್ರದೇಶವೊಂದರಲ್ಲಿ ರಥಸೈನ್ಯದಿಂದಲೇ ಚಂದ್ರಾಕಾರವಾದ ವ್ಯೂಹವನ್ನು ರಚಿಸಿಕೊಂಡು ಸಂತೋಷಭರಿತರಾಗಿ ಅರ್ಜುನನೊಡನೆ ಯುದ್ಧಮಾಡಲು ಸಜ್ಜಾಗಿ ನಿಂತಿದ್ದರು. ಅರ್ಜುನನು ತಮ್ಮ ಕಡೆಗೆ ಬರುತ್ತಿರುವುದನ್ನು ಕಂಡು ಸಂತೋಷಾಧಿಕ್ಯದಿಂದ ದೊಡ್ಡದಾಗಿ ಶಬ್ದಮಾಡುತ್ತಾ ಕೂಗಿಕೊಂಡರು. ಅವರು ಮಾಡಿದ ಆ ಶಬ್ದವು ದಿಕ್ಕುಗಳಲ್ಲಿಯೂ ಉಪದಿಕ್ಕುಗಳಲ್ಲಿಯೂ ಹರಡಿಕೊಂಡುಬಿಟ್ಟಿತು. ಆ ಶಬ್ದವು ಲೋಕವನ್ನೇ ಸಂಪೂರ್ಣವಾಗಿ ವ್ಯಾಪಿಸಿಬಿಟ್ಟಿತಾದ್ದರಿಂದ ಪುನಃ ಆ ಶಬ್ದದ ಪ್ರತಿಧ್ವನಿಯುಂಟಾಗಲಿಲ್ಲ. ಅತ್ಯಂತಪ್ರಹೃಷ್ಟರಾಗಿದ್ದ ಸಂಶಪ್ತಕರನ್ನು ಸಮೀಪಿಸಿದ ಧನಂಜಯನು ನಸು ನಗುತ್ತಾ ಶ್ರೀಕೃಷ್ಣನೊಡನೆ ಹೇಳಿದನು : "ದೇವಕೀಮಾತಃ! ಯುದ್ಧದಲ್ಲಿ ಈಗಲೇ ಸಾಯಲಿರುವ ತ್ರಿಗರ್ತಸಹೋದರರರನ್ನು ನೋಡು. ಅಳಬೇಕಾಗಿ ರುವ ಈ ಸಮಯದಲ್ಲಿ ಇವರು ನಗುತ್ತಿದ್ದಾರೆ. ಅಥವಾ ಕುತ್ಸಿತರಾದ ಮನುಷ್ಯರಿಂದ ದುಷ್ಪ್ರಾಪ್ಯವಾದ ಉತ್ತಮೋತ್ತಮವಾದ ಲೋಕಗಳನ್ನು ಇವರು ಈಗಲೇ ಸಂಶಯವಿಲ್ಲದೇ ಪಡೆದುಕೊಳ್ಳುತ್ತಾರಾದಕಾರಣ ತ್ರೈಗರ್ತರಿಗೆ ಈ ಕಾಲವು ಹೆಚ್ಚು ಸಂತೋಷಪಡುವ ಕಾಲವೆಂದೇ ಹೇಳಬಹುದು."

ಮಹಾರಾಜ! ಅರ್ಜುನನು ಹೃಷೀಕೇಶನಿಗೆ ಹೀಗೆ ಹೇಳಿ ವ್ಯೂಹಕ್ರಮ ದಲ್ಲಿ ನಿಲ್ಲಿಸಿದ್ದ ತ್ರಿಗರ್ತಸೈನ್ಯದ ಮೇಲೆ ದಾಳಿಮಾಡಿದನು. ಸುವರ್ಣಪರಿಷ್ಕೃತ ವಾದ ದೇವದತ್ತವೆಂಬ ಶಂಖವನ್ನು ಕೈಗೆತ್ತಿಕೊಂಡು ಎಲ್ಲ ದಿಕ್ಕುಗಳನ್ನೂ ಆ ಶಂಖಧ್ವನಿಯಿಂದಲೇ ತುಂಬುತ್ತಾ ಬಹಳ ಗಟ್ಟಿಯಾಗಿ ಊದಿದನು. ಆ

ಶಂಖಧ್ವನಿಮಾತ್ರದಿಂದಲೇ ಭಯಗೊಂಡ ಸಂಶಪ್ತಕಸೈನ್ಯವು ಲೋಹದಿಂದ ಮಾಡಿದ ಪ್ರತಿಮೆಯಂತೆ ನಿಶ್ಚೇಷ್ಟವಾಗಿ ನಿಂತುಬಿಟ್ಟಿತು. ರಥಗಳ ಕುದುರೆಗಳು ಭಯದಿಂದ ಕಣ್ಣುಗಳನ್ನರಳಿಸಿದುವು. ಅವುಗಳ ಕಿವಿಗಳೂ ಮತ್ತು ಕುತ್ತಿಗೆಗಳೂ ಸ್ತಬ್ಧವಾದುವು. ಅವುಗಳ ನಾಲ್ಕು ಕಾಲುಗಳೂ ಸೆಟೆದು ನಿಂತುವು. ಆ ಕುದುರೆಗಳು ಮೂತ್ರದ ಜೊತೆಯಲ್ಲಿ ರಕ್ತವನ್ನೂ ಸುರಿಸತೊಡಗಿದುವು. ಶಂಖಧ್ವನಿಯು ಕ್ಷೀಣಿಸುತ್ತಿದ್ದಂತೆಯೇ ಸಂಶಪ್ತಕರು ಪುನಶ್ಚೇತನಗೊಂಡರು. ಸೈನ್ಯವನ್ನೂ ಎಚ್ಚರಗೊಳಿಸಿ ಯುದ್ಧಕ್ಕೆ ಸಜ್ಜುಗೊಳಿಸಿದರು. ಎಲ್ಲರೂ ಒಟ್ಟಾಗಿ ಸೇರಿ ರಣಹದ್ದಿನ ರೆಕ್ಕೆಗಳಿಂದ ಕೂಡಿದ್ದ ಬಾಣಗಳನ್ನು ಏಕಕಾಲದಲ್ಲಿ ಅರ್ಜುನನ ಮೇಲೆ ಸುರಿಸಿದರು. ಪರಾಕ್ರಮಿಯಾದ ಅರ್ಜುನನು ಶೀಘ್ರಗಾಮಿಗಳಾದ ಹದಿನೈದು ಬಾಣಗಳಿಂದ ತ್ರಿಗರ್ತಯೋಧರು ಬಿಟ್ಟ ಸಾವಿರಾರು ಬಾಣಗಳನ್ನೂ–ಅವುಗಳು ತನ್ನ ಸಮೀಪಕ್ಕೆ ಬರುವುದಕ್ಕೆ ಮೊದಲೇ–ಕತ್ತರಿಸಿಬಿಟ್ಟನು. ಪುನಃ ತ್ರಿಗರ್ತಯೋಧರು ನಿಶಿತವಾದ ಹತ್ತು-ಹತ್ತು ಬಾಣಗಳಿಂದ ಅರ್ಜುನನನ್ನು ಪ್ರಹರಿಸಿದರು. ಅದಕ್ಕೆ ಪ್ರತಿಯಾಗಿ ಅರ್ಜುನನು ಆ ಎಲ್ಲ ಯೋಧರನ್ನೂ ಮೂರು-ಮೂರು ಬಾಣಗಳಿಂದ ಪ್ರಹರಿಸಿದನು. ಅನಂತರ ಸಂಶಪ್ತಕಯೋಧರಲ್ಲಿ ಪ್ರತಿಯೊಬ್ಬನೂ ಐದೈದು ಬಾಣಗಳಿಂದ ಅರ್ಜುನನನ್ನು ಗಾಯಗೊಳಿಸಿದರು. ಪರಾಕ್ರಮಿಯಾದ ಪಾರ್ಥನು ಅವರೆಲ್ಲರನ್ನೂ ಏಕಕಾಲದಲ್ಲಿ ಎರಡೆರಡು ಬಾಣಗಳಿಂದ ಪ್ರಹರಿಸಿದನು. ಮೋಡಗಳು ಮಳೆಯಿಂದ ಸರೋವರವನ್ನು ತುಂಬಿಬಿಡು ವಂತೆ–ಸಂಕ್ರುದ್ಧರಾದ ತ್ರೈಗರ್ತರು ಅರ್ಜುನನನ್ನೂ ಮತ್ತು ಅವನ ಸಾರಥಿ ಯಾದ ಕೇಶವನನ್ನೂ ತೀಕ್ಷ್ಣವಾದ ಬಾಣಗಳ ಮಳೆಯಿಂದ ತುಂಬಿಬಿಟ್ಟರು. ದುಂಬಿಗಳ ಸಮೂಹಗಳು ಸುಪುಷ್ಪಿತವಾದ ವೃಕ್ಷಗಳ ಸಮೂಹವನ್ನು ಮುತ್ತುವಂತೆ–ತ್ರೈಗರ್ತರು ಬಿಟ್ಟ ಸಾವಿರಾರು ಬಾಣಗಳು ಅರ್ಜುನನ ಮೇಲೆ ಬಿದ್ದುವು. ಅನಂತರ ಸುಬಾಹುವು ಲೋಹಮಯವಾದ ಮೂವತ್ತು ಬಾಣಗಳಿಂದ ಅರ್ಜುನನ ಕಿರೀಟದಲ್ಲಿ ಬಹಳ ಆಳಕ್ಕೆ ಪ್ರಹರಿಸಿದನು. ಕಿರೀಟವನ್ನು ಹೊಕ್ಕಿದ್ದ ಚಿನ್ನದ ರೆಕ್ಕೆಗಳನ್ನು ಹೊಂದಿದ್ದ ಆ ಬಾಣಗಳಿಂದ ಕಿರೀಟಿಯು ಸುವರ್ಣಮಯವಾದ ಕಿರೀಟದಿಂದ ಸಮಲಂಕೃತನಾದ, ಆಗ ತಾನೆ ಉದಯಿಸಿದ ಸೂರ್ಯನಂತೆಯೇ ಪ್ರಕಾಶಿಸಿದನು. ಅದರಿಂದ ಕ್ರುದ್ಧ

ನಾದ ಕಿರೀಟಿಯು ಸುಬಾಹುವಿನ ಕೈಗಳ ಚೀಲವನ್ನು ಭಲ್ಲದಿಂದ ಕತ್ತರಿಸಿದನು. ಪುನಃ ಅವನನ್ನು ಅನೇಕಬಾಣಗಳಿಂದ ಮುಚ್ಚಿಬಿಟ್ಟನು. ಅನಂತರ ಸುಶರ್ಮಾ, ಸುರಥ, ಸುಧರ್ಮಾ, ಸುಧನ್ವ ಮತ್ತು ಸುಬಾಹುಗಳು ಹತ್ತು-ಹತ್ತು ಬಾಣಗಳಿಂದ ಕಿರೀಟಧಾರಿಯಾದ ಅರ್ಜುನನನ್ನು ಪ್ರಹರಿಸಿದರು. ಅವರು ಬಿಟ್ಟ ಬಾಣಗಳನ್ನು ವಾನರಧ್ವಜನಾದ ಅರ್ಜುನನು ಭಲ್ಲಗಳಿಂದ ಕತ್ತರಿಸಿ ಅವರೆಲ್ಲರನ್ನೂ ಪ್ರಹರಿಸಿ ಅವರ ಧ್ವಜಗಳನ್ನೂ ಪ್ರತ್ಯೇಕ- ಪ್ರತ್ಯೇಕವಾದ ಬಾಣಗಳಿಂದ ಕತ್ತರಿಸಿದನು.

ಅನಂತರ ಅರ್ಜುನನು ಸುಧ್ವನನ ಧನುಸ್ಸನ್ನು ಕತ್ತರಿಸಿ ಅವನ ಕುದುರೆ ಗಳನ್ನೂ ಬಾಣಗಳಿಂದ ಸಂಹರಿಸಿದನು. ಶಿರಸ್ತ್ರಾಣಸಹಿತವಾದ ಸುಧನ್ವನ ಶಿರಸ್ಸನ್ನೂ ಅವನ ಶರೀರದಿಂದ ಕೆಳಕ್ಕೆ ಕೆಡವಿದನು. ವೀರನಾದ ಸುಧನ್ವನು ಕೆಳಕ್ಕೆ ಬೀಳಲಾಗಿ ಅವನ ಅನುಯಾಯಿಗಳಾದ ಯೋಧರೆಲ್ಲರೂ ಭಯ ಗೊಂಡರು. ಭಯದಿಂದಾಗಿ ದುರ್ಯೋಧನನ ಸೈನಿಕರಿದ್ದಲ್ಲಿಗೆ ಓಡಿ ಹೋದರು. ಅನಂತರ ಸಂಕ್ರುದ್ಧನಾದ ಇಂದ್ರನ ಮಗನಾದ ಅರ್ಜುನನು ಸೂರ್ಯನು ಕಿರಣಗಳಿಂದ ಕತ್ತಲೆಯನ್ನು ಹೋಗಲಾಡಿಸುವಂತೆ—ಅವಿಚ್ಛಿನ್ನ ವಾಗಿ ಬಾಣಗಳ ಮಳೆಗರೆಯುತ್ತಾ ತ್ರೈಗರ್ತರ ಮಹಾಸೈನ್ಯವನ್ನು ಧ್ವಂಸ ಮಾಡಿದನು. ಸಂಶಪ್ತಕರ ಸೇನಾಸಮೂಹವು ಭಗ್ನವಾಗಿ ದಿಕ್ಕು-ದಿಕ್ಕುಗಳಿಗೂ ಚದುರಿಹೋಗಲಾಗಿ ಸವ್ಯಸಾಚಿಯು ಮತ್ತೂ ಕ್ರುದ್ಧನಾಗಲಾಗಿ ತ್ರೈಗರ್ತ ಯೋಧರನ್ನು ಭಯವು ಅಧಿಕವಾಗಿ ಆವರಿಸಿತು. ಅರ್ಜುನನ ಸನ್ನತಪರ್ವ ಗಳಾದ ಬಾಣಗಳಿಂದ ಸತತವಾಗಿ ಪ್ರಹೃತರಾಗುತ್ತಿದ್ದ ತ್ರೈಗರ್ತಸೈನಿಕರು— ಭಯಗ್ರಸ್ತವಾದ ಮೃಗಗಳ ಸಮೂಹಗಳಂತೆ—ಅಲ್ಲಲ್ಲಿಯೇ ಮೂರ್ಛಿತರಾಗಿ ಬೀಳುತ್ತಿದ್ದರು. ಅದನ್ನು ಕಂಡು ಕ್ರುದ್ಧನಾದ ತ್ರಿಗರ್ತರಾಜನು ಭಯಭೀತ ರಾಗಿದ್ದ ಮಹಾರಥರನ್ನು ಕುರಿತು ಹೇಳಿದನು :

“ಶೂರ-ವೀರರೇ! ಓಡುವುದನ್ನು ಸಾಕುಮಾಡಿರಿ. ಈ ಸಮಯದಲ್ಲಿ ಭಯಪಡುವುದು ನಿಮಗೆ ಉಚಿತವಾಗಿ ಕಾಣುವುದಿಲ್ಲ. ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಯಜ್ಞೇಶ್ವರನ ಮುಂದೆ ನಿಂತು ಘೋರವಾದ ಪ್ರತಿಜ್ಞೆಗಳನ್ನು ಮಾಡಿ, ಈಗ ನೀವು ಅರ್ಜುನನಿಗೆ ಭಯಗೊಂಡು ದುರ್ಯೋಧನನ ಬಳಿಗೆ ಓಡಿಹೋದರೆ, ನೀವು ಮಾಡಿದ ಪ್ರತಿಜ್ಞೆಯನ್ನು

ಕುರಿತು ಪ್ರಶ್ನಿಸುವ ದುರ್ಯೋಧನನ ಸೇನಾಮುಖ್ಯರಿಗೆ ಯಾವ ಉತ್ತರವನ್ನು ನೀಡುವಿರಿ? ಯಾವ ಕರ್ಮವನ್ನು ಮಾಡುವುದರಿಂದ ನಾವು ಲೋಕದಲ್ಲಿ ಅಪಹಾಸ್ಯಕ್ಕೆ ಗುರಿಯಾಗುವುದಿಲ್ಲವೋ–ಅಂತಹ ಕರ್ಮವನ್ನು ನಾವೀಗ ಮಾಡಬೇಕಾಗಿದೆ. ಆದುದರಿಂದ ನೀವೆಲ್ಲರೂ ಈಗಲೇ ಹಿಂದಿರುಗಿರಿ. ನಾವೆಲ್ಲರೂ ಒಟ್ಟಾಗಿದ್ದು ನಮ್ಮ ಬಲವಿದ್ದಷ್ಟು ಯುದ್ಧಮಾಡೋಣ."

ತ್ರಿಗರ್ತರಾಜನು ಹೀಗೆ ಹೇಳುತ್ತಲೇ ಓಡಿಹೋಗುತ್ತಿದ್ದ ಸೈನಿಕರೆಲ್ಲರಿಗೂ ಪುನಶ್ಚೇತನವು ಬಂದಂತಾಗಿ ಬಾರಿಬಾರಿಗೂ ಗರ್ಜನೆಮಾಡಿದರು. ಪರಸ್ಪರವಾಗಿ ಹರ್ಷೋತ್ಸಾಹಗಳನ್ನು ಉಂಟುಮಾಡುತ್ತಾ ಆ ವೀರರು ಶಂಖ ಗಳನ್ನು ಊದಿದರು. ನಾರಾಯಣರು, ಗೋಪಾಲಕರು–ಇವರೇ ಮೊದ ಲಾದ ತ್ರಿಗರ್ತಸೈನಿಕರು ಯುದ್ಧದಿಂದ ಹಿಂದಿರುಗುವ ಮಾರ್ಗವು ಮೃತ್ಯು ಪಥವೆಂಬುದನ್ನೇ ನಿರ್ಧರಿಸಿದವರಾಗಿ ಯುದ್ಧಕ್ಕೆ ಹಿಂದಿರುಗಿ ಬಂದರು."

೧೮ನೆಯ ಅಧ್ಯಾಯವು ಮುಗಿಯಿತು.

೧೯ನೆಯ ಅಧ್ಯಾಯ — ಸಂಶಪ್ತಕವಧಪರ್ವ (ಮುಂದುವರಿದಿದೆ.)

## ಸಂಶಪ್ತಕರೊಡನೆ ಅರ್ಜುನನ ಘೋರಯುದ್ಧ

ಸಂಜಯನು ಸಂಶಪ್ತಕರ ಯುದ್ಧವಾರ್ತೆಯನ್ನೇ ಮುಂದುವರಿಸಿ ಹೇಳುತ್ತಾನೆ :

"ಮಹಾರಾಜ! ಸಂಶಪ್ತಕಗಣಗಳು ಪುನಃ ಯುದ್ಧಕ್ಕೆ ಬರುತ್ತಿರುವುದನ್ನು ಕಂಡು ಅರ್ಜುನನು ಮಹಾತ್ಮನಾದ ವಾಸುದೇವನೊಡನೆ ಹೇಳಿದನು :

"ಹೃಷೀಕೇಶ! ಸಂಶಪ್ತಕಗಣಗಳಿರುವ ಕಡೆಗೆ ರಥವನ್ನು ನಡೆಯಿಸು. ಜೀವಂತರಾಗಿರುವವರೆಗೂ ಇವರು ಯುದ್ಧಮಾಡುವುದನ್ನು ಬಿಡುವುದಿಲ್ಲ ವೆಂಬುದು ನನ್ನ ಅಭಿಪ್ರಾಯವಾಗಿದೆ. ಕೃಷ್ಣ! ಇಂದು ನನ್ನ ಅಸ್ತ್ರಗಳ ಬಲವನ್ನಾದರೂ ನೋಡು. ತೋಳುಗಳ ಮತ್ತು ಧನುಸ್ಸಿನ ಬಲವನ್ನೂ ನೋಡು. ಕ್ರುದ್ಧನಾದ ರುದ್ರನು ಪ್ರಪಂಚದ ಜೀವಿಗಳನ್ನು ಸಂಹಾರಮಾಡಿ ದಂತೆ–ಈಗ ನಾನು ಇವರೆಲ್ಲರನ್ನೂ ಉರುಳಿಸಿಬಿಡುತ್ತೇನೆ."

ಅರ್ಜುನನ ಮಾತನ್ನು ಕೇಳಿ ದುರ್ಧರ್ಷನಾದ ಶ್ರೀಕೃಷ್ಣನು ನಸುನಕ್ಕು ಶುಭಾಶಂಸನೆಗಳೊಡನೆ ಅವನನ್ನು ಅಭಿನಂದಿಸಿ, ಅರ್ಜುನನು ಎಲ್ಲೆಲ್ಲಿಗೆ

ಕುದುರೆಗಳನ್ನು ನಡೆಸಬೇಕೆಂದು ಇಚ್ಛೆಪಟ್ಟನೋ ಅಲ್ಲಲ್ಲಿಗೇ ರಥವನ್ನು ನಡೆಸಿ ಕೊಂಡು ಹೋದನು. ರಣಾಂಗಣದಲ್ಲಿ ಬಿಳಿಯ ಕುದುರೆಗಳಿಂದ ಎಳೆಯಲ್ಪಡುತ್ತಿದ್ದ ಆ ಶ್ವೇತರಥವು ಆಕಾಶದಲ್ಲಿ ಹಾರಾಡುವ ವಿಮಾನದಂತೆ ಅತಿಶಯವಾಗಿ ಪ್ರಕಾಶಿಸಿತು. ದೇವಾಸುರರ ಯುದ್ಧದ ಸಮಯದಲ್ಲಿ ಯಾವ ರೀತಿಯಲ್ಲಿ ಇಂದ್ರನ ರಥದ ಸಂಚಲನವಾಗುತ್ತಿದ್ದಿತೋ–ಅದೇ ರೀತಿಯಲ್ಲಿ ಅರ್ಜುನನ ರಥವು ಒಮ್ಮೆ ಸುತ್ತಲೂ ತಿರುಗುತ್ತಿದ್ದಿತು. ಒಮ್ಮೆ ಮುಂದೆ ಹೋಗುತ್ತಿದ್ದಿತು. ಮತ್ತೊಮ್ಮೆ ಹಿಂದಕ್ಕೂ ಬರುತ್ತಿದ್ದಿತು. ಅನಂತರ ನಾನಾ ವಿಧವಾದ ಆಯುಧಗಳನ್ನು ಹೊಂದಿದ್ದ ಕ್ರುದ್ಧರಾದ ನಾರಾಯಣರೆಂಬ ಸೈನಿಕರು ಧನಂಜಯನನ್ನು ಬಾಣಗಳ ಸಮೂಹದಿಂದ ಆಚ್ಛಾದಿಸುತ್ತಾ ಆಕ್ರಮಿಸಿದರು. ಭರತರ್ಷಭನೇ! ಆ ನಾರಾಯಣಸೈನಿಕರು ಮುಹೂರ್ತಕಾಲ ಕೃಷ್ಣಸಹಿತನಾದ ಕುಂತೀಪುತ್ರನಾದ ಧನಂಜಯನನ್ನು ಅದೃಶ್ಯನನ್ನಾಗಿ ಮಾಡಿಬಿಟ್ಟರು. ಆ ಸಮಯದಲ್ಲಿ ಕ್ರುದ್ಧನಾಗಿದ್ದ ಅರ್ಜುನನ ಪರಾಕ್ರಮವು ಇಮ್ಮಡಿಯಾಯಿತು. ಗಾಂಡೀವಧನುಸ್ಸನ್ನು ಹಿಡಿದು ಅದರ ಶಿಂಜಿನಿಯನ್ನೊಮ್ಮೆ ತೀಡಿ ಸಜ್ಜುಗೊಳಿಸಿದನು. ಹುಬ್ಬುಗಳನ್ನು ವಕ್ರವಾಗಿ ಗಂಟಿಕ್ಕಿಕೊಳ್ಳುವುದರಿಂದ ಕೋಪದ ಪ್ರತಿಲಕ್ಷಣವನ್ನು ತೋರ್ಪಡಿಸುತ್ತಾ ದೇವದತ್ತವೆಂಬ ಮಹಾಶಂಖವನ್ನು ಗಟ್ಟಿಯಾಗಿ ಊದಿದನು. ಅನಂತರ ಅರ್ಜುನನು ಅರಿಸಂಹಾರಕವಾದ ತ್ವಾಷ್ಟ್ರವೆಂಬ ಮಹಾಸ್ತ್ರವನ್ನು ಅಭಿಮಂತ್ರಿಸಿ ಪ್ರಯೋಗಿಸಿದನು. ಒಡನೆಯೇ ಆ ಮಹಾಸ್ತ್ರದಿಂದ ಸಾವಿರಾರು ರೂಪುಗಳು ಹೊರಬಂದುವು. ಅರ್ಜುನನ ರೂಪದಂತೆಯೇ ಇದ್ದ ಸಾವಿರಾರು ಆಕೃತಿಗಳೂ ಆ ಸೈನಿಕರಲ್ಲಿ ಸೇರಿಕೊಂಡುವು. ಅದರಿಂದ ಆ ಸೈನಿಕರು ಭ್ರಾಂತರಾದರು. ಆ ಸೈನ್ಯಸಮೂಹದಲ್ಲಿ ಮಹಾಸ್ತ್ರದ ಪ್ರಭಾವದಿಂದಾಗಿ ಒಬ್ಬರು ಮತ್ತೊಬ್ಬರಿಗೆ ಅರ್ಜುನನಂತೆಯೇ ಕಾಣುತ್ತಿದ್ದರು. ಅರ್ಜುನನು ತಮ್ಮ ಸಮೀಪಗತನಾದನೆಂದು ಭ್ರಮಿಸಿ ತ್ರೈಗರ್ತಸೈನಿಕರು ಪರಸ್ಪರವಾಗಿ ಬಡಿದಾಡತೊಡಗಿದರು.

**ಅಯಮರ್ಜುನೋಽಯಂ ಗೋವಿನ್ದ ಇಮೌ ಪಾಣ್ಡವಯಾದವೌ ।**
**ಇತಿ ಬ್ರುವಾಣಾಃ ಸಮ್ಮೂಢಾ ಜಘ್ನುರನ್ಯೋನ್ಯಮಾಹವೇ ॥೧೩॥**

'ಇದೇ ಇವನೇ ಅರ್ಜುನನಾಗಿದ್ದಾನೆ. ಇವನೇ ಗೋವಿಂದ ; ಪಾರ್ಥ

ಸಾರಥಿ. ಇಬ್ಬರೂ ನಮ್ಮ ಸಮೀಪಕ್ಕೇ ಬಂದುಬಿಟ್ಟಿದ್ದಾರೆ'–ಹೀಗೆಂದು ಹೇಳಿಕೊಂಡು ಅಸ್ತ್ರಪ್ರಭಾವದಿಂದ ಪರಮಮೂಢರಾಗಿ ತಮಗೆ ತಾವೇ ಬಡಿದಾಡಿದರು. ಪರಮಾಸ್ತ್ರದಿಂದ ವಿಮೋಹಿತರಾದ ಅವರು ಪರಸ್ಪರವಾಗಿ ಹೊಡೆದಾಡುತ್ತಾ ಕ್ಷಯವನ್ನು ಹೊಂದಿದರು. ಆ ಸಮಯದಲ್ಲಿ ರಕ್ತಸಿಕ್ತರಾಗಿದ್ದ ಆ ಯೋಧರು ಪುಷ್ಪಿತವಾದ ಮುತ್ತುಗದ ಮರಗಳಂತೆಯೇ ಕಾಣುತ್ತಿದ್ದರು. ಆ ಮಹಾಸ್ತ್ರವು ತ್ರೈಗರ್ತಯೋಧರು ಪ್ರಯೋಗಿಸಿದ ಸಾವಿರಾರು ಬಾಣಗಳನ್ನು ಭಸ್ಮೀಭೂತವನ್ನಾಗಿಮಾಡಿ ಆ ಎಲ್ಲ ವೀರರನ್ನೂ ಯಮನ ಅರಮನೆಗೆ ಕಳುಹಿಸಿಕೊಟ್ಟಿತು. ಅನಂತರ ಅರ್ಜುನನು ಒಮ್ಮೆ ಗಹಗಹಿಸಿ ನಕ್ಕು ಲಲಿತ್ಥರು, ಮಾಲವರು, ಮಾವೇಲ್ಲಕರು, ತ್ರಿಗರ್ತರು ಮತ್ತು ಯೌಧೇಯರು–ಇವರೆಲ್ಲರನ್ನೂ ಬಾಣಗಳಿಂದ ಛಿನ್ನ-ಭಿನ್ನ ಮಾಡಿಬಿಟ್ಟನು. ವೀರನಾದ ಅರ್ಜುನನಿಂದ ಪೀಡಿಸಲ್ಪಡುತ್ತಿದ್ದ ಕಾಲಚೋದಿತರಾದ ಕ್ಷತ್ರಿಯರು ನಾನಾವಿಧವಾದ ಬಾಣಗಳ ಸಮೂಹಗಳನ್ನು ಪಾರ್ಥನ ಮೇಲೆ ಸುರಿಸಿದರು. ಘೋರವಾದ ಶರವರ್ಷದಿಂದ ರಣಾಂಗಣವೇ ಸಮಾಕೀರ್ಣವಾಗಿದ್ದ ಆ ಸಮಯದಲ್ಲಿ ಅರ್ಜುನನ ಧ್ವಜವಾಗಲೀ, ಅರ್ಜುನನಾಗಲೀ, ಅರ್ಜುನನ ರಥವಾಗಲೀ, ಕೇಶವನಾಗಲೀ–ಕಾಣಲೇ ಇಲ್ಲ. ನಿಮೇಷಕಾಲ ಅವರು ಕಾಣದೇ ಇದ್ದುದರಿಂದಲೇ ತ್ರೈಗರ್ತ ಯೋಧರು 'ನನ್ನ ಬಾಣಕ್ಕೆ ಅರ್ಜುನನು ಸತ್ತುಬಿದ್ದನು. ನನ್ನ ಬಾಣಕ್ಕೆ ಗೋವಿಂದನೂ ಲಕ್ಷ್ಯನಾದನು. ಪಾರ್ಥ-ಕೃಷ್ಣರನ್ನು ಸಂಹರಿಸಿಯೇ ಬಿಟ್ಟೆವು' ಮುಂತಾಗಿ ಹೇಳಿಕೊಂಡು ಸಿಂಹನಾದಗಳನ್ನು ಮಾಡಿದರು. 'ಕೃಷ್ಣರಿಬ್ಬರೂ ಹತರಾದರು. ದುರ್ಯೋಧನನಿಗೆ ಜಯವಾಗಲಿ ; ತ್ರೈಗರ್ತರಾಜನಿಗೆ ಜಯ ವಾಗಲಿ'–ಇವೇ ಮುಂತಾಗಿ ಜಯಕಾರಮಾಡುತ್ತಾ ಆನಂದತುಂದಿಲರಾದ ಅವರು ತಮ್ಮ ಉತ್ತರೀಯಗಳನ್ನು ಮೇಲಕ್ಕೆ ಹಾರಿಸಿದನು. ಸಾವಿರಾರು ಯೋಧರು ಭೇರೀ-ಮೃದಂಗಗಳನ್ನು ಬಾರಿಸಿದರು. ಶಂಖಗಳನ್ನೂದಿದರು. ಭಯಂಕರವಾದ ರೀತಿಯಲ್ಲಿ ಸಿಂಹನಾದಗಳನ್ನು ಮಾಡಿದರು. ನಿಶ್ಚಯ ವಾಗಿಯೂ ಆ ಸಮಯದಲ್ಲಿ ಶ್ರೀಕೃಷ್ಣನೂ ಬೆವೆತುಹೋದನು. (ಸ್ವಲ್ಪ ಗಾಬರಿಯೇ ಆಯಿತು.) ಖಿನ್ನಮನಸ್ಕನಾಗಿ ಅರ್ಜುನನನ್ನು ಪ್ರಶ್ನಿಸಿದನು :

**ಕ್ವಾಸಿ ಪಾರ್ಥ ನ ಪಶ್ಯೇ ತ್ವಾಂ ಕಚ್ಚಿಜ್ಜೀವಸಿ ಶತ್ರುಹನ್ ॥೨೧॥**

"ಪಾರ್ಥ! ನೀನೆಲ್ಲಿರುವೆ? ನಾನು ನಿನ್ನನ್ನು ಕಾಣುತ್ತಲೇ ಇಲ್ಲವಲ್ಲ? ಶತ್ರುಹಂತಕನೇ! ಇನ್ನೂ ಬದುಕಿರುವೆಯಲ್ಲವೇ? ಮಾತನಾಡು."

ಶ್ರೀಕೃಷ್ಣನು ಹೇಳಿದ ಮಾತುಗಳನ್ನು ಕೇಳಿ ಧನಂಜಯನು ಬಹಳ ಆತುರದಿಂದ ವಾಯವ್ಯಾಸ್ತ್ರವನ್ನು ಪ್ರಯೋಗಿಸಿ ಅವರು ಬಿಟ್ಟಿದ್ದ ಸಾವಿರಾರು ಬಾಣಗಳನ್ನೂ ಕ್ಷಣಮಾತ್ರದಲ್ಲಿ ನಿರಸನಗೊಳಿಸಿದನು. ಆ ವಾಯವ್ಯಾಸ್ತ್ರವು ಬಾಣಗಳನ್ನು ಮಾತ್ರವೇ ನಿರಸನಗೊಳಿಸಿ ಸುಮ್ಮನಾಗಿಬಿಡಲಿಲ್ಲ. ಒಣಗಿದ ತರಗೆಲೆಗಳ ಸಮೂಹವನ್ನು ಬಿರುಗಾಳಿಯು ಹಾರಿಸಿಕೊಂಡು ಹೋಗುವಂತೆ–ಕುದುರೆಗಳಿಂದಲೂ, ಆನೆಗಳಿಂದಲೂ, ರಥಗಳಿಂದಲೂ ಮತ್ತು ಆಯುಧಗಳಿಂದಲೂ ಸಮೇತವಾಗಿದ್ದ ಸಂಶಪ್ತಕಸಮೂಹವೆಲ್ಲವನ್ನೂ ಆ ಮಹಾಸ್ತ್ರವು ಹಾರಿಸಿಕೊಂಡುಹೋಯಿತು.

ಮಾರಿಷ! ಒಂದು ವೃಕ್ಷದಲ್ಲಿರುವ ಅನೇಕಪಕ್ಷಿಗಳು ಸಮಯಬಂದಾಗ ಆ ವೃಕ್ಷವನ್ನು ಬಿಟ್ಟು ಒಟ್ಟಾಗಿ ಹಾರಿಹೋಗುವಂತೆ–ವಾಯುವಿನಿಂದ ಒಯ್ಯಲ್ಪಡುತ್ತಿದ್ದ ಆ ತ್ರೈಗರ್ತಸೈನ್ಯವು ಬಹುವಾಗಿ ಶೋಭಿಸಿತು. ಅರ್ಜುನನು ಈ ರೀತಿಯಲ್ಲಿ ಆ ಸೈನ್ಯಸಮೂಹಕ್ಕೆ ವ್ಯಾಕುಲವನ್ನುಂಟುಮಾಡಿ ಅನಂತರ ನಿಶಿತವಾದ ಸಾವಿರಾರು ಬಾಣಗಳಿಂದ ಲಕ್ಷೋಪಲಕ್ಷಯೋಧರನ್ನು ಬಹಳ ಶೀಘ್ರವಾಗಿ ಸಂಹರಿಸಿದನು. ಭಲ್ಲಗಳೆಂಬ ಬಾಣಗಳಿಂದ ಆ ಯೋಧರ ತಲೆಗಳನ್ನು ಹಾರಿಸುತ್ತಿದ್ದನು. ಆಯುಧಗಳಿಂದ ಸಮೇತವಾದ ತೋಳುಗಳನ್ನೂ ಕತ್ತರಿಸುತ್ತಿದ್ದನು. ಆನೆಯ ಸೊಂಡಿಲಿಗೆ ಸಮಾನವಾಗಿರುತ್ತಿದ್ದ ಯೋಧರ ತೊಡೆಗಳನ್ನೂ ನಿಶಿತವಾದ ಬಾಣಗಳ ಪ್ರಹಾರದಿಂದ ಕತ್ತರಿಸಿ ಭೂಮಿಯ ಮೇಲೆ ಕೆಡವಿದನು. ಕೆಲವರಿಗೆ ಪೃಷ್ಠಭಾಗವೇ ಕತ್ತರಿಸಿ ಹೋಗಿದ್ದಿತು. ಮತ್ತೆ ಕೆಲವರು ಕಾಲುಗಳನ್ನು ಕಳೆದುಕೊಂಡಿದ್ದರು. ಮತ್ತೆ ಕೆಲವರಿಗೆ ತೋಳುಗಳೇ ಇರಲಿಲ್ಲ. ಇನ್ನು ಕೆಲವರಿಗೆ ಒಂದು ಪಾರ್ಶ್ವವೇ ಕತ್ತರಿಸಿಹೋಗಿದ್ದಿತು. ಅನೇಕರು ಕಣ್ಣುಗಳನ್ನು ಕಳೆದುಕೊಂಡಿದ್ದರು. ಈ ರೀತಿಯಾಗಿ ಧನಂಜಯನು ತನ್ನ ಶತ್ರುಯೋಧರನ್ನು ಶರೀರದ ನಾನಾ ಅವಯವಗಳಿಂದ ವಿಹೀನರನ್ನಾಗಿ ಮಾಡಿದನು. ಆಕಾಶದಲ್ಲಿರುವ ಗಂಧರ್ವನಗರಗಳ ಆಕಾರವನ್ನು ಹೊಂದಿದ್ದ ವಿಧಿವತ್ತಾಗಿ ನಿರ್ಮಿಸಲ್ಪಟ್ಟಿದ್ದ ರಥಗಳನ್ನು ಅರ್ಜುನನು ಛಿನ್ನ- ಭಿನ್ನಗಳನ್ನಾಗಿ ಮಾಡಿದನಲ್ಲದೇ–

ಎದುರಾಳಿಗಳನ್ನೂ ಅಶ್ವ-ರಥ-ಗಜಗಳಿಂದ ವಿಹೀನರನ್ನಾಗಿಯೂ ಮಾಡಿದನು. ಅಲ್ಲಲ್ಲಿ ಕತ್ತರಿಸಿಬಿದ್ದಿದ್ದ ಕೆಲವು ರಥಧ್ವಜಗಳ ಸಮೂಹಗಳು–ತಲೆಯನ್ನು ಕತ್ತರಿಸಿದ ತಾಳೆಯಮರಗಳ ಅರಣ್ಯಗಳಂತೆ–ಕಾಣುತ್ತಿದ್ದುವು. (ರಥಗಳ ಧ್ವಜಪಟಗಳು ಕತ್ತರಿಸಿಬಿದ್ದಿದ್ದು ಕೇವಲ ದಂಡಗಳೇ ಸರ್ವತ್ರ ಕಾಣುತ್ತಿದ್ದುದರಿಂದ ಅವುಗಳು ಬೋಳು ತಾಳೇಮರಗಳಂತೆ ಕಾಣುತ್ತಿದ್ದುವು.) ಆಯುಧಪಾಣಿಗಳಾದ ಯೋಧರಿಂದಲೂ, ಪತಾಕಾಂಕುಶ-ಧ್ವಜಗಳಿಂದಲೂ ಕೂಡಿದ್ದ ಆನೆಗಳು ಇಂದ್ರನ ವಜ್ರಾಯುಧದಿಂದ ಪ್ರಹೃತವಾದ ವೃಕ್ಷಸಹಿತವಾದ ಪರ್ವತಗಳೋಪಾದಿಯಲ್ಲಿ ಅರ್ಜುನನ ಬಾಣಗಳಿಂದ ಹತವಾಗಿ ಭೂಮಿಯ ಮೇಲೆ ಬಿದ್ದುವು. ಚಾಮರಗಳಿಂದಲೂ, ಮಾಲೆಗಳಿಂದಲೂ ಮತ್ತು ಕವಚಗಳಿಂದಲೂ ಸವಾರರಿಂದಲೂ ಕೂಡಿದ್ದ ಅನೇಕ ಕುದುರೆಗಳು ಪಾರ್ಥನ ಬಾಣಗಳಿಂದ ಹತವಾಗಿ ಭೂಮಿಯ ಮೇಲೆ ಬಿದ್ದಿದ್ದುವು. ಅವುಗಳ ಕರುಳುಗಳೂ ಮತ್ತು ಕಣ್ಣುಗುಡ್ಡೆಗಳೂ ಹೊರಕ್ಕೆ ಚಾಚಿಕೊಂಡಿದ್ದುವು. ಪದಾತಿಸೈನ್ಯಗಳ ಕತ್ತಿಗಳೂ, ನಖರುಗಳೂ (ಹುಲಿಯುಗುರು) ತುಂಡಾಗಿ ಭೂಮಿಯ ಮೇಲೆ ಬಿದ್ದಿದ್ದುವು. ಅವರು ಧರಿಸಿದ್ದ ಕವಚಗಳೂ ಕಡಿದು ಹೋಗಿ ಕಳಚಿಬಿದ್ದಿದುವು. ಪದಾತಿಗಳ ಋಷ್ಟಿಗಳೂ, ಶಕ್ತ್ಯಾಯುಧಗಳೂ ರಣಾಂಗಣದಲ್ಲಿ ರಾಶಿರಾಶಿಯಾಗಿ ಬಿದ್ದಿದ್ದುವು. ಕತ್ತರಿಸಿಹೋಗಿದ್ದ ಕವಚಗಳಿಂದ ಕೂಡಿದ್ದ ಪದಾತಿಗಳು ದೀನರಾಗಿ ಅರ್ಜುನನ ಬಾಣಗಳಿಂದ ಹತರಾಗಿ ಭೂಮಿಯ ಮೇಲೆ ಬಿದ್ದಿದ್ದರು. ಅನೇಕ ತ್ರೈಗರ್ತವೀರರು ಸತ್ತೇಹೋಗಿದ್ದರು ; ಮತ್ತೆ ಕೆಲವರು ಸಾಯುವುದರಲ್ಲಿದ್ದರು ; ಕೆಲವರು ತೂರಾಡಿಕೊಂಡು ತಿರುಗುತ್ತಿದ್ದರು ; ಮತ್ತೆ ಕೆಲವರು ಕೂಗಿಕೊಳ್ಳುತ್ತಿದ್ದರು. ಇಂತಹವರಿಂದ ರಣಾಂಗಣವು ಬಹಳ ಭಯಂಕರವಾಗಿ ಕಾಣುತ್ತಿದ್ದಿತು.

ಆ ಸಮಯದಲ್ಲಿ ಸೈನಿಕರ ಪದಸಂಘಟ್ಟನೆಯಿಂದಾಗಿ ರಣಾಂಗಣದಲ್ಲಿ ಅಪಾರವಾದ ಧೂಳೆದ್ದಿತು. ಆದರೆ ರಕ್ತದ ವೃಷ್ಟಿಯಿಂದಾಗಿ ಆ ಧೂಳು ಮೇಲೇಳದೇ ಉಡುಗಿಹೋಯಿತು. ನೂರಾರು-ಸಾವಿರಾರು ಮುಂಡಗಳಿಂದ ಸಮಾಕುಲವಾಗಿದ್ದುದರಿಂದ ಆ ರಣಾಂಗಣವು ಪ್ರವೇಶಕ್ಕೂ ಬಹಳ ದುರ್ಗಮವಾಗಿದ್ದಿತು. ಬೀಭತ್ಸುವಿನ (ಅರ್ಜುನನ) ರಥವು ಆ ಯುದ್ಧ ಸಮಯದಲ್ಲಿ ಭಯಂಕರವೂ, ಜುಗುಪ್ಸಿತವೂ ಆಗಿ ಪ್ರಕಾಶಿಸುತ್ತಿದ್ದಿತು.

ಪ್ರಳಯಕಾಲದಲ್ಲಿ ಪ್ರಾಣಿಗಳನ್ನು ಸಂಹರಿಸುವ ರುದ್ರನ ಕ್ರೀಡಾಸ್ಥಳದಂತೆ ಆ ರಥವು ಕಾಣುತ್ತಿದ್ದಿತು. ಪಾರ್ಥನಿಂದ ಪೀಡಿತವಾದ ರಥ-ಗಜಾಶ್ವ-ಪದಾತಿಗಳು ವ್ಯಾಕುಲಗೊಂಡು ಅರ್ಜುನನಿಗೆ ಎದುರಾಗಿಯೇ ಮುಖಮಾಡಿ ಪ್ರಾಣಗಳನ್ನು ತೊರೆದು ಶಕ್ರನ ಅತಿಥಿಗಳಾಗಿ ಇಂದ್ರಲೋಕಕ್ಕೆ ಪ್ರಯಾಣಮಾಡುತ್ತಿದ್ದುವು. ಭರತಶ್ರೇಷ್ಠನೇ! ಅರ್ಜುನನಿಂದ ಹತರಾದ ತ್ರೈಗರ್ತಮಹಾರಥದಿಂದ ವ್ಯಾಪ್ತವಾಗಿದ್ದ ಆ ರಣಾಂಗಣವು ಪ್ರೇತಗಳಿಂದಲೇ ತುಂಬುವುದೋ– ಎಂಬಂತೆ ಕಾಣುತ್ತಿದ್ದಿತು. ಈ ರೀತಿಯಲ್ಲಿ ಅರ್ಜುನನು ತ್ರಿಗರ್ತರೊಡನೆ ಯುದ್ಧದಲ್ಲಿ ತಲ್ಲೀನನಾಗಿರಲಾಗಿ, ಅದೇ ಸಮಯದಲ್ಲಿ ದ್ರೋಣರು ದುರ್ಗಮವಾದ ವ್ಯೂಹವನ್ನು ರಚಿಸಿ ಯುಧಿಷ್ಠಿರನ ಮೇಲೆ ದಾಳಿಮಾಡಿದರು. ವ್ಯೂಹಕ್ರಮದಲ್ಲಿ ಯುದ್ಧಸನ್ನದ್ಧರಾಗಿದ್ದ ಪ್ರಹಾರಕುಶಲರಾಗಿದ್ದ ದುರ್ಯೋಧನನ ಕಡೆಯ ಯೋಧರು ಯುಧಿಷ್ಠಿರನನ್ನು ಸೆರೆಹಿಡಿಯುವ ಸಲುವಾಗಿ ಅವನನ್ನು ಎದುರಿಸಿದರು. ಒಡನೆಯೇ ಭಯಂಕರವಾದ ಯುದ್ಧವು ಪ್ರಾರಂಭವಾಯಿತು."

೧೯ನೆಯ ಅಧ್ಯಾಯವು ಮುಗಿಯಿತು.

೨೦ನೆಯ ಅಧ್ಯಾಯ — ಸಂಶಪ್ತಕವಧಪರ್ವ (ಮುಂದುವರಿದಿದೆ.)

## ದ್ರೋಣರು ಗರುಡವ್ಯೂಹವನ್ನು ನಿರ್ಮಿಸಿದುದು : ಯುಧಿಷ್ಠಿರನ ಭಯ : ಧೃಷ್ಟದ್ಯುಮ್ನನಿಂದ ಆಶ್ವಾಸನೆ : ಧೃಷ್ಟದ್ಯುಮ್ನ-ದುರ್ಮುಖರ ಯುದ್ಧ : ಸಂಕುಲಯುದ್ಧದಲ್ಲಿ ಗಜಸೈನ್ಯದ ಸಂಹಾರ

ಸಂಜಯನು ಹನ್ನೆರಡನೆಯ ದಿವಸದ ಯುದ್ಧವಾರ್ತೆಯನ್ನು ಮುಂದುವರಿಸುತ್ತಾನೆ :

"ಮಹಾರಾಜ! ಮಹಾರಥರಾದ ಭಾರದ್ವಾಜರು ಶಿಬಿರದಲ್ಲಿ ರಾತ್ರಿಯನ್ನು ಕಳೆದು ದುರ್ಯೋಧನನೊಡನೆ ಯುದ್ಧದ ವಿಷಯವಾಗಿ ಅನೇಕ ಸಮಾಲೋಚನೆಗಳನ್ನು ನಡೆಸಿದರು. ಸಂಶಪ್ತಕರು ಅರ್ಜುನನೊಡನೆ ಯುದ್ಧಮಾಡುವಂತೆ ತಂತ್ರಮಾಡಿದರು. ಸಂಶಪ್ತಕರ ವಧೆಗಾಗಿ ಪಾರ್ಥನು ಬಹಳ ದೂರ ಹೊರಟುಹೋದನಂತರ ದ್ರೋಣರು ತಮ್ಮ ಸೈನ್ಯವನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿ ಧರ್ಮರಾಜನನ್ನು ಸೆರೆಹಿಡಿಯುವ ಆಶಯದಿಂದ ಪಾಂಡವರ ಮಹಾಸೈನ್ಯದ ಮೇಲೆ ಆಕ್ರಮಣನಡೆಸಿದರು. ದ್ರೋಣರು

ನಿರ್ಮಿಸಿದ್ದ ಸುಪರ್ಣವ್ಯೂಹವನ್ನು ನೋಡಿ ಯುಧಿಷ್ಠಿರನು ಆ ವ್ಯೂಹಕ್ಕೆ ಪ್ರತಿಯಾಗಿ ಮಂಡಲಾರ್ಧವ್ಯೂಹವನ್ನು ರಚಿಸಿದನು.

ದ್ರೋಣರು ರಚಿಸಿದ ಸುಪರ್ಣವ್ಯೂಹದಲ್ಲಿ ಮಹಾರಥರಾದ ದ್ರೋಣರೇ ಮುಖಭಾಗದಲ್ಲಿದ್ದರು. ಅನುಯಾಯಿಗಳಿಂದಲೂ, ಸೋದರರಿಂದಲೂ ಪರಿವೃತನಾಗಿದ್ದ ದುರ್ಯೋಧನನು ಪಕ್ಷಿಯ ಶಿರಸ್ಸಿನ ಸ್ಥಾನದಲ್ಲಿದ್ದನು. ಎರಡು ಕಣ್ಣುಗಳ ಸ್ಥಾನದಲ್ಲಿ ಕೃತವರ್ಮನೂ, ಬಾಣಬಿಡುವುದರಲ್ಲಿ ಶ್ರೇಷ್ಠರಾದ ಗೌತಮರೂ ಇದ್ದರು. ಭೂತಶರ್ಮಾ, ಕ್ಷೇಮಶರ್ಮಾ, ಪರಾಕ್ರಮಿಯಾದ ಕರಕಾಶ, ಕಲಿಂಗರು, ಸಿಂಹಲರು, ಪೂರ್ವದೇಶದ ಸೈನಿಕರು, ಶೂರರಾದ ಆಭೀರರು, ದಶೇರಕರು, ಶಕರು, ಯವನರು, ಕಾಂಬೋಜರು, ಶೂರಸೇನರು, ದರದರು, ಮದ್ರರು, ಕೇಕಯರು, ಹಂಸಪಥರು–ಇವರೆಲ್ಲರೂ ಗಜಾಶ್ವ-ರಥ-ಪದಾತಿಗಳಿಂದ ಕೂಡಿದವರಾಗಿ ಕವಚಗಳನ್ನು ಧರಿಸಿ ಗರುಡಪಕ್ಷಿಯ ಕುತ್ತಿಗೆಯ ಪ್ರದೇಶದಲ್ಲಿ ನಿಂತಿದ್ದರು. ಭೂರಿಶ್ರವಸ, ಶಲ್ಯ, ಸೋಮದತ್ತ ಮತ್ತು ಬಾಹ್ಲಿಕ–ಇವರು ಅಕ್ಷೌಹಿಣೀಸೈನ್ಯದಿಂದ ಪರಿವೃತರಾಗಿ ಗರುಡವ್ಯೂಹದ ದಕ್ಷಿಣಪಾರ್ಶ್ವದಲ್ಲಿ ನಿಂತಿದ್ದರು. ಅವಂತಿಯ ರಾಜಕುಮಾರರಾದ ವಿಂದಾನುವಿಂದರೂ, ಕಾಂಬೋಜರಾಜನಾದ ಸುದಕ್ಷಿಣನೂ ವ್ಯೂಹದ ವಾಮಪಾರ್ಶ್ವವನ್ನು ಆಶ್ರಯಿಸಿ ದ್ರೋಣರ ಮಗನಾದ ಅಶ್ವತ್ಥಾಮನ ಮುಂಭಾಗದಲ್ಲಿ ನಿಂತಿದ್ದರು. ಸುಪರ್ಣವ್ಯೂಹದ ಹಿಂಭಾಗದಲ್ಲಿ ಅಂಬಷ್ಠರೊಡನೆ ಕಲಿಂಗರೂ, ಮಾಗಧರೂ, ಪೌಂಡ್ರರೂ, ಮದ್ರಕರೂ, ಗಾಂಧಾರರೂ, ಶಕುನರೂ, ಪೂರ್ವದೇಶೀಯರೂ, ಪರ್ವತೀಯರೂ ಮತ್ತು ವಸಾತಿಗಳೂ ನಿಂತಿದ್ದರು. ಗರುಡವ್ಯೂಹದ ಪುಚ್ಛಭಾಗದಲ್ಲಿ ನಾನಾ ದೇಶಗಳಿಂದ ಬಂದಿದ್ದ ದೊಡ್ಡದಾದ ಸೈನ್ಯದೊಡನೆ ಪುತ್ರ-ಜ್ಞಾತಿ-ಬಾಂಧವ ಸಹಿತನಾದ ಕರ್ಣನು ನಿಂತಿದ್ದನು. ಯುದ್ಧವಿಶಾರದರಾದ, ಬ್ರಹ್ಮಲೋಕ ಪ್ರಾಪ್ತಿಯನ್ನೇ ಲಕ್ಷ್ಯವನ್ನಾಗಿಟ್ಟುಕೊಂಡಿದ್ದ ಜಯದ್ರಥ, ಭೀಮರಥ, ಸಂಪಾತಿ, ಋಷಭ, ಜಯ, ಭೂಮಿಂಜಯ, ವೃಷಕ್ರಾಥ, ಮಹಾಬಲಿಷ್ಠನಾದ ನಿಷಧರಾಜ–ಇವರೆಲ್ಲರೂ ದೊಡ್ಡದಾದ ಸೈನ್ಯದೊಡನೆ ಗರುಡವ್ಯೂಹದ ವಕ್ಷಃಸ್ಥಳದ ಪ್ರದೇಶದಲ್ಲಿದ್ದರು. ರಥಾಶ್ವ-ಗಜ-ಪದಾತಿಗಳ ಮೂಲಕವಾಗಿ ದ್ರೋಣರಿಂದ ರಚಿತವಾಗಿದ್ದ ಆ ಮಹಾವ್ಯೂಹವು ಬಿರುಗಾಳಿಯಿಂದ ಅಲ್ಲೋಲ-ಕಲ್ಲೋಲ

ಮಾಡಲ್ಪಟ್ಟ ಸಮುದ್ರದ ಆಕಾರವನ್ನು ಹೊಂದಿ–ಯುದ್ಧಕ್ಕೆ ಹೊರಟಿರುವುದೋ ಎಂಬಂತೆ ಕಾಣುತ್ತಿದ್ದಿತು. ವರ್ಷಾಕಾಲದಲ್ಲಿ ಮಿಂಚಿನಿಂದ ಕೂಡಿ ಗರ್ಜಿಸುವ ಮೇಘಗಳು ಎಲ್ಲ ದಿಕ್ಕುಗಳಿಂದಲೂ ಬಂದುಸೇರುವಂತೆ–ಆ ಗರುಡವ್ಯೂಹದ ಪಕ್ಷ-ಪ್ರಪಕ್ಷಗಳಿಂದ ಯುದ್ಧೋತ್ಸಾಹಿಗಳಾದ ಯೋಧರು ರಣರಂಗಕ್ಕೆ ಧುಮುಕುತ್ತಿದ್ದರು. ಆ ವ್ಯೂಹದ ಮಧ್ಯಭಾಗದಲ್ಲಿ ವಿಧಿವತ್ತಾಗಿ ಸಜ್ಜುಗೊಳಿಸಿದ್ದ ಆನೆಯ ಮೇಲೆ ಭಗದತ್ತನು ಕುಳಿತಿದ್ದು–ಉದಯಾಚಲದಲ್ಲಿ ಸೂರ್ಯನು ಪ್ರಕಾಶಿಸುವಂತೆಯೇ–ಪ್ರಕಾಶಿಸುತ್ತಿದ್ದನು. ಮಹಾರಾಜ! ಭಗದತ್ತನ ತಲೆಯ ಮೇಲೆ ಪುಷ್ಪಮಾಲೆಗಳಿಂದ ಸಮಲಂಕೃತವಾದ ಸುವರ್ಣದಾಮಗಳಿಂದ (ಹಗ್ಗ) ಕಟ್ಟಲ್ಪಟ್ಟಿದ್ದ ಶ್ವೇತಚ್ಛತ್ರಿಯಿದ್ದಿತು. ಅದರಿಂದ ಕೃತ್ತಿಕಾನಕ್ಷತ್ರಯುಕ್ತವಾದ ಹುಣ್ಣಿಮೆಯ (ಕಾರ್ತಿಕಮಾಸದ ಹುಣ್ಣಿಮೆ) ಚಂದ್ರನಂತೆಯೇ ಭಗದತ್ತನು ಪ್ರಕಾಶಿಸುತ್ತಿದ್ದನು.

ಮದದಿಂದ ಕೊಬ್ಬಿಹೋಗಿದ್ದ, ಕಾಡಿಗೆಯ ರಾಶಿಯಂತೆಯೇ ಕಾಣುತ್ತಿದ್ದ ಭಗದತ್ತನ ಆನೆಯು ದೊಡ್ಡ-ದೊಡ್ಡ ಮೇಘಗಳಿಂದ ಉಂಟಾದ ಅತಿವೃಷ್ಟಿಯಿಂದ ತೋಯ್ದುಹೋದ ಪರ್ವತದಂತೆಯೇ–ಪ್ರಕಾಶಿಸುತ್ತಿದ್ದಿತು. ಇಂದ್ರನು ದೇವಗಣಗಳಿಂದ ಪರಿವೃತನಾಗಿ ಸುಶೋಭಿಸುವಂತೆ ವಿಧ-ವಿಧವಾದ ಆಯುಧಗಳಿಂದ ಭೂಷಿತರಾದ, ಪರ್ವತಪ್ರದೇಶದ ನಾನಾ ರಾಜರಿಂದ ಸಮಾವೃತನಾದ ಭಗದತ್ತನು ಪ್ರಕಾಶಿಸಿದನು.

ಅನಂತರ ಯುಧಿಷ್ಠಿರನು ಅತಿಮಾನುಷವೂ, ಶತ್ರುಗಳಿಗೆ ಅಜಯ್ಯವೂ ಆದ ಗರುಡವ್ಯೂಹವನ್ನು ನೋಡಿ ತನ್ನ ಸೇನೆಯ ದಂಡನಾಯಕನಾದ ಧೃಷ್ಟದ್ಯುಮ್ನನಿಗೆ ಹೇಳಿದನು :

"ಪಾರ್ಷತ! ಪಾರಿವಾಳದ ಬಣ್ಣದಂತೆ ಬಣ್ಣವುಳ್ಳ ಕುದುರೆಗಳನ್ನು ಹೊಂದಿರುವ ವೀರನೇ! ನಾನು ಬ್ರಾಹ್ಮಣಶ್ರೇಷ್ಠರಾದ ದ್ರೋಣರಿಗೆ ವಶವಾಗದ ರೀತಿಯಲ್ಲಿ ನೀನು ನಮ್ಮ ಯುದ್ಧನೀತಿಯನ್ನು ರೂಪಿಸಬೇಕಾಗಿದೆ."

"ಸುವ್ರತನೇ! ದ್ರೋಣರು ಎಷ್ಟೇ ಪ್ರಯತ್ನಿಸಿದರೂ ನೀನವರ ವಶನಾಗುವುದಿಲ್ಲ. ಅನುಯಾಯಿಗಳೊಡನಿರುವ ದ್ರೋಣರನ್ನು ನಾನು ಖಂಡಿತವಾಗಿಯೂ ನಿನ್ನ ಸಮೀಪಕ್ಕೆ ಬರದಂತೆಯೇ ತಡೆಯುತ್ತೇನೆ.

**ಮಯಿ ಜೀವತಿ ಕೌರವ್ಯ ನೋದ್ವೇಗಂ ಕರ್ತುಮರ್ಹಸಿ ।**
**ನ ಹಿ ಶಕ್ತೋ ರಣೇ ದ್ರೋಣೋ ವಿಜೇತುಂ ಮಾಂ ಕಥಂಚನ ॥೨೩॥**

ಕೌಂತೇಯ! ನಾನು ಜೀವಿಸಿರುವವರೆಗೆ ನೀನು ಖಂಡಿತವಾಗಿಯೂ ಭಯಪಡುವ ಕಾರಣವಿಲ್ಲ. ಯುದ್ಧದಲ್ಲಿ ನನ್ನನ್ನು ಜಯಿಸಲು ದ್ರೋಣರು ನಿಶ್ಚಯವಾಗಿಯೂ ಸಮರ್ಥರಲ್ಲ. ನನ್ನನ್ನವರು ಯಾವುದೇ ಕಾರಣದಿಂದಲೂ ಜಯಿಸಲಾರರು."

ಮಹಾರಾಜ! ಹೀಗೆಂದು ಹೇಳಿ ಯುಧಿಷ್ಠಿರನನ್ನು ಆಶ್ವಸಿಸಿ ದ್ರುಪದನ ಮಗನಾದ, ಬಲಿಷ್ಠನಾದ ಧೃಷ್ಟದ್ಯುಮ್ನನು ದ್ರೋಣರ ಮೇಲೆ ಅಪಾರವಾದ ಬಾಣಗಳನ್ನು ಸುರಿಸುತ್ತಾ ಅವರನ್ನು ಆಕ್ರಮಿಸಿದನು. ತಮ್ಮ ಭಾಗಕ್ಕೆ ಅನಿಷ್ಟಸೂಚಕವಾದ ಮುಖಲಕ್ಷಣವುಳ್ಳ ಧೃಷ್ಟದ್ಯುಮ್ನನು ತಮ್ಮೆದುರಾಗಿ ಬಂದು ನಿಂತುದನ್ನು ನೋಡಿ ದ್ರೋಣರು ಕ್ಷಣಮಾತ್ರದಲ್ಲಿ ಖಿನ್ನಮನಸ್ಕರಾದರು. ದ್ರೋಣರು ಖಿನ್ನಮನಸ್ಕರಾದುದನ್ನು ಕಂಡು ನಿನ್ನ ಮಗನಾದ ಶತ್ರುಕರ್ಷಣನಾದ ದುರ್ಮುಖನು, ದ್ರೋಣರಿಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ದ್ರೋಣರ ಮೇಲೆರಗಿಬಂದ ಧೃಷ್ಟದ್ಯುಮ್ನನನ್ನು ತಡೆದು ನಿಲ್ಲಿಸಿದನು. ಪಾರ್ಷತನಿಗೂ ಮತ್ತು ಶೂರನಾದ ದುರ್ಮುಖನಿಗೂ ಆ ಸಮಯದಲ್ಲಿ ನಡೆಯುತ್ತಿದ್ದ ದ್ವಂದ್ವಯುದ್ಧವು ಭೀಕರರೂಪವನ್ನು ತಾಳಿತು. ಪಾರ್ಷತನು ಬಾಣಗಳ ಸಮೂಹಗಳಿಂದ ದುರ್ಮುಖನನ್ನು ಆಚ್ಛಾದಿಸಿ, ದ್ರೋಣರನ್ನೂ ಸಹ ದೊಡ್ಡದಾದ ಬಾಣಗಳ ಸಮೂಹದಿಂದ ಮುಂದಕ್ಕೆ ಅಡಿಯಿಡದಂತೆ ತಡೆದುಬಿಟ್ಟನು. ಧೃಷ್ಟದ್ಯುಮ್ನನು ದ್ರೋಣರನ್ನು ತಡೆದುದನ್ನು ನೋಡಿ ನಿನ್ನ ಮಗನಾದ ದುರ್ಮುಖನು ಪ್ರಯತ್ನಪೂರ್ವಕವಾಗಿ ನಾನಾಪ್ರಕಾರವಾದ ಬಾಣಗಳ ಸಮೂಹಗಳಿಂದ ಧೃಷ್ಟದ್ಯುಮ್ನನನ್ನು ಭ್ರಾಂತನನ್ನಾಗಿ ಮಾಡಿದನು.

ಪಾಂಚಾಲರಾಜಕುಮಾರನಾದ ಧೃಷ್ಟದ್ಯುಮ್ನನೂ ಮತ್ತು ಕುರು ಮುಖ್ಯನಾದ ದುರ್ಮುಖನೂ ಯುದ್ಧದಲ್ಲಿ ತೊಡಗಿರಲಾಗಿ, ದ್ರೋಣರು ಯುಧಿಷ್ಠಿರನ ಸೈನ್ಯವನ್ನು ಬಾಣಗಳಿಂದ ಅನೇಕಪ್ರಕಾರವಾಗಿ ಪೀಡಿಸಿದರು. ಯಾವ ರೀತಿಯಲ್ಲಿ ಮೋಡಗಳೆಲ್ಲವೂ ಬಿರುಗಾಳಿಯಿಂದ ಚದುರಿಹೋಗುತ್ತವೆಯೋ–ಅದೇ ರೀತಿಯಲ್ಲಿ ದ್ರೋಣರ ಬಾಣಗಳಿಂದ ಯುಧಿಷ್ಠಿರನ ಸೈನ್ಯವು ಅಲ್ಲಲ್ಲಿ ಚದುರಿಹೋಯಿತು. ಮುಹೂರ್ತಕಾಲಮಾತ್ರ ಆ

ಯುದ್ಧವು ನೋಡಲು ಚೆನ್ನಾಗಿಯೇ ಕಾಣುತ್ತಿದ್ದಿತು. ಅನಂತರ ಆ ರಣರಂಗವು ಉನ್ಮತ್ತರಿಂದ ತುಂಬಿಹೋಗಿರುವುದೋ ಎಂಬಂತೆ ಅಲ್ಲಿ ಯುದ್ಧ ಮರ್ಯಾದೆಗಳನ್ನೆಲ್ಲಾ ಮೀರಿ ಘೋರವಾದ ಸಂಹಾರಕಾರ್ಯವು ನಡೆಯ ತೊಡಗಿತು. 'ಇವರು ನಮ್ಮವರೇ ಅಥವಾ ಶತ್ರುಪಕ್ಷದವರೇ?' ಎಂಬುದನ್ನೂ ಯೋಧರು ತಿಳಿದುಕೊಳ್ಳಲಾಗುತ್ತಿರಲಿಲ್ಲ. ಅನುಮಾನದಿಂದಲೂ ಮತ್ತು ಅವರು ಮಾಡುತ್ತಿದ್ದ ಕೆಲವು ಸಂಜ್ಞೆಗಳಿಂದಲೂ ತಮ್ಮವರು ಅಥವಾ ಶತ್ರುಗಳು–ಎಂಬುದನ್ನು ತಿಳಿದು ಅವರು ಪರಸ್ಪರವಾಗಿ ಯುದ್ಧಮಾಡುತ್ತಿದ್ದರು. ಅವರು ಯುದ್ಧಮಾಡುತ್ತಿದ್ದಾಗ ಆ ಯೋಧರ ಕಿರೀಟಗಳಲ್ಲಿ, ಹಾರಗಳಲ್ಲಿ, ಆಭರಣಗಳಲ್ಲಿ ಕವಚಗಳಲ್ಲಿ–ಸೂರ್ಯನ ರಶ್ಮಿಗೆ ಸಮಾನವಾದ ರಶ್ಮಿಗಳು ಥಳ-ಥಳನೆ ಹೊಳೆಯುತ್ತಿದ್ದುವು. ಆ ರಣರಂಗದಲ್ಲಿ ಹಾರಾಡುತ್ತಿದ್ದ ಪತಾಕೆಗಳಿಂದ ಕೂಡಿದ್ದ ರಥ-ಗಜಾಶ್ವಗಳ ರೂಪವು ಬೆಳ್ಳಕ್ಕಿಗಳಿಂದ ಚಿತ್ರಿತವಾದ ಮೇಘದೋಪಾದಿಯಲ್ಲಿ ಕಾಣಿಸುತ್ತಿದ್ದಿತು. ಮೊದಲು-ಮೊದಲು ಪದಾತಿಗಳೊಡನೆ ಪದಾತಿಗಳೇ ಯುದ್ಧಮಾಡಿ ಅವರನ್ನು ಸಂಹರಿಸುತ್ತಿದ್ದರು. ಪ್ರಚಂಡವಾದ ಅಶ್ವಸೈನ್ಯಗಳು-ಅಶ್ವಸೈನ್ಯಗಳನ್ನೇ ಆಕ್ರಮಿಸಿ ಸಂಹರಿಸುತ್ತಿದ್ದುವು. ರಥಿಗಳು-ರಥಿಗಳ ಮೇಲೆಯೇ ಯುದ್ಧಕ್ಕೆ ಹೋಗಿ ರಥಿಕರನ್ನು ಸಂಹರಿಸುತ್ತಿದ್ದರು. ಆನೆಗಳು-ಆನೆಗಳ ಮೇಲೆಯೇ ಯುದ್ಧ ಮಾಡಿ ಅವುಗಳನ್ನು ಸಂಹರಿಸುತ್ತಿದ್ದುವು. ಎತ್ತರವಾದ ಪತಾಕೆಗಳನ್ನು ಹೊಂದಿದ್ದ ನಮ್ಮ ಕಡೆಯ ಗಜಸೈನಿಕರಿಗೂ ಶತ್ರುಪಕ್ಷದ ಗಜಸೈನಿಕರಿಗೂ ಅತ್ಯಂತಭಯಂಕರವಾದ ಮತ್ತು ಘೋರವಾದ ಸಂಗ್ರಾಮವು ಪ್ರಾರಂಭವಾಯಿತು. ಅವುಗಳ ಶರೀರಗಳು ಪರಸ್ಪರವಾಗಿ ಸಂಸಕ್ತವಾಗಿದ್ದುವು. ಒಂದು ಆನೆಯು ತನ್ನ ಸೊಂಡಿಲಿನಿಂದ ಮತ್ತೊಂದು ಆನೆಯನ್ನು ಸೆಳೆದಾಡುತ್ತಿದ್ದಿತು. ಅವುಗಳ ದಂತಗಳ ಪರಸ್ಪರಸಂಘರ್ಷಣದಿಂದಾಗಿ ಹೊಗೆಯಿಂದ ಕೂಡಿದ ಬೆಂಕಿಯು ಪ್ರಾದುರ್ಭೂತವಾಯಿತು. ಆನೆಗಳು ಪರಸ್ಪರವಾಗಿ ಸಂಘರ್ಷಿಸುತ್ತಿದ್ದಾಗ ಅವುಗಳ ಮೇಲಿದ್ದ ಪತಾಕೆಗಳು ಛಿದ್ರ-ಛಿದ್ರವಾಗಿ ಸರ್ವತ್ರ ವ್ಯಾಪ್ತವಾಗುತ್ತಿದ್ದುವು. ದಂತಗಳ ಘರ್ಷಣೆಯಿಂದ ಹುಟ್ಟಿದ ಅಗ್ನಿಯಿಂದ ಕೂಡಿದ ಆನೆಗಳು–ಅವುಗಳೇನಾದರೂ ಆಕಾಶಕ್ಕೆ ಹೋಗಿ ಮಿಂಚಿನಿಂದ ಕೂಡಿದ ಮೇಘಗಳಾಗಿ ಪರಿವರ್ತನೆಹೊಂದಿವೆಯೋ–ಎಂಬಂತೆ

ಕಾಣುತ್ತಿದ್ದುವು. ಕೆಲವು ಮದಗಜಗಳು ತಮ್ಮ ಎದುರಾಳಿಗಳ ಆನೆಗಳನ್ನು ಹಿಡಿದೆಳೆದು ದೂರಕ್ಕೆ ತಳ್ಳಿ ಸಂಹರಿಸಿಬಿಡುತ್ತಿದ್ದುವು. ಮತ್ತೂ ಕೆಲವು ಆನೆಗಳು ಘೀಂಕರಿಸುತ್ತಿದ್ದುವು. ಮತ್ತೆ ಕೆಲವು ಆನೆಗಳು ಸತ್ತು ಕೆಳಕ್ಕೆ ಬೀಳುತ್ತಿದ್ದುವು. ಇಂತಹ ಆನೆಗಳಿಂದ ವ್ಯಾಪ್ತವಾಗಿದ್ದ ರಣಾಂಗಣವು ಶರತ್ಕಾಲದ ಮೇಘಗಳಿಂದ ಆಚ್ಛಾದಿತವಾದ–ಆಕಾಶದಂತೆಯೇ ಕಾಣುತ್ತಿದ್ದಿತು. ಬಾಣ-ತೋಮರ-ಋಷ್ಟಿಗಳಿಂದ ಪ್ರಹೃತವಾದ ಆನೆಗಳ ಚೀತ್ಕಾರ ಶಬ್ದವು ಪ್ರಳಯಕಾಲದ ಮೇಘಗಳ ಶಬ್ದಕ್ಕೆ ಸದೃಶವಾಗಿದ್ದಿತು.

ಕೆಲವು ಆನೆಗಳು ತೋಮರಗಳ ಪ್ರಹಾರಗಳಿಂದಲೂ, ಮತ್ತೆ ಕೆಲವು ದೊಡ್ಡ-ದೊಡ್ಡ ಆನೆಗಳು ಬಾಣಗಳ ಪ್ರಹಾರಗಳಿಂದಲೂ ಭಯಗೊಂಡಿದ್ದುವು. ಮತ್ತೆ ಕೆಲವು ಆನೆಗಳು ಇತರ ಆನೆಗಳನ್ನನುಸರಿಸಿ ಘೀಳಿಡುತ್ತಾ ಓಡಿಹೋಗುತ್ತಿದ್ದುವು. ಕೆಲವು ಆನೆಗಳು ಎದುರು ಪಕ್ಷದ ಆನೆಗಳ ದಂತಗಳಿಂದ ಪ್ರಹರಿಸಲ್ಪಟ್ಟುವುಗಳಾಗಿ–ಉತ್ಪಾತಕಾಲದಲ್ಲಿ ಮೇಘಗಳು ಶಬ್ದಮಾಡುವಂತೆ–ಘೋರವಾದ ಆರ್ತಧ್ವನಿಗಳನ್ನು ಮಾಡುತ್ತಿದ್ದುವು. ಕೆಲವು ಆನೆಗಳು ಶತ್ರುಪಕ್ಷದ ಮದಗಜಗಳಿಂದ ಪ್ರಹೃತವಾಗಿ ಗಾಯಗೊಂಡು ಪಲಾಯನಮಾಡುತ್ತಿದ್ದಾಗ, ಮಾವುತರ ಅಂಕುಶಗಳಿಂದ ಪುನಃ-ಪುನಃ ತಿವಿಯಲ್ಪಟ್ಟು ರಣಾಂಗಣಕ್ಕೆ ಹಿಂದಿರುಗುವಂತೆ ಪ್ರೇರಿತವಾಗಿ, ತಮ್ಮ ಕಡೆಯ ಸೈನಿಕರನ್ನೇ ತುಳಿದು ಧ್ವಂಸಮಾಡುತ್ತಾ ಹಿಂದಿರುಗುತ್ತಿದ್ದುವು. ಆನೆಗಳ ಮೇಲೆ ಕುಳಿತಿರುತ್ತಿದ್ದ ಮಾವುತರು ತಮ್ಮ ಎದುರು ಪಕ್ಷದ ಮಾವುತರನ್ನು ಬಾಣಗಳಿಂದಲೂ, ತೋಮರಗಳಿಂದಲೂ ಪ್ರಹರಿಸುತ್ತಿದ್ದರು. ಆ ಸಮಯದಲ್ಲಿ ಎದುರಾಳಿಯ ಬಾಣಗಳಿಗೆ ಗುರಿಯಾದ ಮಾವುತರು ಆಯುಧಗಳನ್ನೂ ಅಂಕುಶಗಳನ್ನೂ ಪರಿತ್ಯಜಿಸಿ ಆನೆಗಳ ಮೇಲಿಂದ ಕೆಳಕ್ಕೆ ಬೀಳುತ್ತಿದ್ದರು. ಮಾವುತರಿಂದ ವಿಹೀನವಾಗಿದ್ದ ಆನೆಗಳು ಚೀತ್ಕಾರಮಾಡುತ್ತಾ ಸೈನ್ಯಗಳ ಮಧ್ಯೆ ಪ್ರವೇಶಿಸಿ ಅಲ್ಲಿಯೂ ತಮ್ಮ ಶತ್ರುಗಳ ಆನೆಗಳೊಡನೆ ಹೋರಾಡಿ ಕ್ಷತ-ವಿಕ್ಷತಶರೀರವುಳ್ಳವುಗಳಾಗಿ ಚದುರಿಹೋದ ಮೇಘಗಳೋಪಾದಿಯಲ್ಲಿ ಅಸುನೀಗಿ ಭೂಮಿಯ ಮೇಲೆ ಬೀಳುತ್ತಿದ್ದುವು. ಮತ್ತೆ ಕೆಲವು ದೊಡ್ಡ-ದೊಡ್ಡ ಆನೆಗಳು ಸತ್ತುಹೋಗಿ ನಿರಾಯುಧನಾಗಿ ಕೆಳಕ್ಕೆ ಬೀಳದೇ ಇದ್ದ ಮಾವುತನನ್ನು ಹೊತ್ತುಕೊಂಡೇ ಖಡ್ಗಮೃಗಗಳಂತೆ ನಾನಾದಿಕ್ಕುಗಳಲ್ಲಿ ಓಡಿಹೋಗುತ್ತಿದ್ದುವು. ಆ ಸಮಯದಲ್ಲಿ ಅನೇಕ

ಆನೆಗಳು ತೋಮರ, ಋಷ್ಟಿ, ಗಂಡುಗೊಡಲಿ ಇವೇ ಮುಂತಾದ ಆಯುಧಗಳಿಂದ ಪ್ರಹರಿಸಲ್ಪಟ್ಟು ಗಾಯಗೊಂಡುವುಗಳಾಗಿ ಆರ್ತನಾದಮಾಡುತ್ತಾ ಆ ರಣಾಂಗಣದಲ್ಲಿ ಬೀಳುತ್ತಿದ್ದುವು. ಪರ್ವತೋಪಮವಾದ ಶರೀರಗಳಿಂದ ಕೂಡಿದ್ದ ಆ ಆನೆಗಳು ರಣಾಂಗಣದ ಸುತ್ತಲೂ ತೊಪ-ತೊಪನೆ ಬೀಳುತ್ತಿರಲಾಗಿ ಅವುಗಳಿಂದ ಸಮ್ಮರ್ದಿತವಾದ ಭೂಮಿಯು ನಡುಗಿತು ಮತ್ತು ಘೋರವಾದ ಶಬ್ದವನ್ನೂ ಮಾಡಿತು. ಶತ್ರುಪಕ್ಷದ ಆನೆಗಳಿಂದಲೂ, ಯೋಧರಿಂದಲೂ, ಹತರಾಗಿದ್ದ ಗಜಾರೋಹಿಗಳಿಂದಲೂ, ಪತಾಕೆಗಳಿಂದಲೂ ಯುಕ್ತವಾಗಿದ್ದ ಆನೆಗಳು ರಣರಂಗದ ಸುತ್ತಲೂ ಬಿದ್ದಿದ್ದು ಸರ್ವತ್ರ ವ್ಯಾಪ್ತವಾಗಿರುವ ಪರ್ವತಗಳಂತೆಯೇ ಪ್ರಕಾಶಿಸಿದುವು. ರಥಿಗಳ ಭಲ್ಲಗಳಿಂದ ಪ್ರಹೃತರಾದ ಆನೆಗಳ ಮೇಲಿದ್ದ ಮಾವಟಿಗರು ಎದೆಯೊಡೆದು ಕೆಳಕ್ಕೆ ಬೀಳುತ್ತಿದ್ದರು. ಅವರು ಹಿಡಿದಿರುತ್ತಿದ್ದ ಅಂಕುಶ-ತೋಮರಗಳೂ ಸಹ ರಣಾಂಗಣದ ಸುತ್ತಲೂ ಹರಡಿಕೊಂಡಿದ್ದುವು. ರಥಿಕರ ನಾರಾಚಗಳಿಂದ ಪ್ರಹೃತವಾದ ಕೆಲವು ಆನೆಗಳು ನೀರುಕೊಕ್ಕರೆಗಳಂತೆಯೇ ಧ್ವನಿಮಾಡುತ್ತಾ ತಮ್ಮ ಕಡೆಯ ಸೈನಿಕರನ್ನೂ, ಶತ್ರುಪಕ್ಷದ ಸೈನಿಕರನ್ನೂ ವಿವೇಚನೆಯೇ ಇಲ್ಲದೇ ತುಳಿದು ಧ್ವಂಸಮಾಡುತ್ತಾ ಎಲ್ಲ ದಿಕ್ಕುಗಳಿಗೂ ಓಡಿಹೋಗುತ್ತಿದ್ದುವು.

ಮಹಾರಾಜ! ಗಜಾಶ್ವ-ರಥಯೋಧರ ಶರೀರಸಮೂಹಗಳಿಂದ ಸಮಾವೃತವಾಗಿದ್ದ ರಣಾಂಗಣವು ಮಾಂಸ ಮತ್ತು ರಕ್ತಗಳ ಸಮ್ಮಿಶ್ರಣದಿಂದ ಉಂಟಾದ ಕೆಸರಿನಿಂದ ವ್ಯಾಪ್ತವಾಗಿದ್ದಿತು. ಕೆಲವು ದೊಡ್ಡ-ದೊಡ್ಡ ಆನೆಗಳು ತಮ್ಮ ದಂತಗಳ ಅಗ್ರಭಾಗಗಳಿಂದ-ಚಕ್ರಗಳಿಂದ ಕೂಡಿದ್ದ ಮತ್ತು ಚಕ್ರಗಳಿ ಲ್ಲದೇ ಇದ್ದ ದೊಡ್ಡ-ದೊಡ್ಡ ರಥಗಳನ್ನು ರಥಿಕರ ಸಹಿತವಾಗಿಯೇ ವಿಧ್ವಂಸನಗೊಳಿಸಿ, ಅನಂತರ ಅವುಗಳನ್ನು ಸೊಂಡಿಲುಗಳಿಂದ ಎತ್ತಿ ಬಿಸುಡುತ್ತಿದ್ದುವು. ರಥಿಗಳಿಂದಲೂ–ಸಾರಥಿಗಳಿಂದಲೂ ಹೀನವಾದ ರಥಗಳೂ, ಸವಾರರೇ ಇಲ್ಲದ ಕುದುರೆಗಳೂ, ಮಾವುತರಿಲ್ಲದ ಆನೆಗಳೂ ಭಯಗೊಂಡು ಎಲ್ಲ ದಿಕ್ಕುಗಳಿಗೂ ಓಡಿಹೋಗುತ್ತಿದ್ದುವು. ಭಯಂಕರವಾದ ಯುದ್ಧವಾಗುತ್ತಿದ್ದ ಆ ಸಮಯದಲ್ಲಿ ಯಾರಿಗೂ ಯಾವುದೊಂದೂ ತಿಳಿಯುತ್ತಿರಲಿಲ್ಲ. ತಂದೆಯೇ ಮಗನನ್ನು ಕೊಲ್ಲುತ್ತಿದ್ದನು. ಮಗನೇ ತಂದೆಯನ್ನು ಸಂಹಾರ ಮಾಡುತ್ತಿದ್ದನು. ಈ ರೀತಿಯಲ್ಲಿ ಯುದ್ಧವು ಭೀಕರವಾಗಿ ನಡೆಯುತ್ತಿದ್ದಿತು.

ರಕ್ತದ ಕೆಸರಿನಿಂದಾಗಿ ರಣರಂಗದಲ್ಲಿ ತಿರುಗಾಡುತ್ತಿದ್ದ ಸೈನಿಕರ ಕಾಲುಗಳು ಹರಡಿನವರೆಗೂ ಹೂತುಕೊಳ್ಳುತ್ತಿದ್ದಿತು. ಆ ಸಮಯದಲ್ಲಿ ಅವರು–ಪ್ರಜ್ವಲಿತವಾದ ಕಾಡುಗಿಚ್ಚಿನಿಂದ ವ್ಯಾಪ್ತವಾದ ವೃಕ್ಷಗಳಂತೆಯೇ–ಕಾಣುತ್ತಿದ್ದರು. ಸೈನಿಕರ ವಸ್ತ್ರಗಳೂ, ಕವಚಗಳೂ, ಛತ್ರಗಳೂ, ಪತಾಕೆಗಳೂ ಮತ್ತು ಎಲ್ಲ ವಸ್ತುಗಳೂ ರಕ್ತದಿಂದ ತೋಯ್ದುಹೋಗಿದ್ದು ಆ ರಣರಂಗದಲ್ಲಿ ಎಲ್ಲವೂ ರಕ್ತಮಯವಾಗಿಯೇ ಕಾಣುತ್ತಿದ್ದಿತು. ಹೊಡೆದುರುಳಿಸಲ್ಪಟ್ಟ ಕುದುರೆಗಳ ಸಮೂಹಗಳೂ, ರಥಗಳ ಸಮೂಹಗಳೂ, ಪದಾತಿಗಳ ಸಮೂಹಗಳೂ ಅತ್ತಲಿಂದಿತ್ತ-ಇತ್ತಲಿಂದತ್ತ ಸತತವಾಗಿ ತಿರುಗಾಡುತ್ತಿದ್ದ ರಥಗಳ ಚಕ್ರಗಳಿಂದ ಅರೆಯಲ್ಪಡುತ್ತಿದ್ದುವು. ಆ ಸೈನ್ಯಸಮುದ್ರವು ಆನೆಗಳ ಸಮೂಹವೆಂಬ ಮಹಾವೇಗದಿಂದ ಕೂಡಿದ್ದಿತು. ಪ್ರಾಣತೊರೆದ ಸೈನಿಕರೇ ಆ ಸಮುದ್ರದ ಪಾಚಿಯಂತಿದ್ದರು. ರಥಗಳ ಸಮೂಹವೇ ಸೇನಾಸಮುದ್ರದ ಭಯಂಕರ ಸುಳಿಯ ರೂಪದಲ್ಲಿದ್ದಿತು. ಈ ವಿಧವಾದ ವೇಗದಿಂದಲೂ, ಪಾಚಿಯಿಂದಲೂ ಸುಳಿಯಿಂದಲೂ ಸೇನಾಸಮುದ್ರವು ಶೋಭಾಯಮಾನವಾಗಿ ಕಾಣುತ್ತಿದ್ದಿತು. ಜಯವೆಂಬ ಧನವನ್ನು ಹೊಂದಲು ಇಚ್ಛಿಸಿದ್ದ ಯೋಧರೆಂಬ ವ್ಯಾಪಾರಿಗಳು ಆನೆ-ಕುದುರೆ ಮುಂತಾದ ವಾಹನಗಳೆಂಬ ದೊಡ್ಡ-ದೊಡ್ಡ ಹಡಗುಗಳಲ್ಲಿ ಪ್ರಯಾಣಮಾಡುತ್ತಾ ಯುದ್ಧವೆಂಬ ಸಮುದ್ರದಲ್ಲಿ ಮುಳುಗಿ ಹೋಗುತ್ತಿದ್ದರೂ ತಮ್ಮ ಪ್ರಾಣಗಳ ಮೇಲೆ ಯಾವ ವಿಧವಾದ ವ್ಯಾಮೋಹವನ್ನೂ ಇಟ್ಟುಕೊಂಡಿರಲಿಲ್ಲ. ಚಿತ್ರ-ವಿಚಿತ್ರವಾದ ಚಿಹ್ನೆಗಳಿಂದ ಸಮಲಂಕೃತರಾದ ಯೋಧರು ಬಾಣಗಳ ಮಳೆಯಿಂದ ಪ್ರಹೃತರಾಗುತ್ತಿರಲಾಗಿ ಧ್ವಜ-ಪತಾಕಾದಿಗಳಿಂದ ವಿಹೀನನಾದ ಯಾವ ಯೋಧನೂ ಸಹ ಆ ಚಿಹ್ನೆಗಳು ಹೋದುದಕ್ಕಾಗಿ ಧೃತಿಗೆಡಲಿಲ್ಲ. (ಶತ್ರುಪಕ್ಷದವರು ಬಾಣಗಳ ಮಳೆಗರೆಯುತ್ತಿದ್ದರೂ, ಧ್ವಜ-ಪತಾಕಾದಿ ಚಿಹ್ನೆಗಳೆಲ್ಲವೂ ಕತ್ತರಿಸಿಬೀಳುತ್ತಿದ್ದರೂ ಸಹ ಯೋಧರು ಧೃತಿಗೆಡದೇ ಯುದ್ಧವನ್ನು ಮುಂದುವರಿಸುತ್ತಿದ್ದರು.)

ಘೋರರೂಪವಾದ ಮತ್ತು ಭಯಂಕರವಾದ ಯುದ್ಧವು ಹೀಗೆ ನಡೆಯುತ್ತಿರಲಾಗಿ ದ್ರೋಣರು ಶತ್ರುಪಕ್ಷದ ಯೋಧರನ್ನು ಭ್ರಾಂತಿಗೊಳಿಸಿ ಯುಧಿಷ್ಠಿರನ ಬಳಿಗೆ ಧಾವಿಸಿದರು.”

೨೦ನೆಯ ಅಧ್ಯಾಯವು ಮುಗಿಯಿತು.

೨೧ನೆಯ ಅಧ್ಯಾಯ ಸಂಶಪ್ತಕವಧಪರ್ವ (ಮುಂದುವರಿದಿದೆ.)

## ದ್ರೋಣರು-ಸತ್ಯಜಿತ, ಶತಾನೀಕ, ದೃಢಸೇನ, ಕ್ಷೇಮ, ವಸುದಾನ, ಪಾಂಚಾಲರಾಜಕುಮಾರ-ಮೊದಲಾದವರನ್ನು ಸಂಹರಿಸಿದುದು : ಪಾಂಡವಸೇನೆಯ ಪರಾಜಯ

ಸಂಜಯನು ದ್ರೋಣರ ಪರಾಕ್ರಮವನ್ನು ವರ್ಣಿಸುತ್ತಾ ಹೇಳುತ್ತಾನೆ :

"ಮಹಾರಾಜ! ದ್ರೋಣರು ತನ್ನ ಸಮೀಪಕ್ಕೆ ಬರುತ್ತಿರುವುದನ್ನು ನೋಡಿದ ಯುಧಿಷ್ಠಿರನು ಸ್ವಲ್ಪವಾದರೂ ಭಯಪಡದವನಂತೆ ದ್ರೋಣರ ಮೇಲೆ ಬಾಣಗಳ ಮಳೆಯನ್ನು ಸುರಿಸುತ್ತಾ ಅವರನ್ನು ಎದುರಿಸಿದನು. ಮಹಾ ಸಿಂಹವು ಆನೆಗಳ ಯೂಥಪತಿಯಾದ ಸಲಗನನ್ನು ಸಂಹರಿಸಲು ಹೋದಾಗ ಆನೆಗಳ ಸಮೂಹದಲ್ಲಿ ದೊಡ್ಡ ಕೋಲಾಹಲಶಬ್ದವಾಗುವಂತೆ-ದ್ರೋಣರು ಯುಧಿಷ್ಠಿರನೊಡನೆ ಯುದ್ಧದಲ್ಲಿ ತೊಡಗಲಾಗಿ ಯುಧಿಷ್ಠಿರನ ಸೈನ್ಯ ದಲ್ಲಿಯೂ ದೊಡ್ಡ ಕೋಲಾಹಲವುಂಟಾಯಿತು. ಸತ್ಯವಿಕ್ರಮನಾದ, ಶೂರ ನಾದ ಸತ್ಯಜಿತನು-ದ್ರೋಣರು ಯುಧಿಷ್ಠಿರನೊಡನೆ ಯುದ್ಧದಲ್ಲಿ ತೊಡಗಿ ರುವುದನ್ನು ಕಂಡು-ಯುಧಿಷ್ಠಿರನನ್ನು ರಕ್ಷಿಸುವ ಇಚ್ಛೆಯಿಂದ ದ್ರೋಣಾ ಚಾರ್ಯರನ್ನು ಆಕ್ರಮಿಸಿದನು. ಮಹಾಬಲಿಷ್ಠರಾದ ಆಚಾರ್ಯ-ಪಾಂಚಾ ಲ್ಯರು ಸೈನ್ಯಗಳನ್ನು ವಿಕ್ಷೋಭೆಗೊಳಿಸುತ್ತಾ ಇಂದ್ರ-ವೈರೋಚನಿಗಳಂತೆ ಭಯಂಕರವಾಗಿ ಯುದ್ಧಮಾಡಲು ಉಪಕ್ರಮಿಸಿದರು. ಸತ್ಯವಿಕ್ರಮನಾದ, ಮಹಾಧನುಷ್ಮಂತನಾದ ಸತ್ಯಜಿತನು ತನ್ನಲ್ಲಿರುವ ಶ್ರೇಷ್ಠವಾದ ಅಸ್ತ್ರಗಳನ್ನು ಪ್ರದರ್ಶಿಸುತ್ತಾ, ನಿಶಿತವಾದ ಅಗ್ರಭಾಗವಿದ್ದ ಒಂದು ಬಾಣದಿಂದ ದ್ರೋಣ ರನ್ನು ಪ್ರಹರಿಸಿದನು. ಅನಂತರ ಸರ್ಪವಿಷೋಪಮವಾಗಿದ್ದ, ಯಮಸದೃಶ ವಾಗಿದ್ದ ಐದು ಬಾಣಗಳನ್ನು ದ್ರೋಣರ ಸಾರಥಿಯ ಮೇಲೆ ಪ್ರಯೋಗಿಸಿ ದನು. ಆ ಬಾಣಗಳ ಪ್ರಹಾರದಿಂದ ದ್ರೋಣರ ಸಾರಥಿಯು ಮೂರ್ಛೆ ಹೊಂದಿದನು. ನಂತರ ಶೀಘ್ರಾತಿಶೀಘ್ರವಾಗಿ ಹತ್ತು ಬಾಣಗಳಿಂದ ದ್ರೋಣರ ಕುದುರೆಗಳನ್ನೂ ಪ್ರಹರಿಸಿ, ಪುನಃ ಹತ್ತು-ಹತ್ತು ಬಾಣಗಳಿಂದ ದ್ರೋಣರ ರಥದ ಹಿಂಭಾಗದ ಇಬ್ಬರು ರಕ್ಷಕರನ್ನೂ ಸತ್ಯಜಿತನು ಪ್ರಹರಿಸಿದನು. ಅನಂತರ ಶತ್ರುಸೂದನನಾದ ಸತ್ಯಜಿತನು ಪರಮಕ್ರುದ್ಧನಾಗಿ ಸೇನೆಯ ಅಗ್ರಭಾಗದಲ್ಲಿ ಮಂಡಲಾಕಾರದಲ್ಲಿ ಸಂಚರಿಸುತ್ತಾ ದ್ರೋಣರ ಧ್ವಜವನ್ನೂ

ಕತ್ತರಿಸಿಬಿಟ್ಟನು. ಆ ಸಮಯದಲ್ಲಿ ಅರಿಂದಮರಾದ ದ್ರೋಣರು ಯುದ್ಧದಲ್ಲಿ ಸತ್ಯಜಿತನು ತೋರಿಸಿದ ಸಾಹಸವನ್ನು ನೋಡಿ ತತ್ಕಾಲದಲ್ಲಿ ಮಾಡಬೇಕಾದ ಕರ್ತವ್ಯವನ್ನು ಕುರಿತು ಮನಸ್ಸಿನಲ್ಲಿಯೇ ಚಿಂತಿಸಿದರು.

ಅನಂತರ ದ್ರೋಣರು ಸತ್ಯಜಿತನ ಬಾಣಸಹಿತವಾಗಿದ್ದ ಧನುಸ್ಸನ್ನು ಕತ್ತರಿಸಿ ತೀಕ್ಷ್ಣವಾಗಿಯೂ, ಮರ್ಮಸ್ಥಳಗಳನ್ನೂ ಭೇದಿಸುವುದಾಗಿಯೂ ಇದ್ದ ಹತ್ತು ಬಾಣಗಳಿಂದ ಸತ್ಯಜಿತನನ್ನೂ ಪ್ರಹರಿಸಿದರು. ಪ್ರತಾಪವಂತನಾದ ಸತ್ಯಜಿತನು ಶೀಘ್ರಾತಿಶೀಘ್ರವಾಗಿ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಮೂವತ್ತು ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ಯುದ್ಧದಲ್ಲಿ ದ್ರೋಣರನ್ನು ಬಾಣಗಳ ಮೂಲಕವಾಗಿ ನುಂಗಿ ಹಾಕುತ್ತಿರುವನೋ–ಎಂಬಂತೆ ಕಾಣುತ್ತಿದ್ದ ಸತ್ಯಜಿತನನ್ನು ಪಾಂಚಾಲ್ಯನಾದ ವೃಕನು ನೋಡಿ ಸತ್ಯಜಿತನಿಗೆ ಬೆಂಬಲಕೊಡುವ ಸಲುವಾಗಿ ತಾನೂ ಸಹ ದ್ರೋಣರನ್ನು ತೀಕ್ಷ್ಣವಾದ ನೂರು ಬಾಣಗಳಿಂದ ಪ್ರಹರಿಸಿದನು. ಸಮರ ಭೂಮಿಯಲ್ಲಿ ದ್ರೋಣರು ಪಾಂಚಾಲಯೋಧರ ಬಾಣಗಳಿಂದ ಆಚ್ಛಾದಿತ ರಾಗಿರುವುದನ್ನು ಕಂಡು ಪಾಂಡವರ ಕಡೆಯ ಸೈನಿಕರು ಆನಂದತುಂದಿಲರಾಗಿ ಗರ್ಜನೆಮಾಡಿದರು ಮತ್ತು ತಮ್ಮ ಅಂಗವಸ್ತ್ರಗಳನ್ನು ಮೇಲಕ್ಕೆ ಹಾರಿಸಿದರು. ಪರಮಕ್ರುದ್ಧನಾಗಿದ್ದ, ಬಲಿಷ್ಠನಾಗಿದ್ದ ವೃಕನು ಅರುವತ್ತು ಬಾಣಗಳಿಂದ ದ್ರೋಣರನ್ನು ವಕ್ಷಃಸ್ಥಲದಲ್ಲಿ ಪ್ರಹರಿಸಿದನು. ವೃಕನ ಆ ಸಾಹಸಕಾರ್ಯವು ನಮ್ಮೆಲ್ಲರಿಗೂ ಪರಮಾದ್ಭುತವಾಗಿ ಕಂಡಿತು. ಈ ರೀತಿಯಾಗಿ ಬಾಣಗಳ ಸುರಿಸುವಿಕೆಯಿಂದ ಮುಚ್ಚಲ್ಪಟ್ಟ ಮಹಾರಥರಾದ, ವೇಗವಂತರಾದ ದ್ರೋಣರು ಕೋಪದಿಂದ ಕಣ್ಣುಗಳೆರಡನ್ನೂ ಅಗಲಿಸಿ ದುರುಗುಟ್ಟಿಕೊಂಡು ನೋಡುತ್ತಾ ತಮ್ಮ ವೇಗವೆಷ್ಟೆಂಬುದನ್ನು ಪ್ರದರ್ಶಿಸಿದರು. ಸತ್ಯಜಿತನ ಮತ್ತು ವೃಕನ ಧನುಸ್ಸುಗಳನ್ನು ನಿಮೇಷಮಾತ್ರದಲ್ಲಿ ಕತ್ತರಿಸಿ ಅನಂತರ ಆರು ಬಾಣಗಳನ್ನು ಪ್ರಯೋಗಿಸಿ, ನಾಲ್ಕು ಬಾಣಗಳಿಂದ ವೃಕನ ಕುದುರೆಗಳನ್ನೂ, ಒಂದು ಬಾಣದಿಂದ ವೃಕನ ಸಾರಥಿಯನ್ನೂ, ಕಡೆಯ ಬಾಣದಿಂದ ವೃಕನನ್ನೂ ದ್ರೋಣರು ಸಂಹರಿಸಿದರು. ಒಡನೆಯೇ ಸತ್ಯಜಿತನು ಬಹಳ ವೇಗಯುಕ್ತವಾಗಿದ್ದ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ನಿಶಿತವಾಗಿದ್ದ ಬಾಣಗಳಿಂದ ಸೂತಾಶ್ವ–ಧ್ವಜಸಹಿತರಾದ ದ್ರೋಣರನ್ನು ಪ್ರಹರಿಸಿದನು.

ಪಾಂಚಾಲ್ಯನಿಂದ ಈ ರೀತಿಯಲ್ಲಿ ಸಮ್ಮರ್ದಿತರಾದ ದ್ರೋಣರಿಗೆ ಸತ್ಯಜಿತನ ಪರಾಕ್ರಮವನ್ನು ಸಹಿಸಲು ಸಾಧ್ಯವಾಗಲಿಲ್ಲ. ಅನಂತರ ದ್ರೋಣರು ಸತ್ಯಜಿತನನ್ನು ವಿನಾಶಗೊಳಿಸಲು ನಿಶ್ಚಯಿಸಿದವರಾಗಿ ಬಹಳ ಬೇಗ ಅವನ ಮೇಲೆ ಬಾಣಗಳ ಮಳೆಗರೆದರು. ಸತ್ಯಜಿತನ ರಥದ ಕುದುರೆಗಳನ್ನೂ, ಧ್ವಜವನ್ನೂ, ಧನುಸ್ಸನ್ನು ಹಿಡಿದಿದ್ದ ಮುಷ್ಟಿಯನ್ನೂ, ರಥದ ಹಿಂಭಾಗದ ಇಬ್ಬರು ರಕ್ಷಕರನ್ನೂ ಸಾವಿರಾರು ಬಾಣಗಳ ಸುರಿಸುವಿಕೆಯಿಂದ ಅವರು ಮುಚ್ಚಿಬಿಟ್ಟರು. ಈ ರೀತಿಯಲ್ಲಿ ದ್ರೋಣರು ಸತತವಾದ ಬಾಣಗಳ ಪ್ರಯೋಗಗಳಿಂದ ಸತ್ಯಜಿತನ ಅನೇಕ ಧನುಸ್ಸುಗಳನ್ನು ಪುನಃ-ಪುನಃ ಕತ್ತರಿಸುತ್ತಿದ್ದರು. ಶ್ರೇಷ್ಠವಾದ ಅಸ್ತ್ರಗಳ ರಹಸ್ಯವನ್ನು ತಿಳಿದುಕೊಂಡಿದ್ದ ಪಾಂಚಾಲ್ಯನು ಕೆಂಗುದುರೆಗಳನ್ನು ಹೊಂದಿದ್ದ ದ್ರೋಣರೊಡನೆ ಯುದ್ಧಮಾಡುತ್ತಲೇ ಇದ್ದನು.

ಆ ಮಹಾಸಮರದಲ್ಲಿ ಸತ್ಯಜಿತನು ಕ್ಷಣ-ಕ್ಷಣಕ್ಕೂ ಉತ್ಸಾಹವನ್ನು ವರ್ಧಿಸಿಕೊಳ್ಳುತ್ತಾ ಯುದ್ಧಮಾಡುತ್ತಿರುವುದನ್ನು ಕಂಡು ಅಸಹನೆಗೊಂಡ ದ್ರೋಣರು ಅರ್ಧಚಂದ್ರವೆಂಬ ಬಾಣದಿಂದ ಮಹಾತ್ಮನಾದ ಸತ್ಯಜಿತನ ತಲೆಯನ್ನು ಕತ್ತರಿಸಿಬಿಟ್ಟರು. ಮಹಾಬಲಿಷ್ಠನಾದ ಪಾಂಚಾಲಮಹಾರಥನಾದ ಸತ್ಯಜಿತನು ಹತನಾಗಲಾಗಿ, ದ್ರೋಣರಿಂದ ಭಯಗೊಂಡ ಯುಧಿಷ್ಠಿರನು ವೇಗವಾಗಿ ಹೋಗುವ ಕುದುರೆಗಳನ್ನು ಕಟ್ಟಿದ್ದ ರಥದಲ್ಲಿ ಕುಳಿತು ರಣಾಂಗಣದಿಂದ ಬಹಳ ದೂರಕ್ಕೆ ಹೊರಟುಹೋದನು. ಆ ಸಮಯದಲ್ಲಿ ಯುಧಿಷ್ಠಿರನನ್ನು ರಕ್ಷಿಸುವ ಸಲುವಾಗಿ ಪಾಂಚಾಲರು, ಕೇಕಯರು, ಮತ್ಸ್ಯರು, ಚೇದಿಗಳು, ಕಾರೂಷರು ಮತ್ತು ಕೋಸಲದೇಶದ ಯೋಧರು–ಇವರೆಲ್ಲರೂ ದ್ರೋಣರನ್ನು ನೋಡುತ್ತಾ ಅವರ ಮೇಲೆ ಆಕ್ರಮಣ ನಡೆಸಿದರು. ಶತ್ರುಗಳ ಸಮೂಹಗಳನ್ನೆಲ್ಲಾ ಒಂದೇ ಬಾರಿಗೆ ನಾಶಮಾಡಲು ಸಮರ್ಥರಾದ ದ್ರೋಣರು ಯುಧಿಷ್ಠಿರನನ್ನು ಸೆರೆಹಿಡಿಯುವ ಇಚ್ಛೆಯಿಂದ–ಬೆಂಕಿಯು ಹತ್ತಿಯ ರಾಶಿಯನ್ನು ಕ್ಷಣಮಾತ್ರದಲ್ಲಿ ಸುಟ್ಟು ಭಸ್ಮಮಾಡುವಂತೆ–ತಮ್ಮನ್ನು ಆಕ್ರಮಿಸಿದ್ದ ಸೈನ್ಯಗಳನ್ನು ಕ್ಷಣಮಾತ್ರದಲ್ಲಿ ವಿನಾಶಗೊಳಿಸಿದರು. ಆ ಎಲ್ಲ ಸೈನ್ಯಗಳನ್ನೂ ಬಾಣಗಳೆಂಬ ಅಗ್ನಿಯಿಂದ ಪುನಃ-ಪುನಃ ದ್ರೋಣರು ಸುಟ್ಟುಹಾಕುತ್ತಿರುವುದನ್ನು ಕಂಡು ವಿರಾಟನ ತಮ್ಮನಾದ

ಶತಾನೀಕನು ದ್ರೋಣರನ್ನು ಆಕ್ರಮಿಸಿದನು. ಶತಾನೀಕನು ಕಮ್ಮಾರರಿಂದ ಸ್ವಚ್ಛವಾಗಿ ಮಾಡಲ್ಪಟ್ಟಿದ್ದ, ಸೂರ್ಯನ ಕಿರಣಗಳಂತೆ ಥಳ-ಥಳಿಸುತ್ತಿದ್ದ ಆರು ಬಾಣಗಳಿಂದ ಸೂತನನ್ನೂ, ಕುದುರೆಗಳನ್ನೂ ಮತ್ತು ದ್ರೋಣರನ್ನೂ ಪ್ರಹರಿಸಿ ಗಟ್ಟಿಯಾಗಿ ಗರ್ಜನೆಮಾಡಿದನು. ದುಷ್ಕರವಾದ ಸಾಹಸಕರ್ಮವನ್ನು ಮಾಡಲು ಇಚ್ಛಿಸಿದ್ದ, ಆಚಾರ್ಯರ ವಧೆಯೆಂಬ ಕ್ರೂರಕರ್ಮದಲ್ಲಿ ನಿಯುಕ್ತನಾಗಿದ್ದ ಶತಾನೀಕನು ಮಹಾರಥರಾದ ಭಾರದ್ವಾಜರನ್ನು ನೂರಾರು ಬಾಣಗಳಿಂದ ಮುಚ್ಚಿಬಿಟ್ಟನು. ಆ ಸಮಯದಲ್ಲಿ ದ್ರೋಣರು ಗಟ್ಟಿಯಾಗಿ ಗರ್ಜನೆಮಾಡುತ್ತಿದ್ದ ಶತಾನೀಕನ ಕುಂಡಲಯುಕ್ತವಾಗಿದ್ದ ಶಿರಸ್ಸನ್ನು ಕ್ಷುರ ವೆಂಬ ಬಾಣದಿಂದ ಬಹಳ ಶೀಘ್ರವಾಗಿ ಶರೀರದಿಂದ ಪ್ರತ್ಯೇಕಿಸಿಬಿಟ್ಟರು. ಒಡನೆಯೇ ಮತ್ಸ್ಯಸೈನಿಕರೆಲ್ಲರೂ ಪಲಾಯನಮಾಡಿದರು. ಭಾರದ್ವಾಜರು ಮತ್ಸ್ಯಯೋಧರನ್ನು ಜಯಿಸಿ ಚೇದಿ-ಕರೂಷ-ಕೇಕಯರನ್ನೂ, ಪಾಂಚಾಲ-ಸೃಂಜಯ-ಪಾಂಡವಸೈನಿಕರನ್ನೂ *ಪುನಃ-ಪುನಃ ಪರಾಜಯಗೊಳಿಸುತ್ತಿದ್ದರು. ಧಗ-ಧಗಿಸುತ್ತಿರುವ ಕಾಡುಗಿಚ್ಚು ಯಾವ ರೀತಿಯಲ್ಲಿ ಅರಣ್ಯವೆಲ್ಲವನ್ನೂ ದಹಿಸಿಬಿಡುತ್ತದೆಯೋ-ಅದೇ ರೀತಿಯಲ್ಲಿ ಶತ್ರುಗಳ ಸೈನ್ಯಗಳನ್ನು ತಂಡ-ತಂಡವಾಗಿ ಬಾಣಗಳೆಂಬ ಅಗ್ನಿಯಿಂದ ಭಸ್ಮೀಭೂತವನ್ನಾಗಿ ಮಾಡು ತ್ತಿದ್ದ ರುಕ್ಮರಥರಾದ ದ್ರೋಣರನ್ನು ಕಂಡು ಸೃಂಜಯಯೋಧರು ನಡುಗಿದರು. ಉತ್ತಮವಾದ ಧನುಸ್ಸನ್ನು ಹಿಡಿದುಕೊಂಡು ಬಹಳ ಶೀಘ್ರವಾಗಿ ಬಾಣಗಳನ್ನು ಬಿಡುತ್ತಾ ಶತ್ರುಗಳನ್ನು ಸಂಹರಿಸುತ್ತಿದ್ದ ದ್ರೋಣರ ಮೌರ್ವಿಯ ಟೇಂಕಾರ ಶಬ್ದವು ಎಲ್ಲ ದಿಕ್ಕುಗಳಲ್ಲಿಯೂ ಪ್ರತಿಧ್ವನಿತವಾಯಿತು.

ಹಸ್ತಲಾಘವದಿಂದ ಕೂಡಿದ್ದ ದ್ರೋಣರಿಂದ ಬಿಡಲ್ಪಡುತ್ತಿದ್ದ, ಭೀಕರ ವಾದ ಬಾಣಗಳು ಆನೆಗಳನ್ನೂ, ಕುದುರೆಗಳನ್ನೂ, ಪದಾತಿಗಳನ್ನೂ, ರಥಿ ಗಳನ್ನೂ, ಮಾವಟಿಗರನ್ನೂ ಸಂಹರಿಸಿಬಿಡುತ್ತಿದ್ದುವು (ವಿನಾಶಗೊಳಿಸುತ್ತಿ ದ್ದುವು). ಯಾವ ರೀತಿಯಲ್ಲಿ ಹಿಮಂತರ್ತುವಿನ ಅಂತ್ಯಕಾಲದಲ್ಲಿ (ಪುಷ್ಯ ಮಾಸದ ಕಡೆಯ ಭಾಗದಲ್ಲಿ) ಗಾಳಿಯಿಂದ ಕೂಡಿದ ಮೇಘವು ಗರ್ಜನೆ ಮಾಡುತ್ತ ಆಲಿಕಲ್ಲುಗಳ ಮಳೆಯನ್ನು ಸುರಿಸುತ್ತದೆಯೋ–ಅದೇ ರೀತಿಯಲ್ಲಿ

---

* ಪುನಃ-ಪುನಃ ಪರಾಜಯಗೊಳಿಸುವುದೆಂದರೆ ಒಮ್ಮೆ ಪರಾಜಯಗೊಂಡು ಓಡಿಹೋದ ಯೋಧರು ನಾಯಕರ ಪ್ರೋತ್ಸಾಹದಿಂದ ಹಿಂದಿರುಗಿ ದ್ರೋಣರೊಡನೆ ಪುನಃ ಯುದ್ಧ ಮಾಡುತ್ತಿದ್ದರು. ಪುನಃ ಅವರಿಂದ ಸೋತು ಓಡಿಹೋಗುತ್ತಿದ್ದರು ಎಂದರ್ಥ.

ದ್ರೋಣರು ಶತ್ರುಗಳ ಮೇಲೆ ಬಾಣಗಳ ಮಳೆಗರೆಯುತ್ತಾ ಅವರಿಗೆ ಭಯವನ್ನುಂಟುಮಾಡುತ್ತಿದ್ದರು. ಮಿತ್ರರಿಗೆ ಅಭಯಪ್ರದರಾದ, ಬಲಿಷ್ಠರಾದ, ಶೂರರಾದ, ಮಹಾಧನುಷ್ಮಂತರಾದ ದ್ರೋಣರು ಪಾಂಡವರ ಸೈನ್ಯವನ್ನು ಅಲ್ಲೋಲ-ಕಲ್ಲೋಲಗೊಳಿಸುತ್ತಾ ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸುತ್ತಿದ್ದರು. ಮೋಡಗಳಲ್ಲಿ ಮಿಂಚು ಫಳ-ಫಳಿಸುವಂತೆ–ಮಹಾತೇಜಸ್ವಿಗಳಾದ ದ್ರೋಣರ ಸುವರ್ಣಭೂಷಿತವಾದ ಧನುಸ್ಸು ಎಲ್ಲ ದಿಕ್ಕುಗಳಲ್ಲಿಯೂ ಹೊಳೆಯುತ್ತಿದ್ದುದನ್ನು ನಾವು ನೋಡುತ್ತಿದ್ದೆವು. ಯುದ್ಧದಲ್ಲಿ ಶತ್ರುಗಳನ್ನು ಧ್ವಂಸಮಾಡುತ್ತಾ ಬಹಳ ವೇಗದಿಂದ ಸಂಚರಿಸುತ್ತಿದ್ದ ದ್ರೋಣರ ರಥದ ಮೇಲ್ಭಾಗದಲ್ಲಿದ್ದ ಧ್ವಜದಲ್ಲಿ–ಹಿಮವಂತನ ಶಿಖರದೋಪಾದಿಯಲ್ಲಿ ಶೋಭಾಯಮಾನವಾಗಿ ಕಾಣುತ್ತಿದ್ದ ವೇದಿಚಿಹ್ನೆಯನ್ನು ನೋಡಿದೆವು. ದೇವ-ದಾನವವಂದಿತನಾದ ವಿಷ್ಣುವು ಯಾವ ರೀತಿಯಲ್ಲಿ ದೈತ್ಯರ ಸಮೂಹದಲ್ಲಿ ಸಂಚರಿಸುತ್ತಾ ಅವರನ್ನು ಸಂಹಾರಮಾಡುತ್ತಿದ್ದನೋ–ಅದೇ ರೀತಿಯಲ್ಲಿ ದ್ರೋಣರೂ ಸಹ ಪಾಂಡವರ ಸೈನ್ಯದ ಮಧ್ಯದಲ್ಲಿ ಸಂಚರಿಸುತ್ತಾ ಅಪರಿಮಿತವಾದ ಸಂಖ್ಯೆಯಲ್ಲಿ ಅವರನ್ನು ಸಂಹಾರಮಾಡುತ್ತಿದ್ದರು.

ಶೌರ್ಯಸಂಪನ್ನರಾದ, ಸತ್ಯವಾದಿಗಳಾದ, ಪ್ರಾಜ್ಞರಾದ, ಬಲಿಷ್ಠರಾದ, ಸತ್ಯಪರಾಕ್ರಮರಾದ, ಮಹಾನುಭಾವರಾದ ದ್ರೋಣರು ಆ ರಣಾಂಗಣದಲ್ಲಿ ಭಯಂಕರವಾದ ರಕ್ತನದಿಯನ್ನು ಸೃಷ್ಟಿಸಿದರು. ಆ ರಕ್ತನದಿಯು ಪ್ರಳಯಕಾಲದ ಜಲರಾಶಿಯಂತೆ ಬಹಳ ಭಯಂಕರವಾಗಿದ್ದಿತು. ಅದು ಭೀರುಗಳಾದವರಿಗೆ ಮತ್ತಷ್ಟು ಭಯವನ್ನುಂಟುಮಾಡುವುದಾಗಿದ್ದಿತು. ಆ ನದಿಗೆ ವೀರರ ಕವಚಗಳೇ ಅಲೆಗಳಾಗಿದ್ದುವು. ಧ್ವಜಗಳೇ ಸುಳಿಗಳಾಗಿದ್ದುವು. ಮನುಷ್ಯರೂಪವಾದ ತೀರಪ್ರದೇಶಗಳನ್ನೂ ಸಹ ಅತಿಕ್ರಮಿಸಿ ಆ ನದಿಯು ಹರಿಯುತ್ತಿದ್ದಿತು. ಆನೆ ಮತ್ತು ಕುದುರೆಗಳೇ ಆ ರಕ್ತನದಿಯಲ್ಲಿರುವ ಮೊಸಳೆಗಳಾಗಿದ್ದುವು. ಕತ್ತಿಗಳೇ ಮೀನುಗಳಾಗಿದ್ದುವು. ಆ ನದಿಯು ಭೀರುಗಳಾದವರಿಂದ ದಾಟಲು ಅಸಾಧ್ಯವಾದುದಾಗಿದ್ದಿತು. ವೀರರ ಮೂಳೆಗಳೇ ಆ ನದಿಯ ನೊರಜುಕಲ್ಲುಗಳಾಗಿದ್ದುವು. ಭೇರೀ ಮತ್ತು ಮುರಜವಾದ್ಯಗಳು ಆ ನದಿಯಲ್ಲಿನ ಆಮೆಗಳಂತಿದ್ದುವು. ಚರ್ಮಮಯವಾದ ಕವಚಗಳು ಅದರ ದೋಣಿಗಳಂತಿದ್ದುವು. ವೀರರ ಕೇಶರಾಶಿಗಳು ಅದರ ದಂಡೆಯಲ್ಲಿರುವ ಗರಿಕೆಹುಲ್ಲಿನಂತೆಯೂ ಮತ್ತು ಪಾಚಿಯಂತೆಯೂ ಇದ್ದುವು. ಬಾಣ

ಗಳೇ ಆ ನದಿಯ ಅಲೆಗಳ ಸಮೂಹಗಳಾಗಿದ್ದುವು. ಧನುಸ್ಸುಗಳೇ ಅದರ ಪ್ರವಾಹವಾಗಿದ್ದಿತು. ವೀರರ ಬಾಹುರೂಪವಾದ ಹಾವುಗಳಿಂದ ಆ ನದಿಯು ಸಮಾಕುಲವಾಗಿದ್ದಿತು. ಈ ರೀತಿಯಲ್ಲಿ ಆ ರಕ್ತನದಿಯು ರಣಭೂಮಿಯಲ್ಲಿ ತೀವ್ರವೇಗದಿಂದ ಹರಿಯುತ್ತಿದ್ದಿತು. ಕುರು-ಸೃಂಜಯಯೋಧರನ್ನು ಆ ನದಿಯು ಒಯ್ಯುವುದಾಗಿದ್ದಿತು. ಮನುಷ್ಯರ ತಲೆಗಳೇ ಆ ನದಿಯಲ್ಲಿ ಪಾಷಾಣರೂಪವಾಗಿದ್ದುವು. ಶಕ್ತ್ಯಾಯುಧಗಳು ಮೀನಿನ ರೂಪದಲ್ಲಿದ್ದುವು. ಗದೆಗಳೇ ಆ ನದಿಯ ಹರಿಗೋಲಿನಂತಿದ್ದುವು. ಉಷ್ಣೀಷಗಳ ವಸ್ತ್ರಗಳು ಅದರ ನೊರೆಯಂತಿದ್ದುವು. ಪ್ರಾಣಿಗಳ ಶರೀರದಿಂದ ಹೊರಬಂದ ನರಗಳು ನೀರುಹಾವುಗಳಂತಿದ್ದುವು. ಆ ನದಿಯು ವೀರರನ್ನು ಅಪಹರಿಸುವ ಉಗ್ರನದಿಯಾಗಿದ್ದಿತು. ಆ ರಕ್ತನದಿಯು ಮಾಂಸ ಮತ್ತು ರಕ್ತಗಳ ಮಿಶ್ರಣದಿಂದ ಉಂಟಾದ ಕೆಸರುಳ್ಳದ್ದಾಗಿದ್ದಿತು. ಸಲಗಗಳು ಆ ನದಿಯಲ್ಲಿ ಬಂಡೆಗಳ ರೂಪದಲ್ಲಿದ್ದುವು. ಕೇತುಗಳು ಆ ನದಿಯತೀರದಲ್ಲಿರುವ ವೃಕ್ಷಗಳ ರೂಪದಲ್ಲಿದ್ದುವು. ಆ ಮಹಾರಕ್ತನದಿಯು ಕ್ಷತ್ರಿಯರೆಲ್ಲರನ್ನೂ ಮುಳುಗಿಸುವುದಾಗಿದ್ದಿತು. ಆ ನದಿಯು ಬಹಳ ಕ್ರೂರವಾಗಿ ಕಾಣುತ್ತಿದ್ದಿತು. ಪ್ರಾಣಿಗಳ ಹೆಣಗಳೇ ಆ ನದಿಯ ಸ್ನಾನಘಟ್ಟದ ಮೆಟ್ಟಲುಗಳಂತಿದ್ದುವು. ಸವಾರರು ಆ ನದಿಯಲ್ಲಿ ಮೊಸಳೆಗಳ ರೂಪದಲ್ಲಿದ್ದರು. ಆ ನದಿಯು ದಾಟಲು ಅಸಾಧ್ಯವಾಗಿದ್ದಿತು. ಇಂತಹ ಭಯಂಕರವಾದ ಮತ್ತು ಯಮನ ಪಟ್ಟಣಕ್ಕೆ ನೇರವಾಗಿ ಹೋಗುವ, ಮಾಂಸಾಹಾರಿಗಳಾದ ಪ್ರಾಣಿಗಳಿಂದ ಕೂಡಿದ್ದ, ನಾಯಿ-ಗುಳ್ಳೇನರಿ ಇವೇ ಮೊದಲಾದ ಪ್ರಾಣಿಗಳಿಂದಲೂ, ಮಹಾಭಯಂಕರರಾದ ಪಿಶಾಚಗಳಿಂದಲೂ ಸರ್ವತ್ರ ಸಂಸೇವ್ಯಮಾನವಾಗಿದ್ದ, ಭಯಂಕರವೂ–ಘೋರವೂ ಆದ ರಕ್ತನದಿಯನ್ನು ದ್ರೋಣರು ಸೃಷ್ಟಿಸಿ ಪ್ರವಾಹಿಸಿದರು.

ಯಮರಾಜನಂತೆಯೇ ಸೈನಿಕರನ್ನು ಬಾಣಗಳೆಂಬ ಅಗ್ನಿಯಿಂದ ಸುಟ್ಟು ಹಾಕುತ್ತಿದ್ದ, ವಿಖ್ಯಾತರಾದ, ಮಹಾರಥರಾದ ದ್ರೋಣರನ್ನು ಯುಧಿಷ್ಠಿರನೇ ಮೊದಲಾದ ಪಾಂಡವರ ಕಡೆಯ ಯೋಧರೆಲ್ಲರೂ ನಾಲ್ಕೂ ಕಡೆಗಳಿಂದಲೂ ಮುತ್ತಿಗೆಹಾಕಿದರು. ಕಿರಣಗಳಿಂದ ಪ್ರಪಂಚವನ್ನೇ ತಾಪಗೊಳಿಸುವ ಸೂರ್ಯನನ್ನು ಆಕ್ರಮಿಸುವಂತೆ–ಶೂರರಾದ ಪಾಂಡವಯೋಧರೆಲ್ಲರೂ ಸಮ್ಮಿಳಿತರಾಗಿ ಎಲ್ಲ ಕಡೆಗಳಿಂದಲೂ ದ್ರೋಣರನ್ನು ತಡೆದರು. ಶೂರರಾದ ಮಹಾಧನುಷ್ಮಂತರಾದ ದ್ರೋಣರನ್ನು ರಕ್ಷಿಸುವ ಸಲುವಾಗಿ ನಿನ್ನ ಕಡೆಯ

ರಾಜರೂ ಮತ್ತು ರಾಜಪುತ್ರರೂ ಆಯುಧಗಳನ್ನೆತ್ತಿಕೊಂಡು ಅವರನ್ನು ಸುತ್ತುವರಿದು ನಿಂತರು. ಬಳಿಕ ಪಾಂಡವರ ಕಡೆಯ ಶಿಖಂಡಿಯು ದ್ರೋಣರನ್ನು ಸನ್ನತಪರ್ವಗಳಾದ ಐದು ಬಾಣಗಳಿಂದ ಪ್ರಹರಿಸಿದನು. ಕ್ಷತ್ರವರ್ಮನು ಇಪ್ಪತ್ತು ಬಾಣಗಳಿಂದಲೂ, ವಸುದಾನನು ಐದು ಬಾಣಗಳಿಂದಲೂ, ಉತ್ತಮೌಜಸನು ಮೂರು ಬಾಣಗಳಿಂದಲೂ, ಕ್ಷತ್ರದೇವನು ಏಳು ಬಾಣಗಳಿಂದಲೂ, ಸಾತ್ಯಕಿಯು ನೂರುಬಾಣಗಳಿಂದಲೂ, ಯುಧಾಮನ್ಯುವು ಎಂಟು ಬಾಣಗಳಿಂದಲೂ, ಯುಧಿಷ್ಠಿರನು ಹನ್ನೆರಡು ಬಾಣಗಳಿಂದಲೂ, ಧೃಷ್ಟದ್ಯುಮ್ನನು ಹತ್ತು ಬಾಣಗಳಿಂದಲೂ, ಚೇಕಿತಾನನು ಮೂರು ಬಾಣಗಳಿಂದಲೂ ದ್ರೋಣರನ್ನು ಪ್ರಹರಿಸಿದರು. ಅನಂತರ ಸತ್ಯಸಂಧರಾದ ದ್ರೋಣರು–ಮದೋದಕವನ್ನು ಸುರಿಸುತ್ತಿರುವ ಆನೆಯೋಪಾದಿಯಲ್ಲಿ-ತಮ್ಮ ಮುಂದಿದ್ದ ರಥಸೈನ್ಯವನ್ನೂ ಅತಿಕ್ರಮಿಸಿ ಹೋಗಿ ದೃಢಸೇನನನ್ನು ಸಂಹರಿಸಿದರು.

ಸ್ವಲ್ಪವಾದರೂ ಭಯಗೊಳ್ಳದವನಂತೆ ತಮ್ಮನ್ನು ಅನವರತವಾಗಿ ಬಾಣಗಳಿಂದ ಪ್ರಹರಿಸುತ್ತಿದ್ದ ಯುಧಿಷ್ಠಿರನ ಬಳಿಗೆ ಬಂದ ದ್ರೋಣರು ಒಂಬತ್ತು ಬಾಣಗಳಿಂದ ಯುಧಿಷ್ಠಿರನ ರಕ್ಷಣೆಯಲ್ಲಿ ನಿರತನಾಗಿದ್ದ ಕ್ಷೇಮನೆಂಬುವನನ್ನು ಪ್ರಹರಿಸಿದರು. ಒಡನೆಯೇ ಅವನು ಹತನಾಗಿ ರಥದಿಂದ ಕೆಳಕ್ಕೆ ಬಿದ್ದನು. ದ್ರೋಣರು ಪಾಂಡವರ ಸೈನ್ಯದ ಮಧ್ಯಭಾಗವನ್ನು ಪ್ರವೇಶಿಸಿ ಸೈನಿಕರನ್ನು ಸಂಹರಿಸುತ್ತಾ ಎಲ್ಲ ದಿಕ್ಕುಗಳಲ್ಲಿಯೂ ತಿರುಗುತ್ತಿದ್ದರು. ವಸ್ತುತಃ ದ್ರೋಣರು ದುರ್ಯೋಧನನ ಕಡೆಯ ಎಲ್ಲ ಯೋಧರಿಗೂ ರಕ್ಷಕರಾಗಿದ್ದರು. ಆದರೆ ಯಾರಿಂದಲೂ ತಮ್ಮ ರಕ್ಷಣೆಯನ್ನು ಅವರು ಅಪೇಕ್ಷಿಸುತ್ತಿರಲಿಲ್ಲ. ಯಾರಿಗೂ ಅವರನ್ನು ರಕ್ಷಿಸಬೇಕಾದ ಅವಶ್ಯಕತೆಯೇ ಒದಗಲಿಲ್ಲ.

ತಮ್ಮ ಮೇಲೆ ಐದು ಬಾಣಗಳನ್ನು ಪ್ರಯೋಗಿಸಿದ ಶಿಖಂಡಿಯನ್ನು ದ್ರೋಣರು ಹನ್ನೆರಡು ಬಾಣಗಳಿಂದ ಪ್ರಹರಿಸಿದರು. ಉತ್ತಮೌಜಸನನ್ನು ಇಪ್ಪತ್ತು ಬಾಣಗಳಿಂದ ಗಾಯಗೊಳಿಸಿ, ವಸುದಾನನನ್ನು ಭಲ್ಲವೆಂಬ ಬಾಣದಿಂದ ಸಂಹರಿಸಿಬಿಟ್ಟರು. ಎಂಬತ್ತು ಬಾಣಗಳಿಂದ ಕ್ಷತ್ರವರ್ಮನನ್ನೂ ಇಪ್ಪತ್ತಾರು ಬಾಣಗಳಿಂದ ಸುದಕ್ಷಿಣನನ್ನೂ ಪ್ರಹರಿಸಿದರು. ಕ್ಷತ್ರದೇವನನ್ನು ಭಲ್ಲವೆಂಬ ಬಾಣದಿಂದ ಪ್ರಹರಿಸಿ ರಥದ ಪೀಠದಿಂದ ಕೆಳಕ್ಕುರುಳಿಸಿದರು. ಯುಧಾಮನ್ಯುವನ್ನು ಅರುವತ್ತುನಾಲ್ಕು ಬಾಣಗಳಿಂದಲೂ, ಸಾತ್ಯಕಿಯನ್ನು

ಮೂವತ್ತು ಬಾಣಗಳಿಂದಲೂ ಪ್ರಹರಿಸಿ ರುಕ್ಮರಥರಾದ ದ್ರೋಣರು ಯುಧಿಷ್ಠಿರನ ಬಳಿಗೆ ರಭಸದಿಂದ ಹೋದರು. ದ್ರೋಣರು ತನ್ನ ಸಮೀಪಕ್ಕೆ ಬರುತ್ತಿರುವುದನ್ನು ಕಂಡು ರಾಜಸತ್ತಮನಾದ ಯುಧಿಷ್ಠಿರನು ವೇಗಗತಿಯುಳ್ಳ ಕುದುರೆಗಳಿಂದ ಕೂಡಿದ್ದ ರಥದಲ್ಲಿ ಕುಳಿತು ಗುರುಗಳಾದ ದ್ರೋಣರ ಸಮೀಪದಿಂದ ದೂರಕ್ಕೆ ಹೊರಟುಹೋದನು. ಆ ವೇಳೆಗೆ ಸರಿಯಾಗಿ ಪಾಂಚಾಲದೇಶದ ರಾಜಕುಮಾರನೊಬ್ಬನು ದ್ರೋಣರನ್ನು ಎದುರಿಸಿ ನಿಂತನು. ಕ್ಷಣಮಾತ್ರದಲ್ಲಿ ದ್ರೋಣರು ರಾಜಕುಮಾರನ ಧನುಸ್ಸನ್ನು ಕತ್ತರಿಸಿ, ಅವನ ಕುದುರೆಗಳನ್ನೂ ಸಾರಥಿಯನ್ನೂ ಸಂಹರಿಸಿ, ಅನಂತರ ರಾಜಕುಮಾರನನ್ನೂ ಭಲ್ಲದಿಂದ ಸಂಹರಿಸಿದರು. ದ್ರೋಣರಿಂದ ಹತನಾದ ಆ ರಾಜಕುಮಾರನು–ಆಕಾಶದಿಂದ ಉಲ್ಕೆಯು ಕೆಳಕ್ಕೆ ಬೀಳುವಂತೆ–ರಥ ದಿಂದ ಕೆಳಕ್ಕೆ ಬಿದ್ದನು. ಪಾಂಚಾಲರಿಗೆ ಯಶಸ್ಕಾರಕನಾದ ಆ ರಾಜಪುತ್ರನು ದ್ರೋಣರಿಂದ ಹತನಾಗಲಾಗಿ 'ಹತ ದ್ರೋಣಂ, ಹತ ದ್ರೋಣಂ' 'ದ್ರೋಣರನ್ನು ಕೊಲ್ಲಿರಿ–ದ್ರೋಣರನ್ನು ಸಂಹರಿಸಿ' ಎಂಬ ದೊಡ್ಡ ಕೂಗು ಎಲ್ಲ ಕಡೆಗಳಿಂದಲೂ ಕೇಳಿಬಂದಿತು. ಹೀಗೆ ಕೂಗುತ್ತಾ ಅತ್ಯಂತಕ್ರುದ್ಧರಾಗಿದ್ದ ಪಾಂಚಾಲರನ್ನೂ, ಮತ್ಸ್ಯ-ಕೇಕಯರನ್ನೂ, ಸೃಂಜಯರನ್ನೂ ಮತ್ತು ಪಾಂಡವರನ್ನೂ ಬಲಿಷ್ಠರಾದ ದ್ರೋಣರು ಬಾಣಗಳ ಪ್ರಹಾರಗಳಿಂದ ಅಲ್ಲೋಲ-ಕಲ್ಲೋಲಗೊಳಿಸಿದರು. ಸಾತ್ಯಕಿ, ಚೇಕಿತಾನ, ಧೃಷ್ಟದ್ಯುಮ್ನ, ಶಿಖಂಡಿ, ವಾರ್ಧಕ್ಷೇಮಿ, ಚೈತ್ರಸೇನಿ, ಸೇನಾಬಿಂದು, ಸುವರ್ಚಸ–ಇವರು ಗಳನ್ನೂ ಮತ್ತು ನಾನಾದೇಶಗಳಿಂದ ಬಂದಿದ್ದ ಇನ್ನೂ ಅನೇಕಮಹಾರಥ ರನ್ನೂ ಕುರುಯೋಧರಿಂದ ಪರಿವೃತರಾಗಿದ್ದ ದ್ರೋಣರು ಜಯಿಸಿದರು.

ನಿನ್ನ ಮಕ್ಕಳೂ ಸಹ ಮಹಾಯುದ್ಧದಲ್ಲಿ ಜಯವನ್ನು ಗಳಿಸಿದವರಾಗಿ, ಭಯಗೊಂಡು ಸುತ್ತಲೂ ಓಡಿಹೋಗುತ್ತಿದ್ದ ಪಾಂಡವರ ಸೈನಿಕರನ್ನು ಸಂಹ ರಿಸಲು ಉಪಕ್ರಮಿಸಿದರು. ಇಂದ್ರನಿಂದ ಸಂಹತರಾಗುತ್ತಿದ್ದ ದಾನವರಂತೆ-ಮಹಾತ್ಮರಾದ ದ್ರೋಣರಿಂದ ಹತರಾಗುತ್ತಿದ್ದ ಪಾಂಚಾಲ-ಕೇಕಯ-ಮತ್ಸ್ಯ ಸೈನಿಕರು ಬಹಳವಾಗಿ ನಡುಗಿದರು."

೨೧ನೆಯ ಅಧ್ಯಾಯವು ಮುಗಿಯಿತು.

**೧೫ನೆಯ ಸಂಪುಟವು ಮುಗಿಯಿತು.**

ಶ್ರೀಕೃಷ್ಣಾರ್ಪಣಮಸ್ತು ; ಶ್ರೀ ಸದ್ಗುರುಚರಣಾರವಿನ್ದಾರ್ಪಣಮಸ್ತು ಓಂ ತತ್ಸತ್

